# ಶ್ರೀಮನ್ಮಹಾಭಾರತ

ಭಾರತ ದರ್ಶನ ಪ್ರಕಾಶನ



ಭೀಷ್ಮಪರ್ವ

ನಾರಾಯಣಂ ನಮಸ್ಕೃತ್ಯ ನರಂ ಚೈವ ನರೋತ್ತಮಮ್ ।
ದೇವೀಂ ಸರಸ್ವತೀಂ ಚೈವ ತತೋ ಜಯಮುದೀರಯೇತ್ ॥

ಸಂಪುಟ ೧೪

ಭಾರತ ದರ್ಶನ ಪ್ರಕಾಶನ

# ಶ್ರೀಮನ್ಮಹಾಭಾರತ

(ವ್ಯಾಸಭಾರತದ ಕನ್ನಡ ಸರಳಾನುವಾದ)

ಭಾತಿ ಸರ್ವೇಷು ವೇದೇಷು
ರತಿಃ ಸರ್ವೇಷು ಜನ್ತುಷು ।
ತರಣಂ ಸರ್ವತೀರ್ಥಾನಾಂ
ತೇನ ಭಾರತಮುಚ್ಯತೇ ॥

**ಸಂಪುಟ 14**


*ಮುದ್ರಕರು:*

**ಭಾರತ ದರ್ಶನ ಮುದ್ರಣಾಲಯ**

163, ಮಂಜುನಾಥ ರಸ್ತೆ, 2ನೇ ಬ್ಲಾಕ್, ತ್ಯಾಗರಾಜನಗರ,
ಬೆಂಗಳೂರು - 560 028
ದೂರವಾಣಿ: 080-26765381

ಪ್ರಥಮ ಇ-ಮುದ್ರಣ ಜನವರಿ ೨೦೧೪

*ಆದಿ ಅಧ್ಯಕ್ಷರು:*

**ಪರಮಪೂಜ್ಯ ಶ್ರೀ ಶ್ರೀ**
**ರಂಗಪ್ರಿಯಮಹಾದೇಶಿಕಸ್ವಾಮಿಗಳವರು**

*ಆದಿ ವ್ಯವಸ್ಥಾಪಕ ಸಂಪಾದಕರು:*

**ದಿ|| ಕೆ.ಎಸ್. ಕೌಶಿಕ್ ('ವಿಶ್ವಾಮಿತ್ರ')**

*ಆದಿ ಸಂಪಾದಕರು:*

**ದಿ|| ವಿದ್ವಾನ್ ಹೆಚ್.ಎನ್. ರಂಗಸ್ವಾಮೀ**

*ಆದಿ ಸಂಪಾದಕರು:*

**ದಿ|| ವಿದ್ವಾನ್ ರಾಮೇಶ್ವರಾವಧಾನೀ**



ಸಂಪಾದಕ ಮಂಡಲಿ:

ಶ್ರೀ ಶ್ರೀಹರಿ
ಶ್ರೀ ನೆ.ವೆಂ. ಶ್ರೀನಿವಾಸರಾಯ

ಶ್ರೀ ವಿ. ಸೂರ್ಯನಾರಾಯಣ್, M.A. B.Com., B.L.,
ಕೋಶಾಧ್ಯಕ್ಷರು

# ವಿನಮ್ರವಚನಗಳು

ಪರಮಾತ್ಮನ ದಯೆಯಿಂದಲೂ, ದಯಾಮಯನಾದ ಗುರುವಿನ ಅನುಗ್ರಹದಿಂದಲೂ ಶ್ರೀಮನ್ಮಹಾಭಾರತದ ಹದಿನಾಲ್ಕನೆಯ ಸಂಪುಟವೆಂಬ ವಿಕಸಿತ ಸುಮನೋಹರ-ಸುಗಂಧಮಯಪುಷ್ಪವನ್ನು ಭಗವಂತನ ಅಡಿ ದಾವರೆಗಳಲ್ಲಿ ಅರ್ಪಿಸಿ, ಅನಂತರ ಅವನ ಪ್ರಸಾದರೂಪವಾದ ಈ ಪುಷ್ಪ ವನ್ನೇ ನಮ್ಮ ಪ್ರಿಯವಾಚಕರ ಅಂಜಲಿಪುಟಗಳಲ್ಲಿಡುತ್ತಿದ್ದೇವೆ. ಭಕ್ತಿ-ಶ್ರದ್ಧೆ ಗಳಿಂದ ಪಡೆದುಕೊಂಡ ಭಗವತ್ಪ್ರಸಾದವು ಶ್ರೇಯಸ್ಸಿಗೆ ಸಾಧನವಾಗುವಂತೆ ಈ ಸಂಪುಟವೂ ಸಹ ನಮ್ಮ ಪ್ರಿಯವಾಚಕರ ಪ್ರೇಯಸ್ಸು ಮತ್ತು ಶ್ರೇಯಸ್ಸುಗಳಿಗೆ ಸಾಧನವಾಗುವುದೆಂಬುದರಲ್ಲಿ ಯಾವ ಸಂಶಯವೂ ಇಲ್ಲ.

ಈ ಸಂಪುಟದಲ್ಲಿ ಗೀತೆಯನ್ನು ಮುಗಿಸಿದ್ದೇವೆ. ಗೀತೆಯನ್ನು ಪ್ರಾರಂಭಿ ಸುವಾಗ ಒಂದು ನಿಯಮವನ್ನು ಮಾಡಿಕೊಂಡಿದ್ದೆವು. ಅದೇನೆಂದರೆ ಗೀತೆಯು ಮುಗಿಯುವವರೆಗೂ ವ್ಯಾಖ್ಯಾನದ ವಿವರಣೆಯು ಒಂದೇ ರೀತಿ ಯಲ್ಲಿರಬೇಕು. ಮೊದಲು-ಮೊದಲು ಹೆಚ್ಚು ವಿವರಣೆಗಳನ್ನು ಕೊಟ್ಟು ಅನಂತರ ಯಾವುದೇ ಕಾರಣದಿಂದಲೂ ಮೊಟಕುಗೊಳಿಸಲು ಹೋಗ ಬಾರದು–ಎಂದು. ಪರಮಾತ್ಮನ ದಯೆಯಿಂದ ಅದೇ ರೀತಿಯಲ್ಲಿ ಗೀತೆಯ ವ್ಯಾಖ್ಯಾನವು ಮಂಗಳಮಯವಾಗಿ ಕೊನೆಗೊಂಡಿತೆಂದು ತಿಳಿಸಲು ಹರ್ಷಿಸುತ್ತೇವೆ.

ಸಮಗ್ರಗೀತೆಯ ವ್ಯಾಖ್ಯಾನದ ಸಿದ್ಧತೆಯು ನಮ್ಮ ಪ್ರಕಾಶನದ ಅಧ್ಯಕ್ಷ ರಾದ ವಿದ್ವಾನ್ ಹೆಚ್. ಎಸ್. ವರದದೇಶಿಕಾಚಾರ್ಯರಂಗಪ್ರಿಯರ ನೇತೃತ್ವ ದಲ್ಲಿ ನಡೆಯಿತು. ಸಂಪಾದಕಮಂಡಲಿಯವರೂ ಸಹ ಇದನ್ನು ಉತ್ತಮ ರೀತಿಯಲ್ಲಿ ಸಿದ್ಧಗೊಳಿಸುವುದಕ್ಕಾಗಿ ಹೆಚ್ಚು ಶ್ರಮವನ್ನು ವಹಿಸಿರುತ್ತಾರೆ. ಇವ ರೆಲ್ಲರಿಗೂ ನಮ್ಮ ಹೃತ್ಪೂರ್ವಕವಾದ ವಂದನೆಗಳು. ಈ ಸತ್ಪುರುಷರೆಲ್ಲರೂ ಯಾವ ವಿಧವಾದ ಪ್ರಯೋಜನವನ್ನೂ ಅಪೇಕ್ಷಿಸುತ್ತಿಲ್ಲ. ಆದರೆ ಮಹಾ ಭಾರತದ ಓದುಗರಿಗೆ ಅತ್ಯಂತಗುಹ್ಯವೆನಿಸಿರುವ ಗೀತಾಶಾಸ್ತ್ರವು ಸುಲಭವಾಗಿ ತಿಳಿಯಬೇಕೆಂಬುದೊಂದೇ ಇವರು ಆಶಿಸುವ ಪ್ರತಿಫಲವಾಗಿದೆ. ನಮ್ಮ ಪ್ರಿಯವಾಚಕರು–'ಗೀತೆಯು ಅರ್ಥವಾಯಿತು'–ಎಂದು ಸಮಾಧಾನ ಪಟ್ಟುಕೊಂಡರೆ ಸಂಪಾದಕಮಂಡಲಿಯವರು ತಮ್ಮ ಶ್ರಮದ ಸಾರ್ಥಕ್ಯವನ್ನು ಕಾಣುವಂತಾಗುತ್ತದೆ. ಅಂತಹ ಒಂದು ಅಪೇಕ್ಷೆಯಿಂದಲೇ ಈ ಸತ್ಪುರುಷ ರೆಲ್ಲರೂ ಸಾಮಾನ್ಯನೊಬ್ಬನೊಡನೆ ಸೇರಿಕೊಂಡು ನಿಃಸ್ಪೃಹತೆಯಿಂದ ಕೆಲಸ

ಮಾಡುತ್ತಿದ್ದಾರೆ. ಪರಮಾತ್ಮನ ದಯೆಯಿಂದ ಇವರ ಶ್ರಮವು ಸಾರ್ಥಕ ವಾಗುವುದೆಂಬ ಆಶಯವಿದೆ. ಗೀತೆಯು ಮುಗಿದನಂತರವೂ ಮಹಾ ಭಾರತದ ಕಥೆಯನ್ನು ಈ ಸಂಪುಟದಲ್ಲಿ ಮುಂದುವರಿಸಿದ್ದೇವೆ. ಭೀಷ್ಮಪರ್ವದ ೫೫ನೆಯ ಅಧ್ಯಾಯ ಪೂರ್ತಿ ಕಥೆಯು ಮುಂದುವರಿದಿದೆ. ಹದಿ ನೆಂಟು ದಿವಸಗಳ ಯುದ್ಧದಲ್ಲಿ ಮೂರನೆಯ ದಿವಸದ ಯುದ್ಧವು ಮುಗಿದಿದೆ. ನಮ್ಮ ಪ್ರಿಯವಾಚಕರು ಶಾಂತಿಗಾಗಿ ಮತ್ತು ಗ್ರಂಥವು ನಿರ್ವಿಘ್ನವಾಗಿ ಮುಂದುವರಿಯಲು ಹರೇರಾಮಮಂತ್ರಜಪ, ವಿಷ್ಣುಸಹಸ್ರನಾಮ ಪಾರಾಯಣ, ಗೀತಾಪಾರಾಯಣ, ಸುಂದರಕಾಂಡಪಾರಾಯಣ–ಇತ್ಯಾದಿ ಗಳನ್ನು ಯಥಾಶಕ್ತಿಮಾಡಬೇಕಾಗಿ ಪ್ರಾರ್ಥಿಸುತ್ತೇವೆ. ಒಂದು ಮಹಾ ಕಾರ್ಯವು ನಿರ್ವಿಘ್ನವಾಗಿ ನೆರವೇರಬೇಕಾದರೆ ಅನೇಕಜನರ ತಪಸ್ಸಿನ ಫಲವು ಸಿಗಬೇಕು. ಹರೇರಾಮ ಮಂತ್ರಜಪಾದಿಗಳನ್ನು ಮಾಡುವಾಗ– "ಭಾರತ ದರ್ಶನ ಪ್ರಕಾಶನದವರು ಮಾಡುತ್ತಿರುವ ಮಹಾಭಾರತದ ಪ್ರಕಟಣೆಯು ನಿರ್ವಿಘ್ನವಾಗಿ ನೆರವೇರಲಿ"–ಎಂದು ಭಾವನಾಪೂರ್ವಕವಾಗಿ ಮನಸ್ಸಿನಲ್ಲಿ ಅಂದುಕೊಂಡರೂ ಸಾಕು ; ಪೂಜೆಮಾಡುವಾಗ ಹೀಗೆ ಮನಸ್ಸಿನಲ್ಲಿ ಮಾಡಿಕೊಂಡು ದೇವರ ಮೇಲೆ ಭಕ್ತಿ-ಶ್ರದ್ಧೆಗಳಿಂದ ಒಂದು ಹೂವನ್ನು ಹಾಕಿದರೂ ಸಾಕು–ನಮ್ಮ ಕಾರ್ಯವು ಇಲ್ಲಿ ನಿರ್ವಿಘ್ನವಾಗಿ ನೆರವೇರುತ್ತದೆ. 'ಸಾಧ್ಯವಾಗುವುದಿಲ್ಲ' ಎಂದು ಭಾವಿಸಿದ ಕಾರ್ಯವು ಅತಿಸುಲಭವಾಗಿ ಸಾಧ್ಯವಾಗುತ್ತದೆ. ಇವೆಲ್ಲವೂ ಅನುಭವೈಕವೇದ್ಯವಾದುವು. ಈ ಬಾರಿಯೂ ಸಂಪುಟವನ್ನು ಹೊರತರಲು ಸ್ವಲ್ಪ ವಿಳಂಬವೇ ಆಯಿತು. ಮೊದಲನೆಯ ಸಂಪುಟದ ಪುನರ್ಮುದ್ರಣವನ್ನೂ ಜೊತೆಯಲ್ಲಿಯೇ ಪ್ರಾರಂಭಿಸಿದೆವು. ಎರಡನ್ನೂ ಮುಗಿಸಲು ಸಾಧ್ಯವಿಲ್ಲವೆಂದು ತೋರಿದಾಗ ಈ ಸಂಪುಟವನ್ನೇ ಮುಂದುವರಿಸಿ ಮುಗಿಸಲಾಯಿತು. ಮೊದಲನೆಯ ಸಂಪುಟವನ್ನು ಮುಂದಿನ ಒಂದು ತಿಂಗಳಲ್ಲಿ ಮುಗಿಸುವ ಆಶಯವಿದೆ. ಈ ವರ್ಷ (1978) ಮತ್ತೆರಡು ಸಂಪುಟಗಳನ್ನು (15 ಮತ್ತು 16) ಹೊರತರುವ ಅಪೇಕ್ಷೆಯಿದೆ. ಪ್ರಯತ್ನವೂ ಇದೆ. ಏಳನೆಯದಾದ ದೈವದ ಚಿಂತನೆಯು ಏನೆಂಬುದು ತಿಳಿಯದು. ನಮ್ಮ ಕಾರ್ಯವೆಲ್ಲವೂ ಮುಖ್ಯವಾಗಿ ದೈವವನ್ನೇ ಅವಲಂಬಿಸಿದೆ.

ಹದಿಮೂರನೆಯ ಸಂಪುಟವನ್ನು ಚಾಮರಾಜಪೇಟೆಯಲ್ಲಿರುವ ರಾಜಶಿವರಾಮಯ್ಯ ಶೆಟ್ಟಿ ಶ್ರೀಮತಿ ಪಾರ್ವತಮ್ಮ ಕಲ್ಯಾಣಮಂಟಪದ ಸಭಾಂಗಣದಲ್ಲಿ ನ್ಯಾಯಮೂರ್ತಿ ಶ್ರೀ ಗೋಪೀವಲ್ಲಭಐಯ್ಯಂಗಾರ್ಯರು

ಪ್ರಕಾಶನಗೊಳಿಸಿದರು. ವೇದವಿದ್ವಾಂಸರಿಂದ ವೇದಪಠನವಾದನಂತರ ಕುಮಾರೀ ಸತ್ಯವತಿಯವರು ಸ್ವಾಗತಪದ್ಯಮಾಲಿಕೆಯನ್ನು ಸುಶ್ರಾವ್ಯವಾಗಿ ಹಾಡಿದರು. ವಿದ್ವಾನ್ ರಂಗಸ್ವಾಮಿಗಳು ಸ್ವಾಗತ ಭಾಷಣವನ್ನು ಮಾಡಿದ ನಂತರ ಶ್ರೀಗೋಪಿವಲ್ಲಭಐಯ್ಯಂಗಾರ್ಯರು ಮೊಳಗುತ್ತಿದ್ದ ಮಂಗಳ ವಾದ್ಯಗಳ ನಡುವೆ ಹದಿಮೂರನೆಯ ಸಂಪುಟವನ್ನು ಪ್ರಕಾಶನಗೊಳಿಸಿದರು. ಪ್ರಕಾಶನದ ಅಧ್ಯಕ್ಷರಾದ ವಿದ್ವಾನ್ ವರದದೇಶಿಕಾಚಾರ್ಯರಂಗಪ್ರಿಯರು ಹದಿಮೂರನೆಯ ಸಂಪುಟದ ವಿಷಯವನ್ನು ಪ್ರಸ್ತಾಪಿಸಿ ಪ್ರವಚನ ನೀಡಿದರು. ಜಗದ್ಗುರು ಶ್ರೀ ಶ್ರೀ ರಾಘವೇಂದ್ರಭಾರತೀ ಸ್ವಾಮಿಗಳು ಕಳುಹಿಸಿದ್ದ ಸುವರ್ಣಮಂತ್ರಾಕ್ಷತೆಯೊಡನೆ ಫಲ-ಪುಷ್ಪಗಳನ್ನು ನ್ಯಾಯಮೂರ್ತಿ ಗೋಪಿ ವಲ್ಲಭಐಯ್ಯಂಗಾರ್ಯರು ಸಂಪಾದಕ ಮಂಡಲಿಯ ವಿದ್ವಾಂಸರಿಗೆ ಅರ್ಪಿಸಿ ದರು. ವಿದ್ವಾನ್ ರಾಮೇಶ್ವರಾವಧಾನಿಗಳ ವಂದನಾರ್ಪಣೆಯೊಡನೆ ಶುಭ ಸಮಾರಂಭದ ಮುಕ್ತಾಯವಾಯಿತು.

ಈ ನಾಲ್ಕು ತಿಂಗಳುಗಳಲ್ಲಿ ಮಹಾಭಾರತದ ಪ್ರಚಾರಕಾರ್ಯ ಅಷ್ಟಾಗಿ ಆಗಿಲ್ಲ. ಬ್ಯಾಂಕಿನವರು ಸಾಲದ ಸೌಲಭ್ಯವನ್ನೇನೋ ಮುಂದುವರಿಸುತ್ತಿದ್ದಾರೆ. ಆದರೂ ಸದಸ್ಯರ ಸಂಖ್ಯೆಯು ಗಮನೀಯಪ್ರಮಾಣದಲ್ಲಿ ಏರಿಲ್ಲ. ನಮ್ಮ ಪ್ರತಿಯೊಬ್ಬ ಗ್ರಾಹಕರೂ ಶ್ರಮವಹಿಸಿ ಕಡೆಯಪಕ್ಷ ಇಬ್ಬರು ಹೊಸ ಗ್ರಾಹಕರನ್ನಾದರೂ ಮಾಡಿಕೊಡಬೇಕೆಂದು ವಿನಂತಿಸುತ್ತೇವೆ. ಬಲಾತ್ಕಾರ ವಾಗಿಯೇ ಆದರೂ ಸದಸ್ಯರನ್ನು ಮಾಡುವುದರಲ್ಲಿ ದೋಷವೇನೂ ಇಲ್ಲ. ಮಗುವು ಔಷಧವನ್ನು ಕುಡಿಯುವುದಿಲ್ಲವೆಂದರೆ ಬಲಾತ್ಕಾರವಾಗಿಯಾದರೂ ಕುಡಿಸಬೇಕಾಗುತ್ತದೆ. ಅದನ್ನು ಹಿಂಸೆಯೆಂದು ಯಾರೂ ಕರೆಯುವುದಿಲ್ಲ. ಮಹಾಭಾರತವೆಂಬುದು ಭವರೋಗದ ಔಷಧ. ಆದುದರಿಂದ ನಮ್ಮ ಪ್ರತಿಯೊಬ್ಬ ವಾಚಕರೂ ಸಹ ಪ್ರತಿಜ್ಞೆಮಾಡಿ ಮುಂದಿನ ಸಂಪುಟವು ಹೊರಬರುವುದರೊಳಗಾಗಿ ಇಬ್ಬರು ಗ್ರಾಹಕರನ್ನಾದರೂ ಮಾಡಿಕೊಡ ಬೇಕೆಂದು ಕಳಕಳಿಯಿಂದ ಪ್ರಾರ್ಥಿಸುತ್ತೇವೆ.

ತೆರೆಯ ಮರೆಯಲ್ಲಿ ಕೆಲಸಮಾಡುತ್ತಿರುವ ಎಲ್ಲ ಕಾರ್ಯಕರ್ತರಿಗೂ ಕೃತಜ್ಞತಾಪೂರ್ವಕವಾದ ವಂದನೆಗಳನ್ನು ಅರ್ಪಿಸುವುದಲ್ಲದೇ—ಇವರೆಲ್ಲ ರಿಗೂ ದಯಾಮಯನಾದ ಪರಮಾತ್ಮನು ಆಯುರಾರೋಗ್ಯೈಶ್ವರ್ಯಾದಿ ಗಳನ್ನೂ ಸುಖ-ಸಂತೋಷಗಳನ್ನೂ ದಯಪಾಲಿಸಲೆಂದು ಪ್ರಾರ್ಥಿಸಿ ವಿರಮಿಸುತ್ತೇವೆ.

—ಪ್ರಕಾಶಕರು.

# ಮುನ್ನುಡಿ

ಆತ್ಮವಿದ್ಯೆಯನ್ನು ಬೋಧಿಸುವ ಶ್ಲೋಕರೂಪವಾದ ಗ್ರಂಥಕ್ಕೆ 'ಗೀತಾ' ಎಂದು ಹೆಸರು. ರಾಮಗೀತಾ, ಶಿವಗೀತಾ, ಭಗವದ್ಗೀತಾ–ಇತ್ಯಾದಿಗಳು ಈ ವರ್ಗಕ್ಕೆ ಸೇರುತ್ತವೆ.

ಶ್ರೀರಾಮನೂ ಭಗವಂತನೇ ; ಶ್ರೀ ಶಿವನೂ ಭಗವಂತನೇ ; ಶ್ರೀಕೃಷ್ಣನೂ ಭಗವಂತನೇ. ಆದರೆ ರಾಮಗೀತೆಗಾಗಲೀ, ಶಿವಗೀತೆಗಾಗಲೀ ಭಗವದ್ಗೀತೆ ಎಂದು ಹೆಸರು ಬರಲಿಲ್ಲ. ಶ್ರೀಕೃಷ್ಣನು ಹೇಳಿದ ಗೀತೆಗೇ ಭಗವದ್ಗೀತಾ ಎಂಬ ಹೆಸರು ಬಂದಿತು. ಶ್ರೀಕೃಷ್ಣನೇ ಇದನ್ನು ಹೇಳಿದ್ದರೂ ಸಹ ಇದನ್ನು ಯಾರೂ ಕೃಷ್ಣಗೀತೆಯೆಂದು ಕರೆಯುವುದಿಲ್ಲ ; ಭಗವದ್ಗೀತೆ ಎಂದೇ ಕರೆಯುತ್ತಾರೆ. ಆದುದರಿಂದ ಉಳಿದೆಲ್ಲ ಗೀತೆಗಳಿಗಿಂತಲೂ ಈ ಗೀತೆಯಲ್ಲಿ ವಿಶೇಷವಾದ ಮಹತ್ವವಿರಲೇಬೇಕಲ್ಲವೇ? ಇದರ ವೈಶಿಷ್ಟ್ಯವನ್ನು ಶ್ರೀಕೃಷ್ಣನೇ ಸ್ಪಷ್ಟಪಡಿಸುತ್ತಾನೆ. ಸಂದರ್ಭ :– ಯುಧಿಷ್ಠಿರನಿಗೆ ಪಟ್ಟಾಭಿಷೇಕವಾದನಂತರ ಶ್ರೀಕೃಷ್ಣನು ಅರ್ಜುನನೊಡನೆ ದ್ವಾರಾವತಿಗೆ ಪ್ರಯಾಣಮಾಡುವ ಪ್ರಸ್ತಾಪಮಾಡುತ್ತಾನೆ. ಆ ಸಂದರ್ಭದಲ್ಲಿ (ಅಶ್ವಮೇಧಿಕಪರ್ವ- ೧೬ನೆಯ ಅಧ್ಯಾಯ) ಅರ್ಜುನನು ಹೇಳುತ್ತಾನೆ :

**ವಿದಿತಂ ಮೇ ಮಹಾಬಾಹೋ ಸಂಗ್ರಾಮೇ ಸಮುಪಸ್ಥಿತೇ ।**
**ಮಾಹಾತ್ಮ್ಯಂ ದೇವಕೀಮಾತಸ್ತಚ್ಚ ತೇ ರೂಪಮೈಶ್ವರಮ್ ॥೫॥**

**ಯತ್ತದ್ಭಗವತಾ ಪ್ರೋಕ್ತಂ ಪುರಾ ಕೇಶವ ಸೌಹೃದಾತ್ ।**
**ತತ್ಸರ್ವಂ ಪುರುಷವ್ಯಾಘ್ರ ನಷ್ಟಂ ಮೇ ಭ್ರಷ್ಟಚೇತಸಃ ॥೬॥**

"ಮಹಾಬಾಹೋ! ದೇವಕೀಪುತ್ರ! ಮಹಾಸಂಗ್ರಾಮವು ಪ್ರಾರಂಭವಾಗುವುದರಲ್ಲಿದ್ದಾಗ ನಿನ್ನ ಮಾಹಾತ್ಮ್ಯವೇನೆಂಬುದು ನನಗೆ ತಿಳಿಯಿತು. ಮತ್ತು ನಿನ್ನ ಈಶ್ವರೀಯರೂಪವನ್ನೂ ಸಂದರ್ಶಿಸಿದೆನು. ಸುಹೃದ್ಭಾವದಿಂದ ಅಂದು ನೀನು ಯಾವುದನ್ನು ಹೇಳಿದ್ದೆಯೋ ಅವೆಲ್ಲವೂ (ಆ ಉಪದೇಶಗಳೆಲ್ಲವೂ) ಚಂಚಲಚಿತ್ತನಾದ ನನಗೆ ಮರೆತೇಹೋಯಿತು.

**ಮಮ ಕೌತೂಹಲಂ ತ್ವಸ್ತಿ ತೇಷ್ವರ್ಥೇಷು ಪುನಃ ಪುನಃ ।**

ಆ ವಿಷಯಗಳನ್ನು ಪುನಃ ಪುನಃ ಕೇಳಬೇಕೆಂದು ನನಗೆ ಕೌತೂಹಲವುಂಟಾಗಿದೆ. ಆದುದರಿಂದ ನೀನು ದಯಮಾಡಿ ಅದನ್ನೇ ಪುನಃ ಹೇಳು" ಎನ್ನುತ್ತಾನೆ ಅರ್ಜುನ. ಅದಕ್ಕೆ ವಾಸುದೇವನು ಹೇಳುವ ಮಾತಿದು :

ಶ್ರಾವಿತಸ್ತ್ವಂ ಮಯಾ ಗುಹ್ಯಂ ಜ್ಞಾಪಿತಶ್ಚ ಸನಾತನಮ್ ।
ಧರ್ಮಸ್ವರೂಪಿಣಂ ಪಾರ್ಥ ಸರ್ವಲೋಕಾಂಶ್ಚ ಶಾಶ್ವತಾನ್ ॥೯॥

ಅಬುದ್ಧ್ಯಾ ನಾಗ್ರಹೀರ್ಯಸ್ತ್ವಂ ತನ್ಮೇ ಸುಮಹದಪ್ರಿಯಮ್ ।
ನ ಚ ಸಾದ್ಯ ಪುನರ್ಭೂಯಃ ಸ್ಮೃತಿರ್ಮೇ ಸಮ್ಭವಿಷ್ಯತಿ ॥೧೦॥

ನೂನಮಶ್ರದ್ದಧಾನೋಽಸಿ ದುರ್ಮೇಧಾಹ್ಯಸಿ ಪಾಣ್ಡವ ।
ನ ಚ ಶಕ್ಯಂ ಪುನರ್ವಕ್ತುಮಶೇಷೇಣ ಧನಂಜಯ ॥೧೧॥

ಸ ಹಿ ಧರ್ಮಃ ಸುಪರ್ಯಾಪ್ತೋ ಬ್ರಹ್ಮಣಃ ಪದವೇದನೇ ।
ನ ಶಕ್ಯಂ ತನ್ಮಯಾ ಭೂಯಸ್ತಥಾ ವಕ್ತುಮಶೇಷತಃ ॥೧೨॥

ಪರಂ ಹಿ ಬ್ರಹ್ಮ ಕಥಿತಂ ಯೋಗಯುಕ್ತೇನ ತನ್ಮಯಾ ।

ಅರ್ಜುನನ ಮಾತನ್ನು ಕೇಳಿದೊಡನೆಯೇ ಶ್ರೀಕೃಷ್ಣನಿಗೆ ದುಃಖವೂ ಆಯಿತು ; ಕೋಪವೂ ಬಂದಿತು. "ಅರ್ಜುನ! ಹೀಗೇಕೆ ಮಾಡಿದೆ? ನಾನು ನಿನಗೆ ಹೇಳಿದ್ದು ಗುಟ್ಟಿನ ವಿಷಯ. ಆ ರಹಸ್ಯವು ಸನಾತನವಾದುದು. ಧರ್ಮಸ್ವರೂಪವಾದುದು. ಶಾಶ್ವತವಾದ ಲೋಕಗಳ (ವಿಷ್ಣುಪದ) ವಿಷಯವಾಗಿಯೂ ನಿನಗೆ ತಿಳಿಯಹೇಳಿದ್ದೆನು. ನಿನ್ನ ತಿಳಿಗೇಡಿತನದಿಂದ ನಾನು ಹೇಳಿದುದೆಲ್ಲವನ್ನೂ ನೀನು ಮರೆತೇಬಿಟ್ಟಿರುವೆ. ಇದು ನಿಶ್ಚಯವಾಗಿಯೂ ನನಗೆ ದೊಡ್ಡ ಅಪ್ರಿಯವಾದ ಕಾರ್ಯಮಾಡಿದಂತಾಗಿದೆ. ಇದಕ್ಕಿಂತಲೂ ಅಪ್ರಿಯವಾದುದು ಯಾವುದೆಂಬುದನ್ನು ನಾನರಿಯೆ. ಆದರೆ ನನಗೂ ಸಹ ಆಗ ಹೇಳಿದುದನ್ನೇ ಪುನರಾವರ್ತಿಮಾಡಲು ಸಾಧ್ಯವಾಗುವುದಿಲ್ಲ. ನನಗೆ ಅಂದು ಹೇಳಿದುದೆಲ್ಲವೂ ಪುನಃ ಜ್ಞಾಪಕಕ್ಕೆ ಬರುತ್ತಿಲ್ಲ. ನೀನು ನಿಶ್ಚಯವಾಗಿಯೂ ಅಶ್ರದ್ಧೆಯವನೇ ಸರಿ. ನಾನು ಹೇಳಿದ ಆ ಮಹಾರಹಸ್ಯವನ್ನು ಮರೆತಿರುವ ನೀನು ಮಂದಬುದ್ಧಿಯವನೇ ಸರಿ. ಆಗ ಹೇಳಿದುದನ್ನೇ ನಾನು ನಿನಗೆ ಸಂಪೂರ್ಣವಾಗಿ ಖಂಡಿತವಾಗಿಯೂ ಪುನಃ ಹೇಳಲಾರೆನು. ನಿಶ್ಚಯವಾಗಿಯೂ ನಾನಂದು ಹೇಳಿದ ಧರ್ಮವು ಬ್ರಹ್ಮಪದವನ್ನು ಪಡೆದುಕೊಳ್ಳುವುದಕ್ಕೆ ಸಾಕಾಗಿದ್ದಿತು. ನಾನಂದು ಹೇಳಿದ ಧರ್ಮಾಮೃತದಿಂದ ಬ್ರಹ್ಮವಸ್ತುವನ್ನು ನಿಸ್ಸಂಶಯವಾಗಿ ಸಂಪೂರ್ಣವಾಗಿ ತಿಳಿಯಬಹುದಾಗಿ ದ್ದಿತು. ಬ್ರಹ್ಮವಸ್ತುವನ್ನು ತಿಳಿಸುವುದಕ್ಕೋಸುಗವೇ ನಿನಗೆ ಆ ಆತ್ಮಧರ್ಮ ವನ್ನು ಸಮಗ್ರವಾಗಿ ಹೇಳಿದ್ದೆನು. ಅದನ್ನು ಪುನಃ ನಾನು ಯಥಾವತ್ತಾಗಿ

ಹೇಳಲಾರೆನು. 'ಕೃಷ್ಣ! ನಿನಗೂ ವಿಸ್ಮರಣೆಯೇ?'–ಎಂದು ನೀನು ಕೇಳ ಬಹುದು. ಆದರೆ ಅಂದು ನಿನಗೆ ನಾನು ಧರ್ಮಾಮೃತವನ್ನು ಹೇಳಿದುದು ಶ್ರೀಕೃಷ್ಣನಾಗಿ ಅಲ್ಲ.

**ಯೋಗಯುಕ್ತೇನ ತನ್ಮಯಾ ಪರಂ ಹಿ ಬ್ರಹ್ಮ ಕಥಿತಂ ।**

ನಾನಾಗ ಯೋಗಯುಕ್ತನಾಗಿ ಯೋಗದಲ್ಲಿದ್ದುಕೊಂಡು (ನಾನೇ ಪರಮಾತ್ಮನಾಗಿ–ಭಗವಂತನಾಗಿ) ನಿನಗೆ ಬ್ರಹ್ಮತತ್ತ್ವವನ್ನು ಹೇಳಿದ್ದೆನು. ಆದುದರಿಂದ ಈಗ ನನಗೆ ಹಿಂದೆ ಹೇಳಿದಂತೆ ಪುನಃ ಹೇಳಲು ಸಾಧ್ಯವಾಗುವುದಿಲ್ಲ."

ಶ್ರೀಕೃಷ್ಣನು ಹೇಳಿರುವ ಈ ಮಾತನ್ನು ನಾವು ಗಮನಿಸಬೇಕಾಗಿದೆ. ವಿಭವಾವತಾರಿಯಾದ ಭಗವಂತನು ಗೀತೋಪದೇಶದ ಸಮಯದಲ್ಲಿ ತನ್ನ ಪರತ್ವವನ್ನು ಪ್ರಕಟಪಡಿಸಿದಂತೆ ಮತ್ತೆಲ್ಲಿಯೂ ಪ್ರಕಟಪಡಿಸಲಿಲ್ಲ. ಶ್ರೀಕೃಷ್ಣನು ಗೀತೆಯಲ್ಲಿ ಭಗವತ್ಸ್ವರೂಪವನ್ನೇ ತಾಳಿ ಮಾತನಾಡುತ್ತಾನೆ. ಆದುದರಿಂದಲೇ ಇದು ಭಗವದ್ಗೀತೆ. **ಬ್ರಹ್ಮಣಃ ಪದವೇದನೇ ಸ ಹಿ ಧರ್ಮಃ ಸುಪರ್ಯಾಪ್ತಃ**–ಎಂದೂ ಅಲ್ಲಿ ಶ್ರೀಕೃಷ್ಣನು ಹೇಳಿರುವುದರಿಂದ ಬ್ರಹ್ಮಸಾಕ್ಷಾತ್ಕಾರವನ್ನು ಪಡೆದುಕೊಳ್ಳುವುದಕ್ಕಾಗಿಯೇ ಗೀತಾಮೃತಕಥನವೆಂಬುದೂ ಸಹ ಸ್ಪಷ್ಟವಾಗಿದೆ. ಶ್ರೀಕೃಷ್ಣನು ತನ್ನ ಪುಟ್ಟಬಾಯಲ್ಲಿ ಇಡೀ ಬ್ರಹ್ಮಾಂಡವನ್ನೇ ತನ್ನ ತಾಯಿಗೆ ತೋರಿಸಿದಂತೆ ಈ ಪುಟ್ಟಗ್ರಂಥದಲ್ಲಿ ಬ್ರಹ್ಮಪದವನ್ನು ತಿಳಿಯತಕ್ಕಂತಹ ಸಮಗ್ರಧರ್ಮವನ್ನು ಹೇಳಿಬಿಟ್ಟಿದ್ದಾನೆ.

ಗೀತೆಯನ್ನು ಕೇಳಿದರೂ ಅವನು ಮುಕ್ತನಾಗಿಬಿಡುವನೆಂದು ಶ್ರೀಕೃಷ್ಣನೇ ಹೇಳಿದ್ದಾನೆ. "**ಶ್ರದ್ಧಾವಾನನಸೂಯಶ್ಚ ಶೃಣುಯಾದಪಿ ಯೋ ನರಃ । ಸೋऽಪಿ ಮುಕ್ತಃ ಶುಭಾನ್ಲೋಕಾನ್ಪ್ರಾಪ್ನುಯಾತ್ ।** ಯಾವನು ಅಸೂಯಾರಹಿತನೂ ಶ್ರದ್ಧಾವಂತನೂ ಆಗಿ ಇದನ್ನು ಕೇಳುತ್ತಾನೆಯೋ ಅವನೂ ಸಹ ಪಾಪಗಳನ್ನು ಕಳೆದುಕೊಂಡು ಪುಣ್ಯವಂತರ ಲೋಕಗಳನ್ನು ಹೊಂದುತ್ತಾನೆ."

ಭಗವಂತನ ಸ್ತುತಿ ಮತ್ತು ಭಗವಂತನ ಮಾತು–ಈ ಎರಡನ್ನೂ ಶ್ರದ್ಧೆಯಿಂದ ಕೇಳಿದರೆ ಪಾಪಪರಿಹಾರವಾಗುವುದರಲ್ಲಿ ಯಾವ ಸಂಶಯವೂ

ಇಲ್ಲ. ಆದರೆ ಶ್ರೀಕೃಷ್ಣನು ಉದ್ದೇಶಿಸಿರುವ ಬ್ರಹ್ಮಪದದ ವಿಷಯವನ್ನು ತಿಳಿದುಕೊಳ್ಳಬೇಕಾದರೆ ಇದನ್ನು ಮನನಮಾಡಬೇಕು.

ಶರದೃತುವಿನ ಪೌರ್ಣಿಮೆಯ ಬೆಳದಿಂಗಳಿನ ಬಹುಸೂಕ್ಷ್ಮವಾದ ಅಮೃತಕಣಗಳನ್ನು ಚಕೋರಪಕ್ಷಿಯ ಮರಿಗಳು ಕುಶಲತೆಯಿಂದ ಪ್ರಾಶನ ಮಾಡುವಂತೆ–ಈ ಭಗವದ್ಗೀತೆಯ ಅಮೃತಸಾರವನ್ನು ಹೀರಬೇಕು. ನಿಷ್ಫಲ ವಾದ ಶಾಬ್ದಿಕತರ್ಕಗಳಿಗೆ ಒಳಗಾಗದೆ ಅದರೊಳಗಿನ ತಾತ್ಪರ್ಯವನ್ನು ಕುರಿತು ಏಕಾಗ್ರಮನಸ್ಸಿನಿಂದ ವಿಚಾರಮಾಡಬೇಕು. ಗೀತೆಯೆಂಬುದು ಅನುಭವೈಕವೇದ್ಯವಾದ ಮಹಾವಿದ್ಯೆ. ಇದರ ಅನುಭವ ಇಂದ್ರಿಯಾತೀತ ವಾದುದು. ಭ್ರಮರಗಳು ಕಮಲದ ದಳಗಳಿಗೆ ತಿಳಿಯಗೊಡದೇ ಅವು ಗಳೊಳಗಿನ ಪುಷ್ಪರೇಣುವನ್ನು ಸವಿಯುವಂತೆ ಗೀತೆಯ ತಿರುಳನ್ನು ಗ್ರಹಿಸಿ ಇಂದ್ರಿಯಗಳಿಗೆ ಅಗೋಚರವಾದ ಆತ್ಮಾನುಭಾವವನ್ನು ಪಡೆದುಕೊಳ್ಳಬೇಕು.

ಗೀತೆಯಲ್ಲಿರುವ ಮತ್ತೊಂದು ವೈಶಿಷ್ಟ್ಯವೆಂದರೆ : ಇದು ಕರ್ಮಯೋಗ, ಜ್ಞಾನಯೋಗ ಮತ್ತು ಭಕ್ತಿಯೋಗ–ಈ ಮೂರನ್ನೂ ಪ್ರತಿಪಾದಿಸಿದೆ. ಇದರಲ್ಲಿ ಯಾವುದೂ ಹಿರಿದಲ್ಲ ; ಯಾವುದೂ ಕಿರಿದಲ್ಲ. ಶ್ರೀಕೃಷ್ಣನು ಇಂತಹುದನ್ನೇ ಪ್ರತಿಪಾದಿಸಿದ್ದಾನೆ–ಎಂದು ಅವನು ಹೇಳಿರುವ ಎಲ್ಲ ಶ್ಲೋಕ ಗಳನ್ನೂ ಒಂದೇ ಸಿದ್ಧಾಂತದ ರೀತಿಯಲ್ಲಿ ಅರ್ಥಮಾಡಬೇಕಾಗಿಯೂ ಇಲ್ಲ. ಕರ್ಮಮಾರ್ಗವನ್ನೂ ಹೊಗಳಿದ್ದಾನೆ ; ಜ್ಞಾನಮಾರ್ಗವನ್ನೂ ಹೊಗಳಿದ್ದಾನೆ; ಭಕ್ತಿಮಾರ್ಗವನ್ನೂ ಹೊಗಳಿದ್ದಾನೆ. ಈ ಮೂರು ಮಾರ್ಗಗಳೂ ಸಹ ಗಂಗಾ-ಯಮುನಾ-ಸರಸ್ವತೀನದಿಗಳಿದ್ದಂತೆ. ಈ ಎಲ್ಲ ನದಿಗಳೂ ಸಮುದ್ರಕ್ಕೇ ಸೇರುತ್ತವೆ. ಇವುಗಳ ಪರಮಧ್ಯೇಯವು ಸಮುದ್ರವನ್ನು ಸೇರುವುದೇ ಆಗಿದೆ. ಲಕ್ಷ್ಯವೊಂದು ; ಹಾದಿಗಳು ಹಲವಾರು. ಈ ಹಾದಿಗಳು ಅವರವರ ಸ್ವಭಾವಾನುಗುಣವಾಗಿ ಅನುಸರಿಸಲ್ಪಡುತ್ತವೆ. ಆದುದರಿಂದ ಕರ್ಮಮಾರ್ಗಿಯು ಜ್ಞಾನಮಾರ್ಗಿಯನ್ನು ಹೀಯಾಳಿಸಬಾರದು. ಜ್ಞಾನ ಮಾರ್ಗಿಯು ಭಕ್ತಿಮಾರ್ಗಿಯನ್ನು ಹೀಯಾಳಿಸಬಾರದು. ಸ್ವಭಾವಾನುಗುಣ ವಾದ ಯಾವುದೇ ಮಾರ್ಗವನ್ನೇ ಅನುಸರಿಸಿದರೂ ಸತ್ಯನಿಷ್ಠೆ ಇರಬೇಕು. ಸತ್ಯನಿಷ್ಠೆ, ಭಗವಂತನ ಮಾತಿನಲ್ಲಿ ಶ್ರದ್ಧೆ ಇವುಗಳಿದ್ದರೆ ಮಾತ್ರವೇ ಯಾವ ಮಾರ್ಗದಿಂದಲಾದರೂ ಭಗವಂತನನ್ನು ಹೊಂದಲು ಸಾಧ್ಯವಾಗುತ್ತದೆ.

'ತಮ್ಮದೇ ಸಿದ್ಧಾಂತವು ಸರಿ' ಎಂದು ತರ್ಕದ ಆಶ್ರಯವನ್ನು ಹೊಂದಿ ಕೇವಲ ವಾದದಲ್ಲಿ ಗೆಲ್ಲುವುದರಿಂದ ಯಾವ ಪ್ರಯೋಜನವೂ ಇಲ್ಲ. ಭಗವಂತನು ತರ್ಕಕ್ಕೆ ಸಿಕ್ಕುವವನಲ್ಲ. ಅತರ್ಕ್ಯ. ಅವನು ಹೇಳಿರುವಂತೆ ನಡೆಯುವುದೊಂದೇ ನಮ್ಮ ಕರ್ತವ್ಯ. ಭಗವಂತನು ಗೀತೆಯಲ್ಲಿ ಹೇಳಿರುವ ೭೦೦ಳ ಶ್ಲೋಕಗಳೂ ಸಹ ಮಹಾಮಂತ್ರಗಳೇ ಸರಿ. ಒಂದು ಮಂತ್ರದ ಒಂದೇ ವಾಕ್ಯವನ್ನಾದರೂ ಅವನ ಆಜ್ಞೆಯನ್ನಾಗಿ ಭಾವಿಸಿ ಅದರಂತೆ ನಡೆದುಕೊಂಡರೂ ಆತ್ಮೋದ್ಧಾರವಾಗುವುದು ಶತಃಸಿದ್ಧ. ಉದಾಹರಣೆಗೆ :– 'ಮನ್ಮನಾ ಭವ ಮದ್ಭಕ್ತಃ' ಎಂಬ ಶ್ಲೋಕದ ಮೊದಲನೆಯ ಚರಣ 'ಮನ್ಮನಾಭವ' ಇಷ್ಟೇಸಾಕು. 'ನನ್ನನ್ನೇ ನಿನ್ನ ಮನಸ್ಸಾಗಿ ಮಾಡಿಕೋ. ನಿನ್ನ ಮನಸ್ಸಿನಲ್ಲಿ ಯಾವಾಗಲೂ ನನ್ನ ಮೂರ್ತಿಯೇ ಸ್ಥಿರವಾಗಿ ನಿಲ್ಲುವಂತಾಗಲಿ.' ಇದೊಂದರ ಸಾಧನಮಾಡಿದರೆ ಮನಸ್ಸು-ಬುದ್ಧಿ-ಅಂತಃಕರಣ ಎಲ್ಲವೂ ಶ್ರೀಕೃಷ್ಣನೇ ಆಗಿಬಿಡುತ್ತದೆ. ಮನಸ್ಸನ್ನು ಪಳಗಿಸಿ ಸರ್ವದಾ ಅವನನ್ನೇ ನೆನೆಯುವಂತೆ ಮಾಡುವುದು ಕಷ್ಟವೇ ಸರಿ. ಕ್ಷಣಕ್ಕೆ ಲಕ್ಷೋಪಲಕ್ಷ ಮೈಲಿಗಳಷ್ಟು ಸಂಚಾರಮಾಡುವ ಸಾಮರ್ಥ್ಯವನ್ನು ಮನಸ್ಸು ಪಡೆದುಕೊಂಡಿದೆ. ಅಂತಹ ಅತಿಚಂಚಲವಾದ ಮನಸ್ಸನ್ನು ಹಿಡಿದಿಟ್ಟುಕೊಳ್ಳುವುದೆಂದರೆ ಒಂದು ಜರಡಿಯಲ್ಲಿ ನೀರು ತುಂಬಲು ಪ್ರಯತ್ನಿಸುವಷ್ಟೇ ಕಷ್ಟಸಾಧ್ಯವಾದುದು. ಆದರೂ ಸಹ ಮನಸ್ಸನ್ನು ಸರ್ವದಾ ಅವನಲ್ಲಿಯೇ ನಿಲ್ಲಿಸುವ ಅಭ್ಯಾಸಮಾಡಬೇಕು. ಕೇವಲ ಒಂದು ಬಾರಿ ಅವನನ್ನು ನೆನೆಯುವುದಲ್ಲ. ಸತತವಾಗಿ ನೆನೆಯುತ್ತಿರಬೇಕೆಂದು ಶ್ರೀಕೃಷ್ಣನು ಗೀತೆಯಲ್ಲಿ ಪದೇ ಪದೇ ಹೇಳುತ್ತಲೇ ಇರುತ್ತಾನೆ. ಆದುದರಿಂದ ಗೀತಾಮಂತ್ರಸಮುಚ್ಚಯದಲ್ಲಿ ಬರುವ ಒಂದು ಪಾದವನ್ನು ಸಾಧಿಸಿಕೊಂಡರೂ ಮುಂದಿನ ಪಾದಗಳಲ್ಲಿ ಹೇಳುವ ಉಪದೇಶಗಳೆಲ್ಲವೂ ಸಿದ್ಧಿಸಿದಂತೆಯೇ. ಮನಸ್ಸಿನಲ್ಲಿ ಉದಯಿಸುವ ಇಂದ್ರಿಯವಿಷಯಗಳೆಲ್ಲವನ್ನೂ ದೂರಚೆಲ್ಲಿ ನಿರ್ವಿಷಯವಾಗುವ ಮನಸ್ಸಿನಲ್ಲಿ ಪರಮಾತ್ಮನನ್ನೇ ತುಂಬಿಕೊಂಡುಬಿಟ್ಟರೆ ಭಗವಂತನು ಹಿಂದೆ ಹೇಳಿದ 'ಮದ್ಭಕ್ತಃ' 'ಮನ್ಮನಾ ಭವ' ಎಂಬುದು ಸಿದ್ಧವಾದಂತೆ. ಮನಸ್ಸಿನಲ್ಲಿ ಚಿರವಾಗಿ ನಿಲ್ಲುವ ಸ್ವಾಮಿಯನ್ನು ಸಾಧಕನು ನಿರಂತರವೂ ಭಜಿಸುತ್ತಲೇ ಇರುತ್ತಾನೆ. ಇದೇ ರೀತಿಯಲ್ಲಿ ಮುಂದಿನ ಅವನ ಉಪದೇಶಗಳೂ ಸ್ವಾಭಾವಿಕವಾಗಿಯೇ ಸಿದ್ಧಿಸುತ್ತವೆ. ಆದುದರಿಂದ ಮೊದಲನೆಯ

ದನ್ನು ಸಿದ್ಧಿಸಿಕೊಳ್ಳುವುದು ಕಷ್ಟವಾಗುವುದೇ ಹೊರತು ಅನಂತರ ಹೆಚ್ಚು ಕಷ್ಟವಾಗುವುದಿಲ್ಲ. ರೈಲುಬಂಡಿಯನ್ನು ಕಂಬಿಯ ಮೇಲೆ ನಿಲ್ಲಿಸುವವರೆಗೆ ಮಾತ್ರ ಕಷ್ಟವಾಗುತ್ತದೆಯೇ ಹೊರತು ಅನಂತರ ಅದು ಚಲಿಸುವಂತೆ ಮಾಡಲು ಹೆಚ್ಚು ಕಷ್ಟವಾಗುವುದಿಲ್ಲ ; ಅಲ್ಲವೇ? ಆದುದರಿಂದ ಗೀತಾಶಾಸ್ತ್ರದ ಪ್ರತಿಯೊಂದು ಶ್ಲೋಕ, ಅದರಲ್ಲಿರುವ ಪದ, ಅದರ ಅರ್ಥ ಇವನ್ನು ಮನನಮಾಡಬೇಕು. ಅನಂತರ ಅದರಂತೆ ಆಚರಿಸಲು ಪ್ರಯತ್ನಿಸಬೇಕು. ಶಮ, ದಮ, ತಿತಿಕ್ಷೆ, ಸತ್ಯನಿಷ್ಠೆ–ಇವುಗಳನ್ನೂ ಸಾಧಿಸಬೇಕು. ಪಾರಾಯಣ ಕಾಲದಲ್ಲಿ ಭಗವಂತನು ಹೇಳಿರುವುದನ್ನು ಹೇಳುತ್ತಲಿದ್ದು ಆಚರಣೆಯಲ್ಲಿ ಇದಕ್ಕೆ ವಿರುದ್ಧವಾಗಿದ್ದರೆ, ಸತ್ಯನಿಷ್ಠೆಗೆ ಬದಲಾಗಿ ಸುಳ್ಳುಹೇಳುವುದನ್ನೇ ಅಭ್ಯಾಸಮಾಡಿಕೊಂಡಿದ್ದರೆ–ಅಂತಹವರನ್ನು ಗೀತೆಯು ಕಾಯುವುದೆಂದು ಹೇಳುವುದಕ್ಕಾಗುವುದಿಲ್ಲ. ಆದುದರಿಂದ ಗೀತಾಭ್ಯಾಸಿಗನು ಸಾಧ್ಯವಾದ ಮಟ್ಟಿಗೂ ಅದರಲ್ಲಿ ಹೇಳಿರುವಂತೆ ಆಚರಿಸಲು ಅಭ್ಯಾಸಮಾಡುವುದು ಅತ್ಯಗತ್ಯವಾಗಿದೆ. ಆದುದರಿಂದಲೇ ಶ್ರೀಶಂಕರರು **ಭಗವದ್ಗೀತಾ ಕಿಂಚಿದಧೀತಾ**–ಭಗವದ್ಗೀತೆಯನ್ನು ಕಿಂಚಿತ್ ಅಧ್ಯಯನಮಾಡಿದರೂ ಸಾಕು, **ಕ್ರಿಯತೇ ತಸ್ಯ ಯಮೋಽಪಿ ನ ಚರ್ಚಾಂ** - ಅಂತಹವನ ವಿಷಯದಲ್ಲಿ ಯಮನೂ ಚರ್ಚೆಮಾಡುವುದಿಲ್ಲ–ಎಂದಿದ್ದಾರೆ. ಭಗವದ್ಗೀತೆಯನ್ನು ಕಿಂಚಿತ್ತೇ ಅಧ್ಯಯನಮಾಡಿ ಅದರಂತೆ ನಡೆದುಕೊಂಡರೆ ಮರ್ತ್ಯನು ಅಮರ್ತ್ಯನಾಗುತ್ತಾನೆ. ಇದರಲ್ಲಿ ಸಂಶಯವಿಲ್ಲ. ಭಗವಂತನೇ ಸಂಶಯ ಪಡಕೂಡದೆಂದು ಸಾರಿ-ಸಾರಿ ಹೇಳುತ್ತಾನೆ. 'ಸಂಶಯಾತ್ಮರೂ, ನಾನು ಹೇಳಿರುವುದರಲ್ಲಿ ಶ್ರದ್ಧೆಯನ್ನಿಟ್ಟುಕೊಳ್ಳದೇ ಇರುವವರೂ ಹಾಳಾಗುತ್ತಾರೆ'– ಎಂದೂ ಸಹ ಶ್ರೀಕೃಷ್ಣನು ಉದ್ಘೋಷಿಸಿದ್ದಾನೆ. ಆದುದರಿಂದ ಭಗವಂತನ ಈ ದಿವ್ಯಗೀತೆಯನ್ನು ಭಾರತೀಯರಾದ ನಾವು ಎಂದೂ ಅಲಕ್ಷಿಸಬಾರದು. ನಾವು ಭಾರತರಾಗಬೇಕಾದರೆ ಭಗವದ್ಗೀತೆಯೇ ನಮಗೆ ದಾರಿದೀಪವಾಗಿದೆ. ಇದರಿಂದ ನಾವು ಆತ್ಮಜ್ಯೋತಿಯನ್ನು ಬೆಳಗಿಸಿಕೊಂಡು ಆನಂದಪಡೋಣ ; ಅಮೃತರಾಗೋಣ.

ಶಾಂತಿಃ ಪುಷ್ಟಿಸ್ತುಷ್ಟಿಶ್ಚಾಸ್ತು ಸಮಸ್ತಸನ್ಮಂಗಲಾನಿ ಭವಂತು

## ಶ್ರೀಮನ್ಮಹಾಭಾರತದ ಹದಿನಾಲ್ಕನೆಯ ಸಂಪುಟದ
## ವಿಷಯಾನುಕ್ರಮಣಿಕೆ
# ಭೀಷ್ಮಪರ್ವ

ಅಧ್ಯಾಯ ವಿಷಯಗಳು ಪುಟಸಂಖ್ಯೆ

## ದ್ವಿತೀಯ ಮುದ್ರಣದ ಪ್ರಸ್ತಾವನೆ

ಏಳು ವರ್ಷಗಳ ನಂತರ ೧೪ನೆಯ ಸಂಪುಟವನ್ನು ಪುನರ್ಮುದ್ರಣ ಮಾಡಿ ಮುಗಿಸಿದ್ದೇವೆ. ಆದರೆ ೧೪ನೆಯ ಸಂಪುಟವು ಮುಗಿದು ಸುಮಾರು ೩ ವರ್ಷಗಳೇ ಆದುವು. ಈ ಸಂಪುಟವನ್ನು ಈಗ ನಾವು ಸುಮಾರು ಮೂರು ಸಾವಿರಕ್ಕೂ ಹೆಚ್ಚು ಗ್ರಾಹಕರಿಗೆ ಕೊಡಬೇಕಾಗಿದೆ. ಎಂದರೆ– ದ್ವಿತೀಯ ಮುದ್ರಣವು ಪ್ರಕಟವಾಗುತ್ತಿದ್ದಂತೆಯೇ ೩-೪ ಸಾವಿರ ಪ್ರತಿಗಳು ಖರ್ಚಾಗಿ ಹೋಗುತ್ತವೆ. ಉಳಿದ ಪ್ರತಿಗಳು ಮುಂದಿನ ಒಂದು ವರ್ಷಕ್ಕೆ ಸಾಕಾಗಬಹುದು. ಪ್ರಚಾರದ ದೃಷ್ಟಿಯಿಂದ ಇದೂ ಒಂದು ಶುಭ ಸೂಚನೆಯೇ ಸರಿ. ಆದರೆ ಪುನರ್ಮುದ್ರಣದ ವ್ಯವಸ್ಥೆ ಇನ್ನೂ ಚೆನ್ನಾಗಬೇಕು. ಈ ಸಂಪುಟವನ್ನು ಮೈಸೂರಿನ ಮೆ|| ವಿಜಯಲಕ್ಷ್ಮಿ ಪ್ರಿಂಟರ್ಸ್ ಇವರ ಸಹಯೋಗದಿಂದ ಮುಗಿಸಲಾಗಿದೆ. ಇವರೇನಾದರೂ ಶ್ರದ್ಧೆವಹಿಸಿ ಎರಡು ತಿಂಗಳಿಗಾದರೂ ಒಂದು ಸಂಪುಟವನ್ನು ಮಾಡಿಕೊಡುವುದಾದರೆ ಸ್ವಲ್ಪ ಸುಧಾರಿಸಬಹುದು. ಈ ಸಂಪುಟವು ಹೊರಬೀಳುವ ವೇಳೆಗೆ 1-2-3-21-22ನೇ ಸಂಪುಟಗಳೂ ಮುಗಿದಿರುತ್ತವೆ. ಪುನರ್ಮುದ್ರಣವಾಗಬೇಕಾಗಿರುವ ಸಂಪುಟಗಳ ಸಂಖ್ಯೆ ಈಗ ಹತ್ತಕ್ಕೇರಿದೆ. ಇದನ್ನು ಮುಗಿಸಿಕೊಡಲು ಭಗವಂತನೇ ಮಾರ್ಗದರ್ಶಕನಾಗಬೇಕು. ದಯಾಮಯನಾದ ಅವನು ಈ ಪುನರ್ಮುದ್ರಣಗಳಿಗೂ ಸುಗಮವಾದ ಹಾದಿಯೊಂದನ್ನು ತೋರಿಸಿ ಕೊಡುವನೆಂಬ ಭರವಸೆಯಿಂದಿರುತ್ತೇವೆ. ಅವನ ಅನುಗ್ರಹಕಾಲವನ್ನು ನಿರೀಕ್ಷಿಸಬೇಕಾಗಿದೆ. ಮಹಾಭಾರತದಲ್ಲಿ ಕಡೆಯದಾದ ೩೨ನೆಯ ಸಂಪುಟವನ್ನು ಜುಲೈ ತಿಂಗಳಲ್ಲಿ ಪ್ರಕಾಶಿಸಲು ನಿಶ್ಚಯಿಸಲಾಗಿದೆ. ಈ ವೇಳೆಯಲ್ಲಿ ೧೨ ದಿವಸಗಳ ಶಾಂತಿಕರ್ಮಗಳನ್ನು ಇಟ್ಟುಕೊಳ್ಳಲು ಯೋಚಿಸಲಾಗಿದೆ. ನಮ್ಮ ಎಲ್ಲ ಗ್ರಾಹಕರೂ ಸಹಕರಿಸಬೇಕು. ಈ ಶಾಂತಿಕರ್ಮವು ಎಲ್ಲ ಗ್ರಾಹಕರಿಗೂ ಸೇರಿದುದಾಗಿದೆ. ಆದುದರಿಂದ ಎಲ್ಲರ ಅಮೋಘ ಸಹಕಾರದಿಂದ

ಶ್ರೀಮನ್ಮಹಾಭಾರತ ಸಮಾರೋಪ ಮಹಾಮಂಗಳ ಸಮಾರಂಭವು ಯಶಸ್ವಿಯಾಗಿ ನಡೆಯುವುದೆಂಬ ಭರವಸೆಯಿಂದಿರುತ್ತೇವೆ. ಸಂಪಾದಕಮಂಡಲಿಯ ವಿದ್ವಾಂಸರು ಈ ಪುನರ್ಮುದ್ರಣದ ತಪ್ಪು-ಒಪ್ಪುಗಳನ್ನು ನೋಡಿಕೊಟ್ಟು ಸಹಕರಿಸಿರುತ್ತಾರೆ. ಇವರೆಲ್ಲರಿಗೂ ನಮ್ಮ ವಂದನೆಗಳು.

ಹದಿನೈದನೆಯ ಸಂಪುಟವು ಮೇ॥ ವಿಜಯಲಕ್ಷ್ಮಿ ಪ್ರಿಂಟರ್ಸ್ ಇವರ ಸಹಕಾರದಿಂದ ಸಾಧ್ಯವಾದಷ್ಟು ಬೇಗ ಹೊರಬರಬಹುದೆಂಬ ವಿಶ್ವಾಸವಿದೆ. ಅನಿವಾರ್ಯವಾದ ಕಾರಣಗಳಿಂದ ಸ್ವಲ್ಪ ಸಾವಕಾಶವಾದರೂ ಗ್ರಾಹಕರು ಸಹಕರಿಸಬೇಕಾಗಿ ಕೇಳಿಕೊಳ್ಳುತ್ತೇವೆ.

**–ಪ್ರಕಾಶಕರು.**

## ಮೂರನೆಯ ಮುದ್ರಣದ ಪ್ರಸ್ತಾವನೆ

ದಯಾಮಯನಾದ ಪರಮಾತ್ಮನ ದಯೆಯಿಂದ ಶ್ರೀಮನ್ಮಹಾಭಾರ ತದ ಹದಿನಾಲ್ಕನೆಯ ಸಂಪುಟದ ಮೂರನೆಯ ಮುದ್ರಣವನ್ನು ಮುಗಿಸು ತ್ತಿದ್ದೇವೆ. ಎಲ್ಲ ವಸ್ತುಗಳ ಬೆಲೆಯೂ ವಿಷದಂತೆ ಏರುತ್ತಿರುವ ಈ ದಿವಸ ಗಳಲ್ಲಿ ಪುನರ್ಮುದ್ರಣವು ಬಹಳ ದುಸ್ತರವಾಗಿ ಕಾಣುತ್ತಿದೆ. ಆದರೂ ಪುನರ್ಮುದ್ರಣ ಅನಿವಾರ್ಯ. ಎಲ್ಲ ಗ್ರಾಹಕರಿಗೂ ಎಲ್ಲ ಸಂಪುಟಗಳನ್ನೂ ಒದಗಿಸಿಯೇ ತೀರಬೇಕು. ಇದು ನಮ್ಮ ಸತ್ಸಂಕಲ್ಪ. ಪರಮಕಾರುಣಿಕನಾದ ಭಗವಂತನು ನಮ್ಮ ಸತ್ಸಂಕಲ್ಪಕ್ಕೆ 'ಅಸ್ತು' ಎಂದರೆ ಕಾರ್ಯವು ಹೇಗೋ ನಡೆದುಹೋಗುತ್ತದೆ. ಅದಕ್ಕಾಗಿ ನಾವೆಲ್ಲರೂ ಏಕಮನಸ್ಕರಾಗಿ ಮಹಾ ಭಾರತ-ರಾಮಾಯಣಗಳ ಪ್ರಕಾಶನಕ್ಕೆ ಯಾವ ತೊಂದರೆಯೂ ಉಂಟಾಗ ದಿರಲೆಂದು ಭಗವಂತನನ್ನು ಪ್ರಾರ್ಥಿಸೋಣ.

ಎಂದಿನಂತೆಯೇ ಧರ್ಮಶೀಲರಾದ ಉದಾರಿಗಳಾದ ಸಂಪಾದಕ ಮಂಡಲಿಯ ವಿದ್ವಾಂಸರು ಈ ಸಂಪುಟದ ತಪ್ಪು-ಒಪ್ಪುಗಳನ್ನು ನೋಡಿ ಕೊಟ್ಟಿರುತ್ತಾರೆ. ಇವರೆಲ್ಲರಿಗೂ ನಮ್ಮ ಹೃತ್ಪೂರ್ವಕ ವಂದನೆಗಳು.

ಈ ಸಂಪುಟವೂ ಸೇರಿ ನಮ್ಮಲ್ಲಿ ಮಹಾಭಾರತದ 15 ಸಂಪುಟಗಳು ಸಿಕ್ಕುತ್ತವೆ. 31 ಮತ್ತು 32ನೇ ಸಂಪುಟಗಳು ಮುಗಿದಿವೆ.

ನಮ್ಮ ಹಿತಚಿಂತಕರೆಲ್ಲರಿಗೂ ದಯಾಮಯನಾದ ಭಗವಂತನು ಸಕಲ ಇಷ್ಟಾರ್ಥಗಳನ್ನೂ ನೆರವೇರಿಸಿಕೊಡಲೆಂಬ ಪ್ರಾರ್ಥನೆಯೊಡನೆ ವಿರಮಿಸುವೆವು.

—ಪ್ರಕಾಶಕರು.

## ಚತುರ್ಥ ಮುದ್ರಣದ ಪ್ರಸ್ತಾವನೆ

ದಯಾಮಯನಾದ ಭಗವಂತನ ಕೃಪೆಯಿಂದಾಗಿ ಭಗವದ್ಗೀತೆಗೆ ಸಂಬಂಧಿಸಿದಂತೆ 12-13 ಮತ್ತು 14ನೇ ಸಂಪುಟಗಳನ್ನು ಒಟ್ಟಾಗಿ ಹೊರ ತರಲು ಸಂಕಲ್ಪಿಸಿದ್ದೆವು. ಕಾಗದಕ್ಕೆ ಹಣದ ನೆರವೂ ಸಿಕ್ಕಿತ್ತು. ಆದರೆ ಮಾರು ಕಟ್ಟೆಯಲ್ಲಿ ಕಾಗದ ಸಿಕ್ಕುವುದೇ ಪ್ರಯಾಸವಾಗಿ ಒಂದು ತಿಂಗಳು ವ್ಯರ್ಥವಾಗಿ ಕಳೆದುಹೋಯಿತು. ಇದು ಭಗವಂತನ ಸಂಕಲ್ಪ. ನಾವೇನು ಮಾಡಲೂ ಸಾಧ್ಯವಾಗುವುದಿಲ್ಲ. ಕಡೆಗಾದರೂ ಬೇಕಾದ ಕಾಗದವು ಸಿಕ್ಕಿ ಇಷ್ಟು ಬೇಗನೆ ಸಂಪುಟಗಳು ಸಿದ್ಧವಾದುದಕ್ಕೆ ದಯಾಮಯನಾದ ಭಗವಂತನ ಕೃಪೆಯೇ ಕಾರಣ. ಅವನ ಸಂಕಲ್ಪದಂತೆ ಸಂಪುಟಗಳು ಆಯಾಕಾಲಕ್ಕೆ ಪ್ರಕಟವಾಗು ವುವು. ಗ್ರಾಹಕರು ಸಹಕರಿಸಬೇಕಾಗಿ ವಿನಂತಿಸುತ್ತೇವೆ.

ಕನ್ನಡ ಬಂಧುಗಳೇ! ನಮ್ಮ ಅಜೇಯ ಸಂಸ್ಕೃತಿಯ ಅಡಿಗಲ್ಲುಗಳಂತಿ ರುವ ಮಹಾಭಾರತ-ರಾಮಾಯಣ-ಭಾಗವತಗಳನ್ನು ಸಂಗ್ರಹಿಸಿಟ್ಟುಕೊಳ್ಳಲು ಇದೊಂದು ಸುವರ್ಣಾವಕಾಶ. ತ್ವರೆಮಾಡಿರಿ. ಜ್ಞಾನದೀವಿಗೆಯನ್ನು ಮನೆ-ಮನೆಗಳಲ್ಲಿ ಹೊಚ್ಚಿರಿ. ಮಹಾಭಾರತ-ರಾಮಾಯಣ-ಭಾಗವತಗಳ ಅಧ್ಯಯನದಿಂದ ಸುಜ್ಞಾನವನ್ನು ಪಡೆದು ಹೃದಯಕಮಲದ ಮಧ್ಯದಲ್ಲಿರುವ ದಿವ್ಯಜ್ಯೋತಿಯನ್ನು ಕಂಡುಕೊಳ್ಳಿರಿ. ಬ್ರಹ್ಮಾನಂದವನ್ನು ಅನುಭವಿಸಿರಿ. ಭಗ ವಂತನು ನಮ್ಮೆಗೆಲ್ಲರಿಗೂ ಸನ್ಮಂಗಲವನ್ನುಂಟುಮಾಡಲಿ.

—ಪ್ರಕಾಶಕರು.



ಶ್ರೀಮಹಾಗಣಪತಯೇ ನಮಃ ಶ್ರೀಸರಸ್ವತ್ಯೈ ನಮಃ ಶ್ರೀಸದ್ಗುರವೇ ನಮಃ



ನಾರಾಯಣಂ ನಮಸ್ಕೃತ್ಯ ನರಂ ಚೈವ ನರೋತ್ತಮಮ್ ।
ದೇವೀಂ ಸರಸ್ವತೀಂ ಚೈವ ತತೋ ಜಯಮುದೀರಯೇತ್ ॥

# ಶ್ರೀಮನ್ಮಹಾಭಾರತ-ಭೀಷ್ಮಪರ್ವ :
# ಹದಿನಾಲ್ಕನೆಯ ಸಂಪುಟ

೩೯ನೆಯ ಅಧ್ಯಾಯ ಶ್ರೀಮದ್ಭಗವದ್ಗೀತಾಪರ್ವ (ಮುಂದುವರಿದಿದೆ.)

## ಭಗವದ್ಗೀತಾ-೧೫ನೆಯ ಅಧ್ಯಾಯ

### ಸಂಸಾರವೃಕ್ಷ : ಭಗವತ್ಪ್ರಾಪ್ತಿಯ ಉಪಾಯ : ಪರಮೇಶ್ವರನ ಸ್ವರೂಪ : ಕ್ಷರ-ಅಕ್ಷರ ಮತ್ತು ಪುರುಷೋತ್ತಮತತ್ತ್ವ-ಇವುಗಳ ವರ್ಣನೆ

**ಶ್ರೀಭಗವಾನುವಾಚ :**

**ಓಂ ಊರ್ಧ್ವಮೂಲಮಧಃಶಾಖಮಶ್ವತ್ಥಂ ಪ್ರಾಹುರವ್ಯಯಮ್ ।**
**ಛನ್ದಾಂಸಿ ಯಸ್ಯ ಪರ್ಣಾನಿ ಯಸ್ತಂ ವೇದ ಸ ವೇದವಿತ್ ॥೧॥**

**ಓಂ ಅಧಶ್ಚೋರ್ಧ್ವಂ ಪ್ರಸೃತಾಸ್ತಸ್ಯ ಶಾಖಾ**
**ಗುಣಪ್ರವೃದ್ಧಾ ವಿಷಯಪ್ರವಾಲಾಃ ।**
**ಅಧಶ್ಚ ಮೂಲಾನ್ಯನುಸಂತತಾನಿ**
**ಕರ್ಮಾನುಬನ್ಧೀನಿ ಮನುಷ್ಯಲೋಕೇ ॥೨॥**

ಶ್ರೀಭಗವಂತನು ಹೇಳುತ್ತಾನೆ :

ಮೇಲುಗಡೆ ಬೇರುಗಳುಳ್ಳದ್ದೂ ಮತ್ತು ಕೆಳಗಡೆ ಕೊಂಬೆಗಳುಳ್ಳದ್ದೂ ಆದ ಅಶ್ವತ್ಥವು ನಾಶರಹಿತವಾದುದೆಂದು ಹೇಳುತ್ತಾರೆ. ಅದರ ಎಲೆಗಳು ಛಂದಸ್ಸುಗಳು. ಅದನ್ನು ಅರಿತುಕೊಂಡವನೇ ವೇದವನ್ನು ಬಲ್ಲವನು.

ಮೇಲಕ್ಕೂ-ಕೆಳಕ್ಕೂ ಅದರ ಶಾಖೆಗಳು ಹಬ್ಬಿಕೊಂಡಿರುತ್ತವೆ. ಅವು ಸತ್ತ್ವಾದಿ ಮೂರು ಗುಣಗಳಿಂದ ವೃದ್ಧಿಯನ್ನು ಹೊಂದಿವೆ. ವಿಷಯಗಳೆಂಬ ಚಿಗುರುಗಳುಳ್ಳದ್ದಾಗಿವೆ. ಕೆಳಭಾಗದ ಮನುಷ್ಯಲೋಕದಲ್ಲಿ ಕರ್ಮಾನುಬಂಧಿಯಾದ ಬೇರುಗಳು ವ್ಯಾಪಿಸಿಕೊಂಡಿವೆ.

* * *

(**ಊರ್ಧ್ವಮೂಲಂ = ಊರ್ಧ್ವಃ-ಉತ್ಕೃಷ್ಟಃ ಪುರುಷಃ, ಮೂಲಂ ಅಸ್ಯ= ಊರ್ಧ್ವಮೂಲಃ ।** ಉತ್ಕೃಷ್ಟನಾದ ಪುರುಷನು ಮೂಲವಾಗಿ ಉಳ್ಳದ್ದು ಊರ್ಧ್ವಮೂಲ ; ಅರ್ಥಾತ್ ಮುಂದೆ ಹೇಳುವ ಅಶ್ವತ್ಥವೃಕ್ಷದ ಮೂಲ ಪರಬ್ರಹ್ಮ. ಮೇಲಾಗಿ ಆ ಪರಬ್ರಹ್ಮವಸ್ತುವು ಸತ್ಯಲೋಕಕ್ಕಿಂತಲೂ ಮೇಲಿರುವುದರಿಂದ **ಊರ್ಧ್ವ–ಔನ್ನತ್ಯ** ಎಂಬುದು ಅನ್ವರ್ಥವಾಗಿಯೇ ಇದೆ. **ಅಧಃಶಾಖಂ**–ಅದು ಕೆಳಭಾಗದಲ್ಲಿ ಒಂದು ಶಾಖೆಯುಳ್ಳದ್ದಾಗಿದೆ. ಆ ಒಂದು ಶಾಖೆಯೇ ಸೃಷ್ಟಿಕರ್ತನಾದ ಚತುರ್ಮುಖಬ್ರಹ್ಮನು.

ಈ ಸಂಸಾರವು ಒಂದು ಅಶ್ವತ್ಥವೃಕ್ಷ ಅಥವಾ ಅರಳೀಮರ. ಉತ್ಕೃಷ್ಟನೂ, ಸರ್ವೋನ್ನತನೂ ಆಗಿರುವ ಪರಮಾತ್ಮನು ಅದರ ಮೂಲವಾದುದರಿಂದ ಅದು ಮೇಲುಗಡೆ ಬೇರನ್ನು ಹೊಂದಿರುವುದಾಗಿದೆ. ಅದರ ಕೊಂಬೆಗಳು ಕೆಳಮುಖವಾಗಿವೆ. ಮಹತ್ತು, ಅಹಂಕಾರ–ಮುಂತಾದ ಕೆಳಮುಖವಾದ ತತ್ತ್ವಗಳಾಗಿ ಪ್ರವೃತ್ತಿಮಾರ್ಗದಲ್ಲಿ ಕೆಳಮುಖವಾಗಿ ಬೆಳೆದಿರುವ ಅನೇಕ ಕೊಂಬೆಗಳುಳ್ಳ ವೃಕ್ಷವು ಅದಾಗಿದೆ. ಅದು ಅನಾದಿಕಾಲದಿಂದಲೂ ಬೆಳೆದುಬಂದಿರುವ ವೃಕ್ಷ. ಸಂಸಾರಪ್ರವಾಹವು ನಿತ್ಯವಾದುದು. ಪ್ರಲಯಕಾಲದಲ್ಲಿ ಪ್ರಪಂಚವು ಲಯಹೊಂದಿದರೂ ಮೂಲಪ್ರಕೃತಿಯಲ್ಲಿ ಅಡಗಿರುವುದರಿಂದ ಅದನ್ನು ಅವ್ಯಯವೆಂದು ಕರೆಯಬಹುದು. ವೇದಗಳು ಆ ಮರದ ಎಲೆಗಳಾಗಿವೆ. ಎಲೆಗಳು ವೃಕ್ಷವನ್ನು ವೃದ್ಧಿಸುವಂತೆ ಅಥವಾ ಆವರಿಸಿರುವಂತೆ ಭಗವಂತನ ಸೃಷ್ಟ್ಯಾದಿ ರಹಸ್ಯರೂಪವಾದ ವೇದಗಳು ಅದನ್ನು ತುಂಬಿಕೊಂಡು ಅಥವಾ ಆವರಿಸಿಕೊಂಡು ವೃದ್ಧಿಸುತ್ತಿವೆ. ಮೂಲವಾದ ಪರಬ್ರಹ್ಮಸಹಿತವಾಗಿ ಈ ಸಂಸಾರವೃಕ್ಷವನ್ನು ಅರ್ಥಮಾಡಿಕೊಂಡರೆ ಎಲ್ಲ ವೇದಾರ್ಥಗಳನ್ನೂ ತಿಳಿದುಕೊಂಡಂತೆಯೇ.

**ಏಕಾಂಶೇನ ಸ್ಥಿತೋ ಜಗತ್** – ಎಂದು ಈ ಹಿಂದೆ ಶ್ರೀಕೃಷ್ಣನು

ಹೇಳಿರುವಂತೆ ಪರಮಾತ್ಮ, ಮೂಲಪ್ರಕೃತಿ ಮತ್ತು ಅದರ ವಿಸ್ತಾರವನ್ನೊಳಗೊಂಡ ವಿರಾಡ್ರೂಪದ ವರ್ಣನೆಯನ್ನು ಅಶ್ವತ್ಥವೃಕ್ಷ ಎಂಬ ರೂಪಕದಿಂದ ಇಲ್ಲಿ ಶ್ರೀಕೃಷ್ಣನು ಹೇಳಿದ್ದಾನೆ.

ಆ ಮರದ ಕೊಂಬೆಗಳು ಮೇಲಕ್ಕೂ ಹರಡಿಕೊಂಡಿವೆ ಮತ್ತು ಕೆಳಕ್ಕೂ ಹರಡಿಕೊಂಡಿವೆ. ತಮ್ಮ ತಮ್ಮ ಕರ್ಮ ಮತ್ತು ಜ್ಞಾನಗಳಿಗೆ ಅನುಗುಣವಾಗಿ ಇಲ್ಲಿ ಬೇರೆ ಬೇರೆ ಮಟ್ಟದಲ್ಲಿರುವ ಯೋಗಿಗಳುಂಟು. ಅದರಲ್ಲಿರುವ ಜೀವಿಗಳು ತಮ್ಮ ಸೃಷ್ಟಿಗೆ ಕಾರಣವಾಗಿರುವ ತತ್ತ್ವಗಳನ್ನು ಮೇಲಕ್ಕೆ ಉಪಸಂಹರಿಸಿಕೊಂಡು ಮೇಲ್ಮುಖವಾಗಿ ಹೋಗಲು ಸಹಾಯವಾದ ಮಾರ್ಗಗಳೂ ಉಂಟು ಮತ್ತು ಜೀವಿಗಳು ತಮ್ಮ ಸ್ಥಾನದಿಂದ ಕೆಳಕ್ಕೆ ಇಳಿಯಲು ಸಾಧನವಾದ ಮಾರ್ಗಗಳೂ ಉಂಟು. ಆದುದರಿಂದ ಅದರ ಕೊಂಬೆಗಳು ಮೇಲಕ್ಕೂ ಹರಡಿವೆ ಮತ್ತು ಕೆಳಕ್ಕೂ ಹರಡಿವೆ ಎನ್ನಬಹುದು. ಅವು ಹೀಗೆ ಹರಡಲು ಕಾರಣ : ಗುಣಗಳು ಮತ್ತು ವಿಷಯಗಳು.

ವೃಕ್ಷವು ನೀರಿನಿಂದ ಅಭಿವೃದ್ಧಿಹೊಂದುವಂತೆ ಮೂಲಪ್ರಕೃತಿಯಿಂದ ಹೊರಟ ಸತ್ತ್ವ-ರಜಸ್ತಮೋಗುಣಗಳಿಂದ ಸಂಸಾರವೃಕ್ಷದ ಕೊಂಬೆಗಳು ಅಗಾಧವಾಗಿ ಬೆಳೆದಿವೆ. ಸತ್ತ್ವ-ರಜಸ್ತಮೋಗುಣಗಳ ಮೂಲವಾದ ವಿಷಯ ಪ್ರವೃತ್ತಿಗಳೇ ಆ ಅಗಾಧವೃಕ್ಷದ ರೆಂಬೆಗಳಲ್ಲಿರುವ ಚಿಗುರುಗಳಾಗಿವೆ.

ಕರ್ಮಭೂಮಿಯಾದ ಮನುಷ್ಯಲೋಕದಲ್ಲಿ ಅದರ ಬೇರುಗಳು ಕರ್ಮಾನುಗುಣವಾಗಿ ಮೇಲ್ಮುಖವಾಗಿಯೂ ಮತ್ತು ಕೆಳಮುಖವಾಗಿಯೂ ಬೆಳೆದುಕೊಳ್ಳುತ್ತವೆ. ಎಂದರೆ ಮನುಷ್ಯಯೋನಿಗಿಂತಲೂ ಕೀಳುಮಟ್ಟದ ಪ್ರಾಣಿಗಳಿಗೆ ಕರ್ಮಾನುಗುಣವಾಗಿ ಇಳಿಯುವ ಹಾದಿಗಳೂ ಇರುತ್ತವೆ. (ಉತ್ತಮಕರ್ಮಗಳಿಂದ ಮೇಲಕ್ಕೆ ಒಯ್ಯಲು ಕಾರಣವಾದ ಮಾರ್ಗಗಳೂ ಇರುತ್ತವೆ.) ಮನುಷ್ಯಲೋಕವು ವಿಶೇಷವಾಗಿ ಕರ್ಮಾಧಿಕಾರದ ಸ್ಥಾನವಾದುದರಿಂದ ಮೇಲುಗಡೆಗೆ ಮತ್ತು ಕೆಳಗಡೆಗೆ ಎರಡು ಕಡೆಗಳಿಗೂ ಒಯ್ಯುವ ಮೂಲ (ಕಾರಣ) ಗಳುಳ್ಳದ್ದನ್ನಾಗಿ ಅದನ್ನು ಹೇಳಿದೆ.

ಅಶ್ವತ್ಥಂ–ಎಂಬುದಕ್ಕೆ ನ-ಶ್ವ-ಸ್ಥ ನಾಳೆ ಇಲ್ಲದೇ ಇರುವುದು ಎಂದು ಆಧ್ಯಾತ್ಮಿಕನಿರುಕ್ತಿಯೇನೋ ಇದೆ. ಆದರೆ ಅವ್ಯಯ ಶಬ್ದವನ್ನು

ಮುಂದೆಯೇ ಹೇಳಿರುವುದರಿಂದ ಅಶ್ವತ್ಥಶಬ್ದಕ್ಕೆ 'ನಾಳೆ ಇಲ್ಲದೇ ಇರುವುದು' ಎಂದು ಅರ್ಥಮಾಡುವುದಕ್ಕಿಂತಲೂ ವೇದದಲ್ಲಿ ಬರುವ ವ್ಯುತ್ಪತ್ತಿಯನ್ನೇ ಹೇಳುವುದು ಸಮಂಜಸವಾಗಿ ಕಾಣುತ್ತದೆ.

ಅಗ್ನಿಯು (ಯಜ್ಞಪ್ರಜಾಪತಿಯು) ಪಿತೃಯಾಣಕಾಲದಲ್ಲಿ ದೇವ ಲೋಕದಲ್ಲಿ ಇಲ್ಲದಂತಾಗಿ ಈ ವೃಕ್ಷದಲ್ಲಿ ಅಶ್ವದ (ಕುದುರೆಯ) ರೂಪವನ್ನು ತಾಳಿ ಒಂದು ವರ್ಷದವರೆಗೆ ಅಡಗಿಕೊಂಡಿದ್ದರಿಂದ ಇದಕ್ಕೆ ಅಶ್ವತ್ಥ ಎಂಬ ಹೆಸರು ಬಂದಿತು.

**ಪ್ರಜಾಪತಿರ್ದೇವೇಭ್ಯೋಽನಿಲಾಯತ । ಅಶ್ವೋ ರೂಪಂ ಕೃತ್ವಾ ।**
**ಸೋಽಶ್ವತ್ಥೇ ಸಂವತ್ಸರಮತಿಷ್ಠತ್ । ತದಶ್ವತ್ಥಸ್ಯಾಶ್ವತ್ಥತ್ವಮ್ ।**

ತೈ-ಬ್ರಾಹ್ಮಣ ೩-೮-೧೨-೨

ಅಶ್ವತ್ಥವು ಶಾಶ್ವತವಾಗಿ ಉಳಿಯುವ ವೃಕ್ಷವಲ್ಲದಿದ್ದರೂ ನಾಳೆಯೇ ಉಳಿಯದಿರುವ ವೃಕ್ಷವಲ್ಲ. ಈ ಸಂಸಾರವೃಕ್ಷವು ಪ್ರಕೃತಿಯ ವಿಸ್ತಾರದಲ್ಲಿ ಅಥವಾ ಬೀಜರೂಪದಲ್ಲಿ ಯಾವಾಗಲೂ ಇರುವುದೇ ಆಗಿರುವುದರಿಂದ ಇದನ್ನು ಅವ್ಯಯ ಎಂದು ಕರೆಯಲಾಗಿದೆ. ಮಹದ್ಬ್ರಹ್ಮವು ಅಥವಾ ಮೂಲ ಪ್ರಕೃತಿಯು ಅನಾದಿಯೆಂದೂ, ಅವ್ಯಯವೆಂದೂ ಈ ಹಿಂದೆಯೇ ಹೇಳಿದೆ.

ಈ ಸಂಸಾರವು ಜ್ಞಾನದಿಂದ ತೊಲಗುವುದಾದರೂ ಆ ಜ್ಞಾನವು ಎಲ್ಲ ಜೀವಿಗಳಿಗೂ ಅತಿದುರ್ಲಭವಾದುದರಿಂದ ಭಗವಂತನ ಲೀಲಾವಿಭೂತಿ ಯಾಗಿ ಇದನ್ನು ಅವ್ಯಯವೆಂದು ಕರೆಯಬಹುದು. ಇದು ಅಶ್ವದಂತೆ ಮಿತಿ ಮೀರಿದ ವೇಗದಿಂದ ಸುತ್ತುತ್ತಿರುವುದರಿಂದಲೂ ಅಶ್ವತ್ಥ ಎಂಬ ವಿಶೇಷಣ ವನ್ನು ಇದಕ್ಕೆ ಕೊಡಬಹುದು. ಸಂಸಾರವನ್ನು ಅಥವಾ ಬ್ರಹ್ಮವೃಕ್ಷವನ್ನು ರೂಪಕವಾಗಿ ವರ್ಣಿಸಿರುವ ಶ್ರುತಿವಾಕ್ಯಗಳೂ ಇವೆ :

**ಊರ್ಧ್ವಮೂಲೋಽವಾಕ್ಶಾಖ ಏಷೋಽಶ್ವತ್ಥಃ ಸನಾತನಃ ।**
**ತದೇವ ಶುಕ್ರಂ ತದ್ಬ್ರಹ್ಮ ತದೇವಾಮೃತಮುಚ್ಯತೇ ।**
**ತಸ್ಮಿಂಲ್ಲೋಕಾಃ ಶ್ರಿತಾಃ ಸರ್ವೇ ತದು ನಾತ್ಯೇತಿ ಕಶ್ಚನ ।**

**ಏತದ್ವೈ ತತ್**

ಮೇಲೆ ಬುಡವಿರುವ (ವಿಷ್ಣುವಿನ ಪರಮಪದವೇ ಬುಡವಾಗಿರುವ)

ಕೆಳಗೆ ಶಾಖೆಗಳಿರುವ ಈ ಅಶ್ವತ್ಥವು (ಬ್ರಹ್ಮವೃಕ್ಷವು) ಸನಾತನವಾದುದು. ಅದೇ ಶುದ್ಧವಾದುದು. ಅದೇ ಬ್ರಹ್ಮ, ಅದೇ ಅಮೃತ ಎಂದು ಹೇಳಲ್ಪಡುತ್ತದೆ. ಎಲ್ಲ ಲೋಕಗಳೂ ಅದರಲ್ಲಿ ಆಶ್ರಯವನ್ನು ಹೊಂದಿವೆ. ಅದನ್ನು ಯಾವನೂ ಮೀರಲಾರನು. ಇದೇ ಅದು.

ಆದರೆ ಈ ವೃಕ್ಷವು ನಮ್ಮ ಶರೀರವೇ ಆಗಿದೆ–ಎಂದು ಶ್ರೀರಂಗಮಹಾ ಗುರುಗಳೂ ನಿರೂಪಿಸುತ್ತಿದ್ದರು.

**ಊರ್ಧ್ವಮೂಲಂ**–ಎಂದರೆ ತಲೆಯೇ ಮೂಲವಾದುದು. ಹುಟ್ಟುವಾಗಲೂ ತಲೆಯೇ ಮುಂದೆ ಹುಟ್ಟುವುದು. **ಅಧಃಶಾಖಂ**–ಎಂದರೆ ತಲೆಯ ಒಳಭಾಗದಲ್ಲಿ ಅಥವಾ ಕೆಳಭಾಗದಲ್ಲಿ ಅಹಂಕಾರ, ಬುದ್ಧಿ, ಅವ್ಯಕ್ತ ಮತ್ತು ಮನಸ್ಸು ಹೀಗೆ ಶಾಖೆಗಳುಳ್ಳದ್ದಾಗಿದೆ. ಉಳಿದ ಅವಯವಗಳ ಬೆಳವಣಿಗೆಯು ಇಲ್ಲಿಂದಲೇ ಆಗಿದೆ. ಇದರ ಸೃಷ್ಟಿಗೆ ಕಾರಣವಾದ ಪರಮಾತ್ಮನಾದ ಪರಂಜ್ಯೋತಿಯು ಊರ್ಧ್ವಸ್ಥಾನವಾದ ಸಹಸ್ರಾರದಲ್ಲಿ ಪೂರ್ಣವಾಗಿ ಅನುಭವಿಸಲ್ಪಡುತ್ತಿದೆ. ಅಲ್ಲಿಂದ ಕೆಳಮುಖವಾಗಿ ತತ್ತ್ವಗಳಿಂದ ಉಳಿದ ಅಂಗೋಪಾಂಗಗಳ ನಿರ್ಮಾಣವಾಗಿರುವುದರಿಂದ ಅವುಗಳೆಲ್ಲವೂ ಕೆಳಕ್ಕೆ ಬೆಳೆದ ಕೊಂಬೆಗಳಂತಿವೆ. ಹಸ್ತಗಳನ್ನು ಐದು ಕೊಂಬೆಗಳುಳ್ಳ ಅವಯವ, **ಪಂಚಶಾಖಶಯಃ ಪಾಣಿಃ**–ಎಂದು ಹೇಳಿರುವ ಪ್ರಯೋಗಗಳೂ ಇವೆ. ಅಶ್ವತ್ಥ , ಅ-ಶ್ವ-ಸ್ಥ ನಾಳೆ ಸ್ಥಿರವಾಗಿ ಇಲ್ಲದ್ದು. ಈ ವ್ಯುತ್ಪತ್ತಿಯು ದೇಹಕ್ಕೆ ಹೆಚ್ಚು ಅನ್ವಯವಾಗುತ್ತದೆ. ದೇಹದ ಬದಲಾವಣೆಯು ಕ್ಷಣ-ಕ್ಷಣಕ್ಕೂ ಆಗುತ್ತಿರುತ್ತದೆ. ಶರೀರವೆಂದಿಗೂ ಒಂದೇ ಸಮನಾಗಿ ಇರುವುದೇ ಇಲ್ಲ. ವ್ಯತ್ಯಾಸ ಹೊಂದುತ್ತಲೇ ಇರುತ್ತದೆ. ಅದಕ್ಕಾಗಿಯೇ ಇದಕ್ಕೆ ಅಶ್ವತ್ಥ ಎಂದು ಹೆಸರು. **ಅವ್ಯಯಂ**–ಶರೀರ ಎಂಬುದು ಶಾಶ್ವತವಾದುದು. ಸೂಕ್ಷ್ಮಶರೀರವಾಗಲೀ, ಸ್ಥೂಲಶರೀರವಾಗಲೀ, ಕಾರಣಶರೀರವಾಗಲೀ–ಮುಕ್ತಿಯು ಸಿಕ್ಕುವವರೆಗೂ ಇರುವುದರಿಂದ ಇದನ್ನು ಅವ್ಯಯವೆಂದೂ ಹೇಳಬಹುದು. ವೇದೋಕ್ತ ಕರ್ಮಗಳು ಅಥವಾ ಯಜ್ಞಚಕ್ರವು ವಿಶ್ವವನ್ನೇ ರಕ್ಷಿಸುವುದಾದುದರಿಂದ ಈ ಶರೀರವೆಂಬ ಅಶ್ವತ್ಥವೃಕ್ಷಕ್ಕೆ ವೇದಗಳು ಎಲೆಗಳಂತಿದ್ದು ಪೋಷಕವಾಗಿವೆ.

ಇದರ ಶಾಖೆಗಳು ಮೇಲೂ ಕೆಳಗೂ ವ್ಯಾಪಿಸಿವೆ. ಇಲ್ಲಿ ಶಾಖೆಗಳು

ಎಂಬುದಕ್ಕೆ ಇಂದ್ರಿಯಗಳು ಎಂದು ಅರ್ಥ. ಮೂರು ವಿಧವಾದ ಗುಣ ಗಳಿಂದ ಪೋಷಿತವಾದ ಈ ಇಂದ್ರಿಯಗಳು ಮೇಲ್ಮುಖವಾಗಿಯೂ ಹೋಗುತ್ತವೆ ; ಕೆಳಮುಖವಾಗಿಯೂ ಹೋಗುತ್ತವೆ. ಸತ್ತ್ವಗುಣದಿಂದ ಸಮೃದ್ಧವಾದರೆ ಮೇಲ್ಮುಖವಾಗಿ ಹೋಗುತ್ತವೆ. ರಜಸ್ಸಿನಿಂದಾಗಲೀ–ತಮೋಗುಣದಿಂದಾಗಲೀ ಪ್ರವೃದ್ಧವಾದರೆ ಕೆಳಗಿನ ಕಾಮ-ಲೋಭಾದಿ ಮಾರ್ಗಗಳನ್ನು ಅನುಸರಿಸಿ ಹೋಗುತ್ತವೆ. ಇಂತಹವುಗಳಿಗೆ ವಿಷಯ ಗಳೆಂಬುದೇ ಚಿಗುರೆಲೆಗಳ ರೂಪವಾಗಿರುತ್ತವೆ. ಮನುಷ್ಯಲೋಕದಲ್ಲಿ ಕೆಳಮುಖವಾಗಿ ಹೋಗುವ ಇಂದ್ರಿಯಪ್ರವೃತ್ತಿಗಳು ಬೇರಿನ ರೂಪವಾಗಿ ಕರ್ಮವೆಂಬ ವೃಕ್ಷವು ಬೆಳೆಯಲು ಅನುಕೂಲವಾಗಿ ಕರ್ಮಗಳಿಗೆ ಅನುಸಾರ ವಾದ ಪುಣ್ಯ-ಪಾಪಫಲಗಳನ್ನು ಕೊಡುತ್ತವೆ.

ಇದರ ಬೆಳವಣಿಗೆ ಆಗುವುದು ತ್ರಿಗುಣಗಳಿಂದ. ಆಕರ್ಷಕವಾದ ವಿಷಯಗಳು ಇದರ ಅಂಕುರಗಳಂತೆ. ಇದರಲ್ಲಿ ಊರ್ಧ್ವಲೋಕಗಳಿಗೆ ಕೊಂಡೊಯ್ಯುವ ನಾಡಿ ಮುಂತಾದ ಮಾರ್ಗಗಳು ಕೇಂದ್ರಗಳು. ಅಧಮ ಸ್ಥಾನಗಳಿಗೆ ಒಯ್ಯುವ ನಾಡಿಗಳ ಕೇಂದ್ರಗಳು ಎಲ್ಲೆಲ್ಲಿಯೂ ಹರಡಿಕೊಂಡಿವೆ. ಇದರಲ್ಲಿರುವ ದೇಹಿಯು ತನ್ನ ಕರ್ಮಾನುಗುಣವಾಗಿ ಊರ್ಧ್ವಶಾಖೆಗಳಲ್ಲಿ ಅಥವಾ ಕೆಳಮುಖವಾದ ಶಾಖೆಗಳಲ್ಲಿ ಸಂಚಾರಮಾಡಬಹುದು.

ಹೀಗೆ ಮೇಲುಬೇರಾಗಿ ಕೆಳಗೊಂಬೆಯಾಗಿರುವ ಮರದ ರೂಪಕವು ಶರೀರಕ್ಕೆ ಚೆನ್ನಾಗಿ ಹೊಂದುತ್ತದೆ. ದ್ವಾ ಸುಪರ್ಣಾ ಸಯುಜಾ ಸಖಾಯೌ ಸಮಾನಂ ವೃಕ್ಷಂ ಪರಿಷಸ್ವಜಾತೇ ಎಂಬ ಶ್ರುತಿಯು ಜೀವಾತ್ಮ-ಪರಮಾತ್ಮಗಳೆಂಬ ಎರಡು ಹಕ್ಕಿಗಳಿಂದ ಕೂಡಿದ ವೃಕ್ಷವನ್ನಾಗಿ ರೂಪಿಸಿರುವುದು ಶರೀರವನ್ನೇ.

ಈ ರೂಪಕಕ್ಕೆ ಉಳಿದ ಎಲ್ಲ ವೃಕ್ಷಗಳನ್ನೂ ಬಿಟ್ಟು ವಟವೃಕ್ಷವನ್ನು ಅಥವಾ ಅಶ್ವತ್ಥವೃಕ್ಷವನ್ನು ಶಾಸ್ತ್ರಗಳು ತೆಗೆದುಕೊಳ್ಳುತ್ತವೆ.

ಇವೆರಡೂ ಒಂದೇ ಜಾತಿಗೆ ಸೇರಿದ ವೃಕ್ಷಗಳು. ವಟವೃಕ್ಷದಲ್ಲಿ ಮೇಲಿ ನಿಂದ ಕೆಳಕ್ಕೆ ಬಿಳಲನ್ನು ಬಿಟ್ಟುಕೊಳ್ಳುವ ಧರ್ಮವಿರುವುದರಿಂದ ಅದು ಮೇಲುಬೇರಾಗಿ ಕೆಳಗೊಂಬೆಯಾಗಿರುವ ವೃಕ್ಷ. ಅರಳೀಮರದಲ್ಲಿ ಹೀಗೆ

ಬಿಳಲು ವಿಶೇಷವಾಗಿ ಕಾಣಿಸುವುದಿಲ್ಲವಾದರೂ ಆ ಮರದಲ್ಲಿ ಕೊಂಬೆಗಳಲ್ಲಿ ಮಣ್ಣುಸೇರಿಕೊಂಡು ಅದರಲ್ಲಿ ಬೀಜಗಳು ಬಿದ್ದು ಮಳೆಯ ನೀರು ಸುರಿದಾಗ ಅದರೊಳಗಿನಿಂದ ಮೇಲ್ಮುಖವಾಗಿ ಮತ್ತು ಕೆಳಮುಖವಾಗಿ ವೃಕ್ಷಗಳು ಬೆಳೆಯುವುದರಿಂದ ಅದನ್ನು ಮೇಲುಬೇರಾಗುವ ವೃಕ್ಷ ಎನ್ನಬಹುದು.

ಈ ವೃಕ್ಷವನ್ನು ಸಂಸಾರವನ್ನಾಗಿ ಅಥವಾ ಶರೀರವನ್ನಾಗಿ ಹೇಗೆ ರೂಪಿಸಿದರೂ ತಾತ್ಪರ್ಯಾರ್ಥವು ಒಂದೇ. ಏಕೆಂದರೆ : ಪಿಂಡಾಂಡವಾದ ಶರೀರವು ಬ್ರಹ್ಮಾಂಡವಾದ ಸಂಸಾರದ ಸಂಕ್ಷಿಪ್ತರೂಪವೇ ಆಗಿದೆ. ಒಂದು ವ್ಯಷ್ಟಿಗೆ ಸಂಬಂಧಿಸಿದುದು, ಮತ್ತೊಂದು ಸಮಷ್ಟಿಗೆ ಸಂಬಂಧಿಸಿದುದು. ಆದರೆ ಶರೀರರೂಪವಾದ ವೃಕ್ಷಕ್ಕೆ ಸಮನ್ವಯಮಾಡುವುದು ಅತಿಶಯವಾದ ಔಚಿತ್ಯವನ್ನು ಹೊಂದಿದೆಯೆನ್ನಬಹುದು.

ನಾರದಪುರಾಣದಲ್ಲಿ ಮತ್ತು ಮಹಾಭಾರತದ ಅಶ್ವಮೇಧಪರ್ವದಲ್ಲಿ ಹೇಳಿರುವುದೂ ಸಹ ಈ ಅರ್ಥವನ್ನೇ ಪುಷ್ಟೀಕರಿಸುತ್ತದೆ :

**ಅವ್ಯಕ್ತಮೂಲಪ್ರಭವಸ್ತಸ್ಯೈವಾನುಗ್ರಹೋಚ್ಛ್ರಿತಃ ।**
**ಬುದ್ಧಿಸ್ಕನ್ಧಮಯಶ್ಚೈವ ಇನ್ದ್ರಿಯಾಙ್ಕುರಕೋಟರಃ ॥**

**ಮಹಾಭೂತವಿಶಾಖಶ್ಚ ವಿಷಯೈಃ ಪತ್ರವಾಂಸ್ತಥಾ ।**
**ಧರ್ಮಾಧರ್ಮಸುಪುಷ್ಪಶ್ಚ ಸುಖದುಃಖಫಲೋದಯಃ ॥**

**ಆಜೀವ್ಯಃ ಸರ್ವಭೂತಾನಾಂ ಬ್ರಹ್ಮವೃಕ್ಷಃ ಸನಾತನಃ ।**
**ಏತದ್ಬ್ರಹ್ಮವನಂ ಚೈವ ಬ್ರಹ್ಮಾ ಚರತಿ ನಿತ್ಯಶಃ ॥**

**ಏತಚ್ಛಿತ್ತ್ವಾ ಚ ಭಿತ್ತ್ವಾ ಚ ಜ್ಞಾನೇನ ಪರಮಾಸಿನಾ ।**
**ತತಶ್ಚಾತ್ಮರತಿಂ ಪ್ರಾಪ್ಯ ತಸ್ಮಾನ್ನಾವರ್ತತೇ ಪುನಃ ॥**

ನಾರದ ಪುರಾಣ ೧೬-೫

ಸನಾತನವಾದ ಬ್ರಹ್ಮವೃಕ್ಷವು ಅವ್ಯಕ್ತವೆಂಬ ಬೇರಿನಿಂದ ಹುಟ್ಟಿರುವುದು. ಅದೇ ಅವ್ಯಕ್ತದ ಅನುಗ್ರಹದಿಂದ ಬೆಳೆದಿರುವುದು. ಅದರ ಕಾಂಡವು ಬುದ್ಧಿಯು. ಇಂದ್ರಿಯಗಳೆಂಬ ಗುಣಗಳೇ ಅದರ ಪೊಟರೆಗಳು. ಮಹಾಭೂತಗಳೇ ರೆಂಬೆಗಳು. ವಿಷಯಗಳೇ ಎಲೆಗಳು. ಧರ್ಮಾಧರ್ಮಗಳು

ಅದರ ಉತ್ತಮವಾದ ಹೂವುಗಳು. ಸುಖ-ದುಃಖಗಳೇ ಅದರಲ್ಲಿ ಬಿಡುವ ಹಣ್ಣುಗಳು. ಇದು ಸಮಸ್ತಪ್ರಾಣಿಗಳಿಗೂ ಜೀವನಕ್ಕೆ ಆಸರೆಯಾಗಿರುವುದು. ಈ ಬ್ರಹ್ಮವನದಲ್ಲಿ ಬ್ರಹ್ಮವು ಯಾವಾಗಲೂ ಸಂಚರಿಸುತ್ತಿರುವುದು. ಇದನ್ನು (ಸಂಸಾರವೃಕ್ಷವನ್ನು ) ಜ್ಞಾನವೆಂಬ ಬಲವಾದ ಖಡ್ಗದಿಂದ ಕಡಿದು ಸೀಳಿ ಆತ್ಮರತಿಯನ್ನು ಹೊಂದಿದರೆ ಮತ್ತೆ ಅಲ್ಲಿಂದ (ಬ್ರಹ್ಮದಿಂದ) ಹಿಂದಿರುಗುವುದಿಲ್ಲ.

**ಅವ್ಯಕ್ತಯೋನಿಪ್ರಭವೋ ಬುದ್ಧಿಸ್ಕನ್ಧಮಯೋ ಮಹಾನ್ ।**
**ಮಹಾಹಙ್ಕಾರವಿಟಪ ಇನ್ದ್ರಿಯಾಙ್ಕುರಕೋಟರಃ ॥**

**ಮಹಾಭೂತವಿಶಾಲಶ್ಚ ವಿಶೇಷಯತಿ ಶಾಖಿನಃ ।**
**ಸದಾಪತ್ರಃ ಸದಾಪುಷ್ಪಃ ಶುಭಾಶುಭಫಲೋದಯಃ ॥**

**ಆಜೀವ್ಯಃ ಸರ್ವಭೂತಾನಾಂ ಬ್ರಹ್ಮವೃಕ್ಷಃ ಸನಾತನಃ ।**
**ಏನಂ ಛಿತ್ತ್ವಾ ಚ ಭಿತ್ತ್ವಾ ಚ ತತ್ತ್ವಜ್ಞಾನಾಸಿನಾ ಬುಧಃ ॥**

**ಹಿತ್ವಾ ಸಂಗಮಯಾನ್ಪಾಶಾನ್ಮೃತ್ಯುಜನ್ಮಜರೋದಯಾನ್ ।**
**ನಿರ್ಮಮೋ ನಿರಹಙ್ಕಾರೋ ಮುಚ್ಯತೇ ನಾತ್ರ ಸಂಶಯಃ ॥**

ಮಹಾಭಾರತ ಅಶ್ವ. ಅಧ್ಯಾಯ ೪೭ ಶ್ಲೋ.೧೨-೧೩-೧೪-೧೫

ಈ ದೇಹವೆಂಬ ವೃಕ್ಷಕ್ಕೆ ಅವ್ಯಕ್ತ ಎಂದರೆ ಪ್ರಕೃತಿಯೇ ಬೀಜ. ಬುದ್ಧಿ ಎಂಬುದೇ ಕಾಂಡ. ಅಹಂಕಾರವೇ ವೃಕ್ಷ. ಮನಸ್ಸು ಮತ್ತು ಇಂದ್ರಿಯಗಳೇ ಪೊಟರೆಗಳು. ಸೂಕ್ಷ್ಮಮಹಾಭೂತಗಳು (ತನ್ಮಾತ್ರೆಗಳು) ದೊಡ್ಡಶಾಖೆಗಳು. ವಿಶೇಷ ಎಂದರೆ ಸ್ಥೂಲಮಹಾಭೂತಗಳು ಅಡ್ಡಶಾಖೆಗಳು ಅಥವಾ ಅದರ ಕವಲುಗಳು. ಈ ಪ್ರಕಾರವಾಗಿ ಪುರಾತನವಾದ ಮಹಾಬ್ರಹ್ಮವೃಕ್ಷವು ಯಾವಾಗಲೂ ಎಲೆ, ಹೂವು ಎಂಬ ಶುಭಾಶುಭಫಲಗಳನ್ನು ಧಾರಣಮಾಡಿರುವುದೂ, ಸರ್ವಪ್ರಾಣಿಗಳಿಗೆ ಆಧಾರವಾದುದೂ ಆಗಿದೆ. ಇದನ್ನು ತತ್ತ್ವಜ್ಞಾನರೂಪವಾದ ಖಡ್ಗದಿಂದ ಕಡಿದು ತುಂಡರಿಸಿ ಜ್ಞಾನಿಯು ಜನ್ಮ-ಜರಾ-ಮೃತ್ಯುಗಳಿಗೆ ನೆಲೆಯಾದ ಸಂಗಮಯವಾದ ಪಾಶಗಳನ್ನು ಹರಿದೊಗೆದು ಮಮತ್ವಬುದ್ಧಿಯನ್ನೂ ಅಹಂಕಾರವನ್ನೂ ತ್ಯಜಿಸಬೇಕು. ಆಗ ಅವನು ನಿಃಸಂಶಯವಾಗಿ ಮುಕ್ತನಾಗುತ್ತಾನೆ.

ಹಿರಣ್ಯಗರ್ಭನ ಶರೀರವಾಗಿ ಇರುವ ಇಡೀ ಬ್ರಹ್ಮಾಂಡವು ವಿರಾಟ್ ಎನಿಸುತ್ತದೆ. ಅದನ್ನೇ ವೃಕ್ಷವನ್ನಾಗಿ ಇಲ್ಲಿ ರೂಪಿಸಿದೆ ಎನ್ನುವವರೂ ಉಂಟು.)

o o o

ಭಗವತ್ತತ್ತ್ವದ ಜ್ಞಾನದಲ್ಲಿ ಅಧಿಕಾರವುಂಟಾಗುವುದಕ್ಕೋಸ್ಕರ ವೈರಾಗ್ಯವನ್ನುಂಟುಮಾಡಲು ಇಲ್ಲಿ ಸಂಸಾರದ ಸ್ವರೂಪವನ್ನು ವರ್ಣಿಸಲಾಗಿದೆ. ವೃಕ್ಷವೆಂಬ ರೂಪವನ್ನು ಕಲ್ಪಿಸಿಕೊಂಡು ಅದರ ಮೂಲಕ ಅದನ್ನು ವರ್ಣಿಸಲಾಗಿದೆ. ಈ ಸಂಸಾರವೃಕ್ಷಕ್ಕೆ ಮೂಲವು ಊರ್ಧ್ವವಾಗಿದೆ. ಎಂದರೆ ಅವ್ಯಕ್ತಮಾಯಾಶಕ್ತಿಯಿಂದ ಕೂಡಿದ ಬ್ರಹ್ಮವಾಗಿದೆ. ಬ್ರಹ್ಮವು ಕಾಲಕ್ಕಿಂತಲೂ ಸೂಕ್ಷ್ಮವಾದುದು ; ಎಲ್ಲಕ್ಕೂ ಕಾರಣವಾದುದು ; ನಿತ್ಯವಾದುದು ಮತ್ತು ತುಂಬಾ ದೊಡ್ಡದು. ಆದುದರಿಂದ ಇದನ್ನು ಊರ್ಧ್ವ ಎಂದು ಕರೆದಿದೆ. ಸಂಸಾರಮಾಯಾಮಯವಾದ ಈ ವೃಕ್ಷದ ಶಾಖೆಗಳು ಮಹತ್ತು, ಅಹಂಕಾರ–ಮುಂತಾದುವುಗಳು. ಏಕೆಂದರೆ ಅವುಗಳು ಆ ಬ್ರಹ್ಮದಿಂದ ಕೆಳಕ್ಕೆ ಹರಡಿವೆ. ಇದು ಕ್ಷಣಿಕವಾದುದು. ನಾಳೆಯೂ ಕೂಡ ಇರತಕ್ಕುದಲ್ಲ. ನ–ಶ್ವಃ ಅಪಿ ಸ್ಥಾತಾ ಇತಿ ಅಶ್ವತ್ಥಃ ಮತ್ತು ಅವ್ಯಯವೂ ಆಗಿದೆ. ಅನಾದಿ ಕಾಲದಿಂದಲೂ ನಡೆದುಕೊಂಡು ಬರುತ್ತಿರುವುದರಿಂದ ಇದನ್ನು ಅವ್ಯಯವೆಂದು ಕರೆಯಲಾಗಿದೆ. ಇದಲ್ಲದೇ ಇದು ಆದ್ಯಂತರಹಿತವಾದ ದೇಹ ಮುಂತಾದುವುಗಳ ಪರಂಪರೆಗೆ ಆಶ್ರಯವಾಗಿರುವುದು. ಸುಪ್ರಸಿದ್ಧವಾಗಿರುವುದರಿಂದಲೂ ಇದನ್ನು ಅವ್ಯಯ ಎನ್ನಬಹುದು. ಋಕ್ಕು, ಯಜುಸ್ಸು, ಸಾಮ ಎಂಬ ಛಂದಸ್ಸುಗಳು (ವೇದಗಳು)–ಎಲೆಗಳು ವೃಕ್ಷವನ್ನು ರಕ್ಷಿಸುವಂತೆ–ಇದನ್ನು ರಕ್ಷಿಸುತ್ತಿವೆ. ಎಲೆಗಳು ವೃಕ್ಷವನ್ನು ರಕ್ಷಿಸುವಂತೆ–ವೇದಗಳು ಧರ್ಮ ಮತ್ತು ಅಧರ್ಮ, ಅವುಗಳ ಕಾರಣ ಮತ್ತು ಫಲಗಳನ್ನು ಪ್ರಕಾಶಪಡಿಸುವುದರಿಂದ ಈ ಸಂಸಾರವೃಕ್ಷದ ರಕ್ಷಣೆಯು ಅವುಗಳಿಂದ ಆಗುತ್ತದೆ ಎನ್ನಲಾಗಿದೆ. ಆದುದರಿಂದ ಅವುಗಳನ್ನು ಎಲೆಗಳೆಂದು ರೂಪಿಸಲಾಗಿದೆ. ಹೀಗೆ ವಿಸ್ತಾರವಾಗಿ ವರ್ಣಿಸಲ್ಪಟ್ಟಿರುವ ಸಂಸಾರವೃಕ್ಷವನ್ನು ಅದರ ಮೂಲದೊಡನೆ ಅರಿತವನೇ ವೇದವಿದ–ವೇದಾರ್ಥವನ್ನು ಬಲ್ಲವನು. ಮೂಲ ಸಹಿತವಾದ ಈ ಸಂಸಾರವೃಕ್ಷವನ್ನು ಬಿಟ್ಟು ತಿಳಿಯಬೇಕಾದುದು ಅಣು

ಮಾತ್ರವೂ ಬೇರೆ ಉಳಿಯುವುದಿಲ್ಲ. ಆದುದರಿಂದ ಈ ರೀತಿ ವೇದಾರ್ಥವನ್ನು ತಿಳಿದವನು ಸರ್ವಜ್ಞನೇ ಎಂದು ಹೇಳಿ ಸಂಸಾರವೃಕ್ಷದ ಜ್ಞಾನವನ್ನು ಸ್ತೋತ್ರಮಾಡಲಾಗಿದೆ.

ಸಂಸಾರವೃಕ್ಷದ ಬಗೆಗೆ ಮತ್ತೊಂದು ಅವಯವಕಲ್ಪನೆಯನ್ನು ಇಲ್ಲಿ ಮಾಡಲಾಗಿದೆ. ಈ ವೃಕ್ಷದ ಅನೇಕಶಾಖೆಗಳು ತಮ್ಮ ತಮ್ಮ ಕರ್ಮ ಮತ್ತು ಜ್ಞಾನಗಳಿಗೆ ಅನುಗುಣವಾಗಿ ಅವುಗಳ ಫಲಸ್ವರೂಪವಾಗಿರುವ ಬಗೆ-ಬಗೆಯ ಯೋನಿಗಳು. ಇವು ಕೆಳಕ್ಕೂ ಹರಡಿಕೊಂಡಿವೆ ; ಮೇಲಕ್ಕೂ ಹರಡಿಕೊಂಡಿವೆ. ಕೆಳಕ್ಕೆ ಮನುಷ್ಯರಿಂದ ಹಿಡಿದು ಸ್ಥಾವರಪ್ರಾಣಿಗಳವರೆಗೂ ಮತ್ತು ಮೇಲಕ್ಕೆ ಬ್ರಹ್ಮದವರೆಗೂ ಹರಡಿಕೊಂಡಿವೆ. ತಮ್ಮ ಉಪಾದಾನಕಾರಣವಾದ ಸತ್ತ್ವ, ರಜಸ್ಸು ಮತ್ತು ತಮಸ್ಸು–ಎಂಬ ಗುಣಗಳಿಂದ ಬೆಳವಣಿಗೆ ಹೊಂದಿ ವಿಷಯಗಳೆಂಬ ಅಂಕುರಗಳನ್ನು ಹೊಂದಿರುವ ಕೊಂಬೆಗಳಿವು. ಶಬ್ದಾದಿ ವಿಷಯಗಳು ಅಂಕುರಗಳಂತೆ ದೇಹವೇ ಮುಂತಾದ ಕರ್ಮಗಳ ಫಲಗಳನ್ನು ಕೊಡುವ ಶಾಖೆಗಳಿಂದ ಅಂಕುರಿಸುವುದರಿಂದ ವಿಷಯಗಳನ್ನು ಅವುಗಳ ಅಂಕುರಗಳೆಂದು ಕರೆಯಲಾಗಿದೆ.

ಈ ಸಂಸಾರವೃಕ್ಷಕ್ಕೆ ಪರಮಮೂಲವಾದ ಉಪಾದಾನಕಾರಣವನ್ನು (ಅವ್ಯಕ್ತಮಾಯಾಶಕ್ತಿಯುಳ್ಳ ಬ್ರಹ್ಮ) ಹಿಂದೆ ಹೇಳಿಯಾಯಿತು. ಈಗ ಕರ್ಮಫಲದಿಂದುಂಟಾದ ರಾಗ-ದ್ವೇಷಾದಿ ವಾಸನೆಗಳನ್ನು ಅದರ ಮೂಲಗಳೆಂದು ಇಲ್ಲಿ ನಿರೂಪಿಸಲಾಗಿದೆ. ಮೂಲದಂತೆ (ಧರ್ಮಾಧರ್ಮವಿಷಯಕವಾದ) ಪ್ರವೃತ್ತಿಗೆ ಕಾರಣವಾಗಿ, ಮಧ್ಯೇ, ಹಿಂದೆ, ಮುಂದೆ ಇರತಕ್ಕುವುಗಳು ಇವು. ಮನುಷ್ಯಲೋಕದಲ್ಲಿ ಕರ್ಮಗಳನ್ನು ಅನುಸರಿಸಿ ವಾಸನಾರೂಪವಾಗಿರುವ ಈ ಮೂಲಗಳು, ದೇವತೆಗಳು ಮುಂತಾದವರಿಗಿಂತಲೂ ಕೆಳಗಡೆಗೂ ಕೂಡ ಅವಿಚ್ಛಿನ್ನವಾಗಿ ಹರಡಿಕೊಂಡಿವೆ. ಕರ್ಮಾನುಬಂಧಿ ಎಂದರೆ ಪುಣ್ಯ-ಪಾಪರೂಪವಾದ ಕರ್ಮಗಳನ್ನು ಹಿಂದೆ-ಮುಂದೆ ಹೊಂದಿರತಕ್ಕುವು. ಮನುಷ್ಯರಿಗೇ ವಿಶೇಷವಾಗಿ ಕರ್ಮದಲ್ಲಿ ಅಧಿಕಾರವು ಪ್ರಸಿದ್ಧವಾಗಿರುವುದರಿಂದ ಆ ಮೂಲಗಳು ಮನುಷ್ಯಲೋಕದಲ್ಲಿ ಕರ್ಮಾನುಬಂಧಿಗಳಾಗಿವೆ ಎಂದು ಹೇಳಲಾಗಿದೆ. (ಶಂ.ಭಾ.)

ಅಕ್ಷರವೆಂಬ ವಿಭೂತಿಯನ್ನು ಇಲ್ಲಿ ಪ್ರತಿಪಾದಿಸಬೇಕಾಗಿದೆ. ಅಸಂಗ ರೂಪವಾದ ಶಸ್ತ್ರದಿಂದ ಅದರ ಬಂಧನಗಳನ್ನು ಕತ್ತರಿಸಿ ಹಾಕಿದರೆ ಅದರ ಅರಿವು ಉಂಟಾಗುತ್ತದೆ. ಹಾಗೆ ಕತ್ತರಿಸಿ ಹಾಕಲ್ಪಡಬೇಕಾಗಿರುವ ಬಂಧನದ ಆಕಾರವಾಗಿ ವಿಸ್ತಾರಗೊಂಡಿರುವ ಅಚಿತ್ತಿನ ಪರಿಣಾಮವಿಶೇಷವನ್ನು ಅಶ್ವತ್ಥ ವೃಕ್ಷದ ಆಕಾರದಲ್ಲಿ ಕಲ್ಪಿಸಿಕೊಂಡು ಇಲ್ಲಿ ಭಗವಂತನು ವರ್ಣಿಸುತ್ತಾನೆ.

ಸಂಸಾರವೆಂಬುದು ಒಂದು ಅಶ್ವತ್ಥವೃಕ್ಷ. ಇದು ಊರ್ಧ್ವಮುಖವಾದ ಮೂಲವುಳ್ಳದ್ದು, ಕೆಳಮುಖವಾದ ಕೊಂಬೆಗಳುಳ್ಳದ್ದು ಮತ್ತು ಅಳಿವಿಲ್ಲದುದು ಎಂದು ವೇದಗಳು ಹೇಳುತ್ತವೆ.

**ಊರ್ಧ್ವಮೂಲೋಽವಾಕ್ಶಾಖ ಏಷೋಽಶ್ವತ್ಥಃ ಸನಾತನಃ**
ಕಠ ೬-೧

**ಊರ್ಧ್ವಮೂಲಮವಾಕ್ಶಾಖಂ ವೃಕ್ಷಂ ಯೋ ವೇದ ಸಂಪ್ರತಿ**
ತೈ. ಆರಣ್ಯಕ ೧-೧೧-೫

ಈ ವೃಕ್ಷದ ಆದಿಯು ಸಪ್ತಲೋಕಗಳಿಗೂ ಮೇಲಿರುವ ಚತುರ್ಮುಖ ನಾದುದರಿಂದ ಇದನ್ನು ಮೇಲು ಬೇರುಳ್ಳದ್ದು ಎನ್ನಲಾಗಿದೆ. ಭೂಮಿಯಲ್ಲಿ ವಾಸಮಾಡುವ ಎಲ್ಲ ಮನುಷ್ಯರು, ಪಶುಗಳು, ಮೃಗಗಳು, ಕ್ರಿಮಿ-ಕೀಟ ಗಳು, ಪತಂಗಗಳು ಸ್ಥಾವರಗಳಲ್ಲಿ ಕೊನೆಗೊಳ್ಳುವುದರಿಂದ ಇದು ಕೆಳ ಗೊಂಬೆಗಳುಳ್ಳದ್ದು ಎನ್ನಲಾಗಿದೆ. (ಅಸಂಗದಿಂದ) ಸಮ್ಯಜ್ಞಾನವು ಉಂಟಾಗುವವರೆಗೂ ಪ್ರವಾಹರೂಪದಿಂದ ಅವಿಚ್ಛಿನ್ನವಾಗಿರುವುದರಿಂದ ಇದು ಅವ್ಯಯವೂ ಆಗಿದೆ. ಈ ಅಶ್ವತ್ಥವೃಕ್ಷಕ್ಕೆ ಛಂದಸ್ಸುಗಳನ್ನೇ ಎಲೆಗಳೆಂದು ಹೇಳುವರು. ಛಂದಸ್ಸುಗಳೆಂದರೆ ಶ್ರುತಿಗಳು.

**ವಾಯವ್ಯಗ್ಂಶ್ವೇತಮಾಲಭೇತ ಭೂತಿಕಾಮಃ** – ಕೃಷ್ಣ ಯ.೨-೧-೧
**ಐನ್ದ್ರಾಗ್ನಮೇಕಾದಶಕಪಾಲಂ ನಿರ್ವಪೇತ್ಪ್ರಜಾಕಾಮಃ**– ಕೃಷ್ಣ ಯ. ೨-೨-೧

ಮುಂತಾದ ಶ್ರುತಿಗಳು ಪ್ರತಿಪಾದಿಸುವ ಕಾಮ್ಯಕರ್ಮಗಳಿಂದ ವೃದ್ಧಿ

ಹೊಂದುವುದರಿಂದ ವೇದಗಳನ್ನು ಇದರ ಎಲೆಗಳೆಂದು ಹೇಳಲಾಗಿದೆ. ವೃಕ್ಷಗಳು ವೃದ್ಧಿಹೊಂದುವುದು ಎಲೆಗಳಿಂದಲೇ ಅಲ್ಲವೇ?

ಇಂತಹ ಅಶ್ವತ್ಥವನ್ನು ಅರಿತವನೇ ವೇದಜ್ಞನು. ವೇದವು ಸಂಸಾರ ವೃಕ್ಷದ ಛೇದನೆಯ ಉಪಾಯವನ್ನು ಹೇಳುತ್ತದೆ. ಹಾಗೆ ಛೇದಿಸಲ್ಪಡ ಬೇಕಾಗಿರುವ ವೃಕ್ಷದ ಸ್ವರೂಪದ ಜ್ಞಾನವು ಛೇದನೆಯ ಉಪಾಯಜ್ಞಾನಕ್ಕೆ ಸಹಾಯಕವಾಗಿರುವುದರಿಂದ ಆ ವೃಕ್ಷಸ್ವರೂಪಜ್ಞಾನವನ್ನು ಅರಿತವನನ್ನು **ವೇದವಿತ್** ಎನ್ನಲಾಗಿದೆ. ಎರಡನೆಯ ಶ್ಲೋಕದಲ್ಲಿ ನಿತ್ಯಸೃಷ್ಟಿಯ ಪ್ರಕ್ರಿಯೆಯನ್ನು ಹೇಳಲಾಗಿದೆ. ಮನುಷ್ಯಾದಿ ಶಾಖೆಯುಳ್ಳ ಆ ವೃಕ್ಷದಲ್ಲಿ ಆಯಾ ಕರ್ಮಗಳಿಗೆ ಅನುಗುಣವಾಗಿ ಇನ್ನೂ ಅನೇಕ ಕೆಳಮುಖವಾದ ಶಾಖೆಗಳುಂಟು. ಮನುಷ್ಯ, ಪಶು–ಮುಂತಾದ ರೂಪಗಳಲ್ಲಿ ಹರಡಿಕೊಂಡಿರುವ ಶಾಖೆಗಳವು. ಅವುಗಳು ಗಂಧರ್ವ, ಯಕ್ಷ, ದೇವತೆಗಳು–ಮುಂತಾದ ರೂಪಗಳಲ್ಲಿ ಮೇಲಕ್ಕೂ ಹರಡಿಕೊಂಡಿವೆ. ಅವುಗಳು ಸತ್ತ್ವಾದಿಗುಣಗಳಿಂದ ಬೆಳೆದಿರುವುವು. ಶಬ್ದವೇ ಮುಂತಾದ ವಿಷಯಗಳೇ ಅದರ ಚಿಗುರುಗಳು. ಕೊಂಬೆಗಳಲ್ಲಿ ಚಿಗುರುಗಳು ಭೋಗ್ಯವಾಗಿ ಉದ್ಭವಿಸುವಂತೆ ಕೊಂಬೆಯ ಸ್ಥಾನದಲ್ಲಿರುವ ದೇವತೆಗಳು ಮುಂತಾದವರಿಗೆ ಭೋಗ್ಯವಾಗಿ ಹುಟ್ಟಿಕೊಳ್ಳುವುದರಿಂದ ವಿಷಯಗಳನ್ನು ಅವುಗಳ ಪಲ್ಲವಗಳು ಎನ್ನಲಾಗಿದೆ. ಬ್ರಹ್ಮಲೋಕವನ್ನು ಮೂಲವನ್ನಾಗಿ ಹೊಂದುವ, ಮಾನುಷಲೋಕದ ತುದಿಯನ್ನು ಹೊಂದಿರುವ ಈ ವೃಕ್ಷಕ್ಕೆ ಕೆಳಗಡೆ ಮನುಷ್ಯಲೋಕದಲ್ಲಿಯೂ ಕೂಡ ಮೂಲಗಳು ಅನುಸ್ಯೂತವಾಗಿ ಬೆಳೆದುಕೊಂಡಿವೆ. ಕರ್ಮಗಳೇ ಅವುಗಳ ಮೂಲಗಳು. ಅವುಗಳು ಕೆಳಗೆ ಮನುಷ್ಯಲೋಕದಲ್ಲಿ ಹುಟ್ಟಿಕೊಳ್ಳುತ್ತವೆ. ಮನುಷ್ಯಾವಸ್ಥೆಯಲ್ಲಿ ಮಾಡುವ ಕರ್ಮಗಳಿಂದಲೇ ಕೆಳಕ್ಕೆ ಮನುಷ್ಯ, ಪಶು ಮುಂತಾದುವುಗಳೂ–ಮೇಲಕ್ಕೆ ದೇವತೆಗಳೇ ಮುಂತಾದುವುಗಳೂ ಆಗುವುವು. (ರಾ. ಭಾ.)

ಈ ಅಧ್ಯಾಯದಲ್ಲಿ ಸಂಸಾರದ ಸ್ವರೂಪ ಮತ್ತು ಅದನ್ನು ದಾಟುವ ಉಪಾಯವಿಜ್ಞಾನಗಳನ್ನು ತೋರಿಸಲಾಗಿದೆ.

ಈ ಸಂಸಾರವೃಕ್ಷಕ್ಕೆ ಊರ್ಧ್ವವೇ ಮೂಲ. ಊರ್ಧ್ವ ಎಂದರೆ

ಸರ್ವೋತ್ತಮನಾಗಿರುವ ವಿಷ್ಣು-ಸರ್ವೋನ್ನತ. **ಊರ್ಧ್ವಪವಿತ್ರೋ ವಾಜಿನೀವ ಸ್ವಮೃತಮಸ್ಮಿ**–ಎಂಬ ಶ್ರುತಿಯು ವಿಷ್ಣುವನ್ನೇ ಊರ್ಧ್ವ ಎನ್ನುತ್ತದೆ. ಇದರ ಕೊಂಬೆಗಳು ಎಂದರೆ ಭೂತಗಳು ಅವನಿಗಿಂತಲೂ ನಿಕೃಷ್ಟವಾಗಿರುವುದರಿಂದ ಅವುಗಳು ಈ ಸಂಸಾರವೃಕ್ಷದ ಕೆಳಗೊಂಬೆಗಳು. ನಾಳೆಯೂ ಕೂಡ ಏಕಪ್ರಕಾರದಿಂದ ಇರುವುದಿಲ್ಲವಾದುದರಿಂದ ಇದು ಅಶ್ವತ್ಥ. **ಶ್ವೋಽಪಿ ಏಕಪ್ರಕಾರೇಣ ನ ತಿಷ್ಠತಿ ಇತಿ ಅಶ್ವತ್ಥಃ ।** ಹೀಗೆ ವಿಕಾರಿಯಾಗಿದ್ದರೂ ಇದರ ಪ್ರವಾಹಕ್ಕೆ ನಾಶವಿಲ್ಲವಾದುದರಿಂದ ಇದು ಅವ್ಯಯ. ಜಗತ್ತಿನ ಪ್ರವಾಹವು ಪ್ರಲಯದಲ್ಲಿ ವ್ಯಯಹೊಂದುವುದಿಲ್ಲವೇ? ಎಂದರೆ ಹಿಂದಿನ ಬ್ರಹ್ಮನ ಕಾಲದಲ್ಲಿ ಹೇಗಿತ್ತೋ ಹಾಗೆಯೇ ಕಡೆಯಲ್ಲೂ ಇರುವುದರಿಂದ ಇದು ಅವ್ಯಯ.

ಛಂದಸ್ಸುಗಳು ಈ ವೃಕ್ಷದ ಎಲೆಗಳು. ಫಲವನ್ನು ಉಂಟುಮಾಡುವಿಕೆ ಎಂಬ ಸಾದೃಶ್ಯವಿರುವುದರಿಂದ ಇವನ್ನು (ವೇದಗಳನ್ನು) ಎಲೆಗಳೆಂದು ರೂಪಿಸಲಾಗಿದೆ. ಎಲೆಗಳು ಫಲಗಳನ್ನು ಕೊಡುವಂತೆ ವೇದಗಳು ಮೋಕ್ಷಾದಿ ಫಲಗಳನ್ನು ಕೊಡುತ್ತವೆ. ಎಲೆಗಳು ಹುಟ್ಟದಿದ್ದರೆ ಎಂದಿಗೂ ಫಲವು ಉತ್ಪತ್ತಿಯಾಗುವುದೇ ಇಲ್ಲ. ಅಲ್ಲವೇ?

ಇದರ ಕೊಂಬೆಗಳು ಮೇಲಕ್ಕೂ ಮತ್ತು ಕೆಳಕ್ಕೂ ಹರಡಿಕೊಂಡಿವೆ. ಕೊಂಬೆಗಳಾದ ಭೂತಗಳು ಕೆಳಗಡೆಗೆ ಎಂದರೆ ನಮಗಿಂತಲೂ ನೀಚವಾಗಿರುವ ಶರೀರ ಮುಂತಾದ ಕಾರ್ಯಗಳಲ್ಲಿಯೂ ಮತ್ತು ಮೇಲುಗಡೆ ಎಂದರೆ ಉತ್ತಮವಾಗಿರುವ, ಕಾರಣರೂಪವಾಗಿರುವ ಅವ್ಯಕ್ತದಲ್ಲೂ ಹರಡಿಕೊಂಡಿವೆ. ಅಲ್ಲಿಯೂ ಸೂಕ್ಷ್ಮರೂಪದಿಂದ ಇವೆ. ಹೊಸಮೂಲಗಳಾಗಿರುವ ಸತ್ವವೇ ಮುಂತಾದ ಗುಣಗಳಿಂದ ಇವು ವೃದ್ಧಿಹೊಂದುತ್ತವೆ. ವಿಷಯಗಳು ಇವುಗಳ ಅನುಕೂಲಗಳು. ಏಕೆಂದರೆ ತೋರಿಕೆಯ ಸಮಯದಲ್ಲಿ ಮಾತ್ರ ಇವು ಸುಖವನ್ನುಂಟುಮಾಡುತ್ತವೆ ಮತ್ತು ವಿಮರ್ದನೆಯನ್ನು ಪಡೆದುಕೊಳ್ಳುವುದಿಲ್ಲ.

ಇಲ್ಲಿ ಮೂಲಗಳೂ ಕೂಡ ಕರ್ಮಾನುಗುಣವಾಗಿ ಮನುಷ್ಯಲೋಕದಲ್ಲಿ ಹರಡಿಕೊಂಡಿವೆ. ಮೂಲಗಳು ಎಂದರೆ ಭಗವದ್ರೂಪವೇ ಮುಂತಾದುವು

ಗಳು. ಭಗವಂತನೂ ಕೂಡ ಕರ್ಮಾನುಗುಣವಾಗಿಯೇ ಫಲಗಳನ್ನು ಕೊಡುವುದರಿಂದ ಅವನ ರೂಪವೇ ಮುಂತಾದುವುಗಳು ಕರ್ಮಾನುಬಂಧಿಗಳೇ ಆಗಿವೆ. (ಮ. ಭಾ.)

ಓಂ ನ ರೂಪಮಸ್ಯೇಹ ತಥೋಪಲಭ್ಯತೇ
ನಾನ್ತೋ ನ ಚಾದಿರ್ನ ಚ ಸಮ್ಪ್ರತಿಷ್ಠಾ ।
ಅಶ್ವತ್ಥಮೇನಂ ಸುವಿರೂಢಮೂಲ-
ಮಸಙ್ಗಶಸ್ತ್ರೇಣ ದೃಢೇನ ಛಿತ್ವಾ ॥೩॥
ಓಂ ತತಃ ಪದಂ ತತ್ಪರಿಮಾರ್ಗಿತವ್ಯಂ
ಯಸ್ಮಿನ್ಗತಾ ನ ನಿವರ್ತನ್ತಿ ಭೂಯಃ ।
ತಮೇವ ಚಾದ್ಯಂ ಪುರುಷಂ ಪ್ರಪದ್ಯೇ
ಯತಃ ಪ್ರವೃತ್ತಿಃ ಪ್ರಸೃತಾ ಪುರಾಣೀ ॥೪॥

ಇಲ್ಲಿ ಇದಕ್ಕೆ ಹಾಗೆ ರೂಪವು ಕಾಣಬರುವುದಿಲ್ಲ. ಅಂತವಾಗಲೀ, ಆದಿಯಾಗಲೀ, ಇಲ್ಲಿಗೇ ನಿಲ್ಲುವುದೆಂಬುದಾಗಲೀ ಇಲ್ಲ. ಚೆನ್ನಾಗಿ ಬೇರುಬಿಟ್ಟುಕೊಂಡಿರುವ ಈ ಅಶ್ವತ್ಥವನ್ನು ದೃಢವಾದ ಅಸಂಗವೆಂಬ ಶಸ್ತ್ರದಿಂದ ಕತ್ತರಿಸಿ ಹಾಕಿ, ಅನಂತರ ಎಲ್ಲಿಗೆ ಹೋದವನು ಮತ್ತೆ ಹಿಂದಿರುಗುವುದಿಲ್ಲವೋ ಆ ಪದವನ್ನು ಹುಡುಕಬೇಕು. ಪುರಾಣವಾದ ಈ ಪ್ರವೃತ್ತಿಯು ಯಾವಾತನಿಂದ ಹೊರಟುಬಂದಿರುವುದೋ ಅದೇ ಆದ್ಯಪುರುಷನನ್ನು ಶರಣುಹೊಕ್ಕಿದ್ದೇನೆ (ಎಂದು ಅನುಸಂಧಾನಮಾಡಿಕೊಂಡು ಅವನನ್ನು ಹುಡುಕಬೇಕು.)

* * *

(ಸಂಸಾರವೃಕ್ಷದ ರೂಪವನ್ನು ಹೇಳಲು ಸಾಧ್ಯವೇ ಹೊರತು ಅದರ ರೂಪವು ಹಾಗೆಯೇ ನಮಗೆ ನೋಡಲು ಸಿಕ್ಕುವುದಿಲ್ಲ. ಅದನ್ನು ದರ್ಶನ ಮಾಡುವ ಸಾಧ್ಯತೆಯಿಲ್ಲ. ಅದರ–ಸಂಸಾರವೃಕ್ಷದ ಫಲವನ್ನು ನಾವೆಲ್ಲರೂ ಸವಿಯುತ್ತಲೇ ಇದ್ದೇವೆ. ಈ ಸಂಸಾರಕ್ಕೆ ಆದಿ ಎಂಬುದಿಲ್ಲ. ಅಂತವೂ ಇಲ್ಲ. ಎಂದಮೇಲೆ ಮಧ್ಯವನ್ನು ಗುರುತಿಸಲು ಸಾಧ್ಯವಾಗುವುದಿಲ್ಲ. ಇದು ಎಂದಿಗೆ ನಿಲ್ಲುತ್ತದೆ ಎಂಬುದನ್ನೂ ಹೇಳುವುದಕ್ಕಾಗುವುದಿಲ್ಲ. ಹಿಂದೆ ನಮ್ಮ ತಂದೆ-ತಾತ-ಮುತ್ತಾತಂದಿರು ಆಗಿಹೋದರು. ಮುಂದೆ ಮಕ್ಕಳು-ಮರಿಮಕ್ಕಳು ಆಗುವರು. ಮಕ್ಕಳಾಗದಿದ್ದರೆ ಸಂಸಾರವು ಹೋಗುವುದಿಲ್ಲ. ನಾವು ಮಾಡಿದ

ಕರ್ಮಾನುಸಾರ ಜನ್ಮವಿದ್ದೇ ಇದೆ. ಇದನ್ನು ಕಡೆಗಾಣಿಸಬೇಕಾದರೆ ಏನು ಮಾಡಬೇಕೆಂಬುದನ್ನು ಶ್ರೀಕೃಷ್ಣನು ಹೇಳುತ್ತಾನೆ.

ಸಂಸಾರವೆಂಬ ಅಥವಾ ಶರೀರವೆಂಬ ಈ ಅಶ್ವತ್ಥವೃಕ್ಷದ ಮೂಲವು ಅತ್ಯಂತದೃಢವಾಗಿದೆ. ತುಂಬಾ ಆಳವಾಗಿ, ವ್ಯಾಪಕವಾಗಿ ಮತ್ತು ದೃಢವಾಗಿ ಬೇರುಬಿಟ್ಟುಕೊಂಡಿದೆ. ಆದುದರಿಂದ ಇದನ್ನು ಕತ್ತರಿಸಿ ಹಾಕುವುದು ತುಂಬ ಕಷ್ಟ. ಆದರೂ ಅಸಂಗವೆಂಬ ದೃಢವಾದ ಆಯುಧದಿಂದ ಇದನ್ನು ಕತ್ತರಿಸಿ ಹಾಕಬೇಕು. ಆದುದರಿಂದಲೇ **ದೃಢೇನ ಅಸಙ್ಗಶಸ್ತ್ರೇಣ ಛಿತ್ವಾ**–ಎಂದು ಶ್ರೀಕೃಷ್ಣನು ಹೇಳಿದ್ದಾನೆ. ಇದನ್ನು ಕತ್ತರಿಸಬೇಕೇ ಹೊರತು ಇದನ್ನು ಕಿತ್ತುಹಾಕಲಾಗುವುದಿಲ್ಲ. ನಮಗೆ ಸಂಬಂಧಿಸಿದಂತೆ ಅದರ ಶಾಖೆಯನ್ನು ಕತ್ತರಿಸಬಹುದಾಗಿದೆ. ಜೀವಕೋಟಿಯೇ ಇದರ ಶಾಖೆಗಳು. ಕತ್ತರಿಸುವ ಆಯುಧವು ಯಾವುದು? ದೃಢವಾದ ಅಸಂಗವೆಂಬ ಶಸ್ತ್ರ. ಈ ಸಂಸಾರ ದೊಡನೆ (ಇಂದ್ರಿಯಗಳ ಕಾರ್ಯದೊಡನೆ) ಸಂಬಂಧವಿಟ್ಟುಕೊಳ್ಳದೇ ಇರುವುದೇ ಅಸಂಗ. ಎಂದರೆ ಇಂದ್ರಿಯಗಳೆಂಬ ಶಾಖೆಯನ್ನು ವರ್ಧಿಸುವ ಗುಣಗಳಿಂದ ದೂರವಿರುವುದು. ಗುಣಗಳೊಡನೆ ಸಂಬಂಧವನ್ನೇ ತೊರೆದು ಬಿಟ್ಟರೆ ಇಂದ್ರಿಯಗಳು ನಿರ್ವೀರ್ಯವಾಗುವುವು. ಈ ರೀತಿಯಾಗಿ ಅಸಂಗ ವೆಂಬ ದೃಢವಾದ ಶಸ್ತ್ರದಿಂದ ಸಂಸಾರವೆಂಬ ಅಶ್ವತ್ಥದ ಶಾಖೆಗಳನ್ನು ಕಡಿದು ಅನಂತರ ಪರಮಪದವನ್ನು ಹುಡುಕಬೇಕು. ಎಂತಹ ಪರಮಪದವದು?– **ಯಸ್ಮಿನ್ಗತಾ ನ ನಿವರ್ತನ್ತಿ ಭೂಯಃ**–ಯಾವ ವಿಷ್ಣುವಿನ ಪರಮಪದಕ್ಕೆ ಹೋದವರು ಪುನಃ ಹಿಂದಿರುಗುವುದಿಲ್ಲವೋ ಅಂತಹ ಪರಮಪದವನ್ನು ಹುಡುಕಬೇಕು.

ಹೇಗೆ ಹುಡುಕಬೇಕು? ಅನನ್ಯಭಕ್ತಿಮಾರ್ಗದ ಮೂಲಕವಾಗಿ, ಅವ್ಯಭಿಚಾರಿಣಿಯಾದ ಭಕ್ತಿಯ ಮೂಲಕವಾಗಿ ಹುಡುಕಬೇಕು. ಅದಕ್ಕೆ ಮೂಲಮಂತ್ರವು ಯಾವುದು?

**ತಮೇವ ಚಾದ್ಯಂ ಪುರುಷಂ ಪ್ರಪದ್ಯೇ ।**
**ಯತಃ ಪ್ರವೃತ್ತಿಃ ಪ್ರಸೃತಾ ಪುರಾಣೀ ॥**

"ಯಾವ ಪುರುಷನಿಂದ ಪುರಾಣವಾದ, ಪುರಾತನವಾದ ಸಂಸಾರ ವೆಂಬ ಮಾಯಾವೃಕ್ಷದ ಪ್ರವೃತ್ತಿಯು ಅನುಸಂಧಾನದೊಡನೆ ಹೊರಬಂದಿರು

ವುದೋ ಮತ್ತು ಯಾವನು ಆದಿಪುರುಷನೋ–ಅವನನ್ನೇ ನಾನು ಶರಣು ಹೊಂದುತ್ತೇನೆ”–ಎಂದು ಅವನನ್ನು ಹುಡುಕಬೇಕು. ಪ್ರಕೃತಿಯಿಂದ ವಿಮುಕ್ತ ನಾಗಬೇಕಾದರೆ ಪರಮಾತ್ಮನನ್ನೇ ಶರಣುಹೊಂದಬೇಕು. ಬೇಟೆಗಾರನ ಬಳಿ ಯಲ್ಲಿ ಬೇಟೆನಾಯಿಯೂ ಇರುತ್ತದೆ. ಹೊಸಬರನ್ನು ಕಂಡಿತೆಂದರೆ ಅದು ಬೊಗಳಲು ಪ್ರಾರಂಭಿಸುತ್ತದೆ. ಆದರೆ ಬೇಟೆಗಾರನಿಗೆ ತಿಳಿದವರು, ಆಪ್ತರು ಬಂದರೆಂದರೆ ಅಥವಾ ಬೇಟೆಗಾರನು ಸೂಚನೆಯನ್ನಿತ್ತರೆ ಅದು ಬೊಗಳು ವುದಿಲ್ಲ. ಅದೇ ರೀತಿಯಲ್ಲಿ ಪರಮಾತ್ಮನ ಅನುಗ್ರಹವಿದ್ದರೆ ಮಾಯೆಯ ಆಟವೇನೂ ನಡೆಯುವುದಿಲ್ಲ. ಮಾಯೆಯಿಂದ ತಪ್ಪಿಸಿಕೊಳ್ಳುವ ಸಲುವಾಗಿಯೇ ಭಗವಂತನನ್ನು ಅನನ್ಯಭಕ್ತಿಯಿಂದ ಬೇಡಿಕೊಳ್ಳಬೇಕು.)

o o o

ಹೀಗೆ ವರ್ಣಿಸಲ್ಪಟ್ಟಿರುವ ಸ್ವರೂಪವುಳ್ಳ ಅಶ್ವತ್ಥವೃಕ್ಷವು ನಿಜವಾಗಿಯೂ ದೊರಕುವುದಿಲ್ಲ. ಏಕೆಂದರೆ ಇದು ಸ್ವಪ್ನದ ವಸ್ತು, ಬಿಸಿಲುಗುದುರೆಯು ನೀರು ಮತ್ತು ಮಾಯೆಯಿಂದ ರಚಿತವಾದ ಗಂಧರ್ವನಗರಿಗೆ ಸಮಾನವಾಗಿರುವುದರಿಂದ ನಾವು ನೋಡು-ನೋಡುತ್ತಿರುವಂತೆಯೇ ನಷ್ಟ ವಾಗಿ ಬಿಡುವುದು. ಇದೇ ಕಾರಣದಿಂದ ಇದಕ್ಕೆ ಸಮಾಪ್ತಿಯೂ ಇಲ್ಲ ; ಪ್ರಾರಂಭವೂ ಇಲ್ಲ ; ಸ್ಥಿತಿಯೂ ಇಲ್ಲ. ಇವು ಮೂರು ಯಾರಿಗೂ ಕಾಣಿ ಸವು. ಹೀಗೆ ಚೆನ್ನಾಗಿ ಬೇರುಬಿಟ್ಟುಕೊಂಡಿರುವ ಅಶ್ವತ್ಥವನ್ನು ಅಸಂಗವೆಂಬ ಶಸ್ತ್ರದಿಂದ ಕತ್ತರಿಸಿ ಹಾಕಬೇಕು. ಅಸಂಗವೆಂದರೆ ಪುತ್ರಕಾಮನೆಯೇ ಮುಂತಾ ದುವುಗಳನ್ನು ಬಿಟ್ಟುಬಿಡುವುದು. ಹೀಗೆ ದೃಢವಾಗಿರುವ ಎಂದರೆ ಪರಮಾತ್ಮ ನಿಗೆ ಅಭಿಮುಖವಾಗಿರುವಿಕೆ ಎಂಬ ನಿಶ್ಚಯದಿಂದ ದೃಢವಾಗಿ ಮಾಡಲ್ಪಟ್ಟ ಮತ್ತೆ ಮತ್ತೆ ಮಾಡಬೇಕಾದ ವಿವೇಕಾಭ್ಯಾಸದಿಂದ ಹರಿತಮಾಡಲ್ಪಟ್ಟಿರುವ ಅನಾಸಕ್ತಿಯೆಂಬ ಶಸ್ತ್ರದಿಂದ ಆ ಸಂಸಾರವೃಕ್ಷವನ್ನು ಅದರ ಬೀಜಸಹಿತವಾಗಿ ಕಿತ್ತುಹಾಕಬೇಕು. ಅನಂತರ ಯಾವ ಸ್ಥಾನಕ್ಕೆ ಹೋದವರು ಮತ್ತೆ ಹಿಂದಿರು ಗುವುದಿಲ್ಲವೋ ಆ ಸ್ಥಾನವನ್ನು ಎಂದರೆ ಪರಮಪದವನ್ನು ಹುಡುಕಬೇಕು. ಅಲ್ಲಿಗೆ ಹೋದವರಿಗೆ ಮರುಹುಟ್ಟು ಇಲ್ಲ. ಅದಕ್ಕಾಗಿ 'ಐಂದ್ರಜಾಲಿಕನಿಂದ ಮಾಯೆಯು ಪ್ರಕಟವಾಗುವಂತೆ ಯಾವನಿಂದ ಸಂಸಾರವೆಂಬ ಮಾಯಾ ವೃಕ್ಷವು ರಚಿತವಾಯಿತೋ ಆ ಪುರುಷನನ್ನೇ ಶರಣುಹೊಂದುತ್ತೇನೆ'–ಎಂದು ಶರಣ್ಯಭಾವದಿಂದ ಕೂಡಿ ಆ ಪರಮಪದವನ್ನು ಅರಸಬೇಕು. (ಶಂ. ಭಾ.)

ಚತುರ್ಮುಖನಿಂದ ಆರಂಭಿಸಲ್ಪಟ್ಟಿರುವುದರಿಂದ ಊರ್ಧ್ವಮೂಲವು. ಅವನ ಸಂತಾನಪರಂಪರೆಯಿಂದ ಬಂದು ಮನುಷ್ಯನಲ್ಲಿ ಕೊನೆ ಗೊಂಡಿರುವುದರಿಂದ ಕೆಳಕೊಂಬೆಗಳುಳ್ಳದ್ದು ಮತ್ತು ಮನುಷ್ಯನಾಗಿರುವಾಗ ಮಾಡಿದ ಕರ್ಮಗಳೆಂಬ ಮೂಲಗಳಿಂದ ಕೆಳಕ್ಕೂ ಮೇಲಕ್ಕೂ ಕೊಂಬೆಗಳನ್ನು ಬಿಟ್ಟಿರುವುದು ಎಂದು ಇದರ ಈ ರೂಪವನ್ನು ನಾವು ಹಿಂದೆ ನಿರ್ದೇಶಮಾಡಿದ್ದೇವೆ. ಆದರೆ ಈ ರೂಪವು ಸಂಸಾರಿಗಳಿಗೆ ಈ ರೀತಿ ತಿಳಿದು ಬರುವುದಿಲ್ಲ. 'ನಾನು ಮನುಷ್ಯ', 'ಇಂತಹವನ ಮಗ,' 'ಇಂತಹವನ ತಂದೆ'–ಇತ್ಯಾದಿ ಪರಿಚಯ ಮಾತ್ರ ತಿಳಿದುಬರುತ್ತದೆ. ಹಾಗೆಯೇ ಇದರ ವಿನಾಶವೂ ಕೂಡ ಗುಣಮಯವಾದ ಭೋಗಗಳಲ್ಲಿ ಅನಾಸಕ್ತಿ ಹೊಂದಿರುವುದರಿಂದ ಉಂಟಾಗುತ್ತದೆ. ಆದುದರಿಂದ ಅದೂ ತಿಳಿವಳಿಕೆಗೆ ಬರುವುದಿಲ್ಲ. 'ಗುಣಸಂಗವೇ ಇದಕ್ಕೆ ಪ್ರಾರಂಭ' ಎಂಬುದೂ ಅರಿವಿಗೆ ಬರುವುದಿಲ್ಲ. ಇದರ ಪ್ರತಿಷ್ಠೆಯು ಎಂದರೆ ಆತ್ಮವಲ್ಲದ್ದರಲ್ಲಿ ಆತ್ಮವೆಂಬ ಅಭಿಮಾನವನ್ನಿಡುವಿಕೆ–ಎಂಬ ಜ್ಞಾನವೂ ಅರಿವಿಗೆ ಬರುವುದಿಲ್ಲ. ಹೀಗೆ ಚೆನ್ನಾಗಿ ಮತ್ತು ಬಗೆ-ಬಗೆಯಾಗಿ ಮತ್ತು ಬಲವಾಗಿ ಬೇರುಬಿಟ್ಟುಕೊಂಡಿರುವ ಈ ಅಶ್ವತ್ಥವನ್ನು ಸುಜ್ಞಾನಮೂಲವಾದ ಮತ್ತು ದೃಢವಾದ ಗುಣಮಯವಾದ ಭೋಗಗಳಲ್ಲಿ ಅನಾಸಕ್ತಿ ಎಂಬ ಶಸ್ತ್ರದಿಂದ ಕತ್ತರಿಸಿ ಆ ಅಸಂಗದಿಂದ ಪುನರಾವೃತ್ತಿರಹಿತವಾದ ಸ್ಥಾನವನ್ನು ಹುಡುಕಬೇಕು.

೪ನೆಯ ಶ್ಲೋಕದಲ್ಲಿ **ಪುರುಷಂ ಪ್ರಪದ್ಯೇದ್ಯತಃ । ಪುರುಷಂ ಪ್ರಪದ್ಯೇಯತಃ** ಎಂದು ಎರಡು ಪಾಠಭೇದಗಳಿವೆ. ಇಲ್ಲಿ ಪದವಿಭಾಗ ಈ ರೀತಿಯಾಗಿದೆ : **ಪ್ರಪದ್ಯೇತ್ ಯತಃ । ಪ್ರಪದ್ಯ ಇಯತಃ = ಪ್ರಪದ್ಯೇ ಯತಃ ।** ಆ ಅಜ್ಞಾನ ಮುಂತಾದುವುಗಳ ನಿವೃತ್ತಿಗೋಸ್ಕರವಾಗಿ ಯಾವನು ಎಲ್ಲಕ್ಕೂ ಆದಿಭೂತನಾಗಿದ್ದಾನೆಯೋ ಮತ್ತು ಯಾವನಿಂದ ಈ ಪುರಾತನ ವಾದ ಗುಣಮಯವಾದ ಭೋಗಸಂಗಪ್ರವೃತ್ತಿಯು ಹೊರಹೊಮ್ಮಿದೆಯೋ ಆ ಪರಮಪುರುಷನನ್ನೇ ಶರಣುಹೊಂದಬೇಕು. **ದೈವೀ.....ತರನ್ತಿ ತೇ** ೭-೧೪ ಎಂದು ಇದನ್ನು ಹಿಂದೆಯೇ ಹೇಳಿದ್ದಾಗಿದೆ.

**ಪ್ರಪದ್ಯೇಯತಃ ಪ್ರವೃತ್ತಿಃ** ಎಂಬ ಪಾಠಾಂತರವನ್ನು ಇಟ್ಟು

ಕೊಂಡರೆ ಎರಡನೆಯ ಪಾಠದಂತೆ ಆ ಆದಿಪರಮಪುರುಷನನ್ನೇ ಶರಣು ಹೊಂದಿ, ಅಜ್ಞಾನನಿವೃತ್ತಿಯೇ ಮುಂತಾದ ಎಲ್ಲಕ್ಕೂ ಸಾಧನವಾದ ಪುರಾತನವಾದ ಪ್ರವೃತ್ತಿಯು ಎಂದರೆ ಪುರಾತನರಾದ ಮುಮುಕ್ಷುಗಳ ಪ್ರವೃತ್ತಿಯು ಹೊರಹೊಮ್ಮಿದೆ. ಪುರಾತನರಾದ ಮುಮುಕ್ಷುಗಳು ನನ್ನನ್ನೇ ಶರಣುಹೊಂದಿ ಬಂಧವನ್ನು ಕಳೆದುಕೊಂಡರು ಎಂದರ್ಥ. (ರಾ. ಭಾ.)

ಈ ಅಶ್ವತ್ಥದ ರೂಪವು ಹಾಗೆ ಕಾಣುವುದಿಲ್ಲ ಎಂದರೆ : ಹೇಗೆ ಯಥಾವತ್ತಾಗಿದೆಯೋ ಹಾಗೆ ಕಂಡುಬರುವುದಿಲ್ಲ. ಇದಕ್ಕೆ ಅಂತವೂ ಮತ್ತು ಪ್ರತಿಷ್ಠೆಯೂ ಆಗಿರುವ ವಿಷ್ಣುವೂ ಕಂಡುಬರುವುದಿಲ್ಲ.

**ತ್ವಮಾದಿರನ್ತೋ ಜಗತೋಽಸ್ಯ ಮಧ್ಯಂ** (ಭಾಗವತ)
**ಅನಾದ್ಯನ್ತಂ ಪರಂ ಬ್ರಹ್ಮ ನ ದೇವಾ ಋಷಯೋ ವಿದುಃ**
(ಭಾರತ-ಮೋಕ್ಷಧರ್ಮ)

ಅಸಂಗಶಸ್ತ್ರೇಣ ಎಂದರೆ ಸಂಗರಾಹಿತ್ಯದಿಂದ ಕೂಡಿದ ಜ್ಞಾನದಿಂದ ಎಂದು ಅರ್ಥ. ಛೇದಿಸುವುದು ಎಂದರೆ ವಿಮರ್ಶಿಸುವುದು. ಹೀಗೆ ಅರ್ಥಮಾಡುವುದರಿಂದ ಅಂತಹ ವಿಮರ್ಶಕನಿಗೆ ಮಾತ್ರವೇ ಸಂಸಾರವು ಬಂಧಕವಾಗುವುದಿಲ್ಲ ಮತ್ತು ಮೂಲಸ್ಥಾನವಾದ ಬ್ರಹ್ಮವು ಅವನಿಗೆ ತಿಳಿದುಬರುತ್ತದೆ. (**ವಿಮರ್ಶೋ ಹ್ಯಸ್ಯ ಛೇದಃ। ಸ ತಂ ನ ಬಧ್ನಾತಿ । ಬಧ್ನಾತಿ ಚಾನ್ಯಾನ್** )

ಮತ್ತು ಅದಕ್ಕೋಸ್ಕರವಾಗಿ ಅವನನ್ನೇ ಶರಣುಹೊಂದಬೇಕು. ಅವನನ್ನು ಬಿಟ್ಟು ಶರಣ್ಯನು ಬೇರೆ ಯಾರೂ ಇಲ್ಲ.

**ನ ಚ ಭಗವತಃ ಅನ್ಯಃ ಶರಣ್ಯೋಽಸ್ತಿ** (ಮ. ಭಾ.)

**ಓಂ ನಿರ್ಮಾನಮೋಹಾ ಜಿತಸಙ್ಗದೋಷಾ**
**ಅಧ್ಯಾತ್ಮನಿತ್ಯಾ ವಿನಿವೃತ್ತಕಾಮಾಃ ।**
**ದ್ವನ್ದ್ವೈರ್ವಿಮುಕ್ತಾಃ ಸುಖದುಃಖಸಂಜ್ಞೈ-**
**ರ್ಗಚ್ಛನ್ತ್ಯಮೂಢಾಃ ಪದಮವ್ಯಯಂ ತತ್ ॥೫॥**

ಮಾನ-ಮೋಹಗಳು ಇಲ್ಲದವರೂ, ಸಂಗದೋಷವನ್ನು ಗೆದ್ದಿರುವವರೂ, ಆತ್ಮಸ್ವರೂಪದಲ್ಲಿ ಯಾವಾಗಲೂ ಮಗ್ನರಾಗಿರುವವರೂ, ಕಾಮನೆ

ಯನ್ನು ಸಂಪೂರ್ಣವಾಗಿ ಬಿಟ್ಟಿರತಕ್ಕವರೂ, ಸುಖ-ದುಃಖಗಳೆಂಬ ಹೆಸರಿನ ದ್ವಂದ್ವಗಳಿಂದ ಬಿಡುಗಡೆಹೊಂದಿರತಕ್ಕವರೂ ಆಗಿರುವ ಅಮೂಢರು ಆ ಅವ್ಯಯವಾದ ಪರಮಪದವನ್ನು ಸೇರುತ್ತಾರೆ.

* * *

(ಯಾರು ಪರಮಪದವನ್ನು ಸೇರುತ್ತಾರೆ? ಅವರ ಲಕ್ಷಣಗಳೇನು?– ಎಂಬುದನ್ನಿಲ್ಲಿ ಶ್ರೀಕೃಷ್ಣನು ಹೇಳುತ್ತಾನೆ. ಪರಮಪದವನ್ನು ಯಾರು ಸೇರುತ್ತಾರೆಂದರೆ ಅಮೂಢರಾದವರು ಸೇರುತ್ತಾರೆ. ಅಮೂಢರಾದವರು ಯಾರು? ಎಂದರೆ : ನಿರ್ಮಾನಮೋಹಾಃ =ಮಾನ-ಮೋಹಗಳಿಲ್ಲದವರು. ಮಾನ ಎಂದರೆ ಅಭಿಮಾನ, ಅಹಂಕಾರ, ಗರ್ವ, ದರ್ಪ. ತನ್ನ ಸಮಾನರಿಲ್ಲ ಎಂದು ಮೆರೆಯುವುದು. ತನ್ನ ಸತ್ತ್ವವು ಎಲ್ಲಿಂದ ಬಂತೆಂಬುದನ್ನು ಅರಿಯದೇ ಇರುವುದು ಅಹಂಕಾರ. ಬಲ್ಬಿನಲ್ಲಿ ಬೆಳಕು ಕಾಣುವುದೇನೋ ನಿಜ. ಆದರೆ ಬೆಳಕನ್ನು ಅದೇ ಉತ್ಪತ್ತಿಮಾಡಿಕೊಂಡು ಬೆಳಗುವುದಿಲ್ಲ. ಎಲ್ಲಿಯೋ ಇರುವ ವಿದ್ಯುತ್ತು ಅದರೊಳಗೆ ಹರಿದರೆ ಅಲ್ಲಿ ಬೆಳಕು ಕಾಣುತ್ತದೆ. ಅದೇ ರೀತಿಯಲ್ಲಿ ಮನುಷ್ಯರಲ್ಲಿರಬಹುದಾದ ವಿಶೇಷಶಕ್ತಿಯು ಅವರದಲ್ಲ ; ಪರಮಾತ್ಮನದು. 'ಯದ್ಯದ್ವಿಭೂತಿಮತ್ಸತ್ತ್ವಂ'–ಎಂಬುದಾಗಿ ಶ್ರೀಕೃಷ್ಣನು ಈ ಹಿಂದೆಯೇ ಸ್ಪಷ್ಟಗೊಳಿಸಿದ್ದಾನೆ. ಈ ರಹಸ್ಯವನ್ನು ತಿಳಿದು ಯಾವನೂ ಅಹಂಕಾರಪಡಬಾರದು. ಅಹಂಕಾರಕ್ಕೂ ಶರಣಾಗತಿಗೂ ಪೂರ್ವ-ಪಶ್ಚಿಮ ದಿಕ್ಕುಗಳಷ್ಟು ದೂರ. ಒಂದಿದ್ದಕಡೆ ಮತ್ತೊಂದಿರುವುದಿಲ್ಲ. ಬಿಂದಿಗೆಯನ್ನು ಬೋರಲಾಗಿ ಹಾಕಿದರೆ ನೀರು ತುಂಬುವುದಕ್ಕಾಗುವುದಿಲ್ಲ. ಅದರಲ್ಲಿ ಗಾಳಿಯು ತುಂಬಿರುತ್ತದೆ. ಗಾಳಿಯು ಹೋದನಂತರವೇ ಅದರೊಳಗೆ ನೀರು ತುಂಬುತ್ತದೆ. ಅದರಂತೆ ಮನುಷ್ಯನಲ್ಲಿ ಅಹಂಕಾರವು ತುಂಬಿರುವಾಗ ಭಗವದ್ಭಕ್ತಿರಸವು ಹೃದಯದೊಳಗೆ ತುಂಬಿಕೊಳ್ಳುವುದಿಲ್ಲ. ಅಹಂಕಾರವು ಹೊರಟುಹೋಯಿತೆಂದರೆ ಭಕ್ತಿರಸವು ತಾನಾಗಿಯೇ ತುಂಬಿಕೊಳ್ಳುವುದು.

ನಿರ್ಮೋಹರು–ಮೋಹವಿಲ್ಲದವರು. ಮೋಹ ಎಂದರೆ ಅವಿವೇಕ. ಇದು ತಮಸ್ಸಿನ ಒಂದು ಲಕ್ಷಣ. ಮೋಹ ಎಂಬುದಕ್ಕೆ ವ್ಯಾಮೋಹ ಎಂದೂ ಅರ್ಥವಾಗುತ್ತದೆ.

ಪತ್ನೀ-ಪುತ್ರ-ಗೃಹಾದಿಗಳಲ್ಲಿ ವ್ಯಾಮೋಹ. 'ಹೆಚ್ಚಿನ ಆಸಕ್ತಿ' ಇದು ಇಲ್ಲದವರು ನಿರ್ಮೋಹರು.

**ಜಿತಸಙ್ಗದೋಷಾಃ** = ಸಂಗ ಎಂದರೆ ಸೇರುವುದು. ಸಂಸಾರದಲ್ಲಿ ತಲ್ಲೀನನಾಗಿರುವುದು. ಇದೇ ಒಂದು ದೊಡ್ಡದೋಷ ; ಇದನ್ನು ಜಯಿಸಿದವನು ಎನ್ನುತ್ತಾನೆ ಶ್ರೀಕೃಷ್ಣ. ನಿಃಸಂಗರಾಗಬೇಕಾದರೆ ಸಂಗದೋಷವನ್ನು ಜಯಿಸಬೇಕು. ಸಂಸಾರದ ಸಂಗವನ್ನು ಕಡಿದುಕೊಳ್ಳಬೇಕಾದರೆ ಮಾನಸಿಕವಾಗಿ ದೊಡ್ಡ ಯುದ್ಧವನ್ನೇ ಮಾಡಬೇಕಾಗುತ್ತದೆ. ಸಂಗದೋಷವನ್ನು ಬಿಡುವುದು ಅಥವಾ ಜಯಿಸುವುದು ಅಂದರೆ ಅಷ್ಟು ಸುಲಭಸಾಧ್ಯವಲ್ಲ. ನಿರ್ಮೋಹರಾದವರು ಇದನ್ನು ಜಯಿಸಿ ಜಿತಸಂಗದೋಷರಾದಾರು. ಪರಮಪದವನ್ನು ಹೊಂದುವವರು ಜಿತಸಂಗದೋಷರೂ ಆಗಿರುತ್ತಾರೆ.

**ಅಧ್ಯಾತ್ಮನಿತ್ಯಾಃ** = ನಿತ್ಯವೂ ಆತ್ಮದ ವಿಷಯವನ್ನೇ ಕುರಿತು ಚಿಂತಿಸುವವರು ; ಆತ್ಮವನ್ನೇ ಕುರಿತು ಧ್ಯಾನಮಾಡುವವರು ; ಆತ್ಮಾನುಸಂಧಾನದಲ್ಲಿಯೇ ಇರತಕ್ಕವರು.

**ವಿನಿವೃತ್ತಕಾಮಾಃ** = ನಿವೃತ್ತಕಾಮರು. ಎಂದರೆ ಯಾವ ವಿಧವಾದ ಕಾಮನೆಗಳೂ ಇಲ್ಲದೇ ಇರುವವರು ಎಂದು ಅರ್ಥವಾಗುತ್ತದೆ. 'ವಿ' ಎಂಬ ಉಪಸರ್ಗವನ್ನು ಸೇರಿಸಿರುವುದರಿಂದ ನಿಃಶೇಷವಾಗಿ ಒಂದಿಷ್ಟೂ ಅಂಟದ ಹಾಗೆ ಕಾಮನೆಗಳಿಂದ ನಿವೃತ್ತರಾದವರು. ಪರಮಪದದಲ್ಲಿ ನಿಷ್ಠೆಯುಳ್ಳ ಇವರಿಗೆ ಉಳಿದ ಕಾಮನೆಗಳೆಲ್ಲವೂ ವಿಷಕ್ಕೆ ಸಮಾನವಾಗಿರುತ್ತವೆ. ಬೇರೆಯ ಕಾಮನೆಗಳು ಇವರ ಮನಸ್ಸಿನಲ್ಲಿರಲು ಅವಕಾಶವೇ ಇರುವುದಿಲ್ಲ.

**ಸುಖದುಃಖಸಂಜ್ಞೈಃ ದ್ವನ್ದ್ವೈರ್ವಿಮುಕ್ತಾಃ** = ಸುಖ-ದುಃಖ ಚಿಹ್ನೆಗಳಿಂದ ಕೂಡಿದ ಶೀತೋಷ್ಣ, ಲಾಭಾಲಾಭ, ಜಯಾಪಜಯ– ಇತ್ಯಾದಿ ದ್ವಂದ್ವಗಳಿಂದ ವಿಮುಕ್ತರಾದವರು ; ಬೇಕಾದುದು-ಬೇಡವಾದುದು ಎಂಬುದರಿಂದ ವಿಮುಕ್ತಿಹೊಂದಿರುವವರು. ಎಲ್ಲವನ್ನೂ ಸಮನಾಗಿ ಕಾಣುವವರು. ಇಂತಹ ಅಮೂಢರು ಎಂದರೆ ಜ್ಞಾನಿಗಳು ಅವ್ಯಯವಾದ ಕ್ಷಯರಹಿತವಾದ ಸನಾತನವಾದ ವಿಷ್ಣುವಿನ ಪರಮಪದವನ್ನು ಸೇರುತ್ತಾರೆ.)

o o o

**ಅಧ್ಯಾತ್ಮನಿತ್ಯಾಃ** = ಪರಮಾತ್ಮಸ್ವರೂಪವನ್ನು ಆಲೋಚನೆಮಾಡುವುದರಲ್ಲಿ ತತ್ಪರರಾಗಿರತಕ್ಕವರು. **ವಿನಿವೃತ್ತಕಾಮಾಃ** = ನಿಃಶೇಷವಾಗಿ ಯಾವ ಲೇಪವೂ ಇಲ್ಲದಂತೆ ಕಾಮವನ್ನು ತೊರೆದವರು. (ಶಂ. ಭಾ.)

**ನಿರ್ಮಾನಮೋಹಾಃ** = ಆತ್ಮದಲ್ಲಿ ಅನಾತ್ಮ ಎಂಬ ಅಭಿಮಾನವೆಂಬ ಮೋಹವನ್ನು ತೊರೆದವರು. **ಜಿತಸಙ್ಗದೋಷಾಃ** = ಗುಣಮಯವಾದ ಭೋಗದಲ್ಲಿ ಆಸಕ್ತಿಹೊಂದುವಿಕೆಯೆಂಬ ದೋಷವನ್ನು ತೊರೆದವರು. **ತತ್ ಅವ್ಯಯಂ ಪದಂ ಗಚ್ಛನ್ತಿ** = ಅನವಚ್ಛಿನ್ನವಾದ ಜ್ಞಾನಾಕಾರನಾಗಿ ಯಥಾವಸ್ಥಿತನಾಗಿರುವ ಆತ್ಮವನ್ನು ಹೊಂದುತ್ತಾರೆ. ನನ್ನನ್ನು ಶರಣುಹೊಂದಿದವರಿಗೆ ನನ್ನ ಅನುಗ್ರಹದಿಂದಲೇ ಸಿದ್ಧಿಪರ್ಯಂತವಾಗಿ ಎಲ್ಲ ಪ್ರವೃತ್ತಿಗಳೂ ಸುಲಭವಾಗಿ ಸಾಧ್ಯವಾಗುತ್ತವೆ. (ರಾ. ಭಾ.)

ಬ್ರಹ್ಮಜ್ಞಾನಕ್ಕೆ ಆಶ್ರಯಿಸಬೇಕಾದ ಬೇರೆಯ ಸಾಧನವನ್ನು ಇಲ್ಲಿ ಹೇಳಲಾಗಿದೆ. (ಮ. ಭಾ.)

ಬ್ರಹ್ಮಜ್ಞಾನಕ್ಕೆ ಸಾಧನ ವಿಶ್ವವಿಮರ್ಶೆ. ಅದಕ್ಕೆ ಸಾಧನವಾದುದು ಭಗವಂತನಲ್ಲಿ ಪ್ರಪತ್ತಿ. ಹೀಗೆ ಎಲ್ಲ ಸಾಧನಗಳನ್ನೂ ಹೇಳಿದ್ದರೂ ಅದಕ್ಕೆ ಇರುವ ಇತರ ಸಾಧನಗಳನ್ನು ಇಲ್ಲಿ ಹೇಳಲಾಗಿದೆ. –ಜಯತೀರ್ಥರು.

ತನ್ನ ಈ ಪರಮಪದವು ಹೇಗಿರುವುದೆಂಬುದನ್ನು ಶ್ರೀಕೃಷ್ಣನೇ ವರ್ಣಿಸುತ್ತಾನೆ.

**ಓಂ ನ ತದ್ಭಾಸಯತೇ ಸೂರ್ಯೋ ನ ಶಶಾಙ್ಕೋ ನ ಪಾವಕಃ |**
**ಯದ್ಗತ್ವಾ ನ ನಿವರ್ತನ್ತೇ ತದ್ಧಾಮ ಪರಮಂ ಮಮ ||೬||**

ಇದನ್ನು ಸೂರ್ಯನೂ ಬೆಳಗುವುದಿಲ್ಲ. ಚಂದ್ರನೂ ಬೆಳಗುವುದಿಲ್ಲ. ಅಗ್ನಿಯೂ ಬೆಳಗುವುದಿಲ್ಲ. ಯಾವ ಸ್ಥಾನವನ್ನು ಸೇರಿದರೆ ಹಿಂದಿರುಗುವುದಿಲ್ಲವೋ ಅದೇ ನನ್ನ ಶ್ರೇಷ್ಠವಾದ ಸ್ಥಾನವು.

* * *

(ನನ್ನ ಆ ಪರಮಪದವನ್ನು, ಪರಬ್ರಹ್ಮನ ಸ್ಥಾನವನ್ನು ಸೂರ್ಯನೂ ಪ್ರಕಾಶಗೊಳಿಸುವುದಿಲ್ಲ ; ಚಂದ್ರನೂ ಪ್ರಕಾಶಗೊಳಿಸುವುದಿಲ್ಲ ; ಅಗ್ನಿಯೂ

ಪ್ರಕಾಶಗೊಳಿಸುವುದಿಲ್ಲ. ಹಾಗಾದರೆ ಅಲ್ಲಿ ಪ್ರಕಾಶವೇ ಇಲ್ಲವೇ? ಎಂದರೆ : ಪರಬ್ರಹ್ಮಪದವು ಸ್ವಯಂಪ್ರಕಾಶಕವಾದುದು. ಸೂರ್ಯ, ಚಂದ್ರ ಮತ್ತು ಅಗ್ನಿಗಳಿಗೆ ಪ್ರಕಾಶವನ್ನು ಕೊಡತಕ್ಕ ಅದ್ಭುತವಾದ ಪ್ರಕಾಶವಸ್ತುವದು.

ಹಿಂದೆ ವಿಶ್ವರೂಪದರ್ಶನದ ಸಮಯದಲ್ಲಿ ಆ ಪ್ರಭೆಯನ್ನು ಕಂಡು ಸಂಜಯನು ಹೇಳಿರುವಂತೆ–'**ದಿವಿ ಸೂರ್ಯಸಹಸ್ರಸ್ಯ ಭವೇದ್ಯುಗಪದುತ್ಥಿತಾ**'–ಸಾವಿರ ಸೂರ್ಯಪ್ರಭೆಯಷ್ಟು ಪ್ರಭೆಯು ಆ ಪರಬ್ರಹ್ಮ ವಸ್ತುವಿನಲ್ಲಿದೆ. ಆದುದರಿಂದ ಅದನ್ನು ಪ್ರಕಾಶಗೊಳಿಸಲು ಸೂರ್ಯನಾಗಲೀ, ಚಂದ್ರನಾಗಲೀ, ಅಗ್ನಿಯಾಗಲೀ ಬೇಕಾಗಿಲ್ಲ. ಬ್ರಹ್ಮವಸ್ತುವಿನಿಂದಲೇ ಸೂರ್ಯ-ಚಂದ್ರಾಗ್ನಿಗಳು ಪ್ರಕಾಶವನ್ನು ಪಡೆದುಕೊಂಡಿರುತ್ತಾರೆ.

ಶ್ರೀಕೃಷ್ಣನು ಮುಂದುವರಿದು ಹೇಳುತ್ತಾನೆ : ಯಾವ ಬ್ರಹ್ಮಪದವನ್ನು ಸೇರಿದನಂತರ ಜ್ಞಾನಿಗಳು ; ಸಮುದ್ರಕ್ಕೆ ಸೇರಿದ ನದಿಗಳು ಹಿಂದಕ್ಕೆ ಬಾರದಿರುವಂತೆ ಅಥವಾ ಅದರಲ್ಲಿಯೇ ಒಂದಾಗಿಬಿಡುವಂತೆ ಬ್ರಹ್ಮದಲ್ಲಿಯೇ ಸೇರಿಹೋಗಿ ಪುನಃ ಸಂಸಾರಕ್ಕೆ ಬರುವುದಿಲ್ಲವೋ ಅಂತಹ ಶ್ರೇಷ್ಠವಾದ ವೈಷ್ಣವಪದವು ನನ್ನದಾಗಿದೆ.

ಈ ಅಭಿಪ್ರಾಯವನ್ನೇ ಅನೇಕಶ್ರುತಿಗಳೂ ಮೊಳಗುತ್ತವೆ :

**ಯತ್ರ ನ ಸೂರ್ಯಸ್ತಪತಿ ಯತ್ರ ನ ವಾಯುರ್ವಾತಿ ಯತ್ರ ನ ಚನ್ದ್ರಮಾ ಭಾತಿ ಯತ್ರ ನ ನಕ್ಷತ್ರಾಣಿ ಭಾನ್ತಿ ಯತ್ರ ನಾಗ್ನಿರ್ದಹತಿ ಯತ್ರ ನ ಮೃತ್ಯುಃ ಪ್ರವಿಶತಿ ಯತ್ರ ನ ದುಃಖಾನಿ ಪ್ರವಿಶನ್ತಿ ಸದಾನನ್ದಂ ಪರಮಾನನ್ದಂ ಶಾನ್ತಂ ಶಾಶ್ವತಂ ಸದಾಶಿವಂ ಬ್ರಹ್ಮಾದಿವನ್ದಿತಂ ಯೋಗಿಧ್ಯೇಯಂ ಪರಂ ಪದಂ ಯತ್ರ ಗತ್ವಾ ನ ನಿವರ್ತನ್ತೇ ಯೋಗಿನಃ**

(ಬೃಹಜ್ಜಾಬಾಲೋಪನಿಷತ್ತು ೮-೬)

ಎಲ್ಲಿ ಸೂರ್ಯನು ತಪಿಸುವುದಿಲ್ಲವೋ, ಎಲ್ಲಿ ಚಂದ್ರನು ಪ್ರಕಾಶಿಸುವುದಿಲ್ಲವೋ, ಎಲ್ಲಿ ನಕ್ಷತ್ರಗಳು ಮಿನುಗುವುದಿಲ್ಲವೋ, ಎಲ್ಲಿ ಅಗ್ನಿಯು ಪ್ರಜ್ವಲಿಸುವುದಿಲ್ಲವೋ, ಎಲ್ಲಿಗೆ ಮೃತ್ಯುವು ಪ್ರವೇಶಿಸುವುದಿಲ್ಲವೋ ಮತ್ತು ದುಃಖಗಳೂ ಪ್ರವೇಶಿಸುವುದಿಲ್ಲವೋ, ಎಲ್ಲಿಗೆ ಹೋಗಿ ಯೋಗಿಯು ಹಿಂದಿರುಗುವುದಿಲ್ಲವೋ–ಅದು ಸದಾನಂದಕರವಾದ, ಪರಮಾನಂದಕರವಾದ, ಶಾಂತ

ವಾದ ಸನಾತನವಾದ ಸದಾ ಕಲ್ಯಾಣಸ್ವರೂಪವಾದ, ಬ್ರಹ್ಮಾದಿದೇವತೆಗಳಿಂದ ಅಭಿವಂದಿತವಾದ, ಯೋಗಿಗಳಿಗೆ ಧ್ಯೇಯವಾದ ಪರಮಪದವಾಗಿರುತ್ತದೆ.

**ನ ತತ್ರ ಸೂರ್ಯೋ ಭಾತಿ ನ ಚನ್ದ್ರತಾರಕಂ**
**ನೇಮಾ ವಿದ್ಯುತೋ ಭಾನ್ತಿ ಕುತೋऽಯಮಗ್ನಿಃ ।**
**ತಮೇವ ಭಾನ್ತಮನುಭಾತಿ ಸರ್ವಂ**
**ತಸ್ಯ ಭಾಸಾ ಸರ್ವಮಿದಂ ವಿಭಾತಿ ॥**

ಮುಂಡಕ ೨-೧೦ ಕಠ ೨೫-೧೫ ಶ್ವೇತಾಶ್ವತರ ೬-೧೪

ಬ್ರಹ್ಮಪದದಲ್ಲಿ ಸೂರ್ಯನಾಗಲೀ, ಚಂದ್ರನಾಗಲೀ, ನಕ್ಷತ್ರಗಳಾಗಲೀ ಪ್ರಕಾಶಿಸುವುದಿಲ್ಲ. ಮಿಂಚುಗಳೂ ಪ್ರಕಾಶಿಸುವುದಿಲ್ಲ. ನಮ್ಮ ಕಣ್ಣಿಗೆ ಕಾಣುವ ಈ ಅಗ್ನಿಯು ಅಲ್ಲಿ ಹೇಗೆ ತಾನೇ ಪ್ರಕಾಶಿಸುವುದು? ಪ್ರಕಾಶಿಸುತ್ತಿರುವ ಆ ಪರಬ್ರಹ್ಮವಸ್ತುವನ್ನೇ ಅನುಸರಿಸಿ (ಆಶ್ರಯಿಸಿ) ಎಲ್ಲವೂ ಪ್ರಕಾಶಿಸುತ್ತಿರುವುದು. ಅವನ ಪ್ರಕಾಶದಿಂದಲೇ ಇವೆಲ್ಲವೂ ಪ್ರಕಾಶಿಸುತ್ತಿರುವುದು.)

o o o

ಆದಿತ್ಯನಿಗೆ ಎಲ್ಲವನ್ನೂ ಪ್ರಕಾಶಪಡಿಸುವ ಶಕ್ತಿಯಿದ್ದರೂ ಅವನೂ ಕೂಡ ಆ ತೇಜೋಮಯವಾದ ಧಾಮವನ್ನು (ಪರಮಪದವನ್ನು ) ಬೆಳಗಿಸು ವುದಿಲ್ಲ. ಹಾಗೆಯೇ ಚಂದ್ರನಾಗಲೀ, ಅಗ್ನಿಯಾಗಲೀ–ಅದನ್ನು ಬೆಳಗಿಸುವು ದಿಲ್ಲ. ಯಾವ ವೈಷ್ಣವಪದವನ್ನು ಹೊಂದಿಯಾದಬಳಿಕ ಜೀವಿಗಳು ಹಿಂದಿರುಗುವುದಿಲ್ಲವೋ ಮತ್ತು ಯಾವುದನ್ನು ಸೂರ್ಯನೇ ಮುಂತಾದವರೂ ಬೆಳಗಿಸುವುದಿಲ್ಲವೋ–ಅದೇ ವಿಷ್ಣುವಾದ ನನ್ನ ಸ್ಥಾನವು. (ಶಂ. ಭಾ.)

ಆತ್ಮಜ್ಯೋತಿಯನ್ನು ಸೂರ್ಯನಾಗಲೀ, ಚಂದ್ರನಾಗಲೀ, ಅಗ್ನಿಯಾಗಲೀ–ಬೆಳಗಿಸುವುದಿಲ್ಲ. ಏಕೆಂದರೆ : ಜ್ಞಾನವು ತಾನೇ ಎಲ್ಲಕ್ಕೂ ಪ್ರಕಾಶಕವಾಗಿರುವುದು? ಹೊರಗಿನ ಜ್ಯೋತಿಗಳಾದರೋ ವಿಷಯೇಂದ್ರಿಯ ಸಂಬಂಧಕ್ಕೆ ವಿರೋಧಿಗಳಾದ ಕತ್ತಲೆಯನ್ನು ಹೋಗಲಾಡಿಸುವುದರ ಮೂಲಕ ಉಪಕಾರಮಾಡುತ್ತವೆ. ಅದಕ್ಕೆ (ಜ್ಞಾನಕ್ಕೆ ) ಪ್ರಕಾಶವಾದುದು ಯೋಗ. ಅದಕ್ಕೆ ವಿರೋಧಿಯಾಗಿರುವುದು ಅನಾದಿಯಾದ ಕರ್ಮ. ಅದನ್ನು

ಹೋಗಲಾಡಿಸಲು ಸಾಧನವಾಗಿ ಅಸಂಗ ಮುಂತಾದುವುಗಳನ್ನು ಹೇಳಿಯಾಯಿತು. ಯಾವುದನ್ನು ಹೊಂದಿದ ಬಳಿಕ ಮತ್ತೆ ಹಿಂದಿರುಗುವುದಿಲ್ಲವೋ ಆ ಪರಮಧಾಮವು, ಪರಂಜ್ಯೋತಿಯು ನನ್ನದು. ನನ್ನ ವಿಭೂತಿಯಾಗಿ ನನ್ನ ಅಂಶವಾಗಿರುವುದು. ಆದಿತ್ಯ ಮುಂತಾದವರಿಗೂ ಪ್ರಕಾಶಕವಾಗಿರುವುದರಿಂದ ಅದು ಪರಮವಾದ ಜ್ಯೋತಿ. ಆದಿತ್ಯರೇ ಮುಂತಾದ ಜ್ಯೋತಿಗಳಾದರೋ ಜ್ಞಾನಜ್ಯೋತಿಯನ್ನು ಪ್ರಕಾಶಪಡಿಸುವುದಿಲ್ಲ. ಜ್ಞಾನವೇ ಎಲ್ಲಕ್ಕೂ ಪ್ರಕಾಶವಾದುದು. (ರಾ. ಭಾ.)

**ನ ತದ್ಭಾಸಯತೇ** = ಆರು ಮತ್ತು ಏಳನೆಯ ಶ್ಲೋಕಗಳಲ್ಲಿ ಸ್ವರೂಪವನ್ನು ಹೇಳಲಾಗಿದೆ. ಯಾವುದರ ಪ್ರಾಪ್ತಿಯು ಪುರುಷಾರ್ಥವಾಗಿದೆಯೋ ಆ ಪದವು ಯಾವ ರೀತಿಯದು?–ಎಂಬ ಪ್ರಶ್ನೆಗೆ ಇದು ಉತ್ತರವಾಗಿದೆ. ಹಿಂದಿನ ಶ್ಲೋಕದಲ್ಲಿ ಹೇಳಲ್ಪಟ್ಟ **ಪದಂ** ಎಂಬುದಕ್ಕೂ ಈಗ ಹೇಳಲ್ಪಟ್ಟಿರುವ **ಧಾಮ** ಎಂಬುದಕ್ಕೂ ಎರಡಕ್ಕೂ ಅರ್ಥವಾಗಿದೆ **ಸ್ವರೂಪ** ಎಂಬುದು.

(ಮ. ಭಾ.)

**ಓಂ ಮಮೈವಾಂಶೋ ಜೀವಲೋಕೇ ಜೀವಭೂತಃ ಸನಾತನಃ ।**
**ಮನಃಷಷ್ಠಾನೀನ್ದ್ರಿಯಾಣಿ ಪ್ರಕೃತಿಸ್ಥಾನಿ ಕರ್ಷತಿ ॥೭॥**

ಸನಾತನವಾದ ನನ್ನದೇ ಅಂಶವು ಜೀವಲೋಕದಲ್ಲಿ ಜೀವನಾಗಿದ್ದುಕೊಂಡು ಪ್ರಕೃತಿಯಲ್ಲಿರುವ ಮನಸ್ಸೆಂಬ ಆರನೆಯದರಿಂದೊಡಗೂಡಿದ ಐದು ಇಂದ್ರಿಯಗಳನ್ನು ಸೆಳೆದುಕೊಳ್ಳುತ್ತದೆ.

* * *

(ಜೀವಲೋಕದಲ್ಲಿ ಎಂದರೆ ಮತ್ತೆ ಮತ್ತೆ ಹುಟ್ಟಿ-ಸಾಯುವ ಈ ಮರ್ತ್ಯಲೋಕದಲ್ಲಿ ಸನಾತನವಾದ ಜೀವಭೂತನಾಗಿರತಕ್ಕವನು, ಸಕಲ ಪ್ರಾಣಿಗಳಲ್ಲಿಯೂ ಜೀವ ಎಂಬ ಹೆಸರಿನಿಂದ ಇರತಕ್ಕವನು–ನನ್ನ ಅಂಶವೇ ಆಗಿರುತ್ತಾನೆ. ಇವನು ಪ್ರಕೃತಿಯಲ್ಲಿರುವ (ಐದು ಸೂಕ್ಷ್ಮೇಂದ್ರಿಯಗಳು ಮತ್ತು ಮನಸ್ಸು ಸೇರಿ) ಆರು ಇಂದ್ರಿಯಗಳನ್ನೂ ತನ್ನ ಕಡೆಗೆ ಸೆಳೆದುಕೊಳ್ಳುತ್ತಾನೆ.

ಪರಮಾತ್ಮನು–'ಜೀವನು ನನ್ನದೇ ಅಂಶ' ಎನ್ನುತ್ತಾನೆ ಮತ್ತು ಜೀವನನ್ನು ಸನಾತನ ಎಂದೂ ಹೇಳುತ್ತಾನೆ. ಅವನು ಒಂದು ಲಿಂಗ ಶರೀರಕ್ಕೆ ಸೇರಿಕೊಂಡೊಡನೆಯೇ ಪ್ರಕೃತಿಯಲ್ಲಿರುವ ಮನಸ್ಸನ್ನೂ ಮತ್ತು

ಕಿವಿಯೇ ಮೊದಲಾದ ಐದು ಇಂದ್ರಿಯಗಳನ್ನೂ ಸೆಳೆದುಕೊಳ್ಳುತ್ತಾನೆ. ಪ್ರಕೃತಿಯೇ ಎಲ್ಲವನ್ನೂ ಸಿದ್ಧಗೊಳಿಸಿರುತ್ತದೆ. ಪರಮಾತ್ಮನ ಅಂಶವೇ ಆದ ಜೀವವು ತನ್ನ ಸ್ಥಳವು ಯಾವುದೆಂಬುದನ್ನು ಆರಿಸಿಕೊಂಡು ಅದರೊಳಗೆ ಸೇರಿಕೊಳ್ಳುತ್ತದೆ. ಉಪಕರಣಗಳನ್ನೆಲ್ಲಾ ತನ್ನದನ್ನಾಗಿಯೇ ಮಾಡಿಕೊಳ್ಳುತ್ತದೆ. ಅಜ್ಞಾನದಿಂದಾಗಿ ತಾನೇ ಅದು ಎಂದೂ ಭಾವಿಸಿಕೊಳ್ಳುತ್ತದೆ. ಗೂಡಿನ ಧರ್ಮವನ್ನು ತನ್ನ ಮೇಲೆ ಆರೋಪಣಮಾಡಿಕೊಳ್ಳುತ್ತದೆ. ಪರಮಾತ್ಮನ ಅಂಶವೆಂದಮೇಲೆ–ಪರಮಾತ್ಮನೇ ಜೀವನನ್ನು ತನ್ನ ಅಂಶ ಎಂದು ಹೇಳಿರುವಾಗ–ಪರಮಾತ್ಮನ ಗುಣಗಳೇ ಅಂಶಕ್ಕೂ ಇರುವುದರಲ್ಲಿ ಸಂದೇಹವೇ ಇಲ್ಲ. ಉರಿಯುತ್ತಿರುವ ಅಗ್ನಿಯಿಂದ ಸ್ವಲ್ಪಭಾಗವನ್ನು ಅಥವಾ ಒಂದಂಶವನ್ನು ಹೊರತೆಗೆದರೆ ಆ ಅಂಶದಲ್ಲಿಯೂ ಅಗ್ನಿಯ ಗುಣಗಳೆಲ್ಲವೂ ಇದ್ದೇ ಇರುತ್ತವೆ. ಆದರೆ ದೊಡ್ಡದೊಂದು ಕುಂಡದಿಂದ ನಾಲ್ಕಾರು ಕೆಂಡಗಳನ್ನು ಹೊರತೆಗೆದರೆ ಆ ಕೆಂಡಗಳು ಕೆಲವು ಕ್ಷಣದಲ್ಲಿಯೇ ಬೂದಿಯಿಂದ ಆವೃತವಾಗಿಬಿಡುತ್ತದೆ. ಅದರಂತೆ ಪರಮಾತ್ಮನ ಅಂಶವಾದ ಈ ಜೀವವೂ ಸಹ ಅಜ್ಞಾನದಿಂದ ಆವೃತವಾಗಿರುತ್ತದೆ. ಅಥವಾ ಗುಣಗಳು ತಮ್ಮ ತಮ್ಮ ಕಾರ್ಯವನ್ನು ಪ್ರಕೃತಿಯಲ್ಲಿ ಎಂದರೆ ಶರೀರದಲ್ಲಿ ಸೇರಿಕೊಂಡು ಮಾಡುತ್ತಿರುವಾಗ ಅದರಲ್ಲಿರುವ ಜೀವವು ಅಜ್ಞಾನದಿಂದ ಆವೃತವಾದಂತೆ ಕಾಣುತ್ತದೆ. ಗಾಳಿಯ ಯೋಗದಿಂದ ಸಮುದ್ರದಲ್ಲಿ ತೆರೆಗಳು ಹುಟ್ಟುವುವು. ಆಗ ಅವು ಸಮುದ್ರದ ಅಂಶಗಳಂತೆಯೇ ಕಾಣುವುವು. ಸಮುದ್ರದ ನೀರಿಗೂ ತೆರೆಯಲ್ಲಿರುವ ನೀರಿಗೂ ವ್ಯತ್ಯಾಸವೇನೂ ಇರುವುದಿಲ್ಲ. ದೇಹದೊಂದಿಗೇ ಹುಟ್ಟು ಮತ್ತು ದೇಹದೊಂದಿಗೇ ಸಾವು–ಈ ವ್ಯವಹಾರವನ್ನು ಸತ್ಯವೆಂದು ತಿಳಿಯುವ ಸ್ಥಳವೇ ಜೀವಲೋಕ. ಸಂಸಾರವೆಂದರೂ ಸಹ ಅದೇ ಆಗಿದೆ. ಪರಮಾತ್ಮನ ಅಂಶನಾದವನು ಯಾವ ರೀತಿಯಲ್ಲಿ ಇಂದ್ರಿಯಗಳನ್ನು ವಶಪಡಿಸಿಕೊಳ್ಳುವನೆಂಬುದನ್ನು ರೂಪಕದ ಮೂಲಕ ಸಂತಜ್ಞಾನೇಶ್ವರರು ಹೀಗೆ ಹೇಳಿದ್ದಾರೆ :

ಮನಸ್ಸೆಂಬ ರಥವನ್ನೇರಿ ಶ್ರವಣೇಂದ್ರಿಯದ್ವಾರದಿಂದ ಹೊರಬಿದ್ದು ಶಬ್ದಾರಣ್ಯದಲ್ಲಿ ಸೇರುವನು. ಬಳಿಕ ಆ ರಥದ ಮುಖವನ್ನು ಹೊರಳಿಸಿ ತ್ವಗಿಂದ್ರಿಯದ್ವಾರದಿಂದ ಸ್ಪರ್ಶರೂಪದ ಘೋರಾರಣ್ಯದಲ್ಲಿ ಪ್ರವೇಶ ಮಾಡುವನು. ಒಮ್ಮೆ ನೇತ್ರದ್ವಾರದಿಂದ ಹೊರಬಿದ್ದು ರೂಪವಿಷಯವೆಂಬ

ಪರ್ವತದ ಮೇಲೆ ಸ್ವೈರವಾಗಿ ಸಂಚರಿಸುವನು. ನಾಲಿಗೆಯ ದ್ವಾರದಿಂದ ಹೊರಟು ರಸಗಳ ದರಿಯಾದ ಹೊಟ್ಟೆಯನ್ನು ತುಂಬಹತ್ತುವನು. ಘ್ರಾಣೇಂದ್ರಿಯಮುಖಾಂತರವಾಗಿ ಜೀವನು ಹೊರಬಿದ್ದಾಗ ಗಂಧದ ದೊಡ್ಡ ಅರಣ್ಯವನ್ನೇ ಪ್ರವೇಶಿಸುವನು. ಈ ಬಗೆಯಾಗಿ ದೇಹೇಂದ್ರಿಯಗಳ ಸ್ವಾಮಿಯಾದ ಜೀವನು ಮನಸ್ಸನ್ನು ವಶಪಡಿಸಿಕೊಂಡು ಶಬ್ದ-ಸ್ಪರ್ಶಾದಿ ಐದು ವಿಷಯಗಳನ್ನು ಭೋಗಿಸುವನು.)

o o o

ಜೀವ ಎನ್ನುವುದು ಪರಮಾತ್ಮನ ಅಂಶ, ಭಾಗ, ಅವಯವ, ಏಕದೇಶ. ಜೀವಗಳ ಲೋಕವಾದ ಸಂಸಾರದಲ್ಲಿ ಭೋಕ್ತಾ, ಕರ್ತಾ—ಎಂದು ಮೊದಲಾಗಿ ಕರೆಯಲ್ಪಡುವ ಯಾವ ಸನಾತನವಸ್ತುವುಂಟೋ ಅದು ಅವನ ಅಂಶವೇ. ನೀರಿನಲ್ಲಿ ಕಾಣುವ ಸೂರ್ಯನ ಪ್ರತಿಬಿಂಬವು ಸೂರ್ಯನ ಅಂಶ. ನೀರು ಎಂಬ ನಿಮಿತ್ತವು ನಾಶವಾದೊಡನೆಯೇ ಸೂರ್ಯನನ್ನು ಹೊಂದಿಬಿಟ್ಟ ಬಳಿಕ ಮತ್ತೆ ಅದು ಹಿಂದಿರುಗುವುದಿಲ್ಲ. ಮಡಕೆ ಮುಂತಾದ ಉಪಾಧಿಯಲ್ಲಿರುವ ಘಟಾಕಾಶವು ಆಕಾಶದ ಅಂಶವೇ ಆಗಿದ್ದು, ಘಟವೆಂಬ ನಿಮಿತ್ತವು ಹೊರಟುಹೋದೊಡನೆಯೇ ಆಕಾಶವನ್ನು ಹೊಂದಿಬಿಡುತ್ತದೆ. ಅದು ಮತ್ತೆ ಹಿಂದಿರುಗುವುದಿಲ್ಲ. ಹಾಗೆಯೇ ಪರಮಾತ್ಮನನ್ನು ಸೇರಿದ ಜೀವಕ್ಕೆ ಪುನರಾವೃತ್ತಿಯಿಲ್ಲ. **ಯದ್ಗತ್ವಾ... ಮಮ ।** "ಪರಮಾತ್ಮನು ಅವಯವ ರಹಿತನಾಗಿರುವಾಗ ಅವನಿಗೆ ಅವಯವ, ಅಂಶ ಎಂಬುದಾಗಿ ಜೀವನನ್ನು ಹೇಳುವುದು ಹೇಗೆ? ನಿಜವಾಗಿಯೂ ಅವಯವವುಳ್ಳವನಾಗಿದ್ದರೆ ಆ ಅವಯವಗಳ ವಿಭಾಗವುಂಟಾಗಿ ನಾಶವಾಗಬೇಕಾಗಿದ್ದಿತು" ಎಂದರೆ : ಇದು ದೋಷವಲ್ಲ. ಅವಿದ್ಯೆಯಿಂದುಂಟಾದ ಉಪಾಧಿಯಿಂದ ಪರಿಚ್ಛಿನ್ನವಾಗಿರುವ ಏಕದೇಶವನ್ನು ಭ್ರಾಂತಿಯಿಂದ ಅಂಶವೆಂದು ಕಲ್ಪಿಸಿಕೊಳ್ಳಲಾಗಿದೆ. ಹೀಗೆ ನನ್ನ ಅಂಶವೆಂದು ಕಲ್ಪಿತವಾಗಿರುವ ಜೀವನು ಸಂಸಾರಕ್ಕೆ ಹೇಗೆ ಬರುತ್ತಾನೆ ಮತ್ತು ಹೇಗೆ ಶರೀರವನ್ನು ಬಿಟ್ಟುಹೋಗುತ್ತಾನೆ? ಎಂದರೆ : ಕಿವಿ ಮುಂತಾದ ತಮ್ಮ ತಮ್ಮ ಸ್ಥಾನದಲ್ಲಿ ಪ್ರಕೃತಿಯಲ್ಲಿರುವ ಮನಸ್ಸನ್ನು ಆರನೆಯದನ್ನಾಗಿ ಹೊಂದಿರುವ, ಶ್ರೋತ್ರ ಮುಂತಾದ ಇಂದ್ರಿಯಗಳನ್ನು ಆಕರ್ಷಣೆ ಮಾಡುತ್ತಾನೆ. (ಶಂ. ಭಾ.)

ಹೀಗೆ ಮೇಲೆ ಯಾವ ಸ್ವರೂಪವನ್ನು ಹೇಳಲಾಗಿದೆಯೋ ಆ ಸನಾತನವಾದ ನನ್ನ ಒಂದು ಅಂಶವೇ ಆಗಿರುವ ಕೆಲವು ಅಂಶಗಳು ಅನಾದಿಕರ್ಮವೆಂಬ ಅವಿದ್ಯೆಯಿಂದ ಆವೃತವಾಗಿ ಜೀವವೆಂದು ಕರೆಯಲ್ಪಡುತ್ತಾ ಜೀವಲೋಕದಲ್ಲಿದ್ದು ಪ್ರಕೃತಿಯ ಪರಿಣಾಮಗಳಾದ ಶರೀರದಲ್ಲಿರುವ ಇಂದ್ರಿಯಗಳನ್ನು (ಇವುಗಳಲ್ಲಿ ಮನಸ್ಸು ಆರನೆಯದು) ಎಳೆದುಕೊಳ್ಳುತ್ತವೆ. ಬೇರೆ ಕೆಲವು ಅಂಶಗಳು ಹಿಂದೆ ಹೇಳಿದ ದಾರಿಯಲ್ಲಿ ಅವಿದ್ಯೆಯಿಂದ ಬಿಡುಗಡೆ ಹೊಂದಿ ಸ್ವಸ್ವರೂಪದಲ್ಲಿ ಉಳಿದುಕೊಳ್ಳುತ್ತವೆ. ಜೀವಭಾವವನ್ನು ತಾಳಿದ ಅಂಶವಾದರೋ ತನ್ನ ಜ್ಞಾನ ಮತ್ತು ಐಶ್ವರ್ಯಗಳಲ್ಲಿ ಅತ್ಯಂತಸಂಕೋಚವನ್ನು ಹೊಂದುತ್ತದೆ. ಜೀವನು ಕರ್ಮಾನುಗುಣವಾಗಿ ಬಂದು ಪ್ರಕೃತಿಯ ಪರಿಣಾಮವಾಗಿರುವ ಶರೀರದಲ್ಲಿರುವ ಇಂದ್ರಿಯಗಳಿಗೆ (ಇವುಗಳಲ್ಲಿ ಮನಸ್ಸು ಆರನೆಯದು) ಈಶ್ವರನಾಗಿ ಅವುಗಳನ್ನು ತನ್ನ ಕರ್ಮಾನುಗುಣವಾಗಿ ಇಲ್ಲಿಗೂ ಅಲ್ಲಿಗೂ ಸೆಳೆಯುತ್ತಿರುತ್ತಾನೆ. (ರಾ. ಭಾ.)

**ಓಂ ಶರೀರಂ ಯದವಾಪ್ನೋತಿ ಯಚ್ಚಾಪ್ಯುತ್ಕ್ರಾಮತೀಶ್ವರಃ ।**
**ಗೃಹೀತ್ವೈತಾನಿ ಸಂಯಾತಿ ವಾಯುರ್ಗನ್ಧಾನಿವಾಶಯಾತ್ ॥೮॥**

ಜೀವವೊಂದೇ ಹೋಗುವುದಿಲ್ಲ. ಮನಸ್ಸೂ ಸೇರಿದಂತೆ ಆರು ಇಂದ್ರಿಯಗಳೊಡನೆ ಜೀವನು ಹೋಗುತ್ತಾನೆ. ಈಶ್ವರನು ಶರೀರವನ್ನು ಯಾವಾಗ ಪಡೆದುಕೊಳ್ಳುವನೋ ಮತ್ತು ಯಾವಾಗ ಶರೀರವನ್ನು ಬಿಟ್ಟು ತೆರಳುವನೋ ಆಗ ಇವುಗಳನ್ನು–ವಾಯುವು ಗಂಧಗಳನ್ನು ಅವುಗಳ ಆಶಯದಿಂದ (ಸ್ಥಾನದಿಂದ) ಒಯ್ಯುವಂತೆ–ತೆಗೆದುಕೊಂಡು ಹೋಗುತ್ತಾನೆ.

* * *

(**ಮನಃ ಷಷ್ಠಾನೀನ್ದ್ರಿಯಾಣಿ ಪ್ರಕೃತಿಸ್ಥಾನಿ ಕರ್ಷತಿ** ಎಂಬುದರಿಂದ ಈ ಶ್ಲೋಕವು ಅನುವರ್ತಿತವಾಗಿದೆ.

ನಾವು, ಮನುಷ್ಯನು ಸತ್ತರೆ ಜೀವ ಹೋಯಿತು ಎನ್ನುತ್ತೇವೆ. ಇಲ್ಲಿ **ಈಶ್ವರಃ** ಎಂದರೆ ಜೀವನು ಅಥವಾ ದೇಹದ ಸ್ವಾಮಿಯು ಎಂದರ್ಥ. ಈ ಜೀವಪುರುಷನು ಯಾವ ಶರೀರಕ್ಕೇ ಹೋಗಲೀ, ಯಾವ ಶರೀರವನ್ನೇ ಬಿಟ್ಟು

ಹೋಗಲೀ–ಈ ಹಿಂದೆ ಹೇಳಿದ ಮತ್ತು ಮುಂದಿನ ಶ್ಲೋಕದಲ್ಲಿ ಹೇಳುವ ಶ್ರೋತ್ರೇಂದ್ರಿಯ-ಚಕ್ಷುರಿಂದ್ರಿಯ-ಸ್ಪರ್ಶೇಂದ್ರಿಯ (ತ್ವಗಿಂದ್ರಿಯ)–ರಸನೇಂದ್ರಿಯ-ಘ್ರಾಣೇಂದ್ರಿಯಗಳನ್ನೂ ಜೊತೆಯಲ್ಲಿ ತೆಗೆದುಕೊಂಡೇ ಹೋಗುತ್ತಾನೆ.

ಹೇಗೆ ಹೋಗುತ್ತಾನೆಂಬುದನ್ನು ಉದಾಹರಣೆಯ ಮೂಲಕ ಶ್ರೀಕೃಷ್ಣನು ಹೇಳುತ್ತಾನೆ. ವಾಯುರ್ಗನ್ಧಾನಿವಾಶಯಾತ್ । ಗಂಧಗಳ ಉಗಮಸ್ಥಾನವೆಂದರೆ ಪುಷ್ಪಾದಿಗಳು. ಪುಷ್ಪಾದಿಗಳಿಂದ ವಾಯುವು ಆಯಾ ಹೂಗಳಿಗೆ ಸಂಬಂಧಿಸಿರುವ ನಾನಾವಿಧವಾದ ಗಂಧಗಳನ್ನು ಒಯ್ಯುವಂತೆ–ಜೀವನು ಮನಸ್ಸಿನಿಂದ ಕೂಡಿದ ಐದು ಇಂದ್ರಿಯಗಳನ್ನೂ ತನ್ನ ಜೊತೆಯಲ್ಲೇ ಒಯ್ಯುತ್ತಾನೆ.

ಭೌತಿಕಶರೀರವು ಹಾಳಾಗುವುದರಿಂದ ದೇಹಿಗೆ ಇರುವ ಇಪ್ಪತ್ತು ಮೂರು ತತ್ತ್ವಗಳಲ್ಲಿ ಐದನ್ನು ಕಳೆದು ಉಳಿದ ಹದಿನೆಂಟು ತತ್ತ್ವಗಳೊಡನೆ ಜೀವನು ಹೋಗುತ್ತಾನೆಂದೂ ಕೆಲವರ ಅಭಿಮತವಾಗಿವೆ. ಮಹತ್ ಎಂದರೆ ಬುದ್ಧಿ, ಅಹಂಕಾರ, ಮನಸ್ಸು, ಪಂಚತನ್ಮಾತ್ರೆಗಳು, ಐದು ಕರ್ಮೇಂದ್ರಿಯಗಳು, ಐದು ಜ್ಞಾನೇಂದ್ರಿಯಗಳು, ಒಟ್ಟು ಹದಿನೆಂಟು.)

o o o

ಈಶ್ವರನು ಎಂದರೆ ದೇಹಾದಿಸಂಘಾತಕ್ಕೆ ಸ್ವಾಮಿಯಾಗಿರುವ ಜೀವಾತ್ಮನು ಯಾವಾಗ ಈ ದೇಹವನ್ನು ಬಿಟ್ಟುಹೋಗುತ್ತಾನೆಯೋ ಆವಾಗ, ಈ ಇಂದ್ರಿಯಗಳನ್ನು ಎಳೆದುಕೊಳ್ಳುತ್ತಾನೆ ಮತ್ತು ಅದೇ ಶರೀರದಿಂದ ಹೊರಟು ಮತ್ತೊಂದು ಶರೀರವನ್ನು ಪಡೆಯುವಾಗಲೂ ಮನಸ್ಸನ್ನು ಆರನೆಯದನ್ನಾಗಿ ಹೊಂದಿರುವ ಈ ಇಂದ್ರಿಯಗಳನ್ನು ಜೊತೆಯಲ್ಲಿ ತೆಗೆದುಕೊಂಡು ಹೋಗುತ್ತಾನೆ. ಹೇಗೆ ಎಂದರೆ, ಗಾಳಿಯು ಪುಷ್ಪವೇ ಮುಂತಾದ ಅದರ ಸ್ಥಾನಗಳಿಂದ ಗಂಧವನ್ನು ಒಯ್ಯುವಂತೆ. (ಶಂ. ಭಾ.)

ಇಂದ್ರಿಯಗಳಿಗೆ ಈಶ್ವರನಾದ ಈ ಜೀವನು ಯಾವ ಶರೀರವನ್ನು ಪಡೆದುಕೊಳ್ಳುತ್ತಾನೆಯೋ ಮತ್ತು ಯಾವ ಶರೀರವನ್ನು ಬಿಟ್ಟು ಹೊರಡುತ್ತಾನೆಯೋ, ಅಲ್ಲಿ ಈ ಇಂದ್ರಿಯಗಳನ್ನು ಭೂತಸೂಕ್ಷ್ಮಗಳೊಡನೆ ತೆಗೆದು

ಕೊಂಡು ಹೋಗುತ್ತಾನೆ. ಹೇಗೆ ಎಂದರೆ ಗಾಳಿಯು ಪುಷ್ಪಹಾರ, ಚಂದನ, ಕಸ್ತೂರಿ ಮುಂತಾದ ಆಯಾ ಸ್ಥಾನದಿಂದ ಸೂಕ್ಷ್ಮವಾದ ಅವಯವಗಳೊಡನೆ ಗಂಧಗಳನ್ನು ತೆಗೆದುಕೊಂಡು ಬೇರೆ ಕಡೆಗೆ ಹೋಗುವಂತೆ. (ರಾ. ಭಾ.)

ಹಿಂದಿನ ಶ್ಲೋಕದ ಕೊನೆಯಲ್ಲಿ **ಕರ್ಷತಿ**–ಆಕರ್ಷಿಸುತ್ತಾನೆ ಎಂದು ಹೇಳಿದುದಾದರೆ ಜೀವನಿಗೆ ಸ್ವಾತಂತ್ರ್ಯವು ಇದೆಯೆಂಬ ಶಂಕೆ ಉಂಟಾಗುತ್ತದೆ. ಈ ಶ್ಲೋಕವು ಅದನ್ನು ಪರಿಹಾರಮಾಡುತ್ತದೆ. ಜೀವನು ಯಾವಾಗ ಶರೀರ ವನ್ನು ಹೊಂದುತ್ತಾನೆಯೋ ಅಥವಾ ಬಿಟ್ಟು ಬೇರೇ ಶರೀರಕ್ಕೆ ಅಥವಾ ಲೋಕಕ್ಕೆ ಹೋಗುತ್ತಾನೆಯೋ ಆಗ ಈಶ್ವರನೇ ಇವುಗಳನ್ನು ತೆಗೆದುಕೊಂಡು ಹೋಗುತ್ತಾನೆ.

**ಯತ್ರ ಯತ್ರ ಚ ಸಂಯುಕ್ತೋ ಧಾತಾ ಗರ್ಭಂ ಪುನಃ ಪುನಃ ।**
**ತತ್ರ ತತ್ರೈವ ವಸತೇ ಸ ಯತ್ರ ಸ್ವಯಮಿಚ್ಛತಿ ॥ –ಮೋಕ್ಷಧರ್ಮ**

**ವಾಙ್ಮನಸಿ ಸಂಪದ್ಯತೇ ಮನಃ ಪ್ರಾಣೇ ।**
**ಪ್ರಾಣಸ್ತೇಜಸಿ ತೇಜಃ ಪರಸ್ಯಾಂ ದೇವತಾಯಾಂ ॥ –ಛಾನ್ದೋಗ್ಯ**

**ಆಶಯಾತ್ ಗನ್ಧಾನಿವ** = ಗಂಧದಂತೆ ಸೂಕ್ಷ್ಮವಾಗಿರುವ ಇಂದ್ರಿಯ ಗಳನ್ನು, **ಶ್ರೋತ್ರಂ ಚಕ್ಷುಃ** ಎಂದು ಆರಂಭವಾಗುವ ಮುಂದಿನ ಶ್ಲೋಕವು ಇವನಿಗೆ ವಿಷಯಭೋಗವನ್ನು ಹೇಳುತ್ತದೆ. ಈಶ್ವರನಿಗೆ ವಿಷಯಭೋಗವಿಲ್ಲ. ಜೀವನಿಗೆ ಮಾತ್ರ ವಿಷಯಭೋಗವಿರುವುದು. ಹೀಗಿರುವಾಗ ಈ ಶ್ಲೋಕವು ಈಶ್ವರವಿಷಯವು ಹೇಗೆ ಆಗುತ್ತದೆ? ಎಂದರೆ : ಈಶ್ವರನಿಗೂ ಭೋಗವುಂಟೆಂಬುದನ್ನು ಏಳನೆಯ ಅಧ್ಯಾಯದಲ್ಲಿ ಸಾಧನೆಮಾಡಿಯಾಗಿದೆ. (ಮ. ಭಾ.)

**ಓಂ ಶ್ರೋತ್ರಂ ಚಕ್ಷುಃ ಸ್ಪರ್ಶನಂ ಚ ರಸನಂ ಘ್ರಾಣಮೇವ ಚ ।**
**ಅಧಿಷ್ಠಾಯ ಮನಶ್ಚಾಯಂ ವಿಷಯಾನುಪಸೇವತೇ ॥೯॥**

ಕಿವಿ, ಕಣ್ಣು, ಚರ್ಮ, ನಾಲಿಗೆ, ಮೂಗು ಮತ್ತು ಮನಸ್ಸು–ಇವುಗಳನ್ನು ಆಶ್ರಯಿಸಿಕೊಂಡು ಇವನು ವಿಷಯಗಳನ್ನು ಉಪಭೋಗಿಸುತ್ತಾನೆ.

* * *

(ಈ ಆರನ್ನೇ ಜೊತೆಯಲ್ಲಿ ಸೆಳೆದುಕೊಂಡು ಹೋಗಲು ಕಾರಣ

ವೇನು? ಎಂಬುದಕ್ಕೆ ಶ್ರೀಕೃಷ್ಣನು ವಿವರಣೆಯನ್ನು ನೀಡುತ್ತಾನೆ. ವಿಷಯಗಳನ್ನು ಉಪಭೋಗಿಸಬೇಕಾದರೆ ಈ ಆರು ಇಂದ್ರಿಯಗಳು ಇರಲೇಬೇಕು. ಪ್ರಪಂಚದಲ್ಲಿರುವ ಸಕಲವಿಧವಾದ ವಿಷಯಸುಖಗಳನ್ನೂ ಸಹ ಮನಸ್ಸಿನಿಂದ ಕೂಡಿದ ಈ ಐದು ಇಂದ್ರಿಯಗಳ ಮೂಲಕವಾಗಿಯೇ ಅನುಭವಿಸಬೇಕಾಗಿದೆ. ಈ ರೀತಿಯಾಗಿ ಜೀವನು ಶರೀರದಲ್ಲಿರುವಾಗ, ಈ ಐದು ಇಂದ್ರಿಯಗಳನ್ನು ಮನಸ್ಸಿನೊಡನೆ ಹೊಂದಿರುವುದರಿಂದ, ಭೌತಿಕವಾಗಿ ಒಬ್ಬನಿಗೆ ಕಣ್ಣಿಲ್ಲದಿದ್ದರೂ ಸಹ ಬೇರೆಯ ಕಣ್ಣನ್ನು ಜೋಡಿಸಿ ಕಣ್ಣುಕಾಣುವಂತೆ ಮಾಡಲು ಕೆಲವು ಸನ್ನಿವೇಶಗಳಲ್ಲಿ ಸಾಧ್ಯವಾಗುತ್ತದೆ. ಮನಸ್ಸು, ಬುದ್ಧಿ ಮತ್ತು ಇಂದ್ರಿಯಗಳೊಡನೆ ಸೇರಿರುವ ಆತ್ಮನನ್ನು ಭೋಕ್ತಾ ಎಂದು ಉಪನಿಷತ್ತುಗಳೂ ಕರೆದಿವೆ.

**ಆತ್ಮೇನ್ದ್ರಿಯಮನೋಯುಕ್ತಂ ಭೋಕ್ತೇತ್ಯಾಹುರ್ಮನೀಷಿಣಃ ।**

—ಕಠ ೧-೩-೪

o o o

ಜೀವನು ಒಂದು ಶರೀರದಿಂದ ಮತ್ತೊಂದು ಶರೀರಕ್ಕೆ ಹೋಗುವಾಗ ಮನಸ್ಸನ್ನು ಆರನೆಯದನ್ನಾಗಿ ಉಳ್ಳ ಇಂದ್ರಿಯಗಳನ್ನು ತೆಗೆದುಕೊಂಡು ಹೋಗುತ್ತಾನೆ—ಎಂದು ಹಿಂದೆ ಹೇಳಿದೆ. ಅವು ಯಾವುವು ಎಂದರೆ : ಕಿವಿ, ಕಣ್ಣು, ತ್ವಗಿಂದ್ರಿಯ, ರಸನೆ ಮತ್ತು ಮೂಗು. ಇವುಗಳಲ್ಲಿ ಪ್ರತಿಯೊಂದು ಇಂದ್ರಿಯವನ್ನೂ ಮತ್ತು ಅವುಗಳೊಡನೆ ಆರನೆಯದಾದ ಮನಸ್ಸನ್ನೂ ಆಶ್ರಯವನ್ನಾಗಿ ಮಾಡಿಕೊಂಡು ಆತನು ಶಬ್ದವೇ ಮುಂತಾದ ವಿಷಯಗಳನ್ನು ಸೇವಿಸುತ್ತಾನೆ. **ಅಧಿಷ್ಠಾಯ** = ಆಶ್ರಯಿಸಿ. (ಶಂ. ಭಾ.)

**ಅಧಿಷ್ಠಾಯ** = ತಮ್ಮ ತಮ್ಮ ವಿಷಯಗಳ ವೃತ್ತಿಗೆ ಅನುಗುಣವನ್ನಾಗಿ ಮಾಡಿ. (ರಾ. ಭಾ.)

'ಇಂದ್ರಿಯಗಳ ಮೂಲಕವಾಗಿ ಈಶ್ವರನೂ ಕೂಡ ಭೋಗಿಸುತ್ತಾನೆ'—ಎಂದು ಇಲ್ಲಿ ನಿರೂಪಿಸಿದೆ. **ತದ್ಯ ಇಮೇ ವೀಣಾಯಾಂ ಗಾಯನ್ತಿ** ಏತಂ **ತೇ ಗಾಯನ್ತಿ**—ಎಂದು ಶ್ರುತಿಯು ಈ ಅಭಿಪ್ರಾಯವನ್ನು ಹೇಳುತ್ತದೆ. ಆದರೆ ಅವನು ದುಷ್ಟವಾದುವುಗಳನ್ನು ಭೋಗಿಸುವುದಿಲ್ಲ. ಶುಭ

ವಾದುದನ್ನು ಮಾತ್ರವೇ ಸೇವಿಸುತ್ತಾನೆ. **ನ ಹ ವೈ ದೇವಾನ್ ಪಾಪಂ ಗಚ್ಛತಿ**–ಎಂದು ಶ್ರುತಿಯು ಹೇಳುತ್ತದೆ. (ಮ. ಭಾ.)

**ಓಂ ಉತ್ಕ್ರಾಮನ್ತಂ ಸ್ಥಿತಂ ವಾಪಿ ಭುಞ್ಜಾನಂ ವಾ ಗುಣಾನ್ವಿತಮ್ ।**
**ವಿಮೂಢಾ ನಾನುಪಶ್ಯನ್ತಿ ಪಶ್ಯನ್ತಿ ಜ್ಞಾನಚಕ್ಷುಷಃ ॥೧೦॥**

ಉತ್ಕ್ರಮಿಸುತ್ತಿರುವ ಅಥವಾ ಇದ್ದುಕೊಂಡಿರುವ ಅಥವಾ ಗುಣಗಳಿಂದ ಕೂಡಿ ಭೋಗಿಸುತ್ತಿರುವ ಇವನನ್ನು ವಿಮೂಢರು ಕಾಣಲಾರರು. ಜ್ಞಾನದೃಷ್ಟಿಯುಳ್ಳವರು ಕಾಣುತ್ತಾರೆ.

* * *

(ಶ್ರೀಕೃಷ್ಣನು ಉತ್ಕ್ರಾಮನ್ತಂ ಎಂದು ಮೊದಲು ಹೇಳಿರುವುದರಲ್ಲಿ ಸ್ವಾರಸ್ಯವಿದೆ. ಒಬ್ಬ ಮನುಷ್ಯನು ಹುಟ್ಟಿ ಸಾಯುವವರೆಗೂ ಅವನು ಆಡಿದ ಆಟ-ಪಾಟಗಳೆಲ್ಲವನ್ನೂ ನಾವು ನೋಡುತ್ತಿರುತ್ತೇವೆ. ಅವನು ಅನುಭವಿಸಿದ ಸುಖ-ದುಃಖಗಳೆಲ್ಲವನ್ನೂ ಕಾಣುತ್ತೇವೆ. ಕಟ್ಟಕಡೆಗೆ ಅವನು ಸಾಯುತ್ತಿರುವುದನ್ನೂ ನೋಡುತ್ತೇವೆ. ಸತ್ತಿದ್ದನ್ನೂ ನೋಡುತ್ತೇವೆ. ಯಾವ ಅವನ ಭವ್ಯ ಶರೀರವು ಅವನು ಹುಟ್ಟಿದಾಗಿನಿಂದ ಪ್ರಾಣೋತ್ಕ್ರಮಣವಾಗುವವರೆಗೂ ಅನೇಕವಿಧವಾದ ಭೋಗಗಳನ್ನು ಅನುಭವಿಸಿತೋ ಅದು ಅಲ್ಲಿಯೇ ಇರುತ್ತದೆ. ಜೀವವೆಂಬುದು ಹೋದೊಡನೆಯೇ ಅದು ನಾರಲು ಪ್ರಾರಂಭಿಸುತ್ತದೆ. ಅದುವರೆಗೂ ಸುಖೋಪಭೋಗಗಳನ್ನು ಅನುಭವಿಸಿದವರು ಯಾರು? ಜೀವವೇ? ದೇಹವೇ? ದೇಹವೇ ಆಗಿದ್ದಿದ್ದರೆ ಜೀವವು ಹೋದ ನಂತರವೂ ದೇಹಕ್ಕೆ ನಾವು ಪುರಸ್ಕಾರಕೊಡಬೇಕಾಗಿದ್ದಿತು. ಜೀವಹೋದ ಮಾತ್ರಕ್ಕೆ ಆ ಶರೀರವು ಕೊಳೆತು ಹೋಗಬಾರದಾಗಿದ್ದಿತು. ಜೀವ ಹೋದೊಡನೆಯೇ ದೇಹವು ಕೊಳೆತುಹೋಗುವುದರಿಂದ–'ದೇಹವು ಕೇವಲ ಹೊದ್ದಿಕೆ ಮಾತ್ರ. ಕಷ್ಟ-ಸುಖಗಳೆಲ್ಲವನ್ನೂ ಅನುಭವಿಸುವುದು ಒಳಗಿರುವ ಜೀವವೇ ಹೊರತು ದೇಹವಲ್ಲ'–ಎಂಬುದು ಬಹುಸ್ಪಷ್ಟವಾಗಿ ತಿಳಿಯುತ್ತದೆ. ಇದನ್ನು ನಾವು ಅನುದಿನವೂ ನೋಡುತ್ತಲೇ ಇರುತ್ತೇವೆ. ಆದರೆ ಜೀವಹೋದೊಡನೆಯೇ ದೇಹವನ್ನು ಸ್ಮರಿಸಿಕೊಂಡು ಇಂತಹ ಹೆಸರಿನವನು

ಸತ್ತನು–ಎಂದು ಹೇಳುತ್ತೇವೆಯೇ ಹೊರತು ಆ ದೇಹದೊಳಗಿನ ಜೀವದ ಸ್ಮರಣೆಯೇ ನಮಗೆ ಬರುವುದಿಲ್ಲ. ಶರೀರವೆಂಬ ಗೂಡಿನಲ್ಲಿ ಆ ಜೀವನು ಇದುವರೆಗೂ ಕುಳಿತಿದ್ದನು. ಜೀವ ಬೇರೆ ; ದೇಹ ಬೇರೆ. ಜೀವ-ದೇಹ ಎರಡೂ ಒಂದೇ ಆಗಿದ್ದಿದ್ದರೆ ಜೀವ-ದೇಹಗಳೆರಡೂ ಒಮ್ಮೆಲೇ ಹೋಗ ಬೇಕಾಗಿದ್ದಿತು–ಎಂದು ನಾವು ಎಂದರೆ ಮೂಢರಾದವರು ಕ್ಷಣಮಾತ್ರವೂ ಯೋಚಿಸುವುದಿಲ್ಲ.

**ಸ್ಥಿತಂ ವಾಪಿ ಭುಞ್ಜಾನಂ ವಾ ಗುಣಾನ್ವಿತಮ್ ।**

ಬದುಕಿರುತ್ತಾರೆ–ಸತ್ತ್ವಗುಣದಿಂದಲೋ, ರಜೋಗುಣದಿಂದಲೋ, ತಮೋಗುಣದಿಂದಲೋ ಕೂಡಿರುತ್ತಾರೆ ; ಸುಖ-ದುಃಖಗಳನ್ನು ಅನುಭವಿಸು ತ್ತಿರುತ್ತಾರೆ. ಈ ಮನುಷ್ಯಲೋಕದಲ್ಲಿ ಎಷ್ಟೋ ಕೋಟಿ ಜನರಿದ್ದಾರೆ. ಎಲ್ಲ ಜನಗಳಿಗೂ ಹತ್ತು ಇಂದ್ರಿಯಗಳೂ ಇವೆ. ಆದರೆ ಒಬ್ಬರ ಸ್ವಭಾವವು ಮತ್ತೊಬ್ಬರಿಗಿರುವುದಿಲ್ಲ. ಎಲ್ಲರ ದೇಹಗಳಲ್ಲಿಯೂ, ಅನೇಕವಿಷಯಗಳ ಲ್ಲಿಯೂ ಸಾಮ್ಯವಿರುವುದರಿಂದ ಎಲ್ಲರ ಸ್ವಭಾವಗಳೂ ಗುಣ-ಧರ್ಮಗಳೂ ಒಂದೇ ಸಮನಾಗಿ ಇರಬೇಕಾಗಿತ್ತಲ್ಲವೇ? ಮನುಷ್ಯ-ಮನುಷ್ಯರಲ್ಲಿ, ಕರಣ ಗಳಲ್ಲಿ ಸಾಮ್ಯವಿದ್ದರೂ ಸ್ವಭಾವವೇಕೆ ಬೇರೆಯಾಗಿರುತ್ತದೆ? ಬುದ್ಧಿಯೇಕೆ ಬೇರೆ-ಬೇರೆಯಾಗಿರುತ್ತದೆ? ನಡೆ-ನುಡಿಗಳೇಕೆ ಬೇರೆಯಾಗಿರುತ್ತವೆ?–ಈ ವಿಷಯವನ್ನು ಕ್ಷಣಕಾಲ ಯೋಚಿಸಿದರೂ ಇದರ ರಹಸ್ಯವು ಎಲ್ಲರಿಗೂ ತಿಳಿದುಬರುತ್ತದೆ. ಎಲ್ಲರ ದೇಹಗಳೂ ಒಂದೇ ಸಮನಾಗಿ ಕಾಣುತ್ತಿದ್ದರೂ ಆ ದೇಹಗಳಲ್ಲಿರುವ ದೇಹಿ ಅಥವಾ ಜೀವಿಯು ಒಂದೊಂದು ದೇಹದಲ್ಲಿಯೂ ಬೇರೆ-ಬೇರೆಯಾಗಿಯೇ ಇದ್ದಾನೆ. ಒಂದೊಂದು ದೇಹವೆಂಬ ಕವಚದಲ್ಲಿಯೂ ತನ್ನದೇ ಆದ ಪೂರ್ವಚರಿತ್ರೆಯನ್ನು ಹೊಂದಿರುವ ಪ್ರತ್ಯೇಕ-ಪ್ರತ್ಯೇಕ ಜೀವನಿದ್ದಾನೆ. ಅವನ ಹಿಂದಿನ ಕರ್ಮದಂತೆ ಅವನ ಸ್ವಭಾವವಿರುತ್ತದೆ. ಒಳಗಿರುವ ಆ ಜೀವನ ಸ್ವಭಾವಗುಣಗಣಗಳು ಕವಚ ರೂಪವಾಗಿರುವ ದೇಹದ ಮೂಲಕವಾಗಿ ಕಾಣಿಸಿಕೊಳ್ಳುತ್ತವೆ. ಜೀವಕ್ಕೂ ದೇಹಕ್ಕೂ ಯಾವ ಸಂಬಂಧವೂ ಇಲ್ಲ. ದೇಹದ ಪ್ರಭಾವದಿಂದ ಸ್ವಭಾವವು ಉಂಟಾಗುವುದಾಗಿದ್ದರೆ ಒಂದೇ ತೂಕದ, ಹೊಂದಾಣಿಕೆಯಾಗುವ ರಕ್ತ ವರ್ಗವುಳ್ಳ ಒಂದೇ ಎತ್ತರದ ಮನುಷ್ಯರು ಅನೇಕಸಾವಿರ ಜನರಿರುವಾಗ

ಅವರೆಲ್ಲರ ಸ್ವಭಾವವೂ ಒಂದೇ ಆಗಬೇಕಾಗಿದ್ದಿತು. ಹಾಗಾಗುವುದಿಲ್ಲ. ಈ ವಿಶ್ವದಲ್ಲಿ ಕೋಟಿ-ಕೋಟಿ ಪ್ರಕಾರದ ಭಿನ್ನ-ಭಿನ್ನವಾದ ಸ್ವಭಾವವುಳ್ಳ ಜನರಿದ್ದಾರೆ. ಆದುದರಿಂದ ಈ ಸ್ವಭಾವವು ದೇಹದಲ್ಲಿರುವ ಜೀವನಿಗೆ ಸಂಬಂಧಿಸಿದ್ದೇ ಹೊರತು ದೇಹಕ್ಕಲ್ಲ. ಇಷ್ಟು ಕೋಟಿ ಜನರ ದೇಹಗಳೂ ಒಂದೇ ಎಂಬುದನ್ನು ನಾವು ಸತ್ತನಂತರ ಕಾಣಬಹುದು. ಬದುಕಿದ್ದಾಗ ಅವರವರ ಸ್ವಭಾವವು ಯಾವುದೇ ಆಗಿದ್ದರೂ ಸತ್ತನಂತರ ಎಲ್ಲರ ದೇಹಗಳೂ ಕೊಳೆಯುವಂತೆ ಅವನ ದೇಹವೂ ಕೊಳೆಯುತ್ತದೆ. ಬುದ್ಧಿವಂತ, ದಡ್ಡ, ಬಡವ, ಬಲ್ಲಿದ, ಹೆಂಗಸು, ಗಂಡಸು ಮುಂತಾದ ಯಾವ ವ್ಯತ್ಯಾಸವೂ ಆ ದೇಹಗಳಲ್ಲಿ ಕಾಣುವುದಿಲ್ಲ. ಜೀವವು ಹೋಗಿಬಿಟ್ಟಿತೆಂದರೆ ಎಲ್ಲ ದೇಹಗಳ ಅವಸ್ಥೆಯೂ ಸಾಮಾನ್ಯವಾಗಿ ಒಂದೇ ಸಮನಾಗಿರುತ್ತದೆ. ಈ ಕಾರಣಗಳಿಂದ ಎಲ್ಲರ ದೇಹಗಳಲ್ಲಿಯೂ ಜೀವಾತ್ಮನಿದ್ದಾನೆಂಬುದನ್ನು ಸುಲಭವಾಗಿ ಅರಿತುಕೊಳ್ಳಬಹುದಾಗಿದೆ. ಸ್ವಲ್ಪ ಮೂಢರಾದವರೂ ಸಹ ಕಷ್ಟಪಟ್ಟರೆ ತಿಳಿದುಕೊಳ್ಳಲು ಸಾಧ್ಯ–ಎಂಬ ಅಭಿಪ್ರಾಯದಿಂದ ಅದನ್ನು ನಿವಾರಿಸಲು **ವಿಮೂಢಾ ನಾನುಪಶ್ಯನ್ತಿ** ಎಂದು ಹೇಳಿದೆ. ಶತದಡ್ಡರಾದವರು ಈ ರಹಸ್ಯ ವನ್ನು ತಿಳಿದುಕೊಳ್ಳಲಾರರು. ಆದರೆ ಜ್ಞಾನದೃಷ್ಟಿಯುಳ್ಳವರು ಅರ್ಥಾತ್ ಜ್ಞಾನಿಗಳು ತಮ್ಮಲ್ಲಿಯೂ ಆತ್ಮನನ್ನು ಕಂಡುಕೊಳ್ಳುತ್ತಾರೆ. 'ಬೇರೆಯವರು ಸಾಯುತ್ತಿರಲಿ ; ಬದುಕಿರಲಿ ; ಗುಣಗಳಿಂದ ಪ್ರಚೋದಿತರಾಗಿ ತತ್ಸಂಬಂಧ ವಾದ ಸುಖ-ದುಃಖಗಳನ್ನೇ ಅನುಭವಿಸುತ್ತಿರಲಿ'–ಅವರಲ್ಲಿಯೂ ಸಹ ಪರಮಾತ್ಮನನ್ನೇ ಕಾಣುತ್ತಾರೆ. ಅವರಿಗೆ ಶುದ್ಧಸ್ಫಟಿಕಸಂಕಾಶನಾದ ಪರಮಾತ್ಮನ ಹೊರತಾಗಿ ಯಾವುದರಲ್ಲಿಯೂ ಮತ್ತೇನೂ ಕಾಣುವುದಿಲ್ಲ.)

o o o

ಅತಿಮೂಢರಾದವರು ಯಾವ ಸ್ಥಿತಿಯಲ್ಲಿಯೂ ಜೀವನ ಸ್ವರೂಪ ವನ್ನು ತಿಳಿಯಲಾರರು. ಅವರು ದೇಹವನ್ನು ಬಿಡುತ್ತಿರುವಾಗಲೇ ಆಗಲೀ, ಶರೀರದಲ್ಲಿ ಇರುವಾಗಲೇ ಆಗಲೀ, ಅಥವಾ ಶಬ್ದಾದಿ ವಿಷಯಗಳನ್ನು ಅನುಭವಿಸುತ್ತಿರುವಾಗಲೇ ಆಗಲೀ, ಅಥವಾ ಗುಣಗಳಿಂದ ಕೂಡಿರುವಾಗಲೇ ಆಗಲೀ ಯಾವುದೇ ಸ್ಥಿತಿಯಲ್ಲಿಯೂ ಅರಿಯಲಾರರು. ಜೀವನು ಅತ್ಯಂತ

ದರ್ಶನಗೋಚರನಾಗಿದ್ದರೂ ಕೂಡ ದೃಷ್ಟ ಮತ್ತು ಅದೃಷ್ಟಗಳಾದ ವಿಷಯ ಭೋಗಗಳ ಲಾಲಸೆಯಿಂದ ಆಕೃಷ್ಟಚಿತ್ತರಾದ ಅತಿಮೂಢರು ನೋಡಲಾಗು ತ್ತಿಲ್ಲವಲ್ಲಾ! ಎಂತಹ ದುಃಖದ ವಿಷಯವಿದು?–ಎಂದು ಭಗವಂತನು ಕರುಣೆಯನ್ನು ಪ್ರಕಟಿಸುತ್ತಾನೆ. ಆದರೆ ಪ್ರಮಾಣಜನ್ಯವಾದ ಜ್ಞಾನನೇತ್ರವುಳ್ಳ ವರು ಎಂದರೆ ವಿವೇಕದೃಷ್ಟಿಯುಳ್ಳವರು ಅವನನ್ನು ನೋಡುತ್ತಾರೆ.

(ಶಂ. ಭಾ.)

ಹೀಗೆ ಗುಣಗಳಿಂದ ಕೂಡಿರುವವನು ಎಂದರೆ ಸತ್ತ್ವವೇ ಮುಂತಾದ ಗುಣಮಯಪ್ರಕೃತಿಯ ಪರಿಣಾಮವಿಶೇಷವಾದ ಮನುಷ್ಯತ್ವವೇ ಮುಂತಾದ ಅವಯವಜೋಡಣೆಯುಳ್ಳ ಶರೀರದ ಸಂಬಂಧವನ್ನು ಹೊಂದಿರುವ ಅಥವಾ ಶರೀರವನ್ನು ಬಿಟ್ಟುಹೋಗುತ್ತಿರುವ ಅಥವಾ ಶರೀರದಲ್ಲಿರುವ, ಗುಣಮಯವಾದ ವಿಷಯಗಳನ್ನು ಅನುಭವಿಸುತ್ತಿರುವ ಜೀವನನ್ನು– ಈತನು ಪ್ರಕೃತಿಪರಿಣಾಮವಿಶೇಷವಾದ ಮನುಷ್ಯತ್ವವೇ ಮುಂತಾದ ಪಿಂಡದಿಂದ ವಿಲಕ್ಷಣನಾದವನು, ಕೇವಲ ಜ್ಞಾನಾಕಾರನಾದವನು–ಎಂದು ತಿಳಿ ಯುವುದಿಲ್ಲ. ವಿಮೂಢಾಃ = ಮನುಷ್ಯತ್ವವೇ ಮುಂತಾದ ಪಿಂಡವನ್ನೇ ಆತ್ಮ ವೆಂದು ಅಭಿಮಾನಿಸುವವರು. ಜ್ಞಾನದ ಕಣ್ಣುಗಳುಳ್ಳವರಾದರೋ ದೇಹಾತ್ಮ ವಿಷಯಕವಾದ ಜ್ಞಾನವುಳ್ಳವರಾಗಿ ಜೀವನು ಎಲ್ಲ ಅವಸ್ಥೆಗಳಲ್ಲಿಯೂ ದೇಹ ದಿಂದ ಬೇರೆಯಾದವನು–ಎಂಬುದಾಗಿಯೇ ತಿಳಿಯುತ್ತಾರೆ. (ರಾ. ಭಾ.)

ದೇಹದಲ್ಲಿ ಜೀವಾತಿರಿಕ್ತನಾಗಿ ನಿಯಾಮಕನಾದವನು ಇದ್ದರೆ ಆತನೇಕೆ ಕಾಣುವುದಿಲ್ಲ?–ಎಂಬುದನ್ನು ಇಲ್ಲಿ ಹೇಳಲಾಗಿದೆ. ಅವನು ಕಾಣದೇ ಇರು ವುದಕ್ಕೆ ಕಾರಣ ವಿಮೂಢತ್ವವೇ ಹೊರತು ಅವನ ಅಭಾವವಲ್ಲ. (ಮ. ಭಾ.)

**ಓಂ ಯತನ್ತೋ ಯೋಗಿನಶ್ಚೈನಂ ಪಶ್ಯನ್ತ್ಯಾತ್ಮನ್ಯವಸ್ಥಿತಮ್ ।**
**ಯತನ್ತೋಽಪ್ಯಕೃತಾತ್ಮಾನೋ ನೈನಂ ಪಶ್ಯನ್ತ್ಯಚೇತಸಃ ॥೧೧॥**

ಪ್ರಯತ್ನಮಾಡುವ ಯೋಗಿಗಳು–ಈತನು ತಮ್ಮಲ್ಲಿರುವನೆಂದು– ಕಂಡುಕೊಳ್ಳುತ್ತಾರೆ. ಅಸಂಸ್ಕೃತವಾದ ಆತ್ಮವುಳ್ಳವರು ಪ್ರಯತ್ನಿಸಿದರೂ ಸಹ ಇವನನ್ನು ಕಾಣದೇ ಇರುತ್ತಾರೆ.

*　　*　　*

(ಹಿಂದಿನ ಶ್ಲೋಕದಲ್ಲಿ **ಪಶ್ಯನ್ತಿ ಜ್ಞಾನಚಕ್ಷುಷಃ**–ಎಂದು ಹೇಳಿದ್ದಾನೆ. ಜ್ಞಾನದೃಷ್ಟಿಯುಳ್ಳವರು ಹೃದಯಗುಹೆಯಲ್ಲಿರುವ ಆತ್ಮನನ್ನು ಗುರುತಿಸುತ್ತಾರೆ. ಈ ವಿಷಯವನ್ನೇ ಈ ಶ್ಲೋಕದಲ್ಲಿ ವಿಸ್ತರಿಸಿ ಹೇಳುತ್ತಾನೆ. ಯೋಗಿಗಳು ಎಂದರೆ ಜ್ಞಾನಯೋಗಿಗಳೂ, ಕರ್ಮಯೋಗಿಗಳೂ ಮತ್ತು ಭಕ್ತಿಯೋಗಿಗಳೂ ಪ್ರಯತ್ನವನ್ನು ಮಾಡುತ್ತಾ-ಮಾಡುತ್ತಾ ತಮ್ಮ ಹೃದಯದಲ್ಲೇ ಇರುವ ಆತ್ಮನನ್ನು ಕಂಡುಕೊಳ್ಳುತ್ತಾರೆ. ಜಿತೇಂದ್ರಿಯರಾದ ಯೋಗಿಗಳೂ ಸಹ ಅವನನ್ನು ಕಂಡುಕೊಳ್ಳಲು ಸತತಪ್ರಯತ್ನವನ್ನೇ ಮಾಡಬೇಕು. ಶುದ್ಧಸ್ಫಟಿಕಸಂಕಾಶನಾದ ಆತ್ಮನು ನಮ್ಮ ಹೃದಯದಲ್ಲಿಯೇ ಇದ್ದಾನೆಂಬುದನ್ನು ಗುರೂಪದೇಶದಿಂದಲೂ, ಶಾಸ್ತ್ರಾಧ್ಯಯನದಿಂದಲೂ ಸ್ಥಿರಪಡಿಸಿಕೊಂಡು ಯೋಗದ ಮೂಲಕವಾಗಿ ಸತತವಾಗಿ ಪ್ರಯತ್ನಮಾಡಬೇಕು. ಹೀಗೆ ಸತತಪ್ರಯತ್ನಮಾಡುವ ಯೋಗಿಗಳು ಆತ್ಮನನ್ನು ಸಾಕ್ಷಾತ್ಕರಿಸಿ ಕೊಳ್ಳುತ್ತಾರೆ.

**ಅಕೃತಾತ್ಮಾನಃ ಅಚೇತಸಃ ಯತನ್ತೋಽಪಿ ಏನಂ ನ ಪಶ್ಯನ್ತಿ**–ಕೇವಲ ಪ್ರಯತ್ನವೇ ಫಲವನ್ನು ನೀಡುವುದಿಲ್ಲ. ನಮ್ಮ ಕರಣ-ಕಳೇಬರಗಳು ಪರಿಶುದ್ಧವಾಗಿರಬೇಕು. ಹಾಲಿನ ಪಾತ್ರೆಯು ಶುದ್ಧವಾಗಿರದಿದ್ದರೆ ಹಾಕಿಸಿಕೊಂಡ ಶುದ್ಧವಾದ ಹಾಲೂ ಸಹ ಕಾಯಿಸುವುದಕ್ಕೆ ಇಟ್ಟೊಡನೆಯೇ ಒಡೆದುಹೋಗುತ್ತದೆ. ಬಲ್ಬಿನಲ್ಲಿ ಒಂದು ಸಣ್ಣ ತಂತಿಯು ಸುಟ್ಟು ಹೋಗಿದ್ದರೂ ಬೆಳಕು ಅದರ ಮೂಲಕ ಬರುವುದಿಲ್ಲ. ರೇಡಿಯೋವಿನಲ್ಲಿ ಒಂದು ಸಣ್ಣ ತಂತಿಯು ಕಿತ್ತುಹೋಗಿದ್ದರೂ ಸಹ ಧ್ವನಿಯೇ ಬರುವುದಿಲ್ಲ. ಸ್ವಲ್ಪ ವ್ಯತ್ಯಾಸವಾದರೂ ಯಂತ್ರಗಳು ನಡೆಯದೇ ಇರುವುದನ್ನು ನಾವು ಕಂಡಿದ್ದೇವೆ. ಭೌತಿಕವಿಜ್ಞಾನವೇ ಹೀಗಿರುವಾಗ ಆಧ್ಯಾತ್ಮಿಕವಾದ ಜ್ಞಾನವನ್ನು ಅನುಭವಕ್ಕೆ ತಂದುಕೊಳ್ಳಬೇಕಾದರೆ ಶರೀರ ಮತ್ತು ಮನಸ್ಸು ಎಷ್ಟು ಪರಿಶುದ್ಧವಾಗಿರಬೇಕೆಂಬುದನ್ನು ಊಹಿಸಬಹುದಾಗಿದೆ. ಇದಕ್ಕಾಗಿಯೇ **ಅಕೃತಾತ್ಮಾನಃ ಅಚೇತಸಃ**–ಎಂದು ಶ್ರೀಕೃಷ್ಣನು ಹೇಳಿದ್ದಾನೆ.

**ಅಕೃತಾತ್ಮಾನಃ**–ಎಂದರೆ ಅಸಂಸ್ಕೃತವಾದ ಆತ್ಮವುಳ್ಳವರು, ಜಿತೇಂದ್ರಿಯರಲ್ಲದವರು, ದರ್ಪ-ದಂಭಗಳನ್ನು ಬಿಡದೇ ಇರತಕ್ಕವರು. **ಅಚೇತಸಃ**–ಎಂದರೆ ಅವಿವೇಕಿಗಳು, ತಿಳಿವಳಿಕೆಯಿಲ್ಲದವರು. ಇಂತಹವರು

ಪ್ರಯತ್ನಿಸಿದರೂ ಆತ್ಮವನ್ನು ಅರಿಯುವುದಿಲ್ಲ. ಇವರು ಪ್ರಯತ್ನಿಸುವುದು ಹೇಗೆ ಮತ್ತು ಇವರ ಪ್ರಯತ್ನವು ಎಂತಹುದು? ಎಂದರೆ ಇಂತಹವರಿಗೆ ಶಾಸ್ತ್ರಮೂಲಕವಾದ ಜ್ಞಾನವಿರಬಹುದು. ಪ್ರಯತ್ನ ಎಂದರೆ ಶಾಸ್ತ್ರಗಳ ಮೂಲಕವಾಗಿ ಆತ್ಮಸ್ವರೂಪವನ್ನು ಮತ್ತು ಅನಾತ್ಮಸ್ವರೂಪವನ್ನು ತಿಳಿದು ಕೊಳ್ಳುವುದು ; ಅಧ್ಯಾತ್ಮಸಾಧನೆಗೆಂದು ಸಂಸಾರವನ್ನು ತೊರೆದುಬಿಡು ವುದು ; ವಿಧಿಪೂರ್ವಕವಾದ ಉಪವಾಸಾದಿಗಳ ಮೂಲಕ ದೇಹವನ್ನು ದಂಡಿ ಸುವುದು–ಇತ್ಯಾದಿ ಪ್ರಯತ್ನಗಳು. ಆದರೆ ಇಷ್ಟರಿಂದಲೇ ಆತ್ಮಸಾಕ್ಷಾತ್ಕಾರವು ಸಾಧ್ಯವಾಗುವುದಿಲ್ಲ. ಇಂದ್ರಿಯಗಳನ್ನು ನಿಗ್ರಹಮಾಡಬೇಕು. ಮನಸ್ಸನ್ನು ಪವಿತ್ರಗೊಳಿಸಬೇಕು. ಅಮಾನಿತ್ವ, ಅದಂಭಿತ್ವ–ಮುಂತಾದ ಇಪ್ಪತ್ತು ನಿಯಮಗಳನ್ನು ಪರಿಪಾಲಿಸಬೇಕು. ಅಂತಹ ಯೋಗಿಗೆ ಮಾತ್ರವೇ ಆತ್ಮದರ್ಶನವು ಸಾಧ್ಯ.)

o o o

**ಯೋಗಿನಃ** = ಸಮಾಹಿತಚಿತ್ತರಾದ ಯೋಗಿಗಳು. **ಆತ್ಮಾನಂ ಪಶ್ಯನ್ತಿ**= ಅದೇ ನಾನಾಗಿದ್ದೇನೆ ಎಂದು ಆತ್ಮ ಸ್ವರೂಪವನ್ನು ಸಾಕ್ಷಾತ್ಕರಿಸಿಕೊಳ್ಳುತ್ತಾರೆ.

**ಅಕೃತಾತ್ಮಾನಃ** = ಶಾಸ್ತ್ರಾದಿಗಳ ಪ್ರಮಾಣದಿಂದ, ತಪಸ್ಸು ಮತ್ತು ಇಂದ್ರಿಯಗಳ ಜಯದಿಂದ ಅಂತಃಕರಣಸಂಸ್ಕಾರವನ್ನು ಪಡೆಯದೇ ಇರು ವವರು, ದುಷ್ಟವಾದ ಆಚಾರಗಳನ್ನು ಬಿಡದವರು, ಶಾಂತಿಯಿಲ್ಲದವರು, ದರ್ಪಿಷ್ಠರು. **ಅಚೇತಸಃ** = ಅವಿವೇಕಿಗಳು. (ಶಂ. ಭಾ.)

ನನ್ನಲ್ಲಿ ಪ್ರಪತ್ತಿಮಾಡುವುದರ ಮೂಲಕ ಕರ್ಮಯೋಗವೇ ಮುಂತಾ ದುವುಗಳಿಂದ ಪ್ರಯತ್ನಿಸುತ್ತಾ ನಿರ್ಮಲವಾದ ಅಂತಃಕರಣವುಳ್ಳ ಯೋಗಿಗಳು ಯೋಗವೆಂಬ ಕಣ್ಣಿನಿಂದ ಆತ್ಮನನ್ನು ಕಾಣುತ್ತಾರೆ. ತಮ್ಮ ಶರೀರದಲ್ಲೇ ಇದ್ದರೂ ಶರೀರದಿಂದ ಬೇರೆಯಾಗಿ ಸ್ವಸ್ವರೂಪದಲ್ಲಿ ಇರುವವನನ್ನಾಗಿ ಅವನನ್ನು ನೋಡುತ್ತಾರೆ. ನನ್ನಲ್ಲಿ ಪ್ರಪನ್ನರಾಗದ ಕಾರಣ ಅಸಂಸ್ಕೃತವಾದ ಮನಸ್ಸುಳ್ಳವರು ಮತ್ತು ಅದೇ ಕಾರಣದಿಂದ ಆತ್ಮನನ್ನು ನೋಡಲು ಸಮರ್ಥವಾದ ಮನಸ್ಸಿಲ್ಲದವರು ಆತ್ಮನನ್ನು ನೋಡಲಾರರು. (ರಾ. ಭಾ.)

**ಯತನ್ತಃ** = ಜ್ಞಾನವನ್ನು ಪಡೆದು ಪ್ರಯತ್ನಮಾಡುವವರು.

**ಅಕೃತಾತ್ಮಾನಃ** = ಅಶುದ್ಧವಾದ ಬುದ್ಧಿಯುಳ್ಳವರು. (ಮ. ಭಾ.)

**ಓಂ ಯದಾದಿತ್ಯಗತಂ ತೇಜೋ ಜಗದ್ಭಾಸಯತೇಽಖಿಲಮ್ ।**
**ಯಚ್ಚನ್ದ್ರಮಸಿ ಯಚ್ಚಾಗ್ನೌ ತತ್ತೇಜೋ ವಿದ್ಧಿ ಮಾಮಕಮ್ ॥**

ಆದಿತ್ಯನಲ್ಲಿರುವ ಯಾವ ತೇಜಸ್ಸು ಜಗತ್ತೆಲ್ಲವನ್ನೂ ಬೆಳಗುತ್ತಿರು ವುದೋ, ಯಾವುದು ಚಂದ್ರನಲ್ಲಿಯೂ ಮತ್ತು ಅಗ್ನಿಯಲ್ಲಿಯೂ ಇರು ವುದೋ ಆ ತೇಜಸ್ಸನ್ನು ನನ್ನದೆಂದು ತಿಳಿ.

* * *

(೧೦ನೆಯ ಅಧ್ಯಾಯದಲ್ಲಿ ವಿಭೂತಿಯೋಗದಲ್ಲಿ ಹೇಳಿದುದನ್ನೇ ಇಲ್ಲಿ ಶ್ರೀಕೃಷ್ಣನು ಶಬ್ದಾಂತರಗಳಿಂದ ಹೇಳಿದ್ದಾನೆ. ಅಲ್ಲಿ **ಜ್ಯೋತಿಷಾಂ ರವಿರಂಶುಮಾನ್**–ಬೆಳಗುವ ಜ್ಯೋತಿಗಳಲ್ಲಿ ನಾನು ಕಿರಣವಿಶಿಷ್ಟನಾದ ಸೂರ್ಯನು–ಎಂದು ಹೇಳಿದ್ದಾನೆ. ಇಲ್ಲಿ ಜಗತ್ತೆಲ್ಲವನ್ನೂ ಬೆಳಗುತ್ತಿರುವ ಆದಿತ್ಯನಲ್ಲಡಗಿರುವ ಜ್ಯೋತಿಯೇ ನನ್ನದೆಂದು ತಿಳಿ–ಎನ್ನುತ್ತಾನೆ. ಸೂರ್ಯನ ತೇಜಸ್ಸೇ ತನ್ನದೆಂದು ಹೇಳಿದ ಮೇಲೆ ಸೂರ್ಯನಿಂದಲೇ ಬೆಳಗುವ ಚಂದ್ರನ ಮತ್ತು ಅಗ್ನಿಯ ತೇಜಸ್ಸುಗಳು ತನ್ನದೆಂದು ಹೇಳುವ ಕಾರಣವೇ ಇರಲಿಲ್ಲ. ಆದರೂ ಸಹ ಸಂಶಯನಿವಾರಣೆಗಾಗಿ ಅದನ್ನೂ ಸಹ ಶ್ರೀಕೃಷ್ಣನು ಉತ್ತರಾರ್ಧದಲ್ಲಿ ಹೇಳಿದ್ದಾನೆ. ಜಗತ್ತೆಲ್ಲವನ್ನೂ ಬೆಳಗುವ ಚಂದ್ರನ ತೇಜಸ್ಸೂ ನನ್ನದೇ ಆಗಿದೆ. ಅಗ್ನಿಯಲ್ಲಿರುವ ಜಾಜ್ವಲ್ಯಮಾನವಾದ ಪ್ರಭೆಯೂ ನನ್ನದೇ ಆಗಿದೆ. ಅರ್ಥಾತ್ ವಾಸುದೇವನದೇ ಆಗಿದೆ. ವಿಭೂತಿಯೋಗದಲ್ಲಿಯೂ **ನಕ್ಷತ್ರಾಣಾಮಹಂ ಶಶೀ** (೧೦-೨೧) **ವಸೂನಾಂ ಪಾವಕಶ್ಚಾಸ್ಮಿ** (೧೦-೨೩) ನಕ್ಷತ್ರಗಳಲ್ಲಿ ನಾನು ಚಂದ್ರನಾಗಿದ್ದೇನೆ ; ವಸುಗಳಲ್ಲಿ ನಾನು ಅಗ್ನಿಯಾಗಿದ್ದೇನೆ–ಎಂದು ಹೇಳಿದ್ದಾನೆ.)

o o o

ಸಮಸ್ತಜಗತ್ತನ್ನೂ ಬೆಳಗುವ ಸೂರ್ಯನಲ್ಲಿರುವ ಯಾವ ಪ್ರಕಾಶ ವುಂಟೋ, ಚಂದ್ರನಲ್ಲಿ ಬೆಳಗುವ ಯಾವ ತೇಜಸ್ಸುಂಟೋ ಮತ್ತು ಅಗ್ನಿಯಲ್ಲಿ ಯಾವ ತೇಜಸ್ಸುಂಟೋ ಅದನ್ನು 'ನನ್ನದು ; ವಿಷ್ಣುವಾದ ನನ್ನ ಜ್ಯೋತಿ'

ಎಂದು ಅರಿ. ಅಥವಾ ಆದಿತ್ಯನಲ್ಲಿಯೂ, ಚಂದ್ರನಲ್ಲಿಯೂ ಮತ್ತು ಅಗ್ನಿಯಲ್ಲಿಯೂ ಯಾವ ಚೈತನ್ಯಾತ್ಮಕವಾದ ಜ್ಯೋತಿಯುಂಟೋ ಅದು ವಿಷ್ಣುವಾದ ಚೈತನ್ಯಮಯವಾದ ನನ್ನ ಜ್ಯೋತಿಯೆಂದು ತಿಳಿ.

ಚೈತನ್ಯಾತ್ಮಕವಾದ ಜ್ಯೋತಿಯು ಸ್ಥಾವರ-ಜಂಗಮಗಳೆರಡರಲ್ಲಿಯೂ ಒಂದೇ ಸಮನಾಗಿರುವಾಗ 'ಆದಿತ್ಯನಲ್ಲಿರುವ' ಎಂಬ ವಿಶೇಷಣವನ್ನು ಜ್ಯೋತಿಗೆ ಏಕೆ ಕೊಡಬೇಕು? ಎಂದರೆ : ಆದಿತ್ಯ ಮುಂತಾದುವುಗಳಲ್ಲಿ ಸತ್ತ್ವವು ಅಧಿಕವಾಗಿರುವುದರಿಂದ ಹಾಗೆ ಹೇಳಿದೆ. ಅವುಗಳಲ್ಲಿ ಸತ್ತ್ವವು ಅತ್ಯಂತಸ್ವಚ್ಛವಾಗಿದೆ. ಆದುದರಿಂದ ಅವುಗಳಲ್ಲಿ ಬ್ರಹ್ಮಜ್ಯೋತಿಯು ಅತ್ಯಂತ ಪ್ರತ್ಯಕ್ಷವಾಗಿ ಪ್ರತಿಭಾಸಿತವಾಗುವುದರಿಂದ ಅದನ್ನು ವಿಶೇಷವಾಗಿ ಹೇಳಿದೆ. ಆದಿತ್ಯ ಮುಂತಾದುವುಗಳಲ್ಲಿಯೇ ಬ್ರಹ್ಮಜ್ಯೋತಿಯು ಹೆಚ್ಚಾಗಿದೆ ಎಂದು ತಿಳಿಯಕೂಡದು. ಗೋಡೆ-ಮರಗಳ ಮುಂದೆ ಎಷ್ಟು ಹೊತ್ತು ನಿಂತರೂ ಮರ ಅಥವಾ ಗೋಡೆಗಳಲ್ಲಿ ಮುಖವು ಪ್ರತಿಬಿಂಬಿಸುವುದಿಲ್ಲ. ಸ್ವಚ್ಛವೂ ಮತ್ತು ಸ್ವಚ್ಛತರವೂ ಆಗಿರುವ ಕನ್ನಡಿ ಮುಂತಾದುವುಗಳಲ್ಲಿ ಆ ತಾರತಮ್ಯದಿಂದಲೇ ಸ್ವಚ್ಛ ಮತ್ತು ಸ್ವಚ್ಛತರವಾಗಿ ಕಂಡುಬರುತ್ತದೆ. ಅದರಂತೆ ಅತ್ಯಧಿಕ ಸ್ವಚ್ಛವಾದ ಆದಿತ್ಯನೇ ಮುಂತಾದ ವಿಷಯಗಳಲ್ಲಿ ತಿಳಿಯಬೇಕು. (ಶಂ. ಭಾ.)

ಅಖಿಲಜಗತ್ತನ್ನೂ ಪ್ರಕಾಶಪಡಿಸುವ ಆದಿತ್ಯ ಮುಂತಾದವರ ಯಾವ ತೇಜಸ್ಸುಂಟೋ ಅದು ನನ್ನ ತೇಜಸ್ಸು. ಅವರಿಂದ ಆರಾಧಿಸಲ್ಪಟ್ಟ ನಾನು ಅವರಿಗೆ ದಯಪಾಲಿಸಿದ ತೇಜಸ್ಸು ಎಂದು ತಿಳಿ. (ರಾ. ಭಾ.)

ಹಿಂದೆ ಹೇಳಿದ ಜ್ಞಾನವನ್ನೇ ಈ ಶ್ಲೋಕದಲ್ಲಿ ವಿಸ್ತಾರಪಡಿಸಿದೆ. **ಅಧಶ್ಚ ಮೂಲಾನ್ಯನುಸನ್ತತಾನಿ** ಎಂಬುದರಿಂದ ಆತನ ಯಾವ ಸರ್ವಾಂತರ್ಯಾಮಿಸ್ವರೂಪದ ವಿಜ್ಞಾನವು ಹೇಳಲ್ಪಟ್ಟಿತೋ, **ಊರ್ಧ್ವ** ಎಂಬ ಶಬ್ದದಿಂದ ಯಾವ ಸರ್ವೋತ್ತಮತ್ವವು ಹೇಳಲ್ಪಟ್ಟಿತೋ–ಅದನ್ನೇ ಅಧ್ಯಾಯದ ಉಳಿದ ಭಾಗದಲ್ಲಿ ವಿಸ್ತಾರಪಡಿಸಿದೆ. (ಮ. ಭಾ.)

**ಓಂ ಗಾಮಾವಿಶ್ಯ ಚ ಭೂತಾನಿ ಧಾರಯಾಮ್ಯಹಮೋಜಸಾ ।**
**ಪುಷ್ಣಾಮಿ ಚೌಷಧೀಃ ಸರ್ವಾಃ ಸೋಮೋ ಭೂತ್ವಾ ರಸಾತ್ಮಕಃ ॥**

ನಾನು ಭೂಮಿಯನ್ನು ಒಳಹೊಕ್ಕು ಪ್ರಾಣಿಗಳನ್ನು ನನ್ನ ಸಾಮರ್ಥ್ಯ

ದಿಂದ ಧರಿಸಿಕೊಂಡಿರುತ್ತೇನೆ ಮತ್ತು ರಸಾತ್ಮಕನಾದ ಸೋಮನಾಗಿ ಸಕಲವಾದ ಓಷಧಿಗಳನ್ನೂ ಪೋಷಿಸುತ್ತೇನೆ.

* * *

(ಶ್ರೀಕೃಷ್ಣನು ಈ ಹಿಂದೆ ವಿಷ್ಟಭ್ಯಾಹಮಿದಂ (೧೦-೪೨) ಸಮಸ್ತ ಜಗತ್ತನ್ನೂ ಒಂದು ಅಂಶದಿಂದ ವ್ಯಾಪಿಸಿಕೊಂಡಿರುವೆನು ಎಂದು ವಿಭೂತಿ ಯೋಗದಲ್ಲಿ ಹೇಳಿದ್ದಾನೆ. ಇಲ್ಲಿ ಪುನಃ ಭೂಮಿಯ ಒಳಹೊಕ್ಕು ಅದರಲ್ಲಿರುವ ಚರಾಚರಗಳನ್ನೂ ತನ್ನ ಬಲದಿಂದಲೇ ಧರಿಸಿರುವುದಾಗಿ ಹೇಳುತ್ತಾನೆ : 'ನಾನು ಈ ಭೂಮಿಯ ಒಳಹೊಕ್ಕು ನನ್ನ ಓಜಸ್ಸಿನಿಂದ ಎಂದರೆ ಸಾಮರ್ಥ್ಯದಿಂದ ಭೂಮಿಯ ಮೇಲಿರುವ ಚರಾಚರಗಳನ್ನೆಲ್ಲಾ ಧರಿಸಿದ್ದೇನೆ.'

**ಸದಾಧಾರಪೃಥಿವೀಂ ದ್ಯಾಂ ।** (ತೈ. ೪-೧-೮) ಆತನೇ ಅಂತರಿಕ್ಷವನ್ನೂ ಪೃಥ್ವಿಯನ್ನೂ ಎತ್ತಿಹಿಡಿದಿರುವನು–ಎಂದು ಶ್ರುತಿಯೂ ಸಾರುತ್ತದೆ.

ಇವನು ಅದರೊಳಗೆ ಪ್ರವೇಶಿಸಿ ಅದನ್ನು ಧರಿಸಿರುವುದರಿಂದಲೇ ಭೂಮಿಯು ತನ್ನ ಮೇಲೆ ಎಷ್ಟೇ ಭಾರವಿದ್ದರೂ ಸುದೃಢವಾಗಿದೆ.

**ಯೇನ ದ್ಯೌರುಗ್ರಾ ಪೃಥಿವೀ ಚ ದೃಢೇ** ತೈ. ೪-೧-೮

ಯಾವನಿಂದ ಅಂತರಿಕ್ಷವೂ ಉಗ್ರವಾದ ಪೃಥಿವಿಯೂ ದೃಢವಾಗಿ ಮಾಡಲ್ಪಟ್ಟಿದೆಯೋ–ಎಂದೂ ಶ್ರುತಿಯು ಸಾರುತ್ತದೆ. ಅರ್ಥಾತ್ ಅವನು ಈ ಪೃಥ್ವಿಯನ್ನು ಧರಿಸಿದ್ದಾನೆ. ಆದುದರಿಂದಲೇ ಈ ಪೃಥ್ವಿಯು ಸುದೃಢವಾಗಿದೆ–ಎಂಬುದನ್ನೂ ಶ್ರುತಿಯು ಸಾರಿದೆ.

ರಸಾತ್ಮಕನಾದ ಸೋಮನಾಗಿ ಎಂದರೆ ಚಂದ್ರನಾಗಿ ಓಷಧಿಲತೆಗಳನ್ನು ಎಂದರೆ ಭತ್ತ, ಗೋಧಿ ಮುಂತಾದ ಫಲ-ಸಸ್ಯಗಳನ್ನೂ, ವೃಕ್ಷಗಳನ್ನೂ, ಹೂ ಬಿಡುವ ಬಳ್ಳಿಗಳನ್ನೂ ಪೋಷಣೆಮಾಡುತ್ತೇನೆ. ಮರ-ಗಿಡ-ಬಳ್ಳಿಗಳ ಅಭಿವೃದ್ಧಿಗೆ ಚಂದ್ರನ ಬೆಳಕು ಅತ್ಯಾವಶ್ಯಕ. ಚಂದ್ರನು ರಸವೇ ಆತ್ಮವಾಗಿ ಉಳ್ಳವನು. ಇಲ್ಲಿ ರಸವೆಂದರೆ ನೀರು. ಚಂದ್ರನು ಜಲಾತ್ಮಕನೆಂದು ಪ್ರಸಿದ್ಧನಾಗಿದ್ದಾನೆ. ಚಂದ್ರಶಬ್ದಕ್ಕೆ ನೀರು ಎಂಬ ಅರ್ಥವೂ ಇದೆ. **ಚನ್ದ್ರೋಽಮ್ಬುಕಾಮ್ಯಯೋಃ । ಸ್ವರ್ಣೇ ಸುಧಾಂಶೌ ಕರ್ಪೂರೇ ಕಾಮ್ಪಿಲ್ಯೇ ಮೇಚಕೇಽಪಿ ಚ ॥** (ಮೇದಿನೀ)

ವನಸ್ಪತಿಗಳ ಪೋಷಣೆಗೆ ನೀರೇ ಮುಖ್ಯವಾಗಿ ಬೇಕಾಗಿರುವುದರಿಂದ ರಸಾತ್ಮಕನಾದ ಸೋಮನಾಗಿ ನಾನು ವನಸ್ಪತಿಗಳನ್ನು ಪೋಷಿಸುತ್ತೇನೆ– ಎಂದು ಭಗವಂತನು ಹೇಳಿದ್ದಾನೆ. ಪರಮಾತ್ಮನಿಗೂ ರಸ ಎಂಬ ಹೆಸರಿದೆ. 'ರಸೋ ವೈ ಸಃ' ಹಿಂದೆ ಹೇಳಿರುವ ಚಂದ್ರ ಮತ್ತು ಇಲ್ಲಿ ಹೇಳಿರುವ ಸೋಮ ಇಬ್ಬರೂ ಒಬ್ಬರೇ. ಬೇರೆ-ಬೇರೆ ಅಲ್ಲ.)

o o o

**ಓಜಸಾ** = ಕಾಮ-ರಾಗವರ್ಜಿತವಾದ ಯಾವ ಈಶ್ವರಸಂಬಂಧವಾದ ಬಲವು ಜಗತ್ತನ್ನು ಧರಿಸುವುದಕ್ಕೋಸ್ಕರ ಭೂಮಿಯಲ್ಲಿ ಪ್ರವೇಶಮಾಡಿದೆಯೋ ಮತ್ತು ಯಾವ ಬಲದಿಂದ ಭಾರವುಳ್ಳ ಭೂಮಿಯು ಕೆಳಗೆ ಬೀಳುವುದಿಲ್ಲವೋ ಮತ್ತು ಸೀಳಿಹೋಗುವುದಿಲ್ಲವೋ–ಆ ಬಲದಿಂದ.

**ಪುಷ್ಣಾಮಿ** = ಪುಷ್ಟಿಯುಳ್ಳವುಗಳನ್ನಾಗಿ ಮಾಡುತ್ತೇನೆ. ರಸವುಳ್ಳವುಗಳನ್ನಾಗಿ ಮಾಡುತ್ತೇನೆ. **ರಸಾತ್ಮಕಃ** = ರಸಸ್ವಭಾವಿಯೂ, ಸರ್ವರಸಗಳಿಗೂ ಆಕರನೂ ಆದ ಸೋಮನು. (ಶಂ. ಭಾ.)

**ಓಜಸಾ** = ಅಪ್ರತಿಹತವಾದ ಸಾಮರ್ಥ್ಯದಿಂದ. **ರಸಾತ್ಮಕಃ** = ಅಮೃತಮಯನಾದ. (ರಾ. ಭಾ.)

**ಗಾಂ** = ಭೂಮಿಯನ್ನು. (ಮ. ಭಾ.)

**ಓಂ ಅಹಂ ವೈಶ್ವಾನರೋ ಭೂತ್ವಾ ಪ್ರಾಣಿನಾಂ ದೇಹಮಾಶ್ರಿತಃ ।**
**ಪ್ರಾಣಾಪಾನಸಮಾಯುಕ್ತಃ ಪಚಾಮ್ಯನ್ನಂ ಚತುರ್ವಿಧಮ್ ॥೧೪॥**

ನಾನು ವೈಶ್ವಾನರರೂಪನಾದ ಅಗ್ನಿಯಾಗಿ ಪ್ರಾಣಿಗಳ ದೇಹದಲ್ಲಿದ್ದುಕೊಂಡು, ಪ್ರಾಣ ಮತ್ತು ಅಪಾನಗಳಿಂದ ಕೂಡಿಕೊಂಡವನಾಗಿ ನಾಲ್ಕು ವಿಧವಾದ ಅನ್ನವನ್ನೂ ಪಚನಮಾಡುತ್ತೇನೆ.

* * *

(ಪರಮಾತ್ಮನು ಪ್ರಾಣಿಗಳ ದೇಹದಲ್ಲಿದ್ದುಕೊಂಡು ಮಾಡುವ ಇತರ ಕ್ರಿಯೆಗಳನ್ನೂ ಹೇಳುತ್ತಾನೆ :

ಪ್ರಾಣಿಗಳ ದೇಹಗಳನ್ನು ಆಶ್ರಯಿಸಿರುವ ನಾನು ವೈಶ್ವಾನರನೆಂಬ ಅಗ್ನಿಯಾಗಿ ಪ್ರಾಣ ಮತ್ತು ಅಪಾನ ಎಂಬ ವಾಯುಗಳಿಂದ ಕೂಡಿದವನಾಗಿ

ಪ್ರಾಣಿಗಳು ತಿನ್ನುವ ನಾಲ್ಕು ವಿಧವಾದ ಅನ್ನವನ್ನೂ ಪಚನಮಾಡುತ್ತೇನೆ, ಎನ್ನುತ್ತಾನೆ ಶ್ರೀಕೃಷ್ಣ.

**ಅಯಮಗ್ನಿರ್ವೈಶ್ವಾನರೋ ಯೋಽಯಮನ್ತಃಪುರುಷೇ ಯೇನೇದ ಮನ್ನಂ ಪಚ್ಯತೇ**–ಯಾರು ಪುರುಷನೊಳಗಿದ್ದುಕೊಂಡು ಅನ್ನವನ್ನು ಅರಗಿಸುವನೋ ಆ ಅಗ್ನಿಯೇ ವೈಶ್ವಾನರನೆಂಬ ಜಠರಾಗ್ನಿಯು–ಎಂದು ಶ್ರುತಿಯೂ ಸಾರುತ್ತದೆ.

ವೈಶ್ವಾನರಾಗ್ನಿಯು ಹೊಕ್ಕಳಿನ ಮೇಲಿರುವುದೆಂದು ಹೇಳುತ್ತಾರೆ. ಪ್ರಾಣವು ಹೃದಯದಲ್ಲಿಯೂ, ಅಪಾನವು ಗುದದಲ್ಲಿಯೂ ಇದೆ. ಅಗ್ನಿಗೆ ವಾಯುವಿನ ಸಹಾಯವು ಬೇಕೇ ಬೇಕಲ್ಲವೇ? ಆದುದರಿಂದಲೇ ಜಠರಾಗ್ನಿಯು ಅಥವಾ ವೈಶ್ವಾನರಾಗ್ನಿಯು ಪ್ರಾಣಾಪಾನಗಳೆಂಬ ಎರಡು ವಾಯುಗಳ ಸಹಕಾರದಿಂದ ನಾಲ್ಕು ವಿಧವಾದ ಅನ್ನವನ್ನೂ ಪಚನಮಾಡುತ್ತಾನೆ. ಅನ್ನವನ್ನು ನಾಲ್ಕು ವಿಧವಾಗಿ ವಿಂಗಡಿಸಿದ್ದಾರೆ. ಭಕ್ಷ್ಯ, ಭೋಜ್ಯ, ಲೇಹ್ಯ ಮತ್ತು ಚೋಷ್ಯ–ಇವುಗಳೇ ನಾಲ್ಕು ಬಗೆಯ ಅನ್ನಗಳು. ತಿನ್ನುವುದಾದುದರಿಂದ ಈ ಎಲ್ಲಕ್ಕೂ ಅನ್ನವೆಂದೇ ಹೆಸರು. **ಅದ್ಯತೇ ಇತಿ ಅನ್ನಂ. (ಅದ–ಭಕ್ಷಣೇ)**

**ಭಕ್ಷ್ಯಂ** = ಹಲ್ಲುಗಳಿಂದ ಜಗಿದು ಚೂರುಮಾಡಿಕೊಂಡು ತಿನ್ನುವ ಆಹಾರ. ಕೇವಲ ಭಕ್ಷಣವೇ ಕ್ರಿಯೆಯಾಗಿ ಉಳ್ಳ ಭಕ್ಷ್ಯಗಳು. ಅಗಿದು ರಸವನ್ನು ಆಸ್ವಾದಿಸುತ್ತಾ ನುಂಗುವ ಪದಾರ್ಥಗಳು. ಕೋಡುಬಳೆ, ಮುಚ್ಚೋರೆ, ತೇಂಗೊಳಲು–ಮುಂತಾದುವು.

**ಭೋಜ್ಯಂ** = ಮೃದುವಾಗಿರುವುದರಿಂದ ಹಲ್ಲುಗಳಿಂದ ಕಚ್ಚಿ ಚೂರು ಮಾಡದೇ ಹಾಗೆಯೇ ನಾಲಿಗೆಯಿಂದಲೇ ಅಗಿದು ನುಂಗುವ ಆಹಾರ. ಬಾಯಿಗೆ ಹಾಕಿಕೊಂಡು ಅಗಿಯದೇ ನುಂಗುವ ಪದಾರ್ಥಗಳು. ಅನ್ನ, ತೊವ್ವೆ, ಹಿಟ್ಟು ಮುಂತಾದುವು.

**ಲೇಹ್ಯಂ** = ನೆಕ್ಕಿ ತಿನ್ನುವ ಆಹಾರ. ಪಾಯಸ, ಗೊಜ್ಜು ಮುಂತಾದುವು.

**ಚೋಷ್ಯಂ**= ಹಲ್ಲು-ನಾಲಿಗೆ ಮುಂತಾದುವುಗಳಿಂದ ಅಗಿದು ಸಾರವನ್ನು ಹೀರಿಕೊಂಡು ಉಳಿದುದನ್ನು ಉಗಿಯುವ ಕಬ್ಬುಜಲ್ಲೆ–ಮುಂತಾದುವು.

ಕೇವಲ ನುಂಗುವ ಕೆಲಸ ಒಂದು ಹೊರತಾಗಿ ಉಳಿದ ಎಲ್ಲ ಕೆಲಸಗಳೂ ವೈಶ್ವಾನರರೂಪನಾದ ಪರಮಾತ್ಮನದೇ ಆಗಿದೆ. ಈ ನಾಲ್ಕು ವಿಧವಾದ ಅನ್ನಗಳನ್ನು ಅರಗಿಸುವುದೆಂದರೆ ಕೇವಲ ಅವು ಇಲ್ಲದಂತೆ ಮಾಡುವುದಲ್ಲ. ಅದನ್ನು ಅರಗಿಸಿ ಪ್ರತ್ಯೇಕಿಸಿ ಸಾರವಾದ ಅಂಶವನ್ನು ಒಂದು ಕಡೆಗೂ, ನಿಸ್ಸಾರವಾದ ಅಂಶವನ್ನು ಮತ್ತೊಂದು ಕಡೆಗೂ ಕಳುಹಿಸುವ ಕಾರ್ಯವೂ ಅವನದೇ ಆಗಿದೆ. ನಾವು ದೈನಂದಿನವಾಗಿ ತಿನ್ನುವ ಆಹಾರಪದಾರ್ಥಗಳನ್ನು ಕುಟ್ಟಿ ರಕ್ತವನ್ನು ಸಿದ್ಧಪಡಿಸುವ ಸಾಧ್ಯತೆಯಿಲ್ಲ. ವೈಶ್ವಾನರನು ನಾವು ತಿನ್ನುವ ಆಹಾರವನ್ನು ಅರಗಿಸುವುದು ಮಾತ್ರವಲ್ಲದೇ ಅದರಿಂದ ರಕ್ತದ ಉತ್ಪತ್ತಿ ಮಾಡಿ ರಕ್ತವನ್ನು ವೃದ್ಧಿಪಡಿಸುತ್ತಾನೆ. ಮಾಂಸವನ್ನು ವೃದ್ಧಿಪಡಿಸುತ್ತಾನೆ. ಮಜ್ಜೆಯನ್ನೂ, ರೇತಸ್ಸನ್ನೂ ವೃದ್ಧಿಪಡಿಸುತ್ತಾನೆ ಎಂದರೆ ಎಂತಹ ಯಂತ್ರ ವಿದು! ಎಂತಹ ಮಹಾಯಾಂತ್ರಿಕನವನು! ಕ್ಷಣಕಾಲಮಾತ್ರವಾದರೂ ಯೋಚಿಸಿದರೆ ಅವನ ಪರಮಾದ್ಭುತಶಕ್ತಿಯ ಅರಿವಾಗುತ್ತದೆ. ಭೋಜನದ ವೇಳೆಯಲ್ಲಿ ಅಹಂ ವೈಶ್ವಾನರೋ ಭೂತ್ವಾ–ಎಂಬ ಈ ಶ್ಲೋಕವನ್ನು ಪಠಿಸುವ ಶಿಷ್ಟಸಂಪ್ರದಾಯವಿದೆ.)

o o o

ಭೋಕ್ತೃವು (ಭುಂಜಿಸುವವನು) ವೈಶ್ವಾನರಾಗ್ನಿ, ತಿನ್ನಲ್ಪಡುವ ಅನ್ನವು ಸೋಮ. ಆದುದರಿಂದ ಈ ಜಗತ್ತೆಲ್ಲವೂ ಅಗ್ನೀಸೋಮಸ್ವರೂಪವಾದುದು=ಎಂದು ನೋಡುವ ಮನುಷ್ಯನಿಗೆ ಅನ್ನದೋಷದ ಲೇಪವಾಗುವುದಿಲ್ಲ. (ಶಂ. ಭಾ.)

**ಪ್ರಾಣಾಪಾನಸಮಾಯುಕ್ತಃ** = ಪ್ರಾಣ, ಅಪಾನ–ಮುಂತಾದ ವೃತ್ತಿಭೇದಗಳೊಡನೆ ಕೂಡಿದವನಾಗಿ. ಒಂದೇ ಪ್ರಾಣಕ್ಕೆ ಶರೀರದಲ್ಲಿ ಅನೇಕ ವೃತ್ತಿಗಳು.

**ಪಞ್ಚವೃತ್ತಿರ್ಮನೋವದ್ವ್ಯಪದಿಶ್ಯತೇ ।** ಬ್ರ. ಸೂ. ೨-೪-೧೧

**ಪ್ರಾಣೋಽಪಾನೋ ವ್ಯಾನ ಉದಾನಃ ಸಮಾನಃ ಇತ್ಯೇತತ್ಸರ್ವಂ ಪ್ರಾಣ ಏವ** ಬೃ. ೧-೫-೩

**ಚತುರ್ವಿಧಂ ಅನ್ನಂ** = ಖಾದ್ಯ-ಚೋಷ್ಯ-ಲೇಹ್ಯ-ಪಾನೀಯಗಳೆಂಬ ನಾಲ್ಕು ಬಗೆಯ ಅನ್ನಗಳನ್ನು. (ರಾ. ಭಾ.)

**ಓಂ ಸರ್ವಸ್ಯ ಚಾಹಂ ಹೃದಿ ಸಂನಿವಿಷ್ಟೋ**
**ಮತ್ತಃ ಸ್ಮೃತಿರ್ಜ್ಞಾನಮಪೋಹನಂ ಚ ।**
**ವೇದೈಶ್ಚ ಸರ್ವೈರಹಮೇವ ವೇದ್ಯೋ**
**ವೇದಾನ್ತಕೃದ್ವೇದವಿದೇವ ಚಾಹಮ್ ॥೧೫॥**

ನಾನು ಎಲ್ಲರ ಹೃದಯಗಳಲ್ಲಿಯೂ ಇದ್ದುಕೊಂಡಿರುವೆನು. ನನ್ನಿಂದಲೇ ಸ್ಮರಣೆಯೂ, ಜ್ಞಾನವೂ, ಅವುಗಳ ನಾಶವೂ ಆಗುವುವು. ಸರ್ವವೇದಗಳಿಗೂ ನಾನೇ ವೇದ್ಯನು. ವೇದಾಂತಕರ್ತೃವೂ ಮತ್ತು ವೇದವಿದನೂ ನಾನೇ ಆಗಿದ್ದೇನೆ.

* * *

(**ಸರ್ವಸ್ಯ ಚಾಹಂ ಹೃದಿ ಸಂನಿವಿಷ್ಟಃ** = ಸರ್ವಪ್ರಾಣಿಗಳ ಹೃದಯಗಳಲ್ಲಿಯೂ ನಾನು ಚೆನ್ನಾಗಿ ಇದ್ದೇನೆ ; ಸ್ಪಷ್ಟವಾಗಿ ಇದ್ದೇನೆ ; ಪೂರ್ಣರೂಪದಿಂದ ಇದ್ದೇನೆ. ನನ್ನಿಂದಲೇ ಪ್ರಾಣಿಗಳಿಗೆ ಸ್ಮರಣಶಕ್ತಿ, ಜ್ಞಾನ, ಅಪೋಹನ ಮತ್ತು ಸ್ಮೃತಿಯು ತಪ್ಪುವಿಕೆ ಅಥವಾ ಸಂಶಯದ ನಿವಾರಣೆಗಳೂ ಆಗುತ್ತವೆ. ಸ್ಮೃತಿ ಎಂದರೆ ಹಿಂದೆ ನೋಡಿದುದನ್ನು ಕೇಳಿದುದನ್ನು ನೆನಪಿಗೆ ತಂದುಕೊಳ್ಳುವುದು. ಸ್ಮರಣಶಕ್ತಿಯಿಲ್ಲದಿದ್ದರೆ ಮನುಷ್ಯನು ಜೀವನವನ್ನೇ ನಡೆಸಲಾರನು. ಬ್ರಹ್ಮಜ್ಞಾನಕ್ಕಾಗಲೀ–ಪ್ರಾಪಂಚಿಕವ್ಯವಹಾರಕ್ಕಾಗಲೀ ಸ್ಮರಣಶಕ್ತಿಯು ಬಹುಮುಖ್ಯವಾದುದು. ಅಂತಹ ಅದ್ಭುತಶಕ್ತಿಯನ್ನು ಪರಮಾತ್ಮನು ಪ್ರಾಣಿಗಳಿಗೆ (ಮನುಷ್ಯರಿಗೆ) ಅನುಗ್ರಹಿಸಿದ್ದಾನೆ. ಜ್ಞಾನ ಎಂದರೆ ವ್ಯವಹಾರಜ್ಞಾನವೂ ಆಗಬಹುದು ; ಬ್ರಹ್ಮಜ್ಞಾನವೂ ಆಗಬಹುದು. ಎರಡನ್ನೂ ದಯಪಾಲಿಸುವವನೂ ಅವನೇ ಆಗಿದ್ದಾನೆ. ಅಪೋಹನಂ = ಎಲ್ಲ ಸಂಶಯಗಳನ್ನೂ ಅವನೇ ಪರಿಹರಿಸುತ್ತಾನೆ. ಊಹನ = ಸಂಶಯ, ಆತ್ಮನ ಅಸ್ತಿತ್ವದಲ್ಲಿ ಸಂಶಯ. ಅದನ್ನು ಹೋಗಲಾಡಿಸುವುದು ಅಪೋಹನ. ಅವನ ಅನುಗ್ರಹವಿದ್ದರೆ ಆತ್ಮತತ್ತ್ವದ ವಿಷಯವಾಗಿ ಯಾವ ಸಂಶಯವೂ ಉಳಿಯುವುದಿಲ್ಲ.

ಅಥವಾ ಅಪೋಹನ ಎಂದರೆ ಸ್ಮೃತಿಯು ತಪ್ಪುವಿಕೆ. ನೆನಪಿನಲ್ಲಿಡಲು ಯೋಗ್ಯವಾದ ಲೌಕಿಕ ಅಥವಾ ಪಾರಮಾರ್ಥಿಕವಿಷಯಗಳನ್ನು ಸ್ಮೃತಿ

ಯಲ್ಲಿಟ್ಟುಕೊಳ್ಳುವುದು ಎಷ್ಟು ಆವಶ್ಯಕವೋ ಹಾಗೆಯೇ ಮರೆಯಬೇಕಾದ ವಿಷಯಗಳನ್ನೂ ಮರೆತು ನೆಮ್ಮದಿಯಾಗಿರುವುದೂ ಅಷ್ಟೇ ಮುಖ್ಯ. ಆದುದ ರಿಂದ ಸ್ಮರಣಶಕ್ತಿಯು ಹೇಗೆ ದೈವಾನುಗ್ರಹದಿಂದ ಬರಬೇಕೋ ಹಾಗೆಯೇ ವಿಸ್ಮರಣಶಕ್ತಿಯೂ ದೈವಾನುಗ್ರಹದಿಂದಲೇ ಬರಬೇಕು. ಪರಸ್ಪರವೈರ, ಕಹಿ ಯಾದ ನೆನಪುಗಳು, ಜನ್ಮಾಂತರದ ಕರ್ಮಗಳು–ಇವುಗಳ ನೆನಪುಗಳೆಲ್ಲಾ ಹಾಗೆಯೇ ಉಳಿದುಬಿಟ್ಟರೆ ಅದರಿಂದ ಬುದ್ಧಿವಿಕಲ್ಪವಾಗುವುದೂ ಉಂಟು. ಭಯಂಕರವಾದ ಕನಸನ್ನು ಕಂಡ ನೆನಪು ಉಳಿದರೂ ಕೂಡ ಅದು ಎಷ್ಟು ಅಸಹ್ಯವಾಗಿರುತ್ತದೆ? ಆದುದರಿಂದ ಅವಶ್ಯವಾದ ಸಮಯದಲ್ಲಿ ಬರುವ ಮರವೆಯೂ ಕೂಡ ದೇವರ ವರದಾನವೆಂದೇ ತಿಳಿಯಬೇಕು. ಹಾಗೆಯೇ ಕೆಲವು ವಿಷಯಗಳ ಬಗೆಗೆ ಅಜ್ಞಾನವಿರುವುದೂ ಕೂಡ ನೆಮ್ಮದಿಗಾಗಿಯೇ.

ಬಲಿಗಾಗಿ ಒಯ್ಯಲ್ಪಡುತ್ತಿರುವ ಆಡಿಗೆ ಕೊನೆಯ ಸಮಯದವರೆಗೂ ತನಗೆ ಉಂಟಾಗುವ ದುರಂತದ ಅರಿವೇ ಇರುವುದಿಲ್ಲ. ಆ ವಿಷಯದ ಪರಿಚಯವು ಮೊದಲೇ ಇದ್ದುಬಿಟ್ಟಿದ್ದರೆ ಅದಕ್ಕೆ ಎಷ್ಟು ಸಂಕಟವಾಗುತ್ತಿತ್ತು? ಹೀಗೆ ಕೆಲವೊಮ್ಮೆ ಜ್ಞಾನ ಮತ್ತು ಸ್ಮೃತಿಗಳ ನಿವೃತ್ತಿಯೂ ಕೂಡ ಒಳ್ಳೆಯದಕ್ಕೇ ಆಗುತ್ತದೆ. ಇದಲ್ಲದೇ ಎಲ್ಲ ವೃತ್ತಿಗಳೂ ಉಂಟಾಗುವುದು ಭಗವಂತನಿಂದಲೇ. ಸ್ಮರಣೆ-ವಿಸ್ಮರಣೆ, ಜ್ಞಾನ-ಅಜ್ಞಾನ ಎಲ್ಲವೂ ಅವನಿಂದಲೇ ಉಂಟಾಗುತ್ತವೆ.

ಎಲ್ಲ ವೇದಗಳಿಂದಲೂ ತಿಳಿಯಲ್ಪಡತಕ್ಕವನೂ ನಾನೇ ಆಗಿರುತ್ತೇನೆ. ವೇದಗಳೆಲ್ಲವೂ ನನ್ನನ್ನೇ ಉದ್ದೇಶಿಸಿ ಹೇಳುತ್ತವೆ. ಅದು ಕರ್ಮಕಾಂಡ ವಾಗಲೀ, ಉಪಾಸನಾಕಾಂಡವಾಗಲೀ, ಜ್ಞಾನಕಾಂಡವೇ ಆಗಲೀ–ಎಲ್ಲ ವಿಧಾನಗಳಿಂದಲೂ ನಾನೇ ವೇದ್ಯನು ಅಥವಾ ಪ್ರಾಪ್ಯನು ಎನ್ನುತ್ತಾನೆ ಶ್ರೀಕೃಷ್ಣ.

**ಸರ್ವೇ ವೇದಾ ಯತ್ಪದಮಾಮನನ್ತಿ**–'ಎಲ್ಲ ವೇದಗಳೂ ಯಾವ ವೈಷ್ಣವಪದವನ್ನು ಬೋಧಿಸುತ್ತವೆಯೋ'–ಎಂದು ಶ್ರುತಿಯೇ ಹೇಳುತ್ತದೆ.

**ವೇದಾನ್ತಕೃತ್ :** ವೇದಾಂತ ಎಂದರೆ ತತ್ತ್ವಶಾಸ್ತ್ರ ಅರ್ಥಾತ್ ಈಗ ಹೇಳುತ್ತಿರುವ ಗೀತೆಯೇ ಮುಂತಾದ ಎಲ್ಲ ಅಧ್ಯಾತ್ಮಶಾಸ್ತ್ರಗಳ ಪ್ರವರ್ತಕನು ಆದಿಗುರುವಾದ ನಾನೇ ಆಗಿರುತ್ತೇನೆ. **ವೇದವಿತ್** = ಎಲ್ಲ ವೇದಗಳನ್ನೂ

ತಿಳಿದಿರುವವನೂ ಸಹ ನಾನೇ ಆಗಿರುತ್ತೇನೆ. ಅಥವಾ ವೇದಾನ್ತಕೃತ್ ಎಂದರೆ ವೇದಗಳ ಫಲವನ್ನು ಕೊಡತಕ್ಕವನು ನಾನೇ ಆಗಿದ್ದೇನೆ.

**ಯೋ ಬ್ರಹ್ಮಾಣಂ ವಿದಧಾತಿ ಪೂರ್ವಂ ।**
**ಯೋ ವೈ ವೇದಾಗ್ಂಶ್ಚ ಪ್ರಹಿಣೋತಿ ತಸ್ಮೈ ॥**

ತನ್ನ ಉಸಿರೇ ಆಗಿರುವ ಅನಂತವಾದ ವೇದಗಳ ಎಲ್ಲ ರಹಸ್ಯಗಳನ್ನೂ ಬಲ್ಲ ಸರ್ವಜ್ಞನಾಗಿ ಆದಿಕವಿಯಾದ ಬ್ರಹ್ಮನಿಗೆ ಅದನ್ನು ಉಪದೇಶಮಾಡಿದವನು ಆ ಪರಬ್ರಹ್ಮಪರಮಾತ್ಮನೇ.)

o o o

**ಮತ್ತಃಸ್ಮೃತಿಃ ಜ್ಞಾನಮಪೋಹನಂ ಚ** =ಪುಣ್ಯಕರ್ಮಗಳನ್ನು ಮಾಡಿದ ಪ್ರಾಣಿಗಳಿಗೆ ತಮ್ಮ ಕರ್ಮಾನುಗುಣವಾಗಿ ಯಾವ ಜ್ಞಾನ ಮತ್ತು ಸ್ಮೃತಿಗಳು ಉಂಟಾಗುತ್ತವೆಯೋ ಮತ್ತು ಪಾಪಕರ್ಮಿಗಳಿಗೆ ಅವರ ಕರ್ಮಾನುಗುಣವಾಗಿ ವಿಸ್ಮೃತಿ ಮತ್ತು ಜ್ಞಾನನಿವೃತ್ತಿಗಳುಂಟಾಗುತ್ತ ವೆಯೋ–ಅವೆಲ್ಲವೂ ನನ್ನಿಂದಲೇ ಉಂಟಾಗುತ್ತವೆ.

**ವೇದಾನ್ತಕೃತ್** = ವೇದಾಂತಾರ್ಥಿಕಸಂಪ್ರದಾಯವನ್ನು ತಂದವನು.

(ಶಂ. ಭಾ.)

**ಸರ್ವಸ್ಯ ಚಾಹಂ... ಸಂನಿವಿಷ್ಟಃ** = ಮೇಲೆ ಹೇಳಿದ ಸೋಮ ಮತ್ತು ವೈಶ್ವಾನರರಿಗೂ ಮತ್ತು ಎಲ್ಲ ಭೂತಕೋಟಿಗಳಿಗೂ, ಎಲ್ಲ ಪ್ರವೃತ್ತಿ-ನಿವೃತ್ತಿಗಳಿಗೂ ಮೂಲಸ್ಥಾನವಾದ ಹೃದಯದಲ್ಲಿ ನನ್ನ ಸಂಕಲ್ಪದಿಂದ ಎಲ್ಲವನ್ನೂ ನಿಯಮಿಸುತ್ತಾ ಆತ್ಮಭೂತನಾಗಿ ಕುಳಿತಿರುವವನು ನಾನು.

**ಅನ್ತಃಪ್ರವಿಷ್ಟಃ ಶಾಸ್ತಾ ಜನಾನಾಂ ।** ಆ ೨-೨-೧೧

**ಯಃ ಪೃಥಿವ್ಯಾಂ ತಿಷ್ಠನ್ ।** ಬೃ. ೫-೭-೩

**ಪದ್ಮಕೋಶಪ್ರತೀಕಾಶಗ್ಂ ಹೃದಯಂ ಚಾಪ್ಯಧೋಮುಖಮ್ ।**

ಮಹಾನಾರಾಯಣೀಯ

**ಅಥ ಯದಿದಮಸ್ಮಿನ್ ಬ್ರಹ್ಮಪುರೇ ದಹರಂ ಪುಣ್ಡರೀಕಂ ವೇಶ್ಮ**

ಛಂ. ೮-೧-೧

ಮುಂತಾದ ಶ್ರುತಿಗಳೂ

**ಶಾಸ್ತಾ ವಿಷ್ಣುರಶೇಷಸ್ಯ ಜಗತೋ ಯೋ ಜಗನ್ಮಯಃ**
ವಿ.ಪು. ೧-೧೭-೨೦

**ಪ್ರಶಾಸಿತಾರಂ ಸರ್ವೇಷಾಂ ಅಣೀಯಾಂಸಮಣೋರಪಿ**
ಮನು. ೧೨-೧೧೨

**ಯಮೋ ವೈವಸ್ವತೋ ರಾಜಾ ಹ್ಯೇಷ ವೈ ಹೃದಿ ಸಂಸ್ಥಿತಃ**
ಮನು. ೮-೯೨

ಮುಂತಾದ ಸ್ಮೃತಿಗಳೂ ಈ ಅಭಿಪ್ರಾಯವನ್ನೇ ಹೇಳುತ್ತವೆ.

**ಸ್ಮೃತಿಃ**–ಎಂದರೆ ಹಿಂದೆ ವಿಷಯವನ್ನನುಭವಿಸಿ ಆ ಅನುಭವದ ಸಂಸ್ಕಾರಮಾತ್ರದಿಂದ ಉಂಟಾಗುವ ಜ್ಞಾನ. **ಜ್ಞಾನಂ**–ಎಂದರೆ ಇಂದ್ರಿಯ ಗಳಿಂದ ಸಾಕ್ಷಾತ್ತಾಗಿ ವಿಷಯಗಳನ್ನು ಅನುಭವಿಸಿ ಹೊಂದುವ ವಸ್ತುನಿಶ್ಚಯ.

**ಅಪೋಹನಂ**–ಎಂದರೆ ಜ್ಞಾನದ ನಿವೃತ್ತಿ ಅಥವಾ ಊಹನೆ. ಇವೆಲ್ಲವೂ ನನ್ನಿಂದಲೇ ಉಂಟಾಗುವುದು. ಎಲ್ಲ ವೇದಗಳಿಂದಲೂ ಅರಿಯಲ್ಪಡತಕ್ಕವನು ನಾನೇ. ಆದುದರಿಂದ ಅಗ್ನಿ, ಸೂರ್ಯ–ಮುಂತಾದವರೆಲ್ಲರಿಗೂ ನಾನೇ ಅಂತರ್ಯಾಮಿಯೂ ಆತ್ಮವೂ ಆಗಿರುವುದರಿಂದ ಅವುಗಳನ್ನು ಪ್ರತಿಪಾದಿಸುವ ಎಲ್ಲ ವೇದಗಳೂ ನನ್ನನ್ನೇ ತಿಳಿಸುತ್ತವೆ. ದೇವ, ಮನುಷ್ಯ–ಮುಂತಾದ ಶಬ್ದಗಳಿಂದ ಜೀವಾತ್ಮವು ತಿಳಿಯಲ್ಪಡುವಂತೆ ಆಯಾ ದೇವತಾವಿಷಯವಾದ ಮಂತ್ರಗಳಿಂದ ಆಯಾ ದೇವತೆಗಳಿಗೆ ಆತ್ಮನಾದ ನಾನೇ ತಿಳಿಯಲ್ಪಡುತ್ತೇನೆ.

**ವೇದಾನ್ತಕೃತ್** = ವೇದಗಳು ಹೇಳುವ ಫಲವನ್ನು ಕೊಡುವವನು. ಎಲ್ಲ ವೇದಗಳಿಗೂ ಪರ್ಯವಸಾನವು ಅವುಗಳ ಫಲದಲ್ಲಿಯೇ ಆದುದರಿಂದ ವೇದಾಂತವೆಂದರೆ ವೇದಗಳ ಫಲ. **ವೇದವಿತ್** = ಹೀಗೆ ನನ್ನನ್ನು ಪ್ರತಿಪಾದಿ ಸುವ ವೇದಗಳನ್ನು ನಾನೇ ಅರಿತಿರುವವನು. ಇದಕ್ಕಿಂತಲೂ ಬೇರೆಯಾಗಿ ವೇದಾರ್ಥವನ್ನು ಹೇಳುವವನು ವೇದವಿದನಲ್ಲ. (ರಾ. ಭಾ.)

**ವೇದಾನ್ತಕೃತ್** = ವೇದಾಂತ – ಎಂದರೆ ವೇದನಿರ್ಣಯಾತ್ಮಕವಾದ

ಮೀಮಾಂಸೆ. ವೇದ-ವೇದಾರ್ಥ, ಅದರ ಅಂತ ಎಂದರೆ ನಿರ್ಣಯ. ನಿರ್ಣಯಾತ್ಮಕವಾದ ಬ್ರಹ್ಮಮೀಮಾಂಸೆ. ಅದನ್ನು ಮಾಡಿದವನು. ಪರಮಾತ್ಮನೇ ಯುಕ್ತಿಸೂತ್ರವನ್ನು ಮಾಡಿದವನು. ವೇದಾರ್ಥನಿರ್ಣಯಕ್ಕಾಗಿ ಯುಕ್ತಿಸೂಚಕವಾದ ವಾಕ್ಯಗಳನ್ನು ಮಾಡಿದವನು. (ಮ. ಭಾ.)

**ಓಂ ದ್ವಾವಿಮೌ ಪುರುಷೌ ಲೋಕೇ ಕ್ಷರಶ್ಚಾಕ್ಷರ ಏವ ಚ ।**
**ಕ್ಷರಃ ಸರ್ವಾಣಿ ಭೂತಾನಿ ಕೂಟಸ್ಥೋಽಕ್ಷರ ಉಚ್ಯತೇ ॥೧೬॥**

ಪ್ರಪಂಚದಲ್ಲಿ ಕ್ಷರ ಮತ್ತು ಅಕ್ಷರ ಎಂಬ ಇಬ್ಬರು ಪುರುಷರಿರುವರು. ಕ್ಷರನೆಂದರೆ ಎಲ್ಲ ಭೂತಗಳು. ಕೂಟಸ್ಥನು ಅಕ್ಷರನೆನಿಸುತ್ತಾನೆ.

* * *

(ಭಗವಂತನು ತಾನು ಕ್ಷರ ಮತ್ತು ಅಕ್ಷರ ಎಂಬ ಇಬ್ಬರು ಪುರುಷರಿಗಿಂತಲೂ ಶ್ರೇಷ್ಠನಾದ ಪುರುಷೋತ್ತಮನು–ಎಂಬುದನ್ನು ಪ್ರತಿಪಾದಿಸಲು ಕ್ಷರ ಮತ್ತು ಅಕ್ಷರಪುರುಷರು ಯಾರು ಎಂಬುದನ್ನು ಈ ಶ್ಲೋಕದಲ್ಲಿ ನಿರೂಪಿಸುತ್ತಾನೆ.

ಪುರುಷರು ಕ್ಷರ ಮತ್ತು ಅಕ್ಷರ ಎಂದು ಎರಡು ಬಗೆ. ಕ್ಷರ ಎಂದರೆ ನಾಶಹೊಂದುವವನು. ವಿಕಾರಹೊಂದುವವನು. ವಿಕಾರಹೊಂದುವ ಪುರುಷ ಎಂದರೆ ಪ್ರಕೃತಿಯ ವಿಕಾರಗಳಾದ ಎಲ್ಲ ಭೂತಗಳು–ವ್ಯಕ್ತಪ್ರಕೃತಿ. ಭೂತವೆಂದರೆ ಭೂತಶಬ್ದಕ್ಕೆ ಪ್ರಾಣಿ ಎಂಬ ಅರ್ಥದಲ್ಲೂ ವ್ಯವಹಾರವಿದೆ. ನಾಶಹೊಂದುವ ಭೂತಗಳು ಎಂದರೆ ಜನನ-ಮರಣಾದಿಗಳಿಗೆ ವಶವಾಗುವ ಭೂತಗಳು–ಪ್ರಕೃತಿಸಂಸರ್ಗವೆಂಬ ವಿಕಾರಕ್ಕೆ ಒಳಗಾಗುವ ಪ್ರಾಣಿಗಳು.

**ಅಕ್ಷರಪುರುಷ**–ಎಂದರೆ ನಾಶಹೊಂದದೇ ಇರುವ ಪುರುಷ, ವಿಕಾರ ಹೊಂದದೇ ಇರುವ ಪುರುಷ. ಅದಕ್ಕೆ ಕೂಟಸ್ಥ ಎಂಬ ವಿಶೇಷಣವನ್ನು ಭಗವಂತನು ಕೊಟ್ಟಿದ್ದಾನೆ. ಕೂಟ ಎಂದರೆ ರಾಶಿ. ಎಲ್ಲ ಭೂತಗಳಿಗೂ ಮೂಲಪ್ರಕೃತಿಯನ್ನು ಕೂಟಸ್ಥ ಎಂದು ಕರೆಯಬಹುದು. ಇದು ಅನಾದಿಯಾದುದರಿಂದ ಅವಿಕಾರಿಯೂ ಆಗಿದೆ. ಆದುದರಿಂದ ಅಕ್ಷರಪುರುಷ ಎಂದರೆ ಮೂಲಪ್ರಕೃತಿ.

**ಸಂಯುಕ್ತಮೇತತ್ಕ್ಷರಮಕ್ಷರಂ ಚ ।**
**ವ್ಯಕ್ತಾವ್ಯಕ್ತಂ ಭರತೇ ವಿಶ್ವಮೀಶಃ ॥**

ಪರಸ್ಪರವಾಗಿ ಸೇರಿಕೊಂಡಿರುವ ಕ್ಷರವೂ-ಅಕ್ಷರವೂ, ವ್ಯಕ್ತವೂ–ಅವ್ಯಕ್ತವೂ ಆದ ಈ ಜಗತ್ತನ್ನು ಈಶ್ವರನು ಧರಿಸಿರುತ್ತಾನೆ.

ಇಲ್ಲಿ ಕ್ಷರ ಮತ್ತು ಅಕ್ಷರ–ಎಂದರೆ ವ್ಯಕ್ತ ಮತ್ತು ಅವ್ಯಕ್ತಪ್ರಕೃತಿಗಳೆಂಬ ಅಭಿಪ್ರಾಯವು ಕಂಡುಬರುತ್ತದೆ. ಆದುದರಿಂದ ಗೀತೆಯಲ್ಲಿ ಹೇಳಿರುವ ಕ್ಷರ ಮತ್ತು ಅಕ್ಷರಶಬ್ದಗಳಿಗೆ ವ್ಯಕ್ತ ಮತ್ತು ಅವ್ಯಕ್ತಪ್ರಕೃತಿ ಎಂಬ ಅಭಿಪ್ರಾಯವನ್ನು ಹೇಳಬಹುದು.

ಕೂಟಸ್ಥ ಎಂಬ ಶಬ್ದಕ್ಕೆ ಕೂಟದಂತೆ ಅಡಿಗಲ್ಲಿನಂತೆ ನಿಶ್ಚಲನಾಗಿರುವವನು–ಎಂಬ ಅರ್ಥವನ್ನು ಹೇಳಬಹುದು. **ಜೀವಃ ಕೂಟವತ್ ನಿರ್ವಿಕಾರೇಣ ನಿಶ್ಚಲಃ ಸನ್ ಸಾಧಾರಣಾಕಾರೇಣ ತಿಷ್ಠತಿ ಇತಿ ಕೂಟಸ್ಥಃ.** ಅಕ್ಷರನಾದ ಜೀವ ಎಂದರೆ ಪ್ರಕೃತಿಸಂಬಂಧವಿಲ್ಲದಿರುವ ಸಮಾಧಿಸ್ಥನಾದ ಶುದ್ಧನಾಗಿರುವ ಆತ್ಮ.

**ಅಕ್ಷರಂ ಬ್ರಹ್ಮ ಪರಮಂ । ಯೇ ತ್ವಕ್ಷರಮನಿರ್ದೇಶ್ಯಂ**–ಎಂಬ ಜಾಗಗಳಲ್ಲಿ ಹಿಂದೆ ಅಕ್ಷರ ಮತ್ತು ಅವ್ಯಕ್ತಶಬ್ದಗಳನ್ನೂ ಶುದ್ಧಚೈತನ್ಯಕ್ಕೆ ವಾಚಕಗಳನ್ನಾಗಿ ಭಗವಂತನು ಹೇಳಿದ್ದಾನೆ. ಆದುದರಿಂದ ಕೂಟಸ್ಥನಾದ ಅಕ್ಷರ ಎಂದರೆ ಶುದ್ಧನಾಗಿರುವ ಜೀವ. ಕ್ಷರ ಮತ್ತು ಅಕ್ಷರಪ್ರಕೃತಿಗಳೆಂದರೆ ಪ್ರಕೃತಿವಿಕಾರಕ್ಕೆ ಒಳಪಡುವ ಭೂತಗಳು ಮತ್ತು ವಿಕಾರಕ್ಕೆ ಒಳಪಡದೇ ಇರುವ ಶುದ್ಧನಾಗಿರುವ ಜೀವ–ಎಂದೂ ಅರ್ಥಮಾಡಬಹುದು.

ಕ್ಷರಪುರುಷ ಮತ್ತು ಅಕ್ಷರಪುರುಷ ಎಂಬ ಶಬ್ದಗಳಿಗೆ ವ್ಯಕ್ತಿ ಮತ್ತು ಅವ್ಯಕ್ತಪ್ರಕೃತಿ ಎಂಬುದಾಗಿ ಅಥವಾ ಪ್ರಕೃತಿವಿಕಾರಸಂಬಂಧವುಳ್ಳ ಚೇತನ ಮತ್ತು ಪ್ರಕೃತಿವಿಕಾರಸಂಬಂಧವಿಲ್ಲದಿರುವ ಶುದ್ಧನಾದ ಜೀವ–ಎಂದು ಎರಡು ಬಗೆಯ ಅರ್ಥಗಳನ್ನೂ ತೆಗೆದುಕೊಳ್ಳಬಹುದು.)

o o o

**ಕ್ಷರಃ ಪುರುಷಃ** = ವಿನಾಶಹೊಂದುವ ರಾಶಿ. **ಅಕ್ಷರಃ ಪುರುಷಃ** = ವಿನಾಶಹೊಂದದೇ ಇರುವ ರಾಶಿ–ಎಂದರೆ ಭಗವಂತನ ಮಾಯಾಶಕ್ತಿ. ಕ್ಷರ

ವೆಂಬ ಪುರುಷನ ಉತ್ಪತ್ತಿಬೀಜ. ಅನೇಕಸಂಸಾರಿಜಂತುಗಳು, ಕಾಮ, ಕರ್ಮ–ಮುಂತಾದ ಸಂಸ್ಕಾರಗಳಿಗೆ ಆಶ್ರಯವಾಗಿವೆ. ವಿಕಾರಹೊಂದುವ ಭೂತಗಳೆಲ್ಲವೂ ಕ್ಷರಪುರುಷ. ಕೂಟ ಎಂದರೆ ರಾಶಿಯಂತೆ ಇರುವುದು ಅಥವಾ ಕೂಟ ಎಂದರೆ ವಂಚನೆ, ವಕ್ರತೆ, ಕೌಟಿಲ್ಯ. ಅನೇಕ ಮಾಯಾದಿ ಪ್ರಕಾರಗಳಲ್ಲಿ ಇರುವುದು. (ಶಂ. ಭಾ.)

ಎಲ್ಲ ವೇದಗಳಲ್ಲಿಯೂ ಸಾರಭೂತವಾದ ಅರ್ಥವನ್ನು ನನ್ನಿಂದಲೇ ತಿಳಿ–ಎನ್ನುತ್ತಾನೆ ಶ್ರೀಕೃಷ್ಣ.

ಕ್ಷರ ಮತ್ತು ಅಕ್ಷರ ಎಂಬ ಶಬ್ದಗಳು ಲೋಕದಲ್ಲಿ ಪ್ರಸಿದ್ಧವಾಗಿವೆ. ಕ್ಷರಪುರುಷ ಎಂದರೆ ಜೀವ ಎಂದು ಕರೆಯಲ್ಪಡುವ ಬ್ರಹ್ಮಾದಿಸ್ತಂಬ ಪರ್ಯಂತವಾದ ಪ್ರಕೃತಿಸಂಬಂಧವುಳ್ಳ ಭೂತಗಳು. ಕ್ಷರಣ (ವಿಕಾರ) ವನ್ನು ಹೊಂದುವುದರಿಂದ ಇವು ಕ್ಷರಪುರುಷ ಎನಿಸುತ್ತವೆ. ಅಕ್ಷರ ಎಂದರೆ ಕೂಟಸ್ಥನಾದ ಪುರುಷ ; ಅಚಿತ್‌ಸಂಬಂಧವನ್ನು ಬಿಟ್ಟು ಸ್ವಸ್ವರೂಪದಲ್ಲಿರುವ ಮುಕ್ತಾತ್ಮನು. ಅವನಿಗೆ ಅಚಿತ್‌ಸಂಬಂಧವಿಲ್ಲದೇ ಇರುವುದರಿಂದ ಅಚಿತ್ತಿನ ಪರಿಣಾಮವಿಶೇಷಗಳಾದ ಬ್ರಹ್ಮಾದಿದೇಹಗಳೊಡನೆ ಸಾಧಾರಣ್ಯವಿರು ವುದಿಲ್ಲ. ಆದುದರಿಂದ ಅವನು ಕೂಟಸ್ಥ.

ಕ್ಷರಪುರುಷರು ಅನೇಕರಾಗಿದ್ದರೂ ಅಚಿತ್‌ಸಂಸರ್ಗವೆಂಬ ಒಂದೇ ಉಪಾಧಿಯು ಅವರಿಗೆಲ್ಲಾ ಇರುವುದರಿಂದ ಪುರುಷಃ ಎಂದು ಏಕವಚನ ವನ್ನು ಹೇಳಿದೆ.

ಅಕ್ಷರಪುರುಷರು ಕೂಡ ಅನೇಕರಾಗಿದ್ದರೂ (**ಬಹವೋ ಜ್ಞಾನತಪಸಾ ಪೂತಾ ಮದ್ಭಾವಮಾಗತಾಃ**) ೪-೧೦ **ಸರ್ಗೇಽಪಿ ನೋಪಜಾಯನ್ತೇ ಪ್ರಲಯೇ ನ ವ್ಯಥನ್ತಿ ಚ** ೧೪-೨೨ ಅಚಿತ್ಸಂಸರ್ಗಾಭಾವದಿಂದ **ಅಚಿದ್ವಿಯೋಗ** ಎಂಬ ಉಪಾಧಿಯು ಅವರೆಲ್ಲರಿಗೂ ಇರುವುದರಿಂದ ಅವರ ವಿಷಯದಲ್ಲಿಯೂ ಏಕವಚನವನ್ನು ಹೇಳಿದೆ. (ರಾ.ಭಾ.)

ಕ್ಷರಭೂತಗಳು ಎಂದರೆ ಬ್ರಹ್ಮ ಮುಂತಾದವರು. ಕೂಟಸ್ಥ ಎಂದರೆ ಪ್ರಕೃತಿ.

**ಪ್ರಜಾಪತಿಪ್ರಮುಖಾಃ ಸರ್ವದೇವಾಃ ಕ್ಷರೋಽಕ್ಷರಃ ಪುರುಷೋ ವೈ ಪ್ರಧಾನಂ ।** (ಮ. ಭಾ.)

**ಓಂ ಉತ್ತಮಃ ಪುರುಷಸ್ತ್ವನ್ಯಃ ಪರಮಾತ್ಮೇತ್ಯುದಾಹೃತಃ ।**
**ಯೋ ಲೋಕತ್ರಯಮಾವಿಶ್ಯ ಬಿಭರ್ತ್ಯವ್ಯಯ ಈಶ್ವರಃ ॥೧೭॥**

ಆದರೆ ಪರಮಾತ್ಮನೆಂದು ಕರೆಯಲ್ಪಡುವ ಉತ್ತಮಪುರುಷನು ಬೇರೆ ಇದ್ದಾನೆ. ಅವನು ಅವ್ಯಯನಾದ ಈಶ್ವರನು. ಲೋಕತ್ರಯವನ್ನೂ ಪ್ರವೇಶಿಸಿ ಧರಿಸಿಕೊಂಡಿದ್ದಾನೆ.

* * *

(ಈ ಇಬ್ಬರು ಪುರುಷರಲ್ಲದೇ ಎಲ್ಲ ಲೋಕಗಳಿಗೂ ಒಡೆಯನಾದಂತಹ ಈಶ್ವರನಾದ ಬೇರೊಬ್ಬ ಪುರುಷನಿದ್ದಾನೆ. ಅವನು ಉತ್ತಮಪುರುಷ.

**ಪರಮಾತ್ಮೇತ್ಯುದಾಹೃತಃ** = ಪರಮಾತ್ಮನೆಂದು ಅವನನ್ನು ಕರೆಯುತ್ತಾರೆ. ಪರಮಾತ್ಮಾ ಎಂದರೆ ಶ್ರೇಷ್ಠವಾದ ಆತ್ಮ. ಅವನು ಭೂರ್ಭುವಸ್ಸುವಗಳೆಂಬ ಮೂರು ಲೋಕಗಳನ್ನೂ ಹೊಕ್ಕು ಅವುಗಳನ್ನು ತನ್ನಲ್ಲಿಯೇ ಧರಿಸಿದ್ದಾನೆ. ಅವನು ಅವ್ಯಯ. ವ್ಯಯಿಸತಕ್ಕವನಲ್ಲ ಅಥವಾ ಕ್ಷಯಹೊಂದತಕ್ಕವನಲ್ಲ. ಈಶ್ವರ. ವ್ಯಕ್ತಾವ್ಯಕ್ತಗಳೆರಡಕ್ಕೂ ಸ್ವಾಮೀ. ಅರ್ಥಾತ್ ಎಲ್ಲಕ್ಕೂ ಒಡೆಯ.)

**ವ್ಯಕ್ತಾವ್ಯಕ್ತಂ ಭರತೇ ವಿಶ್ವಮೀಶಃ** = ಕಾರ್ಯ-ಕಾರಣರೂಪವಾದ ಸಕಲಜಗತ್ತನ್ನೂ ಪರಮೇಶ್ವರನು ಧರಿಸಿರುವನು–ಎಂದು ಶ್ರುತಿಯು ಹೊಗಳಿದೆ.

o o o

ಉತ್ತಮನಾದ (ಉತ್ಕೃಷ್ಟತಮನಾದ) ಮತ್ತೊಬ್ಬ ಪುರುಷನುಂಟು. ಅವನು ಇವರಿಬ್ಬರಿಗಿಂತಲೂ ವಿಲಕ್ಷಣನಾದವನು. ಅವನು ಪರಮಾತ್ಮಾ ಎನಿಸುತ್ತಾನೆ. **ಪರಮಶ್ಚಾಸೌ ಆತ್ಮಾ ಚ**–ಅವಿದ್ಯಾಕೃತವಾದ ದೇಹವೇ ಮುಂತಾದ ಆತ್ಮಗಳಿಗಿಂತಲೂ ಪರಮನಾದವನು. ಎಲ್ಲ ಭೂತಗಳಿಗೂ ಅಂತರಾತ್ಮನಾದವನು. ಆದುದರಿಂದ ಅವನನ್ನು ವೇದಾಂತವಾಕ್ಯಗಳಲ್ಲಿ ಪರ

ಮಾತ್ಮಾ ಎಂದು ಕರೆಯುತ್ತಾರೆ. ಅವನು ಭೂರ್ಭುವಸ್ಸುವಗಳೆಂಬ ಮೂರು ಲೋಕಗಳನ್ನೂ ತನ್ನ ಚೈತನ್ಯಬಲಶಕ್ತಿಯಿಂದ ಒಳಹೊಕ್ಕು ಧರಿಸಿಕೊಂಡಿದ್ದಾನೆ. ಕೇವಲ ಸ್ವರೂಪಸತ್ತೆಯಿಂದ ಧರಿಸಿಕೊಂಡಿದ್ದಾನೆ. ಅವನು ಅವ್ಯಯ–ವ್ಯಯ (ವಿಕಾರ) ವಿಲ್ಲದವನು ಮತ್ತು ಈಶ್ವರ. ಸರ್ವಜ್ಞನಾದ ನಾರಾಯಣ ಎಂಬ ಹೆಸರುಳ್ಳವನು. ಎಲ್ಲವನ್ನೂ ಆಳುವ ಸ್ವಭಾವವುಳ್ಳವನು. (ಶಂ. ಭಾ.)

ಉತ್ತಮಪುರುಷನಾದರೋ ಕ್ಷರ ಮತ್ತು ಅಕ್ಷರ ಎಂಬ ಶಬ್ದಗಳಿಂದ ಕರೆಯಲ್ಪಡುವ ಬದ್ಧಪುರುಷ–ಮುಕ್ತಪುರುಷರಿಗಿಂತಲೂ ಬೇರೆಯಾದವನು. ಎಲ್ಲ ಶ್ರುತಿಗಳಲ್ಲೂ ಪರಮಾತ್ಮಾ ಎಂದು ಕರೆಯಲ್ಪಟ್ಟಿದ್ದಾನೆ. ಪರಮಾತ್ಮಾ ಎಂಬ ವಿಶೇಷಣವಿರುವುದರಿಂದಲೇ ಈತನು ಉತ್ತಮಪುರುಷ. ಬದ್ಧ ಮತ್ತು ಮುಕ್ತಪುರುಷರಿಗಿಂತಲೂ ಬೇರೆಯಾದವನು ಎಂದು ತಿಳಿದುಬರುತ್ತದೆ. ಹೇಗೆಂದರೆ : ಇವನು ಮೂರು ಲೋಕಗಳನ್ನೂ ಒಳಹೊಕ್ಕು ಧರಿಸಿದ್ದಾನೆ. ಲೋಕತ್ರಯಗಳು ಎಂದರೆ ಅಚೇತನವಾದ ಪ್ರಕೃತಿ, ಆ ಪ್ರಕೃತಿಸಂಸರ್ಗವುಳ್ಳ ಚೇತನ ಮತ್ತು ಮುಕ್ತಾತ್ಮಾ–ಎಂಬ ಈ ಮೂರು ಲೋಕಗಳನ್ನೂ ಅವುಗಳಿಗೆ ಆತ್ಮವಾಗಿ ಒಳಹೊಕ್ಕು ಧರಿಸಿದ್ದಾನೆ. ಇವನು ಅವುಗಳನ್ನು ವ್ಯಾಪಿಸಿ ಧರಿಸಿದ್ದಾನೆ. ಆದುದರಿಂದ ತನ್ನಿಂದ ವ್ಯಾಪ್ಯವಾಗಿ ಧರಿಸಲು ಯೋಗ್ಯವಾಗಿರುವ ಅವುಗಳಿಗಿಂತಲೂ ಬೇರೆಯಾದವನು. ಏಕೆಂದರೆ ಇವನು ಅವ್ಯಯನು ಮತ್ತು ಈಶ್ವರನು. ಅವ್ಯಯಸ್ವಭಾವವುಳ್ಳವನು ಎಂದರೆ ವ್ಯಯ ಸ್ವಭಾವವುಳ್ಳ ಜಡಕ್ಕಿಂತಲೂ, ಅದರ ಸಂಬಂಧದಿಂದ ಅದನ್ನು ಅನುಸರಿಸುವ ಚೇತನಕ್ಕಿಂತಲೂ, ಹಿಂದೆ ಪ್ರಕೃತಿಯ ಸಂಬಂಧವನ್ನು ಹೊಂದಿದ್ದ ಮುಕ್ತನಿಗಿಂತಲೂ ಬೇರೆಯಾದವನೇ ಆಗಿದ್ದಾನೆ. ಈ ಮೂರು ಲೋಕಗಳಿಗೂ ಇವನು ಈಶ್ವರನು. ಈಶಿತವ್ಯವಾಗಿರುವ ಈ ಮೂರಕ್ಕಿಂತಲೂ ಬೇರೆಯಾದವನು.

(ರಾ. ಭಾ.)

**ಓಂ ಯಸ್ಮಾತ್ಕ್ಷರಮತೀತೋಽಹಮಕ್ಷರಾದಪಿ ಚೋತ್ತಮಃ ।**
**ಅತೋಽಸ್ಮಿ ಲೋಕೇ ವೇದೇ ಚ ಪ್ರಥಿತಃ ಪುರುಷೋತ್ತಮಃ ॥೧೮॥**

ನಾನು ಕ್ಷರವನ್ನು ದಾಟಿ ಅಕ್ಷರಕ್ಕಿಂತಲೂ ಉತ್ತಮನಾಗಿರುತ್ತೇನೆ.

ಆದುದರಿಂದ ಲೋಕದಲ್ಲಿಯೂ ವೇದದಲ್ಲಿಯೂ ನಾನು ಪುರುಷೋತ್ತಮನೆಂದು ಪ್ರಸಿದ್ಧನಾಗಿದ್ದೇನೆ.

* * *

(ನಾನು ಕ್ಷರವನ್ನೂ (ಕ್ಷರಪುರುಷನನ್ನೂ ) ದಾಟಿರತಕ್ಕವನು ಎನ್ನುತ್ತಾನೆ ಶ್ರೀಕೃಷ್ಣ. ಈ ಹಿಂದಿನ ೧೬ನೆಯ ಶ್ಲೋಕದಲ್ಲಿ ಪುರುಷ = ಕ್ಷರ = ಸರ್ವಭೂತಗಳು–ಎಂಬ ವಿವರಣೆಯನ್ನು ಪರಮಾತ್ಮನೇ ನೀಡಿದ್ದಾನೆ.

ಆದುದರಿಂದ **ಕ್ಷರಂ ಅತೀತಃ** ಎಂದರೆ ಕ್ಷರಪುರುಷನನ್ನು ಅರ್ಥಾತ್ ಭೂತಗಳನ್ನು ಮೀರಿರತಕ್ಕವನು. ಭೂತಗಳಿಗೆ ವಿನಾಶವಿದೆ. ಕ್ಷರಭಾವವಿದೆ. 'ಅಂತಹ ಕ್ಷರಭಾವವಿಲ್ಲದೇ ಇರತಕ್ಕವನು ನಾನು. ಕ್ಷರದಿಂದ ಅತೀತನಾಗಿದ್ದೇನೆ. ನಾಶವನ್ನು ಅತಿಕ್ರಮಿಸಿದ್ದೇನೆ. ನಾಶವೆಂಬುದು ನನಗೆ ಇಲ್ಲ. ಅರ್ಥಾತ್ ನಾನು ಅವಿನಾಶಿ.'

**ಅಕ್ಷರಾದಪಿ ಚೋತ್ತಮಃ** =ಅಕ್ಷರಕ್ಕಿಂತಲೂ ನಾನು ಉತ್ತಮನು. ಅಕ್ಷರ ಎಂದರೆ ಅಕ್ಷರಪುರುಷ ; ಮೂಲಪ್ರಕೃತಿ. ಮೂಲಪ್ರಕೃತಿಗಿಂತಲೂ **ಉತ್ತಮಃ** ಎಂದರೆ ಮೇಲೆ ಇರತಕ್ಕವನು. ಮಾಯೆಗಿಂತಲೂ ಶ್ರೇಷ್ಠನಾದವನು. ಅಥವಾ ಶುದ್ಧಜೀವಕ್ಕಿಂತಲೂ ಉತ್ತಮನು. ಕ್ಷರಪುರುಷ ಮತ್ತು ಅಕ್ಷರಪುರುಷ–ಈ ಇಬ್ಬರು ಪುರುಷರಿಗಿಂತಲೂ ನಾನು ಉತ್ತಮನಾದುದರಿಂದಲೇ ನಾನು ವೇದಗಳಲ್ಲಿಯೂ ಪುರುಷೋತ್ತಮನೆಂಬ ಹೆಸರಿನಿಂದ ಪ್ರಸಿದ್ಧನಾಗಿದ್ದೇನೆ. ಲೋಕದಲ್ಲಿ ಕವಿಗಳೂ ಸಹ ನನ್ನನ್ನು ಪುರುಷೋತ್ತಮನೆಂದೇ ಹೊಗಳುವರು.

ಪುರುಷನೇ ಸರ್ವಶ್ರೇಷ್ಠನೆಂಬುದನ್ನು ಕಠೋಪನಿಷತ್ತೂ ಸಾರಿದೆ :

**ಮಹತಃ ಪರಮವ್ಯಕ್ತಮವ್ಯಕ್ತಾತ್ಪುರುಷಃ ಪರಃ ।**
**ಪುರುಷಾನ್ನ ಪರಂ ಕಿಂಚಿತ್ಸಾ ಕಾಷ್ಠಾ ಸಾ ಪರಾ ಗತಿಃ ॥**

ಮಹತ್ತಿಗಿಂತಲೂ ಅವ್ಯಕ್ತವು (ಮೂಲಪ್ರಕೃತಿಯು) ಶ್ರೇಷ್ಠವಾದುದು. ಅವ್ಯಕ್ತಕ್ಕಿಂತಲೂ ಪುರುಷನು (ಚಿನ್ಮಾತ್ರಘನನಾದ ಆತ್ಮನು) ಶ್ರೇಷ್ಠನು. ಪುರುಷನಿಗಿಂತಲೂ ಶ್ರೇಷ್ಠವಾದುದು ಯಾವುದೂ ಇಲ್ಲ. ಅದೇ ಕೊನೆ ; ಅದೇ ಶ್ರೇಷ್ಠವಾದ ಪರಮಗತಿ.)

o o o

ನಾನು ಕ್ಷರವನ್ನು ಎಂದರೆ ಅಶ್ವತ್ಥವೆಂಬ ಹೆಸರುಳ್ಳ ಸಂಸಾರಮಾಯಾ ವೃಕ್ಷವನ್ನು ಮೀರಿರುವವನು. ಅಕ್ಷರಕ್ಕಿಂತಲೂ ಎಂದರೆ ಸಂಸಾರವೃಕ್ಷಕ್ಕೆ ಬೀಜಭೂತವಾಗಿರುವ ಯಾವ ಮೂಲಪ್ರಕೃತಿಯುಂಟೋ ಅದಕ್ಕಿಂತಲೂ ಉತ್ತಮನು ; ಉತ್ಕೃಷ್ಟತಮನು ಅಥವಾ ಉಚ್ಚತಮನು. ಆದುದರಿಂದ ಕ್ಷರ-ಅಕ್ಷರಗಳಿಗಿಂತಲೂ ಉತ್ತಮನಾಗಿರುವುದರಿಂದ ನಾನು ಲೋಕದಲ್ಲಿಯೂ ಮತ್ತು ವೇದದಲ್ಲಿಯೂ ಪುರುಷೋತ್ತಮನೆಂದು ಪ್ರಸಿದ್ಧನಾಗಿದ್ದೇನೆ. ಭಕ್ತ ಜನರು ನನ್ನ ಬಗೆಗೆ ಈ ಹೆಸರನ್ನು ಪ್ರಯೋಗಿಸುತ್ತಾರೆ. (ಶಂ. ಭಾ.)

ಮೇಲೆ ಹೇಳಿದ ಸ್ವಭಾವಗಳಿಂದ ನಾನು ಕ್ಷರಪುರುಷನನ್ನು ಮೀರಿದವನು ಮತ್ತು ಅಕ್ಷರನಾಗಿರುವ ಮುಕ್ತನಿಗಿಂತಲೂ ಉತ್ಕೃಷ್ಟತಮನಾದವನು. ಆದುದರಿಂದ ಲೋಕದಲ್ಲಿಯೂ ಮತ್ತು ವೇದದಲ್ಲಿಯೂ ನಾನು ಪುರುಷೋತ್ತಮನೆಂದು ಪ್ರಸಿದ್ಧನಾಗಿದ್ದೇನೆ. ಲೋಕ ಎಂದರೆ ಸ್ಮೃತಿ. ಏಕೆಂದರೆ: ಅದು ವೇದಾರ್ಥವನ್ನು ಅವಲೋಕನಮಾಡುತ್ತದೆ. ಶ್ರುತಿ-ಸ್ಮೃತಿಗಳೆರಡರಲ್ಲಿಯೂ ಅವನು ಪುರುಷೋತ್ತಮನು.

**ಪರಂಜ್ಯೋತಿರುಪಸಂಪದ್ಯ ಸ್ವೇನ ರೂಪೇಣಾಭಿನಿಷ್ಪದ್ಯತೇ ಸ ಉತ್ತಮಃ ಪುರುಷಃ** ಛಾಂದೋಗ್ಯ ೮-೧೨-೩೩

ಮುಂತಾದುವು ಶ್ರುತಿಗಳು.

**ಅಂಶಾವತಾರಂ ಪುರುಷೋತ್ತಮಸ್ಯ ಹ್ಯನಾದಿಮಧ್ಯಾನ್ತಮಜಸ್ಯ ವಿಷ್ಣೋಃ।** ವಿಷ್ಣು ೫-೧೭-೩೩-ಮುಂತಾದುವು ಸ್ಮೃತಿಗಳು.

(ರಾ. ಭಾ.)

**ಓಂ ಯೋ ಮಾಮೇವಮಸಮ್ಮೂಢೋ ಜಾನಾತಿ ಪುರುಷೋತ್ತಮಮ್ ।**
**ಸ ಸರ್ವವಿದ್ಭಜತಿ ಮಾಂ ಸರ್ವಭಾವೇನ ಭಾರತ ॥೧೯॥**

ಎಲೈ ಭಾರತನೇ! ಯಾವನು ಮೋಹವಿಲ್ಲದವನಾಗಿ ನನ್ನನ್ನು ಹೀಗೆ ಪುರುಷೋತ್ತಮನೆಂದು ತಿಳಿಯುವನೋ–ಅವನು ಎಲ್ಲವನ್ನೂ ತಿಳಿದವನಾಗುತ್ತಾನೆ. ಸರ್ವಭಾವದಿಂದಲೂ ಅವನು ನನ್ನನ್ನು ಭಜಿಸುತ್ತಾನೆ.

* * *

(ಯಃ ಅಸಂಮೂಢಃ ಜಾನಾತಿ ಮಾಂ ಏವಂ ಪುರುಷೋತ್ತಮಮ್–ಯಾವ ಅಸಮ್ಮೂಢನು ಎಂದರೆ ಸಂಶಯ, ವಿಪರ್ಯಯ–ಇತ್ಯಾದಿ ದೋಷಗಳಿಂದ ವಿಮುಕ್ತವಾದ ಜ್ಞಾನವುಳ್ಳವನು, ನಿಶ್ಚಲತತ್ತ್ವಭಾವವುಳ್ಳವನು, ಪುರುಷೋತ್ತಮನಾದ ನನ್ನನ್ನು ಈ ರೀತಿ ತಿಳಿಯುತ್ತಾನೆಯೋ. ಪುರುಷೋತ್ತಮ ಎಂದರೆ ಈ ಹಿಂದೆ ಹೇಳಿದಂತೆ ಕ್ಷರಪುರುಷರಿಗಿಂತಲೂ ಅಕ್ಷರಪುರುಷರಿಗಿಂತಲೂ ಶ್ರೇಷ್ಠನಾದವನು.

ಏವಂ = ಈ ರೀತಿಯಾಗಿ : ಪುರುಷೋತ್ತಮನು ಪರಮಶ್ರೇಷ್ಠನಾದ ಗತಿ, ಸರ್ವಶಕ್ತಿಮಂತ, ಸರ್ವಾಧಾರ, ಸಮಸ್ತಜಗತ್ತನ್ನೂ ಸೃಷ್ಟಿಸುವವನು, ಪಾಲಿಸುವವನು ಮತ್ತು ಸಂಹಾರವನ್ನೂ ಮಾಡತಕ್ಕವನು, ಸಕಲಗುಣ ಸಂಪನ್ನ, ಪರಮದಯಾಳು, ಸರ್ವವ್ಯಾಪೀ–ಎಂಬುದಾಗಿ ಯಾವ ಜ್ಞಾನಿಯು ತಿಳಿಯುತ್ತಾನೆಯೋ ಅವನು ಎಲ್ಲವನ್ನೂ ತಿಳಿದವನಾಗುತ್ತಾನೆ. ಪುರುಷೋತ್ತಮನನ್ನು ತಿಳಿದನಂತರ ಎಲ್ಲವನ್ನೂ ತಿಳಿದಂತೆಯೇ ಸರಿ. 'ಸರ್ವ' ಎಂದರೂ ಪರಮಾತ್ಮನೇ. ಪರಮಾತ್ಮನನ್ನು ತಿಳಿದವನಾಗುತ್ತಾನೆ. ಭಜತಿ ಮಾಂ ಸರ್ವಭಾವೇನ = ಸರ್ವಭಾವದಿಂದಲೂ ನನ್ನನ್ನು ಭಜಿಸುತ್ತಾನೆ. ಸ್ವಾಮೀ ಎಂಬ ಭಾವನೆಯಿಂದ ಭಜಿಸುತ್ತಾನೆ. ತಂದೆ ಎಂಬ ಭಾವನೆಯಿಂದ ಭಜಿಸುತ್ತಾನೆ. ತಾಯಿ ಎಂಬ ಭಾವನೆಯಿಂದ ಭಜಿಸುತ್ತಾನೆ. ಸ್ನೇಹಿತ ಎಂಬ ಭಾವನೆಯಿಂದ ಭಜಿಸುತ್ತಾನೆ. ಪತಿ ಎಂಬ ಭಾವನೆಯಿಂದ ಭಜಿಸುತ್ತಾನೆ. ಪುರುಷೋತ್ತಮ ಎಂಬ ಭಾವನೆಯಿಂದ ಭಜಿಸುತ್ತಾನೆ. ಎಂದರೆ ಅನನ್ಯಭಕ್ತನಾಗಿ ಸೇವೆಮಾಡುತ್ತಾನೆ.)

O O O

ಯೋ ಮಾಂ ಜಾನಾತಿ ಅಸಂಮೂಢಃ = ಮೋಹರಹಿತನಾಗಿ ಯಾವನು ಮೇಲೆ ಹೇಳಿದ ವಿಶೇಷಣಗಳಿಂದ ಕೂಡಿದ ಈಶ್ವರನಾದ ನನ್ನನ್ನು ಮೇಲೆ ಹೇಳಿದಂತೆ ತಿಳಿದುಕೊಳ್ಳುತ್ತಾನೆಯೋ–ಆ ಪುರುಷೋತ್ತಮನು ನಾನೇ ಆಗಿದ್ದೇನೆ–ಎಂದು ತಿಳಿದುಕೊಳ್ಳುತ್ತಾನೆಯೋ ಅವನು ಸರ್ವಜ್ಞನು. ಸರ್ವಾತ್ಮಭಾವದಿಂದ ಸರ್ವವನ್ನೂ ತಿಳಿಯುವುದರಿಂದ ಅವನು ಸರ್ವಜ್ಞನು

ಮತ್ತು ಅವನು ಎಲ್ಲ ಭೂತಗಳಲ್ಲಿಯೂ ಇರುವ ಪರಮಾತ್ಮನಾದ ನನ್ನನ್ನೇ ಎಲ್ಲರಿಗೂ ಆತ್ಮನಾದವನು ಎಂದು ತಿಳಿದು ಭಜಿಸುತ್ತಾನೆ. (ಶಂ. ಭಾ.)

ಯಾವನು ಮೋಹರಹಿತನಾಗಿ ಮೇಲೆ ಹೇಳಿದ ರೀತಿಯಲ್ಲಿ ಪುರುಷೋತ್ತಮನಾದ ನನ್ನನ್ನು ತಿಳಿಯುತ್ತಾನೆಯೋ, ಅವ್ಯಯಸ್ವಭಾವದವನಾಗಿರುವುದರಿಂದಲೂ ಕ್ಷರಾಕ್ಷರಗಳನ್ನು ವ್ಯಾಪಿಸಿ ಅವುಗಳಿಗೆ ಈಶ್ವರನಾಗಿರುವುದರಿಂದಲೂ ನನ್ನನ್ನು ಕ್ಷರಾಕ್ಷರಪುರುಷರಿಗಿಂತಲೂ ವಿಜಾತೀಯನನ್ನಾಗಿ ತಿಳಿಯುತ್ತಾನೆಯೋ–ಅವನು ಸರ್ವವಿದನು. ನನ್ನ ಪ್ರಾಪ್ತಿಯ ಉಪಾಯ ವಾಗಿ ಏನು ತಿಳಿಯಬೇಕೋ ಅದೆಲ್ಲವನ್ನೂ ತಿಳಿದವನು. ಅವನು ಸರ್ವ ಭಾವದಿಂದ ನನ್ನನ್ನು ಭಜಿಸುತ್ತಾನೆ. ನನ್ನ ವಿಷಯವಾದ ಜ್ಞಾನಗಳಿಂದ ನನಗೆ ಯಾವ ಪ್ರೀತಿಯುಂಟಾಗುತ್ತದೆಯೋ, ನನ್ನ ವಿಷಯವಾದ ಎಲ್ಲ ಭಜನೆ ಗಳಿಂದ ನನಗೆ ಯಾವ ಪ್ರೀತಿಯುಂಟಾಗುತ್ತದೆಯೋ–ಆ ಎರಡು ಬಗೆಯ ಪ್ರೀತಿಗಳೂ ನನಗೆ ಅವನ ಈ ಅರಿವಿನಿಂದ ಉಂಟಾಗುತ್ತವೆ. (ರಾ. ಭಾ.)

**ಅಸಂಮೂಢಃ** = ಸರ್ವೋತ್ತಮತ್ವವು ಮಿಥ್ಯೆ ಎಂಬ ಮೋಹವಿಲ್ಲದವನು. **ಸರ್ವವಿತ್** = ಸರ್ವಶಾಸ್ತ್ರಾರ್ಥಗಳ ಜ್ಞಾನವುಳ್ಳವನು.

**ಸರ್ವಭಾವೇನ** = ಸರ್ವಪ್ರಕಾರಗಳಿಂದಲೂ. (ಮ. ಟೀಕಾ)

**ಓಂ ಇತಿ ಗುಹ್ಯತಮಂ ಶಾಸ್ತ್ರಮಿದಮುಕ್ತಂ ಮಯಾನಘ ।**
**ಏತದ್ಬುದ್ಧ್ವಾ ಬುದ್ಧಿಮಾನ್ಸ್ಯಾತ್ಕೃತಕೃತ್ಯಶ್ಚ ಭಾರತ ॥೨೦॥**

ಎಲೈ ಪಾಪರಹಿತನೇ! ಹೀಗೆ ಗುಹ್ಯತಮವಾದ ಈ ಶಾಸ್ತ್ರವು ನನ್ನಿಂದ ಹೇಳಲ್ಪಟ್ಟಿತು. ಭಾರತ! ಇದನ್ನು ತಿಳಿದುಕೊಂಡವನು ಬುದ್ಧಿವಂತನೂ ಕೃತಕೃತ್ಯನೂ ಆಗುವನು.

* * *

(**ಗುಹ್ಯತಮಂ ಇದಂ ಶಾಸ್ತ್ರಂ ಮಯಾ ಉಕ್ತಂ** = ಎನ್ನುತ್ತಾನೆ ಭಗವಂತ. **ಗುಹ್ಯತಮಂ** = ಬಹಳ ಗುಟ್ಟಿನದು. ಬಹಳ ರಹಸ್ಯವಾದುದು. ಹೃದಯಗುಹೆಯಲ್ಲಿರುವುದಕ್ಕೆ ಸಂಬಂಧಿಸಿದುದು. **ಇದಂ ಶಾಸ್ತ್ರಂ** = ಈ

ಅಧ್ಯಾಯವನ್ನೇ ಶ್ರೀಕೃಷ್ಣನು ಒಂದು ಶಾಸ್ತ್ರವೆಂದೇ ಹೇಳಿದ್ದಾನೆ. ಭಗವದ್ಗೀತೆಯಲ್ಲಿ ಹೇಳಿರುವ ಪ್ರತಿಯೊಂದು ಶ್ಲೋಕವೂ ಸಹ ಒಂದು ಶಾಸ್ತ್ರವೇ ಆಗಿದೆ ; ಒಂದು ಮಂತ್ರವೇ ಆಗಿದೆ.

ಭಗವಂತನು ಹೇಳಿದುದೆಲ್ಲವೂ ಶಾಸ್ತ್ರವೇ. ಅವನೇ ಶಾಸ್ತಾ. ಅವನು ಹೇಳಿದ್ದು ಶಾಸ್ತ್ರ. ಗೀತಾಶಾಸ್ತ್ರವೆಲ್ಲವೂ ಈ ಅಧ್ಯಾಯದಲ್ಲಿ ಸಂಕ್ಷೇಪವಾಗಿ ಭಗವಂತನಿಂದ ಹೇಳಲ್ಪಟ್ಟಿದೆ–ಎಂದು ಬೇಕಾದರೂ ಇಟ್ಟುಕೊಳ್ಳಬಹುದು. ಇದನ್ನು ಎಂದರೆ ಪುರುಷೋತ್ತಮನ ನಿಜಸ್ವರೂಪವನ್ನು ಮನಃಪೂರ್ವಕವಾಗಿ ಬುದ್ಧಿಪೂರ್ವಕವಾಗಿ ತಿಳಿದುಕೊಂಡವನು **ಬುದ್ಧಿಮಾನ್ ಸ್ಯಾತ್** ಬುದ್ಧಿ ಎಂದರೆ ಜ್ಞಾನ, ಜ್ಞಾನವಂತನಾಗುತ್ತಾನೆ ; ಪರಮಾತ್ಮನನ್ನು ತಿಳಿದವನಾಗುತ್ತಾನೆ. ಇದರಿಂದಲೇ ಅವನು ಕೃತಕೃತ್ಯನೂ ಆಗುತ್ತಾನೆ. ತಾನು ಮಾಡಬೇಕಾದ ಕೃತ್ಯಗಳು ಎಂದರೆ ಕರ್ಮಗಳು. ಅವುಗಳನ್ನು ಮುಗಿಸಿದವನಾಗುತ್ತಾನೆ. ಮುಂದೆ ಅವನು ಮಾಡಬೇಕಾದುದು ಯಾವುದೂ ಇರುವುದಿಲ್ಲ.)

o o o

**ಶಾಸ್ತ್ರಂ ಇದಂ ಉಕ್ತಂ** =ಇಡೀ ಭಗವದ್ಗೀತೆಯೇ ಶಾಸ್ತ್ರವಾಗಿದ್ದರೂ ಈ ಪ್ರಕರಣದಲ್ಲಿ ಸ್ತುತಿಗೋಸ್ಕರ ಈ ಅಧ್ಯಾಯವನ್ನೇ ಇಲ್ಲಿ ಶಾಸ್ತ್ರವೆಂದು ಕರೆದಿದೆ. ಏಕೆಂದರೆ : ಈ ಅಧ್ಯಾಯದಲ್ಲಿ ಇಡೀ ಗೀತಾಶಾಸ್ತ್ರವು ಸಂಕ್ಷೇಪವಾಗಿ ಹೇಳಲ್ಪಟ್ಟಿರುವುದು ಮಾತ್ರವಲ್ಲದೇ–ಎಲ್ಲ ವೇದಗಳ ಅರ್ಥವೂ ಇಲ್ಲಿ ಪರಿಸಮಾಪ್ತವಾಗುತ್ತದೆ.

**ಯಸ್ತಂ ವೇದ ಸ ವೇದವಿತ್ । ವೇದೈಶ್ಚ ಸರ್ವೈರಹಮೇವ ವೇದ್ಯಃ**–ಎಂದೇ ಗೀತೆಯಲ್ಲಿ ಹಿಂದೆಯೂ ಹೇಳಲ್ಪಟ್ಟಿದೆಯಲ್ಲವೇ?

**ಏತದ್ಬುದ್ಧ್ವಾ ಬುದ್ಧಿಮಾನ್ ಸ್ಯಾತ್** = ಮೇಲೆ ಹೇಳಿದ ಅರ್ಥದಂತೆ ಈ ಶಾಸ್ತ್ರವನ್ನು ತಿಳಿದುಕೊಂಡರೇನೇ ಮನುಷ್ಯನು ಬುದ್ಧಿವಂತನೂ ಮತ್ತು ಕೃತಕೃತ್ಯನೂ ಆಗುತ್ತಾನೆ. ಇಲ್ಲದಿದ್ದರೆ ಆಗುವುದಿಲ್ಲ. **ಕೃತಕೃತ್ಯಃ** = ತಾನು ಮಾಡಬೇಕಾದ ಕರ್ತವ್ಯಗಳನ್ನೆಲ್ಲಾ ಮಾಡಿಬಿಟ್ಟಿರುವವನು. ಭಗವತ್ತತ್ತ್ವದ ಜ್ಞಾನದಿಂದ ಶ್ರೇಷ್ಠಕುಲದಲ್ಲಿ ಹುಟ್ಟಿದ ಬ್ರಾಹ್ಮಣನ ಮೂಲಕ

ಏನೇನು ತಿಳಿಯಲು ಯೋಗ್ಯವಾಗಿದೆಯೋ ಅವೆಲ್ಲವನ್ನೂ ಮಾಡಿದಂತಾಗುತ್ತದೆ ; ತಿಳಿದಂತಾಗುತ್ತದೆ. ಇಲ್ಲದಿದ್ದರೆ ಯಾವನೂ ತನ್ನ ಕರ್ತವ್ಯವನ್ನು ಮಾಡಿದಂತಾಗುವುದಿಲ್ಲ.

**ಏತದ್ಧಿ ಜನ್ಮಸಾಫಲ್ಯಂ ಬ್ರಾಹ್ಮಣಸ್ಯ ವಿಶೇಷತಃ ।**
**ಪ್ರಾಪ್ಯೈತತ್ಕೃತಕೃತ್ಯೋ ಹಿ ದ್ವಿಜೋ ಭವತಿ ನಾನ್ಯಥಾ ॥**

ಮನು ೧೨-೯೩

ಈ ಪರಮಾರ್ಥತತ್ತ್ವವನ್ನು ನನ್ನಿಂದ ನೀನು ಕೇಳಿರುವುದರಿಂದ ನೀನೂ ಕೃತಾರ್ಥನಾಗಿರುವೆ. (ಶಂ. ಭಾ.)

ಹೀಗೆ ನನ್ನನ್ನು ಪುರುಷೋತ್ತಮನೆಂದು ಪ್ರತಿಪಾದಿಸಿರುವುದು ಎಲ್ಲ ರಹಸ್ಯಗಳಿಗೂ ರಹಸ್ಯತಮವಾದ ಶಾಸ್ತ್ರವು. **ಅನಘಃ**–ಪಾಪರಹಿತನಾಗಿರುವುದರಿಂದ ಯೋಗ್ಯತಮನೆಂದು ತಿಳಿದು ನಿನಗೆ ನಾನು ಇದನ್ನು ಹೇಳಿದೆನು. ಇದನ್ನರಿತರೆ ಬುದ್ಧಿವಂತನೂ ಕೃತಕೃತ್ಯನೂ ಆಗುತ್ತಾನೆ. ನನ್ನನ್ನು ಹೊಂದುವ ಬಯಕೆಯುಳ್ಳವನು ಸ್ವೀಕರಿಸಬೇಕಾದ ಯಾವ ಬುದ್ಧಿಯುಂಟೋ ಅದೆಲ್ಲವನ್ನೂ ಅವನು ಪಡೆದಂತೆ ಮತ್ತು ಮಾಡಬೇಕಾದುದೆಲ್ಲವನ್ನೂ ಮಾಡಿದಂತೆ ಆಗುತ್ತದೆ. (ರಾ. ಭಾ.)

**ಇತಿ ಶ್ರೀಮದ್ಭಗವದ್ಗೀತಾಸೂಪನಿಷತ್ಸು**
**ಬ್ರಹ್ಮವಿದ್ಯಾಯಾಂ ಯೋಗಶಾಸ್ತ್ರೇ ಶ್ರೀಕೃಷ್ಣಾರ್ಜುನಸಂವಾದೇ**
**ಪುರುಷೋತ್ತಮಯೋಗೋ ನಾಮ ಪಞ್ಚದಶೋಽಧ್ಯಾಯಃ**

**ಭಗವದ್ಗೀತೆಯಲ್ಲಿ ೧೫ನೆಯ ಅಧ್ಯಾಯವು ಮುಗಿಯಿತು.**

ಭೀಷ್ಮಪರ್ವದಲ್ಲಿ ೩೯ನೆಯ ಅಧ್ಯಾಯವು ಮುಗಿಯಿತು.

# ಭಗವದ್ಗೀತಾ-೧೬ನೆಯ ಅಧ್ಯಾಯ

೪೦ನೆಯ ಅಧ್ಯಾಯ ಶ್ರೀಮದ್ಭಗವದ್ಗೀತಾಪರ್ವ (ಮುಂದುವರಿದಿದೆ.)

## ಫಲಸಹಿತವಾದ ದೈವೀ ಮತ್ತು ಆಸುರೀಸಂಪತ್ತುಗಳ ವರ್ಣನೆ: ಶಾಸ್ತ್ರಕ್ಕೆ ವಿರುದ್ಧವಾದ ಆಚರಣೆ ಮಾಡದಿರಲು ಮತ್ತು ಶಾಸ್ತ್ರಸಮ್ಮತವಾದ ಆಚರಣೆಯನ್ನು ಮಾಡಲು ಉಪದೇಶ

ಶ್ರೀಭಗವಾನುವಾಚ :

ಓಂ ಅಭಯಂ ಸತ್ತ್ವಸಂಶುದ್ಧಿರ್ಜ್ಞಾನಯೋಗವ್ಯವಸ್ಥಿತಿಃ ।
ದಾನಂ ದಮಶ್ಚ ಯಜ್ಞಶ್ಚ ಸ್ವಾಧ್ಯಾಯಸ್ತಪ ಆರ್ಜವಮ್ ॥೧॥
ಓಂ ಅಹಿಂಸಾ ಸತ್ಯಮಕ್ರೋಧಸ್ತ್ಯಾಗಃ ಶಾನ್ತಿರಪೈಶುನಮ್ ।
ದಯಾ ಭೂತೇಷ್ವಲೋಲುಪ್ತ್ವಂ ಮಾರ್ದವಂ ಹ್ರೀರಚಾಪಲಮ್ ॥
ಓಂ ತೇಜಃ ಕ್ಷಮಾ ಧೃತಿಃ ಶೌಚಮದ್ರೋಹೋ ನಾತಿಮಾನಿತಾ ।
ಭವನ್ತಿ ಸಮ್ಪದಂ ದೈವೀಮಭಿಜಾತಸ್ಯ ಭಾರತ ॥೩॥

ಭಗವಂತನು ಹೇಳುತ್ತಾನೆ :

ಭಾರತನೇ! ಅಭಯ, ಸತ್ತ್ವಸಂಶುದ್ಧಿ, ಜ್ಞಾನಯೋಗದಲ್ಲಿ ನೆಲೆಗೊಳ್ಳುವುದು, ದಾನ, ಜಿತೇಂದ್ರಿಯತೆ, ಯಜ್ಞ, ಶಾಸ್ತ್ರೀಯವಾದ ಅಧ್ಯಯನ, ತಪಸ್ಸು, ಋಜುತ್ವ, ಅಹಿಂಸೆ, ಸತ್ಯ, ಕ್ರೋಧವಿಲ್ಲದಿರುವುದು, ತ್ಯಾಗ, ಶಾಂತಿ, ಅಪೈಶುನ್ಯ (ಚಾಡಿಕೋರತನವಿಲ್ಲದಿರುವುದು), ಭೂತಗಳಲ್ಲಿ ದಯೆ, ಲೋಲುಪತೆಯಿಲ್ಲದಿರುವುದು, ಮೃದುತ್ವ, ನಾಚಿಕೆ, ಚಪಲವಿಲ್ಲದಿರುವುದು, ತೇಜಸ್ಸು, ಕ್ಷಮೆ, ಧೈರ್ಯ, ಶುಚಿತ್ವ, ದ್ರೋಹವೆಸಗದೇ ಇರುವುದು, ಹೆಚ್ಚು ಅಭಿಮಾನವಿಲ್ಲದೇ ಇರುವುದು–ಇವುಗಳು ದೈವೀಸಂಪತ್ತಿಗೆ ಯೋಗ್ಯನಾಗಿ ಹುಟ್ಟಿರುವವನಿಗೆ ಉಂಟಾಗುವುವು.

* * *

(ಇಲ್ಲಿ ಹೇಳಿರುವ ಇಪ್ಪತ್ತೈದು ಗುಣಗಳೂ, ಹದಿಮೂರನೆಯ ಅಧ್ಯಾಯದಲ್ಲಿ ವಿವರಿಸಿರುವ ಇಪ್ಪತ್ತು ಜ್ಞಾನದ ಲಕ್ಷಣಗಳೂ ಸಾಮಾನ್ಯವಾಗಿ ಒಂದೇ ಆಗಿವೆ. ಭಗವಂತನು ಆ ಗುಣಗಣಗಳನ್ನು ಮನದಟ್ಟಾಗುವಂತೆ ಮಾಡಲು ದೈವೀಸಂಪತ್ತಿನ ಶೀರ್ಷಿಕೆಯಲ್ಲಿ ಪುನಃ ಅವುಗಳನ್ನು ಹೇಳುತ್ತಾನೆ.

**ಅಭಯಂ** = ಭಯವಿಲ್ಲದೇ ಇರುವುದು. ಅಂಜುಬುರುಕನಾಗಿ ಇಲ್ಲದೇ ಇರುವುದು. ಭವ ಎಂದರೆ ಸಂಸಾರ. ಅದೇ ಭಯಕ್ಕೆ ಕಾರಣವಾದುದು. ಮಗುವು ಹುಟ್ಟುವಾಗ ಅಳುತ್ತಲೇ ಹುಟ್ಟುವುದು. ಆ ಅಳುವಿಗೆ ಭಯವೇ ಕಾರಣ. ಸಂಸಾರದಲ್ಲಿರುವವನಿಗೂ ಧೈರ್ಯಶಾಲಿ ಎನ್ನುತ್ತಾರೆ. ಸೈನಿಕನೂ ಧೈರ್ಯಶಾಲಿಯೇ ಆಗಿರಬೇಕು. ಅಂಜುಬುರುಕನಾಗಿರಕೂಡದು. ಆದರೆ ಅಭಯ ಅಥವಾ ನಿರ್ಭಯತ್ವವು ಕೇವಲ ಇಷ್ಟಕ್ಕೇ ಸೀಮಿತವಾದುದಲ್ಲ. 'ಯುದ್ಧವನ್ನು ಎದುರಿಸುವವನು ಹೆಂಡತಿಗೆ ಹೆದರುವನು' ಎಂದು ಹೇಳುವ ನಾಣ್ಣುಡಿಯಿದೆ. ಮನೆಗೆ ನುಗ್ಗಿದ ಕಳ್ಳರನ್ನು ಎದುರಿಸಿ ಅವರನ್ನು ಓಡಿಸಿದವನು ಧೈರ್ಯಶಾಲಿಯೇ ಸರಿ. ಆದರೆ ಅವನೇ ತನ್ನ ಮಗನು ಸಕಾಲಕ್ಕೆ ಮನೆಗೆ ಬಾರದಿದ್ದರೆ ಭಯಪಡುತ್ತಾನೆ. ಆದುದರಿಂದ ಅಭಯ ಎಂದರೆ ಯಾವ ವಿಧವಾದ ಭಯವೂ ಯಾವುದೇ ಕಾರಣದಿಂದಲೂ ಯಾವ ಕಾಲದಲ್ಲಿಯೂ ಇರಬಾರದು. ಇದಕ್ಕೆ ಅಭಯ ಎಂದು ಹೆಸರು. ಭಯ ಎಂದರೆ ಪ್ರತಿಷ್ಠೆಯು ನಾಶವಾಗುವುದೆಂಬ ಭಯ, ಅಪಮಾನವಾಗುವುದೆಂಬ ಭಯ, ನಿಂದೆಯ ಭಯ, ರೋಗಭಯ, ರಾಜದಂಡದ ಭಯ, ಭೂತ-ಪ್ರೇತಗಳ ಭಯ, ಮರಣಭಯ–ಇವೇ ಮುಂತಾಗಿ ಅನೇಕವಿಧವಾದ ಭಯಗಳಿರುತ್ತವೆ. ಆದುದರಿಂದ ಇಲ್ಲಿ ಹೇಳಿರುವ ಅಭಯವು ಅಥವಾ ಭಯವಿಲ್ಲದಿರುವಿಕೆಯು ಸಂಸಾರಕ್ಕೆ ಸಿಲುಕಿದವನಿಗೆ ಇರಲು ಸಾಧ್ಯವೇ ಆಗುವುದಿಲ್ಲ. ಆತ್ಮಾನಾತ್ಮವಿವೇಕವುಳ್ಳ ಜ್ಞಾನಿಗೆ ಮಾತ್ರ ಈ ಅಭಯವಿರಲು ಸಾಧ್ಯ. ಅಭಯವೆಂಬುದು ಬ್ರಾಹ್ಮೀಸ್ಥಿತಿಯಲ್ಲಿ ಮಾತ್ರವೇ ಇರುವುದು. ಅಭಯ ಎಂದರೆ ಭಯಪಡದಿರುವುದು–ಇತರರಿಗೆ ಭಯವನ್ನು ಉಂಟುಮಾಡದಿರುವುದು ಮತ್ತು ಭಯವಾಗದಂತೆ ಇರುವುದು–ಎಂದೂ ಆಗುತ್ತದೆ. ತಾನೂ ಭಯಪಡಬಾರದು ; ಇತರರನ್ನೂ ಭಯಪಡಿಸಬಾರದು. ಇದು ಅಭಯದ ಲಕ್ಷಣ, ಇಂತಹವನೇ ಜ್ಞಾನೀ. ಮನುಸ್ಮೃತಿಯಲ್ಲಿ ಅಭಯದ ವಿಷಯವಾಗಿ ಹೀಗೆ ಹೇಳಿದ್ದಾರೆ :

**ಯೋ ದತ್ತ್ವಾ ಸರ್ವಭೂತೇಭ್ಯಃ ಪ್ರವ್ರಜತ್ಯಭಯಂ ಗೃಹಾತ್ ।**
**ತಸ್ಯ ತೇಜೋಮಯಾ ಲೋಕಾ ಭವನ್ತಿ ಬ್ರಹ್ಮವಾದಿನಃ ॥೬-೩೧॥**

ಯಾವನು ಸರ್ವಪ್ರಾಣಿಗಳಿಗೂ ಅಭಯವನ್ನಿತ್ತು ಭಯರಹಿತನಾಗಿ

ಮನೆಯಿಂದ ಹೊರಟುಬಿಡುತ್ತಾನೆಯೋ ಅಂತಹ ಬ್ರಹ್ಮವಾದಿಗೆ ಅಥವಾ ಬ್ರಹ್ಮಜ್ಞಾನಿಗೆ ತೇಜೋಮಯವಾದ ಲೋಕಗಳು ಲಭಿಸುತ್ತವೆ.

**ಸತ್ತ್ವಸಂಶುದ್ಧಿಃ**= ಸತ್ತ್ವ ಎಂದರೆ ಅಂತಃಕರಣ. ಅಂತಃಕರಣವು ಬಹಳ ಶುದ್ಧವಾಗಿರಬೇಕು. ರಾಗ-ದ್ವೇಷ-ಹರ್ಷ-ಶೋಕ-ಮಮತ್ವ-ಅಹಂಕಾರ-ಮೋಹ-ಮತ್ಸರಾದಿ ವಿಕಾರಗಳಿಂದ ವಿಮುಕ್ತವಾಗಿರಬೇಕು. ಸತ್ತ್ವ ಎಂದರೆ ದ್ರವ್ಯ ಎಂದೂ ಆಗುತ್ತದೆ. 'ದ್ರವ್ಯವು ಶುದ್ಧವಾಗಿರಬೇಕು' ಎಂದರೆ ದ್ರವ್ಯಶುದ್ಧಿಯಿರಬೇಕು. ಸಂಪಾದನೆಯು ಧರ್ಮಮೂಲವಾಗಿರಬೇಕು. ಅಧರ್ಮದಿಂದ ಅನ್ಯಾಯದಿಂದ ದ್ರವ್ಯವನ್ನು ಸಂಪಾದಿಸಬಾರದು. ದ್ರವ್ಯಶುದ್ಧಿಯಿಂದ ದೇಹಶುದ್ಧಿಯಾಗುವುದೆಂದು ಹಿರಿಯರು ಹೇಳುತ್ತಾರೆ.

**ಜ್ಞಾನಯೋಗವ್ಯವಸ್ಥಿತಿಃ** = ಜ್ಞಾನ ಮತ್ತು ಯೋಗಗಳಲ್ಲಿ ನೆಲೆಸು ವುದು–ಎಂದಾದರೂ ಅರ್ಥಮಾಡಬಹುದು. ಜ್ಞಾನಯೋಗದಲ್ಲಿ ನೆಲೆಸು ವುದು–ಎಂದು ಬೇಕಾದರೂ ಅರ್ಥಮಾಡಬಹುದು. ಜ್ಞಾನ ಎಂದರೆ ಆತ್ಮವಿಷಯವಾದ ಜ್ಞಾನ. ಇದನ್ನು ಆಚಾರ್ಯರ ಮೂಲಕ, ಶಾಸ್ತ್ರಗಳ ಅಧ್ಯಯನದ ಮೂಲಕ ಮತ್ತು ಅನುಭವದ ಮೂಲಕ ತಿಳಿದುಕೊಳ್ಳುವುದು. ಅನಂತರ ಯೋಗದಲ್ಲಿ ವ್ಯವಸ್ಥಿತನಾಗಿರುವುದು ಎಂದರೆ ಕರ್ಮಯೋಗ-ಭಕ್ತಿಯೋಗ-ಜ್ಞಾನಯೋಗಗಳಲ್ಲಿ ಅವರವರ ಪ್ರಕೃತಿಗೆ ಅನುಗುಣವಾಗಿ ತೊಡಗಿರುವುದು ಅಥವಾ ಯೋಗಗಳಲ್ಲಿ ನಿಷ್ಠನಾಗಿರುವುದು.

**ದಾನಂ** = ಎಂದರೆ ಪುನಃ ಹಿಂದಕ್ಕೆ ಪಡೆದುಕೊಳ್ಳುವ ಅಭಿಲಾಷೆ ಯಿಲ್ಲದೇ ಸತ್ಪಾತ್ರನಿಗೆ ಕೊಟ್ಟುಬಿಡುವುದು. ಹಣವೊಂದೇ ದಾನಕ್ಕೆ ಯೋಗ್ಯ ಎಂಬುದೇನೂ ಇಲ್ಲ. ಮನುಷ್ಯನ ಉಪಯೋಗಕ್ಕೆ ಬರುವ ಯಾವುದಾದರೂ ದಾನಕ್ಕೆ ವಸ್ತುವಾಗಬಹುದು. ಕೇವಲ ವಸ್ತುಗಳೇ ಅಲ್ಲದೇ ವಿದ್ಯೆಯೂ ಸಹ ದಾನಯೋಗ್ಯವೇ ಆಗಿದೆ. ಆದರೆ ಹೀಗೆ ಮನುಷ್ಯೋಪಯೋಗಿಯಾದ ವಸ್ತುವನ್ನು ದಾನಮಾಡಬೇಕಾದರೂ ಕಾಲ-ದೇಶ-ವರ್ತಮಾನ ಮತ್ತು ಸತ್ಪಾತ್ರದಲ್ಲಿ ದಾನಮಾಡಬೇಕೆಂದು ಶಾಸ್ತ್ರಗಳು ಸಾರುತ್ತವೆ. ಅಧ್ಯಾತ್ಮಮಾರ್ಗಕ್ಕೆ ಇಂತಹ ಸಾತ್ತ್ವಿಕದಾನವೇ ದಾರಿದೀಪವಾಗುವುದು.

**ದಮಃ** = ಇಂದ್ರಿಯಗಳನ್ನು ದಮನಮಾಡುವುದು. ಅವುಗಳ ಸ್ವೇಚ್ಛಾ ವರ್ತನೆಯನ್ನು ತಡೆಗಟ್ಟುವುದು. ಅವುಗಳನ್ನು ವಶದಲ್ಲಿಟ್ಟುಕೊಳ್ಳುವುದು. ಅವುಗಳಿಗೆ ವಶನಾಗದೇ ಇರುವುದು. ಇದಕ್ಕೆ **ದಮ** ಎಂದು ಹೆಸರು. ಇದು ಅಧ್ಯಾತ್ಮಮಾರ್ಗಿಗೆ ಬಹುಮುಖ್ಯವಾದ ಸಾಧನ.

**ಯಜ್ಞಃ** = ದೇವಪೂಜೆ ಎಂದರ್ಥ. **ಯಜ-ದೇವಪೂಜಾಯಾಂ.... ದಾನೇಷು** ಎಂಬ ಧಾತುವಿನಿಂದ ನಿಷ್ಪನ್ನವಾಗಿದೆ. ಆದುದರಿಂದ ದೇವತೆಗಳನ್ನು ಸಂತೃಪ್ತಿಗೊಳಿಸುವ ಅಗ್ನಿಹೋತ್ರವೇ ಮೊದಲಾದ ಶ್ರೌತಕರ್ಮಗಳೂ, ದೇವಯಜ್ಞವೇ ಮುಂತಾದ ಸ್ಮಾರ್ತಕರ್ಮಗಳೂ ಯಜ್ಞಗಳು. ಈ ಹಿಂದೆ ಶ್ರೀಕೃಷ್ಣನೇ ಹೇಳಿರುವಂತೆ ದ್ರವ್ಯಯಜ್ಞ-ತಪೋಯಜ್ಞ-ಯೋಗಯಜ್ಞ-ಸ್ವಾಧ್ಯಾಯಯಜ್ಞ-ಜ್ಞಾನಯಜ್ಞಗಳೂ ಆಗಬಹುದು. ಅಧ್ಯಾತ್ಮಮಾರ್ಗಿಯು ಈ ಯಜ್ಞಗಳನ್ನು ನಿಷ್ಕಾಮಬುದ್ಧಿಯಿಂದ ಮಾಡಬೇಕು. **ಸ್ವಾಧ್ಯಾಯಃ = ಸ್ವಾಧ್ಯಾಯಸ್ಸ್ಯಾಜ್ಜಪಃ**–ಪದೇ ಪದೇ ಹೇಳುತ್ತಿರುವುದಕ್ಕೆ ಸ್ವಾಧ್ಯಾಯವೆಂದು ಹೆಸರು. ಅರ್ಥಾತ್ ಇದು ವೇದಾಭ್ಯಾಸ ಎಂಬ ಅರ್ಥದಲ್ಲಿದೆ. ವೇದವನ್ನು ಪದೇ ಪದೇ ಹೇಳುತ್ತಿರಲೇಬೇಕು. **ಸ್ವಾಧ್ಯಾಯ ಪ್ರವಚನಾಭ್ಯಾಂ ನ ಪ್ರಮದಿತವ್ಯಂ ।** ವೇದಾಧ್ಯಯನ ಮತ್ತು ಪ್ರವಚನಗಳಿಂದ ವಿರಮಿತನಾಗಿರಬಾರದು. **ಸ್ವಾಧ್ಯಾಯಪ್ರವಚನೇ ಏವೇತಿ ನಾಕೋ ಮೌದ್ಗಲ್ಯಃ ।** ಸ್ವಾಧ್ಯಾಯ-ಪ್ರವಚನಗಳೇ ನಿಜವಾದ ತಪಸ್ಸೆಂದು ನಾಕೋಮೌದ್ಗಲ್ಯರು ಹೇಳುತ್ತಾರೆ. ಭಗವಂತನ ಸ್ವರೂಪವನ್ನು ನಾನಾಬಗೆಗಳಲ್ಲಿ ವರ್ಣಿಸುವ ಮತ್ತು ಭಗವಂತನ ಇರುವಿಕೆಯನ್ನು ಸುಸ್ಪಷ್ಟವಾಗಿ ತೋರಿಸಿಕೊಡುವ ವೇದಗಳ ಅಧ್ಯಯನವೂ ಸಹ ಅಧ್ಯಾತ್ಮದರ್ಶನಕ್ಕೆ ಪರಮಸಾಧನ.

**ತಪಃ** = ತಪಸ್ಸು. ಶಾರೀರ, ವಾಚಿಕ ಮತ್ತು ಮಾನಸಿಕ ಎಂಬ ಮೂರು ಬಗೆಯ ನಿಯಮಗಳು. ಇದನ್ನು ಭಗವಂತನೇ ಮುಂದೆ ವಿವರಿಸುತ್ತಾನೆ. ತ್ರಿಕರಣಗಳ ದಂಡನೆ ಮತ್ತು ಮನಸ್ಸಿನ ಏಕಾಗ್ರತೆ–ಇದು ತಪಸ್ಸಿನ ಲಕ್ಷಣ. ವ್ರತೋಪವಾಸಾದಿಗಳು ಕೃಚ್ಛ್ರ-ಚಾಂದ್ರಾಯಣ ಮುಂತಾದುವು ಮತ್ತು ಚಿತ್ತದ ಏಕಾಗ್ರತೆ. **ತಪಃ ಕೃಚ್ಛ್ರಾದಿ ಕರ್ಮ ಚ । ಮನಸ ಇನ್ದ್ರಿಯಾಣಾಂ ಚ ಐಕಾಗ್ರ್ಯಂ ಪರಮಂ ತಪಃ ।**

ಆರ್ಜವಂ–ಎಂದರೆ ಋಜುತ್ವ. ಸರಳವಾಗಿರುವಿಕೆ, ಪ್ರಾಮಾಣಿಕತೆ, ವಂಚನೆ ಇಲ್ಲದಿರುವಿಕೆ. ಮನಸ್ಸು, ಮಾತು ಮತ್ತು ಕ್ರಿಯೆಗಳಲ್ಲಿ ಏಕತ್ವ ದಿಂದಿರುವುದು. ಋಜುತ್ವಕ್ಕೆ ಮತ್ತು ಕಾಪಟ್ಯಕ್ಕೆ ಒಂದು ಶ್ಲೋಕವನ್ನು ಉದಾಹರಿಸುತ್ತಾರೆ :

**ಮನಸ್ಯೇಕಂ ವಚಸ್ಯೇಕಂ ಕರ್ಮಣ್ಯೇಕಂ ಮಹಾತ್ಮನಾಮ್ ।**
**ಮನಸ್ಯೇಕಂ ವಚಸ್ಯೇಕಂ ಕರ್ಮಣ್ಯೇಕಂ ದುರಾತ್ಮನಾಮ್ ॥**

ಮಹಾತ್ಮರ ಮನಸ್ಸಿನಲ್ಲಿ ಅಭಿಪ್ರಾಯವು ಒಂದೇ ಇರುತ್ತದೆ. ಅದನ್ನೇ ಬಾಯಲ್ಲೂ ಆಡುತ್ತಾರೆ. ಆಡಿದಂತೆಯೇ ಕಾರ್ಯವನ್ನೂ ಮಾಡುತ್ತಾರೆ. ಆದರೆ ದುರಾತ್ಮರಾದವರಿಗೆ ಮನಸ್ಸಿನಲ್ಲೇ ಒಂದಿರುತ್ತದೆ. ಮಾತಿನಲ್ಲೇ ಒಂದಿರುತ್ತದೆ. ಮನಸ್ಸಿನಲ್ಲಿರುವುದನ್ನು ಬಾಯಿ ನುಡಿಯುವುದಿಲ್ಲ. ನುಡಿದಂತೆ ನಡೆಯುವುದೂ ಇಲ್ಲ. ಇದು ದುರಾತ್ಮರ ಸ್ವಭಾವವಾಗಿರುತ್ತದೆ. ಅಧ್ಯಾತ್ಮಸಾಧಕನಿಗೆ ಋಜುತ್ವ ಅಥವಾ ಸರಳತೆ ಇರಬೇಕು.

ಅಹಿಂಸಾ = ಯಾವ ಪ್ರಾಣಿಗೂ ಹಿಂಸೆಮಾಡದಿರುವುದು ಅಹಿಂಸೆ. ಹಿಂಸೆ ಎಂದರೆ ಕೇವಲ ಶಾರೀರಕಹಿಂಸೆಯೇ ಅಲ್ಲ. ಮಾನಸಿಕವಾದ ಹಿಂಸೆಯೂ ಕೆಲವು ಸಮಯಗಳಲ್ಲಿ ಶಾರೀರಕವಾದ ಹಿಂಸೆಗಿಂತಲೂ ಅಧಿಕ ವಾದ ನೋವನ್ನುಂಟುಮಾಡುತ್ತದೆ. ವೃಥಾ ಒಬ್ಬನನ್ನು ನಿಂದಿಸುವುದು ; ಒಬ್ಬನ ಮೇಲೆ ಸಲ್ಲದ ಅಪವಾದವನ್ನು ಹೊರಿಸುವುದು ; ತೆಗಳುವುದು ; ಕಠೋರವಾದ ಮಾತುಗಳನ್ನಾಡುವುದು–ಇತ್ಯಾದಿಗಳೂ ಸಹ ಹಿಂಸೆಗಳೇ ಆಗುತ್ತವೆ. ಆದುದರಿಂದ ಯಾವ ಪ್ರಾಣಿಗೂ ಮಾನಸಿಕವಾಗಿಯೇ ಆಗಲೀ, ಶಾರೀರಕವಾಗಿಯೇ ಆಗಲೀ–ನೋವಾಗದಂತೆ ವರ್ತಿಸುವುದೇ ಅಹಿಂಸೆ. ಸರ್ವಪ್ರಾಣಿಗಳನ್ನೂ ತನ್ನಂತೆಯೇ ಕಾಣುವ ಅಧ್ಯಾತ್ಮಸಾಧನೆಯಲ್ಲಿರುವವನು ಸ್ವಾಭಾವಿಕವಾಗಿಯೇ ಅಹಿಂಸಾವ್ರತನಿಷ್ಠನಾಗಿರುತ್ತಾನೆ. ಮನುಷ್ಯನ ಬದುಕುವಿಕೆಗೆ ಅನಿವಾರ್ಯವಾಗಿರುವ ಕೆಲವು ಬಗೆಯ ಹಿಂಸೆಗಳನ್ನು ಆಚರಿಸಲೇಬೇಕಾಗಿ ಬಂದರೂ ಪ್ರಾಯಶ್ಚಿತ್ತದಿಂದ ಅವುಗಳ ಪಾಪಗಳನ್ನು ಕಳೆದುಕೊಳ್ಳಬೇಕು.

ಸತ್ಯಂ = ಇದ್ದುದನ್ನು ಇದ್ದಂತೆ–ಕಂಡುದನ್ನು ಕಂಡಂತೆ ಹೇಳುವುದಕ್ಕೆ

ಸತ್ಯ ಎಂದು ಹೆಸರು. ಅಪ್ರಿಯವಾದುದನ್ನೂ ಸುಳ್ಳಾದುದನ್ನೂ ಬಿಟ್ಟು ಇದ್ದುದನ್ನು ಇದ್ದಂತೆಯೇ ಹೇಳುವುದು ಸತ್ಯ ಎಂದೂ ಹೇಳುತ್ತಾರೆ. **ಸತ್ಯಂ ಬ್ರೂಯಾತ್ಪ್ರಿಯಂ ಬ್ರೂಯಾತ್ ನ ಬ್ರೂಯಾತ್ ಸತ್ಯಮಪ್ರಿಯಮ್ ।** ಸತ್ಯವನ್ನೂ ಹೇಳಬೇಕು. ಪ್ರಿಯವಾದುದನ್ನೂ ಹೇಳಬೇಕು. ಆದರೆ ಅಪ್ರಿಯವಾದ ಸತ್ಯವನ್ನು ಅಕಾಲದಲ್ಲಿ ಹೇಳಬಾರದು–ಎಂಬ ಹಿರಿಯರ ಉಕ್ತಿಯಿದೆ. ವಿಶೇಷಸಂದರ್ಭಗಳಲ್ಲಿ ಸತ್ಯವನ್ನು ಮುಚ್ಚಿಡುವುದು ಧರ್ಮ ವಾಗುವುದು. ಆದರೆ ಎಲ್ಲ ಕಾಲಗಳಲ್ಲಿಯೂ ಈ ವಿನಾಯಿತಿಯನ್ನೇ ಪಡೆದು ಕೊಳ್ಳಲು ಯತ್ನಿಸಬಾರದು. ಸತ್ಯನಿಷ್ಠೆ ಎಂಬುದೊಂದು ತಪಸ್ಸು, **ಸತ್ಯಂ ವದ**–ಎಂದು ಹೇಳಿದನಂತರ **ಧರ್ಮಂ ಚರ**–ಎಂದು ಉಪನಿಷತ್ತು ಹೇಳುತ್ತದೆ. ಸತ್ಯದೊಡನೆ ಧರ್ಮವಿದ್ದರೆ ಅದು ನಿಜವಾದ ಧರ್ಮವೆನಿಸಿ ಕೊಳ್ಳುತ್ತದೆ. ಸತ್ಯನಿಷ್ಠೆಯಿಲ್ಲದ ಧರ್ಮಾಚರಣೆಯು ಠಕ್ಕಿನ ಧರ್ಮಾಚರಣೆ ಯಾಗುತ್ತದೆ.

**ಸತ್ಯವೆಂಬುದು ತಾಯಿ-ತಂದೆ**
**ಸತ್ಯವೆಂಬುದೆ ಬಂಧು-ಬಳಗವು**
**ಸತ್ಯವಾಕ್ಯಕೆ ತಪ್ಪಿ ನಡೆದರೆ**
**ಮೆಚ್ಚನಾ ಜಗದೀಶನು ॥**

ಎಂದು ಕನ್ನಡ ಕವಿಯೊಬ್ಬನು ಬಹಳ ಹಿಂದೆಯೇ ಹೇಳಿದ್ದಾನೆ.

**ಕಿಂ ಭಗವನ್ತಃ ಪರಮಂ ವದನ್ತಿ**–ಭಗವಂತರೇ! ಯಾವುದನ್ನು ಶ್ರೇಷ್ಠವೆಂದು ಹೇಳುತ್ತಾರೆ?–ಎಂಬುದಾಗಿ ಪ್ರಾಜಾಪತ್ಯನಾದ ಸುಪರ್ಣೇಯ ನಾದ ಆರುಣಿಯು ತನ್ನ ತಂದೆಯಾದ ಪ್ರಜಾಪತಿಯ ಬಳಿಗೆ ಹೋಗಿ ಕೇಳಿ ದನು. ಅದಕ್ಕೆ ಪ್ರಜಾಪತಿಯು ಉತ್ತರಿಸುತ್ತಾನೆ :

**ಸತ್ಯೇನ ವಾಯುರಾವಾತಿ ಸತ್ಯೇನಾದಿತ್ಯೋ ರೋಚತೇ ದಿವಿ ಸತ್ಯಂ ವಾಚಃ ಪ್ರತಿಷ್ಠಾ ಸತ್ಯೇ ಸರ್ವಂ ಪ್ರತಿಷ್ಠಿತಂ ತಸ್ಮಾತ್ಸತ್ಯಂ ಪರಮಂ ವದನ್ತಿ....**

ಸತ್ಯದಿಂದಲೇ ಗಾಳಿಯು ಬೀಸುತ್ತದೆ. ಸತ್ಯದಿಂದಲೇ ಸೂರ್ಯನು

ಅಂತರಿಕ್ಷದಲ್ಲಿ ಪ್ರಕಾಶಿಸುತ್ತಾನೆ. ಸತ್ಯದಲ್ಲಿಯೇ ವಾಕ್ಕು ಪ್ರತಿಷ್ಠಿತವಾಗಿದೆ. ಸತ್ಯದಲ್ಲಿಯೇ ಸರ್ವವೂ ಪ್ರತಿಷ್ಠಿತವಾಗಿವೆ. ಆದುದರಿಂದ ಸತ್ಯವನ್ನೇ ಪರಮಶ್ರೇಷ್ಠವೆಂದು ಹೇಳುತ್ತಾರೆ. ತೈ.ಉ. ೪-೭೯

ಆದುದರಿಂದ ಅಧ್ಯಾತ್ಮಸಾಧಕನಿಗೆ ಸತ್ಯವೆಂಬುದೊಂದು ಊರು ಗೋಲಿನಂತೆ.

**ಅಕ್ರೋಧಃ** = ಕೋಪಗೊಳ್ಳದೇ ಇರುವುದು. ಕೋಪಕ್ಕೊಂದು ಕಾರಣ ವಿರುತ್ತದೆ. ಕೋಪವು ತಾನೇ ತಾನಾಗಿ ಬರುವುದಿಲ್ಲ. ಕಾಮಕ್ಕೆ ಪ್ರತಿಬಂಧಕ ವುಂಟಾದಾಗ ಕೋಪವು ಬರುವುದು ಸ್ವಾಭಾವಿಕ. ಆಸೆಯನ್ನೇ ತೊರೆದರೆ ಆಸೆಯ ಮೂಲವಾದ ಕೋಪಕ್ಕೆ ಅವಕಾಶವಿರುವುದಿಲ್ಲ. ಅಭಿಮಾನಕ್ಕೆ ಘಾತ ವುಂಟಾದಾಗ ಕೋಪವು ಬರುತ್ತದೆ. ಯಾರಾದರೂ ತನ್ನನ್ನು ವೃಥಾ ನಿಂದಿಸಿ ದಾಗ, ನಿಷ್ಕಾರಣವಾಗಿ ಹೊಡೆಯಲು ಬಂದಾಗ, ಎಂತಹ ನಿರಭಿಮಾನಿಗೂ ಕೋಪವು ಬಂದುಬಿಡಬಹುದು. ಅಂತಹ ಸಂದರ್ಭಗಳಲ್ಲಿಯೂ ಕೋಪಕ್ಕೆ ಅವಕಾಶವನ್ನೀಯಬಾರದು. ಅಷ್ಟೊಂದು ಸಹನೆಯನ್ನು ತಾಳಬೇಕು. ಅಕ್ರೋಧ ಎಂಬುದಕ್ಕೆ ಇದೇ ಅರ್ಥ. ಕೋಪದಿಂದಾಗಿ ಅಧ್ಯಾತ್ಮಸಾಧನೆಯ ಮಾರ್ಗವೇ ಮಸುಕಾಗಿಬಿಡುತ್ತದೆ.

**ತ್ಯಾಗಃ** = ಎಂದರೆ ಬಿಡುವುದು ಎಂದರ್ಥ. ಏನನ್ನು ಬಿಡುವುದು? ಎಂದರೆ ಅಧ್ಯಾತ್ಮದಲ್ಲಿ ಮಹಾನಿಷ್ಠೆಯನ್ನು ಹೊಂದಿ ಅದಕ್ಕೆ ವಿರುದ್ಧವಾದು ದೆಲ್ಲವನ್ನೂ ಬಿಡುತ್ತಾ ಹೋಗುವುದು. ಹೀಗೆ ಅಕ್ಷರಶಃ ಮಾಡಿದರೆ ಪರಮ ಲಕ್ಷ್ಯದ ಸಾಧನೆಯು ಬಹಳ ಬೇಗ ಆಗುತ್ತದೆ.

**ತ್ಯಾಗೇನೈಕೇ ಅಮೃತತ್ವಮಾನಶುಃ**–ಎಂದು ತೈತ್ತರೀಯೋಪನಿಷತ್ತೂ, **ಈಶಾವಾಸ್ಯಮಿದಂ ಸರ್ವಂ ಯತ್ಕಿಂಚ ಜಗತ್ಯಾಂ ಜಗತ್ । ತೇನ ತ್ಯಕ್ತೇನ ಭುಂಜೀಥಾ ಮಾ ಗೃಧಃ ಕಸ್ಯಸ್ವಿದ್ಧನಂ**–ಎಂದು ಈಶಾವಾಸ್ಯವೂ ತ್ಯಾಗವನ್ನು ಹೊಗಳಿವೆ.

**ಶಾಂತಿಃ** = ಪ್ರತಿಯೊಬ್ಬರ ಅಂತಃಕರಣದಲ್ಲಿಯೂ ತೆರೆಗಳೋಪಾದಿ ಯಲ್ಲಿ ದುಃಖಕ್ಕಾಗಲೀ–ಸಂತೋಷಕ್ಕಾಗಲೀ ಉದ್ವೇಗಗಳು ಏಳುತ್ತಲೇ ಇರು ತ್ತವೆ. ಅಂತಃಕರಣದ ಈ ಆಂದೋಳನವು ಸುಪ್ತವಾಗುವುದಕ್ಕೆ ಶಾಂತಿ ಎಂದು

ಹೆಸರು. ಸುಖದಲ್ಲಾಗಲೀ, ಕಷ್ಟದಲ್ಲಾಗಲೀ–ಯಾವ ವಿಧವಾದ ಉದ್ವೇಗವೂ ಇಲ್ಲದಿರುವಿಕೆಯನ್ನು ಶಾಂತಿ ಎಂದು ಕರೆಯುತ್ತಾರೆ. ಇಂತಹ ಶಾಂತಿಯನ್ನು ಪಡೆದುಕೊಳ್ಳಬೇಕಾದರೆ ಮನಸ್ಸನ್ನು ಸಂಪೂರ್ಣವಾಗಿ ನಿಗ್ರಹಿಸಿರಬೇಕು ಮತ್ತು ಶಾಂತಿಯ ಸಾಗರನಾದ ಪರಮಾತ್ಮನ ಕಡೆಗೇ ಯಾವಾಗಲೂ ಚಿತ್ತವೃತ್ತಿಯಿರಬೇಕು.

**ಅಪೈಶುನಮ್** = ಪೈಶುನ ಎಂದರೆ ಚಾಡಿಹೇಳುವುದು. ಒಬ್ಬನನ್ನು ದೂಷಿಸುವುದು, ಚಾಡಿಯ ಮಾತನ್ನು ಕೇಳಲು ಪ್ರಿಯವಾಗಿರುತ್ತದೆ. ಚಾಡಿ ಹೇಳುವುದರಿಂದ ಆಗಬಾರದ ತೊಂದರೆಗಳೂ ಅನ್ಯಾಯಗಳೂ ಆಗುತ್ತವೆ. ಕೆಲವು ವೇಳೆ ನಿರ್ದೋಷಿಯೂ ತೊಂದರೆಪಡುವಂತಾಗುತ್ತದೆ. ಆದುದರಿಂದ ಚಾಡಿಯನ್ನು ಹೇಳಬಾರದು ಮತ್ತು ಕೇಳಲೂಬಾರದು.

**ದಯಾ**= ದಯೆ ಎಂದರೆ ಕನಿಕರ, ಕರುಣೆ, ಅನುಕಂಪ. ಇತರರ ಕಷ್ಟವನ್ನು ನೋಡಿ ಮನಕರಗುವುದು. ಇತರರ ಕಷ್ಟವನ್ನು ನೋಡಿ ಪರಿಹರಿಸುವ ಇಚ್ಛೆ.

**ಯತ್ನಾದಪಿ ಪರಕ್ಲೇಶಂ ಹರ್ತುಂ ಯಾ ಹೃದಿ ಜಾಯತೇ ।**
**ಇಚ್ಛಾ ಭೂಮಿಸುರಶ್ರೇಷ್ಠ ಸಾ ದಯಾ ಪರಿಕೀರ್ತಿತಾ ॥**

ಭೂಸುರಶ್ರೇಷ್ಠನೇ! ಪ್ರಯತ್ನದಿಂದಲಾದರೂ ಇತರರ ಕಷ್ಟವನ್ನು ಪರಿಹರಿಸಬೇಕೆಂಬ ಹೃದಯದಲ್ಲಿ ಉಂಟಾಗುವ ಭಾವನೆಗೆ ದಯೆ ಎಂದು ಹೆಸರು.

ತಮ್ಮಂತೆಯೇ ಇತರರೂ ಎಂದು ಭಾವಿಸಿ ಸತ್ಪುರುಷರಾದವರು ಸರ್ವತ್ರ ಎಲ್ಲರ ವಿಷಯದಲ್ಲಿಯೂ ದಯೆಯನ್ನೇ ತೋರುತ್ತಾರೆ. ಸಾಧು-ಸತ್ಪುರುಷರು, ಜ್ಞಾನಿಗಳು ಆತ್ಮೌಪಮ್ಯದಿಂದ ಸಕಲಪ್ರಾಣಿಗಳ ವಿಷಯದಲ್ಲಿಯೂ ದಯೆಯನ್ನು ತೋರಿಸಿಯಾರು. ಆದರೆ ಈ ವಿಧವಾದ ದಯೆಯು ಎಲ್ಲರಿಗೂ ಉಂಟಾಗುವುದಿಲ್ಲ. ಮೋಹವೆಲ್ಲಿರುವುದೋ ಅಲ್ಲಿ ದಯೆಯೂ ಇರುತ್ತದೆ. ದಯೆಯನ್ನು ಮೋಹದ ಪತ್ನೀ ಎಂದೂ ಕರೆದಿದ್ದಾರೆ.

**ಮೋಹಪತ್ನೀ ದಯಾ ಸಾಧ್ವೀ ಪೂಜಿತಾ ಚ ಜಗತ್ಪ್ರಿಯಾ ।**
**ಸರ್ವಲೋಕಾಶ್ಚ ಸರ್ವತ್ರ ನಿಷ್ಫಲಾಶ್ಚ ಯಯಾ ವಿನಾ ॥**

ಮೋಹದ ಪತ್ನಿಯಾದ ದಯಾ ಎಂಬುವಳು ಸರ್ವತ್ರಪೂಜ್ಯಳಾಗಿರುತ್ತಾಳೆ. ಜಗತ್ಪ್ರಿಯಳೂ ಆಗಿದ್ದಾಳೆ. ಸರ್ವಲೋಕಗಳೂ ಸರ್ವಕಾಲದಲ್ಲಿಯೂ ದಯೆಯಿಂದ ಹೀನವಾಗಿಬಿಟ್ಟರೆ ಫಲರಹಿತಗಳೇ ಆಗುತ್ತವೆ. ದಯೆಯೆಂಬುದು ಮನುಷ್ಯನ ಸ್ವಭಾವಗುಣವೇ ಆಗಿರುತ್ತದೆ. ಆದರೆ ಸಾಮಾನ್ಯ ಮನುಷ್ಯನಿಗಿದು ವ್ಯಾಮೋಹದಿಂದ ಉಂಟಾಗುವುದಾಗಿದ್ದು ತಮ್ಮವರೆನಿಸಿಕೊಂಡವರ ಮೇಲೆ ಮಾತ್ರ ದಯಾರಸವು ಹರಿಯಲು ಅವಕಾಶವಿರುತ್ತದೆ. ಇದು ಒಂದು ಬಂಧನವಾಗಿಯೇ ಪರಿಣಮಿಸುತ್ತದೆ. ಅಧ್ಯಾತ್ಮಜೀವಿಗೆ ಮೋಹವೇ ಇಲ್ಲದಿರುವುದರಿಂದ ಬಂಧನರೂಪವಾದ ದಯೆಯು ಅವನಲ್ಲಿರುವುದಿಲ್ಲ. ಅವನು ವಿಶ್ವಪ್ರೇಮಿ. ವಿಶ್ವದಲ್ಲಿರುವವರೆಲ್ಲರೂ ತನ್ನವರೇ ಎಂದು ಭಾವಿಸತಕ್ಕವನು. **ಸರ್ವೇ ಜನಾಃ ಸುಖಿನೋ ಭವನ್ತು**– ಎಂದು ದೇವರಲ್ಲಿ ಯಾವಾಗಲೂ ಮೊರೆಯಿಡತಕ್ಕವನು. ಆದುದರಿಂದ ಆತ್ಮೌಪಮ್ಯದಿಂದ ಉಂಟಾಗುವ ದಯೆಯು ಇರಬೇಕು.

**ಅಲೋಲುಪ್ತ್ವಂ** = ಇಂದ್ರಿಯಗಳಿಗೆ ಬೇಕಾದ ವಸ್ತುಗಳು ಸಿಕ್ಕಿದೊಡನೆಯೇ ಉಪಭೋಗಿಸುವುದು ಮತ್ತು ಅದರಲ್ಲಿಯೇ ತಲ್ಲೀನನಾಗಿದ್ದುಬಿಡುವುದು ; ಸ್ತ್ರೀಲೋಲ-ಸಂಗೀತಲೋಲ ಇತ್ಯಾದಿ. ಇಂದ್ರಿಯಸುಖದಲ್ಲಿ ಲೋಲರಾದವರಿಗೆ ಇಹ-ಪರಗಳ ಪರಿವೆಯೇ ಇರುವುದಿಲ್ಲ. ಇದಕ್ಕೆ ಲೋಲುಪತೆ ಎಂದೂ ಹೇಳುತ್ತಾರೆ. ಇಂದ್ರಿಯಗಳಿಗೆ ಬೇಕಾದ ವಿಷಯಗಳು ಸನ್ನಿಹಿತವಾಗಿದ್ದರೂ–ಆ ವಿಷಯಸುಖವನ್ನು ಅನುಭವಿಸುವ ಸಾಮರ್ಥ್ಯವಿದ್ದರೂ ಅದನ್ನು ಬಯಸದೇ ಇರುವುದು ಅಲೋಲುಪ್ತ್ವ.

**ಮಾರ್ದವಂ** = ಮೃದುತ್ವ. ಬೆಣ್ಣೆಯಂತಹ ಮಾತನಾಡುವವನು ಎಂದು ಹೇಳುತ್ತಾರೆ. ಒಬ್ಬನ ಮಾತು ಕೇಳಲು ಬಹಳ ಸೊಗಸಾಗಿರುತ್ತದೆ. ಮನಸ್ಸಿನ ಮೇಲೆ ಒಳ್ಳೆಯ ಪರಿಣಾಮವನ್ನುಂಟುಮಾಡುತ್ತದೆ. ಇದು ವಚನಮಾರ್ದವ. ಆದರೆ ಕೇವಲ ವಚನಮಾರ್ದವವಿದ್ದು ಹೃದಯದಲ್ಲಿ ಕಾಠಿಣ್ಯವಿರಕೂಡದು. ಮಾತಿನಂತೆಯೇ ಹೃದಯವೂ ಬೆಣ್ಣೆಯಂತೆ ಮೃದುವಾಗಿರಬೇಕು. ಕಾರ್ಯವೂ ಸಹ ಹಾಗೆಯೇ ಇರಬೇಕು. ಅರ್ಥಾತ್ ಸಾತ್ತ್ವಿಕಸ್ವಭಾವದವನಾಗಿರಬೇಕು.

**ಹ್ರೀಃ**= ನಾಚಿಕೆ. ಎಂದರೆ ಕೆಟ್ಟಕೆಲಸವನ್ನು ಮಾಡುವ ವಿಷಯದಲ್ಲಿ ನಾಚಿಕೆ. ತನ್ನ ವಿಷಯವಾಗಿ ಮಾಡುವ ಹೊಗಳಿಕೆಯನ್ನು ಕೇಳಲು ನಾಚಿಕೆ. ಇಂತಹ ನಾಚಿಕೆಗಳು ಅಧ್ಯಾತ್ಮಸಾಧಕನಿಗೆ ಅವಶ್ಯವಾಗಿ ಇರಬೇಕಾದುದೇ.

**ಅಚಾಪಲಮ್** = ತಿನ್ನಬೇಕೆಂಬ ಚಪಲ, ಕೂಡಿಡಬೇಕೆಂಬ ಚಪಲ, ವಿಹರಿಸಬೇಕೆಂಬ ಚಪಲ, ಜೂಜಾಡಬೇಕೆಂಬ ಚಪಲ. 'ಇಂದು ಇದು ಬೇಕು. ನಾಳೆ ಅದು ಬೇಕು'–ಎಂದು ಕ್ಷಣ-ಕ್ಷಣಕ್ಕೂ ಧಾವಂತಪಡುತ್ತಿರುವುದಕ್ಕೆ ಚಾಪಲ ಅಥವಾ ಚಪಲಚಿತ್ತತೆ ಎಂದು ಹೆಸರು. ಹಾಗೇ ಮಾಡದೇ ಇರುವವನು ; ಪರಮಾತ್ಮನ ಹೊರತಾಗಿ ಯಾವುದನ್ನೂ ಬೇಕೆಂದು ಬಯಸದವನು ; ಸ್ಥಿರಬುದ್ಧಿಯುಳ್ಳವನು–ಅಚಾಪಲ.

**ತೇಜಃ** =ಇಲ್ಲಿ ತೇಜಸ್ಸೆಂಬುದು ಮುಖದ ಕಾಂತಿ ಎಂಬ ಅರ್ಥದಲ್ಲಿಲ್ಲ. ಗಟ್ಟಿತನ ಎಂಬ ಅರ್ಥದಲ್ಲಿದೆ. ಅಧ್ಯಾತ್ಮಸಾಧನೆಗಾಗಿ ಎಂತಹ ಕಷ್ಟವನ್ನಾದರೂ ಸಹಿಸುವ ಸಾಮರ್ಥ್ಯವುಳ್ಳವನು ; ಗಟ್ಟಿಗ. ಅಧ್ಯಾತ್ಮಸಾಧನೆಗೆ ಈ ಗಟ್ಟಿತನವು ಇರಲೇಬೇಕು.

**ಕ್ಷಮಾ** = ತಾಳ್ಮೆ. ತಾಳಿದವನು ಬಾಳಿಯಾನು–ಎಂಬ ಗಾದೆಯನ್ನು ಕೇಳಿದ್ದೇವೆ. ಎಂತಹ ಸಂದರ್ಭದಲ್ಲಿಯೂ ಉದ್ವೇಗಗೊಳ್ಳದಿರುವುದು ; ಕೋಪಗೊಳ್ಳದಿರುವುದು ತಾಳ್ಮೆ ಅಥವಾ ಕ್ಷಮೆ–ಎನಿಸುತ್ತದೆ.

ತನ್ನ ವಿಷಯದಲ್ಲಿ ಅಪರಾಧವನ್ನೆಸಗಿದರೂ ಅವನಿಗೆ ಕೆಟ್ಟುದನ್ನು ಎಣಿಸದಿರುವುದು ಕ್ಷಮೆ. ಕ್ಷಮಾಪಣೆ, ಕ್ಷಮಿಸುವುದು–ಇತ್ಯಾದಿ ಶಬ್ದಗಳು ಈ **ಕ್ಷಮಾ** ಎಂಬ ಶಬ್ದದಿಂದಲೇ ಹುಟ್ಟಿವೆ. ಕ್ಷಮಾಪಣೆಯನ್ನು ಕೇಳುವುದು ಎಂದರೆ ಮಾಡಿದ ಅಪರಾಧವನ್ನು ಮರೆತುಬಿಡುವಂತೆ ಪ್ರಾರ್ಥಿಸುವುದು. ಯಾವ ವಿಧವಾದ ಪ್ರಾರ್ಥನೆಯೂ ಇಲ್ಲದೆ ಮಾಡಿದ ಅಪರಾಧವನ್ನು ಮರೆತುಬಿಡುವುದೇ ಕ್ಷಮಾಗುಣ. ಇದು ಅಧ್ಯಾತ್ಮಸಾಧಕನ ಸಹಜಗುಣವಾಗಬೇಕು. ಆಗಲೇ ಮಾರ್ಗವು ಸುಗಮವಾಗುತ್ತದೆ.

**ಧೃತಿಃ** = ಧೈರ್ಯ. ಆಪತ್ಕಾಲದಲ್ಲಿಯೂ ಧರ್ಮದಿಂದ ವಿಚಲಿತನಾಗದೇ ಇರುವುದೇ ಧೃತಿ. ಕಾಮ-ಕ್ರೋಧ-ಲೋಭ-ಮೋಹ-ಭಯಾದಿ

ಕಾರಣಗಳಿಗೆ ವಶನಾಗಿ ತನ್ನ ಧಾರ್ಮಿಕಕ್ರಿಯೆಗಳಿಂದ ವಿಮುಖನಾಗದಿರುವವನೇ ಧೃತಿಮಂತ.

ಚಿತ್ತಕ್ಷೋಭೆಯ ಪ್ರಸಂಗದಲ್ಲಿಯೂ ವಿಕಾರಕ್ಕೆ ಎಡೆಗೊಡದೆ ಮನಸ್ಸನ್ನು ಸ್ಥಿರವಾಗಿ ಧರಿಸಿಕೊಳ್ಳುವಿಕೆಗೆ ಧೃತಿ ಎಂದು ಹೆಸರು.

**ಶೌಚಂ** = ಶುಚಿತ್ವ. ಶೌಚವು ಅಂತಃಶುದ್ಧಿ, ಬಹಿಃಶುದ್ಧಿ–ಎಂದು ಎರಡು ಬಗೆ. **ಸತ್ತ್ವಸಂಶುದ್ಧಿ** ಎಂದು ಎರಡನೆಯ ಶ್ಲೋಕದಲ್ಲಿ ಅಂತಃಕರಣದ ಶುದ್ಧಿಯನ್ನು ಹೇಳಿದ್ದಾಗಿದೆ. ಆದುದರಿಂದ ಇಲ್ಲಿ ಹೇಳಿರುವ ಶೌಚವನ್ನು ಬಹಿಃಶುದ್ಧಿ ಎಂದು ಇಟ್ಟುಕೊಳ್ಳಬಹುದು. ನೀರು ಮತ್ತು ಮಣ್ಣು ಮುಂತಾದುವುಗಳಿಂದ ಬಹಿಃಶುದ್ಧಿಯಾಗುತ್ತದೆ. ಮನಸ್ಸಿನ ಕೊಳೆಯನ್ನು ತೆಗೆದುಹಾಕಿದರೆ ಸಾಕು–ಎಂದು ಕೆಲವರು ಹೇಳುವುದುಂಟು. ಶರೀರದಲ್ಲಿನ ಕೊಳೆಯನ್ನು ತೆಗೆದುಹಾಕುವ ಕೌಶಲವಿದ್ದರೆ ಮನಸ್ಸಿನ ಕೊಳೆಯನ್ನೂ ತೆಗೆಯಲು ಯತ್ನಿಸಬಹುದು. ಶರೀರವು ನಿರ್ಮಲವಾಗಿದ್ದರೆ ಮನಸ್ಸನ್ನೂ ನಿರ್ಮಲಗೊಳಿಸಲು ಪ್ರಯತ್ನಿಸಬಹುದು. ಆದುದರಿಂದ ಅಂತಃಶುದ್ಧಿಗೆ ಹಿನ್ನೆಲೆಯಾಗಿ ಬಹಿಃಶುದ್ಧಿಯೂ ಬೇಕಾಗುತ್ತದೆ.

**ಅದ್ರೋಹಃ** = ದ್ರೋಹಾಭಾವ ; ವಂಚನೆಯಿಲ್ಲದಿರುವಿಕೆ. ದ್ರೋಹ ಮಾಡುವುದು ಎಂದರೆ ಒಬ್ಬನಿಗೆ ವೃಥಾ ತೊಂದರೆಕೊಡುವುದು ; ಅನಿಷ್ಟವನ್ನು ಬಗೆಯುವುದು. ಆದರೆ ಅಧ್ಯಾತ್ಮಸಾಧಕನು ಕನಸಿನಲ್ಲಾಗಲೀ ನನಸಿನಲ್ಲಾಗಲೀ ಯಾವುದೊಂದು ಪ್ರಾಣಿಗೂ ಅನಿಷ್ಟವನ್ನು ಬಯಸತಕ್ಕವನಲ್ಲ. ಆ ಅದ್ರೋಹಗುಣವು ಅವನಲ್ಲಿ ಮೂರ್ತಿಮತ್ತಾಗಿ ನೆಲೆಸಿರುತ್ತದೆ.

**ನಾತಿಮಾನಿತಾ** = ಅತಿಮಾನ ಎಂದರೆ ಬಹಳವಾದ ಅಭಿಮಾನವಿರುವುದು. ನಾತಿಮಾನ ಎಂದರೆ ಹೆಚ್ಚು ಅಭಿಮಾನವಿಲ್ಲದಿರುವುದು. ದುರಭಿಮಾನವಿರಬಾರದು. ಒಳ್ಳೆಯ ಅಭಿಮಾನವೂ ಸಹ ಮರ್ಯಾದೆ ಮೀರಿದ ಪ್ರಮಾಣದಲ್ಲಿರಬಾರದು. ಅಧ್ಯಾತ್ಮಸಾಧಕನು ತಾನು ಶ್ರೇಷ್ಠನೆಂದಾಗಲೀ, ಪೂಜ್ಯನೆಂದಾಗಲೀ, ಎಲ್ಲರೂ ತನ್ನನ್ನು ಮರ್ಯಾದೆಮಾಡಬೇಕೆಂದಾಗಲೀ–ಎಂದೂ ಭಾವಿಸಬಾರದು. ಇವನು ಬಹುಸರಳನಾಗಿರಬೇಕು. ಆರ್ಜವ–ಎಂಬ ಗುಣವು ಇವನಲ್ಲಿ ಮೂರ್ತಿಮತ್ತಾಗಿರಬೇಕು.

ಭಾರತ! ದೈವೀಸಂಪತ್ತನ್ನೇ ಲಕ್ಷ್ಯವನ್ನಾಗಿಟ್ಟುಕೊಂಡು ಹುಟ್ಟಿದವನಿಗೆ ಅಭಯವೇ ಮೊದಲಾಗಿ ಅಮಾನಿತ್ವದವರೆಗಿನ ಗುಣಗಳಿರುತ್ತವೆ. ದೈವೀ ಸಂಪತ್ತು ಎಂದರೆ ದೇವತೆಗಳ ಸಂಪತ್ತಲ್ಲ. ದಿವ್ಯವಾದ ಸಂಪತ್ತು ; ಅಮೋಘವಾದ ಸಂಪತ್ತು ; ಅಧ್ಯಾತ್ಮಸಂಪತ್ತು. ಮೋಕ್ಷಸಂಪತ್ತನ್ನು ಪಡೆಯುವುದಕ್ಕಾಗಿಯೇ ಹುಟ್ಟಿರುವವರಿಗೆ ಈ ಗುಣಗಳಿರುತ್ತವೆ.)

o o o

ಒಂಬತ್ತನೆಯ ಅಧ್ಯಾಯದಲ್ಲಿ ದೈವೀ, ಆಸುರೀ, ರಾಕ್ಷಸೀ–ಎಂದು ಪ್ರಾಣಿಗಳ ಪ್ರಕೃತಿಗಳನ್ನು ಸೂಚನೆಮಾಡಲಾಗಿತ್ತು. ಅವುಗಳನ್ನು ವಿಸ್ತಾರವಾಗಿ ನಿರೂಪಿಸಲು ಈ ಅಧ್ಯಾಯವು ಪ್ರಾರಂಭವಾಗುತ್ತದೆ. ಅವುಗಳಲ್ಲಿ ದೈವೀ ಪ್ರಕೃತಿಯು ಸಂಸಾರದಿಂದ ಮೋಕ್ಷಕ್ಕೆ ಮತ್ತು ಆಸುರೀ–ರಾಕ್ಷಸೀಪ್ರಕೃತಿಗಳು ಸಂಸಾರಬಂಧನಕ್ಕೆ ಕಾರಣವಾಗುತ್ತವೆ. ಆದುದರಿಂದ, ಸಂಪಾದಿಸಿಕೊಳ್ಳುವುದಕ್ಕೋಸ್ಕರ ದೈವೀಪ್ರಕೃತಿಯನ್ನೂ, ಬಿಟ್ಟುಬಿಡುವುದಕ್ಕೋಸ್ಕರ ಆಸುರೀ-ರಾಕ್ಷಸೀಪ್ರಕೃತಿಗಳನ್ನೂ ಪ್ರದರ್ಶಿಸುತ್ತಾನೆ.

**ಅಭಯಂ** = ನಿರ್ಭಯತೆ. **ಸತ್ತ್ವಸಂಶುದ್ಧಿಃ** = ಅಂತಃಕರಣದ ಶುದ್ಧಿ. ವ್ಯವಹಾರದಲ್ಲಿ ಮತ್ತೊಬ್ಬರೊಡನೆ ಕಪಟ, ಅಸತ್ಯ–ಮುಂತಾದ ದುರ್ಗುಣಗಳನ್ನು ಬಿಟ್ಟು ಶುದ್ಧಭಾವದಿಂದಿರುವಿಕೆ. **ಜ್ಞಾನಯೋಗವ್ಯವಸ್ಥಿತಿಃ** = ಜ್ಞಾನವೆಂದರೆ ಶಾಸ್ತ್ರದಿಂದ ಮತ್ತು ಆಚಾರ್ಯರಿಂದ ಆತ್ಮವೇ ಮುಂತಾದ ಪದಾರ್ಥಗಳನ್ನು ತಿಳಿದುಕೊಳ್ಳುವಿಕೆ. ಯೋಗವೆಂದರೆ ಹಾಗೆ ತಿಳಿದುಕೊಂಡ ಪದಾರ್ಥಗಳನ್ನು, ಇಂದ್ರಿಯ ಮುಂತಾದುವುಗಳನ್ನು ನಿಗ್ರಹಿಸುವುದರಿಂದುಂಟಾದ ಏಕಾಗ್ರತೆಯಿಂದ ತನ್ನ ಆತ್ಮದಲ್ಲಿ ಪ್ರತ್ಯಕ್ಷವಾಗಿ ಅನುಭವಿಸಿಕೊಳ್ಳುವಿಕೆ. ಇಂತಹ ಜ್ಞಾನ ಮತ್ತು ಯೋಗಗಳಲ್ಲಿ ನೆಲೆಗೊಳ್ಳುವಿಕೆ, ತನ್ನಿಷ್ಠತೆ. ಇದೇ ಮುಖ್ಯವಾದ ದೈವೀಸಂಪತ್ತು ; ಸಾತ್ತ್ವಿಕಸಂಪತ್ತು. ಮತ್ತೂ ಅಧಿಕೃತರಾದವರು ಯಾವ ವಿಷಯದಲ್ಲಿ ಯಾವ ಸಾತ್ತ್ವಿಕತೆಯನ್ನು ಹೊಂದಿರುತ್ತಾರೆಂದರೆ : **ದಾನಂ** = ತನ್ನಲ್ಲಿರುವ ಅನ್ನ ಮುಂತಾದ ವಸ್ತುಗಳನ್ನು ತನ್ನ ಶಕ್ತಿಗೆ ಅನುಗುಣವಾಗಿ ವಿಭಾಗಮಾಡಿಕೊಳ್ಳುವಿಕೆ. **ದಮಃ** = ಹೊರಗಿನ ಇಂದ್ರಿಯಗಳನ್ನು ಸಂಯಮಗೊಳಿಸುವಿಕೆ. **ಯಜ್ಞಃ** = ಅಗ್ನಿಹೋತ್ರವೇ

ಮುಂತಾದ ಶ್ರೌತಯಜ್ಞಗಳು ಮತ್ತು ದೇವಯಜ್ಞವೇ ಮುಂತಾದ ಸ್ಮಾರ್ತ ಯಜ್ಞಗಳು. **ಸ್ವಾಧ್ಯಾಯಃ** = ಅದೃಷ್ಟಪದಾರ್ಥದ ಲಾಭವನ್ನು ಪಡೆಯಲು ಋಗ್ವೇದ ಮುಂತಾದುವುಗಳನ್ನು ಅಧ್ಯಯನಮಾಡುವಿಕೆ. **ತಪಃ** = ಮುಂದೆ ಹೇಳುವ ಶಾರೀರತಪಸ್ಸು ಮುಂತಾದುವು. **ಆರ್ಜವಂ** = ಯಾವಾಗಲೂ ಸರಳವಾಗಿರುವಿಕೆ. **ಅಹಿಂಸಾ** = ಪ್ರಾಣಿಗಳಿಗೆ ಪೀಡೆಯನ್ನು ಮಾಡದಿರುವಿಕೆ. **ಸತ್ಯಂ**=ಅಪ್ರಿಯವೂ ಅಸತ್ಯವೂ ಅಲ್ಲದೇ ಯಥಾರ್ಥವಾಗಿರುವ ಮಾತ ನ್ನಾಡುವಿಕೆ. **ಅಕ್ರೋಧಃ** = ಇತರರು ಬೈದಾಗ, ಹೊಡೆದಾಗ ಉಂಟಾಗುವ ಕೋಪವನ್ನು ಶಮನಗೊಳಿಸುವಿಕೆ. **ತ್ಯಾಗಃ** = ಸಂನ್ಯಾಸ. (ಏಕೆಂದರೆ : ದಾನ ವನ್ನು ಹಿಂದೆಯೇ ಹೇಳಿಯಾಗಿದೆ.) **ಶಾನ್ತಿಃ** = ಅಂತಃಕರಣದ ಉಪಶಮ. **ಅಪೈಶುನಮ್** = ಪೈಶುನವೆಂದರೆ ಒಬ್ಬನ ಛಿದ್ರವನ್ನು ಮತ್ತೊಬ್ಬನಿಗೆ ಪ್ರಕಟಪಡಿಸುವಿಕೆ. ( ಚಾಡಿಕೋರತನ. ) ಅದು ಇಲ್ಲದಿರುವಿಕೆಯು ಅಪೈಶುನ. **ಭೂತೇಷು ದಯಾ** = ದುಃಖಗೊಂಡ ಭೂತಗಳಲ್ಲಿ ಕೃಪೆ. **ಅಲೋಲುಪ್ತ್ವಂ** = ವಿಷಯಗಳ ಸಾನ್ನಿಧ್ಯದಲ್ಲಿಯೂ ಇಂದ್ರಿಯಗಳ ವಿಕಾರ ವಿಲ್ಲದೇ ಇರುವಿಕೆ. **ಮಾರ್ದವಂ** = ಕೋಮಲತೆ ; ಕ್ರೌರ್ಯವಿಲ್ಲದೇ ಇರು ವಿಕೆ. **ಹ್ರೀಃ**= ಲಜ್ಜೆ. **ಅಚಾಪಲಂ** = ಪ್ರಯೋಜನವಿಲ್ಲದೇ ನಾಲಿಗೆ, ಕೈಕಾಲು– ಮುಂತಾದುವುಗಳ ವ್ಯಾಪಾರವನ್ನು ಮಾಡದೇ ಇರುವಿಕೆ. **ತೇಜಃ**= ಪ್ರಗಲ್ಭತೆ (ಚರ್ಮದ ಕಾಂತಿಯಲ್ಲ.) **ಕ್ಷಮಾ** = ಮತ್ತೊಬ್ಬನು ನಿಂದಿಸಿದಾಗ ಅಥವಾ ಹೊಡೆದಾಗ ಒಳಗಡೆ ವಿಕಾರವುಂಟಾಗದೇ ಇರುವಿಕೆ. (ವಿಕಾರವು ಉಂಟಾ ದಾಗ ಅದನ್ನು ಶಮನಗೊಳಿಸುವಿಕೆಯು ಅಕ್ರೋಧ ಎಂದು ಹಿಂದೆಯೇ ಹೇಳಿದೆ. ಕ್ಷಮಾ ಮತ್ತು ಅಕ್ರೋಧ ಇವುಗಳಿಗೆ ಇದೇ ವ್ಯತ್ಯಾಸ.) **ಧೃತಿಃ** = ಶರೀರ ಮತ್ತು ಇಂದ್ರಿಯ–ಮುಂತಾದುವುಗಳಲ್ಲಿ ಆಯಾಸವುಂಟಾದಾಗ ಆ ಆಯಾಸವನ್ನು ಹೋಗಲಾಡಿಸುವ ಅಂತಃಕರಣದ ವೃತ್ತಿ. ಇದರಿಂದ ಪ್ರೋತ್ಸಾಹಗೊಂಡೇ ಇಂದ್ರಿಯಗಳು ಮತ್ತು ಶರೀರವು ತಮ್ಮ ಕೆಲಸಗಳಲ್ಲಿ ಆಯಾಸಗೊಳ್ಳದೇ ಇರುವುದು. **ಶೌಚಂ** =ಇದು ಎರಡು ಬಗೆ. ಮಣ್ಣು ಮತ್ತು ನೀರು ಮುಂತಾದುವುಗಳಿಂದ ಹೊರಗಿನ ಶುದ್ಧಿ. ಹಾಗೆಯೇ ಕಪಟ, ರಾಗ–ಮುಂತಾದ ಕಾಲುಷ್ಯವಿಲ್ಲದೇ ಇರುವಿಕೆ ಎಂಬ ಮನಸ್ಸು-ಬುದ್ಧಿಗಳ ನೈರ್ಮಲ್ಯವೆಂಬ ಒಳಗಿನ ಶುದ್ಧಿ. **ಅದ್ರೋಹಃ** = ಇತರರಿಗೆ ತೊಂದರೆ

ಯನ್ನು ಬಗೆಯದೇ ಇರುವಿಕೆ. ಹಿಂಸೆಮಾಡದೇ ಇರುವಿಕೆ. **ನಾತಿಮಾನಿತಾ**= ತನ್ನನ್ನು ಅತಿಶಯಪೂಜ್ಯನೆಂದು ಭಾವಿಸಿಕೊಳ್ಳುವುದು ಅತಿಮಾನಿತ್ವ. ಅದು ಇಲ್ಲದೇ ಇರುವಿಕೆಯು **ನಾತಿಮಾನಿತಾ**–ಇವುಗಳನ್ನು ಹೊಂದಿರುತ್ತಾರೆ.

ಅಭಯವೇ ಮುಂತಾಗಿ ಅತಿಮಾನಿತೆಯ ಅಭಾವ–ಎಂಬುವವರೆಗಿನ ಲಕ್ಷಣಗಳು ಸಂಪತ್ತಿನಿಂದ ಕೂಡಿ ಹುಟ್ಟಿದ ಮನುಷ್ಯನಲ್ಲಿ ಇರುತ್ತವೆ. ಎಂತಹ ಸಂಪತ್ತಿನಿಂದ ಕೂಡಿದ ಮನುಷ್ಯನಲ್ಲಿ ಎಂದರೆ : ದೈವೀಸಂಪತ್ತನ್ನು ಒಳಗೊಂಡು ಹುಟ್ಟಿದ ಮನುಷ್ಯನಲ್ಲಿ ಎಂದರೆ ದೇವತೆಗಳ ವಿಭೂತಿಗೆ ಯಾವನು ಪಾತ್ರನಾಗಿದ್ದಾನೆಯೋ ಮತ್ತು ಯಾವನಿಗೆ ಭವಿಷ್ಯದಲ್ಲಿ ಕಲ್ಯಾಣವು ಆಗಿಯೇ ಆಗುತ್ತದೆಯೋ ಅವನಲ್ಲಿ. (ಶಂ. ಭಾ.)

ಹಿಂದಿನ ಮೂರು ಅಧ್ಯಾಯಗಳಲ್ಲಿ ಹೇಳಿದ್ದ ವಿಷಯಗಳು ಸ್ಥಿರಪಡಬೇಕಾದರೆ ಶಾಸ್ತ್ರಕ್ಕೆ ವಶವಾಗಿ ನಡೆಯಬೇಕು–ಎಂಬ ನಿಯಮವನ್ನು ಪ್ರತಿಪಾದಿಸಬೇಕು. ಅದಕ್ಕಾಗಿ ಶಾಸ್ತ್ರಕ್ಕೆ ವಶರಾಗಿರುವ ದೈವೀಪ್ರಕೃತಿಗಳ ಮತ್ತು ಅದಕ್ಕೆ ವಿರುದ್ಧವಾಗಿರುವ ಆಸುರೀಪ್ರಕೃತಿಗಳ ಸೃಷ್ಟಿವಿಭಾಗವನ್ನು ಭಗವಂತನು ಹೇಳುತ್ತಾನೆ.

**ಅಭಯಂ** = ಇಷ್ಟವಸ್ತುಗಳ ವಿಯೋಗ ಮತ್ತು ಅನಿಷ್ಟವಸ್ತುಗಳ ಸಂಯೋಗ–ಎಂಬ ದುಃಖಕ್ಕೆ ಕಾರಣವಾದುದನ್ನು ಕಂಡಾಗ ಉಂಟಾಗುವ ದುಃಖವೇ ಭಯ. ಅದರ ನಿವೃತ್ತಿಯು ಅಭಯ.

**ಸತ್ತ್ವಸಂಶುದ್ಧಿ**–ಅಂತಃಕರಣವು ರಜಸ್ಸು ಮತ್ತು ತಮಸ್ಸುಗಳಿಂದ ಮುಚ್ಚಲ್ಪಡದಿರುವಿಕೆ. **ಜ್ಞಾನಯೋಗವ್ಯವಸ್ಥಿತಿಃ** = ಪ್ರಕೃತಿಯುಕ್ತವಾದ ಆತ್ಮಸ್ವರೂಪವಿವೇಕದಲ್ಲಿ ನಿಷ್ಠೆ. **ದಾನಂ** = ನ್ಯಾಯದಿಂದ ಸಂಪಾದಿಸಿದ ಹಣವನ್ನು ಸತ್ಪಾತ್ರರಿಗೆ ಕೊಡುವಿಕೆ. **ದಮಃ** = ಮನಸ್ಸು ವಿಷಯಕ್ಕೆ ಉನ್ಮುಖವಾದಾಗ ಅದನ್ನು ಹಿಂದಿರುಗುವಂತೆ ಮಾಡುವ ಸಂಶೀಲನೆ (ಸಂಯಮಶೀಲತೆ.)

**ಯಜ್ಞಃ** = ಫಲಾಭಿಸಂಧಿಯಿಲ್ಲದೇ ಭಗವದಾರಾಧನಾರೂಪವಾಗಿ ಮಹಾಯಜ್ಞಗಳೇ ಮುಂತಾದುವನ್ನು ಅನುಷ್ಠಾನಮಾಡುವುದು.

**ಸ್ವಾಧ್ಯಾಯಃ** = ಇಡೀ ವೇದವು ವಿಭೂತಿಸಹಿತನಾದ ಭಗವಂತನನ್ನೂ ಮತ್ತು ಅವನ ಆರಾಧನಾಪ್ರಕಾರವನ್ನೂ ಪ್ರತಿಪಾದಿಸುತ್ತದೆ–ಎಂದು ಅನುಸಂಧಾನಮಾಡಿಕೊಂಡು ವೇದಾಭ್ಯಾಸದಲ್ಲಿ ನಿಷ್ಠನಾಗಿರುವಿಕೆ.

**ತಪಃ** = ಕೃಚ್ಛ್ರ-ಚಾಂದ್ರಾಯಣ, ಹರಿದಿನಗಳಲ್ಲಿ ಉಪವಾಸ–ಮುಂತಾದುವುಗಳಿಂದ ಭಗವಂತನನ್ನು ಸಂತೋಷಪಡಿಸುವ ಕರ್ಮಗಳಿಗೆ ಯೋಗ್ಯನನ್ನಾಗಿ ಮಾಡಿಕೊಳ್ಳುವ ಸಾಧನ.

**ಆರ್ಜವಂ** = ಇತರರ ಬಗೆಗೆ ಮನಸ್ಸು, ಮಾತು ಮತ್ತು ಶರೀರದ ವೃತ್ತಿಗಳು ಏಕರೂಪವಾಗಿರುವಿಕೆ. **ಅಹಿಂಸಾ** = ಪರಪೀಡನೆಯನ್ನು ಮಾಡದೇ ಇರುವಿಕೆ. **ಸತ್ಯಂ** = ಯಥಾವತ್ತಾಗಿ ಕಂಡುಬಂದ ಮತ್ತು ಹಿತವಾಗಿರುವ ಮಾತು. **ಅಕ್ರೋಧಃ** = ಇತರರು ತನ್ನನ್ನು ಪೀಡಿಸುವುದರಿಂದ ಉಂಟಾಗಬಹುದಾದ ಚಿತ್ತವಿಕಾರವಿಲ್ಲದೇ ಇರುವಿಕೆ.

**ತ್ಯಾಗಃ** = ಆತ್ಮಹಿತಕ್ಕೆ ವಿರುದ್ಧವಾದ ಪರಿಗ್ರಹಗಳಿಂದ ಬಿಡುಗಡೆ ಹೊಂದುವಿಕೆ. **ಶಾನ್ತಿಃ** = ಇಂದ್ರಿಯಗಳು ವಿಷಯಗಳಲ್ಲಿ ತೊಡಗದಂತೆ ತಡೆಗಟ್ಟುವ ಸಂಶೀಲನೆ (ಪ್ರಯತ್ನ. ) **ಅಪೈಶುನಂ** = ಇತರರಿಗೆ ಅನರ್ಥಕರವಾದ ವಾಕ್ಯವನ್ನು ನಿವೇದಿಸದೇ ಇರುವಿಕೆ. **ದಯಾ ಭೂತೇಷು** = ಯಾವ ಭೂತಕ್ಕೆ ದುಃಖವುಂಟಾದರೂ ಅದನ್ನು ಸಹಿಸದೇ ಇರುವಿಕೆ. **ಅಲೋಲುಪ್ತ್ವಂ**–ಲೋಲುಪತೆ ಇಲ್ಲದಿರುವಿಕೆ. ವಿಷಯಗಳಲ್ಲಿ ನಿಸ್ಪೃಹನಾಗಿರುವಿಕೆ. **ಮಾರ್ದವಂ** = ಕಾಠಿಣ್ಯವಿಲ್ಲದೇ ಇರುವಿಕೆ–ಸಾಧುಜನರೊಡನೆ ಸೇರಿಕೊಳ್ಳುವ ಅರ್ಹತೆ.

**ಹ್ರೀಃ** = ಕೆಟ್ಟಕೆಲಸಗಳನ್ನು ಮಾಡುವ ವಿಷಯದಲ್ಲಿ ಲಜ್ಜೆ. **ಅಚಾಪಲಂ** = ಆಸೆಪಡಲು ಯೋಗ್ಯವಾದ ವಿಷಯಗಳ ಸಾನ್ನಿಧ್ಯದಲ್ಲಿ ಚಾಂಚಲ್ಯವಿಲ್ಲದೇ ಇರುವಿಕೆ. **ತೇಜಃ** = ದುರ್ಜನರಿಂದ ತಿರಸ್ಕರಿಸಲ್ಪಡದೇ ಇರುವಿಕೆ. **ಕ್ಷಮಾ** = ಇತರರ ಕಾರಣದಿಂದ ತನಗೆ ಪೀಡೆಯುಂಟಾದರೂ ಆ ಕಾರಣದಿಂದ ಇತರರ ಬಗೆಗೆ ಚಿತ್ತವಿಕಾರವನ್ನು ಹೊಂದದೇ ಇರುವಿಕೆ. **ಧೃತಿಃ** = ದೊಡ್ಡ ಆಪತ್ತಿನಲ್ಲಿಯೂ ಕೂಡ ಮಾಡಬೇಕಾದ ಕರ್ತವ್ಯವನ್ನು ನಿಶ್ಚಯಿಸಿಕೊಳ್ಳುವಿಕೆ.

**ಶೌಚಂ** = ಕರಣಗಳನ್ನು ಶಾಸ್ತ್ರಕ್ಕೆ ಅನುಗುಣವಾಗಿ ಹೊರಗಿನ ಮತ್ತು ಒಳಗಿನ ಕರ್ಮಾಚರಣೆಗಳನ್ನು ಮಾಡುವ ಯೋಗ್ಯತೆಯುಳ್ಳದ್ದನ್ನಾಗಿ ಮಾಡುವಿಕೆ.

**ಅದ್ರೋಹಃ** = ಇತರರನ್ನು ತಡೆಯದೇ ಇರುವಿಕೆ. ಇತರರು ತಮ್ಮ ಇಷ್ಟದಂತೆ ನಡೆಯುವುದನ್ನು ತಡೆಯದೇ ಇರುವಿಕೆ.

**ನಾತಿಮಾನಿತಾ** = ಅಸ್ಥಾನದಲ್ಲಿ ಗರ್ವಪಡದೇ ಇರುವಿಕೆ. ದೈವೀಸಂಪತ್ತನ್ನು ನೆರವೇರಿಸಲು ಯಾವನು ಹುಟ್ಟುತ್ತಾನೆಯೋ ಅವನಲ್ಲಿ ಈ ಗುಣಗಳಿರುತ್ತವೆ.

ದೇವಸಂಬಂಧವಾದ ಸಂಪತ್ತು ದೈವೀಸಂಪತ್ತು. ದೇವತೆಗಳು ಎಂದರೆ ಭಗವಂತನ ಆಜ್ಞೆಯನ್ನು ಅನುವರ್ತಿಸಿ ನಡೆಯುವ ಶೀಲವುಳ್ಳವರು. ಅವರ ಸಂಪತ್ತು ದೈವೀಸಂಪತ್ತು. ಭಗವಂತನ ಆಜ್ಞೆಯನ್ನು ಅನುಸರಿಸಿ ನಡೆಯುವುದು. ಅದಕ್ಕೆ ಅಭಿಮುಖವಾಗಿ ಎಂದರೆ ಅದನ್ನು ನೆರವೇರಿಸಲು ಯಾವನು ಹುಟ್ಟುತ್ತಾನೆಯೋ ಅವನಲ್ಲಿ ಮೇಲ್ಕಂಡ ಗುಣಗಳಿರುತ್ತವೆ.

(ರಾ. ಭಾ.)

ಪುರುಷಾರ್ಥಸಾಧನಗಳಾದ ಮತ್ತು ಪುರುಷಾರ್ಥವಿರೋಧಿಗಳಾದ ವಿಷಯಗಳನ್ನು ಈ ಅಧ್ಯಾಯದಲ್ಲಿ ವಿವರಿಸಲಾಗಿದೆ.

ಹಿಂದಿನ ಅಧ್ಯಾಯದಲ್ಲಿ ನಿರ್ಮಾನಮೋಹಾಃ–ಮುಂತಾದುವುಗಳಿಂದ ಜ್ಞಾನ-ಮೋಕ್ಷಗಳೆಂಬ ಪುರುಷಾರ್ಥಗಳನ್ನು ಹೇಳಿದೆ. **ಯತನ್ತೋಽಪ್ಯ-ಕೃತಾತ್ಮಾನಃ**–ಮುಂತಾದುವುಗಳಿಂದ ಪುರುಷಾರ್ಥವಿರೋಧಿಗಳನ್ನು ಹೇಳಿದೆ. ಹಾಗೆ ಸಂಕ್ಷೇಪವಾಗಿ ಹೇಳಿದುದನ್ನು ಇಲ್ಲಿ ವಿಸ್ತರಪಡಿಸಿದೆ ಮತ್ತು ಹಾಗೆಯೇ ಸುರ-ಅಸುರರ ಲಕ್ಷಣಗಳನ್ನೂ ಹೇಳಿದೆ.

**ತಪಃ**= ಬ್ರಹ್ಮಚರ್ಯವೇ ಮುಂತಾದುವು. ಬ್ರಹ್ಮಚರ್ಯಾದಿಕಂ ತಪಃ.

**ಅಪೈಶುನಂ** = ಪೈಶುನ ಎಂದರೆ ಇತರರಿಗೆ ಉಪದ್ರವವನ್ನು ಉಂಟು ಮಾಡುವ ಉದ್ದೇಶದಿಂದ ರಾಜನೇ ಮುಂತಾದವರಲ್ಲಿ ಇತರರ ದೋಷಗಳನ್ನು ಹೇಳುವಿಕೆ : ಅದಿಲ್ಲದಿರುವುದು ಅಪೈಶುನ.

**ಪರೋಪದ್ರವಹೇತೂನಾಂ ದೋಷಾಣಾಂ ಪೈಶುನಂ ವಚಃ ।**

**ಅಲೋಲುಪ್ತ್ವಂ** = **ಲೌಲ್ಯಂ** ಎಂದರೆ ರಾಗ, **ರಾಗೋ ಲೌಲ್ಯಂ ತಥಾ ರಕ್ತಿಃ** ಅದು ಇಲ್ಲದೇ ಇರುವಿಕೆಯು ಅಲೋಲುಪ್ತ್ವ.

**ಅಚಾಪಲಂ** = ಸ್ಥೈರ್ಯ. **ಚಪಲಶ್ಚಂಚಲೋಽಸ್ಥಿರಃ**

**ಕ್ಷಮಾ** = ಕ್ರೋಧವಿಲ್ಲದಿರುವಿಕೆಯ ಜೊತೆಗೆ ಅಪಕಾರಿಗೆ ಅಪಕಾರವನ್ನು ಮಾಡದಿರುವಿಕೆ ; ಉಪಕಾರವನ್ನೇ ಮಾಡುವಿಕೆ.

**ಅಕ್ರೋಧೋ ದೋಷಕೃಚ್ಛತ್ರೋಃ ಕ್ಷಮಾವಾನ್ಸ ನಿಗದ್ಯತೇ** ಆದುದರಿಂದ **ಅಕ್ರೋಧಃ–ಕ್ಷಮಾ** ಎಂಬಲ್ಲಿ ಪುನರುಕ್ತಿಯಿಲ್ಲ. (ಮ. ಭಾ.)

**ಓಂ ದಮ್ಭೋ ದರ್ಪೋಽಭಿಮಾನಶ್ಚ ಕ್ರೋಧಃ ಪಾರುಷ್ಯಮೇವ ಚ ।**
**ಅಜ್ಞಾನಂ ಚಾಭಿಜಾತಸ್ಯ ಪಾರ್ಥ ಸಮ್ಪದಮಾಸುರೀಮ್ ॥೪॥**

ಪಾರ್ಥ! ದಂಭ, ದರ್ಪ, ಅಭಿಮಾನ, ಕ್ರೋಧ, ಪಾರುಷ್ಯ ಮತ್ತು ಅಜ್ಞಾನ–ಇವು ಆಸುರಸಂಪತ್ತಿಗೆ ಸಂಬಂಧಿಸಿದಂತೆ ಹುಟ್ಟಿರುವವನಿಗೆ ಇರತಕ್ಕ ಗುಣಗಳು.

* * *

(**ದಮ್ಭಃ** = ಧಾರ್ಮಿಕನಲ್ಲದಿದ್ದರೂ ಧಾರ್ಮಿಕನಂತೆ ತೋರಿಸಿಕೊಳ್ಳುವುದು ; ಹಣವಂತನಲ್ಲದಿದ್ದರೂ ಹಣವಂತನಂತೆ ತೋರಿಸಿಕೊಳ್ಳುವುದು ; ವಿದ್ಯಾವಂತನಲ್ಲದಿದ್ದರೂ ಘನಪಂಡಿತನಂತೆ ತೋರಿಸಿಕೊಳ್ಳುವುದು ; ಬಲಿಷ್ಠನಲ್ಲದಿದ್ದರೂ ಬಲಿಷ್ಠನಂತೆ ತೋರಿಸಿಕೊಳ್ಳುವುದು–ಇತ್ಯಾದಿಗಳಿಗೆ ದಂಭ ಎಂದು ಹೆಸರು. ಇತರರನ್ನು ಮೆಚ್ಚಿಸುವ ಕಾರ್ಯಾಚರಣೆ. ಇತರ ರಿಂದ ಗೌರವಸಂಪಾದಿಸಲು ಹಾಕುವ ವೇಷ. ಅರ್ಥಾತ್ ದಂಭವು ಮೋಸ ಅಥವಾ ವಂಚನೆಯಲ್ಲಿಯೇ ಪರ್ಯವಸಾನವಾಗುತ್ತದೆ. ದಂಭಕ್ಕೆ ಮೋಸ, ವಂಚನೆ, ಠಕ್ಕು ಎಂಬ ಅರ್ಥಗಳೂ ಇವೆ.

**ದರ್ಪಃ** = ಸೊಕ್ಕು, ಕೊಬ್ಬು, ಗರ್ವ. ದಂಭಕ್ಕೂ ದರ್ಪಕ್ಕೂ ಸ್ವಲ್ಪವೇ ವ್ಯತ್ಯಾಸ. ದಾಂಭಿಕನು ಒಳಗೆ ತಿರುಳಿಲ್ಲದೆಯೇ ತಿರುಳಿರುವವನಂತೆ ತೋರಿಸಿಕೊಳ್ಳುತ್ತಾನೆ. ದರ್ಪಿಷ್ಠನಲ್ಲಿ ತಿರುಳಿರುತ್ತದೆ ಎಂದರೆ–ಅವನು ನಿಜ

ವಾಗಿಯೂ ವಿದ್ಯಾವಂತನಾಗಿರುತ್ತಾನೆ ; ಬಲಿಷ್ಠನಾಗಿರುತ್ತಾನೆ ; ಹಣವಂತ ನಾಗಿರುತ್ತಾನೆ. ಈ ಕಾರಣದಿಂದಲೇ ಧನಮದ-ಬಲಮದ-ವಿದ್ಯಾಮದಗಳು ಅವನಲ್ಲಿ ತುಂಬಿರುತ್ತವೆ. ದಾಂಭಿಕನು ವಂಚಕ. ಆದರೆ ದರ್ಪಿಷ್ಠನು ವಂಚಕ ನಲ್ಲ. ಧನಾದಿಗಳು ತನ್ನಲ್ಲಿರುವುದೆಂಬ ಅಹಂಭಾವದಿಂದ ಬೀಗುವವನು.

**ಅಭಿಮಾನಃ**=ಹೆಚ್ಚು ಮಾನಿಷ್ಠನಾಗಿರುವಿಕೆ. ಸಾಮಾನ್ಯವಾಗಿ ದರ್ಪಿಷ್ಠನ ಸ್ವಭಾವವೂ ಇದೇ ಆಗಿರುತ್ತದೆ. ಎಲ್ಲರೂ ತನಗೆ ಮರ್ಯಾದೆ ಕೊಡಬೇಕು. ಎಲ್ಲರೂ ತನ್ನನ್ನು ದೊಡ್ಡವನೆಂದು ಭಾವಿಸಬೇಕು–ಇತ್ಯಾದಿ ಅಭಿಮಾನದ ಭಾವನೆಗಳು ಅವನಲ್ಲಿರುತ್ತವೆ.

**ಕ್ರೋಧಃ** = ದರ್ಪ, ಅಹಂಕಾರ–ಇವುಗಳೇ ಕ್ರೋಧಕ್ಕೂ ಕಾರಣ ಗಳಾಗುತ್ತವೆ. ತನ್ನ ಮಾನಕ್ಕೆ ಸ್ವಲ್ಪವೇ ಕುಂದುಂಟಾದರೂ ಸೈರಣೆಯಿರು ವುದಿಲ್ಲ. ಕಣ್ಣುಗಳು ಕೆಂಪಾಗಿಬಿಡುತ್ತವೆ. ತುಟಿಗಳು ಅದುರತೊಡಗುತ್ತವೆ. ಹಲ್ಲುಗಳು ಕಟಕಟಾಯಿಸುತ್ತವೆ.

**ಪಾರುಷ್ಯಂ** = ಯಾವಾಗಲೂ ಕಠಿನವಾದ ಮಾತುಗಳು ಹೊರ ಹೊಮ್ಮುತ್ತವೆ. ಯಾವಾಗಲೂ ಬಾಯಲ್ಲಿ ಅಪಶಬ್ದಗಳು ಬರುತ್ತಿರುತ್ತವೆಯೇ ಹೊರತು ಒಳ್ಳೆಯ ಶಬ್ದಗಳೇ ಹೊರಡುವುದಿಲ್ಲ.

**ಅಜ್ಞಾನಂ** = ಇಂತಹ ಸಮಯಗಳಲ್ಲಿ ವಿವೇಕವೆಂಬುದೇ ಇರುವುದಿಲ್ಲ. ಕರ್ತವ್ಯಾಕರ್ತವ್ಯವಿವೇಚನೆಯಿರುವುದಿಲ್ಲ. ಜ್ಞಾನವೆಂಬುದು ಇಂತಹವನ ಹತ್ತಿರವೂ ಸುಳಿಯುವುದಿಲ್ಲ. ಇವನ ಬುದ್ಧಿಗೆ ಯಾವಾಗಲೂ ಗಾಢಾಂಧ ಕಾರವು ಕವಿದಿರುತ್ತದೆ.

ಶ್ರೀಕೃಷ್ಣನು ಹೇಳುತ್ತಾನೆ :

"ಪಾರ್ಥ! ಆಸುರೀಸಂಪತ್ತನ್ನು ಲಕ್ಷ್ಯದಲ್ಲಿಟ್ಟುಕೊಂಡು ಹುಟ್ಟುವವನ ಗುಣಗಳು ಇವುಗಳೇ ಆಗಿರುತ್ತವೆ.

ಆಸುರೀಸಂಪತ್ತು ಎಂದರೆ ಕೇವಲ ಕಾಮೋಪಭೋಗಗಳಿಗಾಗಿಯೇ ವಿನಿಯೋಗಿಸಲ್ಪಡುವ ಸಂಪತ್ತು.

ಕಾಮೋಪಭೋಗಗಳನ್ನೇ ಮುಖ್ಯಸಾಧನವನ್ನಾಗಿಟ್ಟುಕೊಂಡಿರುವವರ ಗುಣಗಳು ಹೀಗೆಯೇ ಇರುತ್ತವೆ.)

o o o

**ದಮ್ಭಃ** = ಧರ್ಮಧ್ವಜನಾಗಿರುವಿಕೆ, ತೋರಿಕೆಯ ಧರ್ಮ. **ದರ್ಪಃ** = ಧನ, ಜನ–ಮುಂತಾದ ಕಾರಣಗಳಿಂದ ಉಂಟಾಗುವ ಗರ್ವ. **ಅಭಿಮಾನಃ**= ಹಿಂದೆ ಹೇಳಿದಂತೆ ತನ್ನಲ್ಲಿ ಅತ್ಯಂತಪೂಜ್ಯಭಾವನೆ.

**ಕ್ರೋಧಃ** = ಸಿಟ್ಟು ಮತ್ತು **ಪಾರುಷ್ಯ** = ಕಠೋರವಚನ. ಹೇಗೆಂದರೆ : ಕುರುಡನನ್ನು ಕಣ್ಣುಳ್ಳವನೆಂದೂ, ಕುರೂಪಿಯನ್ನು ರೂಪವುಳ್ಳವನೆಂದೂ, ಹೀನಜನ್ಮದವನನ್ನು ಉತ್ತಮಜನ್ಮದವನೆಂದೂ, ವ್ಯಂಗ್ಯವಾಗಿ ಕರೆಯುವಿಕೆ.

**ಅಜ್ಞಾನಂ** = ಅವಿವೇಕಜ್ಞಾನ. ಕರ್ತವ್ಯ ಮತ್ತು ಅಕರ್ತವ್ಯ ಮುಂತಾದ ವಿಷಯಗಳಲ್ಲಿ ಅಸತ್ಯವಾದ ನಿಶ್ಚಯ. ಆಸುರೀಸಂಪತ್ತನ್ನು ಹೊಂದಿ ಹುಟ್ಟಿದ ಮನುಷ್ಯರಲ್ಲಿ ಈ ಲಕ್ಷಣಗಳಿರುತ್ತವೆ. (ಶಂ. ಭಾ.)

**ದಮ್ಭಃ** = ಧಾರ್ಮಿಕನೆಂಬ ಕೀರ್ತಿಯು ಬರಲೆಂದು ಧರ್ಮಾನುಷ್ಠಾನ ಮಾಡುವಿಕೆ. **ದರ್ಪಃ** = ವಿಷಯಾನುಭವದಿಂದ ಉಂಟಾದ ಒಂದು ಹರ್ಷ, ಕೃತ್ಯಾಕೃತ್ಯಗಳ ಬಗೆಗೆ ಅವಿವೇಕವನ್ನುಂಟುಮಾಡುವುದು.

**ಅಭಿಮಾನಃ** = ತನ್ನ ವಿದ್ಯೆ, ಜನ್ಮ–ಇವುಗಳಿಗೆ ಅನುಗುಣವಲ್ಲದ ಅಭಿಮಾನ.

**ಕ್ರೋಧಃ** = ಇತರರಿಗೆ ಪೀಡೆಯನ್ನುಂಟುಮಾಡುವ ಚಿತ್ತವಿಕಾರ. **ಪಾರುಷ್ಯಂ** = ಸಾಧುಗಳಿಗೆ ಉದ್ವೇಗವನ್ನುಂಟುಮಾಡುವ ಸ್ವಭಾವ.

**ಅಜ್ಞಾನಂ** = ಪರಾಪರತತ್ತ್ವಗಳು, ಕೃತ್ಯಾಕೃತ್ಯಗಳು–ಇವುಗಳ ಬಗೆಗೆ ಅವಿವೇಕ.

ಆಸುರೀಸಂಪತ್ತು ಇರುವಂತೆ ಯಾವನು ಹುಟ್ಟುತ್ತಾನೆಯೋ ಅವನಿಗೆ ಈ ಸ್ವಭಾವಗಳಿರುತ್ತವೆ.

ಅಸುರರು ಎಂದರೆ ಭಗವಂತನ ಆಜ್ಞೆಯನ್ನು ಮೀರುವ ಸ್ವಭಾವವುಳ್ಳವರು. (ವಿಪರೀತಸ್ತಥಾಸುರಃ) ವಿಷ್ಣುಧರ್ಮ ೧೦೯-೭೪

**ಅಸುರಾಣಾಂ ಹ್ಯೇಷೋಪನಿಷತ್** ಛಾಂದೋಗ್ಯ ೮-೮-೫

ದೇಹವನ್ನೇ ಆತ್ಮವೆಂದು ಅಭಿಮಾನಿಸುವುದೇ ಮುಂತಾದುವುಗಳಿಂದ ಉಂಟಾಗುವ ತ್ರಿವರ್ಗಮಾತ್ರನಿಷ್ಠೆಯುಳ್ಳವರು. (ರಾ. ಭಾ.)

ಅಸುರರು ಎಂದರೆ ಭಗವಂತನ ಆಜ್ಞೆಯನ್ನು ಮೀರುವ ಸ್ವಭಾವವುಳ್ಳವರು.

**ದರ್ಪಃ** = ಮದದ ಕಾರಣದಿಂದ ಭಯವನ್ನು ಪ್ರಕಟಿಸದೇ ಇರುವಿಕೆ.

**ರಾಜಾದೇಸ್ತು ಮದಾದ್ಭೀತೇರದೃಷ್ಟಿರ್ದರ್ಪ ಉಚ್ಯತೇ ॥**

(ಮ. ಭಾ.)

**ಓಂ ದೈವೀ ಸಮ್ಪದ್ವಿಮೋಕ್ಷಾಯ ನಿಬನ್ಧಾಯಾಸುರೀ ಮತಾ ।**
**ಮಾ ಶುಚಃ ಸಮ್ಪದಂ ದೈವೀಮಭಿಜಾತೋಽಸಿ ಪಾಣ್ಡವ ॥೫॥**

ಪಾಂಡವ! ದೈವೀಸಂಪತ್ತು ವಿಮೋಕ್ಷಕ್ಕೆ ಕಾರಣ ; ಆಸುರೀಸಂಪತ್ತು ಬಂಧನಕ್ಕೆ ಕಾರಣ–ಎಂಬ ಅಭಿಪ್ರಾಯವಿರುತ್ತದೆ. ನೀನು ದುಃಖಿಸಬೇಡ. ದೈವೀಸಂಪತ್ತಿನೊಡನೆ ನೀನು ಹುಟ್ಟಿರುವೆ.

* * *

(ಈ ಹಿಂದೆ ಶ್ರೀಕೃಷ್ಣನು ದೈವೀಸಂಪತ್ತನ್ನು ಆಶಿಸಿ ಹುಟ್ಟುವವರಿಗೆ ಇಂತಿಂತಹ ಗುಣಗಳಿರುತ್ತವೆ–ಎಂದು ಹೇಳಿದ್ದನು. ಈ ಶ್ಲೋಕದಲ್ಲವನು ದೈವೀಸಂಪತ್ತು ಮತ್ತು ಆಸುರೀಸಂಪತ್ತಿನ ಪ್ರಯೋಜನಗಳನ್ನು ವಿವರಿಸು ತ್ತಾನೆ. ದೈವೀಸಂಪತ್ತು ಸಂಸಾರಬಂಧನವನ್ನು ಪೂರ್ಣವಾಗಿ ಬಿಡಿಸುವುದಕ್ಕೆ ಸಾಧನವಾಗುತ್ತದೆ. ಆಸುರೀಸಂಪತ್ತು ಇದ್ದ ಬಂಧನವನ್ನು ಮತ್ತಷ್ಟು ಬಿಗಿಗೊಳಿಸಲು ಸಾಧನವಾಗುತ್ತದೆ.

ಆದರೆ ನಾವು ಯಾವ ಸಂಪತ್ತನ್ನು ಆಶಿಸಿ ಹುಟ್ಟಿದ್ದೇವೆಂಬುದು ನಮಗೆ ಅಷ್ಟಾಗಿ ತಿಳಿಯದು. ಜೇಡರ ಹುಳುವಿನಂತೆ ನಮ್ಮ ಸುತ್ತಲೂ ನಾವೇ ಬಲೆಯನ್ನು ರಚಿಸಿಕೊಳ್ಳುತ್ತಿದ್ದೇವೆ. ಆದರೆ ಆ ಬಲೆಯು ಬಿಡಿಸಿಕೊಳ್ಳಲಾಗದ ಬಲೆಯೋ, ಬಿಡಿಸಿಕೊಳ್ಳಬಹುದಾದ ಬಲೆಯೋ–ಎಂಬುದೂ ನಮಗೆ ತಿಳಿಯದು. ನಾವು ಮಾಡುತ್ತಿರುವ ಕರ್ಮಗಳಿಂದ ಪಾಪಸಂಚಯನವಾಗುತ್ತಿದೆಯೋ, ಪುಣ್ಯಸಂಚಯನವಾಗುತ್ತಿದೆಯೋ–ಎಂಬುದನ್ನು ನಾವು ತಿಳಿದುಕೊಳ್ಳಲು ಅಸಮರ್ಥವಾಗಿರುತ್ತೇವೆ. ಅರ್ಜುನನೇ ಇದನ್ನು ಶಂಕಿಸಿರಬಹುದೆಂದಮೇಲೆ ನಮ್ಮಂತಹವರ ವಿಷಯವನ್ನು ಹೇಳಬೇಕಾಗಿಯೇ ಇಲ್ಲ.

ಶ್ರೀಕೃಷ್ಣನು ಖಿನ್ನನಾಗಿದ್ದ ಅರ್ಜುನನಿಗೆ ಹೇಳುತ್ತಾನೆ : **ಮಾ ಶುಚಃ** ದುಃಖಿಸಬೇಡ. **ದೈವೀಂ ಸಂಪದಂ ಅಭಿಜಾತೋಽಸಿ**–ದೈವೀಸಂಪತ್ತಿನ ಜೊತೆಯಲ್ಲೇ ನೀನು ಹುಟ್ಟಿರುವೆ. ಆದುದರಿಂದಲೇ ಅದಕ್ಕೆ ತಕ್ಕುದಾದ ಗುಣಗಳೂ ನಿನ್ನಲ್ಲಿವೆ. ನೀನು ಭವಬಂಧನದಿಂದ ಸುಲಭವಾಗಿ ವಿಮುಕ್ತಿ ಹೊಂದಲು ಸಮರ್ಥನಾಗಿರುವೆ. ಇತರರು ದೈವೀಸಂಪತ್ತನ್ನು ಸಂಪಾದಿಸಿ ಕೊಂಡು ಮುಕ್ತಿಗೆ ಪ್ರಯತ್ನಿಸಬೇಕು. ನಿನ್ನಲ್ಲಿ ಆ ಸಂಪತ್ತು ಸಹಜವಾಗಿಯೇ ಮೂಡಿಬಂದಿದೆ.)

O O O

**ಮಾ ಶುಚಃ** = ದೈವೀಸಂಪತ್ತು ಮೋಕ್ಷಕ್ಕೂ–ಆಸುರೀಸಂಪತ್ತು ನಿಯತವಾದ ಬಂಧನಕ್ಕೂ ಕಾರಣವೆಂದು ಭಗವಂತನು ಹೇಳಿದ್ದಾನೆ. ಈ ಮಾತುಗಳನ್ನು ಕೇಳಿ ಅರ್ಜುನನ ಮನಸ್ಸಿನಲ್ಲಿ ತಾನು ಆಸುರೀಸಂಪತ್ತುಳ್ಳವನೇ ಅಥವಾ ದೈವೀಸಂಪತ್ತುಳ್ಳವನೇ?–ಎಂಬ ಸಂಶಯದ ಭಾವವುಂಟಾಗುತ್ತದೆ. ಆ ಬಗೆಗೆ ಭಗವಂತನು ಹೇಳುವುದೇನೆಂದರೆ–'ಶೋಕಪಡಬೇಡ ; ನೀನು ದೈವೀಸಂಪತ್ತನ್ನು ಪಡೆದುಕೊಂಡು ಹುಟ್ಟಿರುವೆ. ಆದುದರಿಂದ ನಿನಗೆ ಭವಿಷ್ಯದಲ್ಲಿ ಕಲ್ಯಾಣವುಂಟಾಗುತ್ತದೆ'–ಎಂದು. (ಶಂ. ಭಾ.)

ದೈವೀಸಂಪತ್ತು ಎಂದರೆ ನನ್ನ ಆಜ್ಞೆಯನ್ನು ಅನುಸರಿಸಿ ನಡೆಯುವ ರೂಪವಾದ ಸಂಪತ್ತು. ಇದು ಬಂಧನದಿಂದ ಬಿಡುಗಡೆಗೆ ಕಾರಣವಾಗುತ್ತದೆ. ಎಂದರೆ ಕ್ರಮವಾಗಿ ಭಗವಂತನನ್ನು ಹೊಂದುವುದಕ್ಕೆ ಕಾರಣವಾಗುತ್ತದೆ.

ಆಸುರೀಸಂಪತ್ತು ಎಂದರೆ ನನ್ನ ಆಜ್ಞೆಯನ್ನು ಮೀರಿ ನಡೆಯುವ ರೂಪವಾದ ಸಂಪತ್ತು. ಇದು ಅಧೋಗತಿಯನ್ನು ಹೊಂದಲು ಕಾರಣವಾಗು ತ್ತದೆ.

ಈ ಮಾತನ್ನು ಕೇಳಿ ತನ್ನ ಪ್ರಕೃತಿಯು ಯಾವ ರೀತಿಯದು ಎಂದು ನಿರ್ಧರಿಸಿಕೊಳ್ಳಲಾಗದೇ ಭೀತನಾದ ಅರ್ಜುನನಿಗೆ ಭಗವಂತನು ಹೇಳುವು ದೇನೆಂದರೆ : 'ದುಃಖಪಡಬೇಡ. ನೀನು ದೈವೀಸಂಪತ್ತು ಉಂಟಾಗುವಂತೆ ಹುಟ್ಟಿರುವೆ. ಪಾಂಡವ! ಧಾರ್ಮಿಕಾಗ್ರೇಸರನಾದ ಪಾಂಡುವಿನ ಮಗನು ನೀನು.' (ರಾ. ಭಾ.)

**ದೈವೀಂ ಸಂಪದಮಭಿಜಾತಃ = ಪ್ರತಿಜಾತಃ** ನೀನು ಕುಲೀನನು. ಹಾಗೆ ಹುಟ್ಟಿರುವ ನಿನಗೆ ದೈವೀಸಂಪತ್ತು ಲಕ್ಷಣವಾಗಿದೆ.

(ಇಲ್ಲಿ ಅಭಿ ಎಂಬುದು ಉಪಸರ್ಗವಲ್ಲ. ಪ್ರತಿ ಎಂಬ ಅರ್ಥದಲ್ಲಿ ಬಂದಿದೆ. **ಕರ್ಮಪ್ರವಚನೀಯಲಕ್ಷಣೇ ಕರ್ಮಪ್ರವಚನೀಯಃ**)

—ಜಯತೀರ್ಥರು.

**ಓಂ ದ್ವೌ ಭೂತಸರ್ಗೌ ಲೋಕೇಽಸ್ಮಿನ್ದೈವ ಆಸುರ ಏವ ಚ ।**
**ದೈವೋ ವಿಸ್ತರಶಃ ಪ್ರೋಕ್ತ ಆಸುರಂ ಪಾರ್ಥ ಮೇ ಶೃಣು ॥೬॥**

ಪಾರ್ಥ! ಈ ಲೋಕದಲ್ಲಿ ದೈವವೆಂದೂ ಆಸುರವೆಂದೂ ಎರಡು ಭೂತಸೃಷ್ಟಿಗಳು. ದೈವಸರ್ಗವನ್ನು ವಿಸ್ತಾರವಾಗಿ ಹೇಳಿದ್ದಾಯಿತು. ಆಸುರ ಸರ್ಗವನ್ನು ನನ್ನಿಂದ ಕೇಳಿ ತಿಳಿಯುವವನಾಗು.

* * *

(ಈ ಹಿಂದೆ ಶ್ರೀಕೃಷ್ಣನು ದೈವೀಸಂಪತ್ತು—ಆಸುರೀಸಂಪತ್ತು ಇವುಗಳ ವಿಷಯವಾಗಿ ಹೇಳಿರುವನು. ದೈವ ಮತ್ತು ಆಸುರ ಎಂದರೆ ಬೇರೆ ಲೋಕಗಳಲ್ಲಿರುವ ಜಾತಿವಿಶೇಷಗಳೆಂದೇ ಭಾವಿಸಬಾರದು.

**ಅಸ್ಮಿನ್ ಲೋಕೇ** = ಈ ಮನುಷ್ಯಲೋಕದಲ್ಲಿಯೇ ಎರಡು ವಿಧವಾದ ಮನುಷ್ಯಸೃಷ್ಟಿಗಳಿವೆ—ಎನ್ನುತ್ತಾನೆ ಭಗವಂತ. ಆ ಎರಡು ಸೃಷ್ಟಿಗಳು ಯಾವುವು? ಎಂದರೆ **ದೈವ ಅಸುರ ಏವ ಚ ।** ದೈವ ಮತ್ತು ಆಸುರ ಎಂಬುದೇ ಮನುಷ್ಯರಲ್ಲಿರುವ ಎರಡು ವಿಧವಾದ ಸೃಷ್ಟಿಗಳು. ಅರ್ಥಾತ್ ಮನುಷ್ಯರಲ್ಲಿಯೇ ದೇವತೆಗಳೂ ಇದ್ದಾರೆ ; ಅಸುರರೂ ಇದ್ದಾರೆ.

**ದೈವೋ ವಿಸ್ತರಶಃ ಪ್ರೋಕ್ತಃ**—ಎನ್ನುತ್ತಾನೆ ಭಗವಂತ. ದೈವೀ ಸಂಪತ್ತನ್ನು ಅಭಿಲಾಷಿಸಿ ಹುಟ್ಟಿರುವ ಮನುಷ್ಯರಲ್ಲಿರುವ ಗುಣಗಳನ್ನು ಈ ಅಧ್ಯಾಯದ ಮೊದಲನೆಯ ಮೂರು ಶ್ಲೋಕಗಳಲ್ಲಿ ಹೇಳಿಯಾಗಿದೆ. ದೈವವನ್ನು ವಿಸ್ತಾರವಾಗಿ ಹೇಳಿದ್ದಾಯಿತೆಂದರೆ ಅಭಯವೇ ಮುಂತಾದ ಗುಣಗಳುಳ್ಳವರು ಮನುಷ್ಯರಲ್ಲಿ ದೇವತೆಗಳು. ಅವರ ವಿಷಯವನ್ನು ಹೇಳಿದ್ದಾಯಿತು ಎಂದರ್ಥ. ನಾಲ್ಕನೆಯ ಶ್ಲೋಕದಲ್ಲಿ ಅಸುರರಲ್ಲಿರಬಹುದಾದ ಗುಣಗಳನ್ನು ಹೇಳಿದ್ದಾನೆ.

ಇಂತಹ ಗುಣಗಳುಳ್ಳವರು ಮನುಷ್ಯಲೋಕದ ಅಸುರರು ಎಂಬು ದನ್ನೂ ಸೂಚಿಸಿದ್ದಾನೆ. ಆದರೆ ಅಸುರರ ವಿಷಯವಾಗಿ ಹೇಳಿದ್ದು ಸಾಲದೆಂದು ಶ್ರೀಕೃಷ್ಣನಿಗೆ ಅನ್ನಿಸಿತು. ಆದುದರಿಂದ ಮತ್ತಷ್ಟು ವಿಸ್ತಾರವಾಗಿ ಹೇಳುತ್ತೇನೆ ; ಕೇಳು–ಎನ್ನುತ್ತಾನೆ ಶ್ರೀಕೃಷ್ಣ.

ಅಧ್ಯಾತ್ಮದ ವಿಷಯವು ಮನದಟ್ಟಾಗಬೇಕಾದರೆ ಹೇಳಿದ ವಿಷಯ ಗಳನ್ನೇ ಪ್ರಕಾರಾಂತರಗಳಿಂದ ಹೇಳುತ್ತಲೇ ಇರಬೇಕು.

ತಾಯಿಯು ಮಗುವಿಗೆ ಔಷಧವನ್ನು ಕುಡಿಸುವಾಗ ಒಮ್ಮೆ–'ಕಲ್ಲು ಸಕ್ಕರೆ ಕೊಡುತ್ತೇನೆ, ಕುಡಿ'–ಎನ್ನುತ್ತಾಳೆ. ಮತ್ತೊಮ್ಮೆ–'ಗುಮ್ಮ ಬಂದುಬಿಡುತ್ತಾನೆ ಕುಡಿಯಪ್ಪಾ'–ಎಂದು ಬೆದರಿಸುತ್ತಾಳೆ. ಹೀಗೆ ಹೇಳುವಾಗ ತಾಯಿಯ ಉದ್ದೇಶ ಮಗುವಿಗೆ ಔಷಧಕುಡಿಸುವುದು ಮಾತ್ರವೇ ಆಗಿರುತ್ತದೆ. ಅಂತೆಯೇ ಇಲ್ಲಿ ಶ್ರೀಕೃಷ್ಣನೂ ಸಹ ನಾನಾವಿಧವಾದ ಮಾತುಗಳಿಂದ ಅಧ್ಯಾತ್ಮವೆಂಬ ಔಷಧವನ್ನು ಭವರೋಗಿಗಳಿಗೆ ಕುಡಿಸುತ್ತಿದ್ದಾನೆ. ಇಲ್ಲಿ ಹೇಳಿರುವ ದೈವ ಮತ್ತು ಆಸುರಗುಣಗಳು ಹಿಂದೆ ಬೇರೆ ಬೇರೆ ಪ್ರಕರಣಗಳಲ್ಲಿ ಅನೇಕ ಬಾರಿ ಬಂದಿವೆ. ಆದರೂ ಸಹ ಈ ಸಂದರ್ಭದಲ್ಲಿ ಮತ್ತೊಂದು ವಿಧವಾದ ರೂಪಕದಿಂದ ಶ್ರೀಕೃಷ್ಣನು ವಿಸ್ತಾರವಾಗಿ ಅದೇ ವಿಷಯವನ್ನೇ ಅಧಿಕರಿಸಿ ಹೇಳಲು ಹೊರಟಿದ್ದಾನೆ.

**ಸರ್ಗ** ಎಂದರೆ ಸೃಷ್ಟಿ. **'ಸರ್ಗಃ ಸ್ವಭಾವನಿರ್ಮೋಕ್ಷನಿಶ್ಚಯಾ–ಧ್ಯಾಯಸೃಷ್ಟಿಷು'** (ಅಮರಃ)

o o o

ಈ ಸಂಸಾರದಲ್ಲಿ ದೈವ, ಆಸುರ–ಎಂದು ಎರಡು ಬಗೆಯ ಭೂತ ಸರ್ಗಗಳು. **ಭೂತಸರ್ಗೌ** ಎಂದರೆ ಸೃಷ್ಟಿಯಾಗಿರುವ ಭೂತಗಳು (ಮನುಷ್ಯಸೃಷ್ಟಿಗಳು.)

**ಸೃಜ್ಯೇತೇ ಇತಿ ಸರ್ಗೌ**–ಎಂಬ ವ್ಯುತ್ಪತ್ತಿಯಂತೆ **ದ್ವೌ ಭೂತಸರ್ಗೌ** ಎಂದರೆ ಸೃಷ್ಟಿಸಲ್ಪಡುವ ಎರಡು ಭೂತಗಳು. ದೈವಸಂಪತ್ತು ಮತ್ತು ಆಸುರಸಂಪತ್ತು ಎಂಬ ಎರಡರಿಂದ ಕೂಡಿದ ಭೂತಗಳು.

**ದ್ವಯಾ ಹ ಪ್ರಾಜಾಪತ್ಯಾ ದೇವಾಶ್ಚಾಸುರಾಶ್ಚ** ಬೃ. ೧-೩-೧

ಆ ಭೂತಸರ್ಗಗಳು ಯಾವುವೆಂದರೆ : ಪ್ರಕೃತವಾಗಿರುವ ದೈವ ಮತ್ತು ಆಸುರ. ಹೀಗೆ ಹಿಂದೆ ಹೇಳಿದ ವಿಷಯಗಳನ್ನೇ ಮತ್ತೆ ಅನುವಾದಮಾಡಲು ಕಾರಣವೇನೆಂದರೆ : ದೈವವಾದ ಭೂತಸರ್ಗವನ್ನು ಅಭಯಂ ಸತ್ತ್ವಸಂಶುದ್ಧಿಃ –ಎಂದು ಮೊದಲಾಗಿ ವಿಸ್ತಾರವಾದ ರೀತಿಯಿಂದ ಹೇಳಿಯಾಯಿತು. ಆಸುರವನ್ನು ವಿಸ್ತಾರವಾಗಿ ಹೇಳಿರುವುದಿಲ್ಲ. ಈಗ ವಿಸ್ತಾರವಾಗಿ ಹೇಳಲ್ಪಡುವ ಆಸುರಭೂತಸರ್ಗವನ್ನು ಕೇಳುವವನಾಗು. (ಶಂ. ಭಾ.)

ಈ ಕರ್ಮಲೋಕದಲ್ಲಿ ಕೆಲಸಮಾಡುವ ಭೂತಗಳ ಸರ್ಗಗಳು (ಉತ್ಪತ್ತಿಗಳು) ದೈವ ಮತ್ತು ಆಸುರ ಎಂದು ಎರಡು ಬಗೆ. ಸರ್ಗಃ= ಉತ್ಪತ್ತಿ-ಪ್ರಾಚೀನಪುಣ್ಯ-ಪಾಪರೂಪವಾದ ಕರ್ಮಗಳಿಗೆ ಒಳಪಟ್ಟು ಭಗವಂತನ ಆಜ್ಞೆಯನ್ನು ಅನುಸರಿಸುವಿಕೆ ಮತ್ತು ಅದಕ್ಕೆ ವಿರೋಧವಾಗಿ ನಡೆಯುವಿಕೆ. ಇವೆರಡಕ್ಕಾಗಿ ಉತ್ಪತ್ತಿಕಾಲದಲ್ಲಿಯೇ ವಿಭಾಗಗೊಂಡು ಭೂತಗಳು ಹುಟ್ಟುತ್ತವೆ. ಅವುಗಳಲ್ಲಿ ದೈವಸರ್ಗವನ್ನು ವಿಸ್ತಾರವಾಗಿ ಹೇಳಿಯಾಯಿತು. ದೈವರು ಎಂದರೆ ನನ್ನ ಆಜ್ಞೆಯನ್ನು ಅನುಸರಿಸುವ ಸ್ವಭಾವವುಳ್ಳವರು. ಅವರ ಉತ್ಪತ್ತಿಯು ಯಾವ ಆಚಾರವನ್ನು ಮಾಡುವುದಕ್ಕೋಸ್ಕರ ಇದೆಯೋ ಆ ಆಚಾರವನ್ನು ಎಂದರೆ ಕರ್ಮಯೋಗ, ಜ್ಞಾನಯೋಗ, ಭಕ್ತಿಯೋಗರೂಪ ವಾದ ಆಚಾರಗಳನ್ನು ವಿಸ್ತಾರವಾಗಿ ಹೇಳಿಯಾಯಿತು. ಆಸುರರ ಉತ್ಪತ್ತಿಯು ಯಾವ ಆಚರಣೆಗೋಸ್ಕರ ಇದೆ ಎಂಬುದನ್ನೂ ಆ ಆಚಾರವನ್ನೂ ನನ್ನಿಂದ ಕೇಳು. (ರಾ. ಭಾ.)

ಈ ಅಧ್ಯಾಯವು ಮುಗಿಯುವವರೆಗೂ ಆಸುರೀಸಂಪತ್ತನ್ನು ತೋರಿಸ ಲಾಗಿದೆ. ಅದನ್ನು ಪ್ರತ್ಯಕ್ಷಮಾಡಿಕೊಂಡರೆ ಅದನ್ನು ತೊರೆಯಲು ಸಾಧ್ಯ ವಾಗುತ್ತದೆ. (ಮ. ಭಾ.)

**ಓಂ ಪ್ರವೃತ್ತಿಂ ಚ ನಿವೃತ್ತಿಂ ಚ ಜನಾ ನ ವಿದುರಾಸುರಾಃ ।**
**ನ ಶೌಚಂ ನಾಪಿ ಚಾಚಾರೋ ನ ಸತ್ಯಂ ತೇಷು ವಿದ್ಯತೇ ॥೭॥**

ಆಸುರಜನರು ಪ್ರವೃತ್ತಿಯನ್ನೂ–ನಿವೃತ್ತಿಯನ್ನೂ ಅರಿಯರು. ಅವರಲ್ಲಿ ಶೌಚವಿಲ್ಲ ; ಆಚಾರವೂ ಇಲ್ಲ ; ಸತ್ಯವೂ ಇಲ್ಲ.

* * *

(ಈ ಆಸುರಜನರು ಪ್ರವೃತ್ತಿ-ನಿವೃತ್ತಿಗಳೆರಡನ್ನೂ ಅರಿಯರು. ಪ್ರವೃತ್ತಿ ಯೆಂದರೆ ಮಾಡಬೇಕಾದ ಕೆಲಸಗಳಲ್ಲಿ ತೊಡಗುವಿಕೆ ; ನಿವೃತ್ತಿಯೆಂದರೆ ಮಾಡಬಾರದ ಕೆಲಸಗಳಲ್ಲಿ ಅಪ್ರವೃತ್ತಿ. ಪ್ರವೃತ್ತಿ-ನಿವೃತ್ತಿಗಳೆಂಬ ಈ ಶಬ್ದ ಗಳಿಗೆ ಅಭ್ಯುದಯಕ್ಕೆ ಸಾಧನವಾದ ಧರ್ಮ ಮತ್ತು ಮೋಕ್ಷಸಾಧನವಾದ ಧರ್ಮ ಎಂದೂ ಅರ್ಥಹೇಳಬಹುದು. ಈ ಆಸುರಜನರಿಗೆ ವಿಧಿ-ನಿಷೇಧ ಗಳೊಂದೂ ಗೊತ್ತಿಲ್ಲ. ಚತುರ್ವಿಧಪುರುಷಾರ್ಥಗಳನ್ನು ಹೇಗೆ ಪಡೆದುಕೊಳ್ಳ ಬೇಕೆಂದು ಇವರಿಗೆ ಗೊತ್ತಿಲ್ಲ. ಯಾವ ಕರ್ಮವನ್ನು ಮಾಡಬಾರದೆಂಬ ಅರಿವೂ ಇವರಿಗಿರುವುದಿಲ್ಲ. ಇವರು ಕೇವಲ ಶಿಶ್ನೋದರಪರಾಯಣರಾಗಿರು ತ್ತಾರೆ. ಇವರಲ್ಲಿ ಅಂತಃಶುದ್ಧಿಯೂ ಇರುವುದಿಲ್ಲ ; ಬಹಿಃಶುದ್ಧಿಯೂ ಇರುವು ದಿಲ್ಲ. ಮಲಿನವಸ್ತ್ರಗಳನ್ನು ಧರಿಸಿರುತ್ತಾರೆಂಬ ಅರ್ಥವಲ್ಲ. ಅನೇಕ ದಿವಸಗಳು ಸ್ನಾನವನ್ನೇ ಮಾಡದಿದ್ದರೂ ಮೈಗೆ ಗಂಧವನ್ನು ಪೂಸಿಕೊಂಡು ಒಳ್ಳೆಯ ಆಕರ್ಷಕವಾದ ಪೋಷಾಕುಗಳನ್ನು ಧರಿಸಿರುತ್ತಾರೆ. ಆಚಾರವೆಂದರೇನೆಂಬು ದನ್ನೇ ಇವರು ಅರಿಯರು. ಕೇವಲ ಕಾಮೋಪಭೋಗಗಳೇ ದೈನಂದಿನ ವೃತ್ತಿಯೆಂದೂ—ಅದೇ ಮನುಷ್ಯಜನ್ಮದ ಪರಮಪ್ರಯೋಜನವೆಂದೂ— ಇವರು ಭಾವಿಸುತ್ತಾರೆ. ಇವರಲ್ಲಿ ಸತ್ಯ ಎಂಬುದಕ್ಕೆ ಅವಕಾಶವೇ ಇರುವು ದಿಲ್ಲ. ನಿಜ ಹೇಳುವುದೆಂದರೇನೆಂಬುದೇ ಇವರಿಗೆ ತಿಳಿದಿರುವುದಿಲ್ಲ. ಸಮ ಯಕ್ಕೆ ತಕ್ಕಂತೆ ಅರ್ಥಕಾಮರಾಗಿ ಮಾತನಾಡುತ್ತಿರುತ್ತಾರೆ. ಮತ್ತೊಬ್ಬರನ್ನು ವಂಚಿಸುವುದರಲ್ಲಿಯೇ ಇವರ ಆಸಕ್ತಿಯೆಲ್ಲವೂ ಕೇಂದ್ರೀಕೃತವಾಗಿರುತ್ತದೆ. ವಂಚನೆ, ದ್ರೋಹ—ಇವುಗಳೇ ಅರ್ಥಸಂಪಾದನೆಗೆ ಸರಿಯಾದ ಮಾರ್ಗ ವೆಂದು ಇವರು ದೃಢಪಡಿಸಿಕೊಂಡಿರುತ್ತಾರೆ. ಯಾವುದೇ ಪ್ರಕಾರದಿಂದ ಲಾದರೂ ಹೆಣ್ಣು-ಹೊನ್ನು ಮತ್ತು ಮಣ್ಣುಗಳ ಸಂಪಾದನೆಯೇ ಜೀವನದ ಪರಮಾರ್ಥವೆಂದು ಇವರ ಭಾವನೆಯಿರುತ್ತದೆ. ಈ ಆಸುರಜನರ ಬಾಯಿಂದ ಸತ್ಯದ ಮಾತು ಅವರ ಜೀವನಪರ್ಯಂತ ಒಮ್ಮೆಯಾದರೂ ಬಾರದೆಂಬು ದನ್ನು ಹೊಗೆಬಂಡಿಯ ನಿದರ್ಶನವನ್ನು ಕೊಟ್ಟು ಶ್ರೀ ಸಂತಜ್ಞಾನೇಶ್ವರರು ಹೇಳಿದ್ದಾರೆ. ಹೊಗೆಬಂಡಿಯ ಕೊಳವೆಯಿಂದ ತೆರೆ-ತೆರೆಯಾಗಿ ಕೇವಲ ಹೊಗೆಯು ಹೊರಬೀಳುವುದೇ ಹೊರತು ಮತ್ತೇನೂ ಬರಲಾರದು. ಅದರಂತೆಯೇ ಆಸುರಜನರ ಬಾಯಿಂದ ಬಗೆ-ಬಗೆಯಾಗಿ ಸುಳ್ಳು ಮಾತ್ರವೇ

ಹೊರಬರುತ್ತಿರುತ್ತದೆ. ಸತ್ಯವು ಅಪ್ಪಿ-ತಪ್ಪಿಯೂ ಇವರ ಬಾಯಿಂದ ಹೊರ ಬರಲಾರದು.)

o o o

ಆಸುರಜನರು ಪ್ರವೃತ್ತಿಯನ್ನಾಗಲೀ–ನಿವೃತ್ತಿಯನ್ನಾಗಲೀ ಅರಿಯರು. ಪ್ರವೃತ್ತಿ ಎಂದರೆ ಪ್ರವರ್ತನೆ. ಕರ್ತವ್ಯವಾದ ಪುರುಷಾರ್ಥವನ್ನು ಸಾಧಿಸಲು ಹೇಗೆ ಪ್ರವರ್ತಿಸಬೇಕೋ ಅದು. ನಿವೃತ್ತಿ ಎಂದರೆ ಅದಕ್ಕೆ ವಿರುದ್ಧವಾದುದು. ಅನರ್ಥಕಾರಣವಾದ ವಿಷಯದಿಂದ ಹಿಂದಿರುಗುವುದು ಯಾವುದೋ ಅದು ನಿವೃತ್ತಿ. ಆಸುರರಾದ ಜನರು ಇವೆರಡನ್ನೂ ಅರಿಯರು. ಇಷ್ಟು ಮಾತ್ರ ವಲ್ಲದೇ ಶೌಚವಾಗಲೀ, ಆಚಾರವಾಗಲೀ, ಸತ್ಯವಾಗಲೀ ಅವರಲ್ಲಿ ಇರುವು ದಿಲ್ಲ. ಆಸುರಪ್ರವೃತ್ತಿಯ ಜನರು ಅಶುಚಿಗಳೂ, ಅನಾಚಾರಿಗಳೂ, ಮಾಯಾವಿಗಳೂ, ಸುಳ್ಳುಹೇಳುವವರೂ ಆಗಿರುತ್ತಾರೆ. (ಶಂ. ಭಾ.)

ಪ್ರವೃತ್ತಿ–ಎಂದರೆ ಅಭ್ಯುದಯಕ್ಕೆ ಸಾಧನವಾದ ವೈದಿಕಧರ್ಮ. ನಿವೃತ್ತಿ–ಎಂದರೆ ಮೋಕ್ಷಸಾಧನವಾದ ವೈದಿಕಧರ್ಮ. ಆಸುರರು ಇವೆರ ಡನ್ನೂ ಅರಿಯರು. ಅವರಲ್ಲಿ ಶೌಚವಿರುವುದಿಲ್ಲ. ಶೌಚ ಎಂದರೆ ವೈದಿಕ ಕರ್ಮಕ್ಕೆ ಶಾಸ್ತ್ರಸಿದ್ಧವಾಗಿ ಯೋಗ್ಯನಾಗುವಿಕೆ. ಅದು ಬಾಹ್ಯ, ಅಂತರ ಎಂದು ಎರಡು ವಿಧ. ಬಾಹ್ಯಶೌಚ-ಆಂತರಶೌಚಗಳೆರಡೂ ಆಸುರಜನರ ಲ್ಲಿರುವುದಿಲ್ಲ. ಬಾಹ್ಯವೂ ಆಂತರವೂ ಆದ ಈ ಶೌಚವು ಸಂಧ್ಯಾವಂದನೆ ಮುಂತಾದ ಯಾವ ಆಚಾರಗಳಿಂದ ಉಂಟಾಗುತ್ತದೆಯೋ ಆ ಆಚಾರಗಳೂ ಅವರಲ್ಲಿರುವುದಿಲ್ಲ.

**ಸನ್ಧ್ಯಾಹೀನೋಽಶುಚಿರ್ನಿತ್ಯಂ ಅನರ್ಹಃ ಸರ್ವಕರ್ಮಸು ।**

ದಕ್ಷಸ್ಮೃತಿ ೨-೨೩

ಹಾಗೆಯೇ ಸತ್ಯವೂ ಎಂದರೆ ಯಥಾರ್ಥವೂ, ಭೂತಹಿತವೂ ಆದ ಮಾತು ಅವರಲ್ಲಿರುವುದಿಲ್ಲ. (ರಾ. ಭಾ.)

**ಓಂ ಅಸತ್ಯಮಪ್ರತಿಷ್ಠಂ ತೇ ಜಗದಾಹುರನೀಶ್ವರಮ್ ।**
**ಅಪರಸ್ಪರಸಮ್ಭೂತಂ ಕಿಮನ್ಯತ್ಕಾಮಹೈತುಕಮ್ ॥೮॥**

ಜಗತ್ತು ಅಸತ್ಯವಾದುದು ; ಅಪ್ರತಿಷ್ಠವಾದುದು ; ಅನೀಶ್ವರ

ವಾದುದು ; ಅಪರಸ್ಪರಸಂಭೂತವಾದುದು. ಕೇವಲ ಕಾಮದ ಕಾರಣ ದಿಂದಲ್ಲದೇ ಮತ್ತಾವುದರಿಂದ ತಾನೇ ಈ ವಿಶ್ವವು ಹುಟ್ಟಿದೆ?–ಎಂಬುದಾಗಿ ಆಸುರಜನರು ಹೇಳುತ್ತಾರೆ.

* * *

(ಆಸುರಜನರು ಜಗತ್ತಿನ ವಿಷಯವಾಗಿ ಯಾವ ಅಭಿಪ್ರಾಯದಿಂದಿದ್ದಾ ರೆಂಬುದನ್ನು ಶ್ರೀಕೃಷ್ಣನು ಈ ಶ್ಲೋಕದಲ್ಲಿ ಹೇಳಹೊರಟಿದ್ದಾನೆ. ಇಲ್ಲಿ ಹೇಳಿರುವುದು ಚಾರ್ವಾಕರ ಮತ. ಈ ಹಿಂದಿನ ಶ್ಲೋಕದಲ್ಲಿ–'ನ ಸತ್ಯಂ ತೇಷು ವಿದ್ಯತೇ'–ಅವರಲ್ಲಿ ಸತ್ಯವೆಂಬುದೇ ಇಲ್ಲ ಎಂಬುದಾಗಿ ಶ್ರೀಕೃಷ್ಣನು ಹೇಳಿರುವನು. ಈ ಶ್ಲೋಕದಲ್ಲಿ **ಅಸತ್ಯಂ, ಅಪ್ರತಿಷ್ಠಂ, ಅನೀಶ್ವರಂ, ಅಪರಸ್ಪರಸಮ್ಭೂತಂ ಜಗತ್ ತೇ ಆಹುಃ**–ಎಂದು ಅವರ ಸಿದ್ಧಾಂತವನ್ನು ಹೇಳಿದ್ದಾನೆ.

**ಭಸ್ಮೀಭೂತಸ್ಯ ದೇಹಸ್ಯ ಪುನರಾಗಮನಂ ಕುತಃ ।**
**ತಸ್ಮಾತ್ಸರ್ವಪ್ರಯತ್ನೇನ ಋಣಂ ಕೃತ್ವಾ ಘೃತಂ ಪಿಬೇತ್ ॥**

ದೇಹವು ಭಸ್ಮವಾಗಿ ಹೋದನಂತರ ಈ ಶರೀರದಲ್ಲಿರುವ ಪಂಚ ಭೂತಗಳೂ ಪಂಚಭೂತಗಳಲ್ಲಿ ಸೇರಿಕೊಂಡನಂತರ ಪುನರಾಗಮನವೆಂಬು ದೆಲ್ಲಿಯದು? ಆದುದರಿಂದ ಸರ್ವಪ್ರಯತ್ನದಿಂದಲೂ ಸಾಲಮಾಡಿ ಯಾದರೂ ತುಪ್ಪವನ್ನು ಚೆನ್ನಾಗಿ ತಿನ್ನಬೇಕು–ಎನ್ನುವವರೂ, ಸುಖಪಡಲು ಅವಕಾಶವು ಸಿಕ್ಕಿರುವಾಗ ಕಣ್ಣಿಗೆ ಕಾಣದ ಪಾಪ-ಪುಣ್ಯಗಳಿಗೆ ಹೆದರಿ ಹಸ್ತಗತ ವಾಗಿರುವ ಸುಖವನ್ನು ದೂರೀಕರಿಸಬಾರದು–ಎಂಬ ಸಿದ್ಧಾಂತವುಳ್ಳವರೂ ಚಾರ್ವಾಕರು ಅಥವಾ ಆಸುರಜನರು. ಸತ್ಯ ಎಂದರೆ ಗಂಭೀರವಾಗಿ ಆಲೋ ಚನೆ ಮಾಡಲ್ಪಡಬೇಕಾದ ಪದಾರ್ಥ. ಅಂತಹ ಪದಾರ್ಥವೇ ಯಾವುದೂ ಇಲ್ಲ ; ಜಗತ್ತಿನ ಯಾವುದನ್ನೂ ಆಳವಾಗಿ ತೆಗೆದುಕೊಳ್ಳದೇ ಇಂದ್ರಿಯಗಳು ಕೇಳಿದ ಸುಖಭೋಗಗಳನ್ನು ಅನುಭವಿಸುತ್ತಾ ಇರಬೇಕು–ಎಂದು ಅವರು ಹೇಳುವುದರಿಂದ ಅವರ ದೃಷ್ಟಿಯಲ್ಲಿ ಜಗತ್ತು ಅಸತ್ಯ. ಹಿಂದಿನ ಶ್ಲೋಕದಲ್ಲಿ ಹೇಳಿದಂತೆ 'ನ ಸತ್ಯಂ ತೇಷು ವಿದ್ಯತೇ' ಅವರಲ್ಲಿ ಸತ್ಯವೆಂಬುದೇ ಇಲ್ಲ. ಆದುದರಿಂದ ಅವರು ಸತ್ಯವು ಎಲ್ಲಿಯೂ ಇಲ್ಲ ಎಂಬ ಅಭಿಪ್ರಾಯವಿರ

ತಕ್ಕವರು. ನಾನು ಸುಳ್ಳನಾದರೆ ಪ್ರಪಂಚವೆಲ್ಲವೂ ಸುಳ್ಳನ್ನೇ ಆಡುತ್ತದೆ ಎಂದು ಭಾವಿಸುವುದು ಸ್ವಾಭಾವಿಕ. ದುರ್ಯೋಧನನಿಗೆ ಪ್ರಪಂಚದಲ್ಲಿ ಒಳ್ಳೆಯವರೇ ಕಾಣಿಸಲಿಲ್ಲವಂತೆ. ಅಂತೆಯೇ ಧರ್ಮಜನಿಗೆ ಪ್ರಪಂಚದಲ್ಲಿ ಕೆಟ್ಟವ ರಾರೆಂಬುದನ್ನು ಹುಡುಕುವುದು ಬಹುಕಷ್ಟವಾಯಿತಂತೆ. ಅದರಂತೆಯೇ ಯಾರಲ್ಲಿ ಸತ್ಯವೇ ಇಲ್ಲವೋ ಅವರು ಪ್ರಪಂಚದಲ್ಲಿ ಸತ್ಯವಿರುವುದೆಂಬುದನ್ನು ನಂಬುವುದಿಲ್ಲ. ಆದುದರಿಂದ **ಅಸತ್ಯಂ ಅನೀಶ್ವರಮ್ ಅಪ್ರತಿಷ್ಠಂ ಜಗತ್ ಆಹುಃ** = ಜಗತ್ತಿಗೆ ಆಧಾರವೇ ಇಲ್ಲ. ಇದು ಯಾವುದರ ಆಧಾರದಿಂದಲೂ ನಿಂತಿಲ್ಲ. ಜಗನ್ನಿಯಾಮಕನೆಂದು ಹೇಳುವ ಈಶ್ವರನೂ ಇಲ್ಲ– ಎನ್ನುತ್ತಾರೆ.

ಆದರೆ ಉಪನಿಷತ್ತು–**ಧರ್ಮೋ ವಿಶ್ವಸ್ಯ ಜಗತಃ ಪ್ರತಿಷ್ಠಾ** (ತೈ. ೪-೭೯) ಧರ್ಮವೇ ಸಕಲಜಗತ್ತಿಗೂ ಆಧಾರಭೂತವಾಗಿದೆ–ಎಂದು ಹೇಳುತ್ತದೆ. ಎಲ್ಲಕ್ಕೂ ಪರಮಾತ್ಮನೇ ಮೂಲ ಮತ್ತು ಪ್ರತಿಷ್ಠೆ ಎಂದೂ ಉಪನಿಷತ್ತು ಘೋಷಿಸುತ್ತದೆ–**ಸನ್ಮೂಲಾಃ ಖಲು ಸೌಮ್ಯ ಇಮಾಃ ಪ್ರಜಾಃ ಸದಾಯತನಾಃ ಸತ್ಪ್ರತಿಷ್ಠಾಃ** । (ಛಾಂದೋಗ್ಯ). ಆದರೆ ಆಸುರಜನರು 'ಈ ಜಗತ್ತಿಗೆ ಆಧಾರವಾದ ವಸ್ತುವು ಯಾವುದೂ ಇಲ್ಲ; ಆಧಾರವಾಗಲೀ, ನಿಯಂತೃವಾಗಲೀ, ನಾಯಕನಾಗಲೀ, ಈಶ್ವರನಾಗಲೀ–ಯಾರೂ ಇಲ್ಲ. ಕೇವಲ ಪ್ರಕೃತಿಯು ತನ್ನ ಕಾರ್ಯವನ್ನು ಮಾಡಿಕೊಂಡು ಹೋಗುತ್ತದೆ. ಇಲ್ಲಿ ಈಶ್ವರನಿಂದ ಆಗಬೇಕಾದ ಕಾರ್ಯವೇನೂ ಇಲ್ಲ. ಕರ್ಮಾಧ್ಯಕ್ಷ; ನಿಯಾಮಕ; ಪಾಪ-ಪುಣ್ಯಕರ್ಮಗಳಿಗೆ ಫಲಕೊಡತಕ್ಕವನು–ಎಂಬುದೆಲ್ಲವೂ ಕಟ್ಟುಕಥೆ'–ಎಂದು ಹೇಳುತ್ತಾರೆ.

ಪ್ರಕೃತಿಯ ಸ್ಥಿತಿಯು ಒಂದೇ ಸಮನಾಗಿರುವುದಿಲ್ಲ. ಇವತ್ತು ಇರುವುದು ನಾಳೆ ಇಲ್ಲದೇ ಇರಬಹುದು. (ಬಿರುಗಾಳಿಯ ಹೊಡೆತದಿಂದ ನೂರಾರು ಗ್ರಾಮಗಳು ನಿಮಿಷಮಾತ್ರದಲ್ಲಿ ಕೊಚ್ಚಿಹೋಗಿರುವುದು ನಮ್ಮ ಅನುಭವದಲ್ಲಿಯೇ ಇದೆ.) ಆದುದರಿಂದ ನಾಳೆಯವರೆಗೆ ಈ ಜಗತ್ತು ಹೀಗೆಯೇ ಇರುತ್ತದೆ ಎಂದು ನಂಬುವುದಕ್ಕಾಗುವುದಿಲ್ಲ. ಜಗತ್ತು ಅಸತ್ಯ ಸ್ವರೂಪವಾದುದರಿಂದ ಎಂದಾದರೂ ನಾಶವಾಗಿಬಿಡಬಹುದು. ಎಲ್ಲ ಭಾಗವೂ ನಾಶವಾಗದಿದ್ದರೂ ನಾವಿರುವ ಭಾಗವಾದರೂ ನಾಶವಾಗ

ಬಹುದು. ಇದು ಯಾವುದರ ಮೇಲೂ ನಿಂತಿಲ್ಲ. ಯಾವುದೋ ಪ್ರಾಕೃತಿಕವಾದ ಆಕರ್ಷಣೆಯು ಇದನ್ನು ನಿಲ್ಲಿಸಿದೆ. ಭೂಮಿಗೆ ಮತ್ತಾವ ಆಧಾರವೂ ಇಲ್ಲ. ಆದುದರಿಂದ ಇದು ಯಾವಾಗಲಾದರೂ ಕುಸಿಯಬಹುದು. ಎಲ್ಲವನ್ನೂ ನೋಡಿಕೊಳ್ಳಲು ಈಶ್ವರನೊಬ್ಬನು ಇದ್ದಿದ್ದರೆ ಭೂಕಂಪಾದಿಗಳಾಗಲೀ ಬಿರುಗಾಳಿಗಳಾಗಲೀ ಉಂಟಾಗುತ್ತಿರಲಿಲ್ಲ. ಅವನು ಎಲ್ಲವನ್ನೂ ನೋಡಿಕೊಳ್ಳುತ್ತಿದ್ದು ಜಗತ್ತನ್ನು ರಕ್ಷಿಸಬೇಕಾಗಿದ್ದಿತು. ಅದು ಅವನ ಕರ್ತವ್ಯವೂ ಆಗಿದ್ದಿತು. ಹಾಗೆ ಆಗದೇ ಪ್ರಕೃತಿಯ ನಿಯಮದಂತೆ ಇಂದಿನ ಆಗು-ಹೋಗುಗಳೆಲ್ಲವೂ ನಡೆಯುತ್ತಿರುವುದರಿಂದ–'ಈಶ್ವರನೆಂಬುವನಿಲ್ಲ. ಇದು ಕಟ್ಟುಕಥೆ'–ಎನ್ನುತ್ತಾರೆ, ಆಸುರಭಾವದವರು.

ಪರಸ್ಪರಸಂಭೂತವೆಂದರೆ **ಆಕಾಶಾದ್ವಾಯುಃ** – ಆಕಾಶದಿಂದ ವಾಯುವು ಹುಟ್ಟಿತು ; **ವಾಯೋರಗ್ನಿಃ**–ವಾಯುವಿನಿಂದ ಅಗ್ನಿಯು ಹುಟ್ಟಿತು; **ಅಗ್ನೇರಾಪಃ**– ಅಗ್ನಿಯಿಂದ ನೀರು ಹುಟ್ಟಿತು. ಅಥವಾ **ಯಜ್ಞಾದ್ಭವತಿ ಪರ್ಜನ್ಯಃ ಪರ್ಜನ್ಯಾದನ್ನಸಮ್ಭವಃ**–ಯಜ್ಞದಿಂದ ಮಳೆಯು ಬಂದಿತು ; ಮಳೆಯಿಂದ ಅನ್ನಕೊಡುವ ಪೈರು-ಪಚ್ಚೆಗಳು ಬೆಳೆದುವು ಎಂದು ಹಿಂದೆ ಹೇಳಿರುವಂತೆ–'ಈ ರೀತಿ ಕಾರ್ಯ-ಕಾರಣಪರಂಪರೆಯಲ್ಲಿ ಒಂದು ಮತ್ತೊಂದರಿಂದ ಹುಟ್ಟಿತು'–ಎಂದು ವೈದಿಕರು ಹೇಳುವ ಅಭಿಪ್ರಾಯ. ಈ ವಿಧವಾದ ಪರಸ್ಪರ ಸಂಭೂತತೆಯನ್ನು ಚಾರ್ವಾಕರು ಒಪ್ಪುವುದಿಲ್ಲ. ಯಜ್ಞವೇ ಇಲ್ಲದಿದ್ದರೂ ಪ್ರಕೃತಿನಿಯಮದಂತೆ–'ಮಳೆಯು ಆಗಿಯೇ ಆಗುತ್ತದೆ. ಯಜ್ಞಕ್ಕೂ ಮಳೆಗೂ ಯಾವ ಸಂಬಂಧವೂ ಇಲ್ಲ. ಮಳೆಯಾದರೆ ಬೆಳೆಯಾಗುತ್ತದೆ. ಇದು ಪ್ರಾಕೃತಿಕವಾಗಿ ನಿಜ. ಆದುದರಿಂದ ಯಜ್ಞದಿಂದ ಮಳೆ-ಬೆಳೆಗಳಾಗುವುವೆಂಬುದು ಸುಳ್ಳು. ಇದು ಆಸುರಭಾವದ ಮನುಷ್ಯರು ಹೇಳುವ ಮಾತು. ಶ್ರೀಕೃಷ್ಣನು ಹೇಳಿರುವಂತೆ–'**ಮಮ ಯೋನಿರ್ಮಹದ್ಬ್ರಹ್ಮ** (೧೪-೩) ಪರಮಾತ್ಮ ಮತ್ತು ಮೂಲಪ್ರಕೃತಿಗಳ ಪರಸ್ಪರಸಂಬಂಧದಿಂದ ಈ ಪ್ರಪಂಚವು ಹುಟ್ಟುತ್ತದೆ ಮತ್ತು ವಿನಾಶವಾಗುತ್ತದೆ'–ಎಂಬುದನ್ನೂ ಅವರು ಒಪ್ಪುವುದಿಲ್ಲ.

ಹಾಗಾದರೆ ವಿಶ್ವದಲ್ಲಿ ಪ್ರಜಾಸೃಷ್ಟಿಯೇ ಮುಂತಾದುವು ನಡೆಯುತ್ತಿದೆ

ಯಲ್ಲಾ?–ಎಂದರೆ ಕೇವಲ ಕಾಮದ ಕಾರಣದಿಂದಾಗಿ ಇವೆಲ್ಲವೂ ನಡೆಯುತ್ತಿವೆ. ಕಾಮದಿಂದಲೇ ಪ್ರಜಾವೃದ್ಧಿ ; ಕಾಮದಿಂದಲೇ ಪ್ರಪಂಚ ; ಕಾಮದಿಂದಲೇ ಮನುಷ್ಯನಿಗೆ ತೃಪ್ತಿ ; ಕಾಮವೊಂದನ್ನು ಬಿಟ್ಟರೆ ಈ ಪ್ರಪಂಚದ ಅಸ್ತಿತ್ವಕ್ಕೆ ಮತ್ತಾವ ಕಾರಣವಿದೆ?–ಎಂಬುದು ಆಸುರಮನುಷ್ಯರ ಪ್ರಶ್ನೆಯಾಗಿದೆ. ಚಾರ್ವಾಕರು ಎಂದರೆ ಚಾರು= ಮನೋಹರವಾಗಿ ವಾಕರು = ಮಾತನಾಡುವವರು. ಅವರ ಮಾತು ಕಿವಿಗೂ ಇಂಪಾಗಿರುತ್ತದೆ. ತರ್ಕಬದ್ಧವಾಗಿರುವಂತೆಯೂ ಕಾಣುತ್ತದೆ. ಆದರೆ ಅವರ ಮಾತುಗಳು ಆಳವಾಗಿ ನೋಡಿದಾಗ ವಿಚಾರರಮಣೀಯವೂ ಅಲ್ಲ ; ಇದಲ್ಲದೇ ಅವರಿಂದ ಜಗತ್ತಿಗೇ ತುಂಬ ಕೆಡುಕಾಗುವುದು ಎಂಬುದನ್ನು ಮುಂದೆ ಶ್ರೀಕೃಷ್ಣನೇ ಹೇಳುತ್ತಾನೆ.)

o o o

ಅವರು ಜಗತ್ತಿಗೆ ಸತ್ಯವಿಲ್ಲ, ಪ್ರತಿಷ್ಠೆಯಿಲ್ಲ ಮತ್ತು ಈಶ್ವರನಿಲ್ಲ– ಎಂದೂ ಹೇಳುತ್ತಾರೆ. ನಾವು ಅನೃತಪ್ರಾಯವಾಗಿರುವಂತೆಯೇ ಈ ಎಲ್ಲ ಜಗತ್ತೂ ಕೂಡ ಅಸತ್ಯವಾದುದು. ಅದಕ್ಕೆ ಧರ್ಮಾಧರ್ಮಗಳೆಂಬ ಪ್ರತಿಷ್ಠೆಯಿಲ್ಲ. ಧರ್ಮಾಧರ್ಮಗಳಿಗೆ ಅನುಗುಣವಾಗಿ ಇದನ್ನು ಆಳುವ ಈಶ್ವರನೂ ಇಲ್ಲ ಎನ್ನುತ್ತಾರೆ. ಕಾಮದಿಂದ ಒಂದುಗೂಡಿದ ಸ್ತ್ರೀ-ಪುರುಷರ ಅನ್ಯೋನ್ಯ ಸಂಯೋಗದಿಂದಲೇ ಎಲ್ಲ ಜಗತ್ತೂ ಉಂಟಾಗಿದೆ. ಈ ಕಾಮಹೇತುವಲ್ಲದೇ ಜಗತ್ತಿಗೆ ಬೇರೆ ಯಾವ ಕಾರಣವುಂಟು? ಅದೃಷ್ಟವಾದ ಧರ್ಮ-ಅಧರ್ಮ ಮುಂತಾದ ಯಾವ ಕಾರಣವೂ ಇಲ್ಲ. ಕಾಮವೇ ಪ್ರಾಣಿಗಳಿಗೆಲ್ಲಾ ಕಾರಣವು–ಎಂದು ಹೇಳುತ್ತಾರೆ. ಇದು ಲೋಕಾಯತಿಕರದೃಷ್ಟಿ. (ಶಂ. ಭಾ.)

**ಸತ್ಯ** ಎಂದರೆ ಆ ಶಬ್ದದಿಂದ ಹೇಳಲ್ಪಡುವ ಪರಬ್ರಹ್ಮ. ಆ ಪರಬ್ರಹ್ಮನ ಕಾರ್ಯವಾದುದರಿಂದ ಬ್ರಹ್ಮಾತ್ಮಕವಾಗಿರುವ ಈ ಜಗತ್ತು ಸತ್ಯ ಎನಿಸುತ್ತದೆ. ಆಸುರರು ಈ ಜಗತ್ತು **ಸತ್ಯ** ಎಂದರೆ ಬ್ರಹ್ಮಾತ್ಮಕ ಎಂದು ಹೇಳುವುದಿಲ್ಲ. ಬ್ರಹ್ಮನಲ್ಲಿ ಇದು ಪ್ರತಿಷ್ಠಿತವಾಗಿದೆ ಎಂದೂ ಹೇಳುವುದಿಲ್ಲ. ಅನಂತವಾದ ಬ್ರಹ್ಮನಿಂದಲೇ ಭೂಮಿಯು ಧರಿಸಲ್ಪಟ್ಟು ಎಲ್ಲ ಲೋಕಗಳನ್ನೂ ಧರಿಸಿದೆ. ಆದುದರಿಂದ ಜಗತ್ತಿಗೆ ಬ್ರಹ್ಮವೇ ಪ್ರತಿಷ್ಠೆ. ಆಸುರರು ಇದನ್ನು ಒಪ್ಪುವುದಿಲ್ಲ. ಇದಲ್ಲದೇ ಈ ಜಗತ್ತು ಅನೀಶ್ವರವಾದುದು ಎಂದೂ

ಹೇಳುತ್ತಾರೆ. ಸತ್ಯಸಂಕಲ್ಪನೂ, ಸರ್ವೇಶ್ವರನೂ, ಪರಬ್ರಹ್ಮನೂ ಆದ ನನ್ನಿಂದ ನಿಯಮಿತವಾಗಿದೆ–ಎಂದು ಅವರು ಒಪ್ಪುವುದಿಲ್ಲ.

**ಅಹಂ ಸರ್ವಸ್ಯ ಪ್ರಭವಃ। ಮತ್ತಃ ಸರ್ವಂ ಪ್ರವರ್ತತೇ ॥**

ಎಂದು ನಾನೇ ಹಿಂದೆ ಹೇಳಿದ್ದೆನಲ್ಲವೇ? ಈ ಅಭಿಪ್ರಾಯವನ್ನು ಅವರು ಒಪ್ಪುವುದಿಲ್ಲ. ಇನ್ನೇನು ಹೇಳುತ್ತಾರೆ ಎಂದರೆ ಇಲ್ಲಿ ಪರಸ್ಪರ ಸಂಭೂತವಲ್ಲದ್ದು ಬೇರೆ ಏನಿದೆ? ಎನ್ನುತ್ತಾರೆ. ಮನುಷ್ಯ, ಪಶು– ಮುಂತಾದ ಎಲ್ಲವೂ ಸ್ತ್ರೀ-ಪುರುಷರ ಪರಸ್ಪರಸಂಬಂಧದಿಂದಲೇ ಉಂಟಾಗಿದೆ. ಹೀಗೆ ಉಂಟಾಗದೇ ಇರುವುದು ಬೇರೆ ಯಾವುದು ತಾನೇ ಇದೆ? ಅಂತಹುದು ಯಾವುದೂ ಕಂಡುಬರುವುದಿಲ್ಲ. ಆದುದರಿಂದ ಈ ಜಗತ್ತೆಲ್ಲವೂ ಕಾಮಕಾರಣದಿಂದಲೇ ಹುಟ್ಟಿದುದು ಎನ್ನುತ್ತಾರೆ. (ರಾ. ಭಾ.)

ವಿಷ್ಣುವೇ ಜಗತ್ತಿಗೆ ಸತ್ಯವೂ, ಪ್ರತಿಷ್ಠೆಯೂ ಮತ್ತು ಈಶ್ವರನೂ ಆಗಿದ್ದಾನೆ. ಆಸುರರು ಹೇಳುವುದು ಇದಕ್ಕೆ ವಿರುದ್ಧ.

**ತಸ್ಯೋಪನಿಷತ್ಸತ್ಯಸ್ಯ ಸತ್ಯಮಿತಿ ಪ್ರಾಣಾ ವೈ ಸತ್ಯಮ್ । ತೇಷಾಮೇಷ ಸತ್ಯಮ್ ।** ಬೃ. ೪-೧-೨೦

**ದ್ವೇ ವಾವ ಬ್ರಹ್ಮಣೋ ಮೂರ್ತಂ ಚೈವಾಮೂರ್ತಂ ಚ ಮರ್ತ್ಯಂ। ಚಾಮೃತಂ ಚ ಸ್ಥಿತಂ ಚ ಯಚ್ಚ ಸಚ್ಚತ್ಯಚ್ಚ** ಬೃ. ೪-೩-೧

**ತಸ್ಯೋಪನಿಷತ್ ಸತ್ಯಸ್ಯ ಸತ್ಯಮ್** ಮೈತ್ರಿ ೬-೩೨

ಇತ್ಯಾದಿ ಶ್ರುತಿಗಳು ಹೇಳುವಂತೆ ಈ ಸತ್ಯವಾದ ಜಗತ್ತಿಗೆ ಸತ್ಯವಾಗಿರುವವನು ವಿಷ್ಣು. ಇದಕ್ಕೆ ಪ್ರತಿಷ್ಠೆಯೂ ಅವನೇ. ಈಶ್ವರನೂ ಅವನೇ.

**ಏಷ ಹ್ಯೇವೈತತ್ ಸಾದಯತಿ ಯಾಮಯತಿ ಚ ।**

(ಪ್ರಾಚೀನಶಾಲಾ ಶ್ರುತಿ)

ಇದು ಹೀಗಲ್ಲ ಎನ್ನುತ್ತಾರೆ ಆಸುರರು. ಈ ಜಗತ್ತು ಪರಮಾತ್ಮನು ಹಿಂದೆ–ಅನ್ನಾದ್ಭವನ್ತಿ ಭೂತಾನಿ (೩-೧೪) ಎಂದು ಮೊದಲಾಗಿ ಹೇಳಿರುವಂತೆ ಪರಸ್ಪರಸಂಭೂತವಾಗಿದೆ. ಇದು ಪರಸ್ಪರಸಂಭೂತವಲ್ಲ ; ಕಾಮದಿಂದ ಹುಟ್ಟಿದ್ದಲ್ಲದೇ ಮತ್ತೇನಾಗಿದೆ ಇದು? ಎನ್ನುತ್ತಾರೆ ಅವರು. (ಮ.ಭಾ.)

**ಓಂ ಏತಾಂ ದೃಷ್ಟಿಮವಷ್ಟಭ್ಯ ನಷ್ಟಾತ್ಮಾನೋऽಲ್ಪಬುದ್ಧಯಃ ।**
**ಪ್ರಭವನ್ತ್ಯುಗ್ರಕರ್ಮಾಣಃ ಕ್ಷಯಾಯ ಜಗತೋऽಹಿತಾಃ ॥೯॥**

ಈ ದೃಷ್ಟಿಯನ್ನು ಅವಲಂಬಿಸಿಕೊಂಡು ನಷ್ಟಾತ್ಮರಾಗಿ, ಅಲ್ಪಬುದ್ಧಿಗಳಾದ ಇವರು ಉಗ್ರಕರ್ಮಿಗಳಾಗಿ, ಅಹಿತರಾಗಿ, ಜಗತ್ತಿನ ಕ್ಷಯಕ್ಕೆ ಕಾರಣರಾಗುವರು.

* * *

(ಈ ದೃಷ್ಟಿಯನ್ನಿಟ್ಟುಕೊಂಡು ಎಂದರೆ ಇದು ಸರಿಯಾದ ದೃಷ್ಟಿಯಲ್ಲ. ಅವರು ಪ್ರಪಂಚವನ್ನು ಮತ್ತು ಈಶ್ವರನನ್ನು ಈ ವಿಧವಾಗಿ ಭಾವಿಸುವುದು ಸರಿಯಲ್ಲ. ಅವರ ದೃಷ್ಟಿಯು ವಕ್ರವಾಗಿದೆ. ಕಾಮಾಲೆ ರೋಗದವರಿಗೆ ಎಲ್ಲವೂ ಹಳದೀಬಣ್ಣವಾಗಿಯೇ ಕಾಣುತ್ತದೆ. ಅವರು ಪ್ರಪಂಚವು ಹಳದೀ ಬಣ್ಣವಾಗಿಯೇ ಇದೆ ಎಂದು ನಿಶ್ಚಯಿಸುತ್ತಾರೆ. ಅದರಂತೆಯೇ ಆಸುರ ವಕ್ರದೃಷ್ಟಿಗೆ ಪ್ರಪಂಚವು ಈ ವಿಧವಾಗಿ ಕಾಣುತ್ತದೆ. ಈ ವಕ್ರದೃಷ್ಟಿಯಿಂದ ನೋಡುವವರು ಬಹುಸಂಖ್ಯಾತರೇ ಆಗಿರಬಹುದು. ಬಹುಸಂಖ್ಯಾತರು ಅಸತ್ಯವನ್ನು ಹೇಳಿದರೆ ಅದು ಸತ್ಯವಾಗಿಬಿಡುವುದಿಲ್ಲ. ಆಸುರರು ಅಥವಾ ಆಸುರಭಾವದವರು ಬಹುಸಂಖ್ಯಾತರೆಂದು ಉಪನಿಷದ್ವಾಕ್ಯವೇ ಇದೆ.

**ತತಃ ಕನೀಯಸಾ ಏವ ದೇವಾಃ**

**ಜ್ಯಾಯಸಾ ಅಸುರಾಃ–** ಬೃಹದಾರಣ್ಯಕ ೧-೩-೧

ಭಗವಂತನು, ಇಂತಹ ವಕ್ರದೃಷ್ಟಿಯನ್ನಿಟ್ಟುಕೊಂಡುದರ ಫಲವೇನೆಂಬುದನ್ನು ಹೇಳುತ್ತಾನೆ. **ನಷ್ಟಾತ್ಮಾನಃ** = ಅವರಿಗೆ ಆತ್ಮಯೋಗವೆಂಬುದೇ ಇಲ್ಲದೇ ಹೋಗುತ್ತದೆ. ಆತ್ಮಯೋಗವನ್ನು ಪಡೆದುಕೊಳ್ಳಬೇಕೆಂಬುದೇ ಈ ಮನುಷ್ಯಜನ್ಮದ ಉದ್ದೇಶ. ಆತ್ಮಯೋಗಕ್ಕೆ ಸಾಧನಭೂತವಾದ ಪರಮ ಪವಿತ್ರವಾದ ಮನುಷ್ಯಜನ್ಮವು ಸಿಕ್ಕಿದ್ದರೂ ಮಂದಬುದ್ಧಿಗಳಾದ, ಅಲ್ಪಬುದ್ಧಿಗಳಾದ ಇವರು ನಷ್ಟಾತ್ಮರಾಗುತ್ತಾರೆ ; ಆತ್ಮಯೋಗವನ್ನು ಕಳೆದುಕೊಂಡುಬಿಡುತ್ತಾರೆ. ಅಧ್ಯಾತ್ಮಸಾಧನೆಗೆ ಕಾರಣಭೂತವಾದ ಈ ಮನುಷ್ಯಜನ್ಮವನ್ನು ಕೇವಲ ಕಾಮೋಪಭೋಗಗಳನ್ನೇ ಅನುಭವಿಸುತ್ತಾ ಕಳೆದುಕೊಂಡುಬಿಟ್ಟರೆ ಅವರಿಗೆ ಪುನಃ ಮನುಷ್ಯಜನ್ಮವು ಸಿಕ್ಕಬೇಕಾದರೆ ಎಷ್ಟು ಸಾವಿರ

ವರ್ಷಗಳು ಬೇಕಾಗುವುವೋ ತಿಳಿಯದು. ಅವರಂತೂ ಹಾಳಾಗಿ ಹೋಗುವುದಲ್ಲದೇ ಲೋಕವನ್ನೂ ಅವರು ಹಾಳುಮಾಡುತ್ತಾರೆ. ಯಾವಾಗ ಧರ್ಮಾಧರ್ಮಗಳಿಲ್ಲ ; ಪುಣ್ಯ-ಪಾಪಗಳಿಲ್ಲ ; ದೇವರಿಲ್ಲ ; ಕಾಮೋಪ ಭೋಗಗಳಿಂದಲೇ ಈ ಜನ್ಮದ ಸಾರ್ಥಕ್ಯ–ಎಂದು ದೃಢಪಡಿಸಿಕೊಂಡುಬಿಡು ವರೋ ಆಗ ಅವರು ಮನುಷ್ಯರೂಪದ ದುಷ್ಟಮೃಗಗಳಾಗಿಬಿಡುತ್ತಾರೆ. ಅವರಿಗೆ ಕಾರ್ಯಾಕಾರ್ಯಗಳ ಪರಿವೆಯೇ ಇರುವುದಿಲ್ಲ. ತಮ್ಮ ಇಷ್ಟವನ್ನು ತೀರಿಸಿಕೊಳ್ಳಲು ಯಾವುದೇ ಮಾರ್ಗವನ್ನಾದರೂ ಅನುಸರಿಸಲು ಹಿಂಜರಿ ಯುವುದಿಲ್ಲ. ಉಗ್ರಕರ್ಮಿಗಳಾಗುತ್ತಾರೆ. ಅರ್ಥಾತ್ ತಲೆಗಡುಕರಾಗುತ್ತಾರೆ. ಜಗತ್ತಿನ ಅಹಿತಕ್ಕೂ ನಾಶಕ್ಕೂ ಕಾರಣರಾಗುತ್ತಾರೆ. ಪ್ರಭವನ್ತಿ–ಎಂದು ಹೇಳಿರುವುದರಿಂದ ಆಸುರಭಾವದ ಪ್ರಜೆಗಳು ಧರ್ಮಹೀನರಾಗಿ ಪಾಪಿಷ್ಠ ರಾಗಿ ಜನ್ಮವನ್ನು ಕಳೆದು, ಜನ್ಮಾಂತರದಲ್ಲಿಯೂ ಸಹ ಹಿಂದೆ ಮಾಡಿದ ಪಾಪದ ಕಾರಣದಿಂದಾಗಿ ಉಗ್ರಕರ್ಮಿಗಳಾಗಿ ಹುಟ್ಟಿ, ಜಗತ್ತಿಗೆ ಅಹಿತವನ್ನು ಮಾಡುವವರಾಗಿ ಪುನಃ ಜಗತ್ತಿನ ಕ್ಷಯಕ್ಕೆ ಕಾರಣರಾಗುತ್ತಾರೆ–ಎಂದೂ ಅರ್ಥಮಾಡಬಹುದು.)

o o o

ಮೇಲೆ ಹೇಳಿದ ಲೋಕಾಯತರ ದೃಷ್ಟಿಯನ್ನು ಆಶ್ರಯಿಸಿ ನಷ್ಟ ಸ್ವಭಾವರಾಗಿ, ಪರಲೋಕಸಾಧನವನ್ನು ಕಳೆದುಕೊಂಡು ಅಲ್ಪಬುದ್ಧಿಯುಳ್ಳವ ರಾದ, ವಿಷಯವಿಷಯಿಕವಾದ ಅಲ್ಪಬುದ್ಧಿಯುಳ್ಳ ಅವರು ಜಗತ್ತಿಗೆ ಶತ್ರು ಗಳಾಗಿ ಕ್ರೂರಕರ್ಮಿಗಳಾಗಿ ಹಿಂಸಾತ್ಮಕರಾಗಿ ಜಗತ್ತಿನ ನಾಶಕ್ಕೆ ಕಾರಣ ರಾಗುತ್ತಾರೆ. (ಶಂ. ಭಾ.)

ಮೇಲೆ ಹೇಳಿದ ದೃಷ್ಟಿಯನ್ನು ಹೊಂದಿ ನಷ್ಟಾತ್ಮರಾದ (ದೇಹಾತೀತ ವಾದ ಆತ್ಮವನ್ನು ಕಾಣದವರಾದ) ಅಲ್ಪಬುದ್ಧಿಗಳು, ಘಲ ಮುಂತಾದುವು ಗಳಂತೆ ಜ್ಞೇಯವಾಗಿರುವ ದೇಹದಲ್ಲಿ ಜ್ಞಾತೃವಾಗಿರುವ ದೇಹವ್ಯತಿರಿಕ್ತನಾದ ಆತ್ಮವು ಕಂಡುಬರುವುದಿಲ್ಲ–ಎಂಬ ಅವಿವೇಕವುಳ್ಳವರು ಉಗ್ರಕರ್ಮಿಗಳು ; ಇವರು ಎಲ್ಲರನ್ನೂ ಹಿಂಸಿಸುವವರಾಗಿ ಜಗತ್ತಿನ ನಾಶಕ್ಕೆ ಕಾರಣರಾಗುತ್ತಾರೆ. (ರಾ. ಭಾ.)

**ಓಂ ಕಾಮಮಾಶ್ರಿತ್ಯ ದುಷ್ಪೂರಂ ದಮ್ಭಮಾನಮದಾನ್ವಿತಾಃ ।**
**ಮೋಹಾದ್ಗೃಹೀತ್ವಾಸದ್ಗ್ರಾಹಾನ್ಪ್ರವರ್ತನ್ತೇಽಶುಚಿವ್ರತಾಃ ॥೧೦॥**

ತುಂಬಲಾಗದ ಕಾಮವನ್ನು ಆಶ್ರಯಿಸಿ, ದಂಭ-ಮಾನ-ಮದಗಳಿಂದ ಕೂಡಿದವರಾಗಿ, ಮೋಹದಿಂದ ಕೆಟ್ಟ ಸಂಕಲ್ಪಗಳನ್ನು ಹಿಡಿದು ಅಶುಚಿವ್ರತರಾಗಿ ವರ್ತಿಸುತ್ತಾರೆ.

* * *

(ಕಾಮ ಅಥವಾ ಇಚ್ಛೆ ಎಂಬುದು ಅಗಾಧವಾದ ಒಂದು ಕೊರಕಲು. ಆ ಕೊರಕಲನ್ನು ತುಂಬುವ ಸಾಧ್ಯತೆಯೇ ಇಲ್ಲ. ಒಂದು ಕಡೆ ಮುಚ್ಚಿದರೆ ಮತ್ತೊಂದು ಕಡೆ ಕುಸಿಯುವುದು ಕೊರಕಲ ಸ್ವಭಾವ. ಮುಚ್ಚಲು ಸಾಧ್ಯವೇ ಇಲ್ಲದ ಅಂತಹ ಕಾಮರೂಪವಾದ ಕೊರಕಲನ್ನು ಈ ಆಸುರಮನುಷ್ಯರು ಮುಚ್ಚಬಯಸುತ್ತಾರೆ. ಇಂದ್ರಿಯಗಳ ಆಸೆಗಳನ್ನೆಲ್ಲಾ ತಣಿಸಲು ಸತತವಾಗಿ ಪ್ರಯತ್ನಮಾಡುತ್ತಲೇ ಇರುತ್ತಾರೆ. ಇಂದ್ರಿಯಗಳು ಶಿಥಿಲವಾದಂತೆ ಆಸೆಯೊಂದು ಮಾತ್ರ ಅಗಾಧವಾಗಿ ಉಳಿದುಕೊಳ್ಳುವುದೇ ಹೊರತು ಅದನ್ನು ಪೂರೈಸಿಕೊಳ್ಳಲು ಸಾಧ್ಯವಾಗುವುದಿಲ್ಲ. ದಂಭ, ಮಾನ, ಮದ–ಇವುಗಳಲ್ಲಿ ಯಾವುದಾದರೂ ಒಂದಿದ್ದರೂ ಮನುಷ್ಯನು ಪತಿತನಾಗುತ್ತಾನೆ. ಈ ಆಸುರ ಭಾವದ ಮನುಷ್ಯರಲ್ಲಿ ಈ ಮೂರು ದುಷ್ಟಗುಣಗಳೂ ಮನೆಮಾಡಿಕೊಂಡಿರುತ್ತವೆ. 'ಧರ್ಮ' ಎಂದರೆ ಏನೆಂಬುದೇ ಗೊತ್ತಿಲ್ಲದಿದ್ದರೂ ಧರ್ಮಾತ್ಮರಂತೆ ತೋರಿಸಿಕೊಳ್ಳುತ್ತಾರೆ. ಇವರಿಗೆ ಮಾನವು ಬಹಳವಾಗಿರುತ್ತದೆ. ಇನ್ನೊಬ್ಬರ ಮಾನಕಳೆಯಲು ಇವರು ಹೇಸುವುದಿಲ್ಲ. ತಮ್ಮ ಮಾನಕಳೆಯಲು ಅಥವಾ ತಮ್ಮಲ್ಲಿರುವ ದಾಂಭಿಕತೆಯನ್ನು ಹೊರಹಾಕಲು ಯಾರಾದರೂ ಪ್ರಯತ್ನಿಸಿಬಿಟ್ಟರೆ ಇವರು ಸಹಿಸತಕ್ಕವರಲ್ಲ. ಯೌವನಮದ, ಧನಮದ ಇವುಗಳಿಂದ ಕೊಬ್ಬಿಬಿಟ್ಟಿರುತ್ತಾರೆ. ಯೌವನವು ಕಳೆದನಂತರ ಯಾರಿಗೂ ಬೇಡದ ವೃದ್ಧಾಪ್ಯವು ಬರುವುದೆಂದು ಇವರು ಕ್ಷಣಮಾತ್ರವೂ ಯೋಚಿಸುವುದಿಲ್ಲ. ಅವಿವೇಕದಿಂದಾಗಿ ಅಸತ್ಪುರುಷರು ಕೈಗೊಳ್ಳುವ ಕೆಲಸಗಳನ್ನೇ ಇವರು ಕೈಗೊಳ್ಳುತ್ತಾರೆ. ಇವರು ಅಶುಚಿತ್ವವೇ ವ್ರತವಾಗಿ ಉಳ್ಳವರು ; ಪರಿಶುದ್ಧತೆ ಎಂಬುದು ಇವರ ಜಾಯಮಾನದಲ್ಲೇ ಇರುವುದಿಲ್ಲ. ಇವರು ಅಶುಚಿವ್ರತಿಗಳು ; ಅಶುಚಿಯನ್ನೇ ಶುಚಿಯೆಂದು

ಭಾವಿಸತಕ್ಕವರು ಇವರು. ಇದೇ ರೀತಿಯಲ್ಲಿ ಈ ಆಸುರಭಾವದವರು ತಮ್ಮ ಕಾಲವನ್ನು ಕಳೆಯುತ್ತಿರುತ್ತಾರೆ.)

O O O

ಪೂರೈಸಲು ಅಶಕ್ಯವಾಗಿರುವ ಕಾಮವನ್ನು (ಇಚ್ಛಾವಿಶೇಷವನ್ನು) ಆಶ್ರಯಿಸಿಕೊಂಡು, ದಂಭ-ಮಾನ-ಮದಗಳಿಂದ ಕೂಡಿದವರಾಗಿ ಅವಿವೇಕದಿಂದ ಅಶುದ್ಧವಾದ ನಿಶ್ಚಯಗಳನ್ನು ಸ್ವೀಕರಿಸಿ ಲೋಕದಲ್ಲಿ ಅಶುಚಿಯಾದ ವ್ರತಗಳಲ್ಲಿ ಅವರು ತೊಡಗುತ್ತಾರೆ. (ಶಂ. ಭಾ.)

ಹೊಂದಲು ಅತಿಕಷ್ಟವಾಗಿರುವ ವಿಷಯವುಳ್ಳ ಕಾಮವನ್ನಾಶ್ರಯಿಸಿ, ಅದನ್ನು ಸಾಧಿಸುವ ಇಚ್ಛೆಯಿಂದ ಕೂಡಿ ಅಜ್ಞಾನದಿಂದ ಅನ್ಯಾಯದಿಂದ ಬಂದ (ಸಂಪಾದಿಸಿದ) ಅಸತ್ಪರಿಗ್ರಹಗಳನ್ನು ಸ್ವೀಕರಿಸಿ, ಅಶುಚಿಯಾದ ವ್ರತವುಳ್ಳವರಾಗಿ ಎಂದರೆ ಶಾಸ್ತ್ರನಿಷಿದ್ಧವಾದ ವ್ರತವುಳ್ಳವರಾಗಿ ದಂಭ-ಮಾನ-ಮದಗಳಿಂದ ಕೂಡಿ ಲೋಕದಲ್ಲಿ ನಡೆಯುತ್ತಾರೆ. (ರಾ. ಭಾ.)

ಕಾಮವು ಪೂರೈಸುವುದಕ್ಕೆ ಕಷ್ಟವಾದುದು. ಪಾತಾಲ ಇವ ದುಷ್ಪೂರೋ ಮಾಂ ಹಿ ಕ್ಲೇಶಯತೇ ಸದಾ—ಮೋಕ್ಷಧರ್ಮ.

(ಮ. ಭಾ.)

**ಓಂ ಚಿನ್ತಾಮಪರಿಮೇಯಾಂ ಚ ಪ್ರಲಯಾನ್ತಾಮುಪಾಶ್ರಿತಾಃ ।**
**ಕಾಮೋಪಭೋಗಪರಮಾ ಏತಾವದಿತಿ ನಿಶ್ಚಿತಾಃ ॥೧೧॥**

**ಓಂ ಆಶಾಪಾಶಶತೈರ್ಬದ್ಧಾಃ ಕಾಮಕ್ರೋಧಪರಾಯಣಾಃ ।**
**ಈಹನ್ತೇ ಕಾಮಭೋಗಾರ್ಥಮನ್ಯಾಯೇನಾರ್ಥಸಂಚಯಾನ್ ॥೧೨॥**

ಅಳೆಯಲು ಅಸಾಧ್ಯವಾಗಿ, ಪ್ರಲಯಕಾಲದವರೆಗೂ ಇರುವ ಚಿಂತೆಯನ್ನು ಆಶ್ರಯಿಸಿದವರಾಗಿ, ಕಾಮೋಪಭೋಗವೇ ಶ್ರೇಷ್ಠವಾದುದೆಂದು ನಿಶ್ಚಯಿಸಿದವರಾಗಿ, 'ಇದು ಇಷ್ಟೇ' ಎಂದು ನಿಶ್ಚಯಿಸಿಕೊಂಡಿರುತ್ತಾರೆ. ನೂರಾರು ಆಶೆಗಳೆಂಬ ಹಗ್ಗಗಳಿಂದ ಕಟ್ಟಲ್ಪಟ್ಟವರಾಗಿ, ಕಾಮ-ಕ್ರೋಧಪರಾಯಣರಾಗಿ, ಕಾಮೋಪಭೋಗಕ್ಕಾಗಿ ಅನ್ಯಾಯದಿಂದ ಹಣಸಂಪಾದನೆ ಮಾಡಲು ಪ್ರಯತ್ನಿಸುತ್ತಾರೆ.

* * *

(ಆಸುರಸ್ವಭಾವದವರ ಚಿಂತೆಯು ಅಪರಿಮೇಯವಾದುದು. ಅಳೆ

ಯಲು ಅಸಾಧ್ಯವಾದುದು. ಗಾಳಿಯನ್ನಳೆಯುವ ಕೊಳಗದಿಂದಲೂ ಇವರ ಚಿಂತೆಯನ್ನಳೆಯಲು ಸಾಧ್ಯವಾಗುವುದಿಲ್ಲ. ಇದು ಪ್ರಲಯಾಂತವಾದುದು ಎನ್ನುತ್ತಾನೆ ಶ್ರೀಕೃಷ್ಣ. ಜನ್ಮಾಂತವಾದುದು ಎನ್ನುವುದಿಲ್ಲ. ಆಸುರಭಾವದವರು ಈ ಚಿಂತೆಯನ್ನು ಈ ಜನ್ಮದಲ್ಲಿಯೇ ಅಲ್ಲದೇ ಜನ್ಮಾಂತರಗಳಿಗೂ ಒಯ್ಯುತ್ತಾರೆ. ಪ್ರಲಯವು ಬಂದಾಗ ಇವರ ಚಿಂತೆಗೆ ಸ್ವಲ್ಪ ವಿರಾಮವು ಸಿಕ್ಕಿದಂತಾಗುತ್ತದೆ. ಇವರ ಚಿಂತೆಯೆಲ್ಲವೂ ಪ್ರಾಪಂಚಿಕವ್ಯವಹಾರಕ್ಕೆ ಸಂಬಂಧಿಸಿದುದು. ಅಧ್ಯಾತ್ಮಚಿಂತೆಯಲ್ಲ. ಲೋಕವ್ಯವಹಾರ, ಹೆಣ್ಣು, ಹೊನ್ನು, ಮಣ್ಣು–ಇತ್ಯಾದಿಗಳಿಗೆ ಸಂಬಂಧಿಸಿದುದು. ಆ ವ್ಯವಹಾರವನ್ನು ಹೇಗೆ ಗೆಲ್ಲಲಿ? ಯಾರನ್ನು ಸಾಕ್ಷಿಯಾಗಿ ಕರೆಯಲಿ? ಆ ಭೂಮಿಯನ್ನು ಹೇಗೆ ಕಬಳಿಸಲಿ? ಆದಾಯತೆರಿಗೆಯಿಂದ ಹೇಗೆ ತಪ್ಪಿಸಿಕೊಳ್ಳಲಿ?–ಇತ್ಯಾದಿ ಸಾವಿರಾರು ಚಿಂತೆಗಳು ಇವರಲ್ಲಿ ಮನೆಮಾಡಿಕೊಂಡಿರುತ್ತವೆ.

ಈ ಅಪರಿಮಿತವಾದ ಚಿಂತೆಯಲ್ಲಿ ನಿದ್ರೆಯೂ ಇವರಿಗೆ ಬರುವುದಿಲ್ಲ.
**ಕಾಮೋಪಭೋಗಪರಮಾಃ ಏತಾವದಿತಿ ನಿಶ್ಚಿತಾಃ ।**

ಅವರ ಜೀವನದ ಪರಮಧ್ಯೇಯವೇ ಕಾಮಪೂರ್ತಿ ಸುರಾಪಾನ ಇತ್ಯಾದಿಗಳೇ ಆಗಿರುತ್ತವೆ. ಇದೇ ಸ್ವರ್ಗದ ಸುಖವೆಂದು ಅವರ ಭಾವನೆಯಾಗಿರುತ್ತದೆ. ಮನುಷ್ಯನು ಸಾಧಿಸಬೇಕಾದ ಪುರುಷಾರ್ಥವೆಂದರೆ ಇದೇನೆ ಎಂದು ಅವರು ದೃಢವಾಗಿ ನಂಬಿರುತ್ತಾರೆ. ಸ್ವಚ್ಛಂದವಾಗಿ ಕುಡಿಯುವುದು, ಸ್ವಚ್ಛಂದವಾಗಿ ತಿನ್ನುವುದು, ಸ್ವಚ್ಛಂದವಾಗಿ ಸ್ತ್ರೀಯರ ಉಪಭೋಗ–ಈ ಮೂರೇ ಅವರ ಜೀವನದ ಚರಿತಾರ್ಥವಾಗಿರುತ್ತದೆ.

**ಆಶಾಪಾಶಶತೈರ್ಬದ್ಧಾಃ** = ನೂರಾರು ಸಂಖ್ಯೆಯ ಆಸೆಗಳೆಂಬ ಹಗ್ಗಗಳಿಂದ ಬಂಧಿತರಾಗಿರುತ್ತಾರೆ. ಅರ್ಥಾತ್ ಅವರ ಆಸೆಗಳಿಗೂ ಮಿತಿಯಿರುವುದಿಲ್ಲ. ಒಂದು ಆಸೆಯು ಪೂರೈಸಿತೆಂದರೆ ಮತ್ತೊಂದು ಆಸೆಯು ಮೊಳೆಯುತ್ತದೆ. ಆಸೆ ಎಂಬುದಕ್ಕೆ ವಿರಾಮವೇ ಇಲ್ಲ. ಇದ್ದ ಆಸೆಯ ಜೊತೆಗೆ ಹೊಸ ಹೊಸ ಆಸೆಗಳು ಹುಟ್ಟುತ್ತಲೇ ಇರುತ್ತವೆ. ಯದ್ಯಪಿ ಈ ಅನೇಕ ಆಸೆಗಳಿಂದ ಅವರು ಬಂಧಿತರಾಗಿದ್ದರೂ ಸಹ ತಾವು ಆಸೆಗಳಿಂದ ಬಂಧಿತರಾಗಿದ್ದೇವೆ ಎಂದವರು ಭಾವಿಸುವುದಿಲ್ಲ. ಒಂದೊಂದು ಆಸೆಯು ಪೂರ್ಣವಾದಾಗಲೂ ಅದೊಂದು ತಮ್ಮ ಜೀವನದ 'ಸಾಧನೆ' ಎಂದು ಮನಸ್ಸಿನಲ್ಲೇ ಹಿಗ್ಗುತ್ತಾರೆ.

**ಕಾಮಕ್ರೋಧಪರಾಯಣಾಃ** = ಕಾಮವೆಲ್ಲಿದೆಯೋ ಅಲ್ಲಿ ಕ್ರೋಧವೂ ಇರತಕ್ಕದ್ದೇ. ಒಂದನ್ನು ಬಿಟ್ಟು ಮತ್ತೊಂದಿರುವುದಿಲ್ಲ. ಮನುಷ್ಯನ ಕಾಮನೆಗಳೆಲ್ಲವೂ ಪೂರ್ಣವಾಗಿಬಿಡುವುದಿಲ್ಲ. ಕಾಮಕ್ಕೆ ವ್ಯಾಘಾತವಾಯಿ ತೆಂದರೆ ಒಡನೆಯೇ ಕೋಪವು ಹೃದಯಾಂತರಾಳದಿಂದ ಮೇಲೇಳುತ್ತದೆ.

**ಕಾಮಾತ್ ಕ್ರೋಧೋಽಭಿಜಾಯತೇ** ಗೀತಾ ೨-೨

**ಕಾಮಭೋಗಾರ್ಥಂ ಅನ್ಯಾಯೇನ ಅರ್ಥಸಞ್ಚಯಾನ್ ಈಹನ್ತೇ ।**

ಕಾಮದ ಅನುಭವಕ್ಕೋಸ್ಕರ ಅನ್ಯಾಯದ ಮೂಲಕವಾಗಿ ಅರ್ಥ ಸಂಗ್ರಹಣವನ್ನು ಅಪೇಕ್ಷಿಸುತ್ತಾರೆ. ಈ ಮಾತು ಸಾರ್ವಕಾಲಿಕಸತ್ಯ. ಇಂದು ನಮ್ಮಲ್ಲೂ ನಡೆಯುತ್ತಿರುವುದು ಇದೇ ಆಗಿರುತ್ತದೆ. ಕಾಮಭೋಗಗಳಿಗೆ ಎಷ್ಟೇ ಹಣವಿದ್ದರೂ ಸಾಲದಾಗುತ್ತದೆ. ಯೋಗ್ಯರೀತಿಯ ಸಂಪಾದನೆಯಿಂದ ಧರ್ಮಪತ್ನಿಯೊಡನೆ ಸುಖಸಂಸಾರವನ್ನು ನಡೆಸಬಹುದು. ಇದು ಧರ್ಮ ಕಾಮನೆ. ಆದರೆ ಆಸುರಮನುಷ್ಯನ ಕಾಮಪಿಪಾಸೆಯು ಧರ್ಮಕಾಮನೆ ಯಿಂದ ತೃಪ್ತಿಹೊಂದುವುದಿಲ್ಲ. ಸ್ವೇಚ್ಛಾಚಾರಿಯಾಗಿ ಮನಬಂದಂತೆ ವರ್ತಿಸುವುದು ಅವನಿಗೆ ಮಹಾನಂದವಾಗಿ ಕಾಣುತ್ತದೆ. ಇಂತಹ ಸ್ವೇಚ್ಛಾ ವರ್ತನೆಗೆ ಯೋಗ್ಯರೀತಿಯ ಸಂಪಾದನೆಯ ಹಣವು ಸಾಲದಾಗುತ್ತದೆ. ಹಣವಿಲ್ಲವೆಂದು ಸ್ವೇಚ್ಛಾಚಾರವನ್ನು ಬದಲಿಸಲಾಗುವುದಿಲ್ಲ. ಆಗ ಅನ್ಯಾಯ ದಿಂದಲಾದರೂ ಹಣವನ್ನು ಸಂಪಾದಿಸಿಯೇ ತೀರಬೇಕಾಗುತ್ತದೆ. ಮೋಸ, ಕಳ್ಳತನ, ದರೋಡೆ–ಇತ್ಯಾದಿಗಳಿಗೆ ಮನಗೊಡಬೇಕಾಗುತ್ತದೆ. ಮೋಸ, ಕಳ್ಳತನ–ಮುಂತಾದುವುಗಳನ್ನು ಪ್ರಾರಂಭಿಸಿದನಂತರ ಅದೇ ಅವನ ಸ್ವಭಾವ ವಾಗಿಬಿಡುತ್ತದೆ. ಕಾಮ-ಭೋಗಗಳನ್ನೂ ಬಿಡುವುದಕ್ಕಾಗುವುದಿಲ್ಲ. ಮೋಸ-ಕಳ್ಳತನಗಳನ್ನೂ ಬಿಡುವುದಕ್ಕಾಗುವುದಿಲ್ಲ. ಇದರಿಂದಾಗಿ ಒಂಬತ್ತನೆಯ ಶ್ಲೋಕದಲ್ಲಿ ಹೇಳಿರುವಂತೆ–

**ಭವನ್ತ್ಯುಗ್ರಕರ್ಮಾಣಃ ಕ್ಷಯಾಯ ಜಗತೋಽಹಿತಾಃ ।**

ಕ್ರೂರಕರ್ಮಿಗಳಾಗಿ ಜಗತ್ತಿನ ವಿನಾಶಕ್ಕೇ ಕಾರಣರಾಗುತ್ತಾರೆ.)

o o o

**ಪ್ರಲಯಾನ್ತಾಂ** = ಮರಣಪರ್ಯಂತವಾಗಿ ಇರುವ, **ಅಪರಿ-ಮೇಯಾಂ ಚಿನ್ತಾಂ ಉಪಾಶ್ರಿತಾಃ** = ಇದು ಇಷ್ಟು ಎಂದು ಅಳತೆಮಾಡ

ಲಾಗದ ಚಿಂತೆಯನ್ನು ಆಶ್ರಯಿಸಿದವರಾಗಿ–ಸದಾ ಚಿಂತಾಪರರಾಗಿ. **ಕಾಮೋಪಭೋಗ ಪರಮಾಃ**–ಎಂದರೆ ಶಬ್ದ-ಸ್ಪರ್ಶ ಮುಂತಾದುವುಗಳು. ಅವುಗಳ ಭೋಗವನ್ನೇ ಪರಮಪುರುಷಾರ್ಥವೆಂದು ತಿಳಿದಿರುವುದು. **ಆಶಾ ಪಾಶಶತೈರ್ಬದ್ಧಾಃ**=ಆಶೆಗಳೆಂಬ ನೂರಾರು ಹಗ್ಗಗಳಿಂದ ಕಟ್ಟಿಹಾಕಲ್ಪಟ್ಟು ಎಲ್ಲ ಕಡೆಗಳಿಂದಲೂ ಎಳೆಯಲ್ಪಡುತ್ತಾ ಇರುವವರು. **ಕಾಮಕ್ರೋಧ ಪರಾಯಣಾಃ** = ಕಾಮ ಮತ್ತು ಕ್ರೋಧಗಳನ್ನೇ ಪರಮವಾದ ಆಶ್ರಯವನ್ನಾಗಿ ಹೊಂದಿರುವವರು. **ಈಹನ್ತೇ.... ಸಞ್ಚಯಾನ್** = ಇವರು ಅನ್ಯಾಯದಿಂದ ಪರಸ್ವತ್ತಿನ ಅಪಹರಣವೇ ಮುಂತಾದ ಯುಕ್ತಿಗಳಿಂದ ಧನರಾಶಿಯನ್ನು ಹೊಂದಲು ಪ್ರಯತ್ನಿಸುತ್ತಾರೆ. ಹಾಗೆ ಪ್ರಯತ್ನಿಸುವುದು–ಕಾಮವನ್ನು ಭೋಗಿಸುವ ಪ್ರಯೋಜನಕ್ಕೋಸ್ಕರ ; ಧರ್ಮಕ್ಕೋಸ್ಕರವಾಗಿ ಅಲ್ಲ.

(ಶಂ. ಭಾ.)

ಇಂದೋ ನಾಳೆಯೋ ಸಾಯುವ ಸ್ಥಿತಿಯಲ್ಲಿ ಇರುವ ಇವರು ಲೆಕ್ಕ ಮಾಡಲಾಗದಷ್ಟು ಅನಂತವಾದ ಶಾಖೆಗಳುಳ್ಳ ಮತ್ತು **ಪ್ರಲಯಾನ್ತಾಂ** = ಪ್ರಾಕೃತಪ್ರಲಯಕಾಲದಲ್ಲಿ ಸಾಧಿಸಲು ಆಗುವ ವಿಷಯವುಳ್ಳ ಚಿಂತೆಯನ್ನು ಆಶ್ರಯಿಸಿದವರಾಗಿ. (ಅನಂತಕಾಲದಲ್ಲಿ ಸಾಧ್ಯವಾಗುವುದನ್ನು ಅಲ್ಪಕಾಲ ದಲ್ಲೇ ಸಾಧಿಸುವ ಇಚ್ಛೆಯುಳ್ಳ ಅತಿಶಯವಾದ ವ್ಯಾಮೋಹವುಳ್ಳವರಾಗಿ) **ಕಾಮೋಪಭೋಗಪರಮಾಃ.... ನಿಶ್ಚಿತಾಃ** = ಕಾಮದ ಉಪಭೋಗವೇ ಪರಮಪುರುಷಾರ್ಥವು ಎಂದು ತಿಳಿದು, ಅದಕ್ಕೆ ಮೇಲಿನ ಪುರುಷಾರ್ಥವು ಯಾವುದೂ ಇಲ್ಲ–ಎಂದು ನಿಶ್ಚಯಿಸಿಕೊಂಡವರಾಗಿ, **ಆಶಾ....ಸಂಚ ಯಾನ್** = ಆಶೆಯೆಂಬ ನೂರಾರು ಪಾಶಗಳಿಂದ ಕಟ್ಟಲ್ಪಟ್ಟವರಾಗಿ, ಕಾಮ-ಕ್ರೋಧಗಳಿಗೆ ಮಾತ್ರವೇ ನಿಷ್ಠೆಯುಳ್ಳವರಾಗಿ, ಕಾಮಾನುಭವಕ್ಕೋಸ್ಕರ ಅನ್ಯಾಯದಿಂದ ಹಣದ ಸಮುದಾಯವನ್ನು ಪಡೆಯಲು ಬಯಸುತ್ತಾರೆ.

(ರಾ. ಭಾ.)

**ಪ್ರಲಯಾನ್ತಾಂ** = ಮರಣಾಂತವಾದ. **ಕಾಮೋಪಭೋಗಪರಮಾಃ** = ವಿಷಯಭೋಗವೊಂದರಲ್ಲಿಯೇ ನಿರತರಾದ. **ಏತಾವದಿತಿ ನಿಶ್ಚಿತಾಃ** = ಐಹಿಕವೊಂದೇ ಫಲ, ಆಮುಷ್ಮಿಕವಾದ ಫಲವಿಲ್ಲ–ಎಂದು ನಿಶ್ಚಯಿಸಿ ಕೊಂಡವರಾಗಿ. (ಮ. ಟೀಕಾ)

**ಓಂ ಇದಮದ್ಯ ಮಯಾಲಬ್ಧಮಿಮಂ ಪ್ರಾಪ್ಸ್ಯೇ ಮನೋರಥಮ್ ।**
**ಇದಮಸ್ತೀದಮಪಿ ಮೇ ಭವಿಷ್ಯತಿ ಪುನರ್ಧನಮ್ ॥೧೩॥**
**ಓಂ ಅಸೌ ಮಯಾ ಹತಃ ಶತ್ರುರ್ಹನಿಷ್ಯೇ ಚಾಪರಾನಪಿ ।**
**ಈಶ್ವರೋಽಹಮಹಂ ಭೋಗೀ ಸಿದ್ಧೋಽಹಂ ಬಲವಾನ್ಸುಖೀ ॥**
**ಓಂ ಆಢ್ಯೋಽಭಿಜನವಾನಸ್ಮಿ ಕೋಽನ್ಯೋಽಸ್ತಿ ಸದೃಶೋ ಮಯಾ ।**
**ಯಕ್ಷ್ಯೇ ದಾಸ್ಯಾಮಿ ಮೋದಿಷ್ಯೇ ಇತ್ಯಜ್ಞಾನವಿಮೋಹಿತಾಃ ॥೧೫॥**
**ಓಂ ಅನೇಕಚಿತ್ತವಿಭ್ರಾನ್ತಾ ಮೋಹಜಾಲಸಮಾವೃತಾಃ ।**
**ಪ್ರಸಕ್ತಾಃ ಕಾಮಭೋಗೇಷು ಪತನ್ತಿ ನರಕೇಽಶುಚೌ ॥೧೬॥**

ಇದನ್ನು ನಾನು ಪಡೆದುಕೊಂಡೆನು ; ಈ ನನ್ನ ಇಚ್ಛೆಯನ್ನು ಮುಂದೆ ಪೂರೈಸಿಕೊಳ್ಳುವೆನು ; ಇದೂ ನನ್ನಲ್ಲಿದೆ ; ಪುನಃ ಈ ಧನವೂ ನನಗೇ ಸಿಗುತ್ತದೆ; ಆ ಶತ್ರುವು ನನ್ನಿಂದ ಕೊಲ್ಲಲ್ಪಟ್ಟನು ; ಮಿಕ್ಕವರನ್ನೂ ಕೊಲ್ಲುವೆನು ; ನಾನೇ ಈಶ್ವರ ; ನಾನೇ ಭೋಗಿಯು ; ನಾನು ಸಿದ್ಧನು ; ಬಲಿಷ್ಠನು ; ಸುಖಿಯು; ಶ್ರೀಮಂತನು ; ಸತ್ಕುಲಪ್ರಸೂತನು ; ನನಗೆ ಸಮಾನನಾದವನು ಬೇರೆ ಯಾವನಿದ್ದಾನೆ? ಯಾಗಮಾಡುವೆನು ; ದಾನ ಕೊಡುವೆನು ; ಸಂತೋಷಪಡುವೆನು–ಎಂದು ಹೇಳಿಕೊಂಡು ಅಜ್ಞಾನದಿಂದ ಅವಿವೇಕಿಗಳಾಗಿ, ಅನೇಕ ವಿಚಾರಗಳನ್ನು ಮನಸ್ಸಿನಲ್ಲಿ ಯೋಚಿಸುತ್ತಾ ಭ್ರಾಂತರಾಗಿ, ಮೋಹವೆಂಬ ಬಲೆಯಿಂದ ಸಮಾವೃತರಾಗಿ, ಕಾಮಭೋಗ ಗಳಲ್ಲಿ ಹೆಚ್ಚು ಆಸಕ್ತರಾಗಿ ಜೀವನನಡೆಸುತ್ತಿದ್ದು ಅವಸಾನಾನಂತರದಲ್ಲಿ ಅಶುಚಿಯಾದ ನರಕದಲ್ಲಿ ಬೀಳುವರು.

* * *

(ಈ ನಾಲ್ಕು ಶ್ಲೋಕಗಳಲ್ಲಿ ಆಸುರಮನುಷ್ಯನ ಸ್ವಭಾವವನ್ನು ಶ್ರೀಕೃಷ್ಣನು ಕಣ್ಣಿಗೆ ಕಟ್ಟುವಂತೆ ಚಿತ್ರಿಸಿದ್ದಾನೆ. ನನ್ನ ಯೋಜನೆಯು ಕಾರ್ಯಗತವಾಯಿತು; ಇದು ನನಗೆ ಸಿಕ್ಕಿಬಿಟ್ಟಿತು ; ಆದರೆ ನಾನು ಅದನ್ನೂ ಬಿಡುವವನಲ್ಲ ; ಅದನ್ನೂ ಅವನಿಂದ ಅಪಹರಿಸಿಯೇ ತೀರು ತ್ತೇನೆ ; ನನ್ನ ಮನೋರಥವನ್ನು ಪೂರೈಸಿಕೊಳ್ಳುತ್ತೇನೆ ; ಈಗ ಈ ಗಂಟು ನನ್ನಲ್ಲಿದೆ ; ಆ ಹಣದ ಗಂಟೂ ನನಗೇ ಸಿಗುತ್ತದೆ ; ನನ್ನನ್ನು ಬಿಟ್ಟು ಅದು ಎಲ್ಲಿಗೂ ಹೋಗುವುದಿಲ್ಲ ; ಅದೇ ರೀತಿಯಲ್ಲಿ ವ್ಯವಸ್ಥೆ

ಮಾಡಿದ್ದೇನೆ. ನನ್ನ ಕಾರ್ಯಗಳಿಗೆ ಕಂಟಕಪ್ರಾಯನಾಗಿದ್ದ ಶತ್ರುವನ್ನು ನಾಶ ಮಾಡಿದೆನು. ಇನ್ನೂ ಕೆಲವರನ್ನು ಮುಗಿಸಿ ಎಲ್ಲರಿಗೂ ನಾನಾರೆಂಬುದನ್ನು ಮನಗಾಣಿಸಬೇಕಾಗಿದೆ. ನನ್ನ ಕಾರ್ಯಗಳಿಗೆ ಯಾರೊಬ್ಬರೂ ಅಡ್ಡಿಬರ ಬಾರದು–ಹಾಗೆ ನೋಡಿಕೊಳ್ಳುತ್ತೇನೆ. ಸದ್ಯಕ್ಕೆ ಇಲ್ಲಿಗೆಲ್ಲಾ ನಾನೇ ಈಶ್ವರ–ಪ್ರಭುವಾಗಿಬಿಟ್ಟಿದ್ದೇನೆ. ನನ್ನ ಆಜ್ಞೆಯಂತೆಯೇ ಈ ಪ್ರಾಂತ್ಯದಲ್ಲಿ ಎಲ್ಲವೂ ನಡೆಯುತ್ತಿದೆ. ನನ್ನ ಭೋಗಲಾಲಸೆಗೆ ಈಗ ಇಲ್ಲಿ ಯಾವ ವಿಧವಾದ ಆತಂಕ ಗಳೂ ಇಲ್ಲ. ಎಲ್ಲವನ್ನೂ ಭೋಗಿಸಬಲ್ಲೆ. ನಾನು ಸಿದ್ಧನೂ ಆಗಿಬಿಟ್ಟಿದ್ದೇನೆ. ನಾನು ಅಪೇಕ್ಷಿಸಿದ ಭೋಗವಸ್ತುವು ಕ್ಷಣಮಾತ್ರದಲ್ಲಿ ನನ್ನೆದುರಿನಲ್ಲಿರುತ್ತದೆ. ಸಿದ್ಧನಿಗಾದರೂ ಸ್ವಲ್ಪ ಕಾಲಾವಕಾಶವು ಬೇಕಾಗಬಹುದು. ನನ್ನ ಮುಖ ಲಕ್ಷಣದಿಂದಲೇ ನನಗೇನು ಬೇಕೆಂಬುದನ್ನರಿತು ನನ್ನ ಸೇವಕರು ಕ್ಷಣಮಾತ್ರ ದಲ್ಲಿ ಭೋಗವಸ್ತುಗಳನ್ನು ಸಿದ್ಧಪಡಿಸುತ್ತಾರೆ. ನಾನು ಬಲಿಷ್ಠನೂ ಆಗಿದ್ದೇನೆ. ನಾಲ್ವರು ಏಕಕಾಲದಲ್ಲಿ ಬಂದರೂ ಎದುರಿಸಬಲ್ಲೆನು. ನನ್ನ ಸುಖಕ್ಕೆ ಯಾವ ಕುಂದೂ ಇಲ್ಲ. ಕುಡಿಯಲು ಒಳ್ಳೊಳ್ಳೆಯ ಪಾನೀಯಗಳು ಸಿದ್ಧ ವಾಗಿರುತ್ತವೆ. ಸೇವೆಮಾಡಲು ಪರಿಜನರು ಸರ್ವದಾ ಸಿದ್ಧವಾಗಿರುತ್ತಾರೆ. ಆದುದರಿಂದ ಇಂದ್ರನ ಸುಖವನ್ನೂ ನಾಚಿಸುವ ಸುಖವು ಇಂದು ನನಗಿದೆ ಎಂದರೆ ಅತಿಶಯೋಕ್ತಿಯಲ್ಲ. ನಾನು ಆಢ್ಯನಾಗಿದ್ದೇನೆ. ಕುಬೇರನಲ್ಲಿರುವುದ ಕ್ಕಿಂತಲೂ ಹೆಚ್ಚಾದ ಹಣವು ನನ್ನಲ್ಲಿದೆ. ಈ ಧನಬಲದಿಂದ ನಾನು ಏನನ್ನು ಬೇಕಾದರೂ ಮಾಡಬಲ್ಲೆನು. ನನ್ನಲ್ಲಿ ಇಷ್ಟು ಅಪಾರವಾದ ಹಣವಿರುವುದ ರಿಂದಲೇ ಜನರು ಯಾವಾಗಲೂ ನನ್ನ ಸುತ್ತಲೂ ನೆರೆದಿರುತ್ತಾರೆ. ನನ್ನಂತಹ ಸತ್ಕುಲಪ್ರಸೂತನು ಬೇರೆ ಯಾವನೂ ಇಲ್ಲ. ಇಷ್ಟು ಅಟ್ಟಹಾಸದಿಂದ ಸುಖೋಪಭೋಗಗಳನ್ನು ಯಾವ ವಿಧವಾದ ಆತಂಕಗಳೂ ಇಲ್ಲದೇ ಅನು ಭವಿಸುತ್ತಿರುವವರು ಈ ಪ್ರಾಂತ್ಯದಲ್ಲಿ ನನ್ನೊಬ್ಬನನ್ನು ಬಿಟ್ಟು ಮತ್ತಾರಿ ದ್ದಾರೆ? ಯಾರೂ ಇಲ್ಲ. ನಾನು ಇರಗೊಡುವುದೂ ಇಲ್ಲ. ನಾನು ನನ್ನ ಸಂಪತ್ತನ್ನು ವೃದ್ಧಿಸಿಕೊಳ್ಳಲು ಯಾಗಗಳನ್ನು ಮಾಡುತ್ತೇನೆ ; ದಾನಗಳನ್ನೂ ಕೊಡುತ್ತೇನೆ. ಕೈಯೊಡ್ಡಿ ಬರುವವರಿಗೆ ಅಟ್ಟಹಾಸದಿಂದ ದಾನಕೊಡುವು ದೆಂದರೆ ನನಗೆ ಒಂದು ವಿಧವಾದ ಆನಂದವಾಗುತ್ತದೆ. ಇದರಿಂದಲೇ ನಾನು

ಆನಂದಪಡುತ್ತೇನೆ" ಅರ್ಜುನ! ಆಸುರಭಾವದವರು ಹೀಗೆಲ್ಲಾ ಹೇಳಿ ಕೊಂಡು ತಮ್ಮ ಜೀವನವನ್ನು ನಡೆಸುತ್ತಿರುತ್ತಾರೆ. ಹೀಗೆ ಹೇಳಲು ಅವರಿಗಿರುವ ಅಜ್ಞಾನವೇ ಕಾರಣ. ಅಜ್ಞಾನದಿಂದ ಅವರು ಅವಿವೇಕಿಗಳಾಗಿರುತ್ತಾರೆ. ಅವರಿಗೆ ಒಂದು ಕಡೆ ಮನಸ್ಸಿರುವುದಿಲ್ಲ. ಅನೇಕಕಡೆಗಳಿಗೆ ಅವರ ಮನಸ್ಸು ತಿರುಗುತ್ತಿರುತ್ತದೆ. ಇದರಿಂದವರು ಭ್ರಾಂತರಾಗಿ ಬಿಟ್ಟಿರುತ್ತಾರೆ. ಯಾವುದನ್ನು ಮಾಡುವುದು, ಯಾವುದನ್ನು ಬಿಡುವುದು?–ಎಂಬ ವಿವೇಚನೆಯೇ ಅವರಿಗಿರುವುದಿಲ್ಲ. ಮೋಹವೆಂಬ ಬಲೆಯಲ್ಲಿ ಸಿಕ್ಕಿಹಾಕಿಕೊಂಡಿರುತ್ತಾರೆ. ಅದರಿಂದ ತಪ್ಪಿಸಿಕೊಳ್ಳುವ ಮನಃಪ್ರವೃತ್ತಿಯೇ ಅವರಲ್ಲಿರುವುದಿಲ್ಲ. ಆ ಮೋಹದಲ್ಲಿಯೇ ತಮ್ಮ ಜನ್ಮದ ಸಾರ್ಥಕ್ಯವನ್ನು ಕಾಣುತ್ತಾರೆ. ಈ ಕಾರಣದಿಂದಲೇ ಅವರು ಕಾಮಭೋಗಗಳಲ್ಲಿಯೇ ಯಾವಾಗಲೂ ಹೆಚ್ಚಿನ ಆಸಕ್ತಿಯುಳ್ಳವರಾಗಿರುತ್ತಾರೆ. ಇದರ ಫಲವೇನೆಂದರೆ ಬರೀ ನರಕವಲ್ಲ; ಅಶುಚಿಯಾದ ನರಕ. ನರಕದಲ್ಲಿಯೂ ಹೆಚ್ಚು ಅಶುದ್ಧವಾದ ನರಕಕ್ಕೆ ಅವರು ಅವಸಾನಾನಂತರದಲ್ಲಿ ಬೀಳುತ್ತಾರೆ.)

o o o

'ಈ ದ್ರವ್ಯವನ್ನು ನಾನು ಈಗ ಪಡೆದೆನು. ಬೇರೆ ಮನೋರಥವನ್ನು ಎಂದರೆ ಮನಸ್ಸಿಗೆ ಸಂತುಷ್ಟಿಯನ್ನುಂಟುಮಾಡುವ ಪದಾರ್ಥವನ್ನು ಪಡೆಯುವೆನು. ಇಷ್ಟು ಹಣವು ಈಗ ನನ್ನ ಬಳಿಯಲ್ಲೇ ಇದೆ ಮತ್ತು ಬರುವ ವರ್ಷ ಮತ್ತೆ ಇನ್ನೂ ಹೆಚ್ಚು ಹಣವಾಗುವುದು. ಅದರಿಂದ ನಾನು ಶ್ರೀಮಂತನೂ ವಿಖ್ಯಾತನೂ ಆಗುವೆನು. ದುರ್ಜಯನಾದ ಅಂತಹ ಶತ್ರುವನ್ನೂ ನಾನು ಸಂಹರಿಸಿಬಿಟ್ಟೆನು. ಈ ಬಡಪಾಯಿಗಳನ್ನೂ ಕೊಂದುಬಿಡುವೆನು. ನನಗೆ ಸ್ವಲ್ಪವೂ ಸಮಾನರಲ್ಲದ ಈ ಶೋಚನೀಯಮನುಷ್ಯರು ನನಗೆ ಏನು ತಾನೇ ಮಾಡಿಯಾರು? ನಾನು ಈಶ್ವರನೂ, ಭೋಗಿಯೂ, ಎಲ್ಲ ಪ್ರಕಾರಗಳಿಂದಲೂ ಸಿದ್ಧನೂ ಆಗಿದ್ದೇನೆ. ಪುತ್ರರು-ಪೌತ್ರರು-ನೆಂಟರು ಎಲ್ಲರಿಂದಲೂ ಸಂಪನ್ನನಾಗಿದ್ದೇನೆ. ನಾನು ಸಾಧಾರಣಮನುಷ್ಯನಲ್ಲ. ಅತಿ ಬಲಶಾಲಿಯೂ ಮತ್ತು ಸುಖಿಯೂ ಆಗಿದ್ದೇನೆ. ಉಳಿದವರೆಲ್ಲರೂ ಭೂಮಿಗೆ ಭಾರವಾಗಿಯೇ ಹುಟ್ಟಿದ್ದಾರೆ. ನಾನು ಧನಸಂಪನ್ನನು. ಏಳೇಳು ತಲೆ

ಮಾರುಗಳಿಂದಲೂ ಶ್ರೋತ್ರಿಯತ್ವವೇ ಮುಂತಾದ ಕುಲೀನತೆಯ ಗುಣ ಗಳಿಂದ ಕೂಡಿದ್ದೇನೆ. ಹಣ ಮತ್ತು ಕುಲಗಳಲ್ಲಿ ನನಗೆ ಸಮಾನರು ಬೇರೆ ಯಾರುಂಟು? ಯಾಗಮಾಡುವುದರ ಮೂಲಕವೂ ಇತರರನ್ನು ತಿರಸ್ಕರಿಸು ತ್ತೇನೆ. ನೆಂಟರೇ ಮುಂತಾದವರಿಗೆ ಹಣವನ್ನು ಕೊಡುತ್ತೇನೆ ಮತ್ತು ಹೆಚ್ಚು ಹರ್ಷಪಡೆಯುತ್ತೇನೆ'–ಈ ರೀತಿ ಮನುಷ್ಯರು ಅಜ್ಞಾನದಿಂದ ಮೋಹಿತರಾಗಿ ಹೇಳಿಕೊಳ್ಳುತ್ತಾರೆ. ಬಗೆ-ಬಗೆಯಾಗಿ ಅವಿವೇಕವಿಚಾರಗಳಿಂದ ಭ್ರಮೆಗೆ ಒಳ ಗಾದವರಾಗಿ, ಅಜ್ಞಾನವೆಂಬ ಬಲೆಯಲ್ಲಿ (ಆವರಣರೂಪವಾಗಿರುವುದರಿಂದ ಅಜ್ಞಾನವನ್ನು ಬಲೆ ಎಂದು ಕರೆದಿದೆ.) ಆವರಿಸಲ್ಪಟ್ಟವರಾಗಿ, ಕಾಮ ಭೋಗಗಳಲ್ಲಿ ತೊಡಗಿ, ಅದರಲ್ಲಿಯೇ ಮುಳುಗಿ, ಅದರಿಂದ ಪಾಪವನ್ನು ಸಂಪಾದಿಸಿ ವೈತರಣಿಯೇ ಮುಂತಾದ ಅಶುದ್ಧವಾದ ನರಕದಲ್ಲಿ ಬಿದ್ದುಬಿಡು ತ್ತಾರೆ. (ಶಂ. ಭಾ.)

'ಕ್ಷೇತ್ರ-ಪುತ್ರರೇ ಮೊದಲಾದ ಇವೆಲ್ಲವನ್ನೂ ನಾನು ನನ್ನ ಸಾಮರ್ಥ್ಯ ದಿಂದಲೇ ಪಡೆದಿರುತ್ತೇನೆ. ಅದೃಷ್ಟ ಮುಂತಾದುವುಗಳಿಂದಲ್ಲ. ಈ ಇಷ್ಟಾರ್ಥ ವನ್ನು ನಾನೇ ಪಡೆಯುತ್ತೇನೆ. ಅದೃಷ್ಟ ಮುಂತಾದುವುಗಳಿಂದ ಇದನ್ನು ಹೊಂದುವುದಿಲ್ಲ. ನನ್ನ ಸಾಮರ್ಥ್ಯದಿಂದಲೇ ನನಗೆ ಈ ಹಣವು ದೊರಕಿದೆ ಮತ್ತು ನನ್ನ ಸಾಮರ್ಥ್ಯದಿಂದಲೇ ಮತ್ತಷ್ಟು ಹಣವು ನನಗೆ ದೊರೆಯು ವುದು. ಮಹಾಬಲಶಾಲಿಯಾದ ನಾನು ಇಂತಹ ಶತ್ರುವನ್ನು ಕೊಂದುಹಾಕಿ ದೆನು. ಶೂರನೂ ವೀರನೂ ಆದ ನಾನು ಇತರ ಶತ್ರುಗಳನ್ನೂ ಸಂಹರಿಸು ವೆನು. ಮಂದಬುದ್ಧಿಯುಳ್ಳ ದುರ್ಬಲರು ಕಲ್ಪಿಸಿರುವ ಅದೃಷ್ಟವೇ ಮುಂತಾದ ಸಾಧನೆಗಳಿಂದ ಇಲ್ಲಿ ಏನೂ ಆಗಿಲ್ಲ. ನಾನು ಸ್ವತಂತ್ರನೂ ಮತ್ತು ಇತರರಿಗೆ ನಿಯಾಮಕನೂ ಆಗಿರುವ ಈಶ್ವರನು. ಸ್ವಂತವಾಗಿಯೇ ಭೋಗಿ ಸುವವನು. ಅದೃಷ್ಟವೇ ಮುಂತಾದುವುಗಳಿಂದ ಈ ಭೋಗವು ನನಗೆ ಸಿಕ್ಕಿಲ್ಲ. ಅಂತೆಯೇ ನಾನು ಸ್ವತಃ ಸಿದ್ಧಿಯನ್ನು ಪಡೆದವನು. ಅದೃಷ್ಟವೇ ಮುಂತಾದುವುಗಳಿಂದಲ್ಲ. ಅಂತೆಯೇ ಸ್ವಂತವಾಗಿಯೇ ಬಲಶಾಲಿಯೂ ಮತ್ತು ಸುಖಿಯೂ ಆಗಿದ್ದೇನೆ. ಸ್ವತಃ ಶ್ರೀಮಂತನು ನಾನು. ಸ್ವತಃ ಉತ್ತಮ ಕುಲದಲ್ಲಿ ಹುಟ್ಟಿದವನಾಗಿದ್ದೇನೆ. ಈ ಲೋಕದಲ್ಲಿ ನನಗೆ ಸಮನಾದವರು ಯಾರೂ ಇಲ್ಲ. ಸ್ವಸಾಮರ್ಥ್ಯದಿಂದಲೇ ಎಲ್ಲ ವೈಭವಗಳನ್ನೂ ಪಡೆದವನು

ನಾನಲ್ಲದೇ ಬೇರೆ ಯಾವನುಂಟು? ಸ್ವಂತವಾಗಿಯೇ ನಾನು ಯಜ್ಞಮಾಡುವೆನು ; ದಾನಮಾಡುವೆನು ಮತ್ತು ಸಂತೋಷಪಡುವೆನು. ಈಶ್ವರಾನುಗ್ರಹದ ಅಪೇಕ್ಷೆಯಿಲ್ಲದೆ ಸ್ವಂತವಾಗಿ ಯಜ್ಞ, ದಾನ ಮುಂತಾದುವುಗಳನ್ನು ಮಾಡುವ ಶಕ್ತಿ ನನಗಿದೆ'–ಎಂಬುದಾಗಿ ಅಜ್ಞಾನದಿಂದ ಮೋಹಿತರಾದವರು ತಿಳಿಯುತ್ತಾರೆ. 'ಅದೃಷ್ಟ, ಈಶ್ವರ–ಮುಂತಾದುವುಗಳ ಸಹಕಾರವಿಲ್ಲದೆ ತಮಗೇ ಎಲ್ಲವನ್ನೂ ಮಾಡಲು ಸಾಧ್ಯವಿದೆ. ಹೀಗೆ ಮಾಡುವೆನು ಮತ್ತು ಅದನ್ನು ಮಾಡುವೆನು' ಎಂಬುದಾಗಿ ಅನೇಕಚಿತ್ತಗಳಿಂದ ಆವರಿಸಲ್ಪಡುತ್ತಾರೆ. ಕಾಮಭೋಗಗಳಲ್ಲಿ ಅತ್ಯಂತವಾಗಿ ಆಸಕ್ತರಾಗುತ್ತಾರೆ. ಮಧ್ಯದಲ್ಲಿ ಮರಣಹೊಂದಿ ಅತ್ಯಂತಾಶುಚಿಯಾದ ನರಕದಲ್ಲಿ ಬೀಳುತ್ತಾರೆ. (ರಾ. ಭಾ.)

ಈಶ್ವರಃ = ಪರಮೇಶ್ವರನು. ಸಿದ್ಧಃ = ಕೃತಕೃತ್ಯನು.

(ಮ. ಟೀಕಾ)

**ಓಂ ಆತ್ಮಸಮ್ಭಾವಿತಾಃ ಸ್ತಬ್ಧಾ ಧನಮಾನಮದಾನ್ವಿತಾಃ ।**
**ಯಜನ್ತೇ ನಾಮಯಜ್ಞೈಸ್ತೇ ದಮ್ಭೇನಾವಿಧಿಪೂರ್ವಕಮ್ ॥**

ತಮ್ಮನ್ನು ತಾವೇ ಸಂಭಾವಿಸಿಕೊಂಡು, ಸ್ತಬ್ಧರಾಗಿ, ಧನ-ಮಾನ-ಮದಗಳಿಂದ ಕೂಡಿದವರಾಗಿ, ಕೇವಲದಂಭದಿಂದ ಅವಿಧಿಪೂರ್ವಕವಾಗಿ, ಹೆಸರಿಗೆ ಮಾತ್ರ ಯಜ್ಞಗಳನ್ನು ಮಾಡುತ್ತಿರುತ್ತಾರೆ.

* * *

(ಆತ್ಮಸಮ್ಭಾವಿತಾಃ = ತಮ್ಮನ್ನು ತಾವೇ ಸಂಭಾವಿಸಿಕೊಳ್ಳುವುದು ಎಂದರೆ ತಮ್ಮನ್ನು ತಾವೇ ಹೊಗಳಿಕೊಳ್ಳುವುದು. ಆತ್ಮಶ್ಲಾಘನೆಯನ್ನು ಮಾಡಿಕೊಳ್ಳುವುದು ಈ ಆಸುರಜನರ ಸ್ವಭಾವವಾಗಿರುತ್ತದೆ. ಅವರ ಹತ್ತಿರ ಹೋಯಿತೆಂದರೆ ಅವರು ತಮ್ಮ ಆತ್ಮಪ್ರಶಂಸೆಯನ್ನು ಆರಂಭಿಸಿಯೇ ಬಿಡುತ್ತಾರೆ. ಇಷ್ಟುಮಾತ್ರವಲ್ಲದೇ ತಾವೇ ಸರ್ವಜ್ಞರೆಂದೂ, ತಮಗಿಂತಲೂ ತಿಳಿದವರು ಬೇರೆ ಯಾರೂ ಇಲ್ಲವೆಂದೂ, ತಾವೇ ಸರ್ವಶಕ್ತರೆಂದೂ, ಉಳಿದವರೆಲ್ಲರೂ ಬಡಪಾಯಿಗಳೆಂದೂ ಇವರು ಭಾವಿಸಿಕೊಂಡಿರುತ್ತಾರೆ. ಆದುದರಿಂದಲೇ ಇವರು ಸ್ತಬ್ಧರಾಗಿರುತ್ತಾರೆ. ಎಂದರೆ ಇವರು ಸ್ತಂಭದಂತೆ ನೆಟ್ಟಗಿರುತ್ತಾರೆಯೇ ಹೊರತು ಯಾರೊಬ್ಬರಿಗೂ ತಗ್ಗಿ ನಡೆಯುವ ಸ್ವಭಾವದವ

ರಾಗಿರುವುದಿಲ್ಲ. ತಮಗೇ ಎಲ್ಲರೂ ನಮಸ್ಕರಿಸಬೇಕು ಎಂಬ ಭಾವನೆಯಿಂದಿರುತ್ತಾರೆ. ತಾವೇ ಎಲ್ಲರಿಗೂ ದೊಡ್ಡವರೂ–ಜ್ಞಾನಿಗಳೂ ಆಗಿರುವುದಾಗಿ ತಿಳಿಯುತ್ತಾರೆ. ತಾವೇ ಪ್ರಭುಗಳು, ಈಶ್ವರ ಎಂದು ಇವರು ಭಾವಿಸುತ್ತಾರೆಂದು ಈ ಹಿಂದೆಯೇ ಶ್ರೀಕೃಷ್ಣನು ಹೇಳಿದ್ದಾನೆ.

**ಧನಮಾನಮದಾನ್ವಿತಾಃ** = ಧನಮದದಿಂದ ಇವರು ಕೂಡಿರುತ್ತಾರೆ. ಹಣದಿಂದ ಯಾವ ಕಾರ್ಯವನ್ನಾದರೂ ಸಾಧಿಸಬಹುದು ; ಯಾರನ್ನಾದರೂ ಕೊಳ್ಳಬಹುದು ; ಹಣಕ್ಕೆ ಎಲ್ಲರೂ ದಾಸರಾಗುತ್ತಾರೆ–ಎಂಬ ದುರಭಿಮಾನವು ಇವರಿಗಿರುತ್ತದೆ. ಇವರು ದುರಭಿಮಾನವುಳ್ಳವರು. ತಮ್ಮ ಮಾನಕ್ಕೆ ಸ್ವಲ್ಪವೇ ಕುಂದುಂಟಾದರೂ ಸಹಿಸತಕ್ಕವರಲ್ಲ. ಇದಲ್ಲದೇ ಮತ್ತೊಬ್ಬರ ಮಾನವನ್ನು ಕಳೆಯುವುದೆಂದರೆ ಇವರಿಗೆ ಬಹಳ ಆನಂದ. ಇಂತಹ ದುಷ್ಟಸ್ವಭಾವವು ಇವರದಾಗಿರುತ್ತದೆ. ಎಲ್ಲಕ್ಕಿಂತಲೂ ಹೆಚ್ಚಾಗಿ ಇವರಿಗೆ ಧನಮದವಿರುತ್ತದೆ. ಅನ್ಯಾಯಮಾರ್ಗದಿಂದ ಅಪಾರವಾಗಿ ಹಣವನ್ನು ಸಂಪಾದಿಸಿರುತ್ತಾರೆ. ಇದರ ಜೊತೆಗೆ ಯೌವನಮದವೂ ಇರುತ್ತದೆ. ಒಂದು ಮದವೇ ಮನುಷ್ಯನನ್ನು ಹುಚ್ಚನನ್ನಾಗಿ ಮಾಡಿಬಿಡುತ್ತದೆ. ಹೀಗಿರುವಾಗ ಧನಮದ, ದುರಭಿಮಾನ–ಎರಡೂ ಒಬ್ಬನಲ್ಲಿಯೇ ಸೇರಿಬಿಟ್ಟರೆ ಅವನ ತಲೆಯು ಪೂರ್ಣವಾಗಿ ತಿರುಗಿಹೋಗುತ್ತದೆ. ಇವರು ಒಮ್ಮೊಮ್ಮೆ ಯಜ್ಞಮಾಡುವುದೂ ಉಂಟು. ಆದರೆ ಆ ಯಜ್ಞವು ಕೇವಲ ನಾಮಮಾತ್ರಕ್ಕೆ ಯಜ್ಞವಾಗಿರುವುದೇ ಹೊರತು ಇವರು ಮಾಡುವ ಯಜ್ಞದಲ್ಲಿ ವಿಧಿ-ನಿಯಮಗಳಾವುವೂ ಇರುವುದಿಲ್ಲ. ಭಾವವೂ ಇಲ್ಲ ; ಭಕ್ತಿಯೂ ಇಲ್ಲ ; ಯೋಗ್ಯರಿಗೆ ಪುರಸ್ಕಾರವೂ ಇಲ್ಲ ; ದಾನ-ಧರ್ಮಗಳೂ ಇಲ್ಲ. ತಮ್ಮ ದಂಭವನ್ನು ತೋರಿಸಿಕೊಳ್ಳಲು ಮಾತ್ರ ಈ ವಿಧವಾದ ಅಶಾಸ್ತ್ರೀಯವಾದ ಯಜ್ಞಗಳನ್ನು ಆಗಿಂದಾಗ್ಗೆ ಮಾಡುತ್ತಿರುತ್ತಾರೆ. ಈ ಆಸುರಭಾವದವರು ತಮ್ಮ ಹಿರಿಮೆಯನ್ನು ತೋರಿಸಿಕೊಳ್ಳುವುದಕ್ಕಾಗಿಯೂ, ಜನಗಳನ್ನು ಆಕರ್ಷಿಸುವುದಕ್ಕಾಗಿಯೂ ಯಜ್ಞದ ಹೆಸರಿನಲ್ಲಿ ಕೂಟಗಳನ್ನೇರ್ಪಡಿಸುತ್ತಾರೆ. ಪೂಜೆ-ಪುರಸ್ಕಾರ-ವಿಧಿ-ನಿಯಮಗಳೆಲ್ಲವೂ ಕೇವಲ ಪ್ರದರ್ಶನಕ್ಕೆ ಎಷ್ಟು ಬೇಕೋ ಅಷ್ಟೇ ಇರುತ್ತವೆ. ಇವರ ಯಾವುದೊಂದು ಕರ್ಮಗಳೂ ವಿಧಿಪೂರ್ವಕವಾಗಿ ನಡೆದಿರುವುದಿಲ್ಲ. ನಾವು ಅಂತಹ ಯಜ್ಞಮಾಡಿದೆವು ;

ಇಂತಹ ಯಜ್ಞಮಾಡಿದೆವು–ಮುಂತಾಗಿ ಹೇಳಿಕೊಂಡು ಆಟಾಟೋಪದಿಂದ ತಿರುಗುತ್ತಿರುತ್ತಾರೆ.)

o o o

**ಆತ್ಮಸಮ್ಭಾವಿತಾಃ** = ತಮ್ಮನ್ನು ತಾವೇ ಸರ್ವಗುಣಸಂಪನ್ನರೆಂದು ಗೌರವಿಸಿಕೊಳ್ಳುವವರು. ಸಾಧುಗಳಿಂದ ಸಂಭಾವಿಸಲ್ಪಡುವವರಲ್ಲ. **ಸ್ತಬ್ಧಾಃ**– ವಿನಯವಿಲ್ಲದವರು. **ಧನಮಾನಮದಾನ್ವಿತಾಃ** = ಧನನಿಮಿತ್ತವಾದ ಮಾನ ಮತ್ತು ಮದಗಳಿಂದ ಕೂಡಿರುವವರು. ಧರ್ಮಧ್ವಜಿಗಳಾದ ಇವರು ವಿಹಿತವಾದ ಸಾಂಗವಾದ ಕರ್ತವ್ಯತೆಯಿಲ್ಲದೇ ನಾಮಮಾತ್ರಯಜ್ಞದಿಂದ ಪೂಜೆಮಾಡುತ್ತಾರೆ. (ಶಂ. ಭಾ.)

**ಆತ್ಮಸಮ್ಭಾವಿತಾಃ** = ತಮಗೆ ತಾವೇ ಗೌರವವನ್ನು ಕೊಟ್ಟುಕೊಳ್ಳುವವರು. **ಸ್ತಬ್ಧಾಃ** = ತಮ್ಮನ್ನು ಪರಿಪೂರ್ಣರೆಂದು ಭಾವಿಸಿಕೊಂಡು ಏನೂ ಮಾಡದೆ ಇರುವವರು. (ಗುರುವಂದನೆಯೇ ಮುಂತಾದುವುಗಳನ್ನು ಕೂಡ ಮಾಡುವುದಿಲ್ಲ.) **ಧನಮಾನಮದಾನ್ವಿತಾಃ** = ವಿದ್ಯೆ, ಕುಲೀನತೆ–ಮುಂತಾದ ಅಭಿಮಾನದಿಂದ ಉಂಟಾದ ಮದದಿಂದ ಕೂಡಿದವರು.

**ನಾಮಯಜ್ಞೈಃ ದಮ್ಭೇನ ಯಜನ್ತೇ** = ಯಜ್ಞಮಾಡಿದವನು ಎಂಬ ಹೆಸರನ್ನು ಕೊಡುವಷ್ಟೇ ಪ್ರಯೋಜನವುಳ್ಳ ಯಜ್ಞಗಳಿಂದ ಯಜ್ಞಮಾಡು ತ್ತಾರೆ. ಅದನ್ನು ತಾವು ಯಜ್ಞಮಾಡುವವರು ಎಂಬ ಖ್ಯಾತಿಯನ್ನು ಹರಡಲು ಅವಿಧಿಪೂರ್ವಕವಾಗಿ ದಂಭದಿಂದ ಮಾಡುತ್ತಾರೆ. (ರಾ. ಭಾ.)

**ಓಂ ಅಹಂಕಾರಂ ಬಲಂ ದರ್ಪಂ ಕಾಮಂ ಕ್ರೋಧಂ ಚ ಸಂಶ್ರಿತಾಃ ।**
**ಮಾಮಾತ್ಮಪರದೇಹೇಷು ಪ್ರದ್ವಿಷನ್ತೋಽಭ್ಯಸೂಯಕಾಃ ॥೧೮॥**

ಅಹಂಕಾರವನ್ನೂ, ಬಲವನ್ನೂ, ದರ್ಪವನ್ನೂ, ಕಾಮವನ್ನೂ, ಕ್ರೋಧವನ್ನೂ ಆಶ್ರಯಿಸಿ ತಮ್ಮ ಮತ್ತು ಮಿಕ್ಕವರ ದೇಹಗಳಲ್ಲಿರುವ ನನ್ನನ್ನು ವಿಶೇಷವಾಗಿ ದ್ವೇಷಿಸುತ್ತಾ ಅಸೂಯೆಯುಳ್ಳವರಾಗಿರುವರು.

* * *

(ಕಾಮ, ಕ್ರೋಧ, ಲೋಭ, ಮೋಹ, ಮದ, ಮಾತ್ಸರ್ಯ–ಈ ಆರು ಮನುಷ್ಯನಿಗೆ ಅವನ ಒಳಗಿರುವ ಶತ್ರುಗಳೆಂದು ಹಿರಿಯರೂ ಹೇಳುತ್ತಾರೆ.

ಶಾಸ್ತ್ರಗಳೂ ಹೇಳುತ್ತವೆ. ಆದರೆ ಈ ಆಸುರಭಾವದ ಜನರು ಹಿರಿಯರು ಹೇಳಿರುವ ಈ ಶತ್ರುಗಳನ್ನೇ ಮಿತ್ರರನ್ನಾಗಿ ಭಾವಿಸುತ್ತಾರೆ.

**ಅಹಂಕಾರಃ** = ಶ್ರೀಕೃಷ್ಣನೇ ಹಿಂದಿನ ಶ್ಲೋಕದಲ್ಲಿ ಹೇಳಿರುವಂತೆ **ಈಶ್ವರೋऽಹಮಹಂ ಭೋಗೀ ಸಿದ್ಧೋऽಹಂ**–ಎಂಬುದಾಗಿ ಭಾವಿಸಿ ಕೊಂಡುಬಿಡುವುದು.

ಕಾಮ-ಕ್ರೋಧಗಳ ವಿಷಯದಲ್ಲಿ ಶ್ರೀಶಂಕರರು ಒಂದು ಗುಟ್ಟನ್ನು ಹೇಳಿದ್ದಾರೆ :

**ಕಾಮಂ ಕ್ರೋಧಂ ಲೋಭಂ ಮೋಹಂ**
**ತ್ಯಕ್ತ್ವಾತ್ಮಾನಂ ಪಶ್ಯತಿ ಸೋऽಹಮ್ ।**
**ಆತ್ಮಜ್ಞಾನವಿಹೀನಾ ಮೂಢಾಃ**
**ತೇ ಪಚ್ಯನ್ತೇ ನರಕನಿಗೂಢಾಃ ॥**

ಜ್ಞಾನಿಯು ಕಾಮ-ಕ್ರೋಧ-ಲೋಭ-ಮೋಹಗಳೆಲ್ಲವನ್ನೂ ಸಂಪೂರ್ಣವಾಗಿ ಪರಿತ್ಯಜಿಸಿ–'ಅವನೇ ನಾನು'–ಎಂಬುದನ್ನು ಆತ್ಮನಲ್ಲಿ ಕಂಡುಕೊಳ್ಳುತ್ತಾನೆ. ಹಾಗೆ ಮಾಡದೇ ಆತ್ಮಜ್ಞಾನವು ಕಿಂಚಿತ್ತಾದರೂ ಇಲ್ಲದೇ ಕಾಮ - ಕ್ರೋಧ - ಲೋಭ - ಮೋಹಾಭಿಭೂತರಾಗಿ **'ಈಶ್ವರೋऽಹಂ'** ಎಂದು ಹೇಳಿದ್ದಾದರೆ–ಅಂತಹ ಮೂಢರು ನರಕದ ಗುಡಾಣದಲ್ಲಿ ಸಿಲುಕಿ ಬೆಂದುಹೋಗುವರು.

**ಬಲಂ** = Might is right. ಬಲದ ಮುಂದೆ ಅಪರಾಧಗಳೂ ಅನಪರಾಧಗಳೇ ಆಗುತ್ತವೆ. ದುಷ್ಟರಾಜನಿರುವ ರಾಜ್ಯದಲ್ಲಿ ಬಲಿಷ್ಠನು ಹೇಳಿದ್ದೇ ನ್ಯಾಯ. ಅವನು ಹೇಳಿದುದು ನ್ಯಾಯಶಾಸ್ತ್ರಸಮ್ಮತವಲ್ಲವೆಂದು ಯಾವನಾದರೂ ಪ್ರತಿಭಟಿಸಿದನೆಂದರೆ ಅವನು ಮಾರನೆಯ ದಿನ ಉಳಿಯು ವಂತೆಯೇ ಇಲ್ಲ.

**ದರ್ಪಃ** = ಯಾರೊಬ್ಬರಿಗೂ ತಗ್ಗಿನಡೆಯದೇ ಇರುವುದು. ಎಲ್ಲರನ್ನೂ ತನಗಿಂತಲೂ ಕೀಳೆಂದು ಭಾವಿಸುವುದು. ಹಿರಿಯರನ್ನು ತಿರಸ್ಕಾರಭಾವದಿಂದ ಕಾಣುವುದು. (ಅಹಂಕಾರ-ದರ್ಪ ಈ ಎರಡೂ ಪರ್ಯಾಯಪದಗಳೇ ಆದರೂ ಸ್ವಲ್ಪ ವ್ಯತ್ಯಾಸವಿದೆ.)

**ಕಾಮಂ ಕ್ರೋಧಂ ಚ ಸಂಶ್ರಿತಾಃ** = ಕಾಮ-ಕ್ರೋಧ-ಲೋಭ-

ಮೋಹ-ಮದ-ಮಾತ್ಸರ್ಯಗಳು ಒಂದನ್ನು ಬಿಟ್ಟು ಮತ್ತೊಂದು ಬರುವುದಿಲ್ಲ. ಕಾಮವೆಂಬುದೊಂದು ಕಾಲೂರಿದರೆ ಅದರ ಜೊತೆಯಲ್ಲಿಯೇ ಕ್ರೋಧ, ಅನಂತರ ಲೋಭ-ಮೋಹಗಳು, ಅನಂತರ ಮದ-ಮಾತ್ಸರ್ಯಗಳು ಕಾಲೂರುತ್ತವೆ. ಇದೊಂದು ಸರಪಳಿ ಇದ್ದಂತೆ. ಕಾಮವು ಪ್ರಾರಂಭವಾದಾಗ ಮದ-ಮಾತ್ಸರ್ಯಗಳಿರುವುದಿಲ್ಲ. ಕಾಮವು ಮನುಷ್ಯನ ಹೃದಯದಲ್ಲಿ ಚೆನ್ನಾಗಿ ಬೇರೂರಿತೆಂದರೆ ಉಳಿದುವುಗಳು ನಿರ್ಭಯವಾಗಿ ಒಳನುಗ್ಗುತ್ತವೆ. ಕಾಮವನ್ನು ಕಾಪಾಡಲು ಉಳಿದುವುಗಳು ಸೈನಿಕರಿದ್ದಂತೆ. ಒಂದು ಸಣ್ಣರೂಪಕದಲ್ಲಿ ಇದನ್ನು ಹೀಗೆ ವಿವರಿಸಬಹುದಾಗಿದೆ. **ಕಾಮಃ** = ಯಾವ ರೀತಿಯಲ್ಲಾದರೂ ಹಣವನ್ನು ಸಂಪಾದಿಸಬೇಕೆಂಬ ಇಚ್ಛೆ–ಆ ಇಚ್ಛೆಗೆ ತಡೆಯುಂಟಾದಾಗ ಕೋಪ ಬರುತ್ತದೆ. ತಡೆಯ ನಿವಾರಣೆಯಾಗುತ್ತದೆ. ಹಣವು ಶೇಖರವಾಗುತ್ತದೆ. ಶೇಖರವಾದ ಹಣವನ್ನು ವ್ಯಯಮಾಡಲು ಮನಸ್ಸು ಬರುವುದಿಲ್ಲ. ಇದೇ ಲೋಭ. ಶೇಖರಿಸಿದಷ್ಟು ಹಣವೇ ಸಾಕು ಎನಿಸುವುದಿಲ್ಲ. ಹಣವು ಯಾವುದೇ ಮಾರ್ಗದಿಂದಾಗಲೀ ಶೇಖರವಾಗುತ್ತಿದ್ದಷ್ಟೂ ಅದರ ಮೇಲಿನ ಮೋಹವು ಹೆಚ್ಚುತ್ತಲೇ ಇರುತ್ತದೆ. ಹೆಚ್ಚು ಹಣವಿರುವವನಿಗೆ ಧನಮದವಿರುವುದು ಸ್ವಾಭಾವಿಕವೇ. ಕಡೆಯದಾದುದು ಮಾತ್ಸರ್ಯ. ತನ್ನಂತೆ ಮತ್ತೊಬ್ಬರು ಧನಿಕರಾಗಬಾರದು. ಧನಿಕನಾರು?– ಎಂದು ಪ್ರಶ್ನಿಸಿದರೆ ತನ್ನೊಬ್ಬನ ಹೆಸರನ್ನು ಮಾತ್ರವೇ ಹೇಳುವಂತಾಗಬೇಕು. ಹೀಗೆ ಮಾತ್ಸರ್ಯವೂ ಅವನ ಹೃದಯವನ್ನು ಪ್ರವೇಶಿಸುತ್ತದೆ. ತನ್ನ ಅಂತಸ್ತಿಗೆ ಹತ್ತುತ್ತಿರುವವನನ್ನು ಇಂತಹ ಮಾತ್ಸರ್ಯದಿಂದ ಪೀಡಿತನಾದವನು ಏನು ಮಾಡುವುದಕ್ಕೂ ಮತ್ತು ಮಾಡಿಸುವುದಕ್ಕೂ ಹೇಸುವುದಿಲ್ಲ.

ಹೀಗೆ ಪರೋತ್ಕರ್ಷವನ್ನು ಸಹಿಸದೇ ಅಸೂಯೆಪಡುವವರು **ಮಾಮಾತ್ಮ ಪರದೇಹೇಷು ಪ್ರದ್ವಿಷನ್ತಃ** = ತಮ್ಮ ದೇಹದಲ್ಲಿಯೂ ಮತ್ತು ಇತರರ ದೇಹಗಳಲ್ಲಿಯೂ ಇರುವ ನನ್ನನ್ನು ದ್ವೇಷಮಾಡುತ್ತಾರೆ– ಎನ್ನುತ್ತಾನೆ, ಶ್ರೀಕೃಷ್ಣ.

ಇಲ್ಲಿ **ದ್ವೇಷ** ಎಂದರೆ ಅವನನ್ನು ತಿರಸ್ಕರಿಸುವುದು. ತನ್ನ ಶರೀರದಲ್ಲಿ ಸರ್ವೇಶ್ವರನಾದ ಪರಮಾತ್ಮನಿದ್ದಾನೆ ಎಂದು ಮನಗಾಣದಿರುವುದೇ ಅವನನ್ನು ದ್ವೇಷಿಸುವುದು. ಒಳಗೆ ಪರಮಾತ್ಮನಿರುವುದರಿಂದ ಕವಚರೂಪವಾದ

ಈ ದೇಹದ ಅಸ್ತಿತ್ವವಿದೆ. ಅವನಿಲ್ಲದಿದ್ದರೆ ಈ ದೇಹವೇ ಇರುವುದಿಲ್ಲ. ಅವನಿರುವನೆಂಬುದನ್ನು ತಿಳಿದುಕೊಳ್ಳಲು ಪ್ರಯತ್ನಿಸದೇ ದೇಹವೇ ಆತ್ಮವೆಂದು ಭಾವಿಸುವುದು ಒಳಗಿರುವವನನ್ನು ತಿರಸ್ಕರಿಸಿದಂತೆ ಅಥವಾ ದ್ವೇಷಿಸಿದಂತೆ. ಆತ್ಮನನ್ನು ತಿಳಿದುಕೊಳ್ಳದೇ ಇದ್ದವರು ಆತ್ಮಹನರು–ಆತ್ಮಘಾತಿಗಳು ಎಂದು ಹೇಳಿದ್ದಂತೆ ತಮ್ಮಲ್ಲಿಯೇ ಪರಮಾತ್ಮನು ಇದ್ದಾನೆಂದು ತಿಳಿದುಕೊಳ್ಳದವರು ಅವನ ದ್ವೇಷಿಗಳು. ಪರದೇಹದ ವಿಷಯವೂ ಹೀಗೆಯೆ. ತನ್ನ ಲ್ಲಿಯೂ ಮತ್ತು ಬೇರೆಯವನಲ್ಲಿಯೂ ಒಬ್ಬನೇ ಪರಮಾತ್ಮನು ಇದ್ದಾ ನೆಂಬುದನ್ನು ಅರಿಯದೇ ಅವನ ದೇಹವನ್ನು ಮಾತ್ರವೇ ಗುರುತಿಸಿ ಅದನ್ನೇ ದ್ವೇಷಿಸುತ್ತಾ ಅಥವಾ ಪ್ರೀತಿಸುತ್ತಾ ಹೋಗುವುದು ; ಸರ್ವಪ್ರಾಣಿಗಳಲ್ಲಿಯೂ ಇರುವ ಅವನನ್ನು ತಿಳಿಯದೇ ಇರುವುದು ; ಹೀಗೆ ಮಾಡುವುದರಿಂದಲೂ ಭಗವಂತನನ್ನು ದ್ವೇಷಿಸಿದಂತೆಯೇ ಆಗುತ್ತದೆ.

ಕಾಮ-ಕ್ರೋಧಾದಿಗಳಿಂದ ಕೂಡಿದ ಅವರಿಗೆ ನಾನು ಅವರಲ್ಲಿರುವೆನೆಂಬ ಅರಿವೇ ಇರುವುದಿಲ್ಲ. ನನ್ನನ್ನು ತಿರಸ್ಕರಿಸಿರುತ್ತಾರೆ. ಅರ್ಥಾತ್ ದ್ವೇಷಿಸುತ್ತಿರುತ್ತಾರೆ–ಎನ್ನುತ್ತಾನೆ ಶ್ರೀಕೃಷ್ಣ.)

O O O

**ಅಹಂಕಾರಃ** = 'ನಾನು, ನನ್ನದು' ಎನ್ನುವಿಕೆ. ಯಾವುದರ ಮೂಲಕ ತನ್ನಲ್ಲಿ ಆರೋಪಿಸಲ್ಪಟ್ಟಿರುವ, ಇರುವ ಮತ್ತು ಇಲ್ಲದಿರುವ ಗುಣಗಳಿಂದ ಕೂಡಿದವನನ್ನಾಗಿ ತನ್ನನ್ನು ಭಾವಿಸಿಕೊಂಡಿರುವ ಮನುಷ್ಯನು ನಾನು ಇದ್ದೇನೆ ಎಂದು ತಿಳಿಯುತ್ತಾನೆಯೋ, ಈ ಅವಿದ್ಯೆಯೆಂಬ ಅತ್ಯಂತ ಕಠಿನವಾದ ದೋಷವು ಎಲ್ಲ ದೋಷಗಳಿಗೂ ಮೂಲವಾದುದು ಮತ್ತು ಎಲ್ಲ ಅನರ್ಥಮಯವಾದ ಪ್ರಕೃತಿಗಳಿಗೂ ಮೂಲವಾದುದು. **ಬಲಂ** = ಕಾಮ ಮತ್ತು ರಾಗಗಳಿಂದ ಕೂಡಿದ್ದಾಗಿ ಇತರರನ್ನು ಪರಾಭವಗೊಳಿಸುವುದಕ್ಕೋಸ್ಕರ ಇರುವುದು. **ದರ್ಪಃ** = ಯಾವುದು ಉದ್ಭವಿಸಿದಾಗ ಮನುಷ್ಯನು ಧರ್ಮವನ್ನು ಮೀರಿ ಹೋಗುತ್ತಾನೆಯೋ ಆ ಅಂತಃಕರಣವನ್ನಾಶ್ರಯಿಸಿರುವ ರೋಷವಿಶೇಷ. (ಶಂ. ಭಾ.)

**ಅಹಂಕಾರಃ** = ಇತರರ ಅಪೇಕ್ಷೆಯಿಲ್ಲದೇ ನಾನೇ ಎಲ್ಲವನ್ನೂ ಮಾಡುವೆನು–ಎಂಬ ಅಹಂಕಾರವನ್ನು ಆಶ್ರಯಿಸಿದವರು.

**ಬಲಂ...ಶ್ರಿತಾಃ** = ಎಲ್ಲವನ್ನೂ ಮಾಡುವುದಕ್ಕೂ ನನ್ನ ಬಲವೇ ಸಮರ್ಥವು. ನನಗೆ ಸಮಾನರು ಯಾರೂ ಇಲ್ಲ–ಎನ್ನುವುದು **ದರ್ಪ**. ಇಂತಹ ನನಗೆ ಕಾಮಮಾತ್ರದಿಂದಲೇ ಎಲ್ಲವೂ ದೊರಕಿಬಿಡುತ್ತದೆ ಎನ್ನುವಿಕೆ. ನನಗೆ ಅನಿಷ್ಟವನ್ನುಂಟುಮಾಡುವ ಎಲ್ಲರನ್ನೂ ಕೊಂದುಹಾಕಿಬಿಡುತ್ತೇನೆ ಎನ್ನುವುದು **ಕ್ರೋಧ**. ಹೀಗೆ ಈ ಗುಣಗಳನ್ನಾಶ್ರಯಿಸಿ ಇವರು ತಮ್ಮ ದೇಹಗಳಲ್ಲಿಯೂ ಇತರರ ದೇಹಗಳಲ್ಲಿಯೂ ಇರುವ, ಎಲ್ಲವನ್ನೂ ಮಾಡಿಸುವ ಪುರುಷೋತ್ತಮನಾದ ನನ್ನಲ್ಲಿ ಅಸೂಯೆಯುಳ್ಳವರಾಗುತ್ತಾರೆ. ನನ್ನನ್ನು ದ್ವೇಷಿಸುತ್ತಾರೆ. ಕುಯುಕ್ತಿಗಳಿಂದ ನನ್ನ ಇರುವಿಕೆಯ ಬಗೆಗೇ ದೋಷವನ್ನು ಪ್ರಕಟಿಸುತ್ತಾ ನನ್ನನ್ನು ಸಹಿಸದೇ ಅಹಂಕಾರವೇ ಮುಂತಾದುವನ್ನು ಆಶ್ರಯಿಸಿ ಯಾಗವೇ ಮುಂತಾದ ಎಲ್ಲ ಪ್ರಕ್ರಿಯೆಗಳನ್ನೂ ಮಾಡುತ್ತಾರೆ.

(ರಾ. ಭಾ.)

**ಮಾಂ ಆತ್ಮಪರದೇಹೇಷು** = ಯಾವುದನ್ನೂ ಪರಮಾತ್ಮನು ಮಾಡಿಸುವವನಲ್ಲ ; ಹಾಗಿದ್ದರೆ, ಈಶ್ವರನು ಎಲ್ಲಕ್ಕೂ ಕಾರಣನಾಗಿದ್ದರೆ, ಈಗ ನನ್ನಿಂದಲೇ ಕೆಲಸಮಾಡಿಸಲಿ ನೋಡೋಣ?–ಎಂದು ಮೊದಲಾಗಿ ಹೇಳುವರು. **ಈಶ್ವರೋ ಯದಿ ಸರ್ವಸ್ಯ ಕಾರಕಃ ಕಾರಯೀತ ಮಾಮ್ । ಅದ್ಯೇತಿವಾದಿನಂ ಬ್ರೂಯಾತ್ ಸದಾಽಧೋ ಯಾಸ್ಯಸೀತಿ–** [ಯಾಸ್ಕಶ್ರುತಿ]

(ಮ. ಭಾ.)

ಪರಮಾತ್ಮನ ಇರುವಿಕೆಯನ್ನೇ ತಿಳಿದುಕೊಳ್ಳದಿರುವ, ದೇಹಾತ್ಮಭಾವದಿಂದ ಕೂಡಿರುವ ಇಂತಹವರಿಗೆ ಆಗುವ ಪರಿಣಾಮವನ್ನು ಶ್ರೀಕೃಷ್ಣನು ಹೇಳುತ್ತಾನೆ.

**ಓಂ ತಾನಹಂ ದ್ವಿಷತಃ ಕ್ರೂರಾನ್ಸಂಸಾರೇಷು ನರಾಧಮಾನ್ ।**
**ಕ್ಷಿಪಾಮ್ಯಜಸ್ರಮಶುಭಾನಾಸುರೀಷ್ವೇವ ಯೋನಿಷು ॥೧೯॥**

ಹೀಗೆ ನನ್ನನ್ನು ದ್ವೇಷಮಾಡುತ್ತಿರುವ ಕ್ರೂರಿಗಳಾದ ಮತ್ತು ಅಶುಭರಾದ ಆ ನರಾಧಮರನ್ನು ನಾನು ಸಂಸಾರಗಳಲ್ಲಿಯೇ ಆಸುರಯೋನಿಗಳಲ್ಲಿಯೇ ಬಾರಿಬಾರಿಗೂ ಹಾಕುತ್ತಲೇ ಇರುವೆನು.

* * *

(ದ್ವಿಷತಃ = ದ್ವೇಷಮಾಡುತ್ತಿರುವ, ತಿರಸ್ಕಾರಮಾಡುತ್ತಿರುವ, ಅಥವಾ ನನ್ನ ಇರುವಿಕೆಯನ್ನು ತಿಳಿದುಕೊಳ್ಳಲು ಪ್ರಯತ್ನಿಸದಿರುವ, ಕ್ರೂರಿಗಳಾದ, ಅವಸಾನಪರ್ಯಂತವೂ ಒಳ್ಳೆಯ ಕಾರ್ಯಗಳನ್ನೇ ಮಾಡದಿರುವ ನರಾಧಮರನ್ನು, ಮನುಷ್ಯಜಾತಿಯಲ್ಲಿಯೇ ಬಹಳ ಕೀಳಾದ ಇವರನ್ನು ಈ ಲೋಕಕ್ಕೇ ಪುನಃ ತಳ್ಳುತ್ತೇನೆ. ಇಷ್ಟು ಮಾತ್ರವಲ್ಲ ; ಆಸುರಯೋನಿಗಳಲ್ಲಿಯೇ ಹಾಕುತ್ತೇನೆ. ಕ್ರೂರಜಂತುಗಳ ಜನ್ಮವನ್ನೇ ಕೊಡುತ್ತೇನೆ.

ಇಲ್ಲಿ ಪರಮಾತ್ಮನೇ ಅವರ ಮೇಲಿನ ಕೋಪದಿಂದ, ಸ್ವೇಚ್ಛೆಯಿಂದ ಅಂತಹವರಿಗೆ ಶಿಕ್ಷೆಯನ್ನು ಕೊಡುತ್ತಾನೆಂದು ಭಾವಿಸಬಾರದು. ಅವರವರ ಕರ್ಮಾನುಗುಣವಾಗಿ ಅವರಿಗೆ ಆ ಫಲವನ್ನು ಕೊಡುತ್ತಾನೆ. ಕಾಮಾಭಿ ಭೂತರಿಗೆ, ದಾಂಭಿಕರಿಗೆ, ದೈವದ್ವೇಷಕರಿಗೆ, ಅನೃತವಾದಿಗಳಿಗೆ, ಕ್ರೂರ ಕರ್ಮಿಗಳಿಗೆ ಸಿಕ್ಕುವ ಫಲವೇ ಅಂತಹುದು. ಅವರವರ ಸ್ವಭಾವಾನುಗುಣ ವಾಗಿ ಕರ್ಮಾನುಗುಣವಾಗಿ ಅವಸಾನಾನಂತರದಲ್ಲಿ ದೇಹಾಂತರಗಳನ್ನು ಪಡೆಯುತ್ತಾರೆ. ಅವರವರ ಅಧಃಪತನವನ್ನು ಅವರೇ ಮಾಡಿಕೊಳ್ಳುವು ದಾಗಿದೆ. ಭಗವಂತನು ಆ ಕರ್ಮಗಳಿಗೆ ಅಧ್ಯಕ್ಷನಾಗಿ ಅವುಗಳಿಗೆ ಎಂದರೆ ಕರ್ಮಗಳಿಗೆ ತಕ್ಕ ಫಲವನ್ನೇ ಅವರಿಗೆ ನೀಡುತ್ತಾನೆ.)

o o o

ಸನ್ಮಾರ್ಗಕ್ಕೆ ವಿರೋಧಿಗಳಾಗಿರುವ, ಸಾಧುಗಳನ್ನು ದ್ವೇಷಿಸುವ ಮತ್ತು ಅಶುಭಕಾರ್ಯಗಳನ್ನೇ ಮಾಡುವ ಕ್ರೂರಿಗಳಾದ ಆ ನರಾಧಮರನ್ನು ಮತ್ತೆ ಮತ್ತೆ ಸಂಸಾರದಲ್ಲಿಯೇ ; ನರಕಪ್ರಾಪ್ತಿಗೆ ಯೋಗ್ಯವಾದ ಮಾರ್ಗ ದಲ್ಲಿಯೇ... ಸಾಮಾನ್ಯವಾಗಿ ಕ್ರೂರಕರ್ಮಗಳನ್ನು ಮಾಡುವ ಹುಲಿ, ಸಿಂಹ ಮುಂತಾದ ಯಾವ ಆಸುರಯೋನಿಗಳುಂಟೋ ಅವುಗಳಲ್ಲಿಯೇ ಯಾವಾಗಲೂ ಬೀಳಿಸುತ್ತೇನೆ. ಏಕೆಂದರೆ ಅವರು ಅಧರ್ಮವೇ ಮುಂತಾದ ದೋಷಗಳುಳ್ಳವರು. (ಶಂ. ಭಾ.)

ನನ್ನನ್ನು ಯಾರು ದ್ವೇಷಿಸುತ್ತಾರೆಯೋ–ಅಂತಹ ಕ್ರೂರಿಗಳೂ ಅಶುಭರೂ ಆದ ದುರಾತ್ಮರನ್ನು ನಾನು ಬಾರಿಬಾರಿಗೂ ಸಂಸಾರಗಳಲ್ಲಿಯೇ ಎಂದರೆ ಹುಟ್ಟು-ಮುಪ್ಪು-ಸಾವು ಮುಂತಾದ ರೂಪದಲ್ಲಿ ಸುತ್ತುತ್ತಿರುವ

ಪರಂಪರೆಗಳಲ್ಲಿಯೇ, ಅವುಗಳಲ್ಲಿಯೂ ಆಸುರೀಯೋನಿಗಳಲ್ಲಿಯೇ ಎಂದರೆ ನನ್ನ ಅನುಕೂಲಕ್ಕೆ ವಿರೋಧವಾದ ಜನ್ಮಗಳಲ್ಲಿಯೇ ಎಸೆದುಬಿಡುತ್ತೇನೆ. ಆಯಾ ಜನ್ಮದ ಪ್ರಾಪ್ತಿಗೆ ಅನುಗುಣವಾದ ಪ್ರವೃತ್ತಿಗೆ ಕಾರಣವಾದ ಕ್ರೂರವಾದ ಬುದ್ಧಿಗಳೊಡನೆ ನಾನೇ ಅವರನ್ನು ಸೇರಿಸುತ್ತೇನೆ. (ರಾ. ಭಾ.)

**ಓಂ ಆಸುರೀಂ ಯೋನಿಮಾಪನ್ನಾ ಮೂಢಾ ಜನ್ಮನಿ ಜನ್ಮನಿ ।**
**ಮಾಮಪ್ರಾಪ್ಯೈವ ಕೌನ್ತೇಯ ತತೋ ಯಾನ್ತ್ಯಧಮಾಂ ಗತಿಮ್ ॥**

ಕೌಂತೇಯ! ಜನ್ಮ-ಜನ್ಮಗಳಲ್ಲಿಯೂ ಆಸುರಯೋನಿಯನ್ನು ಪಡೆದ ಮೂಢರು ನನ್ನನ್ನು ಪಡೆಯದೆಯೇ ಅದಕ್ಕಿಂತಲೂ ಅಧಮವಾದ ಗತಿಯನ್ನೇ ಹೊಂದುವರು.

* * *

(ಆಸುರೀ ಯೋನಿಃ = ಎಂದರೆ ಆಸುರಭಾವವಿರುವ ಮನುಷ್ಯರ ಮನೆಯಲ್ಲಿ ಎಂದಾದರೂ ಅರ್ಥಮಾಡಬಹುದು ; ಕ್ರೂರಕರ್ಮವುಳ್ಳ ವ್ಯಾಘ್ರ-ಸಿಂಹಾದಿ ಪ್ರಾಣಿಗಳ ಯೋನಿಯಲ್ಲಿ–ಎಂದಾದರೂ ಅರ್ಥಮಾಡ ಬಹುದು. ನೆಲಬಾವಿಯ ಪಕ್ಕದಲ್ಲಿ ನಿಂತವನು ಅಕಸ್ಮಾತ್ ಕಾಲುಜಾರಿದರೆ ಅಧಃಪಾತಾಳಕ್ಕೇ ಹೋಗಿಬಿಡುತ್ತಾನೆ. ಅವನಿಗೆ ಮಧ್ಯದಲ್ಲಿ ನಿಲುಗಡೆಯೇ ಇರುವುದಿಲ್ಲ. ಹಾಗೆಯೇ ಆತ್ಮೋದ್ಧಾರಕ್ಕೆ ಸಾಧಕವಾದ ಮನುಷ್ಯಜನ್ಮದಲ್ಲಿ ಮನುಷ್ಯಜನ್ಮದ ರಹಸ್ಯವನ್ನರಿಯದೇ ಕೇವಲ ಕಾಮಾಭಿಭೂತನಾಗಿ ಕ್ರೂರಿಯಾಗಿ ಪಾಪಕಾರ್ಯಗಳನ್ನೇ ಮಾಡುತ್ತಿದ್ದರೆ ಮುಂದೆ ಅವನಿಗೆ ಮನುಷ್ಯಜನ್ಮವು ಸಿಕ್ಕುವುದು ಅತಿಕಷ್ಟ. ಪ್ರಾಣಿಯೋನಿಗಳಲ್ಲಿ ಬೀಳತೊಡ ಗಿದರೆ ಪುನಃ ಉದ್ಧಾರವಾಗಲು ಕೋಟಿ-ಕೋಟಿ ಜನ್ಮಗಳನ್ನೇ ತಾಳಬೇಕಾ ಗುವುದು. ಏಕೆಂದರೆ ಸ್ವಭಾವಾನುಗುಣವಾಗಿ ವರ್ತಿಸುವ ಪ್ರಾಣಿಗಳಿಗೆ ಆತ್ಮೋದ್ಧಾರಸಾಧನೆಯ ಸಾಧ್ಯತೆಯಿಲ್ಲ. ಕಾಮ-ಕ್ರೋಧಗಳು ಅವುಗಳಿಗೂ ಇರುವುದರಿಂದಲೂ–ಕಾರ್ಯಾಕಾರ್ಯವಿವೇಚನೆಯು ಅವುಗಳಿಗೆ ಇಲ್ಲದೇ ಇರುವುದರಿಂದಲೂ ಅವುಗಳ ಜನ್ಮಗಳು ಅಧೋಮುಖವಾಗಿಯೇ ಹೋಗು ತ್ತಿರುತ್ತವೆ. ಒಮ್ಮೆ ಎಡವಿಬಿದ್ದರೆ ಚೇತರಿಸಿಕೊಳ್ಳಲು ಕಷ್ಟಸಾಧ್ಯ ಎನ್ನುವಂತೆ, ಯಾವುದೋ ಪುಣ್ಯದಿಂದ ಲಭಿಸಿದ ಮನುಷ್ಯಜನ್ಮವನ್ನು ಆತ್ಮೋದ್ಧಾರಕ್ಕಾಗಿ ಸದುಪಯೋಗಪಡಿಸಿಕೊಳ್ಳದಿದ್ದರೆ :

**ಮಾಮಪ್ರಾಪ್ಯೈವ ಕೌನ್ತೇಯ ತತೋ ಯಾನ್ತಿ ಅಧಮಾಂ ಗತಿಮ್ ।**

ನನ್ನನ್ನು ಪಡೆದುಕೊಳ್ಳದೆಯೇ ಅತ್ಯಂತಾಧಮವಾದ ಯೋನಿಗಳಲ್ಲಿ ಜನ್ಮತಾಳುತ್ತಾರೆ. ನಿಕೃಷ್ಟವಾದ ಗತಿಯನ್ನು ಹೊಂದುತ್ತಾರೆ.

ಮನುಷ್ಯಜನ್ಮದಲ್ಲಿ ಜಾರಿಬಿದ್ದೆವೆಂದರೆ ಪುನಃ ಭಗವಂತನನ್ನು ಕಾಣುವ ಅಥವಾ ಅವನನ್ನು ಸೇರುವ ಸಾಧನಾಮಾರ್ಗಗಳನ್ನು ಕಂಡುಕೊಳ್ಳುವುದು ಅತ್ಯಂತದುಃಸಾಧ್ಯ.

ಪರಮಾತ್ಮನ ಈ ಎಚ್ಚರಿಕೆಯ ಮಾತುಗಳನ್ನು ಮನನಮಾಡಿಕೊಳ್ಳುವುದು ಅತ್ಯಗತ್ಯ.)

o o o

**ಜನ್ಮನಿ ಜನ್ಮನಿ ಮಾಮಪ್ರಾಪ್ಯೈವ... ಗತಿಮ್** = ಆ ಅವಿವೇಕಿಗಳು ಪ್ರತಿಜನ್ಮದಲ್ಲಿಯೂ ತಮೋಬಹುಳವಾದ ಯೋನಿಗಳಲ್ಲಿಯೇ ಹುಟ್ಟಿ ಕೆಳಕ್ಕೆ ಹೋಗುತ್ತಾ, ಈಶ್ವರನಾದ ನನ್ನನ್ನು ಪಡೆಯದೆಯೇ ಅದಕ್ಕಿಂತಲೂ ನಿಕೃಷ್ಟತಮವಾದ ಗತಿಯನ್ನು ಹೊಂದುತ್ತಾರೆ. ಮಾಂ ಅಪ್ರಾಪ್ಯ ಏವ– ಎಂದು ಹೇಳಿರುವುದರಿಂದ ನಾನು ಹೇಳಿರುವ ಸಾಧುಮಾರ್ಗವನ್ನೂ ಅವರು ಹೊಂದುವುದಿಲ್ಲ. ಏಕೆಂದರೆ : ನನ್ನನ್ನು ಅವರು ಹೊಂದಲು ಯಾವುದೇ ಆಶಂಕೆಯೂ ಕೂಡ ಇಲ್ಲ. (ಆಸಕ್ತಿಯನ್ನೂ ಹೊಂದಿಲ್ಲ) (ಶಂ. ಭಾ.)

ನನ್ನ ಅನುಕೂಲಕ್ಕೆ ವಿರುದ್ಧವಾದ ಜನ್ಮವನ್ನು ತಳೆದು ಅವರು ಮತ್ತೆ ಜನ್ಮ-ಜನ್ಮದಲ್ಲಿಯೂ ಮೂಕರಾಗಿ, ವಿಪರೀತವಾದ ಜ್ಞಾನವುಳ್ಳವರಾಗಿ, ನನ್ನನ್ನು ಪಡೆಯದೆಯೇ ಎಂದರೆ ಸರ್ವೇಶ್ವರನಾದ ಭಗವಾನ್ ವಾಸುದೇವನು ಇದ್ದಾನೆ–ಎಂಬ ಅರಿವನ್ನು ಪಡೆಯದೆಯೇ ಆ ಜನ್ಮಕ್ಕಿಂತಲೂ ಅಧಮವಾದ ಗತಿಯನ್ನೇ ಪಡೆಯುತ್ತಾರೆ. (ರಾ. ಭಾ.)

**ಓಂ ತ್ರಿವಿಧಂ ನರಕಸ್ಯೇದಂ ದ್ವಾರಂ ನಾಶನಮಾತ್ಮನಃ ।**
**ಕಾಮಃ ಕ್ರೋಧಸ್ತಥಾಲೋಭಸ್ತಸ್ಮಾದೇತತ್ತ್ರಯಂ ತ್ಯಜೇತ್ ॥೨೧॥**

ಕಾಮ, ಕ್ರೋಧ ಮತ್ತು ಲೋಭ–ಎಂಬ ಮೂರು ಬಗೆಯಾಗಿರುವ

ಇದೇ ನರಕಕ್ಕೆ ಬಾಗಿಲು. ಆತ್ಮನ ನಾಶಕ್ಕೆ ಕಾರಣವಾದುವುಗಳು. ಆದುದರಿಂದ ಈ ಮೂರನ್ನೂ ಬಿಟ್ಟುಬಿಡಬೇಕು.

* * *

(ನರಕದ ದ್ವಾರವು ಮೂರು ವಿಧವಾದುದು ಎನ್ನುತ್ತಾನೆ ಶ್ರೀಕೃಷ್ಣ. ಕೇವಲ ನರಕದ ಬಾಗಿಲು ಮಾತ್ರವಲ್ಲ; ಆತ್ಮನಾಶಕವಾದುದು. ಆತ್ಮನಿಗೆ ನಾಶವೆಂಬುದಿಲ್ಲ. ಇಲ್ಲಿ ಆತ್ಮನಾಶವೆಂದರೆ ಜೀವನನ್ನು ಅಧೋಗತಿಗೆ ಹಾಕುವುದೇ ಆಗಿದೆ. ಆ ಮೂರು ವಿಧಗಳು ಯಾವುವು? **ಕಾಮಃ, ಕ್ರೋಧಃ, ಲೋಭಃ**–ಈ ಮೂರನ್ನು ಮಾತ್ರವೇ ಇಲ್ಲಿ ಪರಮಾತ್ಮನು ಹೇಳುತ್ತಾನೆ. ಇದರಲ್ಲಿ ಒಂದೊಂದೇ ಮನುಷ್ಯನನ್ನು ಅಧೋಗತಿಗೆ ತಳ್ಳುವಷ್ಟು ಸಮರ್ಥ ವಾಗಿದೆ. ಉದಾಹರಣೆಗೆ ಕಾಮದಿಂದ ಕೀಚಕನು ಹಾಳಾದನು. ಕ್ರೋಧದಿಂದ ಕಂಸನು ಹಾಳಾದನು. ಲೋಭದಿಂದ ದುರ್ಯೋಧನನು ಹಾಳಾದನು. ಆದುದರಿಂದ ಈ ಗುಣಗಳಲ್ಲಿ ಒಂದೊಂದೂ ಸಹ ಮನುಷ್ಯನ ದುರ್ಗತಿಗೆ ಕಾರಣಗಳಾಗುತ್ತವೆ. ನರಕದ ಬಾಗಿಲುಗಳಾಗುತ್ತವೆ. ನರಕಕ್ಕೆ ಒಯ್ಯುತ್ತವೆ. ಆದುದರಿಂದ ಶುಭಕಾಮನಾದವನು ಈ ಮೂರನ್ನೂ ಖಂಡಿತವಾಗಿಯೂ ಬಿಡಬೇಕು–ಎನ್ನುತ್ತಾನೆ ಶ್ರೀಕೃಷ್ಣ.)

o o o

ಎಲ್ಲ ಆಸುರೀಸಂಪತ್ತನ್ನೂ ಇಲ್ಲಿ ಸಂಕ್ಷೇಪವಾಗಿ ಭಗವಂತನು ಹೇಳು ತ್ತಾನೆ. ಅನಂತವಾದ ಎಲ್ಲ ಆಸುರೀಸಂಪತ್ತಿನ ಭೇದಗಳೂ ಯಾವ ಮೂರ ರಲ್ಲಿ ಅಡಕವಾಗುತ್ತವೆಯೋ ಮತ್ತು ಯಾವ ಮೂರನ್ನು ನಾಶಮಾಡಿದರೆ ಎಲ್ಲ ದೋಷಗಳೂ ಪರಿಹಾರಹೊಂದುತ್ತವೆಯೋ ಮತ್ತು ಯಾವುದು ಎಲ್ಲ ಅನರ್ಥಗಳಿಗೂ ಮೂಲಕಾರಣವಾಗಿದೆಯೋ–ಅದನ್ನು ಇಲ್ಲಿ ಭಗವಂತನು ಹೇಳುತ್ತಾನೆ. ನರಕವನ್ನು ಹೊಂದಲು ಇವು ಮೂರು ಬಗೆಯ ಬಾಗಿಲು ಗಳು. ಇವು ಆತ್ಮವನ್ನು ನಾಶಪಡಿಸುವುವು. ಇವು ಪ್ರವೇಶಮಾಡಿಬಿಟ್ಟರೆ ಸಾಕು ; ಆತ್ಮನು ನಷ್ಟವಾಗಿಬಿಡುತ್ತಾನೆ, ಎಂದರೆ ಯಾವ ಪುರುಷಾರ್ಥಕ್ಕೂ ಯೋಗ್ಯನಾಗದೇ ಹೋಗುತ್ತಾನೆ. ಆದುದರಿಂದ ಇವು ಮೂರನ್ನೂ ಆತ್ಮನಾಶದ ದ್ವಾರ ಎಂದು ಕರೆದಿದೆ. ಆ ಮೂರು ಯಾವುವು ಎಂದರೆ ಕಾಮ, ಕ್ರೋಧ ಮತ್ತು ಲೋಭ. ಇವು ಆತ್ಮನಾಶಕ್ಕೆ ದ್ವಾರಗಳಾಗಿರುವುದ

ರಿಂದ ಈ ಮೂರನ್ನೂ ಬಿಟ್ಟುಬಿಡಬೇಕು ಎಂದು ಇಲ್ಲಿ ತ್ಯಾಗವನ್ನು ಸ್ಮರಿಸಲಾಗಿದೆ. (ಶಂ. ಭಾ.)

**ದ್ವಾರಂ** = ಮಾರ್ಗ ಅಥವಾ ಕಾರಣ. ಕಾಮ-ಕ್ರೋಧಗಳ ಸ್ವರೂಪವನ್ನು ಹಿಂದೆಯೇ ವ್ಯಾಖ್ಯಾನಮಾಡಿಯಾಗಿದೆ. **ತಸ್ಮಾತ್...ತ್ಯಜೇತ್** = ಈ ಕಾಮ-ಕ್ರೋಧ-ಲೋಭಗಳು ಅತಿಘೋರವಾದ ನರಕಕ್ಕೆ ಕಾರಣವಾಗುವುದರಿಂದ ಈ ಮೂರನ್ನೂ ದೂರದಲ್ಲೇ ಬಿಟ್ಟುಬಿಡಬೇಕು. (ಅತ್ಯಂತವಾಗಿ ಪರಿಹರಿಸಬೇಕು.) (ರಾ. ಭಾ.)

**ಓಂ ಏತೈರ್ವಿಮುಕ್ತಃ ಕೌನ್ತೇಯ ತಮೋದ್ವಾರೈಸ್ತ್ರಿಭಿರ್ನರಃ ।**
**ಆಚರತ್ಯಾತ್ಮನಃ ಶ್ರೇಯಸ್ತತೋ ಯಾತಿ ಪರಾಂ ಗತಿಮ್ ॥೨೨॥**

ಕೌಂತೇಯ! ಕತ್ತಲೆಯ ಈ ಮೂರು ಬಾಗಿಲುಗಳಿಂದ ಬಿಡುಗಡೆಯನ್ನು ಹೊಂದಿದ ಮನುಷ್ಯನು ತನಗೆ ಶ್ರೇಯಸ್ಸನ್ನು ಮಾಡಿಕೊಳ್ಳುತ್ತಾನೆ. ಅದರಿಂದ ಪರಮಗತಿಯನ್ನೂ ಹೊಂದುತ್ತಾನೆ.

* * *

(ಹಿಂದಿನ ಶ್ಲೋಕದಲ್ಲಿ ಕಾಮ-ಕ್ರೋಧ-ಲೋಭಗಳು ನರಕದ್ವಾರಗಳೆಂದು ಶ್ರೀಕೃಷ್ಣನು ಹೇಳಿದನು. ಈ ಶ್ಲೋಕದಲ್ಲಿ ಅವುಗಳನ್ನೇ ಕತ್ತಲೆಯ ದ್ವಾರಗಳೆಂದು ಕರೆದಿದ್ದಾನೆ. ತಮಸ್ಸು ನರಕವೂ ಆಗುತ್ತದೆ ; ಅಜ್ಞಾನವೂ ಆಗುತ್ತದೆ. ಅಥವಾ ತಮಸ್ಸಿಗೆ–ದುಃಖಮೋಹಾತ್ಮಕವಾದ ನರಕಕ್ಕೆ ಕಾಮಾದಿಗಳು ಬಾಗಿಲುಗಳು ಎಂದೂ ಹೇಳಬಹುದಾಗಿದೆ.

ಇವು ಮೂರೂ ಬಂಧನಗಳು ಅಥವಾ ಪಾಶಗಳು. ಇವುಗಳಿಂದ ನರನು ಬಿಗಿಯಲ್ಪಟ್ಟಿರುತ್ತಾನೆ. ಇವುಗಳು ತಾವೇ ತಾವಾಗಿ ಬಿಟ್ಟುಹೋಗತಕ್ಕುವುಗಳಲ್ಲ. ಜಿಗಣೆಯಂತೆ ಅಂಟಿಕೊಂಡು, ಜಿಗಣೆಯು ರಕ್ತವನ್ನು ಹೀರುವಂತೆ–ಮನುಷ್ಯನ ಸತ್ತ್ವವನ್ನೆಲ್ಲಾ ಹೀರಿಬಿಡುತ್ತವೆ.

ಇವುಗಳಿಂದ ಬಿಡುಗಡೆಯನ್ನು ಹೊಂದಬೇಕು. ಮನಸ್ಸನ್ನು ಕಾಮ-ಕ್ರೋಧ-ಲೋಭಗಳಿಂದ ವಿಮುಕ್ತಿಗೊಳಿಸಬೇಕು. ಕಾಮ್ಯಪದಾರ್ಥಗಳನ್ನು ಬಹಿಷ್ಕರಿಸಿದ ಮಾತ್ರದಿಂದ ಮನಸ್ಸು ನಿಷ್ಕಾಮವಾಗುವುದಿಲ್ಲ. ಮನಸ್ಸು ವಿಷಯಗಳೇ ಇಲ್ಲದಿದ್ದರೂ ವಿಷಯಗಳನ್ನು ಅನುಭವಿಸುವ ಶಕ್ತಿಯುಳ್ಳದ್ದು.

ಆದುದರಿಂದ ಮುಖ್ಯವಾಗಿ ಮನಸ್ಸಿನಿಂದ ಈ ಮೂರನ್ನೂ ಹೊರಹಾಕ ಬೇಕು. ಆಗಲೇ ಆ ಶುದ್ಧಮನಸ್ಸು ಆತ್ಮಶ್ರೇಯಸ್ಸನ್ನು ಮಾಡಿಕೊಳ್ಳಲು ಮನುಷ್ಯನಿಗೆ ಅನುವುಮಾಡಿಕೊಡುತ್ತದೆ. ಕಾಮ-ಕ್ರೋಧ-ಲೋಭಗಳೆಂಬ ಗಾಢಾಂಧಕಾರದಿಂದ ಕವಿದಿದ್ದು ತನ್ನ ಆತ್ಮಕ್ಕೆ ಶ್ರೇಯಸ್ಸನ್ನು ಮಾಡಿಕೊಳ್ಳಲು ಹಾದಿಕಾಣದಿದ್ದವನು ತಮಸ್ಸಿನ ನಿರಸನವಾದೊಡನೆಯೇ ಜ್ಞಾನಜ್ಯೋತಿ ಯುದಯಿಸಿ ಆತ್ಮಹಿತವನ್ನು ಮಾಡಿಕೊಳ್ಳುತ್ತಾನೆ ; ಆತ್ಮವನ್ನು ಸಾಕ್ಷಾತ್ಕರಿಸಿ ಕೊಳ್ಳಲು ಪ್ರಯತ್ನಿಸುತ್ತಾನೆ. ಅನಂತರ ಆತ್ಮಸಾಕ್ಷಾತ್ಕಾರದ ಸಿದ್ಧಿಯನ್ನು ಪಡೆದು ಶ್ರೇಷ್ಠವಾದ ವಿಷ್ಣುಪದವನ್ನು ಹೊಂದುತ್ತಾನೆ. ಅಥವಾ ಮೋಕ್ಷವನ್ನು ಹೊಂದುತ್ತಾನೆ.)

0 0 0

ಕಾಮವೇ ಮುಂತಾದುವುಗಳು ದುಃಖ ಮತ್ತು ಮೋಹರೂಪವಾದ ಅಂಧಕಾರಮಯವಾದ ನರಕಕ್ಕೆ ದ್ವಾರಗಳು. ಈ ಮೂರು ಅವಗುಣಗಳಿಂದ ಬಿಡುಗಡೆಹೊಂದಿದ ಮನುಷ್ಯನು ಆತ್ಮಕಲ್ಯಾಣವನ್ನು ಸಾಧಿಸಿಕೊಳ್ಳುತ್ತಾನೆ. ಹಿಂದೆ ಇವುಗಳ ವಶನಾಗಿದ್ದುದರಿಂದ ಅದನ್ನು ಸಾಧಿಸಲಾಗುತ್ತಿರಲಿಲ್ಲ. ಈಗ ಅವು ನಾಶಹೊಂದಿಬಿಟ್ಟಿರುವುದರಿಂದ ಅದನ್ನು ಸಾಧಿಸಿಕೊಳ್ಳುತ್ತಾನೆ. ಆ ಸಾಧನದಿಂದ ಪರಮಗತಿಯನ್ನು ಎಂದರೆ ಮೋಕ್ಷವನ್ನು ಹೊಂದುತ್ತಾನೆ.

(ಶಂ. ಭಾ.)

ತಮಸ್ಸಿನ ದ್ವಾರಗಳಾಗಿ ನನ್ನ ವಿಷಯದಲ್ಲಿ ವಿಪರೀತವಾದ ಜ್ಞಾನಕ್ಕೆ ಕಾರಣಗಳಾಗಿರುವ ಈ ಕಾಮ-ಕ್ರೋಧ-ಲೋಭಗಳಿಂದ ಬಿಡುಗಡೆ ಹೊಂದಿದ ಮನುಷ್ಯನು ತನ್ನ ಶ್ರೇಯಸ್ಸನ್ನು ಸಾಧಿಸಿಕೊಳ್ಳುತ್ತಾನೆ. ಎಂದರೆ ನನ್ನ ವಿಷಯವಾದ ಜ್ಞಾನವನ್ನು ಪಡೆದು ನನಗೆ ಅನುಕೂಲವಾಗುವಂತೆ ನಡೆದುಕೊಳ್ಳುತ್ತಾನೆ. ಪರಾಗತಿಯಾದ ನನ್ನನ್ನೇ ಹೊಂದುತ್ತಾನೆ. (ರಾ. ಭಾ.)

**ಓಂ ಯಃ ಶಾಸ್ತ್ರವಿಧಿಮುತ್ಸೃಜ್ಯ ವರ್ತತೇ ಕಾಮಕಾರತಃ ।**
**ನ ಸ ಸಿದ್ಧಿಮವಾಪ್ನೋತಿ ನ ಸುಖಂ ನ ಪರಾಂ ಗತಿಮ್ ॥೨೩॥**

ಯಾವನು ಶಾಸ್ತ್ರವಿಧಿಯನ್ನು ಬಿಟ್ಟು ಕಾಮದ ಪ್ರೇರಣೆಯಿಂದ

ನಡೆಯುವನೋ ಅವನು ಸಿದ್ಧಿಯನ್ನು ಹೊಂದುವುದಿಲ್ಲ ; ಸುಖವನ್ನೂ ಹೊಂದುವುದಿಲ್ಲ ; ಪರಾಗತಿಯನ್ನೂ ಹೊಂದುವುದಿಲ್ಲ.

* * *

(ಮನುಷ್ಯರು ಆಸುರಭಾವದವರಾಗಿ ಏಕೆ ಆಗುತ್ತಾರೆ? ಯಾವನು ಶಾಸ್ತ್ರವಿಧಿಗಳನ್ನು ಮೀರಿ ನಡೆಯುತ್ತಾನೆಯೋ–ಎಂದರೆ ಕಾಮಾಭಿಭೂತ ನಾಗಿ ಶ್ರುತಿ-ಸ್ಮೃತಿ ಮುಂತಾದ ಶಾಸ್ತ್ರಗಳಲ್ಲಿ ಹೇಳಿರುವಂತೆ ಯಾವನು ನಡೆಯುವುದಿಲ್ಲವೋ ಅವನಿಗೆ ಯಾವುದೂ ಸಿದ್ಧಿಸುವುದಿಲ್ಲ. ಸಿದ್ಧಿ ಎಂದರೆ ಧರ್ಮಾರ್ಥ-ಕಾಮ-ಮೋಕ್ಷಗಳೆಂಬ ಚತುರ್ವಿಧಪುರುಷಾರ್ಥಗಳು. ಅವು ಗಳನ್ನು ಪಡೆಯುವುದಿಲ್ಲ. ಅವನಿಗೆ ಸುಖವೂ ಸಿಕ್ಕುವುದಿಲ್ಲ. ಸುಖವೆಂದರೆ ಕಾಮೋಪಭೋಗಗಳೇ ಸುಖವೆಂದು ಭಾವಿಸಬಾರದು. ಆ ಸುಖವೇನೋ ಕಾಮಕಾರನಿಗೆ ಇರುತ್ತದೆ. ಆದರೆ ಅದು ಕ್ಷಣಿಕಸುಖ. ಅದರಿಂದ ಸುಖ ಮೂಲವಾದ ಶಾಂತಿಯು ಸಿಕ್ಕುವುದಿಲ್ಲ. ಆಸೆಯು ಹೆಚ್ಚುತ್ತಲೇ ಇರುತ್ತದೆ. ಕಾಮೋಪಭೋಗದಿಂದ ಮನಸ್ಸಿಗೆ ತೃಪ್ತಿಯು ಸಿಗುವುದಿಲ್ಲ. ಇನ್ನೂ ಬೇಕು, ಇನ್ನೂ ಬೇಕು–ಎಂಬ ಆಸೆಯು ಅನಿರ್ದಿಷ್ಟಕಾಲದವರೆಗೆ ವರ್ಧಿಸುತ್ತಾ ಹೋಗುತ್ತದೆ. ವೃದ್ಧಾಪ್ಯದಲ್ಲಿ ಇಂದ್ರಿಯಗಳು ಗಳಿತವಾದಾಗಲೂ ಸಹ ಆಸೆ ಯೆಂಬುದು ಹಾಗೆಯೇ ಇರುತ್ತದೆ. ಈ ಕಾರಣದಿಂದ ಆಸುರಭಾವದವನಿಗೆ ಮಾನಸಿಕವಾದ ಶಾಂತಿಯು ಅಥವಾ ಸುಖವು ಎಂದೆಂದೂ ಲಭಿಸುವುದಿಲ್ಲ. ಕಾಮಾಭಿಭೂತನಾಗಿ ಬದುಕಿರುವವರೆಗೂ ದುಷ್ಕಾರ್ಯಗಳನ್ನೇ ಮಾಡು ತ್ತಿರುವ ಅವನಿಗೆ ಒಳ್ಳೆಯ ಗತಿಯೂ ಸಹ ಖಂಡಿತವಾಗಿಯೂ ಸಿಕ್ಕುವುದಿಲ್ಲ.

ಶಾಸ್ತ್ರವಿಧಿ ಎಂದರೇನು? ಎಲ್ಲರೂ ಅದನ್ನು ಆಚರಿಸುವುದಕ್ಕಾಗುವು ದಿಲ್ಲವೇ? ಅದರ ಆಚರಣೆಗೆ ಹಣವೇನಾದರೂ ಬೇಕಾಗುವುದೇ? ಎಂದರೆ : 'ಶಾಸ್ತ್ರ' ಎಂಬ ಶಬ್ದವನ್ನು ಕೇಳಿದೊಡನೆಯೇ ಅದು ಅಗಾಧವಾಗಿ ಕಾಣುತ್ತದೆ. ಶಾಸ್ತ್ರವೆಂದರೆ ಅನುಸರಿಸಲಾಗದುದೇನೂ ಅಲ್ಲ. ಇದುವರೆಗೆ ಶ್ರೀಕೃಷ್ಣನು ಹತ್ತಾರು ಬಾರಿ ಶಾಸ್ತ್ರವಿಧಿಗಳನ್ನೇ ಹೇಳಿದ್ದಾನೆ. ಸತ್ಯವನ್ನು ಹೇಳಬೇಕು ; ಸರಳತೆ ಇರಬೇಕು ; ಕಾಮ-ಕ್ರೋಧ-ಲೋಭ-ಮೋಹ-ಮದ-ಮಾತ್ಸರ್ಯಗಳನ್ನು ತ್ಯಜಿಸಬೇಕು ; ಯಾರೊಬ್ಬರಿಗೂ ಮೋಸಮಾಡ ಬಾರದು ; ಅತ್ಯಾಸೆ ಪಡಬಾರದು ; ಅದೃಷ್ಟದಿಂದ ಎಷ್ಟು ಸಿಕ್ಕುವುದೋ

ಅಷ್ಟರಿಂದಲೇ ತೃಪ್ತಿಪಟ್ಟುಕೊಳ್ಳಬೇಕು ; ಅನ್ಯಾಯದಿಂದ ಧನಸಂಪಾದನೆ ಯನ್ನು ಮಾಡಬಾರದು–ಇವುಗಳೆಲ್ಲವೂ ಶಾಸ್ತ್ರವಾಕ್ಯಗಳೇ ಆಗಿವೆ. ಸದ್ಗುಣ ಗಳನ್ನು ಮೈಗೂಡಿಸಿಕೊಳ್ಳಲು ದೃಢವಾದ ಮನಸ್ಸಿದ್ದರೆ ಇವುಗಳನ್ನು ಅನು ಸರಿಸಲು ಸಾಧ್ಯವಾಗುತ್ತದೆ. ಸ್ವೇಚ್ಛಾಚಾರಿಗಳಿಗೆ ಸಾಧ್ಯವಾಗುವುದಿಲ್ಲ.

ದೃಢಮನಸ್ಸಿನಿಂದ ಈ ಅಮೋಘಗುಣಗಳನ್ನು ಮೈಗೂಡಿಸಿಕೊಂಡರೆ ಅರ್ಥಾತ್ ಶಾಸ್ತ್ರವಿಧಿ-ನಿಷೇಧಗಳನ್ನರಿತು ಸರಿಯಾಗಿ ನಡೆದುಕೊಂಡರೆ ಆತ್ಮ ಶ್ರೇಯಸ್ಸು ಲಭಿಸಿ ಚಿರಂತನವಾದ ಶಾಂತಿಯೂ–ಸುಖವೂ ಲಭಿಸುವುದು. ಐಹಿಕಾಮುಷ್ಮಿಕಸುಖಗಳೂ ಮತ್ತು ಪರಾಶಾಂತಿಯೂ ಲಭಿಸುವುವು.

**ವೇದಃ ಸ್ಮೃತಿಃ ಸದಾಚಾರಃ ಸ್ವಸ್ಯ ಚ ಪ್ರಿಯಮಾತ್ಮನಃ ।**
**ಏತಚ್ಚತುರ್ವಿಧಂ ಪ್ರಾಹುಃ ಸಾಕ್ಷಾದ್ಧರ್ಮಸ್ಯ ಲಕ್ಷಣಮ್ ॥**

ವೇದಗಳು, ಸ್ಮೃತಿಗಳು, ಸಾಧು-ಶಿಷ್ಟರ ಸಂಪ್ರದಾಯಗಳು ಮತ್ತು ಮನುಷ್ಯನ ಸ್ವಂತವಾದ ಆತ್ಮದೃಷ್ಟಿಯಿಂದ ಹಿತಾಹಿತಗಳ ವಿವೇಕ–ಈ ನಾಲ್ಕೂ ಧರ್ಮದ ಲಕ್ಷಣವೆಂದು ಹೇಳುತ್ತಾರೆ.)

o o o

ಶಾಸ್ತ್ರವಿಧಿಂ = ಕರ್ತವ್ಯ ಮತ್ತು ಅಕರ್ತವ್ಯಗಳ ಜ್ಞಾನಕ್ಕೆ ಕಾರಣವಾದ ವಿಧಿ-ನಿಷೇಧಗಳನ್ನು ಬೋಧಿಸುವ ಯಾವ ಆದೇಶವುಂಟೋ ಅದನ್ನು. ನ ಸ ಸಿದ್ಧಿಂ ಅವಾಪ್ನೋತಿ = ಪುರುಷಾರ್ಥದ ಯೋಗ್ಯತೆಯನ್ನು ಹೊಂದುವುದಿಲ್ಲ. ಪರಾಗತಿಯನ್ನು ಎಂದರೆ ಸ್ವರ್ಗವನ್ನು ಅಥವಾ ಮೋಕ್ಷವನ್ನು ಹೊಂದುವುದಿಲ್ಲ. (ಶಂ. ಭಾ.)

ಶಾಸ್ತ್ರಂ = ವೇದಗಳು. ವಿಧಿಃ = ಅನುಶಾಸನ. ಶಾಸ್ತ್ರವಿಧಿಯನ್ನು ಬಿಟ್ಟು ಎಂದರೆ ವೇದವೆಂಬ ಅನುಶಾಸನವನ್ನು ಬಿಟ್ಟು ಸ್ವಚ್ಛಂದಕ್ಕೆ ಅನುಗುಣವಾದ ಮಾರ್ಗದಲ್ಲಿ ಯಾವನು ನಡೆಯುತ್ತಾನೆಯೋ ಅವನಿಗೆ ಯಾವ ಸಿದ್ಧಿಯೂ ದೊರೆಯುವುದಿಲ್ಲ. ಆತನು ಯಾವ ಆಮುಷ್ಮಿಕಸಿದ್ಧಿಯನ್ನೂ ಹೊಂದು ವುದಿಲ್ಲ. ಯಾವ ಸುಖವನ್ನೂ ಹೊಂದುವುದಿಲ್ಲ. ಪರಾಗತಿಯನ್ನು ಹೇಗೆ ಹೊಂದಿಯಾನು? (ರಾ. ಭಾ.)

**ಓಂ ತಸ್ಮಾಚ್ಛಾಸ್ತ್ರಂ ಪ್ರಮಾಣಂ ತೇ ಕಾರ್ಯಾಕಾರ್ಯವ್ಯವಸ್ಥಿತೌ ।**
**ಜ್ಞಾತ್ವಾ ಶಾಸ್ತ್ರವಿಧಾನೋಕ್ತಂ ಕರ್ಮ ಕರ್ತುಮಿಹಾರ್ಹಸಿ ॥೨೪॥**

ಆದುದರಿಂದ ಕಾರ್ಯ-ಅಕಾರ್ಯ ಇವುಗಳ ವ್ಯವಸ್ಥೆಯ ವಿಷಯದಲ್ಲಿ ಶಾಸ್ತ್ರವೇ ನಿನಗೆ ಪ್ರಮಾಣವು. ನೀನು ಶಾಸ್ತ್ರವಿಧಾನದಲ್ಲಿ ಹೇಳಿರುವುದನ್ನು ಅರಿತುಕೊಂಡಲ್ಲಿ ಇಲ್ಲಿ ಕರ್ಮಮಾಡಲು ಯೋಗ್ಯನಾಗುವೆ.

* * *

(‘ಶಾಸ್ತ್ರವನ್ನು ಲೋಕವು ಗೌರವಿಸುತ್ತಿದ್ದುದರಿಂದ ಶಾಸ್ತ್ರವು ಲೋಕವನ್ನು ಕಾಪಾಡುತ್ತಿತ್ತು. ‘ಶಾಸ್ತ್ರದಲ್ಲೇನಿದೆ? ಅದು ಮೂಢಾಚಾರ’ ಎಂದು ಹಳಿಯಲು ಮೊದಲಾದನಂತರ ಶಾಸ್ತ್ರವು ಹಿಂದೆ ಸರಿಯಿತು. ಮನುಷ್ಯನ ನೆಮ್ಮದಿಗೆ ಭಂಗವು ಪ್ರಾರಂಭವಾಯಿತು.

ಪುಣ್ಯ-ಪಾಪಗಳೂ, ಸ್ವರ್ಗ-ನರಕಗಳೂ ಕಟ್ಟುಕಥೆ ಎಂಬ ಭಾವನೆಯು ಬಂದಿದ್ದರಿಂದ ಸ್ವೇಚ್ಛಾಚಾರಕ್ಕೆ ತಡೆಯೇ ಇಲ್ಲದಾಯಿತು.

ಶ್ರೀಕೃಷ್ಣನು ಶಾಸ್ತ್ರದ ವಿಷಯವಾಗಿ ತನ್ನ ಖಚಿತವಾದ ಅಭಿಪ್ರಾಯವನ್ನು ಅರ್ಜುನನಿಗೆ ಹೇಳುತ್ತಾನೆ : ‘ಅರ್ಜುನ! ಶಾಸ್ತ್ರವಿಧಿ-ನಿಯಮಗಳನ್ನು ಕಡೆಗಾಣಿಸಿ ಸ್ವೇಚ್ಛೆಯಿಂದ ವರ್ತಿಸುವವರಿಗೆ ಪರಮಾರ್ಥಸಿದ್ಧಿಯಾಗಲೀ, ಸುಖವಾಗಲೀ, ಸದ್ಗತಿಯಾಗಲೀ–ಖಂಡಿತವಾಗಿಯೂ ಸಿಕ್ಕುವುದಿಲ್ಲ. ಆದುದರಿಂದ ನಿನಗೂ ಸಹ ಶಾಸ್ತ್ರವೇ ಪ್ರಮಾಣಭೂತವಾಗಿದೆ. ಯಾವುದು ಕಾರ್ಯ (ವಿಧಿ), ಯಾವುದು ಅಕಾರ್ಯ (ನಿಷೇಧ)–ಇವುಗಳನ್ನು ನಿರ್ಧಾರ ಮಾಡುವಾಗ ನೀನು ಶಾಸ್ತ್ರವನ್ನು ಆಶ್ರಯಿಸು. ಕ್ಷುಬ್ಧವಾಗಿರುವ ಮನಸ್ಸಿನಿಂದ ಕೂಡಿರುವ ನೀನು ಸ್ವೇಚ್ಛೆಯಿಂದ ಯಾವ ನಿರ್ಣಯವನ್ನೂ ಕೈಗೊಳ್ಳಬೇಡ. ಇಂತಹ ಸಂದರ್ಭಗಳಲ್ಲಿ ಶಾಸ್ತ್ರವು ದಾರಿದೀಪವಾಗಿ ಪರಿಣಮಿಸುತ್ತದೆ. ಅದನ್ನೇ ಪ್ರಮಾಣವನ್ನಾಗಿ ಇಟ್ಟುಕೊ. ಶಾಸ್ತ್ರದಲ್ಲಿ ಯಾವ ವಿಧಾನವನ್ನು ಹೇಳಿದೆ–ಎಂಬುದನ್ನು ಚೆನ್ನಾಗಿ ತಿಳಿದುಕೊಂಡರೆ ಅನಂತರ ಮುಂದಿನ ಕಾರ್ಯಮಾಡಲು ನೀನು ಅರ್ಹನಾಗುವೆ.’

ಶ್ರೀಕೃಷ್ಣನು ಹೇಳಿದ್ದೂ ಶಾಸ್ತ್ರವೇ. ಶಾಸ್ತ್ರಾರ್ಥವನ್ನೇ ಅವನು ಹೇಳುತ್ತಾ ಬಂದಿದ್ದಾನೆ. ಉಪನಿಷತ್ಸಾರವನ್ನೇ ಹೇಳಿದ್ದಾನೆ.

‘ಯಾರೋ ಹೇಳಿದರು’ ಎಂದು ನಾವು ಅದರಂತೆ ಮಾಡಬೇಕಾಗಿಲ್ಲ. ನಮ್ಮ ಹಿತಚಿಂತನೆಯು ಶಾಸ್ತ್ರಕ್ಕೆ ಗೊತ್ತಿರುವಷ್ಟು ನಮ್ಮ ತಂದೆ-ತಾಯಿಗಳಿಗೂ ತಿಳಿದಿರುವುದಿಲ್ಲ. ಏಕೆಂದರೆ : ಅವು ಆಪ್ತವಾಕ್ಯಗಳು. ಅತೀಂದ್ರಿಯ

ದೃಷ್ಟಿಯನ್ನು ಪಡೆದ ಸನಾತನರಾದ ಆರ್ಯಮಹರ್ಷಿಗಳೇ ಆಪ್ತರು. ಶಾಸ್ತ್ರಗಳನ್ನು ರಹಸ್ಯದೊಡನೆ ತಿಳಿದುಕೊಂಡಿರುವ ಶ್ರೀಕೃಷ್ಣನಂತಹ ಆಚಾರ್ಯರೇ ನಮ್ಮ ಹಿತಚಿಂತಕರು. ಇವರ ಮೂಲಕವಾಗಿ ನಾವು ಶ್ರೇಯಸ್ಸನ್ನು ಸಾಧಿಸಿಕೊಳ್ಳಬೇಕು.)

O O O

ಪ್ರಮಾಣಂ = ಜ್ಞಾನಸಾಧನ. ಇಹ ಎಂಬ ಪದವು ಕರ್ಮಗಳನ್ನು ಮಾಡುವ ಅಧಿಕಾರವು ಇರುವ ಕರ್ಮಭೂಮಿಯನ್ನು ಹೇಳುತ್ತದೆ. ಆದುದ ರಿಂದ ಕರ್ತವ್ಯ ಮತ್ತು ಅಕರ್ತವ್ಯಗಳ ವ್ಯವಸ್ಥೆಯಲ್ಲಿ ನಿನಗೆ ಶಾಸ್ತ್ರವೇ ಪ್ರಮಾಣ. ಅದರಿಂದಲೇ ಜ್ಞಾನವನ್ನು ಹೊಂದಲು ಸಾಧ್ಯ. ಆದುದರಿಂದ ಶಾಸ್ತ್ರವಿಧಾನದಲ್ಲಿ ಹೇಳಿರುವ ಮಾತನ್ನೂ, ವಿಧಾನವನ್ನೂ, ಆಜ್ಞೆಯನ್ನೂ (ಈ ಕಾರ್ಯವನ್ನು ಮಾಡು ಇದನ್ನು ಮಾಡಬೇಡ ಎಂಬ ವಿಧಾನವನ್ನು ) ಅರಿತು ನೀನು ಈ ಕರ್ಮಕ್ಷೇತ್ರದಲ್ಲಿ ಕಾರ್ಯವನ್ನು ಮಾಡುವುದು ಉಚಿತವಾಗಿದೆ.

(ಶಂ. ಭಾ.)

ಆದುದರಿಂದ ಯಾವುದು ಉಪಾದೇಯ (ಗ್ರಾಹ್ಯ ), ಯಾವುದು ಅನು ಪಾದೇಯ (ಅಗ್ರಾಹ್ಯ )–ಎಂಬುದನ್ನು ವ್ಯವಸ್ಥೆಮಾಡುವ ಬಗೆಗೆ ಶಾಸ್ತ್ರವೇ ನಿನಗೆ ಪ್ರಮಾಣ. ಧರ್ಮಶಾಸ್ತ್ರ , ಇತಿಹಾಸ ಪುರಾಣ–ಮುಂತಾದುವುಗಳಿಂದ ವಿಸ್ತಾರಗೊಂಡಿರುವ ವೇದಗಳು ಪುರುಷೋತ್ತಮನೆಂಬ ಪರತತ್ತ್ವವನ್ನೂ, ಅವನನ್ನು ಸಂತೋಷಪಡಿಸುವುದಕ್ಕೋಸ್ಕರ ಅವನನ್ನು ಹೊಂದಲು ಉಪಾಯವಾಗಿರುವ ಕರ್ಮಗಳನ್ನೂ ಬೋಧಿಸುತ್ತವೆ. ಆದುದರಿಂದ ಶಾಸ್ತ್ರ ವಿಧಾನಗಳಲ್ಲಿ ಹೇಳಲ್ಪಟ್ಟಿರುವ ಐದು ತತ್ತ್ವಗಳನ್ನೂ ಕರ್ಮಗಳನ್ನೂ ಅರಿತು ಯಥಾವತ್ತಾಗಿ ಹೆಚ್ಚು ಕಡಿಮೆಯಿಲ್ಲದೆ ಆಚರಿಸಬೇಕು. ಅದನ್ನೇ ಗ್ರಹಿಸಬೇಕು.

(ರಾ. ಭಾ.)

**ಇತಿ ಶ್ರೀಮಹಾಭಾರತೇ ಭೀಷ್ಮಪರ್ವಣಿ ಶ್ರೀಮದ್ಭಗವದ್ಗೀತಾ-ಸೂಪನಿಷತ್ಸು ಬ್ರಹ್ಮವಿದ್ಯಾಯಾಂ ಯೋಗಶಾಸ್ತ್ರೇ ಶ್ರೀಕೃಷ್ಣಾರ್ಜುನಸಂವಾದೇ ದೈವಾಸುರಸಂಪದ್ವಿಭಾಗಯೋಗೋ ನಾಮ ಷೋಡಶೋಽಧ್ಯಾಯಃ**

ಗೀತೆಯಲ್ಲಿ ೧೬ನೆಯ ಅಧ್ಯಾಯವು ಮುಗಿಯಿತು.

ಭೀಷ್ಮಪರ್ವದಲ್ಲಿ ೪೦ನೆಯ ಅಧ್ಯಾಯವು ಮುಗಿಯಿತು.

# ಭಗವದ್ಗೀತಾ-೧೭ನೆಯ ಅಧ್ಯಾಯ

೪೧ನೆಯ ಅಧ್ಯಾಯ ಶ್ರೀಮದ್ಭಗವದ್ಗೀತಾಪರ್ವ (ಮುಂದುವರಿದಿದೆ.)

## ಶ್ರದ್ಧಾಯುಕ್ತರಾಗಿ ಶಾಸ್ತ್ರಕ್ಕೆ ವಿರುದ್ಧವಾಗಿ ಕರ್ಮಮಾಡುವವರ ವರ್ಣನೆ : ಆಹಾರ, ಯಜ್ಞ, ತಪಸ್ಸು ಮತ್ತು ದಾನ ಇವುಗಳ ಭೇದಗಳು : ಓಂ, ತತ್ ಮತ್ತು ಸತ್ ಇವುಗಳ ವ್ಯಾಖ್ಯಾನ

**ಅರ್ಜುನ ಉವಾಚ :**

**ಓಂ ಯೇ ಶಾಸ್ತ್ರವಿಧಿಮುತ್ಸೃಜ್ಯ ಯಜನ್ತೇ ಶ್ರದ್ಧಯಾನ್ವಿತಾಃ ।**
**ತೇಷಾಂ ನಿಷ್ಠಾ ತು ಕಾ ಕೃಷ್ಣ ಸತ್ತ್ವಮಾಹೋ ರಜಸ್ತಮಃ ॥೧॥**

ಅರ್ಜುನನು ಹೇಳುತ್ತಾನೆ :

"ಕೃಷ್ಣ! ಯಾರು ಶಾಸ್ತ್ರವಿಧಿಯನ್ನು ಬಿಟ್ಟು ಶ್ರದ್ಧೆಯಿಂದ ಕೂಡಿದವರಾಗಿ ಪೂಜಿಸುವರೋ ಅವರ ನಿಷ್ಠೆಯು ಎಂತಹುದು? ಸಾತ್ತ್ವಿಕವೋ, ರಾಜಸವೋ ಅಥವಾ ತಾಮಸವೋ?"

* * *

('ತಸ್ಮಾಚ್ಛಾಸ್ತ್ರಂ ಪ್ರಮಾಣಂ ತೇ'–ಎಂದು ಶ್ರೀಕೃಷ್ಣನು ಹೇಳಿದ ಮಾತಿನ ಹಿನ್ನೆಲೆಯಲ್ಲಿ ಅರ್ಜುನನು ಈ ಪ್ರಶ್ನೆಯನ್ನು ಕೇಳಿದ್ದಾನೆ. ಶಾಸ್ತ್ರವಿಧಿಮುತ್ಸೃಜ್ಯ = ಶಾಸ್ತ್ರವಿಧಿಗಳನ್ನು ಬಿಟ್ಟು. ಇಲ್ಲಿ ಶಾಸ್ತ್ರವಿಧಿಯನ್ನು ಬಿಡುವುದೆಂದರೆ ಮೂರು ಬಗೆ :

1) ಶಾಸ್ತ್ರವಿಧಿಗಳನ್ನು ತಿಳಿದುಕೊಂಡೂ ಅದರಂತೆ ನಡೆದುಕೊಳ್ಳುವುದಕ್ಕಾಗದೇ ಬಿಡುವುದು.

2) ಶಾಸ್ತ್ರವಿಧಿಗಳನ್ನು ತಿಳಿದುಕೊಳ್ಳಲು ಅವಕಾಶವಾಗದೇ ಇರುವುದರಿಂದ ಅವುಗಳನ್ನು ಬಿಟ್ಟಿರುವುದು.

3) ಶಾಸ್ತ್ರವಿಧಿಗಳಲ್ಲಿ ತಿರಸ್ಕಾರಭಾವನೆಯನ್ನು ಹೊಂದಿ ಬಿಟ್ಟಿರುವುದು.

ಯಜನ್ತೇ ಶ್ರದ್ಧಯಾನ್ವಿತಾಃ = ಇವುಗಳಲ್ಲಿ ಮೊದಲನೆಯ ಎರಡು

ಕಾರಣಗಳಿಂದ ಶಾಸ್ತ್ರವಿಧಾನವನ್ನು ಬಿಟ್ಟಿದ್ದರೂ ಶ್ರದ್ಧೆಯಿಂದ ಕೂಡಿ ದೇವತೆಗಳೇ ಮುಂತಾದವರನ್ನು ಉಪಾಸನೆಮಾಡುವವರು ಕೆಲವರುಂಟು. ಅವರ ಸ್ಥಿತಿ ಏನು?–ಎಂದು ಅರ್ಜುನನ ಪ್ರಶ್ನೆ. ಶ್ರದ್ಧೆ ಎಂದರೇನು? ಶ್ರದ್ಧೆ ಎಂದರೆ ನಂಬಿಕೆ ; ವಿಶ್ವಾಸ. ಹಾಗೆಂದರೆ ವಿಚಾರಕ್ಕೆ ಪೂರ್ವಭಾವಿಯಾಗಿ ಪರೀಕ್ಷೆಗಳಿಲ್ಲದೇ ಇರಿಸಿದ ನಂಬಿಕೆ. ಒಂದಾನೊಂದು ವಸ್ತುವಿನ ಅಥವಾ ಸಂಗತಿಯ ಇರುವಿಕೆಗೆ ಪ್ರತ್ಯಕ್ಷಾದಿ ಪ್ರಮಾಣಗಳು–ಸಾಕ್ಷ್ಯಾಧಾರಗಳು ಇಲ್ಲದಿದ್ದರೂ ಆ ವಸ್ತುವು ಅಥವಾ ಸಂಗತಿಯು ಉಂಟೆಂದೂ, ಅದು ಕೆಲಸ ಮಾಡಬಲ್ಲುದೆಂದೂ ಭಾವಿಸಿ ನಡೆದರೆ ಆ ಭಾವನೆಯೂ ಶ್ರದ್ಧೆಯೆನಿಸುತ್ತದೆ. ಶ್ರದ್ಧೆಯೆಂಬುದು ಕುರುಡುನಂಬಿಕೆ, ಅಂಧವಿಶ್ವಾಸ ಎಂದು ಕೆಲವರ ವಾದ. ಬುದ್ಧಿವಿಚಾರಕ್ಕೆ ವೈರಿಯಾದುದೆಂದೂ ಹೇಳುತ್ತಾರೆ. ಆದರೆ ಶಾಸ್ತ್ರಗಳಲ್ಲಿ ಹೇಳಿರುವ ಶ್ರದ್ಧೆಯು ಈ ಗುಂಪಿಗೆ ಸೇರಿದುದಲ್ಲ. ಬುದ್ಧಿಯು ಸ್ವತಂತ್ರವಾಗಿ ಪ್ರವೇಶಮಾಡಲಾಗದಿರುವ ಜಾಗಗಳು ಎಷ್ಟೋ ಇವೆ. ಜೀವ, ಆತ್ಮ, ಈಶ್ವರ, ಪುಣ್ಯ-ಪಾಪಗಳು, ಜನ್ಮಾಂತರ, ಲೋಕಾಂತರ–ಇತ್ಯಾದಿಗಳು. ಇಂತಹ ವಿಚಾರಕ್ಷೇತ್ರಗಳೊಳಕ್ಕೆ ಬುದ್ಧಿಯು ಸ್ವತಂತ್ರವಾಗಿ ಪ್ರವೇಶಿಸಲಾರದು. ಜೀವ, ಆತ್ಮ, ಈಶ್ವರ–ಇವುಗಳನ್ನು ಅರಿತುಕೊಳ್ಳಬೇಕಾದರೆ ಮೊದಲು ಶ್ರದ್ಧೆಯನ್ನೇ ಅವಲಂಬಿಸಬೇಕಾಗುತ್ತದೆ. ಅದರಂತೆ ಸಾಧನೆಯನ್ನು ಮಾಡುತ್ತಾ ತನ್ನ ಶ್ರದ್ಧೆಯು ಸರಿಯಾಗಿದೆಯೇ ಎಂಬುದರ ಪರೀಕ್ಷೆಯನ್ನು ಮಾಡುತ್ತಾ ಬಂದರೆ ಅದು ವಿಚಾರವಾದಕ್ಕೆ ವಿರೋಧವೇನೂ ಆಗುವುದಿಲ್ಲ. ಶಾಸ್ತ್ರವಿಧಿಗಳ ಜ್ಞಾನವಿಲ್ಲದಿದ್ದರೂ ಕೆಲವೊಮ್ಮೆ ಶ್ರದ್ಧೆಯಿಂದ ಕಾರ್ಯಸಾಧನೆಯಾಗುತ್ತದೆಂಬುದು ನಿಜ. ಶಾಸ್ತ್ರವಿಧಿಗಳನ್ನು ತಿಳಿದಿದ್ದರೂ ಅದರಂತೆ ಆಚರಿಸಲಾಗದೇ ಯಾವುದೋ ಮಂತ್ರವನ್ನೋ ದೇವತೆಯನ್ನೋ ಶ್ರದ್ಧೆಯಿಂದ ಪೂಜಿಸುವುದು, ಶಾಸ್ತ್ರವಿಧಿಗಳನ್ನು ತಿಳಿದುಕೊಳ್ಳಲಾಗದೇ ಹಿರಿಯರು ಹೇಳಿದುದನ್ನು ಶ್ರದ್ಧೆಯಿಂದ ಮಾಡಿಕೊಂಡು ಹೋಗುವುದು–ಇವುಗಳಿಂದಲೂ ಕೆಲವು ಸಿದ್ಧಿಗಳಾಗುತ್ತವೆ.

ಹೀಗೆ ಶಾಸ್ತ್ರವಿಧಿಗಳನ್ನು ಅನುಸರಿಸಲಾಗದೇ ಕೇವಲ ಶ್ರದ್ಧೆಯಿಂದ ಪೂಜೆ, ಯಜ್ಞ ಮುಂತಾದುವುಗಳನ್ನು ಮಾಡುವ ಮನುಷ್ಯರು ಯಾವ ಗುಂಪಿಗೆ ಸೇರುತ್ತಾರೆ? ಶ್ರದ್ಧಾವಂತರಾದ ಅವರಲ್ಲಿ ಸಾತ್ವಿಕನಿಷ್ಠೆಯು

ಇದೆ ಎಂದು ತಿಳಿಯಬೇಕೇ? ರಾಜಸನಿಷ್ಠೆಯು ಇದೆ ಎಂದು ತಿಳಿಯಬೇಕೇ? ಅಥವಾ ತಾಮಸನಿಷ್ಠೆಯು ಇದೆ ಎಂದು ತಿಳಿಯಬೇಕೇ? ಅವರು ಯಾವ ಗುಂಪಿಗೆ ಸೇರಿದವರಾಗಿರುತ್ತಾರೆ? )

o o o

ಯಾವ ಸಾಧಾರಣಮನುಷ್ಯರು ಶ್ರುತಿ-ಸ್ಮೃತಿ ಮುಂತಾದ ಶಾಸ್ತ್ರ ವಿಧಾನಗಳನ್ನು ಬಿಟ್ಟು ಆಸ್ತಿಕ್ಯಬುದ್ಧಿಯಿಂದ ಕೂಡಿದವರಾಗಿ ದೇವತೆಗಳನ್ನು ಪೂಜಿಸುತ್ತಾರೆಯೋ ಎಂದರೆ ಶ್ರುತಿ-ಸ್ಮೃತಿರೂಪವಾದ ಯಾವ ಶಾಸ್ತ್ರ ವಿಧಾನವನ್ನೂ ತಿಳಿಯದೇ ಹಿರಿಯರ ವ್ಯವಹಾರಗಳನ್ನು ನೋಡಿ ಅವನ್ನೇ ಆದರ್ಶವನ್ನಾಗಿ ಭಾವಿಸಿ, ದೇವತೆಗಳೇ ಮುಂತಾದವರನ್ನು ಪೂಜಿಸುತ್ತಾರೆಯೋ ಅವರ ನಿಷ್ಠೆಯು ಯಾವುದು? ಅವರ ಪೂಜೆಯು ಸಾತ್ತ್ವಿಕವೇ? ರಾಜಸವೇ ಅಥವಾ ತಾಮಸವೇ?

ಯಾರು ಶಾಸ್ತ್ರವಿಧಿಯನ್ನು ತಿಳಿದಿದ್ದರೂ ಕೂಡ ಅದನ್ನು ಬಿಟ್ಟು ಅವಿಧಿಪೂರ್ವಕವಾಗಿ ದೇವತೆಗಳೇ ಮುಂತಾದವರನ್ನು ಪೂಜಿಸುತ್ತಾರೆಯೋ ಅಂತಹವರಿಗೆ **ಯೇ ಶಾಸ್ತ್ರವಿಧಿಮುತ್ಸೃಜ್ಯ ಯಜನ್ತೇ**–ಎಂಬಲ್ಲಿ ಗ್ರಹಣವಿಲ್ಲ. ಏಕೆಂದರೆ : ಶ್ರದ್ಧೆಯಿಂದ ಕೂಡಿದವರು ಎಂಬ ವಿಶೇಷಣವನ್ನು ಅವರಿಗೆ ಹೇಳಿದೆ. ದೇವಾದಿ ಪೂಜೆಗಳನ್ನು ವಿಧಿಸುವ ಯಾವುದಾದರೂ ಶಾಸ್ತ್ರವನ್ನು ಹಿಡಿದಿದ್ದರೂ ಕೂಡ ಅದನ್ನು ಬಿಟ್ಟು ಆ ಶಾಸ್ತ್ರದ ಮೂಲಕ ವಿಧಿಸಲ್ಪಟ್ಟಿರುವ ದೇವಾದಿಗಳ ಪೂಜೆಯಲ್ಲಿ ಶ್ರದ್ಧೆಯಿಂದ ಕೂಡಿದವರಾಗಿ ತೊಡಗುತ್ತಾರೆ–ಎಂದು ಕಲ್ಪಿಸಿಕೊಳ್ಳಲು ಸಾಧ್ಯವಿಲ್ಲ. (ಶಂ. ಭಾ.)

ಶಾಸ್ತ್ರವಿಹಿತವಲ್ಲದ ಕರ್ಮವು ಆಸುರವಾಗಿರುವುದರಿಂದ ಅದು ನಿಷ್ಫಲವಾಗುತ್ತದೆ ಎಂಬುದನ್ನೂ, ಶಾಸ್ತ್ರವಿಹಿತವಾದ ಕರ್ಮವು ಗುಣಭೇದದಿಂದ ಮೂರು ಬಗೆಯಾಗಿದೆ ಎಂಬುದನ್ನೂ, ಶಾಸ್ತ್ರಸಿದ್ಧವಾದ ಕರ್ಮದ ಲಕ್ಷಣವನ್ನೂ ಇಲ್ಲಿ ಹೇಳಲಾಗಿದೆ. ಅವುಗಳಲ್ಲಿ ಶಾಸ್ತ್ರವಿಹಿತವಲ್ಲದುದು ನಿಷ್ಫಲ ಎಂಬುದನ್ನರಿಯದೇ ಶಾಸ್ತ್ರವಿಹಿತವಲ್ಲದ ಆದರೆ ಶ್ರದ್ಧೆಯಿಂದ ಕೂಡಿದ ಯಾಗವೇ ಮುಂತಾದುವುಗಳಲ್ಲಿ ಸತ್ತ್ವವೇ ಮುಂತಾದ ಕಾರಣದಿಂದ ಫಲ

ಭೇದಗಳುಂಟೇ?–ಎಂಬುದನ್ನು ತಿಳಿಯುವ ಇಚ್ಛೆಯಿಂದ ಹೀಗೆ ಪ್ರಶ್ನೆ ಮಾಡುತ್ತಾನೆ. ಶಾಸ್ತ್ರವಿಧಿಯನ್ನು ಬಿಟ್ಟು ಶ್ರದ್ಧೆಯಿಂದ ಯಾರು ಯಾಗ ಮಾಡುತ್ತಾರೆಯೋ ಅವರ ನಿಷ್ಠೆಯು ಯಾವುದು? ನಿಷ್ಠೆ ಎಂದರೆ ಸ್ಥಿತಿ. **ಸ್ಥೀಯತೇ ಅಸ್ಮಿನ್ ಇತಿ ಸ್ಥಿತಿಃ**–ಸತ್ತ್ವ ಮುಂತಾದುವುಗಳೇ ನಿಷ್ಠೆ ಎಂದು ಕರೆಯಲ್ಪಟ್ಟಿವೆ. ಅವರಿಗೆ ನಿಷ್ಠೆಯು (ಸ್ಥಿತಿಯು) ಸತ್ತ್ವದಲ್ಲಿರುತ್ತದೆಯೇ? ರಜಸ್ಸಿನಲ್ಲಿರುವುದೇ ಅಥವಾ ತಮಸ್ಸಿನಲ್ಲಿರುವುದೇ? (ರಾ. ಭಾ.)

ಈ ಅಧ್ಯಾಯದಲ್ಲಿ ಗುಣಭೇದಗಳನ್ನು ವಿಸ್ತರಿಸುತ್ತಾನೆ. **ಶಾಸ್ತ್ರವಿಧಿಂ ಉತ್ಸೃಜ್ಯ** ಎಂದರೆ ಶಾಸ್ತ್ರವಿಧಿಯನ್ನು ಅರಿಯದೆ ಎಂದು ಅರ್ಥ.

**ವೇದಃ ಕೃತ್ಸ್ನೋಽಧಿಗನ್ತವ್ಯಃ ಸರಹಸ್ಯೋ ದ್ವಿಜನ್ಮನಾ ।**

'ದ್ವಿಜನು ರಹಸ್ಯಸಹಿತವಾಗಿ ಎಲ್ಲ ವೇದಗಳನ್ನೂ ಅಧ್ಯಯನಮಾಡ ಬೇಕು'–ಎಂಬುದು ಶಾಸ್ತ್ರವಿಧಿ. ಶಾಸ್ತ್ರವನ್ನರಿಯದವರು ಈ ವಿಧಿಯನ್ನು ಬಿಟ್ಟವರೇ ಆಗುತ್ತಾರೆ, ಅಲ್ಲವೇ? **ಯೇ ವೈ ವೇದಂ ನ ಪಠನ್ತೇ ನ ಚಾರ್ಥಂ ವೇದೋಜ್ಝಾಂಸ್ತಾನ್ವಿದ್ಧಿ ಸಾನೂನಬುದ್ಧೀನ್** ಎಂದು ಮಾಧುಚ್ಛಂದಸಶ್ರುತಿಯ ಪ್ರಕಾರವೂ ಉತ್ಸೃಜ್ಯ ಎಂಬುದಕ್ಕೆ ಮೇಲೆ ಹೇಳಿದ ಅರ್ಥವನ್ನೇ ಹೇಳಬೇಕಾಗುತ್ತದೆ. ಹಾಗಲ್ಲದೆ ಅದಕ್ಕೆ ವೇದವಿಧಾನವನ್ನು ಅದರಲ್ಲಿ ಅಪ್ರಾಮಾಣ್ಯಬುದ್ಧಿಯಿಂದ ತೊರೆದು ಎಂದು ಅರ್ಥಮಾಡ ಬಾರದು. (ಇಲ್ಲಿ ಅಪ್ರಾಮಾಣ್ಯಬುದ್ಧಿಯಿಂದ ವೇದವಿಧಾನವನ್ನು ತೊರೆದ ಬೌದ್ಧರೇ ಮುಂತಾದವರ ನಿಷ್ಠೆಯನ್ನು ಕುರಿತು ಅರ್ಜುನನು ಪ್ರಶ್ನಿಸುತ್ತಿಲ್ಲ.) ಅಪ್ರಾಮಾಣ್ಯಬುದ್ಧಿಯಿಂದ ಶಾಸ್ತ್ರವಿಧಾನವನ್ನು ತೊರೆದು ಎಂಬ ಅರ್ಥವೇ ಸಮ್ಮತವಾಗಿದ್ದರೆ **ತಾಮಸಃ** ಎಂದೇ ಹೇಳಬೇಕಾಗಿತ್ತು. ಸಾತ್ತ್ವಿಕ, ರಾಜಸ, ತಾಮಸ ಎಂದು ಮೂರು ಬಗೆಯ ವಿಭಾಗಮಾಡಿ ಹೇಳಬೇಕಾಗಿರಲಿಲ್ಲ. ಸಾತ್ತ್ವಿಕವಾಗಿದ್ದರೆ ಅವರು ಶಾಸ್ತ್ರವನ್ನು ತೊರೆದವರಾಗುವುದಿಲ್ಲ. ವೇದವಿರುದ್ಧವಾದುದು ಧರ್ಮವೇ ಅಲ್ಲ. **ವೇದೋಽಖಿಲೋ ಧರ್ಮ ಮೂಲಮ್ ಸ್ಮೃತಿಶೀಲೇ ಚ ತದ್ವಿದಾಮ್ । ವೇದಪ್ರಣಿಹಿತೋ ಧರ್ಮಃ ॥** (ಮ. ಭಾ.)

ಶ್ರೀಭಗವಾನುವಾಚ :

ಓಂ ತ್ರಿವಿಧಾ ಭವತಿ ಶ್ರದ್ಧಾ ದೇಹಿನಾಂ ಸಾ ಸ್ವಭಾವಜಾ ।
ಸಾತ್ತ್ವಿಕೀ ರಾಜಸೀ ಚೈವ ತಾಮಸೀ ಚೇತಿ ತಾಂ ಶೃಣು ॥೨॥

ಶ್ರೀಭಗವಂತನು ಹೇಳುತ್ತಾನೆ :

ದೇಹಿಗಳಿಗೆ ಸ್ವಾಭಾವಿಕವಾಗಿ ಹುಟ್ಟುವ ಈ ಶ್ರದ್ಧೆಯು ಸಾತ್ತ್ವಿಕ, ರಾಜಸ ಮತ್ತು ತಾಮಸಗಳೆಂಬ ಮೂರು ಬಗೆಯಾಗಿರುತ್ತದೆ. ಅದನ್ನು ಹೇಳುವೆನು, ಕೇಳು.

* * *

(ಪ್ರಾಣಿಗಳಲ್ಲಿ ಎಂದರೆ ಮನುಷ್ಯರೂಪಪ್ರಾಣಿಗಳಲ್ಲಿ ಮೂರು ವಿಧವಾದ ಶ್ರದ್ಧೆಗಳು ಅವರ ಸ್ವಭಾವಾನುಗುಣವಾಗಿರುತ್ತವೆ. ಎಂದರೆ ಸತ್ತ್ವವು ಅವರ ಸ್ವಾಭಾವಿಕಗುಣವಾದರೆ ಅವರಲ್ಲಿ ಸಾತ್ತ್ವಿಕೀಶ್ರದ್ಧೆಯಿರುತ್ತದೆ. ರಜಸ್ಸು ಮನುಷ್ಯನ ಸ್ವಾಭಾವಿಕಗುಣವಾದರೆ ರಾಜಸೀಶ್ರದ್ಧೆಯಿರುತ್ತದೆ. ತಮಸ್ಸು ಸ್ವಾಭಾವಿಕಗುಣವಾದರೆ ತಾಮಸೀಶ್ರದ್ಧೆಯಿರುತ್ತದೆ. ಸ್ವಾಭಾವಿಕಗುಣ ಎಂದರೆ ಹುಟ್ಟಿನೊಡನೆಯೇ ಸೇರಿಬಂದ ಗುಣ. ಗುಣಗಳಿಗೆ ಅನುಗುಣವಾಗಿ ಅವನು ಹುಟ್ಟುತ್ತಾನೆ. ಮೂರು ಗುಣಗಳಲ್ಲಿ ಯಾವುದಾದರೊಂದು ಅವನ ಬೆನ್ನು ಬಿಡದೇ ಅಂಟಿಕೊಂಡಿರುತ್ತದೆ. ಆದುದರಿಂದ ಅವನಲ್ಲಿರುವ ಗುಣಕ್ಕೆ ಅನುಗುಣವಾಗಿ ಅವನಿಗೆ ಆಯಾ ಗುಣದ ಶ್ರದ್ಧೆಯಿರುತ್ತದೆ. ಆದುದರಿಂದಲೇ ಆ ಶ್ರದ್ಧೆಗಳನ್ನು ಇನ್ನೂ ವಿಸ್ತಾರವಾಗಿ ಹೇಳುತ್ತೇನೆ ಕೇಳು ; ಎನ್ನುತ್ತಾನೆ ಶ್ರೀಕೃಷ್ಣ.)

O O O

ಶ್ರದ್ಧೆಯು ಮೂರು ಬಗೆಯಾಗಿರುತ್ತದೆ. ಯಾವ ನಿಷ್ಠೆಯ ಬಗೆಗೆ ನೀನು ಕೇಳಿದೆಯೋ ಸ್ವಭಾವಜನ್ಯವಾದ ಆ ಶ್ರದ್ಧೆಯು ಮೂರು ಬಗೆಯಾಗಿರುತ್ತದೆ. ಸ್ವಭಾವಜನ್ಯವಾದ ಶ್ರದ್ಧೆಯೆಂದರೆ ಜನ್ಮಾಂತರದಲ್ಲಿ ಮಾಡಲ್ಪಟ್ಟ ಧರ್ಮ-ಅಧರ್ಮ ಮುಂತಾದುವುಗಳ ಯಾವ ಸಂಸ್ಕಾರವು ಮರಣ ಕಾಲದಲ್ಲಿ ಅಭಿವ್ಯಕ್ತವಾಗುತ್ತದೆಯೋ ಅವುಗಳ ಸಮುದಾಯವೇ ಸ್ವಭಾವ. ಅವುಗಳಲ್ಲಿ ಸಾತ್ತ್ವಿಕೀಶ್ರದ್ಧಾ ಎಂದರೆ ಸತ್ತ್ವಗುಣದಿಂದ ಉಂಟಾದುದು. ದೇವಾದಿಪೂಜಾವಿಷಯಕವಾದುದು. ರಾಜಸೀಶ್ರದ್ಧಾ ಎಂದರೆ ರಜೋಗುಣ

ದಿಂದ ಉಂಟಾದುದು. ಯಕ್ಷ-ರಾಕ್ಷಸಾದಿ ಪೂಜಾವಿಷಯಕವಾದುದು. ತಾಮಸೀಶ್ರದ್ಧೆಯು ತಮಸ್ಸಿನಿಂದ ಉತ್ಪನ್ನವಾದುದು. ಪ್ರೇತ-ಪಿಶಾಚಾದಿ ಪೂಜಾವಿಷಯಕವಾದುದು. ಹೀಗೆ ಮೂರು ಬಗೆಯಾಗಿರುವ ಶ್ರದ್ಧೆಯನ್ನು ಹೇಳುತ್ತೇನೆ, ಕೇಳು. (ಶಂ. ಭಾ.)

ಶಾಸ್ತ್ರೀಯಶ್ರದ್ಧೆಯು ಮೂರು ಬಗೆಯಾಗಿರುವುದನ್ನು ಇಲ್ಲಿ ಹೇಳುತ್ತಾನೆ. ಎಲ್ಲ ದೇಹಿಗಳಿಗೂ ಶ್ರದ್ಧೆಯು ಮೂರು ಬಗೆಯಾಗಿರುತ್ತದೆ. ಅದು ಸ್ವಭಾವದಿಂದುಂಟಾದುದು. ಸ್ವಭಾವ ಎಂದರೆ ತನಗೆ ಅಸಾಧಾರಣವಾಗಿರುವ ಭಾವ. ಪ್ರಾಚೀನವಾಸನೆಯಿಂದ ಉಂಟಾದ ಆಯಾ ರುಚಿವಿಶೇಷ. ಯಾವುದ ರಲ್ಲಿ ರುಚಿಯಿರುತ್ತದೆಯೋ ಅದರಲ್ಲಿ ಶ್ರದ್ಧೆಯುಂಟಾಗುತ್ತದೆ. ಶ್ರದ್ಧೆಯೆಂದರೆ : ಇದು ತನ್ನ ಅಭಿಮತವನ್ನು ಸಾಧಿಸಿಕೊಡುತ್ತದೆ–ಎಂಬ ವಿಶ್ವಾಸದೊಡನೆ ಸಾಧನೆಯಲ್ಲಿ ತ್ವರೆಗೊಳ್ಳುವುದು. ವಾಸನೆ, ರುಚಿ ಮತ್ತು ಶ್ರದ್ಧೆ ಎಂಬ ಆತ್ಮಧರ್ಮಗಳಾಗಿರುವ ವಾಸನೆಯೇ ಮುಂತಾದುವುಗಳನ್ನು ಉಂಟು ಮಾಡುವ ದೇಹೇಂದ್ರಿಯಾಂತಃಕರಣಗಳಲ್ಲಿರುವ ಧರ್ಮಗಳು. ಕಾರ್ಯ ದಿಂದಲೇ ನಿರೂಪಿಸಲ್ಪಡಬೇಕಾದುವುಗಳು ಸತ್ತ್ವಾದಿಗುಣಗಳು. ಸತ್ತ್ವವೇ ಮುಂತಾದ ಗುಣವುಳ್ಳ ದೇಹವೇ ಮುಂತಾದುವುಗಳಲ್ಲಿನ ಅನುಭವದಿಂದ ಉಂಟಾಗತಕ್ಕುವುಗಳು. ಆದುದರಿಂದ ಶ್ರದ್ಧೆಯು ಸಾತ್ತ್ವಿಕೀ-ರಾಜಸೀ-ತಾಮಸೀ–ಎಂದು ಮೂರು ಬಗೆ. ಆ ಶ್ರದ್ಧೆಯನ್ನು ಹೇಳುವೆನು, ಕೇಳು. ಆ ಶ್ರದ್ಧೆಯ ಸ್ವಭಾವವನ್ನೂ ಹೇಳುವೆನು ಕೇಳು. (ರಾ. ಭಾ.)

ಆದುದರಿಂದ (ವೇದವಿಧಿಯನ್ನು ಅರಿಯದವರ ನಿಷ್ಠೆಯ ಬಗೆಗೆ ಅರ್ಜುನನು ಕೇಳಿರುವುದರಿಂದ) ಆ ಶ್ರದ್ಧೆಯನ್ನು ವಿಭಾಗಮಾಡಿ ಇಲ್ಲಿ ಭಗವಂತನು ಹೇಳುತ್ತಾನೆ. (ಮ. ಭಾ.)

**ಓಂ ಸತ್ತ್ವಾನುರೂಪಾ ಸರ್ವಸ್ಯ ಶ್ರದ್ಧಾ ಭವತಿ ಭಾರತ ।**
**ಶ್ರದ್ಧಾಮಯೋಽಯಂ ಪುರುಷೋ ಯೋ ಯಚ್ಛ್ರದ್ಧಃ ಸ ಏವ ಸಃ ॥**

ಭಾರತ! ಪ್ರತಿಯೊಬ್ಬನ ಶ್ರದ್ಧೆಯೂ ಸತ್ತ್ವಕ್ಕೆ ಅನುಗುಣವಾಗಿರುತ್ತದೆ. ಈ ಪುರುಷನು ಶ್ರದ್ಧಾಮಯನು. ಯಾವನು ಯಾವ ಶ್ರದ್ಧೆಯುಳ್ಳವನೋ ಅವನು ಅದೇ ಆಗಿರುತ್ತಾನೆ.

* * *

**(ಶ್ರದ್ಧಾ ಸಾ ಸ್ವಭಾವಜಾ** = ಶ್ರದ್ಧೆಯು ಸ್ವಭಾವದಿಂದಲೇ ಹುಟ್ಟಿದುದು ಎಂದು ಹಿಂದಿನ ಶ್ಲೋಕದಲ್ಲಿ ಹೇಳಿದುದನ್ನೇ ಇಲ್ಲಿ ಪರ್ಯಾಯಾಂತರದಿಂದ ಶ್ರೀಕೃಷ್ಣನು ಸ್ವಲ್ಪ ವಿವರಣೆಯೊಡನೆ ನಿರೂಪಿಸುತ್ತಾನೆ. ಪ್ರತಿಯೊಬ್ಬನ ಶ್ರದ್ಧೆಯೂ ಅವನ ಸತ್ತ್ವಕ್ಕೆ ಅನುರೂಪವಾಗಿರುತ್ತದೆ. ಸತ್ತ್ವ ಎಂದರೆ ಅಂತಃಕರಣ. ತಮ್ಮ ಅಂತಃಕರಣವನ್ನು ಅನುಸರಿಸಿ ಇರುತ್ತದೆ ಎಲ್ಲ ಪ್ರಾಣಿಗಳ ಶ್ರದ್ಧೆ. ಅಂತಃಕರಣವು ಹೇಗಿರುತ್ತದೆ? ಎಂದರೆ ಸ್ವಭಾವಾನುಗುಣವಾಗಿರುತ್ತದೆ. ಸ್ವಭಾವವು ಹೇಗೆ ಉಂಟಾಗುತ್ತದೆ? ಎಂದರೆ ಸ್ವಭಾವವು ಕರ್ಮಜನ್ಯ. ಹುಟ್ಟುವಾಗಲೇ ಸೇರಿಕೊಂಡು ಬರುತ್ತದೆ. ಪಾಪ-ಪುಣ್ಯಕರ್ಮ ಫಲಗಳನ್ನನುಸರಿಸಿ ಹುಟ್ಟುವ ಪ್ರಾಣಿಯ (ಮನುಷ್ಯನ) ಅಂತಃಕರಣವು ಶುದ್ಧವಾಗಿರುವುದಿಲ್ಲ. ಮೂರು ಗುಣಗಳಲ್ಲಿ ಯಾವುದಾದರೊಂದು ಗುಣ ದಿಂದ ಆವೃತವಾಗಿರುತ್ತದೆ. ಆ ಗುಣಕ್ಕೆ ಅನುಸಾರವಾಗಿ ಅವನ ಶ್ರದ್ಧೆ ಯಿರುತ್ತದೆ. ಆದುದರಿಂದಲೇ–**ಸತ್ತ್ವಾನುರೂಪಾ ಸರ್ವಸ್ಯ ಶ್ರದ್ಧಾ ಭವತಿ**– ಅಂತಃಕರಣದಲ್ಲಿರುವ ಗುಣಕ್ಕೆ ಅನುಸಾರವಾಗಿ ಪ್ರತಿಯೊಬ್ಬನ ಶ್ರದ್ಧೆಯೂ ಇರುತ್ತದೆ, ಎನ್ನುತ್ತಾನೆ ಶ್ರೀಕೃಷ್ಣ.

**ಶ್ರದ್ಧಾಮಯೋಽಯಂ ಪುರುಷಃ** = ಪುರುಷನು ಯಾವಾಗಲೂ ಶ್ರದ್ಧಾಮಯನು. ಅದು ಯಾವ ಶ್ರದ್ಧೆಯಾದರೂ ಆಗಬಹುದು. ಒಬ್ಬನು ಸಾತ್ತ್ವಿಕದೇವತೆಯನ್ನು ಶ್ರದ್ಧೆಯಿಂದ ಪೂಜಿಸುತ್ತಾನೆ. ಮತ್ತೊಬ್ಬನು ರಾಜಸದೇವತೆಯನ್ನು ಶ್ರದ್ಧೆಯಿಂದ ಪೂಜಿಸುತ್ತಾನೆ. ಇನ್ನೊಬ್ಬನಿಗೆ ಭೂತ-ಪ್ರೇತಗಳ ಮೇಲೆ ಶ್ರದ್ಧೆಯು ಅಪಾರವಾಗಿರುತ್ತದೆ.

**ಯೋ ಯಚ್ಛ್ರದ್ಧಃ ಸ ಏವ ಸಃ** = ಯಾವನಿಗೆ ಯಾವುದರಲ್ಲಿ ಶ್ರದ್ಧೆ ಯಿರುವುದೋ ಆ ಜೀವನು ಅದೇ ಆಗಿರುತ್ತಾನೆ. ಅರ್ಥಾತ್ ಒಬ್ಬನಿಗೆ ಸಾತ್ತ್ವಿಕದೇವತೆಗಳಲ್ಲಿ ಎಂದರೆ ನಾರಾಯಣ, ಶ್ರೀರಾಮ, ದಕ್ಷಿಣಾಮೂರ್ತಿ ಮುಂತಾದ ದೇವತೆಗಳಲ್ಲಿಯೇ ಶ್ರದ್ಧೆಯಿದ್ದರೆ ಅವನು ನಾರಾಯಣ-ಶ್ರೀರಾಮ-ದಕ್ಷಿಣಾಮೂರ್ತಿಗಳ ಸ್ವಭಾವಗುಣವನ್ನೇ ಹೊಂದುತ್ತಾನೆ. ಅವ ನನ್ನು ಸಾತ್ತ್ವಿಕಶ್ರದ್ಧೆಯವನೆಂದು ತಿಳಿಯಬೇಕು. ರಾಜಸದೇವತೆಗಳಲ್ಲಿ ಹೆಚ್ಚು ಆಸಕ್ತಿ ಅಥವಾ ಶ್ರದ್ಧೆಯಿದ್ದರೆ ಅಂತಹವನನ್ನು ರಾಜಸಶ್ರದ್ಧೆಯುಳ್ಳವನೆಂದು ತಿಳಿಯಬೇಕು. ಅವನು ರಾಜಸದೇವತೆಗಳ ಗುಣ-ಸ್ವಭಾವಗಳನ್ನೇ ಹೊಂದು

ತ್ತಾನೆ. ಒಬ್ಬನಿಗೆ ಭೂತ-ಪ್ರೇತಗಳಲ್ಲಿ ಶ್ರದ್ಧೆಯಿದ್ದರೆ ಅಂತಹವನನ್ನು ತಾಮಸಶ್ರದ್ಧೆಯುಳ್ಳವನೆಂದು ತಿಳಿಯಬೇಕು. ತಾಮಸಶ್ರದ್ಧೆಯವನಿಗೆ ತಾಮಸದೇವತೆಗಳಾದ ಭೂತ-ಪ್ರೇತಾದಿಗಳ ಗುಣ-ಸ್ವಭಾವಗಳೇ ಇರುತ್ತವೆ.

'ಯಜನ್ತೇ ಶ್ರದ್ಧಯಾನ್ವಿತಾಃ' 'ಶ್ರದ್ಧಾಯುಕ್ತರಾಗಿ ಪೂಜಿಸುತ್ತಾರೆ'–ಎಂದು ಈ ಹಿಂದೆ ಅರ್ಜುನನು ಹೇಳಿರುವುದರಿಂದ ಸತ್ತ್ವ-ರಜಸ್ತಮಸ್ಸುಗಳ ಶ್ರದ್ಧೆಯನ್ನು ವಿಂಗಡಿಸಿ ಹೇಳಲು ಶ್ರೀಕೃಷ್ಣನು ಆಯಾ ಗುಣಗಳಿಗೆ ಸಂಬಂಧಿಸಿದ ಪೂಜೆಗಳ ವಿಧಾನವನ್ನೇ ಹೇಳುತ್ತಾನೆ. ಹೂವಿನಿಂದ ಮರವನ್ನೂ, ಮಾತಿನಿಂದ ಮನಸ್ಸನ್ನೂ, ಸದ್ಯದ ಭೋಗದಿಂದ ಪೂರ್ವಕರ್ಮವನ್ನೂ ತಿಳಿಯಲು ಸಾಧ್ಯವಾಗುವಂತೆ, ಮನುಷ್ಯನು ತನ್ನ ಪೂಜೆಗಾಗಿ ಆಯ್ದುಕೊಳ್ಳುವ ದೇವತೆಗಳಿಂದಲೂ ಅವನ ಶ್ರದ್ಧೆ ಮತ್ತು ಸ್ವಭಾವಗಳನ್ನು ವಿಂಗಡಿಸಿ ತಿಳಿದುಕೊಳ್ಳಬಹುದಾಗಿದೆ.)

o o o

ಎಲ್ಲ ಪ್ರಾಣಿಗಳ ಶ್ರದ್ಧೆಯು ಅವರ ಬೇರೆ ಬೇರೆ ಸಂಸ್ಕಾರಗಳಿಂದ ಕೂಡಿದ ಅಂತಃಕರಣಕ್ಕೆ ಅನುರೂಪವಾಗಿರುತ್ತದೆ. ಇದು ಹೀಗಿದ್ದರೆ ಅದರಿಂದ ಏನು ಸಿದ್ಧವಾಗುತ್ತದೆಂದರೆ : ಈ ಪುರುಷನು ಎಂದರೆ ಸಂಸಾರಿಯಾದ ಜೀವನು ಶ್ರದ್ಧಾಮಯನು. ಏಕೆಂದರೆ ಯಾವ ಜೀವಕ್ಕೆ ಎಂತಹ ಶ್ರದ್ಧೆಯಿದೆಯೋ ಅವನು ಅದೇ ಆಗುತ್ತಾನೆ ಎಂದರೆ ಆ ಶ್ರದ್ಧೆಗೆ ಅನುರೂಪನೇ ಆಗುತ್ತಾನೆ. (ಶಂ. ಭಾ.)

ಸತ್ತ್ವ ಎಂದರೆ ಅಂತಃಕರಣ. ಎಲ್ಲ ಪುರುಷರಿಗೂ ಅವರ ಅಂತಃಕರಣಕ್ಕೆ ಅನುರೂಪವಾಗಿರುವುದೇ ಶ್ರದ್ಧೆ. ಅಂತಃಕರಣವು ಯಾವ ಗುಣದಿಂದ ಕೂಡಿರುತ್ತದೆಯೋ ಆ ವಿಷಯವಾದ ಶ್ರದ್ಧೆಯುಂಟಾಗುತ್ತದೆ. (ಸತ್ತ್ವಶಬ್ದವು ಹಿಂದೆ ಹೇಳಿದ ದೇಹೇಂದ್ರಿಯ ಮುಂತಾದುವುಗಳನ್ನು ತೋರಿಸುತ್ತದೆ.) ಈ ಪುರುಷನು ಶ್ರದ್ಧಾಮಯನು ಎಂದರೆ ಶ್ರದ್ಧೆಯ ಪರಿಣಾಮವಾದವನು. ಪುಣ್ಯಕರ್ಮವಿಷಯದಲ್ಲಿ ಶ್ರದ್ಧೆಯುಳ್ಳವನಾಗಿದ್ದರೆ ಪುಣ್ಯಕರ್ಮಫಲದಿಂದ ಕೂಡಿದವನಾಗುತ್ತಾನೆ. ಆದುದರಿಂದ ಫಲಸಂಯೋಗವು ಶ್ರದ್ಧಾಪ್ರಧಾನವಾದುದು. ಮುಂದಿನ ಶ್ಲೋಕದಲ್ಲಿ ಇದನ್ನೇ ವಿವರಿಸಲಾಗಿದೆ. (ರಾ. ಭಾ.)

**ಸತ್ತ್ವಾನುರೂಪಾ ಭವತಿ** = ಚಿತ್ತಕ್ಕೆ ಅನುರೂಪವಾಗಿರುತ್ತದೆ. **ಯೋ ಯಚ್ಛ್ರದ್ಧಃ ಸ ಏವ ಸಃ** = ಸಾತ್ತ್ವಿಕಶ್ರದ್ಧೆಯುಳ್ಳವನು ಸಾತ್ತ್ವಿಕನು. ರಾಜಸಶ್ರದ್ಧೆಯುಳ್ಳವನು ರಾಜಸನು. ತಾಮಸಶ್ರದ್ಧೆಯುಳ್ಳವನು ತಾಮಸನು.
(ಮ. ಭಾ.)

**ಓಂ ಯಜನ್ತೇ ಸಾತ್ತ್ವಿಕಾ ದೇವಾನ್ಯಕ್ಷರಕ್ಷಾಂಸಿ ರಾಜಸಾಃ ।**
**ಪ್ರೇತಾನ್ಭೂತಗಣಾಂಶ್ಚಾನ್ಯೇ ಯಜನ್ತೇ ತಾಮಸಾ ಜನಾಃ ॥೪॥**

ಸಾತ್ತ್ವಿಕರು ದೇವತೆಗಳನ್ನು ಪೂಜಿಸುತ್ತಾರೆ. ರಾಜಸರು ಯಕ್ಷ-ರಾಕ್ಷಸರನ್ನು ಪೂಜಿಸುವರು. ಮಿಕ್ಕ ತಾಮಸಜನರು ಪ್ರೇತಗಳನ್ನೂ, ಭೂತ ಗಳನ್ನೂ ಪೂಜಿಸುವರು.

* * *

(ಸಾತ್ತ್ವಿಕರು ದೇವತೆಗಳನ್ನು ಎಂದರೆ ಸೂರ್ಯ, ಅಗ್ನಿ, ವಾಯು, ಇಂದ್ರ, ವರುಣ, ಯಮ, ಅಶ್ವಿನೀಕುಮಾರರು, ವಿಶ್ವೇದೇವತೆಗಳು ಮುಂತಾ ದವರನ್ನು ಪೂಜಿಸುತ್ತಾರೆ. ಅಥವಾ ಆ ದೇವತೆಗಳನ್ನು ಪೂಜಿಸುವವರು ಸಾತ್ತ್ವಿಕರು ಮತ್ತು ಸಾತ್ತ್ವಿಕಶ್ರದ್ಧೆಯುಳ್ಳವರು ಎಂದು ತಿಳಿಯಬೇಕು. ರಾಜಸರು ಯಕ್ಷರು ಎಂದರೆ ಕುಬೇರನ ಗಣದವರು ಮೊದಲಾದವರನ್ನೂ, ರಾಕ್ಷಸರು ಎಂದರೆ ವಿರೋಚನ, ವಿಪ್ರಚಿತ್ತಿ ಮೊದಲಾದವರನ್ನೂ ಪೂಜಿಸುತ್ತಾರೆ. ಇಂತಹ ದೇವತೆಗಳನ್ನು ಪೂಜಿಸುವವರು ರಾಜಸಶ್ರದ್ಧೆಯುಳ್ಳವರೆಂದು ತಿಳಿದುಕೊಳ್ಳಬೇಕು. ಉಳಿದವರು ಪ್ರೇತಗಳನ್ನೂ, ಭೂತಗಣಗಳನ್ನೂ ಪೂಜಿಸುತ್ತಾರೆ. ಇವರು ತಾಮಸರು. ಅಥವಾ ಪ್ರೇತಗಳನ್ನೂ, ಭೂತಗಣಗಳನ್ನೂ ಪೂಜಿಸುವವರನ್ನು ತಾಮಸಶ್ರದ್ಧೆಯವರೆಂದು ತಿಳಿಯ ಬೇಕು. ಅವರವರ ಸ್ವಭಾವಕ್ಕೆ ಅನುಗುಣವಾದ ದೇವತೆಯಲ್ಲಿಯೇ ಅವರಿಗೆ ಭಕ್ತಿಯು ಹುಟ್ಟುತ್ತದೆ. ಅವರು ಯಾವ ದೇವತೆಯನ್ನು ಪೂಜಿಸುತ್ತಿದ್ದಾ ರೆಂಬುದನ್ನು ತಿಳಿದುಕೊಂಡರೆ ಅವರ ಗುಣವನ್ನು ಸಾಮಾನ್ಯವಾಗಿ ಊಹಿಸಬಹುದು.)

o o o

**ಸಾತ್ತ್ವಿಕಾಃ** = ಸತ್ತ್ವನಿಷ್ಠರಾದವರು ದೇವತೆಗಳನ್ನು ಪೂಜಿಸುತ್ತಾರೆ. ರಾಜಸರು ಯಕ್ಷರನ್ನೂ ಮತ್ತು ರಾಕ್ಷಸರನ್ನೂ, ಉಳಿದವರು ಎಂದರೆ ತಾಮ

ಸರು ಪ್ರೇತಗಳನ್ನೂ ಮತ್ತು ಸಪ್ತಮಾತೃಕೆಯರೇ ಮುಂತಾದ ಭೂತಗಣಗಳನ್ನೂ ಪೂಜಿಸುತ್ತಾರೆ. (ಶಂ. ಭಾ.)

ಸತ್ತ್ವಗುಣಪ್ರಚುರರಾದ ಮನುಷ್ಯರು ಸಾತ್ತ್ವಿಕಶ್ರದ್ಧೆಯಿಂದ ಕೂಡಿದವರಾಗಿ ದೇವತೆಗಳನ್ನು ಪೂಜಿಸುತ್ತಾರೆ. ದುಃಖಮಿಶ್ರವಲ್ಲದ ಉತ್ಕೃಷ್ಟವಾದ ಸುಖಕ್ಕೆ ಕಾರಣರಾದ ದೇವತೆಗಳನ್ನು ಪೂಜಿಸುವ ವಿಷಯವಾದ ಶ್ರದ್ಧೆಯು ಸಾತ್ತ್ವಿಕೀಶ್ರದ್ಧಾ ಎನಿಸುತ್ತದೆ. ರಾಜಸರು ಯಕ್ಷ-ರಾಕ್ಷಸರನ್ನು ಪೂಜಿಸುತ್ತಾರೆ. ಉಳಿದವರಾದ ತಾಮಸರು ಪ್ರೇತಗಳನ್ನೂ, ಭೂತಗಣಗಳನ್ನೂ ಪೂಜಿಸುತ್ತಾರೆ. ರಾಜಸೀಶ್ರದ್ಧೆಯು ದುಃಖಮಿಶ್ರವಾದ ಅಲ್ಪಸುಖವನ್ನುಂಟುಮಾಡುತ್ತದೆ. ತಾಮಸೀಶ್ರದ್ಧೆಯು ದುಃಖಭೂಯಿಷ್ಠವಾದ ಅತ್ಯಲ್ಪಸುಖವನ್ನುಂಟುಮಾಡುತ್ತದೆ. (ರಾ. ಭಾ.)

ಸಾತ್ತ್ವಿಕಶ್ರದ್ಧೆಯುಳ್ಳವರು ಯಾರು?–ಇತ್ಯಾದಿ ವಿಷಯಗಳನ್ನು ಇಲ್ಲಿ ವಿಭಾಗಮಾಡಿ ಹೇಳುತ್ತಾನೆ. (ಮ. ಭಾ.)

**ಓಂ ಅಶಾಸ್ತ್ರವಿಹಿತಂ ಘೋರಂ ತಪ್ಯನ್ತೇ ಯೇ ತಪೋ ಜನಾಃ ।**
**ದಮ್ಭಾಹಂಕಾರಸಂಯುಕ್ತಾಃ ಕಾಮರಾಗಬಲಾನ್ವಿತಾಃ ॥೫॥**

**ಓಂ ಕರ್ಶಯನ್ತಃ ಶರೀರಸ್ಥಂ ಭೂತಗ್ರಾಮಮಚೇತಸಃ ।**
**ಮಾಂ ಚೈವಾನ್ತಃಶರೀರಸ್ಥಂ ತಾನ್ವಿದ್ಧ್ಯಾಸುರನಿಶ್ಚಯಾನ್ ॥೬॥**

ಯಾವ ಜನರು ದಂಭಾಹಂಕಾರಗಳಿಂದ ಕೂಡಿದವರಾಗಿ, ಕಾಮ-ರಾಗ-ಬಲಗಳಿಂದ ಕೂಡಿದವರಾಗಿ, ಶಾಸ್ತ್ರವಿಹಿತವಲ್ಲದ ಘೋರವಾದ ತಪಸ್ಸನ್ನು ಮಾಡುತ್ತಿರುವರೋ–ಶರೀರದಲ್ಲಿರುವ ಭೂತಗಳ ಸಮೂಹವನ್ನೂ, ಶರೀರದೊಳಗಿರುವ ನನ್ನನ್ನೂ ಅವಿವೇಕಿಗಳಾಗಿ ಕೃಶಗೊಳಿಸುತ್ತಿರುವರೋ–ಅವರನ್ನು ಆಸುರನಿಶ್ಚಯವುಳ್ಳವರೆಂದು ತಿಳಿ. (ಆಸುರನಿಶ್ಚಯರು ಎಂದರೆ : ಆಸುರೀಸಂಪತ್ತನ್ನು ಹೊಂದಿ ಅದಕ್ಕೆ ಅನುಗುಣವಾದ ನಿಶ್ಚಯವುಳ್ಳವರು.)

* * *

(ಆಸುರಭಾವದವರು ಹೇಗಿರುತ್ತಾರೆಂಬುದನ್ನು ಶ್ರೀಕೃಷ್ಣನು ಅರ್ಜುನನಿಗೆ ಹೇಳುತ್ತಾನೆ. ಹಿಂದಿನ ಅಧ್ಯಾಯದ ಏಳನೆಯ ಶ್ಲೋಕದಿಂದ ಹದಿನೆಂಟ

ನೆಯ ಶ್ಲೋಕದವರೆಗೆ ಈ ಆಸುರಜನರ ಗುಣ-ಕರ್ಮಗಳನ್ನೇ ಶ್ರೀಕೃಷ್ಣನು ವಿವರಿಸಿದ್ದಾನೆ. ಇದನ್ನೇ ಇಲ್ಲಿ ಪುನಃ ಸಂಕ್ಷೇಪವಾಗಿ ಹೇಳುತ್ತಾನೆ.

**ಅಶಾಸ್ತ್ರವಿಹಿತಂ ಘೋರಂ ತಪಃ ತಪ್ಯನ್ತೇ** = ಶಾಸ್ತ್ರದಲ್ಲಿ ವಿಧಿಸಲ್ಪಡದಿರುವ ಘೋರವಾದ ತಪಸ್ಸನ್ನು ಇವರು ಮಾಡುತ್ತಾರೆ. ಶಾಸ್ತ್ರದಲ್ಲಿ ವಿಧಿಸಲ್ಪಡದಿರುವ ತಪಸ್ಸೆಂದರೆ : ಧರ್ಮದ್ವೇಷಿಗಳು, ಅಧರ್ಮಿಷ್ಠರು ಧರ್ಮದ ನಾಶಕ್ಕೋಸ್ಕರ ಕಷ್ಟಪಟ್ಟು ಮಾಡುವ ಸಾಧನೆ. ದೇವತಾವಿಗ್ರಹಗಳನ್ನು ಧ್ವಂಸ ಮಾಡುವುದು ; ರಾಮಾಯಣ-ಮಹಾಭಾರತಾದಿ ಧರ್ಮಗ್ರಂಥಗಳನ್ನು ಸುಡುವುದು–ಮುಂತಾದ ಧರ್ಮವಿರೋಧಿಗಳಾದ ಕಾರ್ಯಗಳಿಗಾಗಿ ಶ್ರಮಪಟ್ಟು ಕೆಲಸಮಾಡುವುದು. ಧರ್ಮವನ್ನು ನಾಶಮಾಡುವುದು, ಸಾಧು-ಸಂತರಿಗೆ ಹಿಂಸೆಯನ್ನು ಮಾಡುವುದು–ಮುಂತಾದ ದುರುದ್ದೇಶದಿಂದ ಘೋರವಾದ ತಪಸ್ಸನ್ನು ಮಾಡುವುದು ; ಅದಕ್ಕಾಗಿ ಯಾಗಗಳನ್ನು ಮಾಡುವುದು ; ದಾನಮಾಡುವುದು–ಇವುಗಳೂ ಕೂಡ ಶಾಸ್ತ್ರಗಳ ಧ್ಯೇಯಕ್ಕೆ ವಿರುದ್ಧವಾದುದರಿಂದ ಅಶಾಸ್ತ್ರೀಯವಾದ ತಪಸ್ಸಾಗುತ್ತದೆ. ಭಸ್ಮಾಸುರ-ಕುಂಭಕರ್ಣ ಮುಂತಾದವರು ಮಾಡಿದ ತಪಸ್ಸನ್ನು ಇದಕ್ಕೆ ಉದಾಹರಣೆಯಾಗಿ ಹೇಳಬಹುದು. ತಾನು ಮಾಡುತ್ತಿರುವ ಕೆಲಸದ ಗೊತ್ತು-ಗುರಿ ಮತ್ತು ಪರಿಣಾಮಗಳ ಜ್ಞಾನವಿಲ್ಲದೇ ತಾನು ಮಹಾಸಾಧಕ, ಮಹಾತಪಸ್ವಿ, ಶರೀರದ ಕಷ್ಟಗಳನ್ನು ಸಹಿಸಿಕೊಳ್ಳಬಲ್ಲವನು–ಎಂಬ ಕೀರ್ತಿಕಾಮನೆಯಿಂದ ಮಾಡುವ ಘೋರಕಾರ್ಯಗಳೂ ಈ ಗುಂಪಿಗೆ ಸೇರುತ್ತವೆ. ಇಂತಹ ತಪಸ್ಸನ್ನು ಮಾಡುವವರ ವ್ಯಾಪಾರವು ಅವರಿಗೂ ಮತ್ತು ಇತರರಿಗೂ ಸಂತಾಪಕ್ಕೆ ಕಾರಣವಾಗುತ್ತದೆ. ಅವುಗಳ ಮೂಲಕಾರಣ ದಂಭ-ಅಹಂಕಾರ ಮುಂತಾದ ಅನಾತ್ಮಗುಣಗಳು. ಅದಕ್ಕೆ ಪ್ರೇರಣೆಯನ್ನೂ ಪುಷ್ಟಿಯನ್ನೂ ಕೊಡುವುದು–ದುಷ್ಟವಾದ ಕಾಮನೆ, ಆಸಕ್ತಿಗಳಿಂದುಂಟಾದ ಬಲ. ಇದು ನೋಡುವುದಕ್ಕೆ ಅದ್ಭುತವಾದ ಚಮತ್ಕಾರದಂತೆ ಕಂಡರೂ ಎಲ್ಲರಿಗೂ ಕೆಡುಕನ್ನುಂಟುಮಾಡುವುದು. ಲೋಕಕಂಟಕವಾದ ಉದ್ದೇಶ, ಕಾರ್ಯ ಮತ್ತು ಫಲಗಳನ್ನು ಹೊಂದಿರುವುದರಿಂದ ಇದನ್ನು ಆಸುರ ಎಂದು ಕರೆಯುತ್ತಾರೆ. ಇಂತಹ ತಪಸ್ಸನ್ನು ಆಸುರೀಭಾವದವರು ಮಾಡುತ್ತಾರೆ. ಅವರು ದಂಭಾಹಂಕಾರಗಳಿಂದ ಕೂಡಿ ಇಂತಹ ಕ್ಷುಲ್ಲಕಕಾರ್ಯಗಳನ್ನು ಮಾಡುತ್ತಾರೆ. ಶರೀರದಲ್ಲಿ

ರುವ ಭೂತಗ್ರಾಮವನ್ನು ಎಂದರೆ ಇಂದ್ರಿಯಸಮೂಹವನ್ನು ಕೃಶಗೊಳಿಸುತ್ತಾರೆ. ದುಷ್ಟವಾದ ಕಾಮನೆ, ಆಸಕ್ತಿ ಮತ್ತು ಬಲಗಳಿಂದ ಕೂಡಿ ಮೇಲೆ ಹೇಳಿದ ಕೆಲಸಗಳನ್ನು ಮಾಡುತ್ತಾರೆ. ಅವರ ಸಾಧನೆಯಲ್ಲಿ ಅವರ ಶರೀರವು ಕೃಶವಾಗಿ ಹಿಂಸೆಗೊಳಗಾಗುವುದಲ್ಲದೇ ಅವರ ಒಳಗಡೆ ಇರುವ ಜೀವನಿಗೂ ಅಥವಾ ಪರಮಾತ್ಮನಿಗೂ ಹಿಂಸೆಯುಂಟಾಗುತ್ತದೆ. ಈ ಅವಿವೇಕಿಗಳು ಅವರ ಶರೀರದಲ್ಲೇ ಇರುವ ನನ್ನನ್ನೂ ಸಹ ಕೃಶಗೊಳಿಸುತ್ತಾರೆ, ಎನ್ನುತ್ತಾನೆ ಶ್ರೀಕೃಷ್ಣ.

ಪರಮಾತ್ಮನನ್ನು ಅಥವಾ ಜೀವಾತ್ಮನನ್ನು ಕೃಶಗೊಳಿಸಲು ಸಾಧ್ಯವೇ? ಎಂದರೆ : ಪರಮಾತ್ಮನ ಆಜ್ಞೆಗೆ ಅರ್ಥಾತ್ ಶಾಸ್ತ್ರಕ್ಕೆ ವಿರೋಧವಾಗಿ ನಡೆದುಕೊಳ್ಳುವುದರಿಂದ ಅವನನ್ನು ಹಿಂಸೆಪಡಿಸಿದಂತೆ. ಈ ಆಸುರೀಭಾವದವರು ಆತ್ಮೋದ್ಧಾರಕ್ಕೆ ಬಹುವಿರೋಧಿಗಳಾಗಿರುವುದರಿಂದ ಆತ್ಮಘಾತಕರೆನಿಸಿಕೊಳ್ಳುತ್ತಾರೆ. ಮಾಂ ಚೈವ ಕರ್ಶಯನ್ತಃ ಎಂದರೆ : ಆತ್ಮಹನರಾಗುತ್ತಾರೆ. ಇಂತಹ ಸ್ವಭಾವದವರನ್ನು ಆಸುರನಿಶ್ಚಯರು ಅಥವಾ ಆಸುರ ಸ್ವಭಾವದವರು ಎಂದು ತಿಳಿ, ಎನ್ನುತ್ತಾನೆ ಶ್ರೀಕೃಷ್ಣ.)

o o o

ಆಸುರಭಾವದವರು ಶಾಸ್ತ್ರವಿಧಾನಕ್ಕೆ ಒಳಪಡದೇ ಇರುವ ಮತ್ತು ಪ್ರಾಣಿಗಳಿಗೂ ಮತ್ತು ತನಗೂ ಪೀಡೆಯನ್ನುಂಟುಮಾಡುವ ತಪಸ್ಸನ್ನು, ದಂಭ ಮತ್ತು ಅಹಂಕಾರಗಳಿಂದ ಕೂಡಿದವರಾಗಿ, ಕಾಮ-ರಾಗ ಇವುಗಳಿಂದುಂಟಾದ ಬಲದಿಂದ ಕೂಡಿ ಅಥವಾ ಕಾಮ-ರಾಗ ಮತ್ತು ಬಲಗಳಿಂದ ಕೂಡಿ ಆಚರಿಸುತ್ತಾರೆ. ಆ ಅವಿವೇಕಿಗಳು ಶರೀರದಲ್ಲಿರುವ ಇಂದ್ರಿಯಗಳೇ ಮುಂತಾದ ಕರಣಗಳ ರೂಪದಲ್ಲಿ ಪರಿಣಾಮಗೊಂಡಿರುವ ಭೂತ ಸಮುದಾಯವನ್ನೂ ಮತ್ತು ಶರೀರದೊಳಗೆ ಅಂತರಾತ್ಮರೂಪದಲ್ಲಿ ಅವರ ಕರ್ಮ ಮತ್ತು ಬುದ್ಧಿಗಳಿಗೆ ಸಾಕ್ಷಿಯಾಗಿರುವ ನನ್ನನ್ನೂ ಕೃಶಗೊಳಿಸುತ್ತಾರೆ. (ನನ್ನ ಆಜ್ಞೆಯನ್ನು ಪಾಲಿಸದೇ ಇರುವುದೇ ನನ್ನನ್ನು ಕೃಶಪಡಿಸುವಿಕೆ.) ಹಾಗೆ ನನ್ನನ್ನು ಕೃಶಪಡಿಸುವ, ಘೋರವಾದ ತಪಸ್ಸನ್ನು ಆಚರಿಸುವ ಅಂತಹವರನ್ನು ಆಸುರನಿಶ್ಚಯರೆಂದು ತಿಳಿ.

ಅಸುರರಿಗೆ ಸಂಬಂಧಪಟ್ಟ ನಿಶ್ಚಯವುಳ್ಳವರು ಆಸುರನಿಶ್ಚಯ

ವುಳ್ಳವರು. ಅವರ ಸಂಗವನ್ನು ನೀನು ತ್ಯಜಿಸಬೇಕು. ಅದಕ್ಕೋಸ್ಕರ ಅವರ ಸ್ವರೂಪವನ್ನು ತಿಳಿ–ಎಂದು ಉಪದೇಶ. (ಶಂ. ಭಾ.)

ಅಶಾಸ್ತ್ರೀಯವಾದ ತಪಸ್ಸು, ಯಾಗ–ಮುಂತಾದುವುಗಳು ನನ್ನ ಆಜ್ಞೆಗೆ ವಿರೋಧವಾದುದರಿಂದ ಅವುಗಳನ್ನು ಮಾಡುವುದರಿಂದ ಸುಖಲೇಶವೂ ಇಲ್ಲ. ಅಲ್ಲದೇ ಅನರ್ಥವೇ ಉಂಟಾಗುತ್ತದೆ–ಎಂಬುದನ್ನೇ ಮನಸ್ಸಿನಲ್ಲಿಟ್ಟು ಕೊಂಡು ಭಗವಂತನು ಈ ಶ್ಲೋಕವನ್ನು ಹೇಳಿರುತ್ತಾನೆ. ಅತ್ಯಂತಘೋರವೇ ಆಗಿದ್ದರೂ ಶಾಸ್ತ್ರಗಳು ವಿಧಾನಮಾಡದೇ ಇರುವ ತಪಸ್ಸು, ಬಹಳ ಆಯಾಸ ವನ್ನುಂಟುಮಾಡುವ ಯಾಗ–ಮುಂತಾದುವನ್ನು ಯಾರು ಮಾಡುತ್ತಾ ರೆಯೋ–ದಂಭಾಹಂಕಾರಗಳಿಂದ ಕೂಡಿ, ಕಾಮ-ರಾಗಗಳ ಶಕ್ತಿಯಿಂದ ಕೂಡಿದವರಾಗಿ, ಶರೀರದಲ್ಲಿರುವ ಪೃಥ್ವಿಯೇ ಮುಂತಾದ ಭೂತಗಳ ಸಮೂಹವನ್ನು ಕೃಶಪಡಿಸುತ್ತಾರೆಯೋ ಮತ್ತು ನನ್ನನ್ನೂ ಕೃಶಪಡಿಸುತ್ತಾ ರೆಯೋ ಎಂದರೆ ಶರೀರದೊಳಗೆ ನನ್ನ ಅಂಶವಾಗಿರುವ ಜೀವನನ್ನೂ ಕೃಶಪಡಿಸುತ್ತಾರೆಯೋ–ಕೃಶಪಡಿಸುವಂತಹ ಯಾಗಾದಿಗಳನ್ನು ಮಾಡುತ್ತಾ ರೆಯೋ–ಅವರು ಆಸುರನಿಶ್ಚಯರೆಂದು ತಿಳಿ. ಆಸುರರೆಂದರೆ ನನ್ನ ಆಜ್ಞೆಗೆ ವಿರುದ್ಧವಾಗಿ ಕೆಲಸಮಾಡುವವರು. ಹೀಗೆ ಮಾಡುವುದರಿಂದ ಅವರಿಗೆ ಸುಖಲೇಶದ ಸಂಭವವೂ ಇಲ್ಲ. ಇದಲ್ಲದೇ ಅವರು ಅನರ್ಥಪರಂಪರೆ ಯಲ್ಲಿಯೂ ಬೀಳುತ್ತಾರೆ. **ಪತನ್ತಿ ನರಕೇಽಶುಚೌ** (೧೬-೧೬) ಎಂದು ಹಿಂದೆಯೂ ಈ ಅಭಿಪ್ರಾಯವನ್ನು ಹೇಳಿದೆ. (ರಾ. ಭಾ.)

**ಮಾಂ ಚೈವ ಕರ್ಷಯನ್ತಃ** = ಭಗವಂತನನ್ನು ಕರ್ಷಣೆ ಮಾಡುವುದು ಎಂದರೆ ಅವನ ಬಗೆಗೆ ಅಲ್ಪದೃಷ್ಟಿಯನ್ನಿಟ್ಟುಕೊಳ್ಳುವುದು. ಭಗವಂತನು ನಿರ್ವಿಕಾರನಾಗಿರುವುದರಿಂದ ಅವನನ್ನು ಕೃಶಪಡಿಸುವುದು ಹೇಗೆ ಎಂದರೆ ಅವನ ವಿಷಯದಲ್ಲಿ ಕ್ಷುದ್ರವಾದ ದೃಷ್ಟಿಯನ್ನು ಇಟ್ಟುಕೊಳ್ಳುವುದು. **ಕರ್ಷಯನ್ತಃ** ಎಂಬ ಪದದಲ್ಲಿರುವ ಣಿಚ್ ಪ್ರತ್ಯಯಕ್ಕೆ ದೃಷ್ಟಿ ಎಂಬ ಅರ್ಥವೂ ಆಗುತ್ತದೆ.

**ಪ್ರಾತಿಪದಿಕಾತ್ ಧಾತ್ವರ್ಥೇ ಬಹುಲಮಿತಿ ವಚನಾತ್ ದೃಷ್ಟಿರಪಿ ಣೇರರ್ಥಃ** (ಮ. ಭಾ.)

ಮಾನವನ ಆರಾಧ್ಯದೇವತೆಯು ಯಾವುದೆಂಬುದನ್ನು ತಿಳಿದುಕೊಂಡು ಅವನು ಸಾತ್ತ್ವಿಕನೇ, ರಾಜಸನೇ, ತಾಮಸನೇ–ಎಂಬುದನ್ನು ಗುರುತಿಸಬಹುದೆಂಬುದನ್ನು ಶ್ರೀಕೃಷ್ಣನು ಈ ಹಿಂದೆ ಹೇಳಿದನು. ಇನ್ನು ಮುಂದೆ ಮನುಷ್ಯನು ಸೇವಿಸುವ ಆಹಾರ, ಮಾಡುವ ಯಜ್ಞ, ದಾನ–ಇವುಗಳಲ್ಲಿಯೂ ಈ ಮೂರು ಗುಣಗಳನ್ನು ಗುರುತಿಸಬಹುದೆಂಬುದನ್ನು ಅವನು ಹೇಳುತ್ತಾನೆ.

**ಓಂ ಆಹಾರಸ್ತ್ವಪಿ ಸರ್ವಸ್ಯ ತ್ರಿವಿಧೋ ಭವತಿ ಪ್ರಿಯಃ ।**
**ಯಜ್ಞಸ್ತಪಸ್ತಥಾ ದಾನಂ ತೇಷಾಂ ಭೇದಮಿಮಂ ಶೃಣು ॥೭॥**

ಪ್ರತಿಯೊಬ್ಬನಿಗೂ ಪ್ರಿಯವಾದ ಆಹಾರವೂ ಮೂರು ಬಗೆಯಾಗಿರುತ್ತದೆ. ಯಜ್ಞ, ತಪಸ್ಸು, ದಾನ–ಇವೂ ಮೂರು ಬಗೆಯಾಗಿರುತ್ತವೆ. ಅವುಗಳ ಈ ಭೇದವನ್ನು ಕೇಳು.

* * *

(ಒಬ್ಬನು ಎಂತಹ ಆಹಾರವನ್ನು ಸಹಜವಾದ ಅಭಿರುಚಿಯಿಂದ ಸೇವಿಸುತ್ತಾನೆಂದು ತಿಳಿದುಕೊಂಡರೆ ಅವನ ಗುಣವು ಯಾವುದೆಂಬುದನ್ನು ಸಾಮಾನ್ಯವಾಗಿ ನಿರ್ಧರಿಸಬಹುದು. ಒಬ್ಬನು ಮಾಡುವ ಪೂಜೆ, ಪುರಸ್ಕಾರ, ದಾನ–ಇವುಗಳಿಂದಲೂ ಸಹ ಅವನ ಸ್ವಭಾವವನ್ನು ಗುರುತಿಸಬಹುದಾಗಿದೆ.)

O O O

ಮುಂದಿನ ಶ್ಲೋಕಗಳಲ್ಲಿ ಹೇಳಲಾಗುವ ರಸ್ಯ, ಸ್ನಿಗ್ಧ ಮುಂತಾದ ಆಹಾರವಿಶೇಷಗಳಲ್ಲಿ ತನಗೆ ಯಾವುದರಲ್ಲಿ ಅತಿಶಯವಾದ ಪ್ರೀತಿಯಿರುತ್ತದೆಯೋ ಆ ಲಕ್ಷಣದಿಂದ ತನ್ನ ಸಾತ್ತ್ವಿಕತ್ವ, ರಾಜಸತ್ವ, ತಾಮಸತ್ವಗಳನ್ನರಿತು ರಾಜಸ-ತಾಮಸಗಳನ್ನು ಸೂಚಿಸುವ ಆಹಾರಗಳನ್ನು ಬಿಡುವುದಕ್ಕೋಸ್ಕರವೂ ಮತ್ತು ಸಾತ್ತ್ವಿಕಲಕ್ಷಣವುಳ್ಳ ಆಹಾರವನ್ನು ಸ್ವೀಕರಿಸುವುದಕ್ಕೋಸ್ಕರವೂ, ಇಲ್ಲಿ ರಸ್ಯ-ಸ್ನಿಗ್ಧವೇ ಮುಂತಾದ ವಾಕ್ಯಗಳಲ್ಲಿ ವರ್ಣಿಸಲ್ಪಟ್ಟಿರುವ ಮೂರು ವರ್ಗಗಳ ಆಹಾರಗಳಲ್ಲಿ ಕ್ರಮವಾಗಿ ಸಾತ್ತ್ವಿಕ, ರಾಜಸ ಮತ್ತು ತಾಮಸಪುರುಷರ ರುಚಿಯನ್ನು ಪ್ರತ್ಯೇಕ-ಪ್ರತ್ಯೇಕವಾಗಿ ತೋರಿಸಿದೆ. ಹಾಗೆಯೇ ರಾಜಸ ಮತ್ತು ತಾಮಸಗಳಾದ ಯಜ್ಞ ಮುಂತಾದುವುಗಳನ್ನು ತಿಳಿದು ಹೇಗಾದರೂ ಜನರು ಅವುಗಳನ್ನು ಬಿಟ್ಟುಬಿಡಲಿ ಮತ್ತು ಸಾತ್ತ್ವಿಕ

ಯಜ್ಞಗಳನ್ನೇ ಆಚರಿಸಲಿ–ಎನ್ನುವುದಕ್ಕೋಸ್ಕರ ಸಾತ್ತ್ವಿಕವೇ ಮುಂತಾದ ಗುಣಗಳ ಭೇದಕ್ಕೆ ತಕ್ಕಂತೆ ಯಜ್ಞಾದಿಭೇದಗಳನ್ನೂ ಪ್ರತಿಪಾದಿಸಿದೆ.

(ಶಂ. ಭಾ.)

ಶಾಸ್ತ್ರೀಯವಾದ ಯಜ್ಞವೇ ಮುಂತಾದುವುಗಳಲ್ಲಿ ಗುಣಯುಕ್ತವಾದ ವಿಶೇಷವನ್ನು ಇಲ್ಲಿ ವಿಸ್ತಾರಪಡಿಸಲಾಗಿದೆ. ಅವುಗಳಲ್ಲಿ ಸತ್ತ್ವವೇ ಮುಂತಾದುವುಗಳ ವೃದ್ಧಿಗೆ ಆಹಾರವು ಮೂಲವಾಗಿರುವುದರಿಂದ ಆಹಾರದ ಮೂರು ವಿಧಗಳನ್ನು ಮೊದಲು ಹೇಳಲಾಗಿದೆ. ಅನ್ನಮಯಂ ಹಿ ಸೌಮ್ಯ ಮನಃ (ಛಾಂದೋಗ್ಯ ೬-೫-೪) ಆಹಾರಶುದ್ಧೌ ಸತ್ತ್ವಶುದ್ಧಿಃ (ಛಾಂದೋಗ್ಯ ೭-೧೬-೨) ಎಂದು ಉಪನಿಷತ್ತೂ ಹೇಳುತ್ತದೆಯಲ್ಲವೇ? (ರಾ. ಭಾ.)

**ಓಂ ಆಯುಃಸತ್ತ್ವಬಲಾರೋಗ್ಯಸುಖಪ್ರೀತಿವಿವರ್ಧನಾಃ ।**
**ರಸ್ಯಾಃ ಸ್ನಿಗ್ಧಾಃ ಸ್ಥಿರಾ ಹೃದ್ಯಾ ಆಹಾರಾಃ ಸಾತ್ತ್ವಿಕಪ್ರಿಯಾಃ ॥೮॥**

ಆಯುಸ್ಸು, ಸತ್ತ್ವ, ಬಲ, ಆರೋಗ್ಯ, ಸುಖ, ಪ್ರೀತಿ–ಇವನ್ನು ವೃದ್ಧಿಗೊಳಿಸತಕ್ಕ, ರಸಯುಕ್ತವಾದ, ಜಿಡ್ಡುಳ್ಳ, ಸ್ಥಿರವಾಗಿಯೂ, ಹೃದ್ಯವಾಗಿಯೂ (ಮನೋಹರವಾಗಿಯೂ) ಇರುವ ಆಹಾರಗಳು ಸಾತ್ತ್ವಿಕರಿಗೆ ಪ್ರಿಯವಾಗುತ್ತವೆ.

* * *

(ಸಾತ್ತ್ವಿಕರಿಗೆ ಎಂತಹ ಆಹಾರವು ಪ್ರಿಯವಾಗುತ್ತದೆ? ಅಥವಾ ಸಾತ್ತ್ವಿಕರಾದವರು ಎಂತಹ ಆಹಾರವನ್ನು ಸೇವಿಸುತ್ತಾರೆ? ಯಾವ ವಿಧವಾದ ಆಹಾರವನ್ನು ಸಹಜವಾಗಿ ಸೇವಿಸುವುದರಿಂದ ಒಬ್ಬನನ್ನು ಸಾತ್ತ್ವಿಕನೆಂದು ನಾವು ಗುರುತಿಸಬಹುದು?–ಎಂಬುದನ್ನು ಶ್ರೀಕೃಷ್ಣನು ಈ ಶ್ಲೋಕದಲ್ಲಿ ವರ್ಣಿಸುತ್ತಾನೆ. ಸಾತ್ತ್ವಿಕರು ಆಯುಷ್ಯವನ್ನು ಹೆಚ್ಚಿಸುವಂತಹ ಆಹಾರವನ್ನೇ ತಿನ್ನುತ್ತಾರೆ. ಆದರೆ ರಾಜಸರಾಗಲೀ ತಾಮಸರಾಗಲೀ ಆಯುಷ್ಯವನ್ನು ಹೆಚ್ಚಿಸುವ ಆಹಾರವನ್ನು ತಿನ್ನುವುದಿಲ್ಲವೇ? ಅವರಿಗೂ ಆಯುಷ್ಯವು ಹೆಚ್ಚಬೇಕೆಂಬ ಆಸೆಯಿರುವುದಿಲ್ಲವೇ? ಎಂದರೆ : ಅವರಿಗೂ ಆಯುಷ್ಯವನ್ನು ಹೆಚ್ಚಿಸಿಕೊಳ್ಳುವುದರಲ್ಲಿ ಆಸೆಯಿರುತ್ತದೆ. ಆದರೆ ಆಯುಷ್ಯವನ್ನು ಹೆಚ್ಚಿಸುವ ಆಹಾರಪದಾರ್ಥಗಳಲ್ಲಿ ಅವರಿಗೆ ಹೆಚ್ಚಿನ ಅಭಿರುಚಿಯಿರುವುದಿಲ್ಲ. ಉದಾಹರಣೆಗೆ ಹಾಲು ಆಯುಷ್ಯವನ್ನು ಹೆಚ್ಚಿಸುವ ಆಹಾರ. ಈ ವಿಷಯವು ತಿಳಿದಿದ್ದರೂ ಹಾಲನ್ನು ಒಲ್ಲದವರೂ ಅನೇಕರಿದ್ದಾರೆ. ಹಾಲನ್ನು

ಅದರಲ್ಲಿಯೂ ಹಸುವಿನ ಹಾಲನ್ನು, ಅದರಲ್ಲಿಯೂ ಜೀವಂತಕರುವಿರುವ ಸಾಧುವಾದ ಹಸುವಿನ ಹಾಲನ್ನು ಸಾತ್ತ್ವಿಕರು ಬಯಸುತ್ತಾರೆ. ಇದರಿಂದ ಅವರ ಆಯುಷ್ಯವು ವೃದ್ಧಿಹೊಂದುತ್ತದೆ. ಇಲ್ಲಿ ಹೇಳಿರುವ ಉಳಿದ ವಿಷಯ ಗಳಲ್ಲಿಯೂ ಹೀಗೆಯೇ ಅರ್ಥಮಾಡಬೇಕಾಗಿದೆ.

ಸತ್ತ್ವವರ್ಧಕವಾದ ಆಹಾರವು ಸಾತ್ತ್ವಿಕರಿಗೆ ಪ್ರಿಯವಾಗಿರುತ್ತದೆ. ಸತ್ತ್ವ ಎಂದರೆ ಬುದ್ಧಿ. ಬುದ್ಧಿಯನ್ನು ವೃದ್ಧಿಸುವುದು–ಎಂದರೆ ವಿಶಾಲಗೊಳಿ ಸುವುದು. ಬುದ್ಧಿಯನ್ನು ವಿಶಾಲಗೊಳಿಸುವಂತಹ ಅಥವಾ ತೀಕ್ಷ್ಣಗೊಳಿಸು ವಂತಹ ಆಹಾರವು ಸಾತ್ತ್ವಿಕರಿಗೆ ಪ್ರಿಯವಾಗಿರುತ್ತದೆ.

ಬಲವನ್ನು ವರ್ಧಿಸುವಂತಹ ಆಹಾರವು ಸಾತ್ತ್ವಿಕರಿಗೆ ಪ್ರಿಯವಾಗಿರು ತ್ತದೆ. ಇಲ್ಲಿ ಬಲ ಎಂದರೆ ದೇಹಬಲವೆಂದು ಮಾತ್ರವೇ ಅರ್ಥಮಾಡ ಬಾರದು. ಮಾನಸಿಕಬಲವನ್ನೂ ಮತ್ತು ದೇಹಬಲವನ್ನೂ ಹೆಚ್ಚಿಸುವ ಆಹಾರಪದಾರ್ಥ. ಮಾನಸಿಕಬಲವಿಲ್ಲದೇ ಕೇವಲ ಶರೀರಬಲವಿದ್ದರೆ ಸಾತ್ತ್ವಿಕತೆಯು ಉಳಿಯುವುದಿಲ್ಲ.

ಆರೋಗ್ಯವನ್ನು ವರ್ಧಿಸುವ ಆಹಾರಪದಾರ್ಥವು ಸಾತ್ತ್ವಿಕನಿಗೆ ಪ್ರಿಯ ವಾಗಿರುತ್ತದೆ. ಇಲ್ಲಿಯೂ ಸಹ ಆರೋಗ್ಯವೆಂದರೆ ಮಾನಸಿಕವಾದ ಆರೋಗ್ಯ ಮತ್ತು ದೈಹಿಕವಾದ ಆರೋಗ್ಯ ಎಂದು ಅರ್ಥಮಾಡಬೇಕು. ದೈಹಿಕ ರೋಗವೂ ಇರಬಾರದು ; ಮಾನಸಿಕರೋಗವೂ ಇರಬಾರದು. ಮನಸ್ಸು ನೀರೋಗವಾಗಿರಬೇಕಾದರೆ ಆಹಾರವೂ ಪರಿಶುದ್ಧವಾಗಿರಬೇಕು. ಕೆಟ್ಟ ಆಹಾರವನ್ನು ತಿಂದರೆ ಮನಸ್ಸು ಸಮಾಧಾನದಿಂದಿರುವುದಿಲ್ಲ. ಕಳವಳ ಗೊಳ್ಳುತ್ತಿರುತ್ತದೆ. ಆದುದರಿಂದ ಮಾನಸಿಕವಾದ ಆರೋಗ್ಯವನ್ನೂ ದೈಹಿಕ ವಾದ ಆರೋಗ್ಯವನ್ನೂ ವರ್ಧಿಸುವಂತಹ ಆಹಾರವು ಸಾತ್ತ್ವಿಕನಿಗೆ ಪ್ರಿಯ ವಾಗಿರುತ್ತದೆ.

ಸುಖವನ್ನು ವರ್ಧಿಸುವ ಆಹಾರವು ಸಾತ್ತ್ವಿಕನಿಗೆ ಪ್ರಿಯವಾಗಿರುತ್ತದೆ. ಸುಖವೆಂದರೆ ಕೇವಲ ಇಂದ್ರಿಯಸುಖವಲ್ಲ. ಮಾನಸಿಕಸುಖ. ಮಾನಸಿಕ ಶಾಂತಿ. ವಿಷಯಸುಖಗಳಿದ್ದ ಮಾತ್ರಕ್ಕೆ ಮಾನಸಿಕಸುಖವು ಲಭಿಸುವುದಿಲ್ಲ. ಆದುದರಿಂದ ಮಾನಸಿಕಸುಖವನ್ನೂ ಉಂಟುಮಾಡುವ ಆಹಾರವು ಸಾತ್ತ್ವಿಕ ನಿಗೆ ಪ್ರಿಯವಾಗಿರುತ್ತದೆ.

ಪ್ರೀತಿವರ್ಧಕವಾದ ಆಹಾರವು ಸಾತ್ತ್ವಿಕನಿಗೆ ಪ್ರಿಯವಾಗಿರುತ್ತದೆ.

ಪ್ರೀತಿವರ್ಧಕವೆಂದರೆ ಕೇವಲ ಹೆಂಡತಿ-ಮಕ್ಕಳ ಮೇಲಿನ ಪ್ರೀತಿಯನ್ನು ವರ್ಧಿಸುವುದಲ್ಲ. ವಿಶ್ವಪ್ರೇಮವನ್ನು ವರ್ಧಿಸುವುದು. ಸಕಲಪ್ರಾಣಿಗಳ ವಿಷಯದಲ್ಲಿಯೂ ಪ್ರೀತಿಯನ್ನೂ ಸೌಹಾರ್ದವನ್ನೂ ವರ್ಧಿಸುವುದು. ಇಂತಹ ಆಹಾರಗಳು ಸಾತ್ತ್ವಿಕನಿಗೆ ಪ್ರಿಯವಾಗಿರುತ್ತವೆ.

ಸಾತ್ತ್ವಿಕರು ಅಪೇಕ್ಷಿಸುವ ಆಹಾರಗಳ ಗುಣ-ಧರ್ಮಗಳನ್ನು ಶ್ರೀಕೃಷ್ಣನು ಉತ್ತರಾರ್ಧದಲ್ಲಿ ವಿವರಿಸುತ್ತಾನೆ.

**ರಸ್ಯಾಃ** = ರಸಯುಕ್ತವಾಗಿರತಕ್ಕ ಪದಾರ್ಥಗಳು. **ಸ್ನಿಗ್ಧಾಃ** = ಜಿಡ್ಡಿನಿಂದ ಕೂಡಿದ ಪದಾರ್ಥಗಳು. **ಸ್ಥಿರಾಃ** = ಹೊಟ್ಟೆಯಲ್ಲಿ ಹೆಚ್ಚು ಹೊತ್ತಿದ್ದು ಹಸಿವನ್ನು ತಡೆಯುವ ಆಹಾರಪದಾರ್ಥಗಳು. **ಹೃದ್ಯಾಃ** = ಮನಸ್ಸಿಗೆ ಆಹ್ಲಾದ ವನ್ನುಂಟುಮಾಡುವ ಆಹಾರಪದಾರ್ಥಗಳು. (ಶುಚಿ-ರುಚಿಯಾಗಿರ ತಕ್ಕುವುಗಳು.)

ಇಂತಹ ಪದಾರ್ಥಗಳು ಸಾತ್ತ್ವಿಕರಿಗೆ ಪ್ರಿಯವಾಗುತ್ತವೆ. ಸಾತ್ತ್ವಿಕರು ಸ್ವಾಭಾವಿಕವಾಗಿ ಇಂತಹ ಆಹಾರವನ್ನೇ ಬಯಸುತ್ತಾರೆ ಮತ್ತು ಸೇವಿಸುತ್ತಾರೆ. ಇಲ್ಲಿ ಶ್ರೀಕೃಷ್ಣನು ಹೇಳಿರುವ ಸಾತ್ತ್ವಿಕಗುಣವುಳ್ಳ ಆಯುಃಪ್ರೀತಿವರ್ಧಕಗಳಾದ ಆಹಾರಪದಾರ್ಥಗಳನ್ನೇ ಸಾತ್ತ್ವಿಕರು ಸೇವಿಸುತ್ತಾರೆ. ಇಂತಹ ಆಹಾರಪದಾರ್ಥಗಳಲ್ಲಿಯೇ ಅವರಿಗೆ ಅಭಿರುಚಿಯಿರುತ್ತದೆ.)

o o o

**ಸ್ನಿಗ್ಧಾಃ** = ಜಿಡ್ಡಿನಿಂದ ಕೂಡಿರುವುವು. **ಸ್ಥಿರಾಃ** = ದೇಹದಲ್ಲಿ ಸಾರರೂಪವಾಗಿ ಬಹಳ ಕಾಲ ಇರತಕ್ಕುವುಗಳು. **ಹೃದ್ಯಾಃ** = ಹೃದಯಕ್ಕೆ ಪ್ರಿಯವಾಗಿರತಕ್ಕುವುಗಳು. (ಶಂ. ಭಾ.)

ಸತ್ತ್ವಗುಣವುಳ್ಳವನಿಗೆ ಸತ್ತ್ವಮಯವಾದ ಆಹಾರಗಳು ಪ್ರಿಯವಾಗಿ ರುತ್ತವೆ. ಸತ್ತ್ವಮಯವಾದ ಆಹಾರಗಳಾದರೋ ಆಯುಸ್ಸನ್ನು ವೃದ್ಧಿಪಡಿ ಸುತ್ತವೆ ಮತ್ತು ಸತ್ತ್ವಗುಣವನ್ನು ವೃದ್ಧಿಪಡಿಸುತ್ತವೆ. ಸತ್ತ್ವ ಎಂದರೆ ಅಂತಃಕರಣ. ಇಲ್ಲಿ ಅಂತಃಕರಣದ ಕಾರ್ಯವಾದ ಜ್ಞಾನವನ್ನು ಸತ್ತ್ವಶಬ್ದವು ಹೇಳುತ್ತದೆ. **ಸತ್ತ್ವಾತ್ಸಂಜಾಯತೇ ಜ್ಞಾನಂ**—ಎಂದು ಸತ್ತ್ವವು ಜ್ಞಾನವೃದ್ಧಿಗೆ ಕಾರಣವೆಂದು ಹಿಂದೆ ಹೇಳಿದೆಯಲ್ಲವೇ? ಹಾಗೆಯೇ ಸತ್ತ್ವಮಯವಾದ ಆಹಾರಗಳೂ ಕೂಡ ಜ್ಞಾನದ ಬೆಳವಣಿಗೆಗೆ ಕಾರಣವಾಗುತ್ತವೆ.

ಬಲ, ಆರೋಗ್ಯಗಳನ್ನು ವೃದ್ಧಿಪಡಿಸುತ್ತವೆ. ಸುಖ ಮತ್ತು ಪ್ರೀತಿಗಳನ್ನು ಬೆಳೆಸುತ್ತವೆ. ಪರಿಣಾಮಕಾಲದಲ್ಲಿ ತಾವೇ ಸುಖವನ್ನು ವೃದ್ಧಿಪಡಿಸುತ್ತವೆ ಮತ್ತು ಪ್ರೀತಿಗೆ ಕಾರಣವಾದ ಕರ್ಮಗಳನ್ನು ಆರಂಭಿಸುವುದರ ಮೂಲಕ ಪ್ರೀತಿಗೆ ವರ್ಧಕವಾಗಿವೆ. ರಸ್ಯಾಃ = ಮಧುರರಸದಿಂದ ಕೂಡಿರುತ್ತವೆ. ಸ್ನಿಗ್ಧಾಃ = ಜಿಡ್ಡಿನಿಂದ ಕೂಡಿರುತ್ತವೆ. ಸ್ಥಿರಾಃ = ಸ್ಥಿರವಾದ ಪರಿಣಾಮವುಳ್ಳವುಗಳಾಗಿರುತ್ತವೆ. ಹೃದ್ಯಾಃ = ಅವುಗಳ ಆಕಾರವೂ ರಮಣೀಯವಾಗಿರುತ್ತದೆ. ಇಂತಹ ಸತ್ತ್ವಮಯವಾದ ಆಹಾರಗಳು ಸಾತ್ತ್ವಿಕನಾದ ಪುರುಷನಿಗೆ ಪ್ರಿಯವಾಗಿರುತ್ತವೆ. (ರಾ. ಭಾ.)

ಪ್ರೀತಿಯೆಂಬುದು ಸೇವಿಸಿದೊಡನೆಯೇ ಉಂಟಾಗತಕ್ಕುದು. ಕಂಡು ಅನುಭವಿಸಿದಾಗ ಮತ್ತು ಅನಂತರವೂ ಕೂಡ ಮನೋಹರವಾಗಿರುವಿಕೆಯೇ ಹೃದ್ಯತ್ವ. ಪ್ರೀತಿವಿವರ್ಧನಾಃ ಮತ್ತು ಹೃದ್ಯಾಃ ಎಂಬುದಕ್ಕೆ ಇರುವ ಅರ್ಥ ಭೇದವೇನೆಂದರೆ : ಪ್ರೀತಿಯೆಂದರೆ **ಪ್ರಿಯಂ ತತ್ಕಾಲಸೌಖ್ಯದಂ**–ಎಂಬ ವಚನದಂತೆ ಸೇವಿಸಿದೊಡನೆಯೇ ಉಂಟಾಗುವ ಪ್ರೀತಿ. ಹೃದ್ಯವೆಂದರೆ **ಹೃದ್ಯಂ ಪಶ್ಚಾನ್ಮನೋಹರಂ**–ಎಂಬಂತೆ ನೋಡಿ ಅನುಭವಿಸಿದ ಮೇಲೆ ಅನಂತರವೂ ಕೂಡ ಮನೋಹರವಾಗಿರುವಿಕೆ. ಸ್ಥಿರಾಃ ಎಂದರೆ ಶೀಘ್ರದಲ್ಲೇ ಪಕ್ವವಾಗತಕ್ಕ ತುಪ್ಪ ಮುಂತಾದುವುಗಳು. ಶೀಘ್ರದಲ್ಲೇ ಪಕ್ವವಾಗಿ ಚಿರಕಾಲ ದೇಹದಲ್ಲಿ ಗುಣವನ್ನು ಉಂಟುಮಾಡತಕ್ಕುವುಗಳು. (ಮ. ಭಾ.)

**ಓಂ ಕಟ್ವಮ್ಲಲವಣಾತ್ಯುಷ್ಣತೀಕ್ಷ್ಣರೂಕ್ಷವಿದಾಹಿನಃ ।**
**ಆಹಾರಾ ರಾಜಸಸ್ಯೇಷ್ಟಾ ದುಃಖಶೋಕಾಮಯಪ್ರದಾಃ ॥೯॥**

ಹೆಚ್ಚು ಖಾರವಾಗಿಯೂ, ಹೆಚ್ಚು ಹುಳಿಯಾಗಿಯೂ, ಹೆಚ್ಚು ಉಪ್ಪಾಗಿಯೂ, ಹೆಚ್ಚು ಬಿಸಿ-ಬಿಸಿಯಾಗಿಯೂ, ಒಣಕಲಾಗಿಯೂ, ನಾಲಿಗೆಯನ್ನು ಉರಿಸುವುದಾಗಿಯೂ ಇರುವ ಮತ್ತು ದುಃಖ, ಶೋಕ ಮತ್ತು ರೋಗಗಳನ್ನು ಉಂಟುಮಾಡುವ ಆಹಾರಪದಾರ್ಥಗಳು ರಾಜಸಗುಣದವರಿಗೆ ಪ್ರಿಯವಾಗುತ್ತವೆ.

* * *

(ಸಾತ್ತ್ವಿಕರಿಗೆ ಉಪ್ಪು, ಹುಳಿ, ಖಾರ, ಕಹಿ ಬೇಡವೆಂದಲ್ಲ. ಅವರದ್ದು

ಒಂದು ಮಿತಿಯಲ್ಲಿರುತ್ತದೆ. ಹೆಚ್ಚು ಉಪ್ಪೂ ಇಲ್ಲ. ಹೆಚ್ಚು ಹುಳಿಯೂ ಇಲ್ಲ. ಹೆಚ್ಚು ಖಾರವೂ ಇಲ್ಲ. ಆದರೆ ರಾಜಸಪ್ರಕೃತಿಯವರದ್ದು ಹಾಗಲ್ಲ. ಅವರಿಗೆ ಮೆಣಸಿನಕಾಯಿಗೆ ಖಾರವೇ ಸಾಲದೆಂಬ ಸ್ವಭಾವವಿರುತ್ತದೆ. ನಾಲಿಗೆಯು ಸುಟ್ಟುಹೋಗಿ ಕಣ್ಣಿನಲ್ಲಿ ನೀರು ಸುರಿಯುತ್ತಿದ್ದರೂ ಅವರಿಗೆ ಆ ಖಾರದಲ್ಲಿ ತೃಪ್ತಿಯಿರುವುದಿಲ್ಲ. ನಾಲ್ಕು ದಿವಸಗಳ ಹುಳಿಮಜ್ಜಿಗೆಯನ್ನು ಹಾಕಿದರೂ ಹುಳಿಯು ಸಾಲದು ; ಸಪ್ಪೆ ಎನ್ನುತ್ತಾರೆ. ಎಲೆಯ ತುದಿಯಲ್ಲಿ ಉಪ್ಪಿಲ್ಲದೆ ಊಟಮಾಡುವುದೇ ಇಲ್ಲ. ಕುದಿಯುತ್ತಿರುವ ಪಾನೀಯವನ್ನು ಕೊಟ್ಟರೂ ಬಿಸಿ ಸಾಲದೆನ್ನುತ್ತಾರೆ. ಅವರ ಸ್ವಭಾವವು ಇಂತಹ ಪದಾರ್ಥಗಳನ್ನು ತಿನ್ನುವುದಾಗಿದ್ದರೂ ಅವರ ಶರೀರವು ಈ ಅತಿರೇಕದ ಆಹಾರಪದಾರ್ಥಗಳಿಗೆ ಹೊಂದಿಕೊಳ್ಳುವುದಿಲ್ಲ. ಕರುಳು ಸುಟ್ಟುಹೋಗುತ್ತದೆ. ನಾನಾವಿಧವಾದ ವ್ಯಾಧಿಗಳು ಹುಟ್ಟಿಕೊಳ್ಳುತ್ತವೆ. ದುಃಖ-ಶೋಕಗಳಿಂದ ಪೀಡಿತರಾಗುತ್ತಾರೆ. ಹೀಗಾದರೂ ಸಹ ಅವರನ್ನು ಅವರ ಸ್ವಭಾವಕ್ಕೆ ಅನುಗುಣವಾದ ಆಹಾರಪದಾರ್ಥಗಳಿಂದ ವಿಮುಖರನ್ನಾಗಿ ಮಾಡಲು ಸಾಧ್ಯವಾಗುವುದಿಲ್ಲ. ರೋಗಗಳನ್ನೂ ಅದರಿಂದಾಗಿ ದುಃಖ-ಶೋಕಗಳನ್ನೂ ಅನುಭವಿಸುತ್ತಾರೆ. ವೈದ್ಯರು ನಿಷೇಧಿಸಿದರೂ ತಮಗೆ ಬೇಕಾದ ಮತ್ತು ತಮ್ಮ ಸ್ವಭಾವಕ್ಕೆ ತಕ್ಕುದಾದ ಆಹಾರಗಳನ್ನು ತಿನ್ನುತ್ತಲೇ ಇರುತ್ತಾರೆ.)

o o o

ಅತಿ ಎಂಬ ಶಬ್ದವನ್ನು ಕಟು, ಆಮ್ಲ, ಲವಣ ಮುಂತಾದ ಎಲ್ಲ ಪದಗಳ ಜೊತೆಯಲ್ಲೂ ಸೇರಿಸಿಕೊಳ್ಳಬೇಕು. ಅತ್ಯಂತ ಕಟು, ಅತ್ಯಂತ ಹುಳಿ, ಅತ್ಯಂತ ಉಪ್ಪು, ಬಲುಬಿಸಿ, ಅತಿತೀಕ್ಷ್ಣ, ಅತ್ಯಂತ ಒರಟಾದುದು, ತುಂಬ ಉರಿಯನ್ನುಂಟುಮಾಡತಕ್ಕುವು, ಹಾಗೆಯೇ ದುಃಖ, ಚಿಂತೆ ಮತ್ತು ರೋಗಗಳನ್ನುಂಟುಮಾಡತಕ್ಕುವೂ ಆದ ಆಹಾರಗಳು ರಾಜಸನಾದ ಪುರುಷನಿಗೆ ಪ್ರಿಯವಾಗಿರುತ್ತವೆ. (ಶಂ. ಭಾ.)

ತೀಕ್ಷ್ಣಾಃ = ಅತ್ಯಂತಶೈತ್ಯ, ಅತ್ಯಂತತೀಕ್ಷ್ಣತೆ–ಮುಂತಾದುವುಗಳಿಂದ ಉಪಯೋಗಿಸಲು ಕಷ್ಟವಾದುವುಗಳು. ರೂಕ್ಷಾಃ = ಎಂದರೆ ಶೋಷಣವನ್ನುಂಟುಮಾಡತಕ್ಕುವು. ವಿದಾಹಿನಃ = ತಾಪವನ್ನುಂಟುಮಾಡ

ತಕ್ಕುವು. ಇವು ರಜೋಮಯವಾಗಿರುವುದರಿಂದ ದುಃಖ, ಶೋಕ ಮತ್ತು ರೋಗಗಳನ್ನು ವೃದ್ಧಿಪಡಿಸುತ್ತವೆ ಮತ್ತು ರಜಸ್ಸನ್ನೂ ವೃದ್ಧಿಪಡಿಸುತ್ತವೆ.

(ರಾ. ಭಾ.)

**ಓಂ ಯಾತಯಾಮಂ ಗತರಸಂ ಪೂತಿ ಪರ್ಯುಷಿತಂ ಚ ಯತ್ ।**
**ಉಚ್ಛಿಷ್ಟಮಪಿ ಚಾಮೇಧ್ಯಂ ಭೋಜನಂ ತಾಮಸಪ್ರಿಯಮ್ ॥**

ಸಿದ್ಧಗೊಳಿಸಿ ಬಹಳ ಕಾಲ ಆಗಿಬಿಟ್ಟಿರುವುದು, ರಸವಿಲ್ಲದ್ದು, ದುರ್ಗಂಧವುಳ್ಳದ್ದು, ಹಳಸಿದ್ದು, ತಿಂದು ಮಿಕ್ಕಿದ್ದು (ಅಶುದ್ಧವಾದದ್ದು), ಯಜ್ಞಕ್ಕೆ ಯೋಗ್ಯವಲ್ಲದ್ದೂ ಆದ ಆಹಾರವು ತಾಮಸಗುಣದವರಿಗೆ ಬಹುಪ್ರಿಯವಾಗಿರುತ್ತದೆ.

o o o

(**ಯಾತಯಾಮಂ** ಎಂದರೆ ಜೀರ್ಣವಾಗಿಹೋದುದು ; ಮಿತಿಮೀರಿ ಕಳಿತಿದ್ದು. **ಯಾತ** ಎಂದರೆ ಕಳೆದುಹೋದ **ಯಾಮಂ** ಎಂದರೆ ಕಾಲ ವುಳ್ಳದ್ದು. ಅರ್ಧ ಬೆಂದಿದ್ದು ಎಂದೂ ಅರ್ಥವಾಗುತ್ತದೆ. **ಗತರಸಂ** = ಕೆಲವು ಆಹಾರಪದಾರ್ಥಗಳು ಕಳಿತು ಹೋದರೆ ಮತ್ತೆ ಕೆಲವು ಒಣಗಿಹೋಗಿ ರಸವಿಲ್ಲದೇ ಇರುತ್ತವೆ. **ಪೂತಿ** = ದುರ್ಗಂಧಯುಕ್ತವಾದುದು. **ಪರ್ಯುಷಿತಂ** = ಹಳೆಯದಾದ ಎಂದರೆ ಅನ್ನ, ಸಾರು ಮುಂತಾದುವುಗಳನ್ನು ಮಾಡಿ ಒಂದು ರಾತ್ರಿ ಕಳೆದುಬಿಟ್ಟರೆ ಹಳಸಿದ ವಾಸನೆ ಬರುತ್ತದೆ. ಹಾಗೆ ಹಳಸಿದ ಪದಾರ್ಥ (ತಂಗಳು). **ಉಚ್ಛಿಷ್ಟಂ** = ತಿಂದು ಮಿಕ್ಕಿದ್ದು. **ಅಮೇಧ್ಯಂ** = ದೇವರ ನೈವೇದ್ಯಕ್ಕೆ ಅಯೋಗ್ಯವಾದುದು. ಇಂತಹ ಆಹಾರವು ತಾಮಸಜನರಿಗೆ ಪ್ರಿಯವಾಗಿರುತ್ತದೆ.

ಆಕಸ್ಮಿಕವಾಗಿ ಒಬ್ಬನು ಇಲ್ಲಿ ಹೇಳಿರುವ ತಾಮಸಪದಾರ್ಥಗಳನ್ನು ತಿಂದುಬಿಡುವುದರಿಂದ ತಾಮಸಿಯಾಗುವುದಿಲ್ಲ. ಈ ಪದಾರ್ಥಗಳು ಯಾವ ನಿಗೆ ಪ್ರಿಯವಾಗಿ ಕಾಣುವುವೋ ಅವನು ತಾಮಸಿ. ತಾಮಸಿಯು ಸಾತ್ತ್ವಿಕ ವಾದ ಆಹಾರವನ್ನೂ ಕೆಲವೊಮ್ಮೆ ತೆಗೆದುಕೊಳ್ಳಬಹುದು. ಅಷ್ಟರಿಂದಲೇ ಅವನು ಸಾತ್ತ್ವಿಕನಾಗುವುದಿಲ್ಲ. ಆದರೆ ಯಾವನಿಗೆ ಈ ಶ್ಲೋಕದಲ್ಲಿ ಹೇಳಿ ರುವ ಆಹಾರಪದಾರ್ಥಗಳು ಹೆಚ್ಚು ಪ್ರಿಯವಾಗಿ ಕಾಣುತ್ತವೆಯೋ ಅವನು ತಾಮಸಿ. ಇವುಗಳನ್ನು ಪ್ರೀತಿಸುವವನನ್ನು ನಾವು ತಾಮಸಿಯೆಂದು ಗುರು

ತಿಸಬಹುದಾಗಿದೆ. ಅಥವಾ ಸಾತ್ತ್ವಿಕ-ರಾಜಸ-ತಾಮಸವರ್ಗಗಳಲ್ಲಿ ನಾವು ಯಾವ ಪಂಗಡಕ್ಕೆ ಸೇರುತ್ತೇವೆಂಬುದನ್ನೂ ವಿಂಗಡಿಸಿಕೊಳ್ಳಬಹುದಾಗಿದೆ.)

o o o

**ಯಾತಯಾಮಂ** = ಈ ಪದಕ್ಕೆ ಪಕ್ವವಾದುದು ಎಂದು ಅರ್ಥಮಾಡಬೇಕು. ಏಕೆಂದರೆ : ನಿರ್ವೀರ್ಯ (ಸಾರಹೀನವಾದ) ಭೋಜನ ಎಂಬ ಅರ್ಥವನ್ನು ಗತರಸ ಎಂಬ ಶಬ್ದವು ಹೇಳುತ್ತದೆ. **ಗತರಸಂ** = ನಿಸ್ಸಾರವಾದುದು. **ಪೂತಿ ಪರ್ಯುಷಿತಂ** = ದುರ್ಗಂಧದಿಂದ ಕೂಡಿದುದು ಮತ್ತು ಪರ್ಯುಷಿತವಾದುದು ಎಂದರೆ ಯಾವುದನ್ನು ಪಾಕಮಾಡಿ ಒಂದು ರಾತ್ರಿ ಕಳೆದುಹೋಗಿದೆಯೋ ಅದು. **ಉಚ್ಛಿಷ್ಟಂ** = ತಿಂದು ಮಿಕ್ಕಿರುವುದು. **ಅಮೇಧ್ಯಂ** = ಯಜ್ಞಕ್ಕೆ ಯೋಗ್ಯವಲ್ಲದ್ದು. ಇಂತಹ ಆಹಾರವು ತಾಮಸರಿಗೆ ಪ್ರಿಯವಾಗಿರುತ್ತದೆ. (ಶಂ. ಭಾ.)

**ಯಾತಯಾಮಂ** = ಬಹಳ ಕಾಲ ಇರಿಸಲ್ಪಟ್ಟಿದ್ದು. **ಗತರಸಂ** = ಸ್ವಾಭಾವಿಕವಾದ ರಸವನ್ನು ಕಳೆದುಕೊಂಡಿರುವುದು. **ಪೂತಿ** = ದುರ್ಗಂಧದಿಂದ ಕೂಡಿದ್ದು. **ಪರ್ಯುಷಿತಂ** = ಕಾಲವು ಮೀರಿಹೋಗಿರುವುದರಿಂದ ಬೇರೇ ರಸವನ್ನು ಹೊಂದಿಬಿಟ್ಟಿರುವುದು. **ಉಚ್ಛಿಷ್ಟಂ** = ಗುರುಗಳೇ ಮುಂತಾದವರನ್ನು ಬಿಟ್ಟು ಉಳಿದವರು ತಿಂದು ಮಿಕ್ಕಿದ್ದು. **ಅಮೇಧ್ಯಂ** = ಯಜ್ಞಾರ್ಹವಲ್ಲದ್ದು, ಯಜ್ಞಶಿಷ್ಟವಲ್ಲದ್ದು. ಇಂತಹ ತಮೋಮಯವಾದ ಭೋಜನವು (ಆಹಾರವು) ತಾಮಸರಿಗೆ ಪ್ರಿಯವಾಗಿರುತ್ತದೆ. ಇದು ತಮಸ್ಸನ್ನು ಮತ್ತೂ ವೃದ್ಧಿಪಡಿಸುತ್ತದೆ. ಆದುದರಿಂದ ಆತ್ಮಹಿತೈಷಿಗಳು ಸತ್ತ್ವ ವೃದ್ಧಿಗೋಸ್ಕರ ಸಾತ್ತ್ವಿಕವಾದ ಆಹಾರವನ್ನೇ ಸೇವಿಸಬೇಕು. (ರಾ. ಭಾ.)

ಮುಂದೆ ಶ್ರೀಕೃಷ್ಣನು ಯಜ್ಞದಲ್ಲಿ ಸಾತ್ತ್ವಿಕ-ರಾಜಸ-ತಾಮಸಭೇದಗಳನ್ನು ಹೇಳುತ್ತಾನೆ. ಆಹಾರದಂತೆಯೇ ಸಾತ್ತ್ವಿಕರಿಗೆ ಸಾತ್ತ್ವಿಕಯಜ್ಞವೂ, ರಾಜಸಿಗಳಿಗೆ ರಾಜಸಯಜ್ಞವೂ, ತಾಮಸರಿಗೆ ತಾಮಸಯಜ್ಞವೂ ಪ್ರಿಯವಾಗುತ್ತದೆ.

**ಓಂ ಅಫಲಾಕಾಂಕ್ಷಿಭಿರ್ಯಜ್ಞೋ ವಿಧಿದೃಷ್ಟೋ ಯ ಇಜ್ಯತೇ ।**
**ಯಷ್ಟವ್ಯಮೇವೇತಿ ಮತಃ ಸಮಾಧಾಯ ಸ ಸಾತ್ತ್ವಿಕಃ ॥೧೧॥**

ಯಾಗವನ್ನು ಮಾಡಿಯೇ ತೀರಬೇಕು–ಎಂದು ಮನಸ್ಸನ್ನು ದೃಢಪಡಿಸಿ ಕೊಂಡು ಫಲಾಕಾಂಕ್ಷೆಯಿಲ್ಲದೇ ವಿಧ್ಯುಕ್ತವಾಗಿ ಯಾವ ಯಜ್ಞವನ್ನು ಮಾಡು ತ್ತಾರೆಯೋ ಅದು ಸಾತ್ತ್ವಿಕಯಜ್ಞ ಎನಿಸುತ್ತದೆ.

* * *

(ಯಜ್ಞವೆಂದರೆ ಭಗವಂತನ ಪೂಜಾಕಾರ್ಯ. ಪಂಚಮಹಾಯಜ್ಞಗಳೇ ಮುಂತಾದುವುಗಳು. ಶಾಸ್ತ್ರವಿಧಿಯು ಇವುಗಳ ಆಚರಣೆಯನ್ನು ಬೋಧಿಸುತ್ತದೆ. ಆದರೆ ಇವುಗಳನ್ನು ಯಾವ ಫಲದ ಅಪೇಕ್ಷೆಯೂ ಇಲ್ಲದೇ ಫಲತ್ಯಾಗಮಾಡಿ ಪರಮಾತ್ಮನ ಪ್ರೀತ್ಯರ್ಥವಾಗಿ ಮಾಡಬೇಕು. ಹೀಗೆ ಮಾಡುವ ಯಜ್ಞಕ್ಕೆ ಸಾತ್ತ್ವಿಕಯಜ್ಞವೆಂದು ಹೆಸರು. ಸಾತ್ತ್ವಿಕರು ಯಜ್ಞಮಾಡುವಾಗ ಹೀಗೆಯೇ ಮಾಡುತ್ತಾರೆ. ಅವರಿಗೆ ಯಾವ ವಿಧವಾದ ಫಲಾಕಾಂಕ್ಷೆಯೂ ಇರುವುದಿಲ್ಲ. ಕೇವಲ ಕರ್ತವ್ಯದೃಷ್ಟಿಯಿಂದ ಮಾಡುತ್ತಾರೆ. ಅವರು ಮಾಡಬೇಕಾಗಿರುವ ಕರ್ಮಗಳನ್ನು ಯಾವ ಕಾರಣದಿಂದಲೂ ಬಿಡತಕ್ಕವರಲ್ಲ. ಸತ್ತ್ವಶುದ್ಧಿಗೋಸ್ಕರ ಅಥವಾ ಲೋಕಸಂಗ್ರಹಾರ್ಥವಾಗಿ ಪರಮಾತ್ಮನಿಗೆ ಪ್ರೀತಿಯಾಗಲೆಂದು ಮಾಡುತ್ತಾರೆ. ಅವರು ಮಾಡುವ ಈ ವಿಧವಾದ ಯಜ್ಞಕ್ಕೆ ಸಾತ್ತ್ವಿಕಯಜ್ಞವೆಂದು ಹೆಸರು.)

o o o

**ಯಷ್ಟವ್ಯಮೇವೇತಿ ಮನಃ ಸಮಾಧಾಯ** = ಯಜ್ಞಮಾಡುವುದೇ ಎಂದರೆ ಯಜ್ಞದ ಸ್ವರೂಪವನ್ನು ನೆರವೇರಿಸುವುದೇ ಕರ್ತವ್ಯವು ಎಂದು ಮನಸ್ಸನ್ನು ಸಮಾಧಾನಪಡಿಸಿಕೊಂಡು–'ಇದರಿಂದ ನಾನು ಯಾವ ಪುರುಷಾರ್ಥವನ್ನೂ ಸಾಧಿಸಬೇಕಾಗಿಲ್ಲ'–ಎಂದು ನಿಶ್ಚಯಿಸಿ. (ಶಂ. ಭಾ.)

**ಯಷ್ಟವ್ಯಮೇವೇತಿ** =ಭಗವಂತನ ಆರಾಧನಾರೂಪವಾಗಿರುವ ಇದಕ್ಕೆ ಅದೇ ಪ್ರಯೋಜನ ; ಬೇರೆ ಯಾವ ಪ್ರಯೋಜನವೂ ಇಲ್ಲ. ಆದುದರಿಂದ ಯಜ್ಞಮಾಡಬೇಕು–ಎಂದು ಮನಸ್ಸನ್ನು ಏಕಾಗ್ರವಾಗಿ ಮಾಡಿಕೊಂಡು. (ರಾ. ಭಾ.)

**ಓಂ ಅಭಿಸಂಧಾಯ ತು ಫಲಂ ದಮ್ಭಾರ್ಥಮಪಿ ಚೈವ ಯತ್ ।**
**ಇಜ್ಯತೇ ಭರತಶ್ರೇಷ್ಠ ತಂ ಯಜ್ಞಂ ವಿದ್ಧಿ ರಾಜಸಮ್ ॥೧೨॥**

ಭರತಶ್ರೇಷ್ಠನೇ! ಫಲವನ್ನು ಮನಸ್ಸಿನಲ್ಲಿಟ್ಟುಕೊಂಡು ಅದಕ್ಕಾಗಿಯೂ

ಮತ್ತು ದಂಭಕ್ಕಾಗಿಯೂ ಯಾವುದು ಮಾಡಲ್ಪಡುವುದೋ ಅದು ರಾಜಸ ಯಜ್ಞವೆಂದು ತಿಳಿ.

* * *

(ಸಾಮಾನ್ಯವಾಗಿ ನಾವೆಲ್ಲರೂ ಮಾಡುವುದು ರಾಜಸಯಜ್ಞವೇ ಆಗಿದೆ. ದೇವರಿಗೆ ಕೈಮುಗಿಯಬೇಕಾದರೂ ಯಾವುದಾದರೊಂದು ಆಸೆಯು, ಅಥವಾ ಆಸೆಯನ್ನು ತೀರಿಸಿಕೊಡಬೇಕೆಂಬ ಪ್ರಾರ್ಥನೆಯು ಮನಸ್ಸಿನಲ್ಲಿ ಮೂಡಿಯೇ ಇರುತ್ತದೆ. ಕರ್ತವ್ಯದೃಷ್ಟಿಯಿಂದ ಪರಮಾತ್ಮನಿಗೆ ಪ್ರೀತಿಯಾಗಲೆಂದು ನಮಸ್ಕಾರಮಾಡುವ ಸಾತ್ತ್ವಿಕರ ಸಂಖ್ಯೆಯು ಬಹಳ ಕಡಿಮೆ. ನಮಸ್ಕಾರಮಾಡಿ 'ಕಾಪಾಡು ಸ್ವಾಮಿ' ಎಂದಾದರೂ ಕೇಳಿಕೊಳ್ಳುವುದು ಮನುಷ್ಯನ ಸ್ವಭಾವವಾಗಿರುತ್ತದೆ. ನಮಸ್ಕಾರಮಾಡಿ ನಮ್ಮನ್ನೇ ಅವನಿಗೆ ಒಪ್ಪಿಸಿಕೊಂಡನಂತರ ನಮ್ಮ ಯೋಗ-ಕ್ಷೇಮಗಳ ಭಾರವು ಅವನ ಮೇಲೆಯೇ ಬಿದ್ದಿದೆ. ಆದುದರಿಂದ ಲೌಕಿಕವಾದ 'ಇಂತಹ ಕಷ್ಟದಿಂದ ಪಾರುಮಾಡು ; ಇಂತಹ ಫಲವನ್ನು ಕೊಡು ; ಕಾಪಾಡು' ಎಂದು ಕೇಳಿಕೊಳ್ಳಬೇಕಾಗಿಯೇ ಇಲ್ಲ–ಎಂದು ಯಾರೂ ಸಾಮಾನ್ಯವಾಗಿ ಯೋಚಿಸುವುದಿಲ್ಲ. ಹೀಗೆ ಫಲಾಕಾಂಕ್ಷೆಯಿಂದ ಫಲದ ಅಪೇಕ್ಷೆಯನ್ನು ಮನಸ್ಸಿನಲ್ಲಿಟ್ಟುಕೊಂಡು ವಿಧಿಪೂರ್ವಕವಾಗಿ ಮಾಡುವ ಯಜ್ಞ, ಪೂಜೆ, ಪ್ರಾರ್ಥನೆ ಮುಂತಾದುವು ಗಳು ರಾಜಸಗುಣದಿಂದ ಕೂಡಿರುತ್ತವೆ. ರಾಜಸರು ಈ ರೀತಿಯಲ್ಲಿ ಫಲಕಾಮನೆಯಿಂದ ಯಜ್ಞಾದಿಗಳನ್ನು ಮಾಡಲು ಅಪೇಕ್ಷಿಸುತ್ತಾರೆ.

**ದಮ್ಭಾರ್ಥಮಪಿ** = ದಾಂಭಿಕವಾಗಿ ಮಾಡುವುದು–ಎಂದರೆ ಲೋಕ ಕಲ್ಯಾಣಕ್ಕಾಗಿ ಯಜ್ಞಮಾಡುತ್ತೇನೆ. ಪ್ರಪಂಚದ ಶಾಂತಿಗಾಗಿ ಯಜ್ಞಮಾಡು ತ್ತೇನೆ–ಮುಂತಾಗಿ ತಾನು ಮಾಡುವ ಯಜ್ಞದ ವಿಷಯವಾಗಿ ಪ್ರಚಾರ ಮಾಡುವುದು ; ಫಲಕಾಮನೆಯನ್ನಿಟ್ಟುಕೊಂಡು ಮಾಡುವಾಗ ದಂಭ ದೊಡನೆ ಮಾಡುವುದು ; ನಾಲ್ಕು ಜನರು ಮೆಚ್ಚಲೆಂದೂ ಮಾಡುವುದು– ಮುಂತಾದುವುಗಳು ಇದರಲ್ಲಿ ಸೇರಿಕೊಂಡಿರುತ್ತವೆ. ಫಲಾಭಿಸಂಧಿಯ ಜೊತೆಯಲ್ಲಿ ಮೇಲೆ ಹೇಳಿದ ದಂಭವೂ ಸೇರಿಕೊಂಡಿದ್ದರೆ ಅದು ರಾಜಸ ವೆನಿಸಿಕೊಳ್ಳುತ್ತದೆ.

ಫಲಾಭಿಸಂಧಿಯೂ ಇಲ್ಲದೇ ಕಾಪಟ್ಯದಿಂದ ಕೂಡಿ ಕೇವಲ ದಂಭದ ಉದ್ದೇಶದಿಂದಲೇ ಮಾಡುವುದು ತಾಮಸವಾದ ಯಜ್ಞಕ್ಕೆ ಸೇರುತ್ತದೆ.)

o o o

**ಫಲಮಭಿಸಂಧಾಯ** = ಫಲದ ಉದ್ದೇಶದಿಂದ. (ಶಂ. ಭಾ.)

ಫಲಾಭಿಸಂಧಿಯುಳ್ಳವರು ದಂಭಗರ್ಭರಾಗಿ ಮತ್ತು ಕೀರ್ತಿಕಾಮನೆಯಿಂದ ಯಾವ ಯಜ್ಞವನ್ನು ಮಾಡುತ್ತಾರೆಯೋ ಅದನ್ನು ರಾಜಸವೆಂದು ತಿಳಿ. ಕೇವಲ ದಂಭಗರ್ಭವಾದುದು ತಾಮಸ. ರಾಜಸಕರ್ಮದಲ್ಲಿ ತಾನು ದಾಂಭಿಕನೆಂದು ಪ್ರಸಿದ್ಧಿಪಡಿಸುವ ಅಭಿಸಂಧಿಯಿರುವುದಿಲ್ಲ. ಐಹಿಕ-ಆಮುಷ್ಮಿಕ ಫಲಗಳ ಆಸೆ, ಕೀರ್ತಿಕಾಮನೆ ಇವೂ ಸೇರಿರಬಹುದು. (ರಾ. ಭಾ.)

**ಓಂ ವಿಧಿಹೀನಮಸೃಷ್ಟಾನ್ನಂ ಮನ್ತ್ರಹೀನಮದಕ್ಷಿಣಮ್ ।**
**ಶ್ರದ್ಧಾವಿರಹಿತಂ ಯಜ್ಞಂ ತಾಮಸಂ ಪರಿಚಕ್ಷತೇ ॥೧೩॥**

ಯಾವ ಯಜ್ಞದಲ್ಲಿ ವಿಧಿಯಿರುವುದಿಲ್ಲವೋ, ಅನ್ನದಾನವಿರುವುದಿಲ್ಲವೋ, ಮಂತ್ರವಿರುವುದಿಲ್ಲವೋ, ದಕ್ಷಿಣೆಯಿರುವುದಿಲ್ಲವೋ, ಶ್ರದ್ಧೆಯೂ ಇರುವುದಿಲ್ಲವೋ–ಆ ಯಜ್ಞವು ತಾಮಸವೆನಿಸುತ್ತದೆ.

* * *

(ಸಾತ್ತ್ವಿಕರಂತೆ ಮತ್ತು ರಾಜಸರಂತೆ ತಾಮಸರೂ ಯಜ್ಞಗಳನ್ನು ಮಾಡುತ್ತಾರೆ. ಆದರೆ ಅವರು ಮಾಡುವ ಯಜ್ಞವು ಈ ಬಗೆಯದಾಗಿರುತ್ತದೆ. ಅವರು ವಿಧಿ-ನಿಷೇಧಗಳನ್ನು ಪರಿಪಾಲಿಸತಕ್ಕವರಲ್ಲ. ಯಜ್ಞವು ನಡೆದರೆ ಸಾಕು, ಹೋಮಮಾಡಿದರೆ ಸಾಕು–ಎನ್ನುವವರು. ಯಜ್ಞಕಾಲದಲ್ಲಿ ಭೂತತೃಪ್ತಿಗಾಗಿ ಅನ್ನಸಂತರ್ಪಣೆಯಾಗಬೇಕು ; ಬ್ರಹ್ಮಭೋಜನವಾಗಬೇಕು. ತಾಮಸಿಗಳಿಗೆ ಇದು ಯಾವುದೂ ಬೇಡ. ಬ್ರಹ್ಮಭೋಜನವು ವ್ಯರ್ಥವೆಂದು ಭಾವಿಸುವರು. ಮೊದಲಿನಿಂದ ಕಡೆಯವರೆಗೂ ಯಜ್ಞವನ್ನು ಮಂತ್ರೋಕ್ತವಾಗಿ ವಿಧಿಪೂರ್ವಕವಾಗಿ ಮಾಡಬೇಕಾಗಿಲ್ಲ. ಸಂಗ್ರಹವಾಗಿ ಹೇಗೋ ಹಾಗೆ ಮಾಡಿ ಮುಗಿಸಿದರೆ ಸಾಕು ಎನ್ನುವವರು.

**ಅದಕ್ಷಿಣಂ** = ಹೇರಳವಾಗಿ ದಕ್ಷಿಣೆಕೊಡುವ ಸಾಮರ್ಥ್ಯವಿದ್ದರೂ

ಕಾರ್ಪಣ್ಯಮಾಡುವುದು ; ಕೊಡುವ ಸ್ವಲ್ಪವನ್ನೂ ತಿರಸ್ಕಾರದಿಂದ ಕೊಡುವುದು. ಶ್ರದ್ಧಾವಿರಹಿತಂ = ಶ್ರದ್ಧೆಯಿಲ್ಲದೇ ಮಾಡುವುದು ; ಕಾಟಾಚಾರಕ್ಕಾಗಿ ಮಾಡುವುದು ; ಆಯಿತು ಎಂದರೆ ಸಾಕು ಎಂಬ ತಾತ್ಸಾರದಿಂದ ಮಾಡುವುದು ; ಮಾಡದಿದ್ದರೆ ಜನರು ಏನನ್ನುತ್ತಾರೋ ಎಂಬ ಭಯದಿಂದ ಮಾಡುವುದು–ಹೀಗೆ ಮಾಡುವ ಕರ್ಮಗಳಿಗೆ ಅಥವಾ ಯಜ್ಞಕ್ಕೆ ತಾಮಸಯಜ್ಞವೆಂದು ಹೇಳುತ್ತಾರೆ. ತಾಮಸಪ್ರಕೃತಿಯವರು ಹೀಗೆ ಯಜ್ಞಗಳನ್ನು ಮಾಡುತ್ತಾರೆ.)

o o o

ವಿಧಿಹೀನಂ = ಶಾಸ್ತ್ರೋಕ್ತವಾದ ಪ್ರಕಾರಕ್ಕೆ ವಿರುದ್ಧವಾದುದು. **ಅಸೃಷ್ಟಾನ್ನಂ** = ಯಜ್ಞದಲ್ಲಿ ಬ್ರಾಹ್ಮಣರಿಗೆ ಅನ್ನದಾನಮಾಡದೇ ಇರುವುದು. **ಮನ್ತ್ರಹೀನಂ** = ಮಂತ್ರಸ್ವರ-ವರ್ಣಗಳು ಇಲ್ಲದೇ ಇರುವುದು. **ಅದಕ್ಷಿಣಂ** = ವಿಧ್ಯುಕ್ತವಾದ ದಕ್ಷಿಣೆಯನ್ನು ಕೊಡದೇ ಇರುವುದು. **ಶ್ರದ್ಧಾವಿರಹಿತಂ** = ಶ್ರದ್ಧೆಯೂ ಇಲ್ಲದಿರುವುದು. (ಶಂ. ಭಾ.)

ವಿಧಿಹೀನಂ = ಬ್ರಾಹ್ಮಣವಚನವಿಲ್ಲದೇ ಇರುವುದು. ಸದಾಚಾರಯುಕ್ತರಾದ ವಿದ್ವಾಂಸರಾದ ಬ್ರಾಹ್ಮಣರು 'ಯಜ್ಞಮಾಡು' ಎಂಬ ಅನುಜ್ಞೆಯನ್ನು ಕೊಡದೇ ಇರುವುದು. **ಅಸೃಷ್ಟಾನ್ನಂ** = ಯಜ್ಞಕ್ಕೋಸ್ಕರ ವಿಹಿತವಾಗಿರುವ ದ್ರವ್ಯವು ಇಲ್ಲದೇ ಇರುವುದು. (ನ್ಯಾಯದಿಂದ ಬಂದ ದ್ರವ್ಯವಿಲ್ಲದೇ ಇರುವುದು.) (ರಾ. ಭಾ.)

ಮುಂದೆ ಶ್ರೀಕೃಷ್ಣನು ತಪಸ್ಸಿನಲ್ಲಿ ಸಾತ್ತ್ವಿಕಾದಿ ಭೇದಗಳನ್ನು ಹೇಳುತ್ತಾನೆ. ಮೊದಲು ಮೂರು ವಿಧವಾದ ತಪಸ್ಸನ್ನು ಹೇಳುತ್ತಾನೆ.

**ಓಂ ದೇವದ್ವಿಜಗುರುಪ್ರಾಜ್ಞಪೂಜನಂ ಶೌಚಮಾರ್ಜವಮ್ ।**
**ಬ್ರಹ್ಮಚರ್ಯಮಹಿಂಸಾ ಚ ಶಾರೀರಂ ತಪ ಉಚ್ಯತೇ ॥೧೪॥**

ದೇವತೆಗಳು, ಬ್ರಾಹ್ಮಣರು, ಗುರುಗಳು, ಪ್ರಾಜ್ಞರು–ಇವರನ್ನು ಪೂಜಿಸುವಿಕೆ ; ಶುಚಿತ್ವ, ಋಜುತ್ವ, ಬ್ರಹ್ಮಚರ್ಯ ಮತ್ತು ಅಹಿಂಸೆ–ಇವು ಶರೀರದಿಂದ ನಡೆಸಲ್ಪಡುವ ತಪಸ್ಸು ಎನಿಸುತ್ತವೆ.

* * *

(ತಪಸ್ಸಿನಲ್ಲಿ ಕೃಚ್ಛ್ರ-ಚಾಂದ್ರಾಯಣಾದಿ ತಪಸ್ಸುಗಳು ಒಂದು ಬಗೆಯವು. ಶ್ರೀಕೃಷ್ಣನಿಲ್ಲಿ ಈ ರೀತಿಯ ತಪಸ್ಸಿನ ಬಗೆಗೆ ಹೇಳಿಲ್ಲ. ಇಲ್ಲಿ ಹೇಳಿರುವ ತಪಸ್ಸು ಮೂರು ವಿಧವಾಗಿದೆ. ಕಾಯಿಕ, ವಾಚಿಕ ಮತ್ತು ಮಾನಸಿಕ. ಈ ಮೂರು ವಿಧವಾದ ತಪಸ್ಸನ್ನು ಮಾಡಬೇಕು ಎನ್ನುತ್ತಾನೆ ಶ್ರೀಕೃಷ್ಣ. ಅದರ ವಿಧಾನವನ್ನು ಹೇಳಿಕೊಡುತ್ತಾನೆ. ಈ ಶ್ಲೋಕದಲ್ಲಿ ಹೇಳಿರುವುದು ಕಾಯಿಕವಾದ ತಪಸ್ಸು.

ದೇವರ ಪೂಜೆಯನ್ನು ಮಾಡಬೇಕು. ಇಲ್ಲಿ ಯಾವ ದೇವರ ಪೂಜೆ ಯನ್ನು ಮಾಡಬೇಕೆಂದು ಶ್ರೀಕೃಷ್ಣನು ನಿರ್ದೇಶಿಸಿಲ್ಲ. ಪ್ರತಿಯೊಬ್ಬರಿಗೂ ಇಷ್ಟದೇವತೆಯೊಂದು ಇದ್ದೇ ಇರುತ್ತದೆ. ಆ ದೇವತೆಯ ಪೂಜೆಯನ್ನು ಅನನ್ಯಭಕ್ತಿಯಿಂದ ಮಾಡಿ ಅದನ್ನು ಒಲಿಸಿಕೊಳ್ಳಬೇಕು. ಆ ದೇವತೆಯು ನಮಗೆ ರಕ್ಷಣೆಯನ್ನು ನೀಡುವುದು ಮಾತ್ರವಲ್ಲದೇ ನಾವು ಅನನ್ಯಶರಣತೆ ಯಿಂದ ಪ್ರಾರ್ಥಿಸಿದಲ್ಲಿ ಅಧ್ಯಾತ್ಮಮಾರ್ಗವನ್ನು ತೋರಿಸಿಕೊಡುತ್ತದೆ.

ದ್ವಿಜರು ಎಂದರೆ ಉಪನಯನಸಂಸ್ಕಾರವನ್ನು ಹೊಂದಿದವರು. ಪ್ರಕೃತ ಸಂದರ್ಭದಲ್ಲಿ ಹೇಳಿರುವುದು ವೇದ-ವೇದಾಂಗಪಾರಂಗತನಾದ ಜ್ಞಾನಿ ಯಾದ ಬ್ರಾಹ್ಮಣನನ್ನು ಕುರಿತು. ವೇದ-ವೇದಾಂಗಪಾರಂಗತನಾದ ಸದಾ ಚಾರಸಂಪನ್ನನಾದ ಬ್ರಾಹ್ಮಣನು ಅಧ್ಯಾತ್ಮಸಾಧನೆಗೆ ಮಾರ್ಗದರ್ಶನ ಮಾಡ ಬಲ್ಲನು. ನಿಃಸ್ಪೃಹನಾದ ಇಂತಹ ಬ್ರಾಹ್ಮಣನ ಸೇವೆಮಾಡಿ ಪಡೆಯುವ ಆಶೀರ್ವಾದಗಳಿಂದಲೂ ಆಧ್ಯಾತ್ಮಮಾರ್ಗವು ಸುಗಮವಾಗುತ್ತದೆ. ಗುರು ಎಂಬುವನು ಸಾಕ್ಷಾತ್ ಭಗವಂತನೇ ಸರಿ. **ಗುರುರೇವ ಹರಿಃ ಸಾಕ್ಷಾ ದ್ಗುರುರೇವ ಹರಿಃ ಸ್ವಯಮ್**–ಗುರುವಿಗೂ ದೇವರಿಗೂ ಯಾವ ವ್ಯತ್ಯಾ ಸವೂ ಇಲ್ಲ. ಸಂಸಾರಸಾಗರವನ್ನು ದಾಟಲು ಗುರು ಎಂಬ ದೋಣಿಯು ಅತ್ಯಾವಶ್ಯಕ. ಅಧ್ಯಾತ್ಮಸಾಧಕನು ಗುರುವಿನ ಗುಲಾಮನಾಗಿಯೇ ತೀರಬೇಕು. ಗುರುಶಬ್ದಕ್ಕೆ ತಂದೆ, ಜ್ಯೇಷ್ಠಭ್ರಾತಾ–ಎಂಬ ಅರ್ಥಗಳೂ ಇವೆ.

**ಉಪಾಧ್ಯಾಯಃ ಪಿತಾ ಜ್ಯೇಷ್ಠಭ್ರಾತಾ ಚೈವ ಮಹೀಪತಿಃ ।**
**ಮಾತುಲಃ ಶ್ವಶುರಸ್ತ್ರಾತಾ ಮಾತಾಮಹಪಿತಾಮಹೌ ।**
**ವರ್ಣಜ್ಯೇಷ್ಠಃ ಪಿತೃವ್ಯಶ್ಚ ಪುಂಸ್ಯೇತೇ ಗುರವಃ ಸ್ಮೃತಾಃ ॥**

ಉಪಾಧ್ಯಾಯ, ತಂದೆ, ಹಿರಿಯಣ್ಣ, ರಾಜ, ಸೋದರಮಾವ, ಭಾರ್ಯೆಯ ತಂದೆ, ರಕ್ಷಕ, ಮಾತಾಮಹ-ಪಿತಾಮಹರು, ವರ್ಣದಲ್ಲಿ ಹಿರಿಯನಾದವನು, ಚಿಕ್ಕಪ್ಪ-ದೊಡ್ಡಪ್ಪಂದಿರು ಇವರೆಲ್ಲರೂ ಗುರುಗಳು ಎಂದು ಹೇಳಲ್ಪಡುತ್ತಾರೆ. ಇವರೆಲ್ಲರನ್ನೂ ಯಥೋಚಿತವಾಗಿ ಗೌರವಿಸಬೇಕು–ಎಂದೂ ಅರ್ಥಮಾಡಬಹುದು.

ಪ್ರಾಜ್ಞರು ಎಂದರೆ ಜ್ಞಾನಿಗಳು. ಆತ್ಮವನ್ನು ತಿಳಿದವರು. ಇವರ ಪೂಜೆ ಎಂದರೆ ಇವರ ಸತ್ಕಾರ-ಸೇವೆಗಳನ್ನು ಮಾಡಬೇಕು. ಇವರ ಪೂಜೆ ಸತ್ಕಾರಗಳನ್ನು ಮಾಡುತ್ತಿದ್ದರೆ ಅಧ್ಯಾತ್ಮಮಾರ್ಗಕ್ಕೆ ಇವುಗಳೇ ಸೋಪಾನವಾಗಿ ಪರಿಣಮಿಸುತ್ತವೆ.

**ಶೌಚಂ** = ಇಲ್ಲಿ ಬಹಿಃಶುದ್ಧಿ. **ಮೃಜ್ಜಲಾಭ್ಯಾಂ ಬಾಹ್ಯಶುದ್ಧಿಃ** ಮೃತ್ತಿಕೆಯಿಂದಲೂ ನೀರಿನಿಂದಲೂ ಶರೀರವನ್ನು ಶುದ್ಧಿಗೊಳಿಸಬೇಕು. **ಆರ್ಜವಂ** = ಋಜುತ್ವವಿರಬೇಕು. ಹೊರಗೊಂದು ಒಳಗೊಂದು ಇರಬಾರದು. ವಕ್ರಬುದ್ಧಿಯಿರಬಾರದು–ಎಂದು ಅರ್ಥವಾಗುತ್ತದೆ. ಆದರೆ ಶಾರೀರತಪಸ್ಸಿನಲ್ಲಿ ಇದನ್ನು ಸೇರಿಸಿರುವುದರಿಂದ ಆರ್ಜವಂ–ಎಂಬುದಕ್ಕೆ 'ಸರಳತೆಯಿಂದ ನಡೆಯಬೇಕು. ಠೀವಿಯಾಗಲೀ ದರ್ಪವಾಗಲೀ ವರ್ತನೆಯಲ್ಲಿ ಇರಬಾರದು' ಎಂದು ಅರ್ಥಮಾಡಬೇಕು.

**ಬ್ರಹ್ಮಚರ್ಯಂ** = ಅಸ್ಖಲಿತವೀರ್ಯನಾಗಿರಬೇಕು. ಬ್ರಹ್ಮಚರ್ಯವ್ರತನಿಷ್ಠನಾಗಿರಬೇಕು.

**ಅಹಿಂಸಾ** = ಯಾವುದೇ ಪ್ರಾಣಿಗೂ ಯಾವುದೇ ಕಾರಣದಿಂದಲೂ ಯಾವುದೇ ರೀತಿಯಲ್ಲಿಯೂ ನೋವನ್ನುಂಟುಮಾಡಬಾರದು. ಇವಿಷ್ಟೂ ಶರೀರದಿಂದ ಆಗತಕ್ಕ ಕಾರ್ಯಗಳಾಗಿವೆ. ಆದುದರಿಂದಲೇ ಇದನ್ನು ಶ್ರೀಕೃಷ್ಣನು ಶಾರೀರತಪಸ್ಸು ಎಂದು ಕರೆದಿರುತ್ತಾನೆ.)

o o o

**ಶಾರೀರಂ ತಪಃ** = ಯಾವುದರಲ್ಲಿ ಶರೀರವೇ ಪ್ರಧಾನವಾಗಿದೆಯೋ ಅಂತಹ ಎಲ್ಲ ಕಾರ್ಯ ಮತ್ತು ಕರಣಗಳಿಂದ ಕರ್ತೃವು ಮಾಡುವ ತಪಸ್ಸು. ಏಕೆಂದರೆ ಮುಂದೆ ಭಗವಂತನು ಪಞ್ಚೈತೇ ತಸ್ಯ ಹೇತವಃ ಎಂದು ಹೇಳುತ್ತಾನೆ. (ಶಂ. ಭಾ.)

**ಶೌಚಂ** = ತೀರ್ಥಸ್ನಾನವೇ ಮುಂತಾದುವು. **ಆರ್ಜವಂ** = ಮನಸ್ಸಿಗೆ ಅನುಗುಣವಾಗಿ ಶರೀರದ ನಡೆ. **ಬ್ರಹ್ಮಚರ್ಯಂ** = ಹೆಂಗಸರಲ್ಲಿ ಭೋಗ್ಯತಾ ಬುದ್ಧಿಯಿಂದ ಮೂಡುವ ದೃಷ್ಟಿ ಮುಂತಾದುವು ಇಲ್ಲದೇ ಇರುವಿಕೆ. **ಅಹಿಂಸಾ**=ಪ್ರಾಣಿಪೀಡನೆಯನ್ನು ಮಾಡದಿರುವಿಕೆ. (ರಾ. ಭಾ.)

**ಓಂ ಅನುದ್ವೇಗಕರಂ ವಾಕ್ಯಂ ಸತ್ಯಂ ಪ್ರಿಯಹಿತಂ ಚ ಯತ್ ।**
**ಸ್ವಾಧ್ಯಾಯಾಭ್ಯಸನಂ ಚೈವ ವಾಙ್ಮಯಂ ತಪ ಉಚ್ಯತೇ ॥೧೫॥**

ಪ್ರಾಣಿಗಳನ್ನು ಕೆರಳಿಸದೇ ಇರುವುದು ; ಸತ್ಯವೂ, ಪ್ರಿಯವೂ, ಹಿತವೂ ಆದ ಮಾತು ; ವೇದಗಳ ಅಭ್ಯಾಸ–ಇವುಗಳು ವಾಙ್ಮಯತಪಸ್ಸು ಎನಿಸುತ್ತವೆ.

* * *

(ಮಾತನ್ನು ಹೇಗೆ ಆಡಬೇಕೆಂಬುದನ್ನು ಶ್ರೀಕೃಷ್ಣನಿಲ್ಲಿ ಬೋಧಿಸುತ್ತಾನೆ. ಮಾತನಾಡುವುದೂ ಒಂದು ಕಲೆ. ಎಲ್ಲರೊಡನೆಯೂ ಒಂದೇ ಸಮನಾಗಿ ಯಾರೂ ಯಾವಾಗಲೂ ಮಾತನಾಡುವುದಕ್ಕಾಗುವುದಿಲ್ಲ. ಒಬ್ಬೊಬ್ಬರ ಹತ್ತಿರ ಒಂದೊಂದು ವಿಧವಾಗಿ ಮಾತನಾಡಬೇಕಾಗುತ್ತದೆ. ಆದರೆ ಯಾರೊಡನೆ ಮಾತನಾಡಿದರೂ ಶ್ರೀಕೃಷ್ಣನಿಲ್ಲಿ ಹೇಳಿರುವುದನ್ನು ನೆನಪಿನಲ್ಲಿಟ್ಟುಕೊಂಡು ಮಾತನಾಡಿದರೆ ಅದೇ ವಾಚಿಕವಾದ ತಪಸ್ಸಾಗುತ್ತದೆ. ಮಾತನಾಡುವಾಗ ಮೊದಲನೆಯ ನಿಯಮ :

**ಅನುದ್ವೇಗಕರಂ ವಾಕ್ಯಂ** = ಉದ್ವೇಗಗೊಳಿಸುವಂತಹ, ಮನಸ್ಸನ್ನು ಕ್ಷೋಭೆಗೊಳಿಸುವ ಘಟನೆಯನ್ನು ಹೇಳುವಾಗಲೂ ಮೃದುವಾದ ಮಾತು ಗಳಿಂದ ಅದನ್ನು ತಿಳಿಸಬೇಕು. ಉದ್ವೇಗಗೊಳಿಸುವ ಮಾತನ್ನು ಯಾರೊಡ ನೆಯೂ ಆಡಬಾರದು. ಉದ್ವೇಗವುಂಟಾಗುವ ವಿಷಯವನ್ನು ಹೇಳಬೇಕಾಗಿ ಬಂದರೂ ಉದ್ವೇಗವಾಗದ ರೀತಿಯಲ್ಲಿ ಅದನ್ನು ಹೇಳಬೇಕು. ಬೀದಿ ಯಲ್ಲಾಡುವ ಮಗುವು–'ಬಿದ್ದುಬಿಟ್ಟಿತು' ಎಂದು ತಾಯಿಗೆ ಹೇಳಿದರೆ ಒಡನೆಯೇ ಅವಳು ಉದ್ವಿಗ್ನಳಾಗುತ್ತಾಳೆ. 'ಸ್ವಲ್ಪ ತತ್ತರಿಸಿದ. ಅಷ್ಟರಲ್ಲೇ ಎತ್ತಿಕೊಂಡೆ. ಅಷ್ಟೇನೂ ಪೆಟ್ಟಾಗಿಲ್ಲ'–ಎಂದು ಹೇಳಿದರೆ ಅವಳು ಅಷ್ಟು ಉದ್ವೇಗಗೊಳ್ಳುವುದಿಲ್ಲ–ಕೆಲವು ಸಂದರ್ಭಗಳಲ್ಲಿ ಕೆಲವು ದೃಶ್ಯಗಳನ್ನು

ನೋಡಿ ಮನುಷ್ಯನು ಸ್ವಾಭಾವಿಕವಾಗಿಯೇ ಉದ್ವಿಗ್ನನಾಗುವುದುಂಟು. ಹಾಗೆ ಉದ್ವಿಗ್ನನಾಗಬಾರದು ; ಉದ್ವಿಗ್ನತೆಯುಂಟಾಗುವಂತೆ ಮಾತನ್ನೂ ಆಡ ಬಾರದು. ಸತ್ಯಂ ಪ್ರಿಯಹಿತಂ ಚ ಯತ್–ಆಡುವ ಮಾತು ಯಾವಾಗಲೂ ಸತ್ಯದಿಂದ ಕೂಡಿರಬೇಕು. ಸತ್ಯವನ್ನು ಹೇಳಲು ಹೋಗಿ ಅಪ್ರಿಯವಾದುದನ್ನು ಹೇಳಬಾರದು. ಅಪ್ರಿಯವಾದುದನ್ನು ಹೇಳಬಾರದೆಂದರೆ ಅಸತ್ಯವನ್ನಾದರೂ ಹೇಳಬೇಕೆಂಬ ಅರ್ಥವಲ್ಲ. ಅಪ್ರಿಯವಾದ ಸತ್ಯಸಂಗತಿಯನ್ನು ಅಕಾಲದಲ್ಲಿ ಹೇಳಿಬಿಡುವುದಕ್ಕಿಂತಲೂ ಹೇಳದಿರುವುದೇ ಒಳ್ಳೆಯದು. ಹೇಳುವ ಮಾತು ಹಿತವೂ ಆಗಿರಬೇಕು. ಸತ್ಯವೂ ಹಿತವೂ ಆಗಿರುವುದು ಹೆಚ್ಚು ಸಮಯಗಳಲ್ಲಿ ಪ್ರಿಯವಾಗಿರುವುದಿಲ್ಲ. ಜೂಜಾಡುವುದು ಕೆಟ್ಟುದು. ಜೂಜಾಡಕೂಡದು ಎಂಬುದು ಸತ್ಯವೂ ಹಿತವೂ ಆದ ಮಾತಾಗಿದೆ. ಆದರೆ ಜೂಜುಕೋರನಿಗೆ ಆ ಮಾತು ಹಿತವಾಗಿ ಕಾಣುವುದಿಲ್ಲ.

**ಅಪ್ರಿಯಸ್ಯ ಚ ಪಥ್ಯಸ್ಯ ವಕ್ತಾ ಶ್ರೋತಾ ಚ ದುರ್ಲಭಃ ।**

ಪಥ್ಯವಾದರೂ (ನ್ಯಾಯಸಮ್ಮತ್ರವಾಗಿದ್ದರೂ) ಅಪ್ರಿಯವಾದ ಮಾತನ್ನು ಹೇಳುವವರೂ ಇಲ್ಲ ; ಕೇಳುವವರೂ ಇಲ್ಲ–ಎಂದು ಮಹಾಭಾರತದಲ್ಲಿ ವಿದುರನು ದುರ್ಯೋಧನನಿಗೆ ಹೇಳುತ್ತಾನೆ.

**ಸತ್ಯಂ ಬ್ರೂಯಾತ್ಪ್ರಿಯಂ ಬ್ರೂಯಾನ್ನ ಬ್ರೂಯಾತ್ಸತ್ಯಮಪ್ರಿಯಮ್ ।**
**ಪ್ರಿಯಂ ಚ ನಾನೃತಂ ಬ್ರೂಯಾದೇಷ ಧರ್ಮಃ ಸನಾತನಃ ॥**

೪-೧೩೮

ಎಂದು ಮನುವೂ ಹೇಳಿದ್ದಾನೆ. ಸತ್ಯವೂ ಪ್ರಿಯವೂ ಆಗಿರುವುದನ್ನು ಹೇಳಬೇಕು. ಸತ್ಯವು ಅಪ್ರಿಯವಾಗಿರುವುದಾದರೆ ಹೇಳಕೂಡದು. ಸುಳ್ಳು ಪ್ರಿಯವಾಗಿರುವುದಾದರೂ ಹೇಳಬಾರದು. ಅರ್ಥಾತ್ ಈ ಎರಡು ಶ್ಲೋಕ ಗಳ ಅಭಿಪ್ರಾಯವೂ ಸಹ ಸತ್ಯವೂ, ಪ್ರಿಯವೂ, ಹಿತವೂ ಆಗಿರುವ ಮಾತನ್ನೇ ಹೇಳಬೇಕು–ಎಂಬುದೇ ಆಗಿದೆ. ಮನಸ್ಸಿಗೆ ಕ್ಷೋಭೆಯಾಗದಂತಹ ಮಾತನ್ನೇ ಹೇಳಬೇಕು. ಆದರೆ ಕಟುವಾದ ಸತ್ಯವನ್ನು–ಅದು ಹಿತಕರವೇ

ಆಗಿದ್ದರೂ–ಸಾಮಾನ್ಯಜನರು ಕೇಳಬಯಸುವುದಿಲ್ಲ. ವಿದುರನು ಮಹಾ ಧಾರ್ಮಿಕನು. ಅವನಿಗೆ ಮಾತನಾಡುವ ಬಗೆಯು ಸಂಪೂರ್ಣವಾಗಿ ತಿಳಿ ದಿದ್ದಿತು. ಆದರೆ ದುರ್ಯೋಧನನ ವ್ಯವಹಾರದಲ್ಲಿ ಹಸ್ತಕ್ಷೇಪಮಾಡಿ ಮಾತ ನಾಡುವಾಗ ಅವನ ದುರ್ವರ್ತನೆಯನ್ನು ಖಂಡಿಸದೇ ಇರಲು ಸಾಧ್ಯವಾಗು ತ್ತಲೇ ಇರಲಿಲ್ಲ. ಆದರೂ ವಿದುರನು ಸಾಧ್ಯವಾದಷ್ಟು ಮೃದುವಾದ ರೀತಿ ಯಲ್ಲೇ ದುರ್ಯೋಧನನಿಗೆ ತಿಳಿವಳಿಕೆಯನ್ನು ನೀಡುತ್ತಿದ್ದನು. ಆಗ ವಿದುರನ ಮಾತುಗಳು ಸತ್ಯವಾಗಿದ್ದರೂ ಹಿತವಾಗಿದ್ದರೂ ದುರ್ಯೋಧನನಿಗೆ ಪ್ರಿಯ ವಾಗುತ್ತಿರಲಿಲ್ಲ. ಸತ್ಯವು ಸಾಮಾನ್ಯವಾಗಿ ಅಪ್ರಿಯವಾಗಿರುತ್ತದೆ. ಆದುದ ರಿಂದ ಅದನ್ನು ಅಸಮಯಗಳಲ್ಲಿ ಹೇಳಬಾರದು. ಹೇಳಲೇಬೇಕಾಗಿ ಬಂದಾ ಗಲೂ ಅದನ್ನು ಸಾಧ್ಯವಾದಷ್ಟು ಮೃದುವಾದ ರೀತಿಯಲ್ಲಿ (ಉಪದೇಶ– ಪ್ರಾರ್ಥನೆ ಮುಂತಾದ ಭಂಗಿಯಿಂದ) ತಿಳಿಸಬೇಕು. 'ನೀನು ಮಹಾ ಅವಿ ವೇಕಿ–ಅಯೋಗ್ಯ' ಎಂದು ಅಪ್ರಿಯವಾದ ಮಾತುಗಳಿಂದ ಹೇಳುವುದರ ಬದಲು–'ಶಾಂತನಾಗಿ ವಿವೇಕದಿಂದ ಕೆಲಸಮಾಡಬೇಕು. ಎಲೈ ಸೌಮ್ಯನೇ! ಇಲ್ಲದಿದ್ದರೆ ತೊಂದರೆಯಾಗುವುದು'–ಎಂದು ಮೃದುವಾದ ರೀತಿಯಲ್ಲಿ ಹೇಳಬೇಕು. ಯಾವ ಮಾತನ್ನು ಹೇಳಿದರೆ ಕೇಳಿದವರ ಮನಸ್ಸು ತಂಪಾಗು ವುದೋ ಮತ್ತು ತನ್ನ ಮನಸ್ಸೂ ತಂಪಾಗುವುದೋ ಅಂತಹ ಮಾತನ್ನಾಡ ಬೇಕು. ಇದಕ್ಕೆ ಶ್ರೀಶಂಕರರು ಕೊಟ್ಟಿರುವ ಉಪಮೆಯು ಹೃದಯಂಗಮ ವಾಗಿದೆ. '**ಶಾನ್ತೋ ಭವ ವತ್ಸ! ಸ್ವಾಧ್ಯಾಯಂ ಯೋಗಂ ಚ ಅನು ತಿಷ್ಠ। ತಥಾ ತೇ ಶ್ರೇಯೋ ಭವಿಷ್ಯತಿ।** ಮಗು! ಶಾಂತನಾಗಿರು. ಸ್ವಾಧ್ಯಾಯವನ್ನೂ ಯೋಗವನ್ನೂ ಅನುಷ್ಠಾನಮಾಡು. ಹಾಗಾದರೆ ನಿನಗೆ ಶ್ರೇಯಸ್ಸಾಗುವುದು.'

**ಸ್ವಾಧ್ಯಾಯಾಭ್ಯಸನಂ ಚೈವ** = ಸ್ವಾಧ್ಯಾಯ ಎಂದರೆ ವೇದಾಧ್ಯಯನ. ವೇದಾಭ್ಯಾಸ. ವೇದವನ್ನು ಹೇಳಿಕೊಂಡೇ ಇರುವುದು. ಶಾಸ್ತ್ರವಿಧಿಗೆ ಅನುಗುಣವಾಗಿ ವಿರಾಮವಿಲ್ಲದೇ ನಿರಂತರವಾಗಿ ಅಧ್ಯಯನಮಾಡುವುದು. ಇಂತಹ ವೇದಾಭ್ಯಾಸವನ್ನೂ ವಾಙ್ಮಯವಾದ ತಪಸ್ಸು ಎಂದು ಕರೆ ಯುತ್ತಾರೆ.)

o o o

**ಅನುದ್ವೇಗಕರಂ** = ಉದ್ವೇಗವನ್ನು ಉಂಟುಮಾಡದಿರುವುದೇ ಮುಂತಾದ ಧರ್ಮಗಳು ವಾಕ್ಯ ಎಂಬುದಕ್ಕೆ ವಿಶೇಷಣ. ಇತರರಿಗೆ ತಿಳಿವಳಿಕೆಯನ್ನುಂಟುಮಾಡಲು ನಾವು ಉಪಯೋಗಿಸುವ ವಾಕ್ಯದಲ್ಲಿ ಸತ್ಯವಾಗಿರುವಿಕೆ, ಪ್ರಿಯವಾಗಿರುವಿಕೆ, ಹಿತವಾಗಿರುವಿಕೆ, ಉದ್ವೇಗವನ್ನುಂಟುಮಾಡದಿರುವಿಕೆ–ಎಂಬ ಇವುಗಳಲ್ಲಿ ಯಾವುದಾದರೂ ಒಂದಾಗಲೀ, ಎರಡಾಗಲೀ, ಮೂರಾಗಲೀ ಇಲ್ಲದಿದ್ದರೂ ಅದು ವಾಙ್ಮಯವಾದ ತಪಸ್ಸಾಗುವುದಿಲ್ಲ.

ಯಾವ ವಾಕ್ಯವು ಸತ್ಯವೂ, ಉದ್ವೇಗವನ್ನು ಉಂಟುಮಾಡದೇ ಇರುವುದೂ, ಪ್ರಿಯವೂ ಮತ್ತು ಹಿತವೂ ಆಗಿರುವುದೋ–ಅದು ವಾಙ್ಮಯವಾದ ತಪಸ್ಸು. 'ವತ್ಸ! ಶಾಂತನಾಗು, ಸ್ವಾಧ್ಯಾಯವನ್ನು ಮಾಡು, ಯೋಗವನ್ನಾಚರಿಸು. ಅದರಿಂದ ನಿನಗೆ ಒಳ್ಳೆಯದಾಗುವುದು'–ಎಂಬ ಮಾತೂ, ವಿಧಿಪೂರ್ವಕವಾಗಿ ಸ್ವಾಧ್ಯಾಯವನ್ನು ಅಭ್ಯಾಸಮಾಡುವುದೂ ವಾಙ್ಮಯವಾದ ತಪಸ್ಸಾಗಿದೆ. (ಶಂ. ಭಾ.)

**ಅನುದ್ವೇಗಕರಂ** = ಮನುಷ್ಯನ ಮರ್ಮವನ್ನು ಭೇದಿಸುವುದು, ಚಾಡಿ ಹೇಳುವುದು–ಮುಂತಾದುವು ಇಲ್ಲದಿದ್ದರೆ ಅದು ಅನುದ್ವೇಗಕರವಾಗುತ್ತದೆ. ಭಯ ಮುಂತಾದುವುಗಳಿಗೆ ಕಾರಣವಾಗುವುದಿಲ್ಲ. **ಸ್ವಾಧ್ಯಾಯಾಭ್ಯಸನಂ** = ಇದು ಜಪಯಜ್ಞವನ್ನು ಸೂಚಿಸುತ್ತದೆ.

–ಶ್ರೀವೇದಾಂತದೇಶಿಕರು.

**ಓಂ ಮನಃಪ್ರಸಾದಃ ಸೌಮ್ಯತ್ವಂ ಮೌನಮಾತ್ಮವಿನಿಗ್ರಹಃ ।**
**ಭಾವಸಂಶುದ್ಧಿರಿತ್ಯೇತತ್ತಪೋ ಮಾನಸಮುಚ್ಯತೇ ॥೧೬॥**

ಮನಸ್ಸಿನ ಪ್ರಸನ್ನತೆ, ಸೌಮ್ಯತ್ವ, ಮೌನ, ಆತ್ಮನಿಗ್ರಹ, (ಮನೋನಿಗ್ರಹ) ಭಾವಸಂಶುದ್ಧಿ–ಎಂಬುದು ಮಾನಸ ತಪಸ್ಸೆನಿಸುವುದು.

* * *

(ವಾಚಿಕತಪಸ್ಸಿನ ಲಕ್ಷಣಗಳನ್ನು ಹೇಳಿದನಂತರ ಶ್ರೀಕೃಷ್ಣನು ಮಾನಸಿಕ ತಪಸ್ಸಿನ ವಿಷಯವಾಗಿ ಹೇಳುತ್ತಾನೆ. ಮನಸ್ಸಿನಲ್ಲಿ ಪ್ರಸನ್ನತೆಯಿರಬೇಕು. ಹಿಂದೆ ವಾಚಿಕತಪಸ್ಸಿನಲ್ಲಿ–ಮಾತಿನಿಂದ ಯಾವ ಪ್ರಾಣಿಗೂ ಉದ್ವೇಗವುಂಟಾಗಬಾರದು–ಎಂದು ಹೇಳಿದ್ದನು. ಈ ಶ್ಲೋಕದಲ್ಲಿ ಮನಸ್ಸು ಉದ್ವೇಗ

ರಹಿತವಾಗಿರಬೇಕೆಂದು ಹೇಳುತ್ತಾನೆ. ಮನಸ್ಸು ಅನುದ್ವಿಗ್ನವಾಗಿದ್ದರೇನೇ ಮನಸ್ಸಿನಲ್ಲಿ ಪ್ರಸನ್ನತೆಯು ಸಾಧ್ಯವಾಗುತ್ತದೆ. ಎರಡನೆಯದಾಗಿ ಹೇಳಿರುವ ಸೌಮ್ಯತ್ವವು ಮನಃಪ್ರಸನ್ನತೆಯನ್ನೇ ಅವಲಂಬಿಸಿದೆ. ಮನಸ್ಸಿನಲ್ಲಿರುವುದು ಮುಖದಲ್ಲಿ ಅಭಿವ್ಯಕ್ತವಾಗುತ್ತದೆ. ಅರ್ಥಾತ್ ಮನಃಪ್ರಸನ್ನತೆಯಿದ್ದರೆ ಮುಖದಲ್ಲಿ ಸೌಮ್ಯತೆಯಿರುತ್ತದೆ. ಆದರೆ ಮನಸ್ಸಿನಲ್ಲಿ ಉದ್ವೇಗವಿದ್ದರೂ ಅದನ್ನು ಮುಚ್ಚಿಕೊಂಡು ಪ್ರಸನ್ನತೆಯನ್ನು ತೋರುವವರಿದ್ದಾರೆ. ಆದರೆ ಆ ತೋರಿಕೆಯಿಂದ ಪ್ರಯೋಜನವೇನೂ ಇಲ್ಲ. ಅದು ಶ್ರೀಕೃಷ್ಣನ ಅಭಿಮತದಂತೆ ತಪಸ್ಸು ಎನಿಸಿಕೊಳ್ಳುವುದಿಲ್ಲ. ಕಪಟವೆನಿಸಿಕೊಳ್ಳುತ್ತದೆ. ಮನಸ್ಸನ್ನೂ ಪ್ರಸನ್ನಗೊಳಿಸಬೇಕು ; ಮುಖವೂ ಸೌಮ್ಯವಾಗಿಯೇ ಇರಬೇಕು. ಮನಃ ಪ್ರಸನ್ನತೆಯಿರುವವನ ಮುಖವು ಸೌಮ್ಯವಾಗಿಯೇ ಇರುತ್ತದೆ. **ಮೌನಂ** = ಇದು ಮಾನಸತಪಸ್ಸಾದುದರಿಂದ ವಾಕ್ಸಂಯಮವು ಅತ್ಯಾವಶ್ಯಕವೇ ಸರಿ. ಮೌನವೆಂದರೆ ಯಾವಾಗಲೂ ಮಾತಿಲ್ಲದೇ ಕುಳಿತಿರಬೇಕೆಂಬ ಅರ್ಥವಲ್ಲ. ಹೆಚ್ಚು ಮಾತನಾಡದಿರುವುದು ; ಅಪ್ರಯೋಜಕವಾದ ಮಾತನಾಡ ದಿರುವುದು ; ಕೆಲಸಕ್ಕೆ ಬಾರದ ಹರಟೇ ಕೊಚ್ಚದಿರುವುದು ; ದೇವರ ಗಾನ, ಸ್ತೋತ್ರ, ಅಧ್ಯಾತ್ಮಚಿಂತನೆ, ಅಧ್ಯಾತ್ಮವ್ಯಾಖ್ಯಾನ ಇವುಗಳಲ್ಲಿಯೇ ಕಾಲವನ್ನು ಕಳೆಯುವುದು–ಇದಕ್ಕೆ ಮೌನವೆಂದು ಹೆಸರು. **ಆತ್ಮವಿನಿಗ್ರಹಃ**=ಆತ್ಮ ಎಂದರೆ ಮನಸ್ಸು, ಅದನ್ನು ವಿನಿಗ್ರಹಿಸುವುದು ; ವಿಶೇಷವಾದ ರೀತಿಯಲ್ಲಿ ಹತೋಟಿಯಲ್ಲಿಟ್ಟುಕೊಳ್ಳುವುದು.

**ಭಾವಸಂಶುದ್ಧಿಃ** = ಭಾವ ಎಂದರೆ ಸ್ವಭಾವ. ಸ್ವಭಾವದಲ್ಲಿ ಪರಿಶುದ್ಧ ನಾಗಿರುವುದು ; ಮತ್ತೊಬ್ಬರೊಡನೆ ವ್ಯವಹಾರಮಾಡುವಾಗ ಕಾಪಟ್ಯವಿಲ್ಲದೇ ಇರುವುದು–ಈ ಎಲ್ಲವನ್ನೂ ಒಂದೇ ಗುಂಪಿಗೆ ಸೇರಿಸಬಹುದಾಗಿದೆ. ಒಂದಿರದಿದ್ದರೆ ಮತ್ತೊಂದಿರುವುದಿಲ್ಲ. ಮನೋನಿಗ್ರಹವಿಲ್ಲದಿದ್ದರೆ ಮನಃ ಪ್ರಸನ್ನತೆಯಿರುವುದಿಲ್ಲ. ಮನಃಪ್ರಸನ್ನತೆಯಿಲ್ಲದಿದ್ದರೆ ಮುಖದಲ್ಲಿ ಸೌಮ್ಯತೆಯು ಇರುವುದಿಲ್ಲ. ಮನೋನಿಗ್ರಹವಿಲ್ಲದಿದ್ದರೆ ಮೌನವೂ ಸಾಧ್ಯವಿಲ್ಲ. **ಮನಃಸಂಯಮೋ ಮೌನಂ**–ಎಂದು ಶ್ರೀಶಂಕರರು ವ್ಯಾಖ್ಯಾನಮಾಡಿರು ತ್ತಾರೆ. ಭಾವಸಂಶುದ್ಧಿಯಿರಬೇಕಾದರೂ ಮನೋನಿಗ್ರಹವಿದ್ದೇ ಇರಬೇಕು.

ಮನಸ್ಸೊಂದನ್ನು ಪ್ರಯತ್ನಪೂರ್ವಕವಾಗಿ ಪರಿಶುದ್ಧಿಗೊಳಿಸಿದರೆ ಉಳಿದೆಲ್ಲವೂ ತಾನೇ ತಾನಾಗಿ ಸಿದ್ಧವಾಗುತ್ತವೆ.)

0 0 0

**ಮನಃಪ್ರಸಾದಃ** = ಮನಸ್ಸು ಸ್ವಚ್ಛವಾಗುವಂತೆ ಮಾಡಿಕೊಳ್ಳುವಿಕೆ. **ಸೌಮ್ಯತ್ವಂ** = ಸೌಮನಸ್ಯ ಎಂದು ಯಾವುದನ್ನು ಕರೆಯುತ್ತಾರೆಯೋ ಅದು. ಮುಖ ಮುಂತಾದುವುಗಳನ್ನು ಪ್ರಸನ್ನವಾಗಿ ಮಾಡುವ ಅಂತಃಕರಣದ ಶುದ್ಧವಾದ ವೃತ್ತಿ. **ಮೌನಂ** = ಮಾತಿನ ಸಂಯಮ. ಇದೂ ಕೂಡ ಮನಸ್ಸಿನ ಸಂಯಮದಿಂದಲೇ ಆಗುತ್ತದೆ. ಆದುದರಿಂದ ಇಲ್ಲಿ ಕಾರ್ಯದಿಂದ ಕಾರಣವನ್ನು ಹೇಳಲಾಗಿದೆ. ಮನಃಸಂಯಮವೇ ಮೌನ. **ಆತ್ಮವಿನಿಗ್ರಹಃ** = ಮನಸ್ಸಿನ ನಿರೋಧ. ಎಲ್ಲ ಕಡೆಗಳಿಂದಲೂ ಮನಸ್ಸನ್ನು ನಿಗ್ರಹಿಸಿ ಮತ್ತೊಬ್ಬ ರೊಡನೆ ವ್ಯವಹಾರಮಾಡುವಾಗ ಛಲ-ಕಾಪಟ್ಯಗಳಿಲ್ಲದೇ ಇರುವುದು. ಕೇವಲ ಮಾತಿನ ವಿಷಯವಾದ ಮನಸ್ಸಿನ ಸಂಯಮವು ಮೌನವೆನಿಸುತ್ತದೆ. ಸಾಮಾನ್ಯವಾಗಿ ಸಂಯಮಮಾಡುವುದಕ್ಕೆ ಆತ್ಮನಿಗ್ರಹ ಎಂದು ಹೆಸರು.

(ಶಂ. ಭಾ.)

**ಮನಃಪ್ರಸಾದಃ** = ಮನಸ್ಸಿನಲ್ಲಿ ಕೋಪ ಮುಂತಾದುವು ಇಲ್ಲದೇ ಇರುವಿಕೆ. **ಸೌಮ್ಯತ್ವಂ** = ಮನಸ್ಸು ಇತರರಿಗೆ ಏಳಿಗೆಯನ್ನು ಉಂಟು ಮಾಡುವುದರಲ್ಲಿ ತತ್ಪರವಾಗಿರುವಿಕೆ. **ಮೌನಂ** = ಮನಸ್ಸಿನಿಂದ ಮಾತ ನಾಡುವ ಪ್ರವೃತ್ತಿಯನ್ನು ಕಟ್ಟಿಹಾಕುವಿಕೆ. **ಆತ್ಮವಿನಿಗ್ರಹಃ**=ಮನೋ ವೃತ್ತಿಯನ್ನು ಧ್ಯೇಯವಿಷಯದಲ್ಲಿ ಸ್ಥಾಪಿಸುವಿಕೆ. **ಭಾವಸಂಶುದ್ಧಿಃ**=ಆತ್ಮವನ್ನು ಬಿಟ್ಟು ಉಳಿದ ವಿಷಯಗಳನ್ನು ಚಿಂತಿಸದೇ ಇರುವಿಕೆ. ಇದು ಮಾನಸ ತಪಸ್ಸು.

(ರಾ. ಭಾ.)

**ಸೌಮ್ಯತ್ವಂ** =ಕ್ರೌರ್ಯವಿಲ್ಲದೇ ಇರುವಿಕೆ. **ಅಕ್ರೂರಃ ಸೌಮ್ಯ ಉಚ್ಯತೇ.** **ಮೌನಂ** = ಮನನಶೀಲನಾಗಿರುವಿಕೆ. (ಮ. ಭಾ.)

ಹಿಂದೆ ಶ್ರೀಕೃಷ್ಣನು ಯಜ್ಞದಲ್ಲಿ ಸಾತ್ತ್ವಿಕಾದಿ ಭೇದಗಳನ್ನು ಹೇಳಿ ದಂತೆ ಮುಂದೆ ತಪಸ್ಸುಗಳಲ್ಲಿ ಸಾತ್ತ್ವಿಕಾದಿ ಭೇದಗಳನ್ನು ಹೇಳುತ್ತಾನೆ.

ಓಂ ಶ್ರದ್ಧಯಾ ಪರಯಾ ತಪ್ತಂ ತಪಸ್ತತ್ತ್ರಿವಿಧಂ ನರೈಃ ।
ಅಫಲಾಕಾಂಕ್ಷಿಭಿರ್ಯುಕ್ತೈಃ ಸಾತ್ತ್ವಿಕಂ ಪರಿಚಕ್ಷತೇ ॥೧೭॥

ಈ ಮೂರು ವಿಧವಾದ ತಪಸ್ಸೂ ಪರಮಶ್ರದ್ಧೆಯಿಂದ ಫಲಾಕಾಂಕ್ಷೆಯಿಲ್ಲದೇ, ಯುಕ್ತರಾದ ಜನರಿಂದ ಆಚರಿಸಲ್ಪಟ್ಟರೆ ಅದನ್ನು ಸಾತ್ತ್ವಿಕವೆಂದು ಕರೆಯುತ್ತಾರೆ. (ತಪಸ್ಸೂ ಕೂಡ ಮೂರು ವಿಧವಾಗಿದೆ.) ಫಲಾಭಿಸಂಧಿಯಿಲ್ಲದೇ ಪರಮಶ್ರದ್ಧೆಯಿಂದ ಮಾಡಿದ ತಪಸ್ಸು ಸಾತ್ತ್ವಿಕವೆಂದು ಹೇಳಲ್ಪಡುತ್ತದೆ.

* * *

(ಮನುಷ್ಯನು ಮೂರು ವಿಧವಾದ ತಪಸ್ಸುಗಳನ್ನು ಮಾಡುತ್ತಾನೆ. ಸಾತ್ತ್ವಿಕತಪಸ್ಸು, ರಾಜಸತಪಸ್ಸು ಮತ್ತು ತಾಮಸತಪಸ್ಸು. ಮನುಷ್ಯರು ಮಾಡುವ ತಪಸ್ಸುಗಳನ್ನು ಮೂರು ವಿಧವಾಗಿ ವಿಂಗಡಿಸಬಹುದು. ಆಯಾ ಗುಣವುಳ್ಳವರು ಆ ಗುಣಕ್ಕೆ ಅನುರೂಪವಾಗಿ ಪೂಜಾದಿಗಳನ್ನು ಮಾಡುತ್ತಾರೆ. ಅದರಲ್ಲಿ ಮೊದಲು ಸಾತ್ತ್ವಿಕತಪಸ್ಸಿನ ಲಕ್ಷಣಗಳನ್ನು ಶ್ರೀಕೃಷ್ಣನು ಹೇಳುತ್ತಾನೆ. ಫಲವನ್ನು ಅಪೇಕ್ಷಿಸದೇ ಶ್ರದ್ಧೆಯಿಂದ ಮಾಡುವ ತಪಸ್ಸು ಸಾತ್ತ್ವಿಕತಪಸ್ಸು ಎಂದು ಹೇಳಲ್ಪಡುತ್ತದೆ.)

o o o

ಹಿಂದೆ ಹೇಳಿದಂತೆ ಮನುಷ್ಯರು ಆಚರಿಸುವ ಕಾಯಿಕ, ವಾಚಿಕ ಮತ್ತು ಮಾನಸತಪಸ್ಸುಗಳು ಸತ್ತ್ವವೇ ಮುಂತಾದ ಭೇದಗಳಿಂದ ಹೇಗೆ ಮೂರು ಬಗೆಯಾಗುತ್ತವೆ–ಎಂಬುದನ್ನು ಇಲ್ಲಿ ಹೇಳಲಾಗಿದೆ.

ಮೇಲೆ ಹೇಳಿದಂತೆ ಶ್ರೇಷ್ಠವಾದ ಆಸ್ತಿಕ್ಯಬುದ್ಧಿಯಿಂದ ಆಚರಿಸಲ್ಪಟ್ಟ ಯಾವ ಮೂರು ಬಗೆಯ ತಪಸ್ಸುಂಟೋ ಅದು ಫಲದ ಆಸೆಯಿಲ್ಲದೇ ಸಮಾಹಿತಚಿತ್ತರಾದ ಪುರುಷರಿಂದ ಆಚರಿಸಲ್ಪಟ್ಟಾಗ ಅದು ಸಾತ್ತ್ವಿಕತಪಸ್ಸು ಎನಿಸುತ್ತದೆ. (ಶಂ. ಭಾ.)

ಶಾರೀರ, ವಾಚಿಕ, ಮಾನಸ–ಎಂದು ಮುಬ್ಬಗೆಯಾಗಿರುವ ತಪಸ್ಸೂ ಕೂಡ ಸತ್ತ್ವವೇ ಮುಂತಾದ ಗುಣಗಳ ಭೇದದಿಂದ ಮತ್ತೂ ಮುಬ್ಬಗೆಯಾಗುತ್ತದೆ. ಫಲದ ಆಕಾಂಕ್ಷೆಯಿಲ್ಲದವರಾಗಿ ಯುಕ್ತರಾದ ಎಂದರೆ–'ಇದು ಪರಮಪುರುಷನ ಆರಾಧನಾರೂಪವಾದುದು' ಎಂಬ ಚಿಂತೆಯಿಂದ ಕೂಡಿದ–

ಮನುಷ್ಯರಿಂದ ಶ್ರೇಷ್ಠವಾದ ಶ್ರದ್ಧೆಯೊಡನೆ ಯಾವ ಶಾರೀರಕ, ವಾಚಿಕ ಮತ್ತು ಮಾನಸಿಕತಪಸ್ಸು ಆಚರಿಸಲ್ಪಡುತ್ತದೆಯೋ–ಅದನ್ನು ಸಾತ್ತ್ವಿಕತಪಸ್ಸು ಎಂದು ಕರೆಯುತ್ತಾರೆ. (ರಾ. ಭಾ.)

**ಓಂ ಸತ್ಕಾರಮಾನಪೂಜಾರ್ಥಂ ತಪೋ ದಮ್ಭೇನ ಚೈವ ಯತ್ ।**
**ಕ್ರಿಯತೇ ತದಿಹ ಪ್ರೋಕ್ತಂ ರಾಜಸಂ ಚಲಮಧ್ರುವಮ್ ॥೧೮॥**

ಸತ್ಕಾರ, ಮರ್ಯಾದೆ, ಮಾನ ಮತ್ತು ಪೂಜೆಗಳಿಗೋಸ್ಕರವಾಗಿಯೂ ಮತ್ತು ದಂಭದಿಂದಲೂ ಯಾವ ತಪಸ್ಸು ಮಾಡಲ್ಪಡುವುದೋ, ಚಂಚಲ ವಾದ ಮತ್ತು ಅಶಾಶ್ವತವಾದ ಆ ತಪಸ್ಸು ರಾಜಸವೆಂದು ಕರೆಯಲ್ಪಡುವುದು.

* * *

(**ಸತ್ಕಾರಮಾನಪೂಜಾರ್ಥಂ** = ತಪಸ್ಸುಮಾಡುವುದರಲ್ಲಿಯೂ ಒಂದು ಆಸೆ ; ತನ್ನನ್ನು ಸಾಧು, ಮಹಾತಪಸ್ವೀ, ತೇಜಃಪುಂಜ, ಶಾಪಾನುಗ್ರಹ ಶಕ್ತಿಯುಳ್ಳವನು ಎಂದು ಭಾವಿಸಿ ಸತ್ಕರಿಸಲಿ–ಎಂಬ ಆಸೆಯನ್ನಿಟ್ಟು ಕೊಳ್ಳುವುದು. ಗೌರವಿಸಲಿ ; ನನ್ನನ್ನು ಕಂಡೊಡನೆ ಎದ್ದುನಿಲ್ಲಲಿ ; ದೀರ್ಘ ದಂಡನಮಸ್ಕಾರಮಾಡಲಿ–ಇತ್ಯಾದಿ ಆಸೆ. **ಪೂಜಾರ್ಥಂ** = 'ಕಾಲುತೊಳೆ ಯಲಿ ; ಪಲ್ಲಕ್ಕಿಯ ಮೇಲೆ ಕುಳ್ಳಿರಿಸಿ ಮೆರವಣಿಗೆ ಮಾಡಲಿ ; ಪುಷ್ಪಹಾರಾದಿ ಗಳನ್ನು ಹಾಕಲಿ ; ಕಾಣಿಕೆಗಳನ್ನು ಸಲ್ಲಿಸಲಿ ; ನನಗೆ ಅನ್ನವಿಟ್ಟರೆ ಪರಮಾತ್ಮನಿಗೆ ತೃಪ್ತಿಯಾಗುವುದೆಂದು ಭಾವಿಸಲಿ'–ಎಂದು ಮೊದಲಾದ ಆಸೆ. ಈ ಉದ್ದೇಶಗಳಿಂದ ಮಾಡುವ ತಪಸ್ಸು ; ಐಹಿಕ-ಆಮುಷ್ಮಿಕ ಫಲದಾಸೆಯೊಡನೆ ದಂಭಯುಕ್ತನಾಗಿಯೂ ಮಾಡುವ ತಪಸ್ಸು–ರಾಜಸವೆನಿಸುತ್ತದೆ. ಇದಕ್ಕೆ ದೊರೆಯುವ ಫಲವು ಚಲವಾದುದು ಮತ್ತು ಅಶಾಶ್ವತವಾದುದು.)

O O O

ಸತ್ಕಾರವೆಂದರೆ–ಇವನು ಅತ್ಯಂತಸಾಧುಸ್ವಭಾವದವನು ; ತಪಸ್ವೀ ಬ್ರಾಹ್ಮಣ–ಎಂದು ಮೊದಲಾಗಿ ದೊಡ್ಡಸ್ತಿಕೆಯನ್ನು ಹೇಳುವುದು. ಮಾನ ವೆಂದರೆ ತಾನು ಬಂದಾಗ ಎದ್ದುನಿಲ್ಲುವುದು ನಮಸ್ಕಾರಮಾಡುವುದು ಮುಂತಾದುವು. ಗೌರವಕ್ಕೋಸ್ಕರ ಕಾಲುತೊಳೆಯುವುದು, ಪೂಜಿಸುವುದು, ಊಟಹಾಕುವುದು ಮುಂತಾದುವು ಪೂಜೆ ಎನಿಸುತ್ತವೆ. ಇವುಗಳಿಗೋಸ್ಕರ

ಯಾವ ತಪಸ್ಸು ಮಾಡಲ್ಪಡುತ್ತದೆಯೋ ಮತ್ತು ಯಾವುದು ದಂಭದಿಂದಲೂ ಮಾಡಲ್ಪಡುತ್ತದೆಯೋ–ಅದು ರಾಜಸತಪಸ್ಸು ಎನಿಸುತ್ತದೆ. ಇದರ ಫಲವು ಅನಿಶ್ಚಿತವಾಗಿರುವುದರಿಂದ ಇದು ಚಲ ಮತ್ತು ಅಧ್ರುವವಾಗುತ್ತದೆ.

(ಶಂ. ಭಾ.)

ಸತ್ಕಾರವೆಂದರೆ ಮನಸ್ಸಿನಲ್ಲಿ ಆದರಿಸುವುದು. ಮಾನವೆಂದರೆ ಮಾತಿನಲ್ಲಿ ಪ್ರಶಂಸೆಮಾಡುವುದು. ಪೂಜೆಯೆಂದರೆ ಶರೀರದಿಂದ ನಮಸ್ಕಾರ ಮುಂತಾದುವನ್ನು ಮಾಡುವುದು. ಫಲಾಭಿಸಂಧಿಪೂರ್ವಕವಾಗಿಯೂ, ಸತ್ಕಾರ ಮುಂತಾದುವುಗಳಿಗೋಸ್ಕರವಾಗಿಯೂ, ದಂಭದ ಕಾರಣದಿಂದಲೂ ಯಾವ ತಪಸ್ಸು ಆಚರಿಸಲ್ಪಡುತ್ತದೆಯೋ ಅದು ಇಲ್ಲಿ ರಾಜಸ ಎಂದು ಹೇಳಲ್ಪಡುತ್ತದೆ. ಅದು ಸ್ವರ್ಗವೇ ಮುಂತಾದ ಫಲಕ್ಕೆ ಸಾಧನವಾಗುವುದ ರಿಂದ ಅಸ್ಥಿರವಾಗಿ ಚಲವೂ ಅಧ್ರುವವೂ ಆಗಿದೆ. ಚಲವಾಗಿರುವಿಕೆಯೆಂದರೆ ಪತನಭಯವು ಇರುವುದರಿಂದ ಚಲನಕ್ಕೆ ಕಾರಣವಾಗುವುದು. (ಅಧ್ರುವ ಎಂದರೆ ಕ್ಷಯಹೊಂದುವ ಸ್ವಭಾವವನ್ನು ಉಳ್ಳದ್ದಾಗಿರುವಿಕೆ.) (ರಾ. ಭಾ.)

**ಓಂ ಮೂಢಗ್ರಾಹೇಣಾತ್ಮನೋ ಯತ್ಪೀಡಯಾ ಕ್ರಿಯತೇ ತಪಃ ।**
**ಪರಸ್ಯೋತ್ಸಾದನಾರ್ಥಂ ವಾ ತತ್ತಾಮಸಮುದಾಹೃತಮ್ ॥೧೯॥**

ಮೂಢವಿಶ್ವಾಸದಿಂದ ತನಗೆ ತೊಂದರೆಯನ್ನು ಮಾಡಿಕೊಂಡು ಅಥವಾ ಮತ್ತೊಬ್ಬರನ್ನು ಹಾಳುಮಾಡುವುದಕ್ಕಾಗಿ ಯಾವ ತಪಸ್ಸು ಮಾಡಲ್ಪಡುವುದೋ ಅದು ತಾಮಸವೆನಿಸುತ್ತದೆ.

* * *

(**ಮೂಢಗ್ರಾಹೇಣ** = ಮೂಢಗ್ರಾಹವೆಂದರೆ ಅವಿವೇಕದ ಗ್ರಹಿಕೆ ; ಅವಿವೇಕದ ನಿಶ್ಚಯ. ಶಾಸ್ತ್ರವಿಹಿತವಾದ ಮಾರ್ಗದಲ್ಲಿ ಮಾಡುವುದಲ್ಲ. ಶಾಸ್ತ್ರನಿಷಿದ್ಧವಾದ ರೀತಿಯಲ್ಲಿ ಮಾಡಹೋಗುವುದು. ಇದರಿಂದ ತಮಗೆ ತೊಂದರೆಯನ್ನು ಮಾಡಿಕೊಳ್ಳುವುದು. ಅರ್ಥಾತ್ ಶರೀರವನ್ನು ವೃಥಾ ದಂಡಿಸುವುದು. ಈ ವಿಧವಾದ ಕೆಲವು ಬಗೆಯ ತಪಸ್ಸಿನಿಂದ ಇತರರನ್ನು ವಿನಾಶಗೊಳಿಸುವ ಸಾಧ್ಯತೆಯೂ ಇದೆ. ಅವನು ಹಾಳಾಗಲಿ ಎಂದು ಸಂಕಲ್ಪಿಸಿ ಆ ರೀತಿಯ ತಪಸ್ಸನ್ನು ಮಾಡುತ್ತಾನೆ. ಹೀಗೆ ಮಾಡುವ

ತಪಸ್ಸಿಗೆ ತಾಮಸತಪಸ್ಸೆಂದು ಹೆಸರು. ಸಾತ್ತ್ವಿಕ-ರಾಜಸ-ತಾಮಸಿಕರು ತಮ್ಮ ಸ್ವಭಾವಾನುಗುಣವಾಗಿ ಸಾತ್ತ್ವಿಕ-ರಾಜಸಿಕ-ತಾಮಸಿಕತಪಸ್ಸುಗಳಲ್ಲಿ ಉದ್ಯುಕ್ತ ರಾಗುತ್ತಾರೆ.)

o o o

**ಮೂಢಗ್ರಾಹೇಣ** =ಅವಿವೇಕದ ನಿಶ್ಚಯದಿಂದ ; ಮೂಢತಾಪೂರ್ವಕ ವಾದ ಆಗ್ರಹದಿಂದ. (ಶಂ. ಭಾ.)

**ಮೂಢಗ್ರಾಹೇಣ** =ಮೂಢರಿಂದ ಮಾಡಲ್ಪಟ್ಟ ಅಭಿನಿವೇಶದಿಂದ ತನ್ನ ಶಕ್ತಿ ಮುಂತಾದುವನ್ನು ಪರೀಕ್ಷೆಮಾಡದೇ, ತನಗೇ ಪೀಡೆಯನ್ನು ಉಂಟುಮಾಡಿಕೊಂಡು ಯಾವ ತಪಸ್ಸು ಆಚರಿಸಲ್ಪಡುತ್ತದೆಯೋ ಅಥವಾ ಬೇರೆಯವರ ನಾಶಕ್ಕಾಗಿ ಮಾಡಲ್ಪಡುತ್ತದೆಯೋ ಅದು ತಾಮಸತಪಸ್ಸು ಎನಿಸುತ್ತದೆ. (ರಾ. ಭಾ.)

ಶ್ರೀಕೃಷ್ಣನು ದಾನಗಳಲ್ಲಿ ಸಾತ್ತ್ವಿಕಾದಿಭೇದಗಳನ್ನು ಹೇಳುತ್ತಾನೆ :

**ಓಂ ದಾತವ್ಯಮಿತಿ ಯದ್ದಾನಂ ದೀಯತೇಽನುಪಕಾರಿಣೇ ।**
**ದೇಶೇ ಕಾಲೇ ಚ ಪಾತ್ರೇ ಚ ತದ್ದಾನಂ ಸಾತ್ತ್ವಿಕಂ ಸ್ಮೃತಮ್ ॥೨೦॥**

ದಾನಮಾಡತಕ್ಕದ್ದು–ಎಂದು ಯಾವ ದಾನವು ಯಾವುದೇ ಉಪಕಾರ ವನ್ನೂ ಮಾಡದವನಿಗೆ–ಪರಿಗ್ರಹಿಸಲು ಯೋಗ್ಯನಾದವನಿಗೆ, ಒಳ್ಳೆಯ ದೇಶದಲ್ಲಿಯೂ, ಒಳ್ಳೆಯ ಕಾಲದಲ್ಲಿಯೂ ಕೊಡಲ್ಪಡುವುದೋ–ಆ ದಾನವು ಸಾತ್ತ್ವಿಕವೆನಿಸುತ್ತದೆ.

* * *

(ದಾನವನ್ನು ಕೊಡುವುದು ಕರ್ತವ್ಯ–ಎಂಬ ನಿರ್ಧಾರದಿಂದ ದಾನ ಮಾಡಬೇಕು. 'ತನಗೆ ಹೇರಳವಾಗಿ ಹಣವು ದೊರಕಲಿ. ಪುಣ್ಯಲೋಕ ವುಂಟಾಗಲಿ'–ಇವೇ ಮುಂತಾದ ಯಾವುದಾದರೂ ಫಲವನ್ನು ಅಪೇಕ್ಷಿಸಿ ದಾನಮಾಡಿದರೆ ಅದು ಸಾತ್ತ್ವಿಕವಾಗುವುದಿಲ್ಲ. ನಿತ್ಯಕರ್ಮಗಳನ್ನು ಮಾಡು ವಂತೆ ನಮ್ಮಲ್ಲಿರಬಹುದಾದ ಹೆಚ್ಚಿನ ಐಶ್ವರ್ಯವನ್ನು ದಾನಮಾಡುವುದೂ ಕರ್ತವ್ಯವಾಗಿರುತ್ತದೆ. ಈ ಕರ್ತವ್ಯದೃಷ್ಟಿಯಿಂದ ದಾನಮಾಡಬೇಕು. **ಅನುಪಕಾರಿಣೇ ದೀಯತೇ** = ಯಾವುದೇ ವಿಧವಾದ ಉಪಕಾರವನ್ನೂ ಮಾಡದವನಿಗೆ ದಾನಮಾಡಬೇಕು. ಯಾವುದೇ ವಿಧವಾದ ಉಪಕಾರದ

ನಿರೀಕ್ಷಣೆಯೂ ಇಲ್ಲದೇ ದಾನಮಾಡಬೇಕು. ಉಪಕಾರಮಾಡದವನಿಗೆ ದಾನ ಮಾಡಬೇಕೆಂದರೆ ಉಪಕಾರಮಾಡಿದವನಿಗೆ ದಾನಕೊಡಲೇಕೂಡದೆಂಬ ಅರ್ಥವಲ್ಲ. ಅವನು ಮಾಡಿದ ಉಪಕಾರಕ್ಕೆ ಪ್ರತಿಯಾಗಿ ದಾನಕೊಡುವು ದೆಂಬ ಉದ್ದೇಶವನ್ನಿಟ್ಟುಕೊಂಡರೆ ಅದು ಸಾತ್ತ್ವಿಕದಾನವಾಗುವುದಿಲ್ಲ. ಉಪ ಕಾರಿಯು ಸತ್ಪಾತ್ರನಾಗಿದ್ದು ಅವನು ಉಪಕಾರಮಾಡಿರುವನೆಂಬ ಭಾವವನ್ನು ಮನಸ್ಸಿನಲ್ಲಿಟ್ಟುಕೊಳ್ಳದೇ, ಸತ್ಪಾತ್ರನೆಂಬ ದೃಷ್ಟಿಯಿಂದ ಒಂದು ವೇಳೆ ಉಪಕಾರಮಾಡಿದವನಿಗೇ ದಾನಮಾಡಿದರೂ ಅದು ಸಾತ್ತ್ವಿಕವೆನಿಸುತ್ತದೆ. ಆದರಿಂದ **ದೀಯತೇಽನುಪಕಾರಿಣೇ**–ಎಂದು ಶ್ರೀಕೃಷ್ಣನು ಹೇಳಿರುವುದಕ್ಕೆ ವಿರೋಧವೇನೂ ಆಗುವುದಿಲ್ಲ.

ದೇಶ, ಕಾಲ, ಪಾತ್ರ–ಇವು ಮೂರನ್ನೂ ವಿವೇಚಿಸಿ ದಾನಮಾಡ ಬೇಕು. ಈ ದಾನವು ಸಾತ್ತ್ವಿಕ. ಒಳ್ಳೆಯಕಾಲ, ಒಳ್ಳೆಯ ಪಾತ್ರ ಎರಡೂ ಇದ್ದರೂ ಅಶುಚಿಯಾದ ಪ್ರದೇಶದಲ್ಲಿ ದಾನಮಾಡಕೂಡದು. ಒಳ್ಳೆಯ ದೇಶವೂ ಪಾತ್ರವೂ ಇದ್ದರೂ ಅಕಾಲದಲ್ಲಿ ದಾನಮಾಡಬಾರದು. ಆಗ ತಾನೇ ಭೋಜನಮಾಡಿ ತೃಪ್ತಿಯಾಗಿರುವವನು ಒಳ್ಳೆಯ ದೇಶ-ಕಾಲಗಳಲ್ಲಿ ಬಂದೊದಗಿದ್ದರೂ ಆಗ ಅವನಿಗೆ ಅನ್ನದಾನವನ್ನು ಮಾಡಬಾರದು. ಏಕೆಂದರೆ ಅದು ಅವನಿಗೆ ಅಕಾಲ. ಸತ್ಪಾತ್ರರಲ್ಲಿ ಒಬ್ಬನು ಧನಿಕನೂ ಒಬ್ಬನು ದರಿದ್ರನೂ ಆಗಿದ್ದಾಗ ಎರಡನೆಯವನಿಗೇ ದಾನಮಾಡಬೇಕು. ಹಸಿದು ಬಂದವರು ಯಾರೇ ಆಗಿದ್ದರೂ **'ಅನ್ನಸ್ಯ ಕ್ಷುಧಿತಂ ಪಾತ್ರಂ'** ಎಂಬಂತೆ ಅವರಿಗೆ ದಾನಮಾಡಬೇಕು. ಕಷ್ಟಕ್ಕೊಳಗಾಗಿರುವ ದೇಶ, ನಷ್ಟಕ್ಕೊಳಗಾಗಿರುವ ಜನ, ಆಪತ್ಕಾಲ–ಇವುಗಳು ಸೇರಿರುವಾಗ ಅಂತಹ ಜನರಿಗೆ ದಾನಮಾಡುವುದು ಉಚಿತ. ಆದರೆ ಇವರಲ್ಲಿ ಯಾರಿಗೆ ದಾನಮಾಡಬೇಕಾದರೂ ಯಾವ ಫಲದ ಉದ್ದೇಶವೂ ಇಲ್ಲದೇ ಕರ್ತವ್ಯದೃಷ್ಟಿಯಿಂದ ಈಶ್ವರ ಪ್ರೀತಿಗಾಗಿ–ಎಂದು ದಾನಮಾಡಿದರೆ ಅದು ಸಾತ್ತ್ವಿಕದಾನವಾಗುತ್ತದೆ.

o o o

**ದೇಶೇ ಕಾಲೇ ಪಾತ್ರೇ** = ದೇಶ ಎಂದರೆ ಪುಣ್ಯಕ್ಷೇತ್ರಗಳು, ತೀರ್ಥ ಕ್ಷೇತ್ರಗಳು ಮುಂತಾದುವು. ಕಾಲ–ಎಂದರೆ ಸಂಕ್ರಮಣ, ಅಮಾವಾಸ್ಯೆ, ಮುಂತಾದ ಪುಣ್ಯಕಾಲಗಳು. ವಿವಾಹೋಪನಯನಗಳೇ ಮುಂತಾದ ಮಂಗಳ

ಸಮಾರಂಭಗಳ ಕಾಲಗಳು. **ಪಾತ್ರ**–ಎಂದರೆ ವೇದವೇದಾಂಗಗಳನ್ನು ಅಧ್ಯಯನಮಾಡಿದವನು ; ಸದಾಚಾರೀ, ಶ್ರೋತ್ರಿಯ–ಮುಂತಾದ ಯೋಗ್ಯತೆಗಳುಳ್ಳವನು. **ಅನುಪಕಾರಿಣೇ** = ಉಪಕಾರ ಮಾಡದವನಿಗೆ. ಅವನು ಪ್ರತ್ಯುಪಕಾರವನ್ನು ಮಾಡಲು ಸಮರ್ಥನಲ್ಲದಿರಲಿ ಅಥವಾ ಸಮರ್ಥನಾಗಿರಲಿ–ಯಾವನಿಂದ ಪ್ರತ್ಯುಪಕಾರದ ಅಪೇಕ್ಷೆಯಿಲ್ಲವೋ ಅಂತಹ ಯೋಗ್ಯನಾದವನಿಗೆ. (ಶಂ. ಭಾ.)

**ದಾತವ್ಯಂ** = ಫಲಾಭಿಸಂಧಿಯಿಲ್ಲದೇ ದಾನಮಾಡಬೇಕು–ಎಂಬ ಮನಸ್ಸಿನಿಂದ. (ರಾ. ಭಾ.)

ದೇಶ-ಕಾಲಗಳೆಂದರೆ ದಾನಕ್ಕೆ ಯೋಗ್ಯವೆಂದು ಶಾಸ್ತ್ರವು ಹೇಳಿರುವ ಪುಣ್ಯದೇಶ–ಕಾಲಗಳು. ಪಾತ್ರ ಎಂದರೆ ವಿದ್ಯೆ, ಜನ್ಮ ಮತ್ತು ಸದಾಚಾರ ಮೂರೂ ಇರುವವರು. **ನ ವಿದ್ಯಯಾ ಕೇವಲಯಾ ಜನ್ಮನಾ ವಾಪಿ ಪಾತ್ರತಾ । ಯಸ್ಯ ವೃತ್ತಮಿಮೇ ಚೋಕ್ತೇ ತದ್ಧಿ ಪಾತ್ರಂ ಪ್ರಚಕ್ಷತೇ ॥** ಯಾಜ್ಞವಲ್ಕ್ಯಸ್ಮೃತಿ ಅ-೨೦೦ (ಮ. ಭಾ.)

**ಓಂ ಯತ್ತು ಪ್ರತ್ಯುಪಕಾರಾರ್ಥಂ ಫಲಮುದ್ದಿಶ್ಯ ವಾ ಪುನಃ ।**
**ದೀಯತೇ ಚ ಪರಿಕ್ಲಿಷ್ಟಂ ತದ್ದಾನಂ ರಾಜಸಂ ಸ್ಮೃತಮ್ ॥೨೧॥**

ಆದರೆ ಯಾವುದು ಉಪಕಾರಕ್ಕೆ ಪ್ರತಿಯಾಗಿ ಅಥವಾ ಫಲವನ್ನು ಉದ್ದೇಶಿಸಿ ಕಷ್ಟದಿಂದ ಕೊಡಲ್ಪಡುವುದೋ–ಆ ದಾನವು ರಾಜಸವೆನಿಸುತ್ತದೆ.

* * *

(ಇಂತಹವನು ನನಗೆ ಸಮಯದಲ್ಲಿ ಉಪಕಾರ ಮಾಡುತ್ತಾನೆ ; ಸಹಾಯ ಮಾಡುತ್ತಾನೆ ; ಅಥವಾ ನಾನು ಕೊಟ್ಟ ಈ ದಾನವನ್ನು ನನಗೆ ಬೇರೆ ಸಮಯದಲ್ಲಿ ಹಿಂದಿರುಗಿಸುತ್ತಾನೆ ; ಇವನಿಗೆ ದಾನಕೊಡುವುದರಿಂದ ನನಗೇನೂ ನಷ್ಟವುಂಟಾಗುವುದಿಲ್ಲ–ಇವೇ ಮುಂತಾದ ಕಾರಣಗಳಿಂದ ದಾನ ಕೊಡುವುದು ಮತ್ತು ಯಾವುದಾದರೂ ಭಗವದ್ಧ್ಯಾನದ ಸಂಬಂಧವಿಲ್ಲದೇ ಫಲವನ್ನು ಉದ್ದೇಶಿಸಿ ದಾನಕೊಡುವುದು ; ಅಪಮೃತ್ಯುವು ನಿವಾರಣೆ ಯಾಗಲಿ, ಮಕ್ಕಳಾಗಲಿ, ಆರೋಗ್ಯಭಾಗ್ಯವು ಸಿಕ್ಕಲಿ, ಧನದ ಪ್ರಾಪ್ತಿ

ಯಾಗಲಿ–ಇವೇ ಮುಂತಾದ ಕಾಮನೆಗಳನ್ನು ಮನಸ್ಸಿನಲ್ಲಿಟ್ಟುಕೊಂಡು ದಾನಮಾಡುವುದು–ಇವುಗಳು ರಾಜಸದಾನವೆನಿಸಿಕೊಳ್ಳುತ್ತವೆ.

**ಪರಿಕ್ಲಿಷ್ಟಂ** = ಬಹಳ ಸಂಕಟದಿಂದ ದಾನಕೊಡುವುದು. 'ಅಯ್ಯೋ! ಕೊಡಬೇಕಲ್ಲಾ' ಎಂಬ ಭಾವನೆಯಿಂದ ಕೊಡುವುದು. ಜಿಪುಣಾಗ್ರೇಸರನು ದಾನಕೊಡುವಾಗಲೂ ಇದೇ ಮನೋಭಾವದಿಂದ ಕೊಡುತ್ತಾನೆ. ಕೆಲವು ಸಂದರ್ಭಗಳಲ್ಲಿ ಜಿಪುಣನೂ ದಾನಕೊಡಬೇಕಾಗಿ ಬರುತ್ತದೆ. ಆ ಸಮಯ ದಲ್ಲಿ ಅವನ ಹೃದಯವು ವಿತ್ತಶಾಠ್ಯದಿಂದ (ಹಣದ ಜಿಪುಣತನದಿಂದ) ಸಂಕಟಕ್ಕೊಳಗಾಗುತ್ತದೆ. ಇದು ವಿತ್ತಶಾಠ್ಯದಿಂದ ಉಂಟಾಗುವ ಪರಿಕ್ಲೇಶ. ದಾನಕೊಡುವ ಸಾಮರ್ಥ್ಯವಿಲ್ಲದಿದ್ದರೂ ಶಾಸ್ತ್ರಭಯ, ಪ್ರಾಣಭಯ– ಮುಂತಾದ ಕಾರಣದಿಂದ ತನಗೆ ತೊಂದರೆ ಮಾಡಿಕೊಂಡು ದಾನಕೊಡು ವುದು. ಇದು ಧನದ ಅಭಾವದಿಂದ ಉಂಟಾಗುವ ಪರಿಕ್ಲೇಶ. ಇಂತಹವು ಗಳು ರಾಜಸದಾನಗಳೆಂದು ಕರೆಯಲ್ಪಡುತ್ತವೆ.)

o o o

**ಪ್ರತ್ಯುಪಕಾರಾರ್ಥಂ** = ಕಾಲಾಂತರದಲ್ಲಿ ಇವನು ನನಗೆ ಪ್ರತ್ಯುಪ ಕಾರಮಾಡುತ್ತಾನೆ–ಎಂಬ ಅಭಿಪ್ರಾಯದಿಂದ. **ಪರಿಕ್ಲಿಷ್ಟಂ** = ಖೇದ ಪೂರ್ವಕವಾಗಿ. (ಶಂ. ಭಾ.)

**ಪ್ರತ್ಯುಪಕಾರಾರ್ಥಂ** = ಪ್ರತ್ಯುಪಕಾರದ ಅಭಿಪ್ರಾಯದೊಡನೆ, ಹಿಂದೆ ಮಾಡಿದ ಉಪಕಾರಕ್ಕೆ ಪ್ರತ್ಯುಪಕಾರರೂಪವಾಗಿ ಅಥವಾ ಮುಂದೆ ಪ್ರತ್ಯುಪಕಾರವನ್ನು ಮಾಡಲಿ–ಎಂಬ ಪ್ರಯೋಜನಕ್ಕಾಗಿ. **ಪರಿಕ್ಲಿಷ್ಟಂ** = ಅಮಂಗಲವಾದ ದ್ರವ್ಯದೊಡನೆ. ದ್ರವ್ಯದಲ್ಲಿ ತನಗೆ ತುಂಬ ಆಸೆಯಿರುವುದ ರಿಂದ ಅದನ್ನು ಕ್ಲೇಶದೊಡನೆ ಕೊಡುವ ಮನುಷ್ಯನು ಅದರಲ್ಲಿನ ಮಂಗಳಮಯವಾದ ಅಂಶವನ್ನು ತಾನು ಇಟ್ಟುಕೊಂಡು ಅಕಲ್ಯಾಣವಾದ ದ್ರವ್ಯವನ್ನು ಇನ್ನೊಬ್ಬನಿಗೆ ಕೊಡುತ್ತಾನೆ. ಅಥವಾ ಅವನು ಅಶ್ರದ್ಧೆಯಿಂದ ಮುಟ್ಟಲ್ಪಟ್ಟಿರುವುದರಿಂದ ಅವನ ದ್ರವ್ಯವು ಅಕಲ್ಯಾಣಮಯವಾಗುತ್ತದೆ. ಇಂತಹ ದ್ರವ್ಯವನ್ನು ಪರಿಕ್ಲಿಷ್ಟ ಎಂದು ಕರೆದಿದೆ. (ರಾ. ಭಾ.)

**ಓಂ ಅದೇಶಕಾಲೇ ಯದ್ದಾನಮಪಾತ್ರೇಭ್ಯಶ್ಚ ದೀಯತೇ ।**
**ಅಸತ್ಕೃತಮವಜ್ಞಾತಂ ತತ್ತಾಮಸಮುದಾಹೃತಮ್ ॥೨೨॥**

ಯಾವ ದಾನವು ಅದೇಶ ಮತ್ತು ಅಕಾಲಗಳಲ್ಲಿ, ಅಪಾತ್ರರಿಗೆ ಸತ್ಕಾರವಿಲ್ಲದೇ ತಿರಸ್ಕಾರದೊಡನೆ ಕೊಡಲ್ಪಡುವುದೋ–ಅದು ತಾಮಸದಾನವೆನಿಸುವುದು.

* * *

(ಈ ತಾಮಸದಾನಕ್ಕೆ ಅನೇಕವಾದ ಉದಾಹರಣೆಗಳನ್ನು ಕೊಡಬಹುದು. ಭಿಕ್ಷುಕರಲ್ಲಿ ಅನೇಕರು ಶ್ರೀಮಂತರಾಗಿಯೂ ಇರುತ್ತಾರೆ. ಕೇವಲ ಹಣ ಮುಂತಾದುವುಗಳ ಸಂಪಾದನೆಗಾಗಿ ನಾನಾವೇಷಗಳಲ್ಲಿ ಬರುತ್ತಾರೆ.

ಯಾವ ದೇಶದಲ್ಲಾದರೂ ಯಾವ ಸ್ಥಳದಲ್ಲಾದರೂ ಇಂತಹ ಭಿಕ್ಷುಕರಿರುತ್ತಾರೆ. ಭಿಕ್ಷೆ ಬೇಡಲು ಬರುವವರಿಗೆ ಕಾಲದ ವ್ಯವಸ್ಥೆಯೇನೂ ಇರುವುದಿಲ್ಲ. ಹಗಲಿನಲ್ಲೂ ಬರುತ್ತಾರೆ, ರಾತ್ರಿಯಲ್ಲೂ ಬರುತ್ತಾರೆ ; ಬೆಳಗಾಗುತ್ತಲೇ ಬರುತ್ತಾರೆ. ಅಪಾತ್ರರು ಎಂಬುದನ್ನು ಹೇಳಲೇಬೇಕಾಗಿಲ್ಲ. ಭಿಕ್ಷುಕರ ಸೋಗಿನಿಂದ ಕಳ್ಳರೂ ಬರುತ್ತಾರೆ, ಖದೀಮರೂ ಬರುತ್ತಾರೆ. ಇಂತಹವರನ್ನು ಯಾರೂ ಸತ್ಕರಿಸಹೋಗುವುದಿಲ್ಲ. ಅವರ ಉಪಟಳವನ್ನು ತಾಳಲಾಗದೇ ಬಯ್ಯುವುದೂ ಉಂಟು. ಹಾಳಾಗಿ ಹೋಗಲಿ ಎಂದು ಹೇಳುತ್ತಲೇ ಹಣಕೊಟ್ಟು ಕಳುಹಿಸುವುದೂ ಉಂಟು. ಇಂತಹ ದಾನಕ್ಕೆ ತಾಮಸದಾನವೆಂದು ಹೆಸರು. ತಾಮಸಿಯಾದ ಧನಿಕನೊಬ್ಬನಿರುತ್ತಾನೆ. ಅವನು ತನ್ನ ಆಢ್ಯತೆಯನ್ನು ಪ್ರಕಟಿಸಿಕೊಳ್ಳಲು ಇಚ್ಛಿಪಡುತ್ತಾನೆ. ಆ ಸಮಯದಲ್ಲಿ ಅವನ ಬಳಿಗೆ ಯಾರಾದರೂ ಬಂದರೆಂದರೆ ಅವರ ಕುಲ-ಗೋತ್ರಗಳನ್ನು ವಿಚಾರಿಸಹೋಗುವುದಿಲ್ಲ. ಕಾಲ-ದೇಶಗಳನ್ನೂ ವಿಚಾರಿಸಹೋಗುವುದಿಲ್ಲ. ಅಟ್ಟಹಾಸದಿಂದ ಅವನ ಮುಂದೆ ನಾಣ್ಯಗಳನ್ನು ಎಸೆಯುತ್ತಾನೆ. ಇವನಿಗೆ ಅವನಲ್ಲಿ ಯಾವ ಪೂಜ್ಯಭಾವನೆಯೂ ಇರುವುದಿಲ್ಲ. ಇದೂ ಸಹ ಒಂದು ವಿಧವಾದ ಕೊಡುಗೆಯೇನೋ ನಿಜ. ಆದರೆ ಇದು ತಾಮಸಿಕವಾದ ಕೊಡುಗೆ. ಮತ್ತೊಂದು ವಿಧಾನ : ಊಟಮಾಡಿದ ಸ್ನೇಹಿತನು ಮನೆಗೆ ಬಂದನೆಂದರೆ ಅವನನ್ನು ಬಲಾತ್ಕಾರವಾಗಿ ಪುನಃ ಊಟಕ್ಕೆ ಎಬ್ಬಿಸುವುದು. ಹಸಿದಿರುವವನು ಬಾಗಿಲಲ್ಲಿ ಕಾಯುತ್ತಿದ್ದರೂ ತಾತ್ಸಾರಮಾಡುವುದು. ಅನಿಮಿತ್ತವಾಗಿ ತನ್ನ ದರ್ಪವನ್ನು ತೋರಿಸಿಕೊಳ್ಳುವ ಸಲುವಾಗಿ ದಾನಮಾಡುವುದು. ದಾನಕೊಡುವ ಸ್ಥಳವು ಪುಣ್ಯಯುಕ್ತವಾಗಿರಬೇಕೆಂದಾಗಲೀ ಪವಿತ್ರವಾಗಿರ

ಬೇಕೆಂದಾಗಲೀ ಇಲ್ಲ. ಎಲ್ಲಿ ಎಂದರೆ ಅಲ್ಲಿ ದಾನವೆಂದು ಹಣವನ್ನು ಬಿಸಾಡುವುದು. ಇದೂ ಸಹ ತಾಮಸದಾನದ ಮತ್ತೊಂದು ವಿಧಾನ.)

o o o

**ಅದೇಶೇ** = ಪುಣ್ಯವಲ್ಲದ ಜಾಗದಲ್ಲಿ; ಮಲಿನರು, ಅಶುಚಿಗಳು ಮುಂತಾದವರು ತುಂಬಿರುವ ಜಾಗದಲ್ಲಿ. **ಅಕಾಲೇ** = ಪುಣ್ಯಕರವೆಂದು ಹೇಳಲ್ಪಡದೇ ಇರುವ ಕಾಲದಲ್ಲಿ. ಸಂಕ್ರಾಂತಿ ಮುಂತಾದ ವಿಶೇಷತೆ ಇಲ್ಲದಿರುವ ಕಾಲದಲ್ಲಿ. **ಅಪಾತ್ರೇಭ್ಯಃ** = ಮೂರ್ಖರೂ ಕಳ್ಳರೂ ಮುಂತಾದವರಿಗೆ. **ಅಸತ್ಕೃತಂ** = ಒಳ್ಳೆಯ ದೇಶ-ಕಾಲ ಮುಂತಾದುವುಗಳಿದ್ದರೂ ಪ್ರಿಯ ವಚನ, ಕಾಲುತೊಳೆಯುವಿಕೆ ಮುಂತಾದ ಪೂಜಾಸನ್ಮಾನಗಳಿಲ್ಲದೆ. **ಅವಜ್ಞಾತಂ** = ಪಾತ್ರವನ್ನು ತಿರಸ್ಕಾರಮಾಡುತ್ತಾ. (ಶಂ. ಭಾ.)

**ಅವಜ್ಞಾತಂ** = ತಿರಸ್ಕಾರದೊಡನೆ, ಉಪಚಾರವಿಲ್ಲದೆ. (ರಾ. ಭಾ.)

**ಓಂ ತತ್ಸದಿತಿ ನಿರ್ದೇಶೋ ಬ್ರಹ್ಮಣಸ್ತ್ರಿವಿಧಃ ಸ್ಮೃತಃ ।**
**ಬ್ರಾಹ್ಮಣಾಸ್ತೇನ ವೇದಾಶ್ಚ ಯಜ್ಞಾಶ್ಚ ವಿಹಿತಾಃ ಪುರಾ ॥೨೩॥**

ಬ್ರಹ್ಮಕ್ಕೆ **ಓಂ-ತತ್-ಸತ್** ಎಂದು ಮೂರು ವಿಧವಾಗಿ ಹೆಸರನ್ನು ನಿರ್ದೇಶಿಸಿದೆ. ಅದರಿಂದ ಹಿಂದೆ ಬ್ರಾಹ್ಮಣರೂ, ವೇದಗಳೂ ಮತ್ತು ಯಜ್ಞಗಳೂ ಮಾಡಲ್ಪಟ್ಟುವು.

* * *

(ಬ್ರಹ್ಮವಸ್ತುವನ್ನು ಮೂರು ವಿಧವಾಗಿ ನಿರ್ದೇಶಮಾಡಿ ಕರೆಯುತ್ತಾರೆ. **'ಓಂ'** 'ಓಮಿತ್ಯೇಕಾಕ್ಷರಂ ಬ್ರಹ್ಮ' (೮-೧೩ ಗೀತಾ) **'ಓಂ ತತ್ ಬ್ರಹ್ಮ'** (ತೈ. ೧-೮) ಎಂಬುದಾಗಿ. 'ಓಂ' ಎಂದರೆ ಬ್ರಹ್ಮವಸ್ತು ಎಂಬ ವಿಷಯವನ್ನು ಈ ಹಿಂದೆಯೇ ಹೇಳಿಯಾಗಿದೆ.

**'ತತ್'** ಎಂದರೆ ಅದು. ಅದು ಎಂದರೆ ಬ್ರಹ್ಮವಸ್ತು. ಉಪನಿಷತ್ತುಗಳಲ್ಲಿ **ತತ್** ಎಂಬುದಕ್ಕೆ ಬ್ರಹ್ಮ ಎಂದು ಅರ್ಥಮಾಡಿರುವ ಅನೇಕಪ್ರಕರಣಗಳು ಬರುತ್ತವೆ.

**ತದೇವಾಗ್ನಿಸ್ತದಾದಿತ್ಯಸ್ತದ್ವಾಯುಸ್ತದು ಚನ್ದ್ರಮಾಃ ।**
**ತದೇವ ಶುಕ್ರಂ ತದ್ಬ್ರಹ್ಮ ತದಾಪಸ್ತತ್ಪ್ರಜಾಪತಿಃ ॥೪೨॥**

ಶ್ವೇತಾಶ್ವತರೋಪನಿಷತ್ತು-೨

**ತತ್** = ಆ ಬ್ರಹ್ಮವಸ್ತುವೇ ಅಗ್ನಿ, ಆದಿತ್ಯ, ವಾಯು, ಚಂದ್ರ, ನಕ್ಷತ್ರಗಳು ಆಗಿರುತ್ತದೆ. ಅದೇ ಹಿರಣ್ಯಗರ್ಭ, ನೀರು, ವಿರಾಟ್ಪುರುಷನೂ ಆಗಿರುತ್ತದೆ.

**ತದ್ವೇದ ಗುಹ್ಯೋಪನಿಷತ್ಸು ಗೂಢಂ**
**ತದ್ಬ್ರಹ್ಮಾವೇದತೇ ಬ್ರಹ್ಮಯೋನಿಮ್ ।**
**ಯೇ ಪೂರ್ವದೇವಾ ಋಷಯಶ್ಚ ತದ್ವಿದು-**
**ಸ್ತೇ ತನ್ಮಯಾ ಅಮೃತಾ ವೈ ಬಭೂವುಃ ॥**

ಶ್ವೇತಾಶ್ವತರ ೫-೬

ಅದು (ಆ ಪರಬ್ರಹ್ಮವಸ್ತುವು) ವೇದಗಳ ರಹಸ್ಯಭಾಗಗಳಾದ ಉಪನಿಷತ್ತುಗಳಲ್ಲಿ ಅಡಗಿದೆ. ಆ ಬ್ರಹ್ಮಯೋನಿಯನ್ನು ಹಿರಣ್ಯಗರ್ಭನು ಅರಿತಿರುತ್ತಾನೆ. ಹಿಂದಿನ ದೇವತೆಗಳಲ್ಲಿ ಮತ್ತು ಋಷಿಗಳಲ್ಲಿ ಯಾರು ಅದನ್ನು ಅರಿತುಕೊಂಡರೋ ಅವರು ಅದನ್ನೇ ಆತ್ಮವಾಗಿ ಹೊಂದಿ ಅಮೃತತ್ವವನ್ನು ಪಡೆದರು.

**ತತ್ತ್ವಮಸಿ**–ಎಂಬುದರಲ್ಲಿಯೂ ಸಹ **ತತ್** ಶಬ್ದಕ್ಕೆ ಬ್ರಹ್ಮವೆಂದೇ ಅರ್ಥ. ಬ್ರಹ್ಮವಸ್ತುವಿಗೆ **ತತ್**= ಅದು–ಎಂದು ಏಕೆ ಹೇಳಿದ್ದಾರೆಂದರೆ ಅದನ್ನು ಬೇರೆ ಯಾವ ವಿವರಣೆಯನ್ನೂ ಕೊಟ್ಟು ಹೇಳುವ ಸಾಧ್ಯತೆಯೇ ಇಲ್ಲ. **'ಅದು'** ಎಂದು ಮಾತ್ರ ಹೇಳಬಹುದು. ಆ ಬ್ರಹ್ಮವಸ್ತುವು ಅನಿರ್ದೇಶ್ಯ, ಅತರ್ಕ್ಯ, ಅನೂಹ್ಯ. ಇಂತಹುದಕ್ಕೆ ಏನೆಂದು ತಾನೇ ಹೇಳಲು ಸಾಧ್ಯವಾಗುವುದು? ಆದುದರಿಂದ ಉಪನಿಷತ್ತುಗಳು ಬ್ರಹ್ಮವಸ್ತುವನ್ನು ಕೇವಲ **'ತತ್'** ಎಂದು ಕರೆದು ತಟಸ್ಥವಾಗುತ್ತವೆ. ಚಿಕ್ಕಮಕ್ಕಳು ಒಂದು ಆಟದ ವಸ್ತುವನ್ನು ನೋಡಿ 'ಅದು ಕೊಡು' ಎನ್ನುತ್ತವೆ. ಅವು ಪದಾರ್ಥವನ್ನು ವರ್ಣಿಸಿ ಹೇಳಲಾರವು. ಅಂತೆಯೇ ಬ್ರಹ್ಮವಸ್ತುವನ್ನು ನೋಡಿದ ಋಷಿಗಳು ಅದನ್ನು ವರ್ಣಿಸಲಾಗದೇ **'ಅದು'** ಎಂದು ಮಾತ್ರ ಹೇಳಬೇಕಾಗುತ್ತದೆ. **ಯತೋ ವಾಚೋ ನಿವರ್ತನ್ತೇ**–ವೇದಗಳೇ ಬ್ರಹ್ಮವಸ್ತುವಿನ ಸ್ವರೂಪವನ್ನು ತಿಳಿಯಲಾರದೇ ಹಿಂದಿರುಗುತ್ತವೆ ಎಂದ ಮೇಲೆ ಬೇರೆ ಹೇಳುವುದೇನಿದೆ? ಆದುದರಿಂದ ಬ್ರಹ್ಮವಸ್ತುವು **'ತತ್'** ಎಂಬ ಪದದಿಂದ ಪ್ರಸಿದ್ಧವಾಗಿದೆ.

**ಸತ್** = ಎಂದರೆ ಇರುವುದು ಎಂದರ್ಥ. ಇಂತಹುದೇ ಎಂದು ನಿರ್ದೇಶಿಸಿ ಹೇಳುವುದಕ್ಕಾಗದಿದ್ದರೂ ಅದು ಕೇವಲ **'ತತ್'** ಪದವಾಚಿಯಾಗಿದ್ದರೂ ಅದು ಇದೆ. ಅದು ಇರುವುದರಲ್ಲಿ ಯಾವ ಸಂಶಯವೂ ಇಲ್ಲ. **'ಸದೇವ ಸೌಮ್ಯೇದಮಗ್ರ ಆಸೀತ್'**–ಉಪನಿಷತ್ತುಗಳಲ್ಲಿಯೂ **'ಸತ್'** ಎಂಬುದನ್ನು ಬ್ರಹ್ಮವಸ್ತುವಿನ ಪರ್ಯಾಯದಲ್ಲಿ ಅನೇಕ ಕಡೆಗಳಲ್ಲಿ ಹೇಳಿದ್ದಾರೆ. ಬ್ರಹ್ಮಾಂಡದಲ್ಲಿ ಅವಿನಾಶಿಯಾಗಿ ಉಳಿಯುವುದು ಇದೊಂದೇ ಆಗಿರುವುದರಿಂದ 'ಸತ್' ಎಂಬ ಹೆಸರು ಬ್ರಹ್ಮವಸ್ತುವಿಗೆ ಚೆನ್ನಾಗಿ ಒಪ್ಪುತ್ತದೆ.

ಆದುದರಿಂದ **ಓಂ–ತತ್–ಸತ್** ಎಂಬ ಮೂರು ಪದಗಳೂ ಬ್ರಹ್ಮವಸ್ತುವನ್ನು ನಿರ್ದೇಶಿಸುವ ಪದಗಳೇ ಆಗಿವೆ.

ಓಂ **ತತ್ಸತ್**–ಎಂಬುದನ್ನು ಮಹಾಮಂತ್ರವಾಗಿ ಪುರಶ್ಚರಣೆಮಾಡುತ್ತಾರೆ. ಓಂ **ತತ್ ಸತ್ ।** ಓಂ ಎಂಬ **ತತ್** ಅದು **ಸತ್** ಸದ್ವಸ್ತು–ಎಂದೂ ಅರ್ಥಮಾಡಬಹುದು. ಮಹಾಮಂತ್ರವು ಇದೇ ಅರ್ಥದಲ್ಲಿದೆ.

**ತೇನ ಬ್ರಾಹ್ಮಣಾಃ ವೇದಾಃ ಯಜ್ಞಾಃ ವಿಹಿತಾಃ**

**ತೇನ**–ಎಂದರೆ ಆ ಪರಬ್ರಹ್ಮವಸ್ತುವಿನಿಂದ ಬ್ರಾಹ್ಮಣರು ಭಗವಂತನ ಮುಖದಂತೆ ಇದ್ದು ಬ್ರಹ್ಮತತ್ತ್ವವನ್ನು ವ್ಯಾಖ್ಯಾನಮಾಡುವವರು. **ವೇದಾಃ** = ಅವರಿಗೆ ಪ್ರಕಾಶವನ್ನು ನೀಡುವ ವೇದಮಂತ್ರಗಳು ಮತ್ತು **ಯಜ್ಞಾಃ** = ಆ ವೇದದಿಂದ ವಿಧಿಸಲ್ಪಡುವ ಯಜ್ಞಕರ್ಮಗಳು ಹುಟ್ಟಿದುವು.

**ಯಜ್ಞಃ ಕರ್ಮಸಮುದ್ಭವಃ । ಕರ್ಮ ಬ್ರಹ್ಮೋದ್ಭವಂ ವಿದ್ಧಿ**
**ಬ್ರಹ್ಮಾಕ್ಷರಸಮುದ್ಭವಮ್ ॥** ಗೀತಾ ೩-೧೫

ಯಜ್ಞ, ದಾನ, ತಪಸ್ಸು–ಮುಂತಾದುವುಗಳಿಗೆ ಸಾದ್ಗುಣ್ಯವನ್ನು ಉಂಟುಮಾಡುವುದಕ್ಕೋಸ್ಕರ ಭಗವಂತನು ಇದನ್ನು ಉಪದೇಶಿಸುತ್ತಾನೆ. ವೇದಾಂತದಲ್ಲಿ ಬ್ರಹ್ಮವಿದರು ಓಂ **ತತ್ ಸತ್** ಎಂಬುದಾಗಿ ಬ್ರಹ್ಮನನ್ನು ನಿರ್ದೇಶನಮಾಡಿದ್ದಾರೆ. ಹಿಂದೆ ಈ ಮೂರು ಬಗೆಯ ಹೆಸರುಗಳಿಂದಲೇ ಬ್ರಾಹ್ಮಣರು, ವೇದ ಮತ್ತು ಯಜ್ಞಗಳು ರಚಿತವಾದುವು.

ಬ್ರಹ್ಮದ ನಾಮವನ್ನು ಅಥವಾ ಹೆಸರನ್ನು ಸ್ತುತಿಸುವುದಕ್ಕೋಸ್ಕರ ಈ ರೀತಿ ಹೇಳಲಾಗಿದೆ. (ಶಂ. ಭಾ.)

'ವೈದಿಕವಾದ ಯಜ್ಞಾದಿಗಳು ಪ್ರಣವದೊಡನೆ ಸಂಯೋಗಹೊಂದಿರುತ್ತವೆ ; **ತತ್** ಮತ್ತು **ಸತ್** ಎಂಬ ಶಬ್ದಗಳಿಂದಲೂ ಕರೆಯಲ್ಪಡುತ್ತವೆ' ಎಂದೂ ಅದರ ಲಕ್ಷಣವನ್ನು ಇಲ್ಲಿ ಹೇಳಲಾಗುತ್ತದೆ. ಓಂ **ತತ್ ಸತ್** ಎಂಬುದಾಗಿ ಮೂರು ಶಬ್ದಗಳೂ ಬ್ರಹ್ಮಕ್ಕೇ ಅನ್ವಯಿಸುತ್ತವೆ. ಬ್ರಹ್ಮವೆಂದರೆ ವೇದ. ವೇದವೆಂದರೆ ವೈದಿಕಕರ್ಮಗಳು–ಯಜ್ಞಾದಿಗಳು. ಯಜ್ಞವೇ ಮುಂತಾದ ಕರ್ಮಗಳು ಓಂ **ತತ್ ಸತ್** ಎಂಬ ಶಬ್ದಗಳಿಂದ ಕೂಡಿರುತ್ತವೆ. ಓಂ ಎಂಬ ಶಬ್ದವು ವೈದಿಕಕರ್ಮಗಳಿಗೆ ಅಂಗವಾಗಿ ಪ್ರಯೋಗದ ಆರಂಭದಲ್ಲಿ ಹೇಳಲ್ಪಡುತ್ತದೆ. ಆದುದರಿಂದ ಓಂ ಎಂಬ ಹೆಸರು ವೈದಿಕಕರ್ಮಗಳಿಗೆ ಸಂಬಂಧಿಸಿದುದು. **ತತ್** ಮತ್ತು **ಸತ್** ಶಬ್ದಗಳು ಪೂಜ್ಯ ಭಾವವಾಚಕಗಳಾಗಿವೆ. ಆದುದರಿಂದ ಪೂಜ್ಯಭಾವವನ್ನು ಪ್ರಕಟಿಸುವುದಕ್ಕೋಸ್ಕರ ವೈದಿಕಕರ್ಮಗಳೊಡನೆ ಇವುಗಳ ಸಂಬಂಧವನ್ನು ಬೋಧಿಸಿದೆ.

ಈ ಮೂರು ಶಬ್ದಗಳೊಡನೆ ಸಂಬದ್ಧರಾಗಿರುವ ಬ್ರಾಹ್ಮಣರು ಎಂದರೆ ವೇದಕ್ಕೆ ಅನುಸಾರವಾಗಿ ನಡೆಯುವ ತ್ರೈವರ್ಣಿಕರು, ವೇದಗಳು ಮತ್ತು ಯಜ್ಞಗಳು ಇವುಗಳನ್ನು ಹಿಂದೆ ನಾನೇ ನಿರ್ಮಿಸಿದೆನು. (ರಾ. ಭಾ.)

ಓಂ **ತತ್ ಸತ್**–ಇವು ಮೂರೂ ಪರಬ್ರಹ್ಮದ ಹೆಸರುಗಳು.

**ಓಂ ಜಗದ್ಯತ್ರ ಸ್ವಯಂ ಚ ಪೂರ್ಣೋ**
**ವೇದೋಕ್ತರೂಪೋऽನುಪಚಾರತಶ್ಚ ।**
**ಸರ್ವೈಃ ಶುಭೈಶ್ಚಾಭಿಯುತೋ ನ ಚಾನ್ಯೈಃ**
**ಓಂ ತತ್ಸದಿತ್ಯೇತಮತೋ ವದನ್ತಿ ॥**

ಎಂದು ಋಗ್ವೇದಖಿಲವು ಹೇಳುತ್ತದೆ. ಈ ಋಕ್ಕಿನಲ್ಲಿ **ವೇದೋಕ್ತ ರೂಪಃ** ಎಂದು ಮೊದಲಾಗುವ ಎರಡನೆಯ ಪಾದವು **ತತ್** ಶಬ್ದದ ಅರ್ಥವನ್ನು ಹೇಳುತ್ತದೆ. (**ತತ್** ಎಂದರೆ ಸದಾ ಪರೋಕ್ಷವಾಗಿರುವುದು. ಈಶ್ವರಸ್ವರೂಪವನ್ನು ಅನುಮಾನದಿಂದ ತಿಳಿಯಲಾಗುವುದಿಲ್ಲ. ಆದುದರಿಂದ ಪರಮಾತ್ಮನು ವೇದವೊಂದರಿಂದಲೇ ವೇದ್ಯನಾಗಿರುವುದರಿಂದ **ತತ್** ಎನಿಸುತ್ತಾನೆ.)

**ಸದೇವ ಸೋಮ್ಯೇದಮಗ್ರ ಆಸೀತ್ । ಓಮಿತಿ ಬ್ರಹ್ಮ ।** ಎಂಬ ಶ್ರುತಿವಾಕ್ಯಗಳು 'ಸತ್ ಮತ್ತು ಓಂ ಶಬ್ದಗಳು ಪರಬ್ರಹ್ಮದ ಹೆಸರುಗಳಾಗಿವೆ' ಎಂಬುದಕ್ಕೆ ಪ್ರಮಾಣ. ತೇನ ಎಂದರೆ ಆ ಬ್ರಹ್ಮದಿಂದ. 'ನನ್ನ ಪೂಜೆಯಿಂದ ಪ್ರಾಣಿಗಳಿಗೆ ಸುಖವುಂಟಾಗಲಿ' ಎಂಬ ಕಾರಣಕ್ಕೋಸ್ಕರ ಬ್ರಾಹ್ಮಣರೇ ಮುಂತಾದವರು ಅದರಿಂದ (ಬ್ರಹ್ಮದಿಂದ) ನಿರ್ಮಿತರಾದರು. ವೇದಗಳ ನಿರ್ಮಾಣವೆಂದರೆ ವೇದವಿಧಿಯ ವ್ಯಂಜನ ಎಂದು ಅರ್ಥ.

(ಮ. ಭಾ.)

**ಓಂ ತಸ್ಮಾದೋಮಿತ್ಯುದಾಹೃತ್ಯ ಯಜ್ಞದಾನತಪಃಕ್ರಿಯಾಃ ।**
**ಪ್ರವರ್ತನ್ತೇ ವಿಧಾನೋಕ್ತಾಃ ಸತತಂ ಬ್ರಹ್ಮವಾದಿನಾಮ್ ॥೨೪॥**

ಆದುದರಿಂದ ಬ್ರಹ್ಮವಾದಿಗಳ ವಿಧಾನೋಕ್ತವಾದ ಯಜ್ಞ, ದಾನ, ತಪಸ್ಸು–ಎಂಬ ಕ್ರಿಯೆಗಳು ಯಾವಾಗಲೂ 'ಓಂ' ಎಂದು ಹೇಳಿದ ಬಳಿಕವೇ ಪ್ರಾರಂಭವಾಗುತ್ತವೆ.

* * *

(ಹಿಂದೆ ಹೇಳಿದಂತೆ 'ಓಂ' ಎಂಬುದು ಸದ್ವಸ್ತುವಿನ ನಿರ್ದೇಶನವಾದುದರಿಂದ ಬ್ರಹ್ಮವಾದಿಗಳು ಎಂದರೆ ವೇದವಿದರು ಶಾಸ್ತ್ರವಿಧಿಪೂರ್ವಕವಾಗಿ ಮಾಡುವ ಯಜ್ಞ, ದಾನ ಮತ್ತು ತಪಃಕ್ರಿಯೆಗಳನ್ನು ಪ್ರಾರಂಭಿಸುವಾಗ 'ಓಂ' ಕಾರದ ಮೂಲಕವಾಗಿಯೇ ಪ್ರಾರಂಭಿಸುತ್ತಾರೆ. 'ಓಂ ಎಂದು ಹೇಳದೆ ಯಾವ ಕಾರ್ಯವನ್ನೂ ಪ್ರಾರಂಭಿಸುವುದಿಲ್ಲ. ಆಚಮನಮಾಡುವಾಗಲೂ **ಓಂ ಕೇಶವಾಯ ನಮಃ** ಎನ್ನುತ್ತೇವೆ. ಪ್ರಾಣಾಯಾಮಮಾಡುವಾಗಲೂ **ಓಂ ಭೂಃ** ಎನ್ನುತ್ತೇವೆ. ಪ್ರತಿಯೊಂದು ಕರ್ಮಗಳಿಗೂ ಆಚಮನ–ಪ್ರಾಣಾಯಾಮಗಳೇ ಮೊದಲಾಗಿರುತ್ತವೆ. ಆದುದರಿಂದ ನಿತ್ಯ-ನೈಮಿತ್ತಿಕವಾದ ಯಾವ ಕರ್ಮಗಳನ್ನೇ ಮಾಡಿದರೂ ಸಹ 'ಓಂ' ಕಾರ ಶಬ್ದವೇ ಅವೆಲ್ಲಕ್ಕೂ ಪ್ರಾರಂಭವಾಗುತ್ತದೆ.)

o o o

**ವಿಧಾನೋಕ್ತಾಃ** = ಶಾಸ್ತ್ರದಿಂದ ಚೋದಿತವಾದ. ಆದುದರಿಂದ ಬ್ರಹ್ಮವಾದಿಗಳ ( ಬ್ರಹ್ಮವನ್ನು ಹೇಳುವ ಸ್ವಭಾವವುಳ್ಳವರ ) ಶಾಸ್ತ್ರಬೋಧಿತ

ವಾದ ಎಲ್ಲ ಯಜ್ಞಾದಿ ಕ್ರಿಯೆಗಳೂ ಬ್ರಹ್ಮದ ಓಂ ಎಂಬ ನಾಮವನ್ನು ಉಚ್ಚರಿಸಿಯೇ ಪ್ರಾರಂಭವಾಗುತ್ತವೆ. (ಶಂ. ಭಾ.)

ಓಂ ತತ್ ಸತ್–ಎಂಬ ಶಬ್ದಗಳು–ಬ್ರಾಹ್ಮಣರು, ವೇದಗಳು ಮತ್ತು ಯಜ್ಞಗಳು ಇವು ಮೂರಕ್ಕೂ ಹೇಗೆ ಅನ್ವಯಿಸುತ್ತವೆ?–ಎಂಬ ಪ್ರಕಾರವನ್ನು ವಿವರಿಸತೊಡಗಿ ಓಂ ಎಂಬ ಶಬ್ದವು ಅವುಗಳಿಗೆ ಹೇಗೆ ಅನ್ವಯಿಸುತ್ತದೆ–ಎಂಬುದನ್ನು ಈ ಶ್ಲೋಕದಲ್ಲಿ ನಿರೂಪಿಸಿದೆ. ವೇದವಾದಿಗಳ ವೇದ ವಿಧಾನೋಕ್ತವಾದ ಯಜ್ಞ-ದಾನ-ತಪಸ್ಸು ಮುಂತಾದ ಎಲ್ಲ ಕ್ರಿಯೆಗಳೂ ಆರಂಭದಲ್ಲಿ ಓಂ ಎಂಬುದನ್ನು ಉಚ್ಚರಿಸಿಯೇ ಯಾವಾಗಲೂ ನಡೆಯುತ್ತವೆ. (**ಯದ್ವೇದಾದೌ ಸ್ವರಃ ಪ್ರೋಕ್ತಃ ವೇದಾನ್ತೇ ಚ ಪ್ರತಿಷ್ಠಿತಃ । ಬ್ರಹ್ಮಾಣಂ ಪ್ರಣವಂ ಕುರ್ಯಾತ್ ಆದಾವನ್ತೇ ಚ ಸರ್ವದಾ ।** ಎಂದು ಮೊದಲಾಗಿ ಶಾಸ್ತ್ರಗಳು ಹೇಳುವಂತೆ) ವೇದಗಳೂ ಕೂಡ ಓಂ ಎಂದು ಹೇಳಿಯೇ ಪ್ರಾರಂಭವಾಗುತ್ತವೆ. ಹೀಗೆ ವೇದಗಳು ಮತ್ತು ವೈದಿಕವಾದ ಯಜ್ಞಾದಿ ಕರ್ಮಗಳು ಇವುಗಳಿಗೆ ಓಂ ಎಂಬ ಶಬ್ದವು ಸಂಬದ್ಧವಾಗಿದೆ. ಬ್ರಾಹ್ಮಣ ಎಂಬ ಶಬ್ದದಿಂದ ಹೇಳಲ್ಪಟ್ಟಿರುವ ತ್ರೈವರ್ಣಿಕರೂ ಓಂ ಎಂಬ ಶಬ್ದದಿಂದ ಕೂಡಿರುವ ವೇದವನ್ನು ಧರಿಸಿರುವುದರಿಂದ ಮತ್ತು ಅದರೊಡನೆ ಕೂಡಿರುವ ಯಜ್ಞಾದಿಕರ್ಮಗಳನ್ನು ಮಾಡುವುದರಿಂದ ಓಂ ಎಂಬ ಶಬ್ದವು ಅವರಿಗೂ ಸಂಬಂಧಿಸುತ್ತದೆ. (ರಾ. ಭಾ.)

**ಓಂ ತದಿತ್ಯನಭಿಸಂಧಾಯ ಫಲಂ ಯಜ್ಞತಪಃಕ್ರಿಯಾಃ ।**
**ದಾನಕ್ರಿಯಾಶ್ಚ ವಿವಿಧಾಃ ಕ್ರಿಯನ್ತೇ ಮೋಕ್ಷಕಾಂಕ್ಷಿಭಿಃ ॥೨೫॥**

**'ತತ್'** ಎಂದು, ಫಲವನ್ನು ಮನಸ್ಸಿನಲ್ಲಿಟ್ಟುಕೊಳ್ಳದೇ ಯಜ್ಞ-ತಪಸ್ಸು ಮುಂತಾದ ಕ್ರಿಯೆಗಳೂ ವಿಧ-ವಿಧವಾದ ದಾನಕ್ರಿಯೆಗಳೂ ಮೋಕ್ಷವನ್ನು ಅಪೇಕ್ಷಿಸುವವರಿಂದಲೇ ಮಾಡಲ್ಪಡುತ್ತವೆ.

* * *

(**ತತ್** ಆ ಬ್ರಹ್ಮವಸ್ತುವೇ ಪ್ರಾಪಕವಾದುದು ಅಥವಾ ಹಿಂದಿನ ಶ್ಲೋಕದಲ್ಲಿ ಹೇಳಿದ ಓಂಕಾರವೇ **ತತ್** ಆ ಬ್ರಹ್ಮವಸ್ತು. ಅದನ್ನೇ ಪಡೆದುಕೊಳ್ಳಬೇಕು–ಎಂಬುದಾಗಿ ಭಾವಿಸಿ ಮೋಕ್ಷಾಪೇಕ್ಷಿಗಳಾದವರು ಫಲಾಭಿಸಂಧಿ

ಯಿಲ್ಲದೆ ಯಜ್ಞವನ್ನೂ ತಪಸ್ಸನ್ನೂ ಮಾಡುತ್ತಾರೆ. ವಿಧ-ವಿಧವಾದ ದಾನಗಳನ್ನೂ ಕೊಡುತ್ತಾರೆ.)

O O O

**ತತ್** ಎಂಬ ಬ್ರಹ್ಮದ ನಾಮವನ್ನು ಉಚ್ಚರಿಸಿ ಫಲದ ಅಪೇಕ್ಷೆಯಿಲ್ಲದೇ ಬಗೆ-ಬಗೆಯ ಯಜ್ಞ, ತಪಸ್ಸು ಮುಂತಾದ ಕ್ರಿಯೆಗಳನ್ನೂ– ಭೂಮಿ, ಹಿರಣ್ಯ ಮುಂತಾದ ದಾನಕರ್ಮಗಳನ್ನೂ ಮುಮುಕ್ಷುಗಳು ಮಾಡುತ್ತಾರೆ.

(ಶಂ. ಭಾ.)

**ತತ್** ಎಂಬ ಶಬ್ದವು ಬ್ರಾಹ್ಮಣ, ವೇದ ಮತ್ತು ಯಜ್ಞಗಳು ಇವು ಮೂರಕ್ಕೂ ಅನ್ವಯಿಸುವ ಪ್ರಕಾರವನ್ನು ಇಲ್ಲಿ ಹೇಳಿದೆ. ಮೋಕ್ಷವನ್ನು ಬಯಸುವ ತ್ರೈವರ್ಣಿಕರು ಕರ್ಮಫಲಾಭಿಸಂಧಿಯಿಲ್ಲದೆ ಯಾವ ವೇದಾಧ್ಯಯನ, ಯಜ್ಞ, ತಪಸ್ಸು, ದಾನ–ಮುಂತಾದ ಕರ್ಮಗಳನ್ನು ಮಾಡುತ್ತಾರೆಯೋ–ಅವೆಲ್ಲವೂ ಬ್ರಹ್ಮಪ್ರಾಪ್ತಿಗೆ ಉಪಾಯವಾಗಿರುವುದರಿಂದ **ತತ್** ಎಂಬ ಶಬ್ದದಿಂದ ಅವುಗಳನ್ನು ನಿರ್ದೇಶಿಸುವುದು ಯೋಗ್ಯವಾಗಿದೆ. ಏಕೆಂದರೆ **ತತ್** ಶಬ್ದವು ಬ್ರಹ್ಮವಾಚಕ ಎಂಬುದು ಸುಪ್ರಸಿದ್ಧವಾಗಿದೆ. **ಸವಃ ಕಃ ಕಿಂ ಯತ್ತತ್ಪದಮನುತ್ತಮಮ್ ।** (ವಿಷ್ಣುಸಹಸ್ರನಾಮ)

ಹೀಗೆಯೇ ಮೋಕ್ಷಕ್ಕೆ ಸಾಧನವಾಗಿರುವ ವೇದಾಧ್ಯಯನ, ಯಜ್ಞ ಮುಂತಾದುವುಗಳು **ತತ್** ಎಂಬ ಶಬ್ದದಿಂದ ನಿರ್ದೇಶಿಸಲು ಯೋಗ್ಯವಾಗಿರುವುದರಿಂದ ಆ ಶಬ್ದವು ಅವುಗಳಿಗೆ ಅನ್ವಯಿಸುತ್ತದೆ. ಅಂತಹ ವೇದಾಧ್ಯಯನ ಮುಂತಾದುವನ್ನು ಅನುಷ್ಠಾನಮಾಡುವುದರಿಂದಲೇ **ತತ್** ಶಬ್ದವು ತ್ರೈವರ್ಣಿಕರಿಗೂ ಸಂಬಂಧಿಸುವುದು ಯುಕ್ತವಾಗಿದೆ. (ರಾ. ಭಾ.)

**ಫಲಂ ಅನಭಿಸಂಧಾಯ** = ಆ ಫಲವು (ಎಂದರೆ ವೇದೋಕ್ತವಾದ ಸ್ವರ್ಗಾದಿಫಲವು) ನನಗೆ ಉಂಟಾಗಲಿ ಎಂದು ಅನುಸಂಧಾನಮಾಡದೆ.

(ಮ. ಭಾ.)

**ಓಂ ಸದ್ಭಾವೇ ಸಾಧುಭಾವೇ ಚ ಸದಿತ್ಯೇತತ್ಪ್ರಯುಜ್ಯತೇ ।**
**ಪ್ರಶಸ್ತೇ ಕರ್ಮಣಿ ತಥಾ ಸಚ್ಛಬ್ದಃ ಪಾರ್ಥ ಯುಜ್ಯತೇ ॥೨೬॥**

ಪಾರ್ಥ! ಸದ್ಭಾವದಲ್ಲಿಯೂ ಸಾಧುಭಾವದಲ್ಲಿಯೂ **ಸತ್** ಎಂಬ ಶಬ್ದವನ್ನು ಪ್ರಯೋಗಿಸುತ್ತಾರೆ ಮತ್ತು ಪ್ರಶಸ್ತವಾದ ಕರ್ಮದಲ್ಲಿಯೂ ಸತ್ ಎಂಬ ಶಬ್ದವು ಪ್ರಯೋಗಿಸಲ್ಪಡುತ್ತದೆ.

*     *     *

(ಬ್ರಹ್ಮವನ್ನು ನಿರ್ದೇಶಿಸುವ ಸತ್ ಶಬ್ದವೂ ಸಹ ಬ್ರಹ್ಮದ ಹಿನ್ನೆಲೆಯನ್ನು ಇಟ್ಟುಕೊಂಡು ಅದಕ್ಕೆ ಅನುರೂಪವಾದ ಅರ್ಥದಲ್ಲಿ ವ್ಯಾಪ್ತವಾಗಿದೆ. **ಸತ್–ಭಾವ** = ಇರುವಿಕೆಯ ಭಾವ. ಯಾವುದರ ಇರುವಿಕೆ? **ಸತ್ತಿನ** = ಬ್ರಹ್ಮವಸ್ತುವಿನ ಇರುವಿಕೆ. ಇದಕ್ಕೆ ಸದ್ಭಾವ ಎಂದು ಹೆಸರು. ಈ **'ಸದ್ಭಾವ'** ಎಂಬ ಪದಕ್ಕೆ ಕೇವಲ **'ಸತ್'** ಎಂದೇ ಹೇಳುತ್ತಾರೆ. ಸತ್ ಎಂದರೆ ಸತ್ತಾ. ಇದನ್ನು (ಈ ಪದವನ್ನು ) ನಾವು ಸಾರ್ವತ್ರಿಕವಾಗಿ ಉಪಯೋಗಿಸುತ್ತೇವೆ.

**ಸಾಧುಭಾವಃ**= ಒಳ್ಳೆಯ ಸ್ವಭಾವ ; ಶುದ್ಧಸ್ವಭಾವ. ಈ ಅರ್ಥವೂ ಸಹ **'ಸತ್'** ಎಂಬ ಶಬ್ದದಿಂದಲೇ ನಿರ್ದೇಶಿಸಲ್ಪಡುತ್ತದೆ. **ಸತ್+ ಪುರುಷ**= **ಸತ್ಪುರುಷ** = ಸಾಧುಭಾವದ ಪುರುಷ ಎಂದು ಅರ್ಥವಾಗುತ್ತದೆ. ಪ್ರಶಸ್ತವಾದ ಕರ್ಮಗಳನ್ನೂ ಸಹ **ಸತ್** ಶಬ್ದದ ಸಹಯೋಗದಿಂದ ನಿರ್ದೇಶಿಸುತ್ತಾರೆ. ಪ್ರಶಸ್ತಕರ್ಮಗಳು ಅಂದರೆ ಶಾಸ್ತ್ರವಿಹಿತವಾದ ಶುಭಕರ್ಮಗಳು ; ಪರಮಾತ್ಮನ ಪ್ರೀತ್ಯರ್ಥವಾಗಿ ನಿಷ್ಕಾಮನೆಯಿಂದ ಮಾಡುವ ಕರ್ಮಗಳು ; ಇವುಗಳೆಲ್ಲಕ್ಕೂ **ಸತ್+ ಕರ್ಮ** = ಸತ್ಕರ್ಮ ಎಂದು ಹೇಳುವ ವಾಡಿಕೆಯೇ ಇದೆ. ಸ್ಪರ್ಶಶಿಲೆಯು ಮುಟ್ಟಿದುದನ್ನೆಲ್ಲಾ ಚಿನ್ನಮಾಡುವ ಸಾಮರ್ಥ್ಯವನ್ನು ಹೊಂದಿರುವಂತೆ **ಸತ್** ಶಬ್ದವು ತನ್ನ ಸಹಯೋಗಗೊಂಡ ಶಬ್ದಗಳನ್ನು ಸುಶಬ್ದವನ್ನಾಗಿ ಮಾಡಿಬಿಡುತ್ತದೆ.)

O     O     O

ಓಂ ಮತ್ತು **ತತ್** ಎಂಬ ಶಬ್ದಗಳ ವಿನಿಯೋಗವನ್ನು ಹೇಳಿ ಯಾಯಿತು. ಈಗ **ಸತ್** ಎಂಬ ಶಬ್ದದ ವಿನಿಯೋಗವನ್ನು ಇಲ್ಲಿ ಹೇಳಿದೆ. ಸದ್ಭಾವ ಎಂದರೆ ಇಲ್ಲದೇ ಇರುವ ವಸ್ತುವಿನ ಇರುವಿಕೆ. ಉದಾಹರಣೆ :– ಇಲ್ಲದೇ ಇದ್ದ ಪುತ್ರನು ಈಗ ಹುಟ್ಟುವಿಕೆ. **ಸಾಧುಭಾವ** ಎಂದರೆ ದುಷ್ಟ

ವಾದ ಆಚರಣೆಯುಳ್ಳ ಅಸಾಧುವು ಸದಾಚಾರನಾಗುವಿಕೆ. ಈ ಸದ್ಭಾವ ಮತ್ತು ಸಾಧುಭಾವಗಳಲ್ಲಿ **ಸತ್** ಎಂಬ ಬ್ರಹ್ಮನ ಹೆಸರನ್ನು ಪ್ರಯೋಗಿಸುತ್ತೇವೆ. ಹಾಗೆಯೇ ವಿವಾಹವೇ ಮುಂತಾದ ಮಂಗಳಕರ್ಮಗಳಲ್ಲಿಯೂ **ಸತ್** ಎಂಬ ಶಬ್ದವನ್ನು ಪ್ರಯೋಗಿಸುತ್ತೇವೆ. (ಶಂ. ಭಾ.)

ಲೋಕ ಮತ್ತು ವೇದಗಳಲ್ಲಿ 'ಸತ್ತಾ' ಎಂಬ ಭಾವದಲ್ಲಿ–ಎಂದರೆ ಇರುವಿಕೆಯಲ್ಲಿ ಮತ್ತು ಸಾಧುಭಾವದಲ್ಲಿ ಎಂದರೆ ಮಂಗಳಮಯವಾದ ಭಾವದಲ್ಲಿ ಎಲ್ಲ ವಸ್ತುಗಳೊಡನೆಯೂ **ಸತ್** ಎಂಬ ಶಬ್ದವನ್ನು ಪ್ರಯೋಗಿಸುತ್ತೇವೆ. ಹಾಗೆಯೇ ಯಾವನಾದರೂ ಮನುಷ್ಯನು ಮಾಡುವ ಲೌಕಿಕವಾದ ಶುಭಕರ್ಮದೊಡನೆಯೂ ಇದು 'ಸತ್ಕರ್ಮ' ಎಂದು ಹೇಳಿ **ಸತ್** ಎಂಬ ಶಬ್ದವನ್ನು ಸೇರಿಸುತ್ತೇವೆ. (ರಾ. ಭಾ.)

ಸದ್ಭಾವ ಎಂಬ ಶಬ್ದದಿಂದ ಪ್ರಜನನವು= ಹುಟ್ಟುವಿಕೆಯು ಸೂಚಿತವಾಗುತ್ತದೆ. ಪ್ರಜನನ ಎಂದರೆ ಹಿಂದೆ ಇಲ್ಲದೇ ಇದ್ದುದನ್ನು ಉಂಟುಮಾಡುವಿಕೆ. ಪರಮಾತ್ಮನಿಗೆ, ಜಗತ್ತಿಗೆ ತಾನಿರುವುದನ್ನು ಹೇಳುವ ಇಚ್ಛೆ ಇರುವುದರಿಂದ ಸತ್ ಶಬ್ದಕ್ಕೆ ಸತ್ತಾ ಎಂದು ಅರ್ಥಮಾಡಿದೆ.

ಓಂ ಎಂದು ಹೇಳಿ ಫಲಾಭಿಸಂಧಿಯಿಲ್ಲದೇ 'ಯಜ್ಞ, ದಾನ, ತಪಸ್ಸು ಮುಂತಾದುವುಗಳನ್ನು ಯಾರು ಆಚರಿಸುತ್ತಾರೆಯೋ ಅವರು ಪರಮಾತ್ಮನಲ್ಲಿ ಅತ್ಯಂತಪ್ರೀತಿಯುಳ್ಳವರಾಗಿರುವುದರಿಂದ ಬ್ರಹ್ಮಶಬ್ದಕ್ಕೂ ಅವರ ಕ್ರಿಯೆಗೂ **ಸತ್** ಎಂಬ ಹೆಸರಿನ ಸಾಮ್ಯವಿರುವುದರಿಂದ ಅವರು ಬ್ರಹ್ಮವನ್ನೇ ಅಚರಿಸಿದಂತೆ ಆಗುವುದು. (ಮೇಲೆ ಹೇಳಿದ ಓಂಕಾರದ ಅರ್ಥಜ್ಞಾನದೊಡನೆ ಬೇರೆ ಯಾವ ಫಲವನ್ನೂ ಅನುಸಂಧಾನಮಾಡದೇ ಪರಬ್ರಹ್ಮವನ್ನೇ ಅನುಸಂಧಾನಮಾಡುತ್ತಾ ಬ್ರಹ್ಮಜ್ಞಾನಭಕ್ತಿಪೂರ್ವಕವಾಗಿ ಪರಬ್ರಹ್ಮವಿಷಯಕವಾದ ನಿಷ್ಠೆಯಿಂದ ವೇದೋಕ್ತಪ್ರಕಾರದಲ್ಲಿ ಬ್ರಾಹ್ಮಣರೊಡನೆ ಯಜ್ಞ, ದಾನ, ತಪಸ್ಸು–ಮುಂತಾದುವುಗಳನ್ನು ಆಚರಿಸುವವರು ಪರಮಾತ್ಮರೂಪವನ್ನೇ ನೆರವೇರಿಸಿದಂತೆ). (ಮ. ಭಾ.)

**ಓಂ ಯಜ್ಞೇ ತಪಸಿ ದಾನೇ ಚ ಸ್ಥಿತಿಃ ಸದಿತಿ ಚೋಚ್ಯತೇ ।**
**ಕರ್ಮ ಚೈವ ತದರ್ಥೀಯಂ ಸದಿತ್ಯೇವಾಭಿಧೀಯತೇ ॥೨೭॥**

ಯಜ್ಞದಲ್ಲಿಯೂ, ತಪಸ್ಸಿನಲ್ಲಿಯೂ, ದಾನದಲ್ಲಿಯೂ ತೊಡಗಿರುವಿಕೆಯು ಸತ್ ಎನಿಸುತ್ತದೆ. ಅದಕ್ಕಾಗಿ ಮಾಡುವ ಕರ್ಮವನ್ನೂ ಸತ್ ಎಂದೇ ಹೇಳುತ್ತಾರೆ.

* * *

(ಹಿಂದಿನ ಶ್ಲೋಕದಲ್ಲಿ ಶ್ರೀಕೃಷ್ಣನು **ಪ್ರಶಸ್ತೇ ಕರ್ಮಣಿ**–ಪ್ರಶಸ್ತವಾದ ಕರ್ಮದಲ್ಲಿ ಸತ್ ಶಬ್ದವು ಸೇರಿಸಲ್ಪಡುತ್ತದೆ–ಎಂದು ಹೇಳಿರುವನು. ಕರ್ಮಗಳೆಂದರೆ ಶುಭಕರ್ಮಗಳು ಎಂದು ಹಿಂದೆ ಅರ್ಥಮಾಡಲಾಯಿತು. ಈ ಶ್ಲೋಕದಲ್ಲಿ ಶ್ರೀಕೃಷ್ಣನೇ ಪ್ರಶಸ್ತಕರ್ಮಗಳ ವಿವರಣೆಯನ್ನು ನೀಡುತ್ತಾನೆ. ಯಜ್ಞ, ತಪಸ್ಸು, ದಾನ ಈ ಕರ್ಮಗಳಲ್ಲಿ ತೊಡಗಿರುವುದು ಸತ್ಕರ್ಮದಲ್ಲಿ ತೊಡಗಿದಂತೆ ಆಗುತ್ತದೆ. ಯಜ್ಞಾರ್ಥವಾಗಿ, ತಪಸ್ಸಿಗಾಗಿ ಮತ್ತು ದಾನಕ್ಕಾಗಿ ಮಾಡುವ ಕರ್ಮಗಳೂ ಸಹ ಸತ್ಕರ್ಮಗಳೆನಿಸುತ್ತವೆ. ಯಜ್ಞಕ್ಕಾಗಿ ಮಾಡುವ ಕರ್ಮಗಳೆಂದರೆ : ಯಜ್ಞದ್ರವ್ಯಗಳ ಸಂಗ್ರಹ, ಯಜ್ಞಮಂಟಪದ ರಚನೆ–ಇತ್ಯಾದಿಗಳು. ತಪಸ್ಸಿನ ಕಾರ್ಯವೆಂದರೆ : ತಪಸ್ಸಿಗೆ ಅನುಕೂಲವಾದ ಸ್ಥಳವನ್ನು ಆರಿಸಿಕೊಂಡು ಅದನ್ನು ಶುಚಿಗೊಳಿಸುವುದು–ಮುಂತಾದ ಕಾರ್ಯಗಳು. ದಾನಾರ್ಥವಾದ ಕರ್ಮವೆಂದರೆ : ದಾನಮಾಡಲು ಬೇಕಾಗುವ ಪದಾರ್ಥಗಳನ್ನು ಸಂಗ್ರಹಿಸುವ ಕಾರ್ಯ. ಈ ಕಾರ್ಯಗಳೂ ಸಹ ಸತ್ಕರ್ಮಗಳೆಂದೇ ಹೇಳಲ್ಪಡುತ್ತವೆ. ಸಾಮಾನ್ಯವಾಗಿ ಎಲ್ಲ ಶುಭಕರ್ಮಗಳ ಕಡೆಯಲ್ಲಿಯೂ ಓಂ **ತತ್ಸತ್ ಕೃಷ್ಣಾರ್ಪಣಮಸ್ತು** ಎಂದು ಹೇಳುವ ರೂಢಿಯು ಬೆಳೆದು ಬಂದಿದೆ. ಪ್ರಾರಂಭದಲ್ಲಿ 'ಓಂ' ಎಂಬ ಪ್ರಣವವನ್ನು ಮಾತ್ರ ಹೇಳುವ ಸಂಪ್ರದಾಯವಿದೆ. ಕಡೆಯಲ್ಲಿ ಓಂ–**ತತ್–ಸತ್** ಎಂದು ಮೂರು ಹೆಸರುಗಳಿಂದ ಬ್ರಹ್ಮವಸ್ತುವಿನ ನಾಮನಿರ್ದೇಶವನ್ನು ಮಾಡುವುದರಿಂದ ಕರ್ಮದಲ್ಲಿ ಯಾವುದಾದರೂ ಲೋಪವಾದರೂ ಸಹ ಅದರಿಂದ ದೋಷವುಂಟಾಗುವುದಿಲ್ಲ. ಆದುದರಿಂದ 'ಓಂ **ತತ್ಸತ್**' ಎಂಬ ಮಹಾಮಂತ್ರದ ಫಲವು ಅಪಾರವಾದುದು.)

o o o

ಯಜ್ಞಕರ್ಮದಲ್ಲಿ ಯಾವ ಸ್ಥಿತಿಯುಂಟೋ, ತಪಸ್ಸಿನಲ್ಲಿ ಯಾವ

ಸ್ಥಿತಿಯುಂಟೋ ಮತ್ತು ದಾನದಲ್ಲಿ ಯಾವ ಸ್ಥಿತಿಯುಂಟೋ–ಅದನ್ನು **ಸತ್** ಎಂದು ವಿದ್ವಾಂಸರು ಹೇಳುತ್ತಾರೆ. ಹಾಗೆಯೇ ಯಜ್ಞವೇ ಮುಂತಾದುವುಗಳಿಗೋಸ್ಕರ ಯಾವ ಕರ್ಮವನ್ನು ಮಾಡುತ್ತೇವೆಯೋ ಅದನ್ನು ಅಥವಾ ಈಶ್ವರನಿಗೋಸ್ಕರ ಯಾವ ಕರ್ಮವನ್ನು ಮಾಡುತ್ತೇವೆಯೋ ಅದನ್ನು **ಸತ್** ಎಂದೇ ಕರೆಯುತ್ತೇವೆ. ಈ ರೀತಿಯಲ್ಲಿ ಮಾಡಿದ ಯಜ್ಞ, ತಪಸ್ಸು ಮುಂತಾದ ಕರ್ಮಗಳಲ್ಲಿ ಅಸಾತ್ತ್ವಿಕತೆಯಿದ್ದರೂ ಗುಣವಿಲ್ಲದಿದ್ದರೂ ಶ್ರದ್ಧಾಪೂರ್ವಕವಾಗಿ ಪರಮಾತ್ಮನ ಈ ಮೂರು ಹೆಸರುಗಳನ್ನು ಪ್ರಯೋಗಿಸುವುದರಿಂದಲೇ ಅವು ಸಾತ್ತ್ವಿಕವಾಗುತ್ತವೆ ಮತ್ತು ಗುಣಸಂಪನ್ನವಾಗುತ್ತವೆ. (ಶಂ. ಭಾ.)

ಆದುದರಿಂದ ವೈದಿಕರ ಯಜ್ಞ, ತಪಸ್ಸು ಮತ್ತು ದಾನಗಳಲ್ಲಿ ಇರುವಿಕೆಯು ಕಲ್ಯಾಣಮಯವಾಗಿರುವುದರಿಂದ **ಸತ್** ಎನಿಸುತ್ತದೆ. ಅವರ ಪ್ರಯೋಜನಕ್ಕೋಸ್ಕರ ಇರುವ ಯಜ್ಞ-ದಾನಾದಿಗಳು **ಸತ್** ಎಂದೇ ಕರೆಯಲ್ಪಡುತ್ತವೆ. ಆದುದರಿಂದ ವೇದಗಳು, ವೈದಿಕಕರ್ಮಗಳು ಮತ್ತು ವೈದಿಕರು– ಈ ಮೂವರಿಗೂ **ಓಂ ತತ್ ಸತ್** ಎಂಬ ಶಬ್ದಸಂಬಂಧವೆಂಬ ಲಕ್ಷಣವಿರುವುದರಿಂದ ಇವರು ವೇದಗಳಲ್ಲಿದ್ದು, ಅವೈದಿಕರಿಂದ ಬೇರೆಯವರೆಂದು ತಿಳಿಯಬೇಕು. (ರಾ. ಭಾ.)

ಸತ್ ಎಂದರೆ ಬ್ರಹ್ಮವಸ್ತು ಎಂದು ವಿವರಿಸಿದ ಶ್ರೀಕೃಷ್ಣನು ಅಸತ್ ಎಂದರೆ ಯಾವುದೆಂಬುದನ್ನು ಈ ಶ್ಲೋಕದಲ್ಲಿ ಹೇಳುತ್ತಾನೆ.

**ಓಂ ಅಶ್ರದ್ಧಯಾ ಹುತಂ ದತ್ತಂ ತಪಸ್ತಪ್ತಂ ಕೃತಂ ಚ ಯತ್ ।**
**ಅಸದಿತ್ಯುಚ್ಯತೇ ಪಾರ್ಥ ನ ಚ ತತ್ಪ್ರೇತ್ಯ ನೋ ಇಹ ॥೨೮॥**

ಪಾರ್ಥ! ಅಶ್ರದ್ಧೆಯಿಂದ ಮಾಡಿದ ಹೋಮ, ಕೊಟ್ಟ ದಾನ, ಆಚರಿಸಿದ ತಪಸ್ಸು, ಮಾಡಿದ ಕರ್ಮ–ಇವುಗಳು, ಅಸತ್ತು ಎನಿಸುತ್ತವೆ. ಅದು ಸತ್ತ ಮೇಲೂ ಇರುವುದಿಲ್ಲ. ಇಲ್ಲಿಯೂ ಇರುವುದಿಲ್ಲ.

* * *

(ಅಸತ್ ಎಂದರೆ ಸತ್ತೆಯೇ ಇಲ್ಲದ್ದು. ನಿಜವಾದ ಇರುವಿಕೆ ಇಲ್ಲದ್ದು

ಎಂಬ ಅರ್ಥವಾಗುತ್ತದೆ. ಸತ್ ಎಂಬ ಪದಕ್ಕೆ ಒಳ್ಳೆಯದು ಎಂದು ಅರ್ಥ ಮಾಡಿದಾಗ ಅಸತ್ ಎಂಬುದಕ್ಕೆ ಕೆಟ್ಟುದು ಎಂದು ಅರ್ಥವಾಗುತ್ತದೆ. ಅಶ್ರದ್ಧೆ ಯಿಂದ ಯಾವ ಕೆಲಸವನ್ನೂ ಮಾಡಬಾರದು ಎಂಬುದಿಲ್ಲಿ ಮುಖ್ಯಾರ್ಥ. ಶ್ರದ್ಧೆಯಿಂದ ಕೆಲಸಮಾಡಿದರೆ ಒಳ್ಳೆಯ ಫಲವು ಸಿಗುತ್ತದೆ. ಅಶ್ರದ್ಧೆಯಿಂದ ಹವನಮಾಡಿದ್ದು ಎಂದರೆ ಕಾಟಾಚಾರಕ್ಕೆ ಹೋಮಮಾಡುವುದು, ಒಳ್ಳೆಯ ತುಪ್ಪಕ್ಕೆ ಬದಲಾಗಿ ಕೆಟ್ಟ ತುಪ್ಪವನ್ನು ಹೋಮಕ್ಕೆ ಉಪಯೋಗಿಸುವುದು, ಕರ್ಮಕ್ಕೆ ತಕ್ಕುದಾದ ದಕ್ಷಿಣೆಕೊಡದಿರುವುದು—ಇತ್ಯಾದಿಗಳು ಅಶ್ರದ್ಧೆಯಿಂದ ಮಾಡಿದ ಹವನಗಳಾಗುತ್ತವೆ. ಇದರಿಂದ ಒಳ್ಳೆಯದಂತೂ ಖಂಡಿತ ವಾಗಿಯೂ ಆಗುವುದಿಲ್ಲ. ಕೆಟ್ಟದ್ದೇ ಆಗುತ್ತದೆ. ಅಶ್ರದ್ಧೆಯಿಂದ ದಾನಮಾಡು ವುದು; ದಾನಮಾಡುವುದಕ್ಕೆ ಒಂದು ವಿಧಾನವಿದೆ, ನಿಯಮವಿದೆ. ಸೂಕ್ತ ವಾದ ದೇಶ-ಕಾಲಗಳಲ್ಲಿ ಸತ್ಪಾತ್ರನಿಗೆ ದಾನಮಾಡಬೇಕು. ಅದನ್ನು ಬಿಟ್ಟು ಮನಸ್ಸಿಗೆ ತೋಚಿದಾಗ ಮನಸ್ಸಿಗೆ ತೋಚಿದುದನ್ನು ಯಾವನು ಸಿಕ್ಕಿದನೋ ಅವನಿಗೆ ತಾತ್ಸಾರದಿಂದ ತಿರಸ್ಕಾರದಿಂದ ಕೊಡುವುದು ಅಶ್ರದ್ಧೆಯಿಂದ ಕೊಡುವ ದಾನ. ಇದೂ ಸಹ ದುಷ್ಪರಿಣಾಮವನ್ನುಂಟುಮಾಡುತ್ತದೆ. **ಅಶ್ರುದ್ಧಯಾ ತಪಸ್ತಪ್ತಂ** ಇಲ್ಲಿ ತಪಸ್ಸು ಎಂಬುವುದಕ್ಕೆ ಸ್ತುತಿ-ನಮಸ್ಕಾರ ಎಂದು ಅರ್ಥಮಾಡಬೇಕು. ಅಥವಾ ತೋರಿಕೆಯ ತಪಸ್ಸು, ಬೂಟಾಟಿಕೆಯ ತಪಸ್ಸು, ಇತರರನ್ನು ಮೆಚ್ಚಿಸುವುದಕ್ಕಾಗಿ ಮಾಡುವ ತಪಸ್ಸು—ಎಂದು ಬೇಕಾದರೂ ಅರ್ಥಮಾಡಬಹುದು. ಸರಿಯಾದ ನಿಯಮಪೂರ್ವಕವಾದ ತಪಸ್ಸು ಮಾಡುವ ಶ್ರದ್ಧೆಯಿಲ್ಲ. ತಪಸ್ವೀ ಎಂಬ ಗೌರವವನ್ನು ಪಡೆಯಬೇಕು—ಎಂಬ ಆಸೆಯಿರುತ್ತದೆ. ಇಂತಹ ಮನೋಭಾವನೆಯುಳ್ಳವರು ಮಾಡುವ ತಪಸ್ಸು ಅಶ್ರದ್ಧೆಯ ಎಂದರೆ ಆಸಕ್ತಿಯಿಲ್ಲದ ದಾಂಭಿಕವಾದ ತಪಸ್ಸಾಗುತ್ತದೆ.

**ಅಶ್ರುದ್ಧಯಾ ಕೃತಂ** = ಯಾವುದೇ ಧಾರ್ಮಿಕಕಾರ್ಯವನ್ನು ಮಾಡಿ ದರೂ ಸರಿಯೇ ; ಅಶ್ರದ್ಧೆಯಿಂದ ಮಾಡಿದರೆ ಅದು ಕೆಟ್ಟ ಪರಿಣಾಮ ವನ್ನುಂಟುಮಾಡುವುದು. ಅದರಿಂದ ಒಳ್ಳೆಯ ಪರಿಣಾಮವಂತೂ ಆಗುವು ದಿಲ್ಲ. ಆದುದರಿಂದಲೇ **ನ ಚ ತತ್ ಪ್ರೇತ್ಯ ನೋ ಇಹ**—ಎಂದು ಶ್ರೀಕೃಷ್ಣನು ಸ್ಪಷ್ಟವಾಗಿ ಹೇಳಿದ್ದಾನೆ. ಅಶ್ರದ್ಧೆಯಿಂದ ಯಜ್ಞ-ದಾನ-ತಪಃಕ್ರಿಯೆಗಳನ್ನು ಮಾಡಿದರೆ, ಯಾವುದೇ ಧಾರ್ಮಿಕಕಾರ್ಯಗಳನ್ನು ಮಾಡಿದರೆ, ಅಂತಹವ

ನಿಗೆ ಇಹವೂ ಇಲ್ಲ ; ಪರವೂ ಇಲ್ಲ. ಇಹದಲ್ಲೂ ಸೌಖ್ಯವಿಲ್ಲ ; ಸ್ವರ್ಗಾದಿಗಳೂ ಇಲ್ಲ. ಬ್ರಹ್ಮವಾಚಕವಾದ **ಸತ್** ಶಬ್ದವನ್ನು ತಿರಸ್ಕರಿಸಿದಂತೆ. ಅಂತಹವನಿಗೆ ಸದ್ವಸ್ತುವಿನ ಪ್ರಾಪ್ತಿಯು ಹೇಗೆ ತಾನೇ ಆದೀತು ? ಅದು ಅವನ ಬಳಿಯಲ್ಲೂ ಸುಳಿಯುವುದಿಲ್ಲ.)

o o o

ಎಲ್ಲ ಕಡೆಗಳಲ್ಲಿಯೂ ಅಶ್ರದ್ಧೆಯನ್ನೇ ಮುಖ್ಯವಾಗಿಟ್ಟುಕೊಂಡು ಕೆಲಸ ಮಾಡುವುದರಿಂದ ಅಶ್ರದ್ಧೆಯಿಂದ ಮಾಡಿದ ಹವನ ; ಅಶ್ರದ್ಧೆಯಿಂದ ಬ್ರಾಹ್ಮಣರಿಗೆ ಕೊಟ್ಟ ದಾನ ; ಅಶ್ರದ್ಧೆಯಿಂದ ಮಾಡಿದ ಸ್ತೋತ್ರ-ನಮಸ್ಕಾರಗಳೇ ಮುಂತಾದ ತಪಸ್ಸು–ಎಲ್ಲವೂ ಅಸತ್ತು ಎನಿಸುತ್ತದೆ. ಏಕೆಂದರೆ : ನನ್ನನ್ನು ಹೊಂದುವ ಸಾಧನಮಾರ್ಗಕ್ಕೆ ಅದು ಹೊರಗಿರುವುದು. ಬಹಳ ಆಯಾಸದಿಂದ ಮಾಡಿದರೂ ಕೂಡ ಅದು ಸತ್ತಮೇಲೂ ಫಲಕೊಡುವುದಿಲ್ಲ ಮತ್ತು ಈ ಲೋಕದಲ್ಲೂ ಸುಖವನ್ನು ಕೊಡುವುದಿಲ್ಲ. ಏಕೆಂದರೆ : ಸಾಧುಗಳು ನಿಂದಿಸಿರುವ ಕರ್ಮ ಅದು. (ಶಂ. ಭಾ.)

ಅಶ್ರದ್ಧೆಯಿಂದ ಮಾಡಲ್ಪಟ್ಟ ಹೋಮಾದಿ ಕರ್ಮಗಳು ಶಾಸ್ತ್ರಬೋಧಿತವೇ ಆಗಿದ್ದರೂ ಅದು ಅಸತ್ತೆಂದೇ ಕರೆಯಲ್ಪಡುತ್ತದೆ. ಏಕೆಂದರೆ ಅದು ಮೋಕ್ಷಕ್ಕೂ ಕಾರಣವಾಗುವುದಿಲ್ಲ ; ಸಾಂಸಾರಿಕವಾದ ಫಲಕ್ಕೂ ಕಾರಣವಾಗುವುದಿಲ್ಲ. (ರಾ. ಭಾ.)

ಋಗ್ವೇದಖಿಲದ ಈ ಮಂತ್ರವೂ ಕೂಡ ಈ ಅರ್ಥವನ್ನೇ ಹೇಳುತ್ತದೆ. **ಓಂ ಯಜ್ಞಾದ್ಯಾ ನಿಷ್ಫಲಂ ಕರ್ಮ ತತ್ಸ್ಯಾತ್ । ಸದ್ವೈ ತದರ್ಥಂ ಕರ್ಮೇತಿ ವದನ್ತಿ ದೇವಾಃ । ತಚ್ಛಬ್ದಾನಾಂ ಸಂನಿಧೌ ಬ್ರಹ್ಮಮೂರ್ತೇಃ ತದ್ರೂಪತ್ವಾಜ್ಜನಿತಂ ಬ್ರಹ್ಮ ತಸ್ಯ ।**

ಯಜ್ಞವೇ ಮುಂತಾದ ಕರ್ಮಗಳು ಫಲೋದ್ದೇಶರಹಿತವಾಗಿದ್ದರೆ ಅವು **ತತ್** (ಬ್ರಹ್ಮ ) ಎನಿಸುತ್ತವೆ. ಏಕೆಂದರೆ : ಅವು ತದರ್ಥವಾಗಿವೆ. ಬ್ರಹ್ಮವಿಷಯವಾಗಿವೆ. ಹಾಗೆಯೇ ಬ್ರಹ್ಮಶಬ್ದಗಳು ಯಜ್ಞವೇ ಮುಂತಾದುವುಗಳಲ್ಲಿ ಸಾನ್ನಿಧ್ಯವನ್ನು ಹೊಂದಿರುವುದರಿಂದ ತದ್ರೂಪವೆಂಬ (ಬ್ರಹ್ಮರೂಪ) ತಿಳಿವಳಿಕೆಗೆ ಬಂದಿರುವುದರಿಂದ, ಅದರ (ಬ್ರಹ್ಮದ) ಪ್ರತಿರೂಪವೇ ಆಗಿರು

ವುದರಿಂದ ಆ ಯಜ್ಞಾದಿಗಳನ್ನು ಅನುಷ್ಠಾನಮಾಡುವವನಿಗೆ ಅವೆಲ್ಲವೂ ಬ್ರಹ್ಮವೇ ಆಗುತ್ತವೆ."

**ಇತಿ ಶ್ರೀಮನ್ಮಹಾಭಾರತೇ ಭೀಷ್ಮಪರ್ವಣಿ ಶ್ರೀಮದ್ಭಗವದ್ಗೀತಾ ಸೂಪನಿಷತ್ಸು ಬ್ರಹ್ಮವಿದ್ಯಾಯಾಂ ಯೋಗಶಾಸ್ತ್ರೇ ಶ್ರೀಕೃಷ್ಣಾರ್ಜುನಸಂವಾದೇ ಶ್ರದ್ಧಾತ್ರಯವಿಭಾಗೋ ನಾಮ ಸಪ್ತದಶೋಽಧ್ಯಾಯಃ**

**ಭಗವದ್ಗೀತೆಯಲ್ಲಿ ೧೭ನೆಯ ಅಧ್ಯಾಯವು ಮುಗಿಯಿತು.**

ಭೀಷ್ಮಪರ್ವದಲ್ಲಿ ೪೧ನೆಯ ಅಧ್ಯಾಯವು ಮುಗಿಯಿತು.

# ಭಗವದ್ಗೀತಾ-೧೮ನೆಯ ಅಧ್ಯಾಯ

೪೨ನೆಯ ಅಧ್ಯಾಯ ಶ್ರೀಮದ್ಭಗವದ್ಗೀತಾಪರ್ವ (ಮುಂದುವರಿದಿದೆ.)

## ತ್ಯಾಗ, ಸಾಂಖ್ಯಸಿದ್ಧಾಂತ, ಫಲಸಹಿತವಾದ ವರ್ಣ-ಧರ್ಮಗಳು, ಉಪಾಸನಾಸಹಿತವಾದ ಜ್ಞಾನನಿಷ್ಠೆ, ಭಕ್ತಿಸಹಿತವಾದ ನಿಷ್ಕಾಮ ಕರ್ಮಯೋಗ ಮತ್ತು ಗೀತಾಮಹಿಮೆ-ಇವುಗಳ ವರ್ಣನೆ

**ಅರ್ಜುನ ಉವಾಚ :**

**ಓಂ ಸಂನ್ಯಾಸಸ್ಯ ಮಹಾಬಾಹೋ ತತ್ತ್ವಮಿಚ್ಛಾಮಿ ವೇದಿತುಮ್ ।**
**ತ್ಯಾಗಸ್ಯ ಚ ಹೃಷೀಕೇಶ ಪೃಥಕ್ಕೇಶಿನಿಷೂದನ ॥೧॥**

ಅರ್ಜುನನು ಹೇಳುತ್ತಾನೆ :

"ಮಹಾಬಾಹುವೇ! ಹೃಷೀಕೇಶನೇ! ಕೇಶಿಸಂಹಾರಕನೇ! ಸಂನ್ಯಾಸದ ಮತ್ತು ತ್ಯಾಗದ ತತ್ತ್ವವನ್ನು ಬೇರೆ ಬೇರೆಯಾಗಿ (ವಿಭಾಗದೊಡನೆ) ತಿಳಿಯಬೇಕೆಂದು ಬಯಸುತ್ತೇನೆ.

* * *

(ಅರ್ಜುನನಿಲ್ಲಿ ಸಂನ್ಯಾಸದ ತತ್ತ್ವವೇನೆಂಬುದನ್ನೂ ತ್ಯಾಗದ ತತ್ತ್ವವೇನೆಂಬುದನ್ನೂ ಪ್ರತ್ಯೇಕ-ಪ್ರತ್ಯೇಕವಾಗಿ ತಿಳಿದುಕೊಳ್ಳಲಿಚ್ಛಿಸಿದ್ದೇನೆ,

ಎನ್ನುತ್ತಾನೆ. ಸಂನ್ಯಾಸ ಎಂದರೂ ಬಿಡುವುದು, ತೊರೆಯುವುದು ; ತ್ಯಾಗ ಎಂದರೂ ಇದೇ ಅರ್ಥ–ಬಿಡುವುದು, ತೊರೆಯುವುದು. ಸಂನ್ಯಾಸಶಬ್ದಕ್ಕೆ ಸರ್ವಕರ್ಮಗಳ ತ್ಯಾಗ ಅಥವಾ ನೈಷ್ಕರ್ಮ್ಯ ಎಂದೂ, ತ್ಯಾಗಶಬ್ದಕ್ಕೆ ಸರ್ವ ಕರ್ಮಫಲತ್ಯಾಗ ಎಂಬ ರೂಢಾರ್ಥವೂ ಬಂದಿದೆ. ಆದರೂ ಸಹ ಪ್ರತ್ಯೇಕ ಪ್ರತ್ಯೇಕವಾಗಿ ಈ ಶಬ್ದಗಳ ಅರ್ಥವೇನೆಂಬುದನ್ನು ಹೇಳಬೇಕೆಂದು ಅರ್ಜುನನು ಕೇಳುತ್ತಾನೆ. ಸಂನ್ಯಾಸದ ವಿಷಯದಲ್ಲಿ ಈ ಹಿಂದೆ ಅನೇಕ ಬಾರಿ ಪ್ರಸ್ತಾಪ ಬಂದಿರುತ್ತದೆ.

ಆರನೆಯ ಅಧ್ಯಾಯದಲ್ಲಿ ಸಂನ್ಯಾಸಿಯ ಲಕ್ಷಣವನ್ನು ಹೇಳುವಾಗ **ಅನಾಶ್ರಿತಃ ಕರ್ಮಫಲಂ ಕಾರ್ಯಂ ಕರ್ಮ ಕರೋತಿ ಯಃ । ಸ ಸಂನ್ಯಾಸೀ ಚ ಯೋಗೀ ಚ** ಎಂದು ಶ್ರೀಕೃಷ್ಣನು ಹೇಳಿದ್ದಾನೆ. ಐದನೆಯ ಅಧ್ಯಾಯದಲ್ಲಿ **ಸಂನ್ಯಾಸಂ ಕರ್ಮಣಾಂ ಕೃಷ್ಣ**–ಎಂದು ಅರ್ಜುನನು ಪ್ರಶ್ನಿಸುವಾಗ ಸಂನ್ಯಾಸಶಬ್ದಕ್ಕೆ ಸಕಲಕರ್ಮಗಳನ್ನೂ ಬಿಡುವುದು ಎಂಬ ಅರ್ಥವನ್ನು ಅರ್ಜುನನು ಗ್ರಹಿಸಿದ್ದಾನೆ. ಶ್ರೀಕೃಷ್ಣನು ಉತ್ತರಹೇಳುವಾಗಲೂ ಕರ್ಮಸಂನ್ಯಾಸಕ್ಕಿಂತಲೂ ಎಂದರೆ ಕರ್ಮಗಳನ್ನು ಸಂಪೂರ್ಣವಾಗಿ ಬಿಟ್ಟು ಬಿಡುವುದಕ್ಕಿಂತಲೂ ಕರ್ಮಯೋಗ ಅಥವಾ ಫಲತ್ಯಾಗಪೂರ್ವಕವಾಗಿ ಕರ್ಮಗಳನ್ನು ಮಾಡುವುದೇ ಶ್ರೇಷ್ಠವೆಂದು ಹೇಳಿ ಅದಕ್ಕೆ ಕಾರಣಗಳನ್ನೂ ಸಹ ನಿರೂಪಿಸಿದ್ದಾನೆ.

ಆದುದರಿಂದ ಅರ್ಜುನನಿಗೆ ಸಂನ್ಯಾಸಶಬ್ದದ ತತ್ತ್ವಾರ್ಥವು ತಿಳಿಯ ದೆಂದಲ್ಲ. ಆದರೆ ಸಂನ್ಯಾಸಕ್ಕೂ, ತ್ಯಾಗಕ್ಕೂ ವ್ಯವಹಾರದಲ್ಲಿ ಕಿಂಚಿದ್ವ್ಯತ್ಯಾಸ ವಿರುವಂತೆ ಕಾಣುತ್ತದೆ. ಅದರ ರಹಸ್ಯವನ್ನು ಅರ್ಜುನನು ತಿಳಿಯಬೇಕಾಗಿದೆ. ಕೇವಲ ಜ್ಞಾನನಿಷ್ಠನಾಗಿ ಯೋಗಾರೂಢನಾಗಿ–**ನೈಷ್ಕರ್ಮ್ಯಂ ಪುರುಷೋಽಶ್ನುತೇ**–ಎಂದು ಹೇಳಿರುವಂತೆ ಎಲ್ಲ ಕರ್ಮಗಳನ್ನೂ ಸ್ವರೂ ಪತಃ ತ್ಯಾಗಮಾಡುವ ಸಂನ್ಯಾಸವನ್ನು ಕೆಲವು ಜ್ಞಾನಿಗಳು ಪ್ರಶಂಸೆಮಾಡು ತ್ತಾರೆ. ಭಗವದರ್ಪಣಬುದ್ಧಿಯಿಂದ ಕರ್ಮಫಲತ್ಯಾಗಮಾಡಿ–**ಸ ಸಂನ್ಯಾಸೀ ಚ ಯೋಗೀ ಚ**–ಎಂದು ಶ್ರೀಕೃಷ್ಣನು ಹೇಳಿರುವ ಫಲತ್ಯಾಗಪೂರ್ವಕವಾದ ಕರ್ಮಯೋಗವನ್ನೂ ಜ್ಞಾನಿಗಳು ಪ್ರಶಂಸೆಮಾಡುತ್ತಾರೆ. ವಿಷಯವನ್ನು

ಸ್ಪಷ್ಟಪಡಿಸಿಕೊಳ್ಳುವುದಕ್ಕೋಸ್ಕರ ಅರ್ಜುನನು ಉಪಸಂಹಾರದಲ್ಲಿ ಅವೆರಡರ ಬಗೆಗೆ ಪುನಃ ಪ್ರಶ್ನೆಮಾಡುತ್ತಾನೆ.)

o o o

ಈ ಅಧ್ಯಾಯದಲ್ಲಿ ಸಮಸ್ತಗೀತಾಶಾಸ್ತ್ರದ ಆಶಯವನ್ನೂ ವೇದಗಳ ಸಂಪೂರ್ಣತಾತ್ಪರ್ಯವನ್ನೂ ಸಂಗ್ರಹಮಾಡಿ ಉಪಸಂಹಾರರೂಪದಲ್ಲಿ ಹೇಳಬೇಕಾಗಿದೆ. ಹಿಂದಿನ ಎಲ್ಲ ಅಧ್ಯಾಯಗಳಲ್ಲಿಯೂ ಇರುವ ಅಭಿಪ್ರಾಯವೂ ಇದರಲ್ಲಿ ಸಿಕ್ಕುತ್ತದೆ. ಆದರೂ ಅರ್ಜುನನು ಕೇವಲ ಸಂನ್ಯಾಸ ಮತ್ತು ತ್ಯಾಗ ಈ ಎರಡು ಶಬ್ದಗಳಲ್ಲಿರುವ ಅರ್ಥಗಳ ಭೇದವನ್ನೇ ತಿಳಿಯುವ ಇಷ್ಟದಿಂದ ಈ ಪ್ರಶ್ನೆಮಾಡುತ್ತಾನೆ.

'ನಾನು ಸಂನ್ಯಾಸಶಬ್ದದ ಅರ್ಥವನ್ನೂ ಮತ್ತು ತ್ಯಾಗಶಬ್ದದ ಅರ್ಥದ ತತ್ತ್ವವನ್ನೂ ವಿಭಾಗಸಹಿತವಾಗಿ ಪ್ರತ್ಯೇಕವಾಗಿ ತಿಳಿಯಲು ಬಯಸುತ್ತೇನೆ.'

**ಕೇಶಿನಿಷೂದನಃ** = ಕೇಶಿ ಎಂಬುವನು ಕುದುರೆಯ ವೇಷದಲ್ಲಿದ್ದ ಒಬ್ಬಾನೊಬ್ಬ ಅಸುರನು ; ಅವನನ್ನು ಭಗವಂತನಾದ ವಾಸುದೇವನು ಕೊಂದನು. ಆದುದರಿಂದ ವಾಸುದೇವನಿಗೆ ಕೇಶಿನಿಷೂದನನೆಂಬ ಅನ್ವರ್ಥ ನಾಮವು ಬಂದಿದೆ. (ಶಂ. ಭಾ.)

ಈ ಅಧ್ಯಾಯದಲ್ಲಿ ಮೋಕ್ಷಸಾಧನವೆಂದು ನಿರ್ದಿಷ್ಟವಾಗಿರುವ ತತ್ತ್ವ ಮತ್ತು ಸಂನ್ಯಾಸಗಳ ಐಕ್ಯವನ್ನೂ, ತ್ಯಾಗದ ಸ್ವರೂಪವನ್ನೂ, ಸರ್ವೇಶ್ವರನಾದ ಭಗವಂತನಲ್ಲಿ ಎಲ್ಲ ಧರ್ಮಗಳ ಕರ್ತೃತ್ವವನ್ನೂ ಅನುಸಂಧಾನಮಾಡಬೇಕೆಂಬುದನ್ನೂ, ತ್ರಿಗುಣಗಳ ಕಾರ್ಯವನ್ನೂ ವರ್ಣಿಸಿ–ಸತ್ತ್ವಗುಣವು ಅವಶ್ಯವಾಗಿ ಉಪಾದೇಯವಾಗಿದೆ ಎಂಬುದನ್ನೂ, ವರ್ಣೋಚಿತವಾದ ಕರ್ಮಗಳನ್ನು ಪರಮಪುರುಷನ ಆರಾಧನಾರೂಪದಲ್ಲಿ ಮಾಡಿದರೆ ಅವು ಹೇಗೆ ಅವನ ಪ್ರಾಪ್ತಿಯನ್ನುಂಟುಮಾಡುತ್ತವೆ ಎಂಬುದನ್ನೂ, ಇಡೀ ಗೀತಾ ಶಾಸ್ತ್ರದ ಸಾರಾರ್ಥವಾದ ಭಕ್ತಿಯೋಗವನ್ನೂ ಪ್ರತಿಪಾದಿಸಿದೆ. ಇವುಗಳಲ್ಲಿ ತ್ಯಾಗ ಮತ್ತು ಸಂನ್ಯಾಸಗಳು ಬೇರೆ ಬೇರೆಯೇ ಅಥವಾ ಪರ್ಯಾಯವೇ? ಎಂಬುದನ್ನೂ ಮತ್ತು ಅವುಗಳ ಸ್ವರೂಪವನ್ನೂ ನಿರ್ಣಯಿಸಿಕೊಳ್ಳುವುದ ಕ್ಕೋಸ್ಕರ ಅರ್ಜುನನು ಹೀಗೆ ಪ್ರಶ್ನಿಸುತ್ತಾನೆ.

**ನ ಕರ್ಮಣಾ ನ ಪ್ರಜಯಾ ಧನೇನ**—ಮುಂತಾದ ಶ್ರುತಿಗಳು ತ್ಯಾಗ-ಸಂನ್ಯಾಸಗಳನ್ನು ಮೋಕ್ಷಸಾಧನವನ್ನಾಗಿ ವಿಧಿಸುತ್ತವೆ. ಹೀಗಿರುವಾಗ ಸಂನ್ಯಾಸ ಮತ್ತು ತ್ಯಾಗಶಬ್ದಗಳಿಗೆ ಬೇರೆ ಬೇರೆ ಅರ್ಥವೇ ಅಥವಾ ಒಂದೇ ಅರ್ಥವೇ? ಇವುಗಳ ಅರ್ಥವು ಬೇರೆ ಬೇರೆಯಾಗಿದ್ದರೆ ಪ್ರತ್ಯೇಕವಾಗಿ ಇವುಗಳ ಸ್ವರೂಪವೇನು? ಒಂದೇ ಆಗಿದ್ದರೂ ಅದರ ಸ್ವರೂಪವೇನು? ಎಂಬುದನ್ನು ತಿಳಿಯಲು ಅರ್ಜುನನ ಪ್ರಶ್ನೆ. (ರಾ. ಭಾ.)

ಹಿಂದೆ ಹೇಳಿದ ಎಲ್ಲ ಸಾಧನಗಳನ್ನೂ ಈ ಅಧ್ಯಾಯದಲ್ಲಿ ಸಂಕ್ಷೇಪವಾಗಿ ಉಪಸಂಹಾರಮಾಡಿ ಹೇಳಲಾಗಿದೆ. (ಮ. ಭಾ.)

**ಶ್ರೀಭಗವಾನುವಾಚ :**

**ಓಂ ಕಾಮ್ಯಾನಾಂ ಕರ್ಮಣಾಂ ನ್ಯಾಸಂ ಸಂನ್ಯಾಸಂ ಕವಯೋ ವಿದುಃ ।**
**ಸರ್ವಕರ್ಮಫಲತ್ಯಾಗಂ ಪ್ರಾಹುಸ್ತ್ಯಾಗಂ ವಿಚಕ್ಷಣಾಃ ॥೨॥**

ಭಗವಂತನು ಹೇಳುತ್ತಾನೆ :

ಕಾಮ್ಯಕರ್ಮಗಳನ್ನು ಬಿಡುವುದನ್ನು ಕವಿಗಳು ಸಂನ್ಯಾಸವೆಂದು ತಿಳಿಯುತ್ತಾರೆ. ಸರ್ವಕರ್ಮಗಳ ಫಲವನ್ನು ಬಿಡುವುದನ್ನು ವಿದ್ವಾಂಸರು ತ್ಯಾಗವೆಂದು ಹೇಳುತ್ತಾರೆ.

* * *

(ಶ್ರೀಕೃಷ್ಣನು ಹಿಂದೆ ಅಪ್ಪಣೆಮಾಡಿರುವಂತೆ—**ಯೋಗಾರೂಢಸ್ಯ ತಸ್ಯೈವ ಶಮಃ ಕಾರಣಮುಚ್ಯತೇ**—ಎಂದು ಹೇಳಿರುವ ಬ್ರಹ್ಮೈಕನಿಷ್ಠನಾದ ಸರ್ವಕರ್ಮತ್ಯಾಗಿಯಾದ ಸಂನ್ಯಾಸಿಯು ಶ್ರೇಷ್ಠನೇ ಹೌದು. ಆದರೆ ಆತ್ಮಸಂಗ್ರಹ, ಲೋಕಸಂಗ್ರಹ ಎರಡನ್ನೂ ಸಾಧಿಸುವ ಮತ್ತೊಂದು ಸಂನ್ಯಾಸವುಂಟು. ಅದರಲ್ಲಿ ಸ್ವಾರ್ಥದ ಕಾಮ್ಯಕರ್ಮಗಳು ಸಂನ್ಯಸ್ತವಾಗುತ್ತವೆ. ಉಳಿದ ಕರ್ಮಗಳು ಫಲತ್ಯಾಗಬುದ್ಧಿಯಿಂದ ಆಚರಿಸಲ್ಪಡುತ್ತವೆ. ಇಂತಹವರನ್ನು ಹಿಂದೆ ಶ್ರೀಕೃಷ್ಣನು—**ಸ ಸಂನ್ಯಾಸೀ ಚ ಯೋಗೀ ಚ**— ಎಂದು ಕರೆದಿದ್ದಾನೆ. ಅಂತಹ ಸಂನ್ಯಾಸಿ-ತ್ಯಾಗಿಯನ್ನು ಕವಿಗಳೂ ವಿಚಕ್ಷಣರೂ ಪ್ರಶಂಸಿಸುವರೆಂದು ಶ್ರೀಕೃಷ್ಣನು ಈ ಶ್ಲೋಕದಲ್ಲಿ ಹೇಳುತ್ತಾನೆ.)

ಸಂನ್ಯಾಸ ಮತ್ತು ತ್ಯಾಗ ಎಂಬ ಶಬ್ದಗಳನ್ನು ಹಿಂದಿನ ಅಧ್ಯಾಯಗಳಲ್ಲಿ ಬೇರೆ ಬೇರೆ ಕಡೆಗಳಲ್ಲಿ ಹೇಳಿದೆ. ಆದರೆ ಅವುಗಳ ಅರ್ಥವು ಸ್ಪಷ್ಟವಾಗಿಲ್ಲವಾದುದರಿಂದ ಅದನ್ನು ಸ್ಪಷ್ಟಪಡಿಸಬೇಕೆಂದು ಪ್ರಶ್ನೆಮಾಡಿದ ಅರ್ಜುನನಿಗೆ ತಿಳಿಸಲು ಭಗವಂತನು ಇದನ್ನು ಹೇಳುತ್ತಾನೆ.

ಅನೇಕಪಂಡಿತರು ಅಶ್ವಮೇಧವೇ ಮುಂತಾದ ಕಾಮ್ಯಕರ್ಮಗಳ ತ್ಯಾಗವನ್ನು ಎಂದರೆ ಕರ್ತವ್ಯರೂಪವಾಗಿ ಶಾಸ್ತ್ರಗಳಲ್ಲಿ ವಿಧಿಸಿರುವ ಸಕಾಮಕರ್ಮಗಳನ್ನು ಬಿಡುವುದೇ ಸಂನ್ಯಾಸಶಬ್ದದ ಅರ್ಥ ಎಂದು ಹೇಳುತ್ತಾರೆ. ಕೆಲವು ಮಂದಿ ವಿಚಕ್ಷಣರಾದ ಪಂಡಿತರು ಅನುಷ್ಠಾನಮಾಡಲ್ಪಡುವ ನಿತ್ಯ-ನೈಮಿತ್ತಿಕಗಳಾದ ಎಲ್ಲ ಕರ್ಮಗಳ ಫಲವನ್ನೂ ತ್ಯಾಗಮಾಡುವುದನ್ನೇ ತ್ಯಾಗ ಎಂದು ತ್ಯಾಗಶಬ್ದಾರ್ಥವನ್ನು ಹೇಳುತ್ತಾರೆ. ಅಭಿಪ್ರಾಯವೇನೆಂದರೆ : ಕಾಮ್ಯಕರ್ಮಗಳನ್ನು ಸ್ವರೂಪತಃ ತ್ಯಾಗಮಾಡುವುದಾಗಲೀ ಅಥವಾ ಸಮಸ್ತಕರ್ಮಗಳ ಫಲವನ್ನು ಬಿಡುವುದಾಗಲೀ–ಎಲ್ಲ ರೀತಿಯಲ್ಲೂ ಸಂನ್ಯಾಸ ಮತ್ತು ತ್ಯಾಗ ಈ ಎರಡು ಶಬ್ದಗಳ ಅರ್ಥವು ತ್ಯಾಗ ಎಂದೇ ಆಗಿದೆ. ಈ ಎರಡು ಶಬ್ದಗಳೂ ಬೇರೆ-ಬೇರೆ ರೀತಿಯ ಅರ್ಥವನ್ನು ಹೇಳುವುದಿಲ್ಲ.)

o o o

ನಿತ್ಯ-ನೈಮಿತ್ತಿಕಕರ್ಮಗಳಿಗೆ ಫಲವೇ ಇಲ್ಲವೆಂದು ಹೇಳುತ್ತಾರೆ. ಹೀಗಿರುವಾಗ ಅವುಗಳ ಫಲತ್ಯಾಗವನ್ನು ಮಾಡುವುದು ಹೇಗೆ? ನಿತ್ಯ-ನೈಮಿತ್ತಿಕಕರ್ಮಗಳ ಫಲವನ್ನು ಬಿಡುವುದು ಎಂದರೆ ಬಂಜೆಯು ತನ್ನ ಪುತ್ರನನ್ನು ತ್ಯಾಗಮಾಡುತ್ತಾಳೆ ಎಂದು ಹೇಳಿದಂತಾಗುತ್ತದೆ–ಎಂಬ ಆಕ್ಷೇಪ ಬಂದರೆ ಅದಕ್ಕೆ ಉತ್ತರ ಹೀಗೆ :– ನಿತ್ಯಕರ್ಮಗಳಿಗೂ ಫಲವುಂಟು ಎಂಬುದು ಭಗವಂತನ ಇಷ್ಟ. (ಆದುದರಿಂದ ಮೇಲೆ ಹೇಳಿದುದು ದೋಷವಲ್ಲ.) **ಅನಿಷ್ಟಮಿಷ್ಟಂ ಮಿಶ್ರಂ ಚ..... ನ ತು ಸಂನ್ಯಾಸಿನಾಂ ಕ್ವಚಿತ್**– ಎಂದು ಭಗವಂತನೇ ಮುಂದೆ ಹೇಳುತ್ತಾನೆ. ಕೇವಲ ಸಂನ್ಯಾಸಿಗಳಿಗೆ ಮಾತ್ರವೇ ಕರ್ಮಫಲದ ಅರ್ಥವುಂಟೆಂದು ತೋರಿಸಿ **ಭವತ್ಯತ್ಯಾಗಿನಾಂ ಪ್ರೇತ್ಯ** ಎಂದು ಅಸಂನ್ಯಾಸಿಗಳಿಗೆ ಕರ್ಮಫಲಪ್ರಾಪ್ತಿಯು ಅವಶ್ಯವಾಗಿ ಉಂಟೆಂದು ಹೇಳುತ್ತಾನೆ. (ಶಂ. ಭಾ.)

ತ್ಯಾಗ ಮತ್ತು ಸಂನ್ಯಾಸ ಇವೆರಡರ ಸ್ವರೂಪವೂ ಒಂದೇ. 'ಅದು

ಹೀಗೆ-ಅದು ಈ ರೀತಿಯದು' ಎಂದು ನಿರ್ಣಯಿಸುವುದಕ್ಕೋಸ್ಕರ ಆ ಬಗೆಗೆ ವಾದಿಗಳಲ್ಲಿರುವ ಭಿನ್ನಾಭಿಪ್ರಾಯಗಳನ್ನು ಭಗವಂತನು ಇಲ್ಲಿ ಹೇಳುತ್ತಾನೆ.

ಕೆಲವು ವಿದ್ವಾಂಸರು ಕಾಮ್ಯಕರ್ಮಗಳ ನ್ಯಾಸವನ್ನು ಎಂದರೆ ಸ್ವರೂಪ ತ್ಯಾಗವನ್ನು ಸಂನ್ಯಾಸವೆಂದು ಹೇಳುತ್ತಾರೆ. ಮತ್ತೆ ಕೆಲವು ವಿಚಕ್ಷಣರು ನಿತ್ಯ, ನೈಮಿತ್ತಿಕ ಮತ್ತು ಕಾಮ್ಯ ಈ ಎಲ್ಲ ಕರ್ಮಗಳ ಫಲತ್ಯಾಗವೇ ಮೋಕ್ಷಶಾಸ್ತ್ರ ಗಳಲ್ಲಿ ತ್ಯಾಗಶಬ್ದದ ಅರ್ಥ ಎಂದು ಹೇಳುತ್ತಾರೆ.

ಈ ಬಗೆಗೆ ಇಲ್ಲಿ ಶಾಸ್ತ್ರೀಯವಾದ ತ್ಯಾಗವೆಂದರೆ ಕಾಮ್ಯಕರ್ಮಗಳ ಸ್ವರೂಪತ್ಯಾಗವೇ? ಅಥವಾ ಎಲ್ಲ ಕರ್ಮಗಳ ಫಲಗಳ ತ್ಯಾಗವೇ?–ಎಂಬ ವಿವಾದವನ್ನು ತೋರಿಸುತ್ತಾ ಭಗವಂತನು ಒಂದು ಕಡೆ ಸಂನ್ಯಾಸಶಬ್ದವನ್ನೂ ಪ್ರಯೋಗಿಸಿದ್ದಾನೆ. ಆದುದರಿಂದ ತ್ಯಾಗ ಮತ್ತು ಸಂನ್ಯಾಸಶಬ್ದಗಳಿಗೆ ಒಂದೇ ಅರ್ಥವೆಂದು ಭಗವಂತನು ಅಂಗೀಕರಿಸಿರುವುದಾಗಿ ತಿಳಿದುಬರುತ್ತದೆ. ಇದಲ್ಲದೇ–**ನಿಶ್ಚಯಂ ಶೃಣು ಮೇ ತತ್ರ ತ್ಯಾಗೇ ಭರತಸತ್ತಮ**–ಎಂದು ತ್ಯಾಗಶಬ್ದದಿಂದಲೇ ನಿರ್ಣಯವನ್ನು ಹೇಳಿದ್ದಾನೆ. **ನಿಯತಸ್ಯ ತು ಸಂನ್ಯಾಸಃ। ಮೋಹಾತ್ತಸ್ಯ ಪರಿತ್ಯಾಗಃ**–ಎಂಬಲ್ಲಿಯೂ **ಅನಿಷ್ಟಮಿಷ್ಟಂ... ಭವತ್ಯತ್ಯಾಗಿನಾಂ ಪ್ರೇತ್ಯ ನ ತು ಸಂನ್ಯಾಸಿನಾಂ ಕ್ವಚಿತ್**–ಮುಂತಾದ ಕಡೆಗಳಲ್ಲಿಯೂ ಸಂನ್ಯಾಸ-ತ್ಯಾಗಶಬ್ದಗಳನ್ನು ಪರ್ಯಾಯವಾಗಿ ಉಪ ಯೋಗಿಸಿರುವುದರಿಂದ ಅವೆರಡರ ಅರ್ಥವೂ ಒಂದೇ ಎಂಬ ಅಭಿಮತವು ನಿಶ್ಚಿತವಾಗುತ್ತದೆ. (ರಾ. ಭಾ.)

ಫಲೇಚ್ಛೆಯನ್ನು ಬಿಟ್ಟು ಅಥವಾ ಆಚರಣೆಮಾಡದೇ ಕಾಮ್ಯಕರ್ಮ ಗಳನ್ನು ನ್ಯಾಸಮಾಡುವುದು ಸಂನ್ಯಾಸ. ತ್ಯಾಗವೆಂದರೆ ಫಲತ್ಯಾಗವೇ. ಕಾಮ್ಯಗಳಲ್ಲಿ ವೈಕಲ್ಪಿಕಕಾಮ್ಯ, ನಿಯತಕಾಮ್ಯ–ಎಂದು ಎರಡು ಬಗೆ. ಜ್ಯೋತಿಷ್ಟೋಮ ಮುಂತಾದುವುಗಳು ವೈಕಲ್ಪಿಕಕಾಮ್ಯಕ್ಕೆ ಉದಾಹರಣೆ. ಸಂಧ್ಯಾಕಾರ್ಯಾದಿಗಳು ನಿಯತಕಾಮ್ಯಕ್ಕೆ ಉದಾಹರಣೆ. ಇವುಗಳಲ್ಲಿ ವೈಕ ಲ್ಪಿಕಕಾಮ್ಯಗಳನ್ನು ಸ್ವರ್ಗಾದಿ ಫಲಗಳಲ್ಲಿ ಬಯಕೆಯಿಲ್ಲದೇ ಅವುಗಳ ವಿಶೇ ಷಣವನ್ನು ಬಿಟ್ಟು (ಫಲಕಾಮನಾವಿಷಯವೆಂಬ ವಿಶೇಷಣವನ್ನು ಬಿಟ್ಟು) ಮಾಡುವ ತ್ಯಾಗ ಮತ್ತು ಅವುಗಳ ನಿಯತಕಾಮ್ಯಗಳ ಬಗೆಗೆ ಸ್ವರೂಪ

ವನ್ನೇ ಬಿಟ್ಟುಬಿಡುವ ತ್ಯಾಗ. ಇದಕ್ಕೆ ಸಂನ್ಯಾಸ ಎಂದು ಹೆಸರು. ಕಾಮ್ಯ ಕರ್ಮಗಳಲ್ಲಿಯೇ ಫಲತ್ಯಾಗವನ್ನು ಮಾಡುವುದು ತ್ಯಾಗ. ಕರ್ಮವನ್ನು ಮಾಡಿಯೂ ನಶ್ವರವಾದ ಸ್ವರ್ಗಾದಿಫಲವನ್ನು ತ್ಯಜಿಸುವುದು ಸಂನ್ಯಾಸ ; ಕೇವಲ ಫಲತ್ಯಾಗವು ತ್ಯಾಗ–ಎಂದು ಎರಡಕ್ಕೂ ಭೇದ.

**ಅನಿಚ್ಛಯಾ ಅಕರ್ಮಣಾ ವಾಪಿ ಕಾಮ್ಯಕರ್ಮನ್ಯಾಸಃ ಸಂನ್ಯಾಸಃ**
**ಫಲತ್ಯಾಗಸ್ತು ತ್ಯಾಗಃ** (ಪ್ರಾಚೀನಶಾಲಾಶ್ರುತಿಃ) (ಮ. ಭಾ.)

**ಓಂ ತ್ಯಾಜ್ಯಂ ದೋಷವದಿತ್ಯೇಕೇ ಕರ್ಮ ಪ್ರಾಹುರ್ಮನೀಷಿಣಃ ।**
**ಯಜ್ಞದಾನತಪಃಕರ್ಮ ನ ತ್ಯಾಜ್ಯಮಿತಿ ಚಾಪರೇ ॥೩॥**

ಕರ್ಮವನ್ನು ದೋಷವುಳ್ಳದ್ದೆಂದೂ ಆದುದರಿಂದ ಅದನ್ನು ಬಿಟ್ಟು ಬಿಡಬೇಕೆಂದೂ ಕೆಲವು ಪಂಡಿತರು ಹೇಳುತ್ತಾರೆ. ಯಜ್ಞ-ದಾನ-ತಪಃಕರ್ಮ ಗಳು ಬಿಡತಕ್ಕದ್ದಲ್ಲ ಎಂದು ಮತ್ತೆ ಕೆಲವರು ಹೇಳುತ್ತಾರೆ.

* * *

(ಕರ್ಮವು ದೋಷಯುಕ್ತವಾದುದರಿಂದ ತ್ಯಾಜ್ಯವಾದುದು. ಅದನ್ನು ಬಿಟ್ಟುಬಿಡಬೇಕು ಎಂದು ಕೆಲವು ವಿದ್ವಾಂಸರು ಹೇಳುತ್ತಾರೆ. ಕರ್ಮವು ದೋಷಯುಕ್ತವಾದುದು ಎಂದರೇನು? ದೋಷರಹಿತವಾಗಿ ಯಾವ ಕರ್ಮವನ್ನೂ ಮಾಡುವುದಕ್ಕಾಗುವುದಿಲ್ಲ. ಯಾವುದಾದರೂ ಒಂದು ರೀತಿ ಯಲ್ಲಿ ದೋಷವು ಸಂಭವಿಸಿಯೇ ಸಂಭವಿಸುತ್ತದೆ. ಮಂತ್ರಲೋಪ-ಕ್ರಿಯಾ ಲೋಪಗಳು ಆಗಿಯೇ ಆಗುತ್ತವೆ. ಆದರೆ ಕರ್ಮದೊಡನೆಯೇ ಪ್ರಾಯಶ್ಚಿತ್ತವೂ ಇರುವುದು ನಿಜ. **ಅಚ್ಯುತಾಯ ನಮಃ ಅನನ್ತಾಯ ನಮಃ ಗೋವಿನ್ದಾಯ ನಮಃ**–ಎಂಬ ನಾಮತ್ರಯಮಹಾಮಂತ್ರಗಳನ್ನು ಮಂತ್ರ-ಸ್ವರ-ವರ್ಣ-ನ್ಯೂನಾತಿರಿಕ್ತದೋಷಗಳ ಪ್ರಾಯಶ್ಚಿತ್ತಾರ್ಥವಾಗಿಯೇ ಹೇಳು ತ್ತೇವೆ. ಇನ್ನೂ ಅನೇಕಪ್ರಾಯಶ್ಚಿತ್ತಗಳನ್ನೂ ಹೇಳುವ ವಿಧಿಗಳಿವೆ. ಯಜ್ಞ-ದಾನ-ತಪಃಕ್ರಿಯೆಗಳಲ್ಲಿ ಹೆಚ್ಚಿನ ದೋಷಗಳೇ ಸಂಭವಿಸಬಹುದು. ಲಭಿ ಸುವ ಫಲಕ್ಕಿಂತಲೂ ಅಧಿಕವಾದ ದೋಷವೂ ಸಂಭವಿಸಬಹುದು. ಋತ್ವಿ ಜರು ದೋಷಯುಕ್ತರಾಗಿರಬಹುದು. ಅಂತಹ ಸಮಯಗಳಲ್ಲಿ ಯಜ್ಞವೇ

ಹಾಳಾಗಿಬಿಡುತ್ತದೆ. ಎಲ್ಲದಕ್ಕೂ ಪ್ರಾಯಶ್ಚಿತ್ತವಿಲ್ಲ. 'ನಡೆಯುವವನು ಎಡವಿಯೇ ತೀರುವನು' ಎಂಬಂತೆ–ಕರ್ಮಮಾಡುವವನು ನಿರ್ದುಷ್ಟವಾದ ಕರ್ಮವನ್ನು ಎಲ್ಲ ಸಮಯಗಳಲ್ಲಿಯೂ ಮಾಡಲಾರನು. ಯಾವುದೋ ಕಾರಣದಿಂದ ಮಹತ್ತರವಾದ ದೋಷವು ಕರ್ಮದಲ್ಲಿ ಸಂಭವಿಸಬಹುದು. ಹೀಗೆ ದೋಷವು ಸಂಘಟಿಸುವ ಕರ್ಮಗಳನ್ನು ಮಾಡುವುದಕ್ಕಿಂತಲೂ ಬಿಟ್ಟುಬಿಡುವುದೇ ಶ್ರೇಯಸ್ಕರ. ಜೇನುಗೂಡನ್ನು ಬಿಡಿಸಲು ಹೋಗಿ ಹುಳುಗಳಿಂದ ಕಚ್ಚಿಸಿಕೊಂಡು ನರಳುವುದಕ್ಕಿಂತಲೂ ಜೇನುಗೂಡನ್ನು ಬಿಚ್ಚಲು ಹೋಗದಿರುವುದೇ ಒಳ್ಳೆಯದಲ್ಲವೇ! 'ಕರ್ಮಗಳೆಲ್ಲವೂ ಬಗೆ-ಬಗೆಯ ಫಲಗಳನ್ನು ಕೊಡುವುದರಿಂದ ಬಂಧನಕ್ಕೆ ಕಾರಣಗಳಾಗುತ್ತವೆ. ಆದುದರಿಂದ ಕರ್ಮಮಾಡುವುದು ದೋಷ'–ಎಂದು ಮನೀಷಿಗಳಾದವರು ; ವಿದ್ವಾಂಸರಾದವರು ಹೇಳುತ್ತಾರೆ. 'ರಾಗ-ದ್ವೇಷಗಳನ್ನು ಬಿಡಬೇಕು' ಎಂದು ಹೇಳುವಂತೆಯೇ ಬಂಧನಕ್ಕೆ ಕಾರಣವಾದ ಕರ್ಮಗಳನ್ನೂ ಬಿಡಬೇಕು ಎನ್ನುವವರೂ ಇದ್ದಾರೆ. ಅದು ಒಳ್ಳೆಯ ಕರ್ಮವಾಗಲೀ, ದುಷ್ಟಕರ್ಮವಾಗಲೀ–ಎಲ್ಲವೂ ದೋಷಯುಕ್ತವೇ ಆಗಿವೆ. ನಿತ್ಯಯುಕ್ತವಾದ ಬ್ರಹ್ಮವೊಂದನ್ನು ಬಿಟ್ಟು ಉಳಿದುದೆಲ್ಲವೂ ಬಂಧನವೇ. ಆದುದರಿಂದ ಎಲ್ಲ ಕರ್ಮಗಳನ್ನೂ ಸ್ವರೂಪದಿಂದಲೇ ಪರಿತ್ಯಾಗಮಾಡಬೇಕು. ಹೀಗೆ ಶಾಸ್ತ್ರೀಯವಾದ ಕರ್ಮಗಳಲ್ಲದೇ ಆಹಾರಸೇವನೆ, ನಿದ್ರಾಸೇವನೆ–ಮುಂತಾದುವುಗಳೂ ಕರ್ಮಗಳೇ. ಅವುಗಳಲ್ಲೂ ತ್ರಿಗುಣಗಳ ದೋಷವಿದ್ದೇ ಇದೆ. ಬ್ರಾಹ್ಮೀಸ್ಥಿತಿಯನ್ನು ಬಿಟ್ಟಾಗಲೇ ತ್ರಿಗುಣ ಮತ್ತು ಕರ್ಮಗಳು ಬಂದುಬಿಡುತ್ತವೆ. ಈ ಕರ್ಮಗಳು ನಿಷ್ಕ್ರಿಯವೂ ಶಾಂತವೂ ಆದ ಬ್ರಹ್ಮಧರ್ಮವಲ್ಲವಾದುದರಿಂದ ಕರ್ಮಗಳನ್ನು ಮಾಡುತ್ತಿದ್ದರೆ ಪುಣ್ಯವು ಪ್ರಾಪ್ತವಾಗುತ್ತದೆ. ಪುಣ್ಯಲೋಕಗಳು ಸಿಕ್ಕುತ್ತವೆ. ಪುಣ್ಯವು ಕಳೆದಬಳಿಕ ಪುನರ್ಜನ್ಮವಿದ್ದೇ ಇದೆ. ಆದುದರಿಂದ ಕರ್ಮವೆಂಬುದೂ ಒಂದು ಬಂಧನವೇ. ಸಂಸಾರಬಂಧನದಿಂದ ತಪ್ಪಿಸಿಕೊಳ್ಳಬೇಕಾದರೆ ಕರ್ಮಬಂಧನದಿಂದಲೂ ತಪ್ಪಿಸಿಕೊಳ್ಳಲೇಬೇಕು. ಆದುದರಿಂದ ಸಾಂಖ್ಯರು ನೈಷ್ಕರ್ಮ್ಯವನ್ನು ಹೊಗಳುತ್ತಾರೆ. ಆದರೆ ಮತ್ತೆ ಕೆಲವರು ಯಜ್ಞ-ದಾನ-ತಪಃಕ್ರಿಯೆಗಳು ತ್ಯಾಜ್ಯವಲ್ಲ ; ಅವುಗಳನ್ನು ಮಾಡಬೇಕು–ಎಂದು ಹೇಳುತ್ತಾರೆ.

ಮನೀಷಿಗಳು ಎಂದರೆ ಕರ್ಮಮಾಡಿಯೂ ಕರ್ಮಮಾಡದಂತಿರುವ ಕರ್ಮಯೋಗಕುಶಲರು ಎಂದರ್ಥ. ಮುಂದಿನ ಶ್ಲೋಕದಲ್ಲಿ ಶ್ರೀಕೃಷ್ಣನು ಈ ತ್ಯಾಗವನ್ನೇ ವರ್ಣಿಸುತ್ತಾನೆ.)

O O O

ಸಾಂಖ್ಯವೇ ಮುಂತಾದ ಮತಗಳನ್ನು ಅನುಸರಿಸುವ ಪಂಡಿತರು ಹೇಳುವುದೇನೆಂದರೆ : ಬಂಧನಕ್ಕೆ ಕಾರಣವಾಗಿರುವುದರಿಂದ ಎಲ್ಲ ಕರ್ಮಗಳೂ ದೋಷಯುಕ್ತವೇ ಆಗಿವೆ. ಆದುದರಿಂದ ಕರ್ಮಾಧಿಕಾರಿಗಳಾದ ಮನುಷ್ಯರೂ ಸಹ ಅವುಗಳನ್ನು ಬಿಡಬೇಕು ಅಥವಾ ರಾಗ-ದ್ವೇಷ ಮುಂತಾದುವುಗಳು ಬಿಡಲ್ಪಡುವಂತೆ ಎಲ್ಲ ಕರ್ಮಗಳೂ ಬಿಡಲ್ಪಡಬೇಕು ಎನ್ನುತ್ತಾರೆ. ಇದೇ ವಿಷಯದ ಬಗೆಗೆ ಮತ್ತೆ ಕೆಲವು ವಿದ್ವಾಂಸರು ಯಜ್ಞ-ದಾನ-ತಪಸ್ಸು ಎಂಬ ಕರ್ಮಗಳನ್ನು ಬಿಡಬಾರದು ಎನ್ನುತ್ತಾರೆ. ಸಂನ್ಯಾಸ ಮತ್ತು ತ್ಯಾಗಸಂಬಂಧವಾದ ವಿಕಲ್ಪಗಳೆಲ್ಲವೂ ಕರ್ಮಾಧಿಕಾರಿಗಳನ್ನು ಲಕ್ಷ್ಯದಲ್ಲಿಟ್ಟುಕೊಂಡೇ ಹೇಳಲ್ಪಟ್ಟಿವೆ. ಸಮಸ್ತಭೋಗಗಳಲ್ಲಿಯೂ ವಿರಕ್ತರಾಗಿರುವ ಜ್ಞಾನನಿಷ್ಠರಾದ ಸಂನ್ಯಾಸಿಗಳನ್ನು ಕುರಿತು ಹೇಳಿಲ್ಲ. ಏಕೆಂದರೆ ಸಾಂಖ್ಯರಿಗೆ ಇರಬೇಕಾದ ಜ್ಞಾನಯೋಗದ ನಿಷ್ಠೆಯನ್ನು ಭಗವಂತನು ಮೊದಲೇ ಹೇಳಿಯಾಗಿದೆ. (ಜ್ಞಾನಯೋಗೇನ ಸಾಂಖ್ಯಾನಾಂ) ಆದುದರಿಂದ ಕರ್ಮಾಧಿಕಾರದಿಂದ ಪ್ರತ್ಯೇಕಿಸಲ್ಪಟ್ಟಿರುವ ಯಾವ ಸಂನ್ಯಾಸಿಗಳುಂಟೋ ಅವರ ಬಗೆಗೆ ಇಲ್ಲಿ ವಿಚಾರವೇ ಇಲ್ಲ. (ಶಂ. ಭಾ.)

ಏಕೇ **ಮನೀಷಿಣಃ** ಎಂದರೆ ಕಾಪಿಲರು ಮತ್ತು ಆ ಮತವನ್ನು ಅನುಸರಿಸುವ ವೈದಿಕರು. ಅವರು ಯಜ್ಞಾದಿ ಎಲ್ಲ ಕರ್ಮಗಳೂ ಕೂಡ ರಾಗಾದಿ ದೋಷಗಳಂತೆ ಬಂಧಕವಾಗಿರುವುದರಿಂದ ಮೋಕ್ಷಕಾಮನು ಆ ಕರ್ಮಗಳನ್ನೂ ಬಿಟ್ಟುಬಿಡಬೇಕು ಎನ್ನುತ್ತಾರೆ. ಮತ್ತೆ ಕೆಲವು ಪಂಡಿತರು ಯಜ್ಞಾದಿ ಕರ್ಮಗಳನ್ನು ತ್ಯಾಗಮಾಡಬಾರದು ಎನ್ನುತ್ತಾರೆ. ಎರಡನೆಯ ಮತವು ತನ್ನ ಮತ ಎಂದು ತೋರಿಸಲು ಮುಂದೆ ಶ್ರೀಕೃಷ್ಣನು ಹೇಳುತ್ತಾನೆ. (ರಾ. ಭಾ.)

ಶ್ಲೋಕದ ಪೂರ್ವಾರ್ಧದಲ್ಲಿ ಮನೀಷಿಣಃ ಎಂಬ ಪದವನ್ನು ಉಪ

ಯೋಗಿಸಿರುವುದರಿಂದ ಪೂರ್ವಾರ್ಧದಲ್ಲಿ ಹೇಳಲ್ಪಟ್ಟಿರುವ ಆ ಮೊದಲನೆಯ ಪಕ್ಷವು ಗ್ರಾಹ್ಯವೇ ಆಗಿದೆ. ಅವರು ಯಜ್ಞಾದಿಗಳನ್ನು ತ್ಯಾಗಮಾಡಬೇಕು ಎಂದು ಹೇಳಿರುವುದು ಸ್ವರೂಪತಃ ಅವುಗಳನ್ನು ತ್ಯಾಗಮಾಡಬೇಕು ಎಂಬ ಅರ್ಥದಲ್ಲಿಲ್ಲ. ಹಾಗಿದ್ದರೆ ಅವರನ್ನು ಕುರಿತು ಮನೀಷಿಣಃ ಎಂಬ ವಿಶೇಷಣವನ್ನು ಉಪಯೋಗಿಸುತ್ತಿರಲಿಲ್ಲ. ಅವರು ಉಪಯೋಗಿಸಿರುವ ತ್ಯಾಗಶಬ್ದಕ್ಕೆ ಯಜ್ಞಾದಿಗಳ ಫಲತ್ಯಾಗ ಎಂದೇ ಅರ್ಥ. ಆದುದರಿಂದ ಮುಂದೆ ಭಗವಂತನೇ–ಯಸ್ತು **ಕರ್ಮಫಲತ್ಯಾಗೀ ಸ ತ್ಯಾಗೀತ್ಯಭಿಧೀಯತೇ**– ಎಂದು ಹೇಳುತ್ತಾನೆ.

ಆಪಾತತಃ ಪೂರ್ವಾರ್ಧೋತ್ತರಾರ್ಧಗಳ ಭಾವಕ್ಕೆ ವಿರೋಧವಿದ್ದರೂ ನೇರವಾಗಿ ವಿರೋಧವಿಲ್ಲ. (ಮ. ಭಾ.)

**ಓಂ ನಿಶ್ಚಯಂ ಶೃಣು ಮೇ ತತ್ರ ತ್ಯಾಗೇ ಭರತಸತ್ತಮ ।**
**ತ್ಯಾಗೋ ಹಿ ಪುರುಷವ್ಯಾಘ್ರ ತ್ರಿವಿಧಃ ಸಮ್ಪ್ರಕೀರ್ತಿತಃ ॥೪॥**

ಈ ತ್ಯಾಗದಲ್ಲಿ ನಿಶ್ಚಯವಾದ ವಿಷಯವೇನೆಂಬುದನ್ನು ನನ್ನಿಂದ ಕೇಳಿ ತಿಳಿ. ಭರತಸತ್ತಮ! ಪುರುಷವ್ಯಾಘ್ರ! ಈ ತ್ಯಾಗವೂ ಮೂರು ವಿಧವಾಗಿ ಹೇಳಲ್ಪಟ್ಟಿದೆ.

* * *

(ಕರ್ಮಗಳು (ಯಜ್ಞ-ದಾನ-ತಪಃಕ್ರಿಯೆಗಳು) ದೋಷವುಳ್ಳವುಗಳು ; ದೋಷದಿಂದ ಯುಕ್ತವಾದುವುಗಳು ; ಭವಬಂಧನಕ್ಕೆ ಕಾರಣವಾದುವುಗಳು–ಎಂದು ನಿಶ್ಚಯಿಸಿ ಇವುಗಳನ್ನು ಬಿಟ್ಟುಬಿಡಬೇಕೇ? ಅಥವಾ ಈ ಕರ್ಮಗಳು ಬಿಡತಕ್ಕುವುಗಳಲ್ಲ. ಲೋಕಸಂಗ್ರಹಾರ್ಥವಾಗಿ ಲೋಕ ಕಲ್ಯಾಣಾರ್ಥವಾಗಿ ಈ ಯಜ್ಞ-ದಾನ-ತಪಃಕ್ರಿಯೆಗಳನ್ನು ಮಾಡಲೇಬೇಕೆ? ಮತ್ತು ಸರ್ವಕರ್ಮಫಲತ್ಯಾಗವೆಂದರೇನು? ಈ ಎಲ್ಲಕ್ಕೂ ನಾನು ನಿಶ್ಚಯವಾದ ಉತ್ತರವನ್ನು ಹೇಳುತ್ತೇನೆ, ಕೇಳು. 'ತ್ಯಾಗ' ಎಂದರೆ ಒಂದೇ ಬಗೆಯ ತ್ಯಾಗವಿರುವುದೆಂದು ಭಾವಿಸಬೇಡ. ಸಾತ್ತ್ವಿಕ, ರಾಜಸಿಕ ಮತ್ತು ತಾಮಸಿಕ– ಎಂಬ ಮೂರು ಬಗೆಯ ತ್ಯಾಗಗಳಿವೆ.)

o o o

ತ್ಯಾಗ-ಸಂನ್ಯಾಸಗಳ ವಿಕಲ್ಪವಿಷಯಗಳಲ್ಲಿ ನನ್ನ ನಿಶ್ಚಯವನ್ನು ಕೇಳು. ತ್ಯಾಗ, ಸಂನ್ಯಾಸ ಎಂಬ ಎರಡು ಶಬ್ದಗಳಿಂದ ಹೇಳಲ್ಪಡುವ ಅರ್ಥವು ಒಂದೇ ಆದರೂ ತ್ಯಾಗ ಅಥವಾ ಸಂನ್ಯಾಸವು ತಾಮಸಾದಿ ಭೇದಗಳಿಂದ ಮೂರು ಬಗೆಯಾಗಿದೆ. ಆತ್ಮಜ್ಞಾನರಹಿತರಾದ ಕರ್ಮಾಧಿಕಾರಿಗಳಾದ ಪುರುಷರಿಗೆ ಮಾತ್ರವೇ ತ್ಯಾಗ-ಸಂನ್ಯಾಸಶಬ್ದಗಳ ವಾಚ್ಯಾರ್ಥವು- (ಸಂನ್ಯಾಸವು) ತಾಮಸ ಮುಂತಾದ ಭೇದಗಳಿಂದ ಮುಬ್ಬಗೆಯಾಗುವುದು ಸಂಭವ. ಪರಮಾರ್ಥಜ್ಞಾನಿಗಳಿಗಲ್ಲ—ಎಂಬ ಅಭಿಪ್ರಾಯವು ತಿಳಿವಳಿಕೆಗೆ ಬರುವುದು ತುಂಬ ಕಷ್ಟ. ಆದುದರಿಂದ ಈ ವಿಷಯದಲ್ಲಿ ಯಥಾರ್ಥವಾದ ತತ್ತ್ವವನ್ನು ಹೇಳಲು ಬೇರೆ ಯಾರೂ ಸಮರ್ಥರಲ್ಲ. ಆದುದರಿಂದ ನೀನು ಈಶ್ವರನಾದ ಶಾಸ್ತ್ರದ ಯಥಾರ್ಥವಾದ ಅಭಿಪ್ರಾಯದಿಂದ ಕೂಡಿದ ನನ್ನ ನಿಶ್ಚಯವನ್ನು ಕೇಳು. (ಶಂ. ಭಾ.)

ಹೀಗೆ ವಾದಿಗಳಲ್ಲಿ ಮತಭೇದಕ್ಕೆ ವಿಷಯವಾಗಿರುವ ತ್ಯಾಗದ ಬಗೆಗೆ ನನ್ನ ನಿಶ್ಚಯವನ್ನು ಕೇಳು. ಮಾಡಲ್ಪಡಲೇಬೇಕಾಗಿರುವ ವೈದಿಕಕರ್ಮಗಳಲ್ಲಿ ತ್ಯಾಗವು ಫಲವಿಷಯವಾದ ತ್ಯಾಗ, ಕರ್ಮವಿಷಯವಾದ ತ್ಯಾಗ ಮತ್ತು ಕರ್ತೃತ್ವವಿಷಯವಾದ ತ್ಯಾಗ—ಎಂದು ಮೂರು ಬಗೆಯೆಂದು ನಾನೇ ಹಿಂದೆ ಹೇಳಿದ್ದೇನೆ. **ಮಯಿ ಸರ್ವಾಣಿ ಕರ್ಮಾಣಿ—ವಿಗತಜ್ವರಃ** ೩-೩೦

ಕರ್ಮದಿಂದುಂಟಾಗುವ ಸ್ವರ್ಗವೇ ಮುಂತಾದ ಫಲವು ನನಗೆ ಬೇಡ ಎನ್ನುವುದು ಫಲವಿಷಯಕವಾದ ತ್ಯಾಗ. ಈ ಕರ್ಮವು ನನ್ನ ಫಲಕ್ಕೆ ಸಾಧನ ವಾಗಿರುವುದರಿಂದ ಈ ಕರ್ಮವು ನನ್ನದು ಎಂಬ ಮಮತೆಯನ್ನು ಪರಿತ್ಯಾಗ ಮಾಡುವುದು ಕರ್ಮವಿಷಯವಾದ ತ್ಯಾಗ. ಕರ್ಮದ ಕರ್ತೃತ್ವವು ಸರ್ವೇಶ್ವರ ನಿಗೆ ಸೇರಿದ್ದು ಎಂದು ಅನುಸಂಧಾನಮಾಡಿ ಅದರ ಕರ್ತೃತ್ವವು ತನಗಿಲ್ಲವೆಂದು ತ್ಯಾಗಮಾಡುವುದು ಕರ್ತೃತ್ವವಿಷಯವಾದ ತ್ಯಾಗ. (ರಾ. ಭಾ.)

ಈ ಶ್ಲೋಕದಲ್ಲಿ ಭಗವಂತನು ಅದರ ಪ್ರಕಾರವನ್ನು ಹೇಳುತ್ತಾನೆ. ಹಿಂದಿನ ಶ್ಲೋಕದ ಪೂರ್ವಾರ್ಧ ಮತ್ತು ಉತ್ತರಾರ್ಧಭಾವಗಳಿಗೆ ವಿರೋಧ ವಿಲ್ಲವೆಂಬುದು ಭಗವಂತನು ಹೇಳುವ ಈ ವ್ಯುತ್ಪತ್ತಿಯಿಂದಲೂ ಸಿದ್ಧವಾಗು ತ್ತದೆ. (ಮ. ಭಾ.)

**ಓಂ ಯಜ್ಞದಾನತಪಃಕರ್ಮ ನ ತ್ಯಾಜ್ಯಂ ಕಾರ್ಯಮೇವ ತತ್ ।**
**ಯಜ್ಞೋ ದಾನಂ ತಪಶ್ಚೈವ ಪಾವನಾನಿ ಮನೀಷಿಣಾಮ್ ॥೫॥**

ಯಜ್ಞ, ದಾನ ಮತ್ತು ತಪಸ್ಸು ಎಂಬ ಕರ್ಮಗಳು ಬಿಡತಕ್ಕವುಗಳಲ್ಲ. ಅವು ಕರ್ತವ್ಯವೇ ಆಗಿದೆ. ಯಜ್ಞವೂ, ದಾನವೂ, ತಪಸ್ಸೂ ತಿಳಿದವರ ದೃಷ್ಟಿಯಲ್ಲಿ ಪವಿತ್ರಗೊಳಿಸತಕ್ಕುವುಗಳೇ ಆಗಿವೆ.

* * *

(ಯಜ್ಞ, ದಾನ, ತಪಸ್ಸು–ಎಂಬ ಕರ್ಮಗಳನ್ನು–ಭವಬಂಧನಕ್ಕೆ ಕಾರಣಗಳಾಗುವುವು–ಎಂದು ಬಿಟ್ಟುಬಿಡಬಾರದು. ಅವುಗಳನ್ನು ಮಾಡಿಯೇ ತೀರಬೇಕು. **ದೋಷವತ್**–ದೋಷಯುಕ್ತವಾದುದು ಎಂದು ಕೆಲವರು ಹೇಳಿದರೂ ಯಜ್ಞ-ದಾನ-ತಪಃಕ್ರಿಯೆಗಳು ವಿದ್ವಾಂಸರಾದವರಿಗೆ, ವಿಚಕ್ಷಣರಾದವರಿಗೆ ಪರಮಪವಿತ್ರವಾದ ಕರ್ಮಗಳೇ ಆಗಿರುತ್ತವೆ. ಪವಿತ್ರತೆಯನ್ನುಂಟುಮಾಡುವ ಕರ್ಮಗಳಾಗಿರುತ್ತವೆ. ದೋಷಯುಕ್ತಗಳಾಗುವುದಿಲ್ಲ. ಇಲ್ಲಿ **ಮನೀಷಿಣಾಂ ಪಾವನಾನಿ**–ಎಂದು ಶ್ರೀಕೃಷ್ಣನು ಹೇಳಿದ್ದಾನೆ. **ಮನೀಷಿಣಾಂ**–ಎಂದರೆ ಜ್ಞಾನಿಗಳಾದವರಿಗೆ–ಕರ್ಮಮಾಡುವುದರಲ್ಲಿ ಕುಶಲತೆ ಇರುವವರಿಗೆ ಈ ಕರ್ಮಗಳು ಪವಿತ್ರತೆಯನ್ನೇ ಉಂಟುಮಾಡುತ್ತವೆ. ಸತ್ತ್ವಶುದ್ಧಿಯನ್ನುಂಟುಮಾಡಿ ಮೋಕ್ಷಕ್ಕೆ ಸಾಧನಗಳಾಗುತ್ತವೆ. ಅವುಗಳನ್ನು ಸಕಾಮವಾಗಿ ಮಾಡಿದರೆ ಬಂಧನಕ್ಕೆ ಕಾರಣವಾಗುವುದರಿಂದ ಅವು ದೋಷಯುಕ್ತ. ಆದರೆ ಭಗವಂತನು ಮುಂದಿನ ಶ್ಲೋಕದಲ್ಲಿ ಹೇಳುವಂತೆ ಫಲಸಂಗವನ್ನು ತ್ಯಜಿಸಿ ಆಚರಿಸಿದರೆ ಅವು ಬಂಧನಕ್ಕೆ ಕಾರಣವಾಗುವುದಿಲ್ಲ. ಚಿತ್ತಶುದ್ಧಿಯನ್ನುಂಟುಮಾಡಿ ಬಂಧನದಿಂದ ಬಿಡುಗಡೆಮಾಡುವ ಜ್ಞಾನಪ್ರಾಪ್ತಿಗೆ ಕಾರಣವಾಗುವುದರಿಂದ ಪವಿತ್ರವಾಗಿವೆ. ದೋಷಯುಕ್ತವಾಗುವುದಿಲ್ಲ. )

o o o

ಯಜ್ಞ, ದಾನ, ತಪಸ್ಸು–ಎಂಬ ಮೂರು ಬಗೆಯ ಕರ್ಮಗಳನ್ನು ಬಿಡಬಾರದು. ಆಚರಿಸಬೇಕು. ಏಕೆಂದರೆ ಅವು ಪಾವನಗಳು. ವಿಶುದ್ಧಿಯನ್ನು

ಉಂಟುಮಾಡತಕ್ಕುವುಗಳು. ಮನೀಷಿಗಳಿಗೆ ಎಂದರೆ ಫಲಾಭಿಸಂಧಿಯಿಲ್ಲದವರಿಗೆ ಅವು ಪವಿತ್ರತೆಯನ್ನುಂಟುಮಾಡುತ್ತವೆ. (ಶಂ. ಭಾ.)

ಯಜ್ಞ, ದಾನ, ತಪಸ್ಸು ಮುಂತಾದ ವೈದಿಕಕರ್ಮಗಳನ್ನು ಮುಮುಕ್ಷುವು ಎಂದಿಗೂ ಬಿಡಲೇಬಾರದು. ದೇಹವು ಇರುವವರೆಗೂ ಪ್ರತಿನಿತ್ಯವೂ ಮಾಡಲೇಬೇಕು. ಏಕೆಂದರೆ : ವರ್ಣಾಶ್ರಮಸಂಬಂಧವಾದ ಈ ಕರ್ಮಗಳು ಮನೀಷಿಗಳಿಗೆ ಎಂದರೆ ಮನನಶೀಲರಾದವರಿಗೆ ಪಾವನತೆಯನ್ನು ಉಂಟು ಮಾಡುತ್ತವೆ. ಮನನವೆಂದರೆ ಉಪಾಸನೆ. ಜೀವಮಾನಪೂರ್ತಿಯಾಗಿ ಉಪಾಸನೆಯನ್ನು ಮಾಡುವ ಮುಮುಕ್ಷುಗಳಿಗೆ ಪಾವನತೆಯನ್ನುಂಟು ಮಾಡುತ್ತವೆ ಎಂದರೆ ಉಪಾಸನೆಯ ಫಲಸಿದ್ಧಿಗೆ ವಿರೋಧಿಗಳಾದ ಪ್ರಾಚೀನಕರ್ಮಗಳನ್ನು ನಾಶಪಡಿಸುತ್ತವೆ ಎಂದರ್ಥ. (ರಾ. ಭಾ.)

ಪರಮಹಂಸರಿಗೆ ಯಜ್ಞ, ದಾನ ಮುಂತಾದುವುಗಳು ಇಲ್ಲವಾದುದರಿಂದ 'ಅವರು ಅವುಗಳನ್ನು ತ್ಯಾಗಮಾಡಲೇಬಾರದು' '**ನ ತ್ಯಾಜ್ಯಂ ಕಾರ್ಯಮೇವ ತತ್**'–ಎಂಬ ನಿಯಮವನ್ನು ಏಕೆ ಹೇಳಿದರು? ಎಂದರೆ ಯಜ್ಞದಲ್ಲಿ ಭಗವಂತನು ದ್ರವ್ಯಯಜ್ಞ ಮುಂತಾದ ಅನೇಕ ಭೇದಗಳನ್ನು ಹೇಳಿದ್ದಾನೆ. ಅವುಗಳಲ್ಲಿ ಜ್ಞಾನಯಜ್ಞವೂ ಸೇರಿದೆ. ದಾನದಲ್ಲಿ ಅಭಯ ದಾನವೂ ಸೇರಿದೆ. ತಪಸ್ಸು ಎಂದರೆ ಬ್ರಹ್ಮಚರ್ಯಾದಿಗಳು. ಇವುಗಳನ್ನು ಪರಮಹಂಸರೂ ಮಾಡಬಹುದು. ಆದುದರಿಂದ ಯಜ್ಞ, ದಾನ, ತಪಸ್ಸು ಮುಂತಾದುವುಗಳಲ್ಲಿ ಅನೇಕ ಬಗೆಗಳುಂಟು. ಅವುಗಳ ಮಧ್ಯೇ ತನ್ನ ಅಧಿ ಕಾರಕ್ಕೆ ಅನುಗುಣವಾದ ಯಾವುದನ್ನಾದರೂ ಆಚರಿಸಿಯೇ ತೀರಬೇಕು. ಇಲ್ಲದಿದ್ದರೆ–**ಬ್ರಹ್ಮಚಾರೀ ಗೃಹಸ್ಥೋ ವಾ ವಾನಪ್ರಸ್ಥೋ ಯತಿಸ್ತಥಾ । ಯದೀಚ್ಛೇನ್ಮೋಕ್ಷಮಾಸ್ಥಾತುಂ ಉತ್ತಮಾಶ್ರಮಮಾಶ್ರಯೇತ್ ॥** ಮುಂತಾದ ವ್ಯಾಸಸ್ಮೃತಿಗೆ ವಿರೋಧವಾಗುತ್ತದೆ. ಜ್ಯೋತಿಷ್ಟೋಮಾದಿಗಳು ಮಾತ್ರವೇ ಯಜ್ಞವಲ್ಲ. ಧನದಾನ ಮುಂತಾದುವು ಮಾತ್ರವೇ ದಾನವೇನೂ ಅಲ್ಲ. ಪರಮಹಂಸರೂ ಕೂಡ ಜ್ಞಾನಯಜ್ಞ, ವಿದ್ಯಾದಾನ, ಅಭಯದಾನ, ಬ್ರಹ್ಮಚರ್ಯ, ತಪಸ್ಸು ಮುಂತಾದುವುಗಳನ್ನು ಮಾಡುವುದರಿಂದ ಯಜ್ಞ-ದಾನ-ತಪಸ್ಸುಗಳನ್ನು ಅವರೂ ಮಾಡಿದಂತೆಯೇ ಆಯಿತು.

–ಜಯತೀರ್ಥರು.

**ಓಂ ಏತಾನ್ಯಪಿ ತು ಕರ್ಮಾಣಿ ಸಙ್ಗಂ ತ್ಯಕ್ತ್ವಾ ಫಲಾನಿ ಚ ।**
**ಕರ್ತವ್ಯಾನೀತಿ ಮೇ ಪಾರ್ಥ ನಿಶ್ಚಿತಂ ಮತಮುತ್ತಮಮ್ ॥೬॥**

ಆದರೆ ಪಾರ್ಥ! ಈ ಕರ್ಮಗಳನ್ನೂ ಕೂಡ ಸಂಗವನ್ನೂ ಫಲವನ್ನೂ ಬಿಟ್ಟು ಮಾಡಬೇಕು–ಎಂಬುದು ನನ್ನ ನಿಶ್ಚಿತವಾದ ಮತ್ತು ಉತ್ತಮವಾದ ಮತವು.

* * *

(**ಏತಾನ್ಯಪಿ ತು ಕರ್ಮಾಣಿ**–ಈ ಕರ್ಮಗಳು ಎಂದರೆ ಯಜ್ಞ, ದಾನ, ತಪಸ್ಸುಗಳು. ಆಸಕ್ತಿಯನ್ನೂ ಮತ್ತು ಫಲಗಳನ್ನೂ ತೊರೆದು ಇವುಗಳನ್ನು ಮಾಡಬೇಕು. ಸಙ್ಗ ಎಂದರೆ ಆಸಕ್ತಿ. 'ನಾನು ಮಾಡುತ್ತೇನೆ, ಇದರ ಫಲದ ಸಂಗ್ರಹ ನನಗೆ ಉಂಟು, ಇದು ನನ್ನದು'–ಎಂಬ ಭಾವನೆ. ಇದನ್ನೂ ತೊರೆಯಬೇಕು. ಪರಮಾತ್ಮಪ್ರೀತ್ಯರ್ಥವಾಗಿ ಮಾಡಬೇಕು. ಪರಮಾತ್ಮನೇ ಕರ್ತಾ ಎಂದು ತಿಳಿಯಬೇಕು. ಫಲಾಭಿಸಂಧಿಯಿಲ್ಲದೇ ಮಾಡಬೇಕು. ಈ ಕರ್ಮಗಳನ್ನು ಮಾಡಬೇಕಾದುದು ನನ್ನ ಕರ್ತವ್ಯ ಎಂದು ಭಾವಿಸಿ ಕರ್ತವ್ಯ ದೃಷ್ಟಿಯಿಂದ ಈ ಕರ್ಮಗಳನ್ನು ಮಾಡಬೇಕು. ಇದು ಉತ್ತಮೋತ್ತಮವಾದ ಮಾರ್ಗ ಎಂದು ನನ್ನ ನಿಶ್ಚಿತವಾದ ಅಭಿಪ್ರಾಯವಾಗಿದೆ–ಎನ್ನುತ್ತಾನೆ ಶ್ರೀಕೃಷ್ಣ.)

O O O

**ನಿಶ್ಚಯಂ ಮತಂ ಶೃಣು ಮೇ ತತ್ರ**–ಎಂದು ಪ್ರತಿಜ್ಞೆಮಾಡಿ 'ಯಜ್ಞ-ದಾನ-ತಪಸ್ಸುಗಳನ್ನು ತ್ಯಾಗಮಾಡಬಾರದು. ಮಾಡಲೇಬೇಕು' ಎನ್ನುವುದಕ್ಕೆ ಅವುಗಳ ಅಪೂರ್ವತ್ವವು ಕಾರಣ ಎಂದು ಹೇಳಿ ಈ ಕರ್ಮಗಳನ್ನೂ ಮಾಡಲೇಬೇಕು–ಎಂಬುದು ನನ್ನ ನಿಶ್ಚಿತವಾದ ಮತ್ತು ಉತ್ತಮವಾದ ಮತ ಎಂದು ಭಗವಂತನು ಹೇಳಿರುವುದು ಪ್ರತಿಜ್ಞೆಮಾಡಲ್ಪಟ್ಟ ವಿಷಯದ ಉಪಸಂಹಾರವೇ ಆಗಿದೆ. ಅಪೂರ್ವವಿಷಯದ ವರ್ಣನೆಯೇನೂ ಇಲ್ಲ. ಏಕೆಂದರೆ ಏತಾನಿ ಎಂಬ ಶಬ್ದದ ಆಶಯವು ಈ ಪ್ರಕರಣದಲ್ಲಿ ಬಹಳ ಹತ್ತಿರದಲ್ಲಿರುವ ವಿಷಯವನ್ನೇ ಲಕ್ಷ್ಯವನ್ನಾಗಿ ಹೇಳುವುದಾಗಿದೆ. ನಿತ್ಯಕರ್ಮಗಳಿಗೆ ಫಲವೇ ಇಲ್ಲವಾದುದರಿಂದ ಸಂಗವನ್ನೂ ಫಲವನ್ನೂ ಬಿಟ್ಟು ಅವುಗಳನ್ನು ಆಚರಿಸಬೇಕು ಎನ್ನುವುದು ಹೊಂದಿಕೊಳ್ಳುವುದೇ ಇಲ್ಲ. ಆದುದರಿಂದ

**ಏತಾನ್ಯಪಿ ತು ಕರ್ಮಾಣಿ** ಎಂಬುದಕ್ಕೆ ನಿತ್ಯಕರ್ಮಗಳಿಂದ ಬೇರೆಯಾದ ಕಾಮ್ಯಕರ್ಮಗಳನ್ನೂ ಮಾಡಬೇಕು. ಹೀಗಿರುವಾಗ ಯಜ್ಞ-ದಾನ-ತಪಸ್ಸು ಗಳೆಂಬ ನಿತ್ಯಕರ್ಮಗಳ ಬಗೆಗೆ ಹೇಳತಕ್ಕದ್ದೇನು?-ಎಂದೂ ಕೆಲವರು ವಿವರಿ ಸುತ್ತಾರೆ. ಇದು ಸರಿಯಲ್ಲ. ನಿತ್ಯಕರ್ಮಗಳಿಗೂ ಕೂಡ ಫಲವುಂಟೆಂಬು ದನ್ನು–**ಯಜ್ಞೋ ದಾನಂ ತಪಶ್ಚೈವ ಪಾವನಾನಿ**–ಮುಂತಾದ ವಚನ ಗಳಿಂದ ಉಪಪಾದನೆ ಮಾಡಲಾಗಿದೆ. ಮುಮುಕ್ಷುವು ನಿತ್ಯಕರ್ಮಗಳನ್ನು ಕೂಡ ಬಂಧನಕ್ಕೆ ಕಾರಣ ಎಂಬ ಆಶಂಕೆಯಿಂದ ಬಿಟ್ಟುಬಿಡಬೇಕೆಂದು ಇಚ್ಛಿ ಸುವಾಗ ಆತನಿಗೆ ಕಾಮ್ಯಕರ್ಮಗಳಲ್ಲಿ ಪ್ರವೃತ್ತಿಯಾದರೂ ಹೇಗೆ ಉಂಟಾ ದೀತು? **ದೂರೇಣ ಹ್ಯವರಂ ಕರ್ಮ** ಎಂದು ಕರ್ಮವನ್ನು ಭಗವಂತನು ನಿಂದಿಸಿದ್ದಾನೆ. **ಯಜ್ಞಾರ್ಥಾತ್ ಕರ್ಮಣೋಽನ್ಯತ್ರ** ಎಂದು ಕಾಮ್ಯಕರ್ಮ ಗಳು ಬಂಧನಹೇತುವಾಗಿರುವ ವಿಷಯವನ್ನು ನಿಶ್ಚಯಿಸಿಯೂ ಆಗಿದೆ.

**ತ್ರೈಗುಣ್ಯವಿಷಯಾ ವೇದಾಃ । ತ್ರೈವಿದ್ಯಾ ಮಾಂ ಸೋಮಪಾಃ । ಕ್ಷೀಣೇ ಪುಣ್ಯೇ ಮರ್ತ್ಯಲೋಕಂ ವಿಶನ್ತಿ**–ಮುಂತಾದ ಮಾತುಗಳಿಂದ ಕಾಮ್ಯಕರ್ಮಗಳ ವಿಷಯವು ಬಹಳ ದೂರದಲ್ಲೇ ಇರಿಸಲ್ಪಟ್ಟಿದೆ. ಆದುದ ರಿಂದ **ಏತಾನ್ಯಪಿ ತು ಕರ್ಮಾಣಿ** ಎಂಬುದು ಕಾಮ್ಯಕರ್ಮಗಳ ವಿಷಯಕ್ಕೆ ಸಂಬಂಧಪಡುವುದೇ ಇಲ್ಲ. (ಶಂ. ಭಾ.)

ಯಜ್ಞ-ದಾನ-ತಪಸ್ಸು ಮುಂತಾದ ಕರ್ಮಗಳು ಮನನಶೀಲರಾದವ ರಿಗೆ ಪಾವನವಾಗಿರುವುದರಿಂದ ಉಪಾಸನೆಯಂತೆ ಆ ಕರ್ಮಗಳನ್ನೂ ಕೂಡ ನನ್ನ ಆರಾಧನಾರೂಪವಾಗಿ ಆಚರಿಸಬೇಕು. ಆ ಕರ್ಮಗಳಲ್ಲಿ ಮಮತೆ ಯನ್ನೂ, ಫಲಸಂಗವನ್ನೂ, ಫಲವನ್ನೂ ಬಿಟ್ಟು ಪ್ರತಿದಿನವೂ ಉಪಾಸನೆಯು ಪೂರ್ಣವಾಗುವುದಕ್ಕೋಸ್ಕರ ಅವಸಾನದವರೆಗೂ ಮುಮುಕ್ಷುವು ಮಾಡಲೇ ಬೇಕು ಎಂಬುದು ನನ್ನ ನಿಶ್ಚಿತವೂ ಉತ್ತಮವೂ ಆದ ಮತ. (ರಾ. ಭಾ.)

**ಓಂ ನಿಯತಸ್ಯ ತು ಸಂನ್ಯಾಸಃ ಕರ್ಮಣೋ ನೋಪಪದ್ಯತೇ ।**
**ಮೋಹಾತ್ತಸ್ಯ ಪರಿತ್ಯಾಗಸ್ತಾಮಸಃ ಪರಿಕೀರ್ತಿತಃ ॥೭॥**

ವಿಹಿತವಾಗಿರುವ ಕರ್ಮದ ಸಂನ್ಯಾಸವು (ಪರಿತ್ಯಾಗವು) ಯುಕ್ತವಲ್ಲ. ಅಜ್ಞಾನದಿಂದ ಅದನ್ನು ಪರಿತ್ಯಜಿಸುವುದು ತಾಮಸವೆಂದು ಹೇಳಲ್ಪಡುವುದು.

* * *

(**ನಿಯತಸ್ಯ ತು ಕರ್ಮಣಃ** = ನಿಯತವಾದ ಕರ್ಮಗಳು ಎಂದರೆ ಶಾಸ್ತ್ರದಲ್ಲಿ ಮಾಡಿಯೇತೀರಬೇಕೆಂದು ಹೇಳಿರುವ ನಿತ್ಯಕರ್ಮಗಳು. ಅವುಗಳನ್ನು ಬಿಡುವುದು ಸಮಂಜಸವಾಗುವುದಿಲ್ಲ. ಮಾಡಲೇಬೇಕೆಂದು ಶಾಸ್ತ್ರದ ವಿಧಿಯಿರುವುದಕ್ಕೆ ಬಿಡುವುದು (ಸಂನ್ಯಾಸ) ಎಂಬ ಮಾತೇ ಹೊಂದುವುದಿಲ್ಲ. ಸಂನ್ಯಾಸ ಎಂದರೆ ಸಕಲಕರ್ಮಗಳ ಪರಿತ್ಯಾಗ ಎಂದು ಅರ್ಥಮಾಡಿ, ಮಾಡಲೇಬೇಕಾದ ನಿಯತಕರ್ಮಗಳನ್ನೂ ತಪ್ಪುತಿಳಿವಳಿಕೆಯಿಂದ ಬಿಟ್ಟುಬಿಡುವುದು ತಾಮಸಮೌಢ್ಯ ; ಅಜ್ಞಾನ ಎಂದು ಹೇಳಲ್ಪಡುತ್ತದೆ. ಇಲ್ಲಿ ನಿತ್ಯಕರ್ಮಗಳೆಂದರೆ ಆಯಾ ವರ್ಣಾಶ್ರಮದವರಿಗೆ ವಿಹಿತವಾಗಿರುವ ಸಂಧ್ಯಾವಂದನೆ, ಪಂಚಮಹಾಯಜ್ಞಗಳು, ಅಧ್ಯಯನ-ಅಧ್ಯಾಪನ, ಉಪದೇಶ, ಯುದ್ಧ, ಪ್ರಜಾಪಾಲನೆ, ಪಶುಪಾಲನೆ, ಕೃಷಿ, ವ್ಯಾಪಾರ, ಸೇವೆ–ಇತ್ಯಾದಿಗಳು. 'ಕರ್ಮಮಾಡಿದರೆ ಬಂಧನವಾಗಿಬಿಡುತ್ತದೆ. ಆದುದರಿಂದ ಕರ್ಮವನ್ನು ಬಿಡಬೇಕು'–ಎಂಬ ಮೋಹದಿಂದ ಅಥವಾ ಭ್ರಾಂತಿಯಿಂದ ಇಂತಹ ಕರ್ಮಗಳನ್ನು ಪರಿತ್ಯಾಗಮಾಡುವುದು ತಾಮಸಗುಣದ ಪ್ರಭಾವ. ಆದುದರಿಂದ ಯಾರೇ ಆದರೂ ಶಾಸ್ತ್ರದಲ್ಲಿ ಹೇಳಿರುವಂತಹ ನಿತ್ಯಕರ್ಮಗಳನ್ನು ಮಾಡಲೇಬೇಕು.

ಜ್ಞಾನಾನುಭವವೂ ಇಲ್ಲದೇ ಸಂನ್ಯಾಸವೆಂಬುದಕ್ಕೆ ಸರ್ವಕರ್ಮಗಳನ್ನೂ ಬಿಡುವುದು–ಎಂದು ಅರ್ಥಮಾಡಿ ನಿಯತಕರ್ಮಗಳನ್ನೂ ಸ್ವರೂಪತಃ ಬಿಟ್ಟುಬಿಡುವುದು ತಾಮಸತ್ಯಾಗವೆನಿಸಿಕೊಳ್ಳುತ್ತದೆ.)

o o o

**ಮೋಹಾತ್....ಪರಿಕೀರ್ತಿತಃ** = ನಿಯತ ಎಂದರೆ ಅವಶ್ಯವಾಗಿ ಮಾಡಲೇಬೇಕಾಗಿರುವ ಕರ್ತವ್ಯ ಎಂದು ಅರ್ಥ. ಇದು ಕರ್ತವ್ಯವೆಂದು ಹೇಳಿ ಅದನ್ನು ತ್ಯಜಿಸಬೇಕು ಎಂದು ಹೇಳುವುದು ಅತ್ಯಂತವಿರುದ್ಧ. ಅದರಿಂದ ಈ ಮೋಹನಿಮಿತ್ತವಾದ ಪರಿತ್ಯಾಗವು **ತಾಮಸ** ಎನಿಸುತ್ತದೆ. ಮೋಹವೇ **ತಮಸ್ಸು** ಎನ್ನುವುದು ಪ್ರಸಿದ್ಧವೇ ಆಗಿದೆ. (ಶಂ. ಭಾ.)

ನಿಯತಕರ್ಮ ಎಂದರೆ : ನಿತ್ಯ-ನೈಮಿತ್ತಿಕವಾದ ಪಂಚಮಹಾಯಜ್ಞಗಳೇ ಮುಂತಾದ ಕರ್ಮಗಳ ಸಂನ್ಯಾಸವು (ತ್ಯಾಗವು) ಯುಕ್ತವಲ್ಲ. ಶರೀರ

**ಯಾತ್ರಾಪಿ ಚ ತೇ ನ ಪ್ರಸಿದ್ಧ್ಯೇದಕರ್ಮಣಃ**-ಎಂದು ಹೇಳಿರುವಂತೆ ಕರ್ಮಮಾಡದಿದ್ದರೆ ಶರೀರಯಾತ್ರೆಯೇ ಸಿದ್ಧಿಸುವುದಿಲ್ಲ. ಶರೀರಯಾತ್ರೆಯನ್ನು ಯಜ್ಞಶೇಷವಾದ ಅನ್ನದ ಭೋಜನದಿಂದಲೇ ನಡೆಸಿದರೆ ಅದು ಒಳ್ಳೆಯ ಜ್ಞಾನಪ್ರಾಪ್ತಿಗೆ ಕಾರಣವಾಗುತ್ತದೆ. ಇಲ್ಲದಿದ್ದರೆ **ಭುಞ್ಜತೇ ತೇ ತ್ವಘಂ ಪಾಪಾಃ** ೩-೧೩ ಎಂದು ಹೇಳಿರುವಂತೆ ಯಜ್ಞಶೇಷವಲ್ಲದ ಪಾಪರೂಪವಾದ ಅಶನವನ್ನು ತಿನ್ನುವುದರಿಂದ ಮನಸ್ಸು ವಿಪರೀತಜ್ಞಾನವನ್ನು ಹೊಂದಲು ಕಾರಣವಾಗುತ್ತದೆ. **ಅನ್ನಮಯಂ ಹಿ ಸೌಮ್ಯಮನಃ** (ಛಾಂ. ೬-೫-೪) ಎಂದು ಹೇಳಿರುವಂತೆ ಅನ್ನದಿಂದ ಮನಸ್ಸಿಗೆ ಆಪ್ಯಾಯನವಾಗುತ್ತದೆ. **ಆಹಾರಶುದ್ಧೌ ಸತ್ತ್ವಶುದ್ಧಿಃ** ಛಾಂ.೭-೨೬-೭ ಎಂದು ಹೇಳಿರುವಂತೆ ಬ್ರಹ್ಮಸಾಕ್ಷಾತ್ಕಾರರೂಪವಾದ ' ಜ್ಞಾನವು ಆಹಾರಶುದ್ಧಿಗೆ ಅಧೀನ. ಆದುದರಿಂದ ಪಂಚಮಹಾಯಜ್ಞಗಳೇ ಮುಂತಾದ ನಿತ್ಯ-ನೈಮಿತ್ತಿಕಕರ್ಮಗಳನ್ನು ದೇಹಾವಸಾನದವರೆಗೂ ಬ್ರಹ್ಮಜ್ಞಾನಕ್ಕೋಸ್ಕರವೇ ಪರಿಗ್ರಹಿಸಬೇಕಾಗಿರುವುದರಿಂದ ಅದರ ತ್ಯಾಗವು ಯುಕ್ತವಲ್ಲ. ಹೀಗೆ ಜ್ಞಾನವನ್ನುಂಟುಮಾಡುವ ಕರ್ಮವನ್ನು ಅದು ಬಂಧನಕಾರಿಯೆಂಬ ಮೋಹದಿಂದ ಬಿಟ್ಟುಬಿಡುವುದು ತಾಮಸತ್ಯಾಗವೆನಿಸುತ್ತದೆ. ತಾಮಸತ್ಯಾಗ ಎಂದರೆ ತಮೋಮೂಲವಾದ ತ್ಯಾಗ. ತಮಸ್ಸಿನ ಕಾರ್ಯವು ಅಜ್ಞಾನಮೂಲವಾದುದರಿಂದ ಅಂತಹ ತ್ಯಾಗವು ತಮೋಮೂಲವಾಗುತ್ತದೆ. ತಮಸ್ಸು ಅಜ್ಞಾನದ ಮೂಲ—ಎಂದು **ಪ್ರಮಾದಮೋಹೌ ತಮಸಃ ಭವತೋಽಜ್ಞಾನಮೇವ ಚ** ೧೪-೧೭—ಎಂಬಲ್ಲಿ ಹೇಳಿದೆ. ಅಜ್ಞಾನವಾದರೋ ಜ್ಞಾನವಿರೋಧಿ ಯಾದ ವಿಪರೀತಜ್ಞಾನ. ಇದನ್ನೇ ಮುಂದೆ **ಅಧರ್ಮಂ ಧರ್ಮಮಿತಿ ಯಾ ಮನ್ಯನ್ತೇ ತಮಸಾವೃತಾಃ। ಸರ್ವಾರ್ಥಾನ್ವಿಪರೀತಾಂಶ್ಚ ಬುದ್ಧಿಃ ಸಾ ಪಾರ್ಥ ತಾಮಸೀ** ೧೮-೩೨. ಆದುದರಿಂದ ನಿತ್ಯ-ನೈಮಿತ್ತಿಕವೇ ಮುಂತಾದ ಕರ್ಮಗಳನ್ನು ತ್ಯಾಗಮಾಡುವುದು ತಾಮಸವೇ ಎಂದರೆ ವಿಪರೀತಜ್ಞಾನ ಮೂಲವೇ ಆಗಿದೆ.

(ರಾ. ಭಾ.)

**ಓಂ ದುಃಖಮಿತ್ಯೇವ ಯತ್ಕರ್ಮ ಕಾಯಕ್ಲೇಶಭಯಾತ್ತ್ಯಜೇತ್ ।**
**ಸ ಕೃತ್ವಾ ರಾಜಸಂ ತ್ಯಾಗಂ ನೈವ ತ್ಯಾಗಫಲಂ ಲಭೇತ್ ॥೮॥**

ಯಾವನು ದುಃಖರೂಪವಾಗಿದೆ ಎಂಬ ಕಾರಣದಿಂದ ಒಂದು ಕರ್ಮ

ವನ್ನು, ಶರೀರಕ್ಕೆ ಕ್ಲೇಶವುಂಟಾಗುವುದೆಂಬ ಭಯದಿಂದ ಬಿಟ್ಟುಬಿಡುವನೋ– ಅವನು ರಾಜಸತ್ಯಾಗವನ್ನು ಮಾಡುವುದರಿಂದ ತ್ಯಾಗದ ಫಲವನ್ನು ಹೊಂದುವುದೇ ಇಲ್ಲ.

* * *

(ಆದರೆ ಈ ಕರ್ಮತ್ಯಾಗವು ಕರ್ಮಮಾಡುವುದು ಕಷ್ಟವೆಂಬ ಭಾವನೆಯಿಂದ ಆಗಕೂಡದು. ಈ ಬಗೆಯ ಕರ್ಮತ್ಯಾಗವೇ ಸಂನ್ಯಾಸವಾಗುವುದಾದರೆ ಸೋಮಾರಿಗಳೆಲ್ಲರೂ ಸಂನ್ಯಾಸಿಗಳೇ ಆಗಿಬಿಡುತ್ತಾರೆ. ಕರ್ಮಗಳನ್ನು ಆಚರಿಸಬೇಕಾದರೆ ಅದಕ್ಕೆ ಪಂಚ-ಪಂಚ ಉಷಃಕಾಲದಲ್ಲಿ ಏಳಬೇಕು. ಚಳಿ-ಗಾಳಿಗಳನ್ನೂ ಲೆಕ್ಕಿಸಬಾರದು. ದ್ರವ್ಯಯಜ್ಞವನ್ನು ಆಚರಿಸಬೇಕಾದರೆ ದ್ರವ್ಯವನ್ನು ಸಂಗ್ರಹಿಸುವುದು, ಸಂರಕ್ಷಿಸುವುದು–ಮುಂತಾದ ಬಹಳ ಕಷ್ಟಗಳನ್ನು ಅನುಭವಿಸಬೇಕಾಗುತ್ತದೆ. ಪಂಚಮಹಾಯಜ್ಞಗಳನ್ನು ಮಾಡಬೇಕಾದರೂ ಕಾಯಕ್ಲೇಶವು ತಪ್ಪಿದ್ದಲ್ಲ. ಕಾಯಕ್ಲೇಶದಿಂದಲೇ ಈ ಕರ್ಮಗಳನ್ನು ಮಾಡಲು ಸಾಧ್ಯ. ಕಾಯಕ್ಲೇಶವಾಗುತ್ತದೆ ಎಂಬ ಭಯದಿಂದ ಈ ಕರ್ಮಗಳನ್ನು ತ್ಯಾಗಮಾಡಿದ ಪಕ್ಷದಲ್ಲಿ ಅದು ನಿಜವಾದ ತ್ಯಾಗವಾಗುವುದಿಲ್ಲ. ಸಂನ್ಯಾಸ ಎಂಬ ಹೆಸರಿಗೆ ಇಂತಹ ತ್ಯಾಗವು ಅನುರೂಪವಾಗಿರುವುದಿಲ್ಲ. ಇದು ಕೇವಲ ರಾಜಸತ್ಯಾಗವೆನಿಸಿಕೊಳ್ಳುತ್ತದೆ. ಇಂತಹ ರಾಜಸತ್ಯಾಗದಿಂದ ತ್ಯಾಗಫಲವನ್ನು ಖಂಡಿತವಾಗಿಯೂ ಯಾವನೂ ಹೊಂದುವುದಿಲ್ಲ. ಒಂದು ವೇಳೆ ವಿಶುದ್ಧಚಿತ್ತನಾಗಿದ್ದು ಕೇವಲ ಜ್ಞಾನಯೋಗದಲ್ಲಿಯೇ (ಧ್ಯಾನದಲ್ಲಿಯೇ) ಇದ್ದುಬಿಡಲು ಸಾಧ್ಯವಾಗಿದ್ದರೆ ಅವನು ಉಳಿದ ಕರ್ಮಗಳನ್ನು ಮಾಡದಿದ್ದರೂ ಬಾಧಕವಿಲ್ಲ. ಏಕೆಂದರೆ ಅವನಿಗೆ ಕರ್ಮಾಚರಣೆಯ ಫಲವಾದ ಚಿತ್ತಶುದ್ಧಿಯು ಸ್ಥಿರವಾಗಿರುತ್ತದೆ. ಹೀಗೆ ಪ್ರಾಮಾಣಿಕವಾಗಿ ಧ್ಯಾನಸಿದ್ಧಿಯಿಲ್ಲದವನು ಅದಕ್ಕೆ ಪೋಷಕವಾದ ಕರ್ಮಗಳನ್ನು ಬಿಡಲೇಬಾರದು. ಆದರೆ ಯಾವುದೊಂದು ಧ್ಯೇಯವೂ ಇಲ್ಲದೇ ಕರ್ಮಗಳನ್ನು ಮಾಡುವುದು ಕಷ್ಟವೆಂದು ಭಾವಿಸಿ ಇಂದ್ರಿಯಗಳಿಗೆ ಕಷ್ಟಕೊಡಬೇಕಾಗುವುದೆಂಬ ಭಾವನೆಯಿಂದ ಕರ್ಮತ್ಯಾಗಮಾಡಬಾರದು. ಈ ರೀತಿಯಲ್ಲಿ ಕರ್ಮತ್ಯಾಗಮಾಡುವವನು ತ್ಯಾಗೀ ಎನಿಸಿಕೊಳ್ಳುವುದಿಲ್ಲ. ಅವನಿಗೆ ತ್ಯಾಗಮಾಡಿದ ಫಲವೂ ಇಲ್ಲ.)

o o o

**ಕಾಯಕ್ಲೇಶಭಯಾತ್** = ಶರೀರಕ್ಕೆ ದುಃಖವಾಗುತ್ತದೆ ಎಂಬ ಭಯದಿಂದ ರಾಜಸತ್ಯಾಗವನ್ನು ಮಾಡಿದವನು ತ್ಯಾಗಫಲವನ್ನು ಎಂದರೆ ಜ್ಞಾನಪೂರ್ವಕವಾಗಿ ಆಚರಿಸುವ ಕರ್ಮತ್ಯಾಗದ ಫಲವಾದ ಮೋಕ್ಷವನ್ನು ಹೊಂದುವುದಿಲ್ಲ. (ಶಂ. ಭಾ.)

ಕರ್ಮವು ಪರಂಪರಾಸಂಬಂಧದಿಂದ ಮೋಕ್ಷಕ್ಕೆ ಸಾಧನವಾಗಿದ್ದರೂ ಅದನ್ನು ಆಚರಿಸಲು ಬಹಳ ಕಷ್ಟದಿಂದ ದ್ರವ್ಯಾರ್ಜನೆಯನ್ನು ಮಾಡಬೇಕಾಗುತ್ತದೆ. ತಮಗೆ ಬಹಳ ಆಯಾಸವಾಗುತ್ತದೆ ; ಶರೀರಕ್ಕೆ ಕ್ಲೇಶವುಂಟಾಗುತ್ತದೆ; ಮನಸ್ಸಿನಲ್ಲಿ ಕಷ್ಟವಾಗುತ್ತದೆ–ಎಂಬ ಭಯದಿಂದ ಯೋಗನಿಷ್ಪತ್ತಿಗೋಸ್ಕರ ಜ್ಞಾನಾಭ್ಯಾಸದಲ್ಲಿಯೇ ಪ್ರಯತ್ನಿಸಬೇಕು–ಎಂದು ಯಾವನು ಮಹಾಯಜ್ಞವೇ ಮುಂತಾದ ಆಶ್ರಮಕರ್ಮಗಳನ್ನು ಬಿಟ್ಟುಬಿಡುತ್ತಾನೆಯೋ ಅವನು ಮಾಡುವ ತ್ಯಾಗವು ರಾಜಸಃ=ರಜೋಮೂಲವಾದುದು. ಅದು ಯಥಾರ್ಥವಾದ ಶಾಸ್ತ್ರಕ್ಕೆ ಅನುಗುಣವಾದುದಲ್ಲ. ಅವನಿಗೆ ಜ್ಞಾನೋತ್ಪತ್ತಿಯೆಂಬ ತ್ಯಾಗದ ಫಲವು ದೊರೆಯುವುದಿಲ್ಲ. **ಅಯಥಾವತ್ಪ್ರಜಾನಾತಿ....** ರಾಜಸೀ ಎಂದು ಮುಂದೆ ಹೇಳುವನು. ಕರ್ಮವು ದೃಷ್ಟವಾದ ದ್ವಾರಗಳಿಂದ ಮನಸ್ಸಿನ ಪ್ರಸನ್ನತೆಗೆ ಕಾರಣವಾಗುವುದಿಲ್ಲ. ಭಗವಂತನ ಅನುಗ್ರಹದ ದ್ವಾರದಿಂದಲೇ ಅದು ಮನಸ್ಸಿನ ಪ್ರಸನ್ನತೆಗೆ ಕಾರಣವಾಗುತ್ತದೆ. (ರಾ. ಭಾ.)

**ಓಂ ಕಾರ್ಯಮಿತ್ಯೇವ ಯತ್ಕರ್ಮ ನಿಯತಂ ಕ್ರಿಯತೇಽರ್ಜುನ ।**
**ಸಙ್ಗಂ ತ್ಯಕ್ತ್ವಾ ಫಲಂ ಚೈವ ಸ ತ್ಯಾಗಃ ಸಾತ್ತ್ವಿಕೋ ಮತಃ ॥೯॥**

ಅರ್ಜುನ! ಯಾವ ಕರ್ಮವು ಸಂಗವನ್ನೂ ಫಲವನ್ನೂ ಬಿಟ್ಟು ಕರ್ತವ್ಯದೃಷ್ಟಿಯಿಂದ ನಿಯತವಾಗಿ ಮಾಡಲ್ಪಡುತ್ತದೆಯೋ ಆ ತ್ಯಾಗವು ಸಾತ್ತ್ವಿಕವೆನಿಸುವುದು.

* * *

(**ನಿಯತಂ ಕಾರ್ಯಂ** = ನಿಯತವಾದ ಕೆಲಸ. ಮಾಡಲೇಬೇಕಾದ ಕರ್ಮ. ಬಿಡಲಾಗದ ಕರ್ಮ. ಈ ಕರ್ಮವನ್ನು ಮಾಡುವುದು ಕರ್ತವ್ಯ. ಕರ್ಮದ ಸಲುವಾಗಿ ಕರ್ಮವನ್ನು ಮಾಡಬೇಕು. 'ಶಾಸ್ತ್ರವು ಈ ಕರ್ಮವನ್ನು ಮಾಡಬೇಕೆಂದು ಶಾಸನಮಾಡುವುದರಿಂದ ಈ ಕರ್ಮಮಾಡಬೇಕು.'

ಹೀಗೆಂದು ಭಾವಿಸಿ ಕರ್ಮಮಾಡಬೇಕು. ಜ್ಞಾನಿಗಳು ಹೀಗೆ ಮಾಡಬೇಕೆಂದು ಶಾಸನಮಾಡಿದ್ದಾರೆ. ಸತ್ಸಂಪ್ರದಾಯ, ಸದಾಚಾರ, ಆತ್ಮತುಷ್ಟಿ–ಎಂಬ ಪ್ರಮಾಣಗಳೂ ಹೀಗೆಯೇ ಶಾಸನಮಾಡುತ್ತವೆ. ಆದುದರಿಂದ ಇದು ಅವಶ್ಯವಾಗಿ ಆಚರಿಸಲೇಬೇಕಾದ ಕರ್ಮ. ಇಂತಹ ನಿಯತವಾದ ಶಾಸ್ತ್ರವಿಹಿತವಾದ ಕರ್ಮವನ್ನು ಹೇಗೆ ಮಾಡಬೇಕು? **ಸಙ್ಗಂ ತ್ಯಕ್ತ್ವಾ ಫಲಂ ಚೈವ**–ಕರ್ಮಕ್ಕೆ ಅಂಟಿಕೊಳ್ಳದೇ ಮಾಡಬೇಕು. ಕರ್ಮಕ್ಕೆ ಅಂಟಿಕೊಳ್ಳುವುದು ಎಂದರೇನು? 'ನಾನು ಈ ಕರ್ಮವನ್ನು ಮಾಡಿದೆನು. ನಾನು ನಿತ್ಯವೂ ತಪ್ಪದೇ ಇಂತಹ ಕರ್ಮವನ್ನು ಮಾಡುತ್ತಿದ್ದೇನೆ' ಎಂದು ಭಾವಿಸಿಕೊಳ್ಳುವುದೇ ಕರ್ಮದ ಸಂಗ. ನಿಯತವಾದ ಕರ್ಮಮಾಡಬೇಕು. ಆದರೆ 'ನಾನು ಹೀಗೆ ಮಾಡಿದೆ ; ನಿಷ್ಠೆಯಿಂದ ಮಾಡಿದೆ ; ಮಡಿಯಿಂದ ಮಾಡಿದೆ'–ಹೀಗೆ ಭಾವಿಸಿಕೊಳ್ಳುವುದೂ ಸಂಗವಾಗುತ್ತದೆ. ಅರ್ಥಾತ್ ಹೀಗೆ ಭಾವಿಸುವುದು ಅಹಂಕಾರಕ್ಕೂ ಕಾರಣವಾಗುತ್ತದೆ. ಆದುದರಿಂದ ಶ್ರೀಕೃಷ್ಣನು **ಸಙ್ಗಂ ತ್ಯಕ್ತ್ವಾ** ಎನ್ನುತ್ತಾನೆ.

**ಫಲಂ ಚೈವ** ='ನಾನು ಈ ಕರ್ಮಮಾಡಿದೆನು' ಎಂಬ ಭಾವನೆಯನ್ನು ಬಿಟ್ಟು ಅದರ ಸಂಗವನ್ನು ತೊರೆದಾಗಲೇ ಫಲಾಭಿಸಂಧಿಯೂ ಇಲ್ಲವೆಂಬ ಅಭಿಪ್ರಾಯವೇ ಆದರೂ ಸಹ ಇದೇ ವಿಷಯವನ್ನು ಮತ್ತಷ್ಟು ಸ್ಪಷ್ಟಪಡಿಸಲು **ಫಲಂ ಚೈವ**–ಫಲವನ್ನೂ ಸಹ ಬಿಟ್ಟು ಕರ್ಮಮಾಡುವುದು ಸಾತ್ತ್ವಿಕತ್ಯಾಗವೆನಿಸಿಕೊಳ್ಳುತ್ತದೆ ಎಂದು ಶ್ರೀಕೃಷ್ಣನು ಹೇಳಿದ್ದಾನೆ.

ಆದುದರಿಂದ ಆತ್ಮಜ್ಞಾನವನ್ನು ಧರಿಸಲು ಸಾಮರ್ಥ್ಯವಿರುವವನು ಶಾಸ್ತ್ರನಿಯತವಾದ ಯಾವ ಕರ್ಮವನ್ನೇ ಆಗಲೀ, 'ಈ ಕರ್ಮಮಾಡುವುದು ಕರ್ತವ್ಯ' ಎಂದು ಭಾವಿಸಿ ಆ ಕರ್ಮಕ್ಕೇ ಅಂಟಿಕೊಳ್ಳದೇ ಫಲವನ್ನೂ ಬಿಟ್ಟು (ತ್ಯಾಗಮಾಡಿ) ಮಾಡುವುದು ಸಾತ್ತ್ವಿಕತ್ಯಾಗವೆನಿಸುತ್ತದೆ.)

O O O

(ನಿತ್ಯಕರ್ಮಗಳಿಗೂ ಫಲವುಂಟು–ಎಂಬುದಕ್ಕೆ ಭಗವಂತನ ವಚನ ಗಳನ್ನು ಪ್ರಮಾಣವೆಂದು ಹಿಂದೆ ಹೇಳಿದೆವು. ಅಥವಾ ನಿತ್ಯಕರ್ಮಗಳಿಗೆ ಫಲವು ಕೇಳಿಬರುವುದಿಲ್ಲ ಎಂದು ಇಟ್ಟುಕೊಂಡರೂ ನಿತ್ಯಕರ್ಮವನ್ನು ಆಚರಿಸಿದರೆ ಅದು ಆತ್ಮಸಂಸ್ಕಾರವೆಂಬ ಫಲವನ್ನು ಅಥವಾ ಪ್ರತ್ಯವಾಯದ

ನಿವೃತ್ತಿ ಎಂಬ ಫಲವನ್ನೂ ಆತ್ಮನಿಗೆ ಕೊಡುತ್ತದೆ–ಎಂದು ಅಜ್ಞನು ಕಲ್ಪಿಸಿಕೊಳ್ಳುತ್ತಾನೆ. ಭಗವಂತನು ಇಲ್ಲಿ ಫಲಂ ತ್ಯಕ್ತ್ವಾ ಎಂದು ಹೇಳಿ ಅಂತಹ ಕಲ್ಪನೆಯನ್ನು ನಿಷೇಧಿಸುತ್ತಾನೆ. ಆದುದರಿಂದ ಸಙ್ಗಂ ತ್ಯಕ್ತ್ವಾ ಫಲಂ ಚ ಎಂದು ಹೇಳಿರುವುದು ಸಾಧುವಾಗಿದೆ. (ಶಂ. ಭಾ.)

ನಿತ್ಯ-ನೈಮಿತ್ತಿಕ-ಮಹಾಯಜ್ಞಗಳೇ ಮುಂತಾದ ವರ್ಣಾಶ್ರಮವಿಹಿತ ವಾದ ಕರ್ಮವು ನನ್ನ ಆರಾಧನೆಯ ರೂಪದಲ್ಲಿ 'ಇದು ಕರ್ತವ್ಯ ; ಇದಕ್ಕೆ ಬೇರೆ ಯಾವ ಪ್ರಯೋಜನವೂ ಇಲ್ಲ.' (ಇದು ಸ್ವಯಂಪ್ರಯೋಜನ) ಎಂದು ತಿಳಿದು ಸಂಗವನ್ನು ಎಂದರೆ ಕರ್ಮದಲ್ಲಿ ಮಮತೆಯನ್ನೂ ಮತ್ತು ಫಲವನ್ನೂ ತೊರೆದು ಯಾವುದು ಮಾಡಲ್ಪಡುತ್ತದೆಯೋ ಆ ತ್ಯಾಗವು ಸಾತ್ತ್ವಿಕವೆನಿಸುತ್ತದೆ. ಸಾತ್ತ್ವಿಕ ಎಂದರೆ ಸತ್ತ್ವಮೂಲವಾದುದು. ಯಥಾರ್ಥವಾದ ಶಾಸ್ತ್ರಾರ್ಥಜ್ಞಾನಮೂಲವಾದುದು.

ಸತ್ತ್ವವು ಮಾತ್ರವೇ ಯಥಾರ್ಥವಾದ ವಸ್ತುಜ್ಞಾನವನ್ನು ಉಂಟು ಮಾಡುತ್ತದೆ-ಎಂದು ಹಿಂದೆಯೂ ಹೇಳಿದೆ. ಮುಂದೆಯೂ ಹೇಳಲಾಗುತ್ತದೆ.

**ಸತ್ತ್ವಾತ್ಸಂಜಾಯತೇ ಜ್ಞಾನಂ (೧೪–೧೭) ಪ್ರವೃತ್ತಿಂ ಚ ನಿವೃತ್ತಿಂ ಚ ಕಾರ್ಯಾಕಾರ್ಯೇ ಭಯಾಭಯೇ । ಬನ್ಧಂ ಮೋಕ್ಷಂ ಚ ಯಾ ವೇತ್ತಿ ಬುದ್ಧಿಃ ಸಾ ಪಾರ್ಥ ಸಾತ್ತ್ವಿಕೀ ೧೮–೩೦** (ರಾ. ಭಾ.)

**ಸಙ್ಗಂ ತ್ಯಕ್ತ್ವಾ** ಎನ್ನುವುದಕ್ಕೆ ಈ ಮುಂದಿನ ಶ್ಲೋಕವು ವ್ಯಾಖ್ಯಾನವಾಗಿದೆ.

**ಓಂ ನ ದ್ವೇಷ್ಟ್ಯಕುಶಲಂ ಕರ್ಮ ಕುಶಲೇ ನಾನುಷಜ್ಯತೇ ।**
**ತ್ಯಾಗೀ ಸತ್ತ್ವಸಮಾವಿಷ್ಟೋ ಮೇಧಾವೀ ಛಿನ್ನಸಂಶಯಃ ॥೧೦॥**

ಮೇಧಾವಿಯೂ, ಸಂಶಯವನ್ನು ನೀಗಿದವನೂ, ಸತ್ತ್ವಗುಣಸಂಪನ್ನನೂ ಆದ ತ್ಯಾಗಿಯು ಅಕುಶಲಕರ್ಮವನ್ನು ದ್ವೇಷಿಸುವುದಿಲ್ಲ. ಕುಶಲಕರ್ಮದಲ್ಲಿ ಅನುರಕ್ತನೂ ಆಗಿರುವುದಿಲ್ಲ.

* * *

(ತ್ಯಾಗೀ ಎಂದರೆ ಶ್ರೀಕೃಷ್ಣನು ಈ ಹಿಂದೆಯೇ ಹೇಳಿರುವಂತೆ ಸರ್ವ ಕರ್ಮಗಳ ಫಲವನ್ನೂ ಬಿಟ್ಟವನು ; ಫಲಾಭಿಸಂಧಿಯಿಲ್ಲದೇ ಕರ್ಮಮಾಡು

ವವನು. **ಸತ್ತ್ವಸಮಾವಿಷ್ಟಃ** = ಸತ್ತ್ವಗುಣದಿಂದ ಕೂಡಿರತಕ್ಕವನು. ದಂಭ, ಅಹಂಕಾರ ಇತ್ಯಾದಿ ಅನಾತ್ಮಗುಣಗಳೊಂದೂ ಇಲ್ಲದವನು. **ಮೇಧಾವೀ** = ಬುದ್ಧಿವಂತನು. **ಛಿನ್ನಸಂಶಯಃ** = ಕತ್ತರಿಸಿದ ಸಂಶಯವುಳ್ಳವನು. ಆತ್ಮಾನಾತ್ಮವಿಷಯದಲ್ಲಿ ಯಾವ ವಿಧವಾದ ಸಂಶಯವೂ ಇಲ್ಲದವನು. ಆತ್ಮವು ಯಾವುದು? ಅನಾತ್ಮವು ಯಾವುದು?–ಎಂಬುದನ್ನು ಖಚಿತವಾಗಿ ತಿಳಿದುಕೊಂಡಿರತಕ್ಕವನು. ಇಂತಹವನು **ಅಕುಶಲಂ ಕರ್ಮ ನ ದ್ವೇಷ್ಟಿ** = ಅಕುಶಲಕರ್ಮವನ್ನು ದ್ವೇಷಿಸುವುದಿಲ್ಲ. ಅಕುಶಲಕರ್ಮ ಎಂದರೆ ಯಾವುದು? ಕುಶಲಕರ್ಮ ಎಂದರೆ ಯಾವುದು? ಈ ಪದಕ್ಕೆ ಅನೇಕ ರೀತಿಯ ಅರ್ಥಗಳಿವೆ.

1) ಅಕುಶಲಕರ್ಮಗಳು :– ಕಾಮ್ಯ-ನಿಷಿದ್ಧಕರ್ಮಗಳು. ಅವುಗಳನ್ನು ದ್ವೇಷಿಸುವುದಿಲ್ಲ. ಆದರೆ ಅವುಗಳನ್ನು ವರ್ಜಿಸುತ್ತಾನೆ. ಕುಶಲಕರ್ಮಗಳು:– ನಿತ್ಯ-ನೈಮಿತ್ತಿಕಕರ್ಮಗಳು ; ಯಜ್ಞ-ದಾನ-ತಪಃಕ್ರಿಯೆಗಳು. ತ್ಯಾಗಿಯಾದವನು ಇವುಗಳನ್ನು ಮಾಡುತ್ತಾನೆ. ಫಲಾಭಿಸಂಧಿಯಿಲ್ಲದೇ ಈ ಕರ್ಮಗಳಿಗೆ ಅಂಟಿಕೊಳ್ಳದೆ ಮಾಡುತ್ತಾನೆ.

2) ಅಕುಶಲಕರ್ಮಗಳು :– ಮನುಷ್ಯನ ಜೀವಮಾನದಲ್ಲಿ ಅನೇಕ ಕಷ್ಟಗಳು ಸಂಭವಿಸುತ್ತವೆ. ಅದರಿಂದಾಗಿ ಮನುಷ್ಯನು ಕಷ್ಟವಾದ ಕಾರ್ಯಗಳನ್ನು ಮಾಡಬೇಕಾಗುತ್ತದೆ. ಇದೇ ಅಕುಶಲಕರ್ಮ. ತ್ಯಾಗಿಯಾದವನು ಈ ಅಕುಶಲಕರ್ಮಗಳನ್ನು ದ್ವೇಷಿಸುವುದಿಲ್ಲ. ಕಷ್ಟಕಾರ್ಯಗಳನ್ನೂ ಅನಿವಾರ್ಯವಾಗಿ ಅನುಚಿತಕಾರ್ಯಗಳನ್ನೂ ಮಾಡಬೇಕಾಗಿಬಂದಾಗ ಅವನ್ನು ದ್ವೇಷಿಸುವುದಿಲ್ಲ. ಹಾಗೆಯೇ ಕುಶಲಕಾರ್ಯಗಳನ್ನು ಎಂದರೆ ಸುಖಕರವಾದ ಕಾರ್ಯಗಳನ್ನು ಮಾಡಬೇಕಾದಾಗ ಅದರಲ್ಲಿ ಲಿಪ್ತನಾಗಿಬಿಡುವುದೂ ಇಲ್ಲ. ಸುಖವಾದ ಕಾರ್ಯವು ಸಿಕ್ಕಿತೆಂದು ಹಿಗ್ಗುವುದಿಲ್ಲ. ಕಷ್ಟ-ಸುಖಗಳನ್ನು ಸಮವಾಗಿ ಕಾಣುತ್ತಾನೆ.

3) ತನ್ನ ವೃತ್ತಿಗೆ ಅನುಗುಣವಾಗಿ ಅಕುಶಲಕರ್ಮ ಎಂದರೆ ನೀಚ ಕಾರ್ಯವನ್ನು ಮಾಡಬೇಕಾದರೂ ಆ ಕಾರ್ಯವನ್ನು ದ್ವೇಷಿಸುವುದಿಲ್ಲ. ಧರ್ಮವ್ಯಾಧನು ಮಾಂಸಮಾರುವುದನ್ನು ಹೀನಕಾರ್ಯವೆಂದು ಎಂದೂ

ಭಾವಿಸಿರಲಿಲ್ಲ. ಗೋರಾ ಕುಂಬಾರ, ಸಂತ ಕಬೀರ್‌ದಾಸ್–ಇವರುಗಳನ್ನೂ ಈ ಅರ್ಥದಲ್ಲಿ ನ ದ್ವೇಷ್ಟ್ಯಕುಶಲಂ ಕರ್ಮ–ಎಂಬುದಕ್ಕೆ ಉದಾಹರಣೆ ಯನ್ನಾಗಿ ತೆಗೆದುಕೊಳ್ಳಬಹುದು.

4) ಅಕುಶಲಕರ್ಮ ಎಂದರೆ ಕೇವಲ ದೈಹಿಕವಾದ ಕೆಲಸ. ದೈಹಿಕವಾಗಿ ಮಾಡುವ ಕೆಲಸಕ್ಕೆ ಹೆಚ್ಚು ಕುಶಲತೆಯ ಅವಶ್ಯಕತೆಯಿಲ್ಲ.

ದೈಹಿಕವಾದ ಕಾರ್ಯವನ್ನು ಮಾಡಬೇಕಾಗಿ ಬಂದರೂ ಅದನ್ನು ದ್ವೇಷಿಸುವುದಿಲ್ಲ. ಕುಶಲಕರ್ಮವೆನಿಸಿದ ಕೇವಲ ಬೌದ್ಧಿಕವಾದ ಕೆಲಸವನ್ನು ಮಾಡಬೇಕಾಗಿ ಬಂದರೂ ಅದರಿಂದ ಸಂತೋಷಪಡುವುದೂ ಇಲ್ಲ.

5) ಅಕುಶಲಕರ್ಮ–ಆಳಿನ ಕೆಲಸ ; ಕುಶಲಕರ್ಮ–ಅರಸನ ಕೆಲಸ. ಆಳಾದಾಗ, ಗುರುಜನರ ಸೇವೆಯನ್ನು ಮಾಡಬೇಕಾಗಿ ಬಂದಾಗ ತ್ಯಾಗಿಗೆ–ದ್ವೇಷವಿಲ್ಲ ; ಆ ಕೆಲಸದಲ್ಲಿ ಅಲಸಿಕೆಯಿಲ್ಲ. ಕುಶಲಕಾರ್ಯವೆಂದರೆ ರಾಜನಾಗಿ ಪ್ರಜೆಗಳನ್ನು ಆಳುವಾಗ ಅಹಂಕಾರವಿಲ್ಲದಿರುವುದು. ಎರಡೂ ಕಾರ್ಯಗಳನ್ನೂ ಸಮಭಾವದಿಂದ ಕಾಣತಕ್ಕವನು ಅವನು.

6) ಕುಶಲ-ಶುಭ ; ಅಕುಶಲ-ಅಶುಭ. ಶುಭಾಶುಭಗಳೆರಡನ್ನೂ ಒಂದೇ ಎಂದು ಭಾವಿಸಿರತಕ್ಕವನು. ಶುಭದಲ್ಲಿ ಹಿಗ್ಗುವವನಲ್ಲ. ಅಶುಭದಲ್ಲಿ ತಗ್ಗುವವನೂ ಅಲ್ಲ. ಹೀಗೆ ನಾನಾಪ್ರಕಾರವಾಗಿ ಅಕುಶಲಕರ್ಮ–ಕುಶಲ ಕರ್ಮ ಪದಗಳಿಗೆ ಅರ್ಥಮಾಡಬಹುದಾಗಿದೆ.)

o o o

ಯಾವ ಅಧಿಕಾರಿಯು ಸಂಗವನ್ನೂ ಫಲವಾಸನೆಯನ್ನೂ ಬಿಟ್ಟು ನಿತ್ಯ ಕರ್ಮಗಳನ್ನು ಮಾಡುತ್ತಾನೆಯೋ ಅವನ ಅಂತಃಕರಣವು ಫಲಾಸಕ್ತಿಯೇ ಮುಂತಾದ ದೋಷಗಳಿಂದ ದೂಷಿತವಾಗುವುದಿಲ್ಲ. ನಿತ್ಯಕರ್ಮಗಳ ಅನು ಷ್ಠಾನದಿಂದ ಅಂತಃಕರಣವು ಸಂಸ್ಕಾರಹೊಂದಿ ಶುದ್ಧವಾಗುತ್ತದೆ. ಹಾಗೆ ವಿಶುದ್ಧವಾದ ಮತ್ತು ಪ್ರಸನ್ನವಾದ ಅಂತಃಕರಣದಿಂದ ತಾನೇ ಆತ್ಮವನ್ನು ಆಲೋಚಿಸಲು ಸಾಧ್ಯವಾಗುತ್ತದೆ? ಹೀಗೆ ಆತ್ಮಜ್ಞಾನಕ್ಕೆ ಅಭಿಮುಖನಾದವ

ನಿಗೆ ಕ್ರಮವಾಗಿ ಆತ್ಮಜ್ಞಾನದಲ್ಲಿ ಹೇಗೆ ನಿಷ್ಠೆಯುಂಟಾಗುತ್ತದೆ?–ಎಂಬುದನ್ನು ಹೇಳಬೇಕು. ಅದಕ್ಕಾಗಿ ಭಗವಂತನು ಈ ಶ್ಲೋಕವನ್ನು ಪ್ರಾರಂಭಿಸುತ್ತಾನೆ.

ಅವನು ಅಕುಶಲವಾದ (ಅಶೋಭನವಾದ) ಕರ್ಮವನ್ನು ಎಂದರೆ ಕಾಮ್ಯಕರ್ಮವನ್ನು ದ್ವೇಷಿಸುವುದಿಲ್ಲ. 'ಕಾಮ್ಯಕರ್ಮವು ಪುನರ್ಜನ್ಮವನ್ನು ಉಂಟುಮಾಡುವುದರಿಂದ ಸಂಸಾರಕ್ಕೆ ಕಾರಣವಾಗುತ್ತದೆ. ಅವುಗಳಿಂದ ನನಗೇನು ಪ್ರಯೋಜನ?' ಎಂದು ಅವುಗಳನ್ನು ದ್ವೇಷಿಸುವುದೂ ಇಲ್ಲ ; ಹಾಗೆಯೇ ಕುಶಲವಾದ (ಶೋಭನವಾದ) ನಿತ್ಯಕರ್ಮದಲ್ಲಿ ಪ್ರೀತಿಯನ್ನೂ ಇಟ್ಟುಕೊಳ್ಳುವುದಿಲ್ಲ. ಇದು ಅಂತಃಕರಣದ ಶುದ್ಧಿ, ಜ್ಞಾನದ ಉತ್ಪತ್ತಿ ಮತ್ತು ಜ್ಞಾನನಿಷ್ಠೆಗೆ ಕಾರಣವಾಗುವುದರಿಂದ ಮೋಕ್ಷಕ್ಕೆ ಕಾರಣವಾಗುತ್ತದೆ ಎಂಬ ಕಾರಣದಿಂದ ಅವುಗಳಲ್ಲಿಯೂ ಆಸಕ್ತನಾಗುವುದಿಲ್ಲ. ಅವುಗಳಲ್ಲಿಯೂ ಅವನಿಗೆ ಯಾವ ಪ್ರಯೋಜನವೂ ಕಂಡುಬರದೇ ಅವುಗಳಲ್ಲಿ ಪ್ರೀತಿಯೂ ಇರುವುದಿಲ್ಲ. ಹೀಗಿರುವವನು ಯಾರು ಎಂದರೆ ತ್ಯಾಗೀ. ಹಿಂದೆ ಹೇಳಿದಂತೆ ಆಸಕ್ತಿಯ ಮತ್ತು ಫಲದ ತ್ಯಾಗದಿಂದ ಕೂಡಿದವನು–ಕರ್ಮದಲ್ಲಿ ಸಂಗವನ್ನೂ ಮತ್ತು ಫಲವನ್ನೂ ಬಿಟ್ಟು ನಿತ್ಯಕರ್ಮಗಳನ್ನು ಅನುಷ್ಠಾನಮಾಡುವವನು. 'ಇವನು ಯಾವಾಗ ಅಕುಶಲಕರ್ಮವನ್ನು ದ್ವೇಷಿಸುವುದಿಲ್ಲ ಮತ್ತು ಕುಶಲಕರ್ಮದಲ್ಲಿ ಆಸಕ್ತನಾಗುವುದಿಲ್ಲ?'–ಎಂದರೆ ಸತ್ತ್ವಸಮಾವಿಷ್ಟನಾದಾಗ, ಆತ್ಮಾನಾತ್ಮವಿವೇಕಜ್ಞಾನದಿಂದುಂಟಾದ ಸತ್ತ್ವಗುಣದಿಂದ ಸಂಪೂರ್ಣವಾಗಿ ವ್ಯಾಪ್ತನಾದಾಗ. ಆದುದರಿಂದಲೇ ಇವನು ಮೇಧಾವಿಯಾಗುತ್ತಾನೆ. ಮೇಧೆಯಿಂದ ಎಂದರೆ ಆತ್ಮಜ್ಞಾನವೆಂಬ ಪ್ರಜ್ಞೆಯಿಂದ ಕೂಡಿದವನಾಗುತ್ತಾನೆ. ಹೀಗೆ ಮೇಧಾವಿಯಾಗಿರುವುದರಿಂದಲೇ ಯಾವ ಸಂಶಯವೂ ಇಲ್ಲದವನಾಗುತ್ತಾನೆ. ಅವಿದ್ಯಾಜನಿತವಾದ ಸಂಶಯವಿಲ್ಲದವನಾಗುತ್ತಾನೆ. ಆತ್ಮಸ್ವರೂಪದಲ್ಲಿ ನೆಲೆಸುವುದೇ ಪರಮಕಲ್ಯಾಣಕ್ಕೆ ಸಾಧನವು ; ಬೇರೆ ಯಾವುದೂ ಅಲ್ಲ–ಎಂದು ನಿಶ್ಚಯಿಸಿಕೊಂಡು ಸಂಶಯರಹಿತನಾಗಿರುತ್ತಾನೆ. ಯಾವ ಅಧಿಕಾರಿಯು ಹಿಂದೆ ಹೇಳಿದ ರೀತಿಯಲ್ಲಿ ಕರ್ಮಯೋಗವನ್ನು ಅನುಷ್ಠಾನಮಾಡಿ, ಅದರಿಂದ ಕ್ರಮವಾಗಿ ಸಂಸ್ಕಾರಹೊಂದಿದ ಅಂತಃಕರಣವುಳ್ಳವನಾಗಿ, ಜನ್ಮವೇ ಮುಂತಾದ ವಿಕಾರರಹಿತವಾಗಿರುವುದರಿಂದ ಕ್ರಿಯಾರಹಿತವಾಗಿರುವ ಆತ್ಮವನ್ನು ತನ್ನ ಸ್ವರೂಪವೆಂದು ಅರಿತುಕೊಳ್ಳುತ್ತಾನೆಯೋ

ಅವನು ನೈಷ್ಕರ್ಮ್ಯರೂಪವಾದ ಜ್ಞಾನನಿಷ್ಠೆಯನ್ನು ಅನುಭವಿಸುತ್ತಾನೆ. ಹೀಗೆ ಈ ಶ್ಲೋಕದ ಮೂಲಕ ಹಿಂದೆ ಹೇಳಿದ ಕರ್ಮಯೋಗದ ಫಲವನ್ನು ತಿಳಿಸಿದೆ. (ಶಂ. ಭಾ.)

ಹೀಗೆ ಸತ್ತ್ವದಿಂದ ಪೂರ್ಣವಾಗಿ ವ್ಯಾಪಿಸಲ್ಪಟ್ಟ ಮೇಧಾವಿಯಾದವನು ಯಥಾರ್ಥವಾದ ತತ್ತ್ವಜ್ಞಾನವುಳ್ಳವನಾಗಿ, ಅದೇ ಕಾರಣದಿಂದ ಸಂಶಯ ರಹಿತನಾಗಿ ಕರ್ಮದಲ್ಲಿ ಆಸಕ್ತಿಯನ್ನೂ, ಫಲವನ್ನೂ, ಕರ್ತೃತ್ವವನ್ನೂ ತ್ಯಾಗ ಮಾಡಿದವನು–ಅಕುಶಲವಾದ ಕರ್ಮವನ್ನು ದ್ವೇಷಿಸುವುದೂ ಇಲ್ಲ ; ಕುಶಲ ವಾದ ಕರ್ಮದಲ್ಲಿ ಆಸಕ್ತನಾಗುವುದೂ ಇಲ್ಲ. ಅಕುಶಲಕರ್ಮ ಎಂದರೆ ಅನಿಷ್ಟಫಲವನ್ನು ಕೊಡುವ ಕರ್ಮ. ಕುಶಲಕರ್ಮ ಎಂದರೆ ಇಷ್ಟವಾದ ಸ್ವರ್ಗ, ಪುತ್ರ, ಪಶು, ಅನ್ನ ಮುಂತಾದ ಫಲವನ್ನು ಕೊಡುವ ಕರ್ಮ. ಮೇಲೆ ಹೇಳಿದ ತ್ಯಾಗಿಯು ಎಲ್ಲ ಕರ್ಮಗಳಲ್ಲಿಯೂ ಮಮತೆಯನ್ನು ತೊರೆದಿರುವುದರಿಂದ, ಬ್ರಹ್ಮವೊಂದನ್ನು ಬಿಟ್ಟು, ಉಳಿದ ಎಲ್ಲ ಫಲಗಳನ್ನೂ ತೊರೆದು ಬಿಟ್ಟಿರುವುದರಿಂದ ಮತ್ತು ಕರ್ತೃತ್ವವನ್ನೂ ತೊರೆದುಬಿಟ್ಟಿರುವುದರಿಂದ ಆ ಅಕುಶಲ ಮತ್ತು ಕುಶಲಕರ್ಮಗಳು ಆಚರಿಸಲ್ಪಡುತ್ತಿರುವಾಗ ಅವುಗಳಲ್ಲಿ ಪ್ರೀತಿಯನ್ನೂ ದ್ವೇಷವನ್ನೂ ಹೊಂದುವುದಿಲ್ಲ. ಇಲ್ಲಿ ಹೇಳಿರುವ ಅನಿಷ್ಟಫಲ ವಾದ ಪಾಪಕರ್ಮವು ಯಾವುದು? ಎಂದರೆ ಪ್ರಮಾದದಿಂದ ಉಂಟಾ ಗಿರುವ ಪಾಪಕರ್ಮ. ಏಕೆಂದರೆ ದುರಾಚಾರದಿಂದ ಅವಿರತನಾಗದಿದ್ದರೆ ಜ್ಞಾನೋತ್ಪತ್ತಿಗೆ ವಿರೋಧ–ಎಂದು ಕಠಶ್ರುತಿಯು ಹೇಳುತ್ತದೆ.

**ನಾವಿರತೋ ದುಶ್ಚರಿತಾತ್ ನಾಶಾನ್ತೋ ನಾಸಮಾಹಿತಃ ।**
**ನಾಶಾನ್ತಮನಸೋ ವಾಪಿ ಪ್ರಜ್ಞಾನೇನೈವಮಾಪ್ನುಯಾತ್ ॥**

ಆದುದರಿಂದ ಶಾಸ್ತ್ರೀಯವಾದ ತ್ಯಾಗ ಎಂದರೆ ಕರ್ಮದಲ್ಲಿ ಕರ್ತೃತ್ವ, ಆಸಕ್ತಿ ಮತ್ತು ಫಲಗಳನ್ನು ತ್ಯಾಗಮಾಡುವುದೇ ಹೊರತು ಕರ್ಮಸ್ವರೂಪದ ತ್ಯಾಗವಲ್ಲ. (ರಾ. ಭಾ.)

**ಓಂ ನ ಹಿ ದೇಹಭೃತಾ ಶಕ್ಯಂ ತ್ಯಕ್ತುಂ ಕರ್ಮಾಣ್ಯಶೇಷತಃ ।**
**ಯಸ್ತು ಕರ್ಮಫಲತ್ಯಾಗೀ ಸ ತ್ಯಾಗೀತ್ಯಭಿಧೀಯತೇ ॥೧೧॥**

ದೇಹಧಾರಿಯಾದವನಿಂದ ಕರ್ಮಗಳನ್ನು ಸಂಪೂರ್ಣವಾಗಿ ತ್ಯಜಿಸುವು

ದಕ್ಕೆ ಆಗುವುದೇ ಇಲ್ಲ. ಯಾವನು ಕರ್ಮಫಲತ್ಯಾಗಿಯೋ ಅವನೇ ತ್ಯಾಗಿಯೆನಿಸುವನು.

*   *   *

(ಮೂರನೆಯ ಅಧ್ಯಾಯದ ಐದನೆಯ ಶ್ಲೋಕದಲ್ಲಿ ಹೇಳಿರುವುದನ್ನೇ ಶ್ರೀಕೃಷ್ಣನಿಲ್ಲಿ ಉಪಸಂಹಾರರೂಪದಲ್ಲಿ ಪರ್ಯಾಯಾಂತರದಿಂದ ಹೇಳಿದ್ದಾನೆ. **'ನ ಹಿ ಕಶ್ಚಿತ್ಕ್ಷಣಮಪಿ ಜಾತು ತಿಷ್ಠತ್ಯಕರ್ಮಕೃತ್'।** 'ಯಾವನೊಬ್ಬನೂ ಕೂಡ ಕರ್ಮವನ್ನು ಮಾಡದೇ ಕ್ಷಣಮಾತ್ರವಾದರೂ ಇರಲಾರನು'–ಎಂದು ಅಲ್ಲಿ ಶ್ರೀಕೃಷ್ಣನು ಹೇಳಿದ್ದಾನೆ. ಇಲ್ಲಿ **ನ ಹಿ ದೇಹಭೃತಾ ಶಕ್ಯಂ**–ದೇಹವನ್ನು ಎಂದರೆ ಶರೀರವನ್ನು ಹೊಂದಿರುವವನಿಂದ ನಿಃಶೇಷವಾಗಿ ಕರ್ಮಗಳನ್ನು ಬಿಟ್ಟುಬಿಡಲು ಸಾಧ್ಯವೇ ಆಗುವುದಿಲ್ಲ–ಎನ್ನುತ್ತಾನೆ.

ದೇಹಧಾರಣೆಯೆಂಬುದೇ ಕರ್ಮಮೂಲವಾದುದು. ಯಾವುದೋ ಕರ್ಮದ ಫಲದಿಂದಾಗಿ ಯಾವುದೋ ದೇಹವನ್ನು ಪಡೆದುಕೊಳ್ಳುತ್ತಾನೆ. ಕರ್ಮ ಮತ್ತು ದೇಹಗಳು ಅಭಿನ್ನವಾದುವುಗಳು. ದೇಹದಿಂದ ಕರ್ಮವನ್ನು ಪ್ರತ್ಯೇಕಿಸುವ ಸಾಧ್ಯತೆಯೇ ಇಲ್ಲ. ದೇಹದಿಂದ ಕರ್ಮವನ್ನು ಪ್ರತ್ಯೇಕಿಸುವುದೆಂದರೆ ಜ್ಞಾನೇಶ್ವರರ ಮಾತಿನಲ್ಲಿ–ವಸ್ತ್ರವು ತಂತುಗಳನ್ನು ತ್ಯಾಗಮಾಡಿದಂತೆ, ಅಗ್ನಿಯು ಉಷ್ಣತೆಗೆ ಹೇಯಗೊಂಡಂತೆ, ದೀವಿಗೆಯು ಪ್ರಕಾಶವನ್ನು ದ್ವೇಷಿಸಿದಂತೆ, ಇಂಗು ತನ್ನ ಉಗ್ರವಾಸನೆಗೆ ಬೇಸತ್ತಂತೆ, ನೀರು ದ್ರವ ರೂಪವನ್ನು ಬಿಡಲು ಇಚ್ಛಿಸಿದಂತೆ. ಅರ್ಥಾತ್ ದೇಹದಿಂದ ಕರ್ಮವನ್ನು ಪ್ರತ್ಯೇಕಿಸುವುದು ಸಾಧ್ಯವಾಗದ ವಿಷಯ. **ಕರ್ಮಾಣ್ಯಶೇಷತಃ** ಎಂಬುದರಿಂದ ದೇಹಾವಸಾನದವರೆಗೆ ಉಚ್ಛ್ವಾಸ-ನಿಃಶ್ವಾಸಗಳಾದರೂ ಅಗತ್ಯವಾಗಿ ಇರಲೇಬೇಕಾಗುತ್ತದೆ. ಆದರೆ ಸಮಾಧಿಸ್ಥಿತಿಯಲ್ಲಿ ಉಚ್ಛ್ವಾಸ-ನಿಃಶ್ವಾಸಗಳೂ ನಿಂತುಹೋಗುವುವೆಂಬುದು ನಿಜ. ಆ ಸಮಯದಲ್ಲಿ ಜೀವಕ್ಕೆ ದೇಹದ ಅರಿವೇ ಇರುವುದಿಲ್ಲ. ಆ ಸಮಯದಲ್ಲಿ ಜೀವಕ್ಕೆ ನೈಷ್ಕರ್ಮ್ಯವಿರುವುದು ನಿಜ. ಆದರೆ ಆ ಸ್ಥಿತಿಯಲ್ಲಿ ಜೀವನು ಹೆಚ್ಚು ಕಾಲ ಇರಲಾರ. ಪುನಃ ಅವನು ತಾನೊಂದು ಗೂಡಿನಲ್ಲಿದ್ದೇನೆಂಬ ಅರಿವನ್ನು ಹೊಂದಲೇಬೇಕಾಗುತ್ತದೆ. ತಾನು ಬೇರೆ, ಗೂಡು ಬೇರೆ–ಎಂಬ ಜ್ಞಾನವೂ ಯದ್ಯಪಿ ಜೀವನಿಗೆ

ತಿಳಿದಿದ್ದರೂ ಸಹ ದೇಹಧರ್ಮಕ್ಕೆ ವಿರುದ್ಧವಾದ ರೀತಿಯಲ್ಲಿ ಅವನು ನಡೆದುಕೊಳ್ಳಲಾರ. ಎಷ್ಟೋ ಅಷ್ಟು ಆಹಾರ, ನೀರು–ಇವೆಲ್ಲವನ್ನೂ ತೆಗೆದು ಕೊಳ್ಳಲೇಬೇಕಾಗುತ್ತದೆ. ಸಮಾಧಿಸ್ಥಿತಿಯಲ್ಲಿದ್ದ ಜೀವವು ದೇಹದಲ್ಲಿದ್ದೇ ನೆಂಬ ಅರಿವು ಪಡೆದುಕೊಂಡನಂತರ ಉಚ್ಛ್ವಾಸ-ನಿಃಶ್ವಾಸಗಳು ಯಥಾ ಪೂರ್ವವಾಗಿ ಪ್ರಾರಂಭವಾಗಿಬಿಡುತ್ತವೆ. ಆದುದರಿಂದ ಶರೀರಿಗಳು ನಿಃಶೇಷವಾಗಿ ಕರ್ಮಪರಿತ್ಯಾಗವನ್ನು ಮಾಡಲು ಸಾಧ್ಯವೇ ಆಗುವುದಿಲ್ಲ. ಕರ್ಮಮಾಡುವುದು ಶರೀರಿಗೆ ಅನಿವಾರ್ಯ ಎಂದಮೇಲೆ ಹೇಗೆ ಕರ್ಮ ಮಾಡಬೇಕು? ಒಂದು ಕರ್ಮವನ್ನು ಮಾಡಿ ಅದರ ದುಷ್ಫಲದಿಂದಲೋ ಸತ್ಫಲದಿಂದಲೋ ಮತ್ತೊಂದು ಕರ್ಮಕ್ಕೆ ಜೀವನು ಕರ್ತೃವಾಗದ ರೀತಿ ಯಲ್ಲಿ ಕರ್ಮಮಾಡಬೇಕು. ಅದು ಹೇಗೆ? ಎಂದರೆ ಕರ್ಮಫಲತ್ಯಾಗದಿಂದ ಇದು ಸಾಧ್ಯವಾಗುತ್ತದೆ. ಕೇವಲ ಊಟಮಾಡುವುದನ್ನೇ ಒಂದು ಕರ್ಮ ವನ್ನಾಗಿಟ್ಟುಕೊಂಡರೆ ಅದರ ಫಲ ಯಾವುದು? ಅದನ್ನು ತ್ಯಾಗಮಾಡು ವುದು ಹೇಗೆ? ಆಹಾರವನ್ನು ಸೇವಿಸುವುದು ಮೇಲ್ನೋಟಕ್ಕೆ ಹೊಟ್ಟೆ ತುಂಬಿಸಿಕೊಳ್ಳುವುದಕ್ಕೆ ಅಥವಾ ಹಸಿವನ್ನು ನೀಗಿಕೊಳ್ಳುವುದಕ್ಕೆ ಎಂದು ಕಂಡುಬಂದರೂ ಸಹ ಊಟಕ್ಕೂ ಪರೋಕ್ಷಫಲವಿದೆ. ಆಹಾರಪದಾರ್ಥವು ಯಾವ ಮೂಲದಿಂದ ಬಂದಿರುವುದು? ಸಿದ್ಧಪಡಿಸಿದವರು ಯಾರು? ಆಹಾರಪದಾರ್ಥವನ್ನು ಕೊಂಡಿರುವುದು ಕಪ್ಪುಹಣದಿಂದಲೇ ; ಒಳ್ಳೆಯ ಹಣದಿಂದಲೇ? ಶ್ರೋತ್ರಿಯರ ಮನೆಯ ಅನ್ನವೇ? ದುಷ್ಟರ ಮನೆಯ ಅನ್ನವೇ?–ಇಂತಹ ಸೂಕ್ಷ್ಮವಿಷಯಗಳನ್ನು ಅನುಸರಿಸಿ ನಾವು ಮಾಡುವ ಊಟಕ್ಕೂ ಒಳ್ಳೆಯ ಫಲ ಅಥವಾ ಕೆಟ್ಟ ಫಲಗಳಿದ್ದೇ ಇವೆ. ಆಹಾರವು ಬುದ್ಧಿಯ ಮೇಲೆ ಪರಿಣಾಮವನ್ನು ಉಂಟುಮಾಡುತ್ತದೆಯೆಂದು ಎಲ್ಲ ವಿವೇಕಿಗಳಿಗೂ ತಿಳಿದ ವಿಷಯವೇ ಆಗಿದೆ. ಆದುದರಿಂದ ಊಟಮಾಡು ವುದೂ ಸಹ ಪುಣ್ಯಾಪುಣ್ಯಫಲದಾಯಕವಾದ ಒಂದು ಕರ್ಮವೇ ಸರಿ. ಆದುದರಿಂದಲೇ ಊಟಮಾಡುವಾಗ ಮಾಡಬೇಕಾದ ಕರ್ಮಾಂಗವನ್ನು ಹಿರಿಯರು ಅಥವಾ ಋಷಿಜನರು ಸಿದ್ಧಪಡಿಸಿಯೇ ಇದ್ದಾರೆ. ವ್ಯಾಹೃತಿ ಯಿಂದ ಕೂಡಿದ ಗಾಯತ್ರೀಮಹಾಮಂತ್ರದಿಂದ ಅನ್ನಕ್ಕೆ ಪ್ರೋಕ್ಷಣೆ ; ಸತ್ಯದಿಂದಲೂ ಋತದಿಂದಲೂ ಅನ್ನಕ್ಕೆ ಆವರಣಕಲ್ಪನೆ ; ಭೂತಬಲಿ ; ಅಮೃತದಿಂದ ಉಪಸ್ತರಣ ಎಂದರೆ ಅಮೃತವನ್ನು ಕೆಳಗೆ ಹಾಸುವುದು ;

ಅನಂತರ ಪ್ರಾಣಾಗ್ನಿಹೋತ್ರ ; ಅನಂತರ ಗೋವಿಂದನಾಮಪೂರ್ವಕವಾಗಿ ಊಟ ; ಅನಂತರ ಅಮೃತದಿಂದಲೇ ಅದನ್ನು ಮುಚ್ಚುವುದು ಇದು ಭೋಜನದ ಕರ್ಮಾಂಗ. ಹೀಗೆ ಮಾಡಿದ ಭೋಜನವು ದೋಷದಿಂದ ರಹಿತವಾಗಿ ಸತ್ಫಲವನ್ನೇ ಕೊಡುತ್ತದೆ. ಆ ಫಲವನ್ನೂ ಸಹ ತ್ಯಾಗಮಾಡುವುದು–ಎಂದರೆ ಭೋಜನವೂ ಪರಮಾತ್ಮಪ್ರೀತಿಗಾಗಿ ಎಂದು ಭಾವಿಸುವುದು. ಇದೇ ಫಲತ್ಯಾಗ.

ಇದೇ ಅಧ್ಯಾಯದ ಎರಡನೆಯ ಶ್ಲೋಕದಲ್ಲಿ ಶ್ರೀಕೃಷ್ಣನು–**ಸರ್ವ ಕರ್ಮ ಫಲತ್ಯಾಗಂ ವಿಚಕ್ಷಣಾಃ ತ್ಯಾಗಂ ಪ್ರಾಹುಃ**–ಎಂದು ಹೇಳಿದ್ದಾನೆ. ಎಲ್ಲ ಕರ್ಮಗಳ ಫಲದ ತ್ಯಾಗವನ್ನೂ 'ತ್ಯಾಗ' ಎಂದು ವಿಚಕ್ಷಣರು ಹೇಳುತ್ತಾರೆ. ಅದನ್ನೇ ಇಲ್ಲಿ–**ಯಸ್ತು ಕರ್ಮಫಲತ್ಯಾಗೀ ಸ ತ್ಯಾಗೀತ್ಯಭಿಧೀಯತೇ**–ಎಂದಿದ್ದಾನೆ. ಯಾವನು ಕರ್ಮಫಲವನ್ನು ತ್ಯಾಗಮಾಡುವನೋ ಅವನೇ ತ್ಯಾಗೀ ಎನಿಸುವನು. ಈ ಶ್ಲೋಕದಲ್ಲಿ ಪೂರ್ವಾರ್ಧ ಮತ್ತು ಉತ್ತರಾರ್ಧಗಳ ಸಂಬಂಧವು ಹೇಗೆಂದರೆ–ಶರೀರಿಗೆ ಕರ್ಮಬಿಡಲು ಸಾಧ್ಯವಾಗುವುದಿಲ್ಲ. ಕರ್ಮದ ಬೇರನ್ನು ಕಿತ್ತುಹಾಕದಿದ್ದರೆ ಜನ್ಮಾಂತರಗಳು ತಪ್ಪಿದ್ದಲ್ಲ. ಆದುದರಿಂದ ಕರ್ಮಮಾಡಬೇಕು ; ಫಲಾಭಿಸಂಧಿಯಿಲ್ಲದೇ ಮಾಡಬೇಕು. ಕರ್ಮಫಲಗಳನ್ನು ಸಂಪೂರ್ಣವಾಗಿ ತ್ಯಾಗಮಾಡಬೇಕು–ಹೀಗೆ ಮಾಡಿದರೆ ಕರ್ಮಮಾಡಿಯೂ ಮಾಡದಂತೆಯೇ ಆಗುತ್ತದೆ. ಒಂದು ವಿಧದಲ್ಲಿ ಇದು ನೈಷ್ಕರ್ಮ್ಯವೇ ಸರಿ. ಹೀಗೆ ಮಾಡುವವನೇ ತ್ಯಾಗೀ ಅಥವಾ ಸಂನ್ಯಾಸೀ.)

* * *

ಆದರೆ ಕರ್ಮಾಧಿಕಾರಿಯಾಗಿ ಶರೀರದಲ್ಲಿ ಆತ್ಮಾಭಿಮಾನವನ್ನು ಹೊಂದಿರುವುದರಿಂದ ಯಾವ ದೇಹಧಾರಿಯು ಅಜ್ಞಾನಿಯಾಗಿರುತ್ತಾನೆಯೋ, ಅವನಲ್ಲಿ ತಾನು ಕರ್ತಾ ಎಂಬ ಜ್ಞಾನವು ನಷ್ಟವಾಗದೇ ಇರುವುದರಿಂದ, ನಾನೇ ಕರ್ತಾ ಎಂಬ ಬುದ್ಧಿಯನ್ನು ನಿಶ್ಚಯಮಾಡಿಕೊಂಡಿರುತ್ತಾನೆಯೋ ಅವನಿಗೆ ಕರ್ಮವನ್ನು ಸಂಪೂರ್ಣವಾಗಿ ಬಿಡುವುದಕ್ಕಾಗುವುದಿಲ್ಲ. ಆದುದರಿಂದ ಅವನಿಗೆ ಕರ್ಮಫಲತ್ಯಾಗದಿಂದ ಕೂಡಿದ, ವಿಹಿತವಾದ ಕರ್ಮಗಳ ಅನುಷ್ಠಾನದಲ್ಲಿಯೇ ಅಧಿಕಾರ. ಅವುಗಳ ತ್ಯಾಗದಲ್ಲಿ ಅಧಿಕಾರವಿಲ್ಲ–ಎಂಬ ಅಭಿಪ್ರಾಯವನ್ನು ತೋರಿಸಲು ಭಗವಂತನು ಈ ಶ್ಲೋಕವನ್ನು ಹೇಳುತ್ತಾನೆ.

**ದೇಹಭೃತ್**–ಎಂದರೆ ದೇಹಾಭಿಮಾನವುಳ್ಳವನು–ವಿವೇಕಿಯಲ್ಲದವನು. ಏಕೆಂದರೆ ವಿವೇಕಿಯು **ವೇದಾವಿನಾಶಿನಂ** ಮುಂತಾದ ಶ್ಲೋಕಗಳಲ್ಲಿ ಹೇಳಿರುವಂತೆ ಕರ್ತೃತ್ವಾಧಿಕಾರದಿಂದಲೇ ಪ್ರತ್ಯೇಕಿಸಲ್ಪಟ್ಟಿದ್ದಾನೆ. ಆದುದರಿಂದ **ದೇಹಭೃತಾ** ಎಂದರೆ ದೇಹಾತ್ಮಾಭಿಮಾನವುಳ್ಳ ಅಜ್ಞಾನಿಯಿಂದ ಎಂದು ಅರ್ಥ. ಅವನಿಂದ ಕರ್ಮಗಳನ್ನು ಸಂಪೂರ್ಣವಾಗಿ ತ್ಯಜಿಸಲು ಸಾಧ್ಯವಿಲ್ಲ. ಆದುದರಿಂದ ಯಾವ ಅಜ್ಞಾನಿಯು ಕರ್ಮಾಧಿಕಾರಿಯಾಗಿ ನಿತ್ಯಕರ್ಮಗಳನ್ನು ಮಾಡುತ್ತಾ ಕರ್ಮಫಲದ ಅಭಿಸಂಧಿಯ ವಿಷಯದಲ್ಲಿ ಮಾತ್ರ ಸಂನ್ಯಾಸಿಯಾಗಿರುತ್ತಾನೆಯೋ ಅವನು ತ್ಯಾಗೀ ಎನಿಸುತ್ತಾನೆ. ಅವನು ಕರ್ಮಿಯೇ ಆಗಿದ್ದರೂ ಸ್ತುತಿಗೋಸ್ಕರ ತ್ಯಾಗೀ ಎಂದು ಕರೆಯಲ್ಪಟ್ಟಿದ್ದಾನೆ.

ಆದುದರಿಂದ ದೇಹಾತ್ಮಾಭಿಮಾನವಿಲ್ಲದ ಪರಮಾರ್ಥದರ್ಶಿಯಿಂದ ಮಾತ್ರವೇ ಸಂಪೂರ್ಣಕರ್ಮಸಂನ್ಯಾಸವು ಸಾಧ್ಯವಾಗುತ್ತದೆ. (ಶಂ. ಭಾ.)

**ದೇಹಧಾರಿಯು**–(ಶರೀರವನ್ನು ಧರಿಸಿರುವವನು) ಕರ್ಮಗಳನ್ನು ನಿಃಶೇಷವಾಗಿ ಬಿಡಲು ಸಾಧ್ಯವಾಗುವುದಿಲ್ಲ. ದೇಹಧಾರಣೆಗೆ ಬೇಕಾದ ಅನ್ನ-ಪಾನ ಮುಂತಾದುವುಗಳು ಮತ್ತು ಅವುಗಳಿಗೆ ಸಂಬಂಧಿಸಿದ ಕರ್ಮಗಳು–ಇವು ಅನಿವಾರ್ಯವಾಗುತ್ತವೆ ಮತ್ತು ಅವುಗಳಿಗಾಗಿ ಮಹಾಯಜ್ಞ ಮುಂತಾದುವುಗಳ ಅನುಷ್ಠಾನವು ಅನಿವಾರ್ಯವಾಗುತ್ತದೆ. ಆದರೆ ಆ ಮಹಾ ಯಜ್ಞವೇ ಮುಂತಾದ ಕರ್ಮಗಳಲ್ಲಿ ಯಾವನು ಫಲವನ್ನು ತ್ಯಾಗಮಾಡು ತ್ತಾನೆಯೋ ಅವನೇ **ತ್ಯಾಗೇನೈಕೇ ಅಮೃತತ್ವಮಾನಶುಃ** ಮುಂತಾದ ಶಾಸ್ತ್ರಗಳಲ್ಲಿ ತ್ಯಾಗೀ ಎಂದು ಕರೆಯಲ್ಪಡುತ್ತಾನೆ. ಫಲತ್ಯಾಗೀ ಎಂದರೆ ಫಲ, ಫಲದ ಕರ್ತೃತ್ವ ಮತ್ತು ಕರ್ಮಸಂಗ ಈ ಮೂರನ್ನೂ ತ್ಯಾಗಮಾಡಿದವನು. ಏಕೆಂದರೆ **ತ್ರಿವಿಧಃ ಸಮ್ಪ್ರಕೀರ್ತಿತಃ** ೧೮-೪ ಎಂದು ತ್ಯಾಗವನ್ನು ಪ್ರಾರಂಭಿಸಿದ ಪ್ರಕರಣದಲ್ಲಿ ಬಂದಿದೆ. (ರಾ. ಭಾ.)

ತ್ಯಾಗಶಬ್ದಕ್ಕೆ ಬೇರೆ ಅರ್ಥವು ಆಗುವುದಿಲ್ಲ–ಎಂದು ತಿಳಿಸಲು ಭಗವಂತನು ನ ಹಿ **ದೇಹಭೃತಾ** ಎಂಬ ಶ್ಲೋಕವನ್ನು ಹೇಳುತ್ತಾನೆ. (ತ್ಯಾಗಶಬ್ದಕ್ಕೆ ಸರ್ವಕರ್ಮಪರಿತ್ಯಾಗ ಎಂಬ ಅರ್ಥವು ಆಗುವುದಿಲ್ಲ.)

(ಮ. ಭಾ.)

**ಓಂ ಅನಿಷ್ಟಮಿಷ್ಟಂ ಮಿಶ್ರಂ ಚ ತ್ರಿವಿಧಂ ಕರ್ಮಣಃ ಫಲಮ್ ।**
**ಭವತ್ಯತ್ಯಾಗಿನಾಂ ಪ್ರೇತ್ಯ ನ ತು ಸಂನ್ಯಾಸಿನಾಂ ಕ್ವಚಿತ್ ॥೧೨॥**

ಅನಿಷ್ಟ, ಇಷ್ಟ, ಮಿಶ್ರ ಎಂಬ ಮೂರು ವಿಧವಾದ ಕರ್ಮಗಳ ಫಲಗಳೂ ಕರ್ಮವನ್ನು ಬಿಡಲಾರದವನಿಗೆ ಇಲ್ಲಿಂದ ಹೊರಟುಹೋದ ಮೇಲೆ (ಸತ್ತಮೇಲೆ) ಆಗುವುದು. ಆದರೆ ಸಂನ್ಯಾಸಿಗಳಿಗೆ (ಕರ್ಮಫಲತ್ಯಾಗಿಗಳಿಗೆ) ಎಂದಿಗೂ ಆಗುವುದಿಲ್ಲ.

* * *

(ನಾವು ಮಾಡಿದ ಕರ್ಮಕ್ಕೆ ಮೂರು ವಿಧವಾದ ಫಲಗಳು ಸಿಕ್ಕುತ್ತವೆ. ಅಥವಾ ನಾವು ಮೂರು ರೀತಿಯಾಗಿ ಕರ್ಮಗಳನ್ನು ಮಾಡುತ್ತೇವೆ. ಕೆಟ್ಟ ಕೆಲಸಗಳನ್ನೇ ಮಾಡುತ್ತಿರುವುದು ಅಥವಾ ಈ ಹಿಂದೆ ಹೇಳಿದಂತೆ ತಾಮಸರು ಮತ್ತು ಅಸುರರಿಗೆ ಉಕ್ತವಾಗಿರುವ ಕರ್ಮಗಳನ್ನೇ ಮಾಡುತ್ತಿರುವುದು. ಇದರಿಂದ ಉಂಟಾಗುವ ಫಲವು ಅನಿಷ್ಟಫಲ. ಇಷ್ಟವಲ್ಲದ್ದು ಅನಿಷ್ಟ. ಆದರೆ ಈ ಫಲವು ನಮಗೆ ಇಷ್ಟವೇ ಅಲ್ಲದಿದ್ದರೂ ಇದನ್ನು ದೂರೀಕರಿಸುವ ಸಾಧ್ಯತೆಯಿಲ್ಲ. ಯಾವಾಗಲೂ ಸತ್ಕರ್ಮಗಳನ್ನೇ ಮಾಡುತ್ತಿರುವುದು ; ಸಾತ್ವಿಕರಿಗೆ ಉಕ್ತವಾಗಿರುವ ಕರ್ಮಗಳಲ್ಲೇ ಪ್ರವೃತ್ತನಾಗಿರುವುದು–ಇದರಿಂದ ಲಭಿಸುವುದು ಇಷ್ಟವಾದ ಫಲ. ಮೂರನೆಯದೆಂದರೆ ಮಿಶ್ರಫಲ. ಒಳ್ಳೆಯದನ್ನೂ ಮಾಡುವುದು, ಕೆಟ್ಟದ್ದನ್ನೂ ಮಾಡುವುದು. ರಾಜಸಗುಣಕ್ಕೆ ತಕ್ಕುದಾದ ಕರ್ಮಗಳನ್ನು ಮಾಡುವುದು. ಕರ್ಮಗಳನ್ನು ವಿಧ್ಯುಕ್ತವಾಗಿ ಮಾಡಿದರೂ ದಾಂಭಿಕತೆಯಿಂದ ಮಾಡುವುದು–ಈ ವಿಧವಾದ ಕರ್ಮಗಳನ್ನು ಮಾಡುವುದರಿಂದ ಮಿಶ್ರವಾದ ಅರ್ಥಾತ್ ಇಷ್ಟವೂ ಅನಿಷ್ಟವೂ ಆದ ಫಲಗಳು ಸಿಕ್ಕುತ್ತವೆ. ಅತ್ಯಾಗಿಗಳಾದವರಿಗೆ ಈ ವಿಧವಾದ ಇಷ್ಟಾನಿಷ್ಟಮಿಶ್ರ ಫಲಗಳು ಸಿಕ್ಕುತ್ತವೆಂದು ಶ್ರೀಕೃಷ್ಣನು ಹೇಳುತ್ತಾನೆ. **ಭವತ್ಯತ್ಯಾಗಿನಾಂ** ಎಂದರೆ ತ್ಯಾಗಮಾಡದವರು. ಯಾವುದನ್ನು ಎಂದರೆ ಕರ್ಮಫಲವನ್ನು ತ್ಯಾಗಮಾಡದವರು. ಕರ್ಮಫಲವನ್ನು ತ್ಯಾಗಮಾಡದೇ ಕರ್ಮ ಮಾಡುವವರಿಗೆ ಈ ವಿಧವಾದ ಮೂರು ಫಲಗಳು ಪ್ರಾಪ್ತವಾಗುತ್ತವೆ. ಇಲ್ಲಿ ಕರ್ಮಫಲತ್ಯಾಗವೆಂಬುದು ಸತ್ಕರ್ಮಿಗಳಿಗೆ ಮಾತ್ರವೇ ಅನ್ವಯಿಸುತ್ತದೆ. ದುಷ್ಕರ್ಮಿಗಳಿಗೆ ಈ ಕರ್ಮಫಲತ್ಯಾಗವೆಂಬುದು ಅನ್ವಯಿಸುವುದಿಲ್ಲ. ಎಲ್ಲ ಕರ್ಮಫಲಗಳನ್ನೂ ಭಗವಂತನಿಗೇ ಅರ್ಪಿಸುವುದಾದರೆ

ಅವನದನ್ನು ಒಪ್ಪಿಕೊಂಡಾನು. ಆದರೆ ಕೇವಲ ಪಾಪಕರ್ಮಗಳನ್ನೇ ಮಾಡು ತ್ತಿದ್ದು ಆ ಕರ್ಮಫಲಗಳು ಪರಮಾತ್ಮನಿಗೆ ಅರ್ಪಿತವಾಗಲೆಂದರೆ ಅವನದನ್ನು ಒಪ್ಪಿಕೊಳ್ಳುವುದಿಲ್ಲ. ತನ್ನ ದುಷ್ಕರ್ಮದ ಫಲವನ್ನು ತಾನೇ ಅನುಭವಿಸ ಬೇಕಾಗುತ್ತದೆ. ತನ್ನ ಸ್ವಾರ್ಥ, ಇತರರನ್ನು ಮೆಚ್ಚಿಸುವಿಕೆ–ಮುಂತಾದ ಪ್ರಯೋಜನಕ್ಕೋಸ್ಕರವೇ ದುಷ್ಕರ್ಮಗಳನ್ನು ಮಾಡುವುದು. ಅವುಗಳ ಫಲ ವನ್ನು ತ್ಯಾಗಮಾಡಲು ಆಗುವುದೇ ಇಲ್ಲ. ಇಷ್ಟೇ ಅಲ್ಲದೇ ಅದನ್ನು ಇವರ ನೆಚ್ಚಿನವರಾದ ಇತರರೂ ನಿರಾಕರಿಸುತ್ತಾರೆ. ಮೇಲಾಗಿ ದುಷ್ಕರ್ಮಮಾಡುವ ವನಿಗೆ ಪರಮಾತ್ಮನನ್ನು ನೆನೆಯುವ ಸಾಧ್ಯತೆಯೂ ಇಲ್ಲ. ಆದುದರಿಂದ ತ್ಯಾಗ ಎಂದರೆ ಸತ್ಕರ್ಮಫಲತ್ಯಾಗ ಎಂದು ಇಟ್ಟುಕೊಳ್ಳಬೇಕೇ ಹೊರತು ದುಷ್ಕರ್ಮಫಲತ್ಯಾಗ ಎಂದು ಅರ್ಥಮಾಡಬಾರದು. ದುಷ್ಕರ್ಮಗಳನ್ನು ಮಾಡುತ್ತಾ ಎಲ್ಲವೂ ಪರಮಾತ್ಮನೇ ಮಾಡಿಸಿದ್ದು ; ಎಲ್ಲವೂ ಅವನಿಗೇ ಸಮರ್ಪಿತ–ಎಂದು ಹೇಳುವುದು ನಮಗೆ ನಾವೇ ಮಾಡಿಕೊಳ್ಳುವ ಮೋಸ. ಇಂತಹವರ ಸತ್ತ್ವಪರೀಕ್ಷೆಯನ್ನು ಪರಮಾತ್ಮನು ಮಾಡಿದ ಅನೇಕ ಕಥೆಗಳೂ ಇವೆ. ಒಬ್ಬನು ಇತರರ ತಲೆಯೊಡೆದು ಸಂಸಾರನಿರ್ವಹಣೆಯನ್ನು ಮಾಡುತ್ತಿ ದ್ದನು. ಒಮ್ಮೆ ಒಬ್ಬ ಸಾಧುವೂ ಸಹ ಇವನಿಗೆ ಬಲಿಯಾಗಿ ಸಿಕ್ಕಿದನು. ಆ ಸಮಯದಲ್ಲಿ ಸಾಧುವು ಕೇಳಿದನು–'ಏತಕ್ಕೋಸ್ಕರ ನೀನು ಈ ಪಾಪಕಾರ್ಯ ವನ್ನು ಮಾಡುತ್ತಿರುವೆ?' 'ಸಂಸಾರನಿರ್ವಹಣೆಗಾಗಿ ; ಹೆಂಡತಿ-ಮಕ್ಕಳನ್ನು ಸಾಕಲು'–ಎಂದು ದರೋಡೆಕಾರನು ಉತ್ತರಕೊಟ್ಟನು. 'ನೀನು ಮತ್ತೊಬ್ಬರ ತಲೆಯೊಡೆದು ಸಂಪಾದಿಸಿದ ಹಣದಿಂದ ನಿನ್ನ ಹೆಂಡತಿ-ಮಕ್ಕಳು ಬೇಕು-ಬೇಕಾದ ಭಕ್ಷ್ಯ-ಭೋಜ್ಯಾದಿಗಳನ್ನು ಮಾಡಿಕೊಂಡು ಸುಖಪಡುತ್ತಿರುವು ದೇನೋ ನಿಜ. ಆದರೆ ನೀನು ಸಂಪಾದಿಸಿದ ಈ ಹಣದಿಂದ ಅವರು ಸುಖ ಪಡುತ್ತಿರುವಂತೆ ಈ ಹಣದ ಜೊತೆಯಲ್ಲೇ ನೀನು ಸಂಪಾದಿಸುತ್ತಿರುವ ಪಾಪವನ್ನೂ ಅವರು ಉಪಭುಂಜಿಸಲು ಸಿದ್ಧರಾಗಿದ್ದಾರೆಯೇ?'–ಎಂದು ಸಾಧುವು ಪ್ರಶ್ನಿಸಿದನು. ದರೋಡೆಕಾರನಿಗೆ ಆ ವಿಷಯವು ಅಷ್ಟಾಗಿ ಹೊಳೆ ದಿರಲಿಲ್ಲ. ತನ್ನ ಪಾಪವನ್ನು ಅವರೂ ಹಂಚಿಕೊಂಡಾರೆಂಬುದೇ ಅವನ ಭಾವನೆಯಾಗಿತ್ತು. ಸಂಶಯವನ್ನು ಪರಿಹರಿಸಿಕೊಳ್ಳಲು ಒಡನೆಯೇ ಮನೆಗೆ ಹೋಗಿ ಪತ್ನಿಯನ್ನು ಪ್ರಶ್ನಿಸಿದನು : 'ನನ್ನ ಪಾಪದಲ್ಲಿಯೂ ನೀನು ಭಾಗ

ತೆಗೆದುಕೊಳ್ಳುವೆಯಲ್ಲವೇ?' ಒಡನೆಯೇ ಪತ್ನಿಯಿಂದ ಉತ್ತರ ಬಂದಿತು : 'ನಿನ್ನ ಪಾಪದಲ್ಲಿ ನಾನೇಕೆ ಭಾಗತೆಗೆದುಕೊಳ್ಳಲಿ? ಸಂಸಾರನಿರ್ವಹಣೆಯು ನಿನ್ನ ಕರ್ತವ್ಯ. ಒಳ್ಳೆಯ ಮಾರ್ಗದಿಂದಲೇ ಸಂಸಾರವನ್ನು ನಿರ್ವಹಿಸಬಹುದಾಗಿತ್ತು. ನೀನು ದುಷ್ಟಮಾರ್ಗವನ್ನು ಹಿಡಿದೆ. ಅದರ ಫಲವನ್ನು ನೀನೇ ಅನುಭವಿಸಬೇಕು'–ಎಂದು ಸ್ಪಷ್ಟವಾಗಿ ಹೇಳಿದಳು.

ಒಡನೆಯೇ ಅವನಿಗೆ ಜ್ಞಾನೋದಯವಾಯಿತು.

ಕೆಟ್ಟ ಕೆಲಸದ ಫಲವನ್ನು ಹೆಂಡತಿಯೇ ಹಂಚಿಕೊಳ್ಳದಿದ್ದಾಗ ದೇವರಿಗೆ ಸಮರ್ಪಿಸುವುದಾದರೂ ಹೇಗೆ ಸಾಧ್ಯ?

ಆದುದರಿಂದ ದುಷ್ಕರ್ಮದ ಫಲಕ್ಕೆ ತ್ಯಾಗವಿಲ್ಲ. ಅದರ ಫಲವನ್ನು ಅನುಭವಿಸಿಯೇ ತೀರಬೇಕಾಗುತ್ತದೆ. ಸತ್ಕರ್ಮ ಮತ್ತು ಮಿಶ್ರಕರ್ಮಗಳಲ್ಲಿ ಸತ್ಕರ್ಮದ ಫಲಕ್ಕೆ ತ್ಯಾಗವೆಂಬುದಿದೆ. ಯಾವಾಗಲೂ ಸತ್ಕರ್ಮದ ಆಚರಣೆಯಲ್ಲೇ ಇರತಕ್ಕವನು ಸತ್ಕರ್ಮದ ಫಲವನ್ನು ತ್ಯಾಗಮಾಡುತ್ತಾ ಬಂದರೆ ಆವೃತ್ತಿರಹಿತನಾಗುತ್ತಾನೆ. ಹುರಿದ ಬೀಜದಂತೆ ಅವನ ಸತ್ಕರ್ಮಗಳು ಫಲ ಕೊಡುವುದಿಲ್ಲವಾಗಿ ಅವನಿಗೆ ಜನ್ಮಾಂತರಗಳಿರುವುದಿಲ್ಲ. ಇಂತಹವನು ಯಾರಿಗೆ ತನ್ನ ಕರ್ಮಫಲಗಳೆಲ್ಲವನ್ನೂ ಅಂತಃಕರಣಪೂರ್ವಕವಾಗಿ ಅರ್ಪಿಸುತ್ತಿರುತ್ತಾನೆಯೋ–ಅವನಲ್ಲೇ ಇವನು ಸೇರಿಹೋಗುತ್ತಾನೆ. ಸತ್ಕರ್ಮಿಯು ಅಥವಾ ಸರ್ವಕರ್ಮಫಲತ್ಯಾಗಿಯು ಮಿಶ್ರಕರ್ಮಗಳನ್ನಾಗಲೀ ದುಷ್ಟಕರ್ಮಗಳನ್ನಾಗಲೀ ಮಾಡುವುದಿಲ್ಲ.

ಒಂದು ವೇಳೆ ಕಾರಣಾಂತರಗಳಿಂದ ತಿಳಿಯದೆಯೋ, ಅನಿವಾರ್ಯವಾಗಿಯೋ ದುಷ್ಕರ್ಮವನ್ನು ಮಾಡಬೇಕಾದ ಸಂದರ್ಭವೂ ಒಬ್ಬನಿಗೆ ಬರಬಹುದು. ಅಂತಹವನು ಮಿಶ್ರಕರ್ಮಿಯಾಗುತ್ತಾನೆ. ಸತ್ಕರ್ಮಫಲತ್ಯಾಗದಿಂದಾಗಿ ಅವನಿಗೆ ದುಷ್ಕರ್ಮಫಲವು ಮಾತ್ರವೇ ಉಳಿಯುವುದೆಂದು ಭಯಪಡಬೇಕಾಗಿಲ್ಲ. ಕರ್ಮಫಲತ್ಯಾಗಕ್ಕೂ ಒಂದು ಮಹತ್ತರವಾದ ಫಲವೇ ಇದೆ. ಇದನ್ನು ನಾವು ಯಯಾತಿ ಮತ್ತು ಅವನ ದೌಹಿತ್ರರಾದ ಅಷ್ಟಕಾದಿಗಳ ಕಥೆಯಲ್ಲಿ ಕಾಣಬಹುದಾಗಿದೆ. ಇವಿಷ್ಟೂ ಕರ್ಮಫಲತ್ಯಾಗದ ವಿಷಯವಾಯಿತು. ಅತ್ಯಾಗಿಗಳ ವಿಷಯವು ಯಾವುದೇ ವಿಧವಾದ ಕರ್ಮಗಳ ಫಲ

ಗಳನ್ನೂ ತ್ಯಾಗಮಾಡದೇ ಇರುವವರ ವಿಷಯ. ದೇಹವೇ ಆತ್ಮವೆಂದು ಭಾವಿಸಿ ಕರ್ಮಮಾಡುವವರ ವಿಷಯ. ಇವರಿಗೆ ಅನಿಷ್ಟ, ಇಷ್ಟ ಮತ್ತು ಮಿಶ್ರಫಲಗಳು, ತಮ್ಮ-ತಮ್ಮ ಕರ್ಮಾನುಸಾರವಾಗಿ ಸಿಕ್ಕುತ್ತವೆ. ಇವರ ಕರ್ಮ ಮತ್ತು ಅದಕ್ಕೆ ತಕ್ಕುದಾದ ಫಲವನ್ನೇ ನಿರ್ಧರಿಸುವುದು ಈಗಲ್ಲ ; ಸತ್ತನಂತರ. ಸತ್ತನಂತರ ಇವನು ಮಾಡಿದ ಕರ್ಮಗಳ ಲೆಕ್ಕಾಚಾರವನ್ನು ಹಾಕಲಾಗುತ್ತದೆ. ಸತ್ಕರ್ಮಿಗೆ ಇಷ್ಟವಾದ ಫಲ. ಇಷ್ಟ ಎಂದರೆ ದೇಹವೇ ಆತ್ಮವೆಂದು ಭಾವಿಸಿ ಕರ್ಮಮಾಡಿರುವವನ ವಿಷಯದಲ್ಲಿ ಸ್ವರ್ಗಲೋಕ, ಅಪ್ಸರೆಯರು, ಕಲ್ಪವೃಕ್ಷ, ಕಾಮಧೇನು ಇತ್ಯಾದಿಗಳ ಪ್ರಾಪ್ತಿಯೇ ಆಗುತ್ತದೆ. ಇಂತಹ ಸುಖವೇ ಅವನಿಗೆ ಇಷ್ಟವಾಗುತ್ತದೆ. ಅನಂತರ ಸತ್ಕುಲಪ್ರಸೂತಿ, ಶ್ರೀಮಂತರ ಮನೆಯಲ್ಲಿ ಹುಟ್ಟುವಿಕೆ–ಇವು ಸತ್ಕರ್ಮಗಳನ್ನು ಮಾಡಿದವನಿಗೆ ಲಭಿಸುತ್ತವೆ. ಅನಿಷ್ಟಫಲ ಎಂದರೆ ನರಕಾದಿಗಳು, ಅನಂತರ ತಿರ್ಯಗ್ಯೋನಿಗಳಲ್ಲಿ ಜನನ–ಇವುಗಳು ಯಾರಿಗೂ ಇಷ್ಟವೆನಿಸವು. ಆದುದರಿಂದಲೇ ಇವುಗಳು ಅನಿಷ್ಟವಾದುವುಗಳು. ಮಿಶ್ರಫಲವೆಂದರೆ ಸ್ವಲ್ಪಸಮಯ ನರಕದಲ್ಲೂ ವಾಸ ; ಅನಂತರ ಮನುಷ್ಯಲೋಕದಲ್ಲಿ ಜನನ. ಮನುಷ್ಯನಾಗಿ ಹುಟ್ಟುವುದನ್ನು ಮಿಶ್ರಫಲವೆಂದು ಹೇಳುತ್ತಾರೆ. ಮನುಷ್ಯನಾಗಿ ಹುಟ್ಟಿ ಸುಖ-ದುಃಖಗಳೆರಡನ್ನೂ ಸಮವಾಗಿ ಅನುಭವಿಸುವುದಕ್ಕೆ ಮಿಶ್ರಫಲವೆಂದು ಹೇಳುತ್ತಾರೆ. ದಾರಿದ್ರ್ಯವೇ ಮುಂತಾದುವುಗಳೂ ಕೂಡ ಅನಿಷ್ಟಫಲಗಳೇ ಆಗಿವೆ.

**ನ ತು ಸಂನ್ಯಾಸಿನಾಂ ಕ್ವಚಿತ್** = ಇಲ್ಲಿ ಸಂನ್ಯಾಸಿಗಳು ಎಂದರೆ ಸರ್ವಕರ್ಮತ್ಯಾಗಿಗಳು ಎಂಬ ಅರ್ಥವಲ್ಲ. ಸರ್ವಕರ್ಮಫಲತ್ಯಾಗಿಗಳು ಎಂದರ್ಥ. **ಅತ್ಯಾಗಿನಾಂ**–ಕರ್ಮಫಲತ್ಯಾಗಿಗಳಲ್ಲದವರಿಗೆ ಇಷ್ಟಾನಿಷ್ಟಮಿಶ್ರ ಫಲಗಳು ಉಂಟಾಗುವುವು ಎಂದು ಹೇಳಿರುವುದರಿಂದ **ಸಂನ್ಯಾಸಿನಾಂ** ಎಂಬುದಕ್ಕೆ **ತ್ಯಾಗಿನಾಂ** ಅರ್ಥಾತ್ **ಕರ್ಮಫಲತ್ಯಾಗಿನಾಂ**–ಕರ್ಮಫಲಗಳನ್ನು ತ್ಯಾಗಮಾಡಿದವರಿಗೆ ಎಂದೇ ಅರ್ಥ. ಸರ್ವಕರ್ಮಗಳ ಫಲವನ್ನೂ ತ್ಯಾಗಮಾಡಿದ ತ್ಯಾಗಿಗಳಿಗೆ ಅರ್ಥಾತ್ ಸಂನ್ಯಾಸಿಗಳಿಗೆ ಮರಣಾನಂತರ ದಲ್ಲೂ ಇಷ್ಟಾನಿಷ್ಟಮಿಶ್ರಫಲಗಳಾವುವೂ ಇರುವುದಿಲ್ಲ. **ನ ಹಿ ದೇಹಭೃತಾ**

**ಶಕ್ಯಂ ತ್ಯಕ್ತುಂ ಕರ್ಮಾಣ್ಯಶೇಷತಃ**–ಎಂದು ಈ ಹಿಂದಿನ ಶ್ಲೋಕದಲ್ಲಿಯೂ **ನ ಹಿ ಕಶ್ಚಿತ್ಕ್ಷಣಮಪಿ ಜಾತು ತಿಷ್ಠತ್ಯಕರ್ಮಕೃತ್** ಎಂದು ಮೂರನೆಯ ಅಧ್ಯಾಯದಲ್ಲೂ ಶ್ರೀಕೃಷ್ಣನು ಹೇಳಿ, ಕರ್ಮಮಾಡದೇ ಯಾವನೊಬ್ಬನೂ ಇರಲು ಸಾಧ್ಯವಾಗದೆಂದು ದೃಢಪಡಿಸಿದ್ದಾನೆ. ಆದುದರಿಂದ ಇಲ್ಲಿ ಸಂನ್ಯಾಸಿನಾಂ ಎಂದರೆ ಕರ್ಮಫಲತ್ಯಾಗಮಾಡಿದ ತ್ಯಾಗಿಗಳು ಎಂದು ಅರ್ಥಮಾಡುವುದೇ ಸಮಂಜಸವಾಗಿ ಕಾಣುತ್ತದೆ.)

o o o

ಸರ್ವಕರ್ಮಪರಿತ್ಯಾಗದಿಂದ ಉಂಟಾಗುವ ಫಲವಾದರೂ ಏನು? ಎಂಬುದನ್ನು ಇಲ್ಲಿ ಭಗವಂತನು ಹೇಳುತ್ತಾನೆ. ತ್ಯಾಗಿಗಳಲ್ಲದವರಿಗೆ, ಎಂದರೆ ಕರ್ಮಿಗಳಾದ ಅಜ್ಞಾನಿಗಳಿಗೆ ಶರೀರಪಾತವಾದನಂತರ ಅನಿಷ್ಟವಾದ ನರಕ, ಪಶು-ಪಕ್ಷಿಗಳ ಯೋನಿ ಮುಂತಾದ ಅನಿಷ್ಟಫಲ, ದೇವಯೋನಿ ಮುಂತಾದ ಇಷ್ಟವಾದ ಫಲ ಮತ್ತು ಎರಡೂ ಬೆರಕೆಯಾಗಿರುವ ಮನುಷ್ಯಯೋನಿ ಎಂದು ಪುಣ್ಯ-ಪಾಪರೂಪವಾದ ಕರ್ಮಗಳಿಗೆ ಮೂರು ಬಗೆಯ ಫಲ ವುಂಟಾಗುತ್ತದೆ. ಫಲ ಎಂದರೆ ಯಾವ ಪದಾರ್ಥವು ಹೊರಗಿನ ಕರ್ತೃ, ಕರ್ಮ, ಕ್ರಿಯೆ–ಮುಂತಾದ ಅನೇಕ ಕಾರಣಗಳಿಂದ ಸಿದ್ಧವಾಗುತ್ತದೆಯೋ, ಅವಿದ್ಯೆಯಿಂದುಂಟಾಗಿ ಇಂದ್ರಜಾಲದ ಮಾಯೆಯಂತೆ ಮಹಾಮೋಹಕ ವಾಗುತ್ತದೆಯೋ, ಜೀವಾತ್ಮನನ್ನು ಆಶ್ರಯಿಸಿರುವಂತೆ ಕಂಡುಬರುತ್ತದೆಯೋ ಮತ್ತು ಸಾರರಹಿತವಾಗಿರುವುದರಿಂದ ತತ್ಕಾಲದಲ್ಲೇ ನಷ್ಟವಾಗಿ ಬಿಡು ತ್ತದೆಯೋ ಅದು. ಅಂತಹ ಫಲವು ಪರಮಾರ್ಥಸಂನ್ಯಾಸಮಾಡದೇ ಇರುವ ಅಜ್ಞಾನಿಗಳಾದ ಕರ್ಮಿಗಳಿಗೆ ಉಂಟಾಗುತ್ತದೆಯೇ ಹೊರತು ಕೇವಲ ಜ್ಞಾನ ನಿಷ್ಠರಾಗಿರುವ ಪರಮಾರ್ಥಸಂನ್ಯಾಸಿಗಳಿಗೆ (ಪರಮಹಂಸಪರಿವ್ರಾಜಕರಿಗೆ) ಎಂದಿಗೂ ಉಂಟಾಗುವುದಿಲ್ಲ. ಏಕೆಂದರೆ ಅವರು ಸಂಸಾರದ ಬೀಜರೂಪ ವಾದ ಅವಿದ್ಯೆಯೇ ಮುಂತಾದ ದೋಷಗಳನ್ನು ಎಂದಿಗೂ ನಿರ್ಮೂಲ ಮಾಡದೇ ಇರುವುದಿಲ್ಲ. (ಶಂ. ಭಾ.)

ಅಗ್ನಿಹೋತ್ರ, ದರ್ಶಪೂರ್ಣಮಾಸಗಳನ್ನೂ, ಜ್ಯೋತಿಷ್ಟೋಮ ಮುಂತಾದುವುಗಳನ್ನೂ ಮತ್ತು ಮಹಾಯಜ್ಞಗಳೇ ಮುಂತಾದುವುಗಳನ್ನೂ– ಸ್ವರ್ಗವೇ ಮುಂತಾದ ಫಲಗಳಿಗೆ ಸಂಬಂಧಪಟ್ಟವುಗಳೆಂದು ಶಾಸ್ತ್ರಗಳು ವಿಧಿ

ಸುತ್ತವೆ. ನಿತ್ಯ-ನೈಮಿತ್ತಿಕಕರ್ಮಗಳೂ ಕೂಡ **'ಪ್ರಾಜಾಪತ್ಯಂ ಗೃಹಸ್ಥಾನಾಂ'** ೨-೧-೬-೩೮ ಮುಂತಾದ ವಾಕ್ಯಗಳು ಹೇಳುವಂತೆ ಫಲಸಂಬಂಧ ವುಳ್ಳವುಗಳೆಂದೇ ಹೇಳಲ್ಪಟ್ಟಿವೆ. ಆದುದರಿಂದ ಅವುಗಳಿಗೆ ಫಲವನ್ನುಂಟು ಮಾಡುವುದು ಸ್ವಭಾವವೇ ಆಗಿದೆ ಎಂದು ತಿಳಿದುಬರುತ್ತದೆ. ಬೀಜವನ್ನು ಬಿತ್ತಿದ ಬಳಿಕ ಫಲವನ್ನು ಬಯಸಲಿ, ಬಯಸದೇ ಇರಲಿ–ಅದು ಉಂಟಾಗಿಯೇ ಆಗುತ್ತದೆ. ಹಾಗೆಯೇ ಮೇಲೆ ಹೇಳಿದ ಕರ್ಮಗಳನ್ನು ಫಲದ ಬಯಕೆಯಿಲ್ಲದೇ ಮಾಡಿದರೂ ಕೂಡ ಫಲವು ಸಿಕ್ಕಿಯೇ ಸಿಕ್ಕಬೇಕಲ್ಲವೇ? ಹೀಗೆ ಮೋಕ್ಷಕ್ಕೆ ವಿರೋಧಿಯಾದ ಫಲವನ್ನು ಕೊಡುವುದರಿಂದ ಮುಮುಕ್ಷುವು ಕರ್ಮವನ್ನು ಮಾಡಬಾರದು ಎಂಬ ಆಶಂಕೆ ಬಂದರೆ ಅದಕ್ಕೆ ಭಗವಂತನು ಇಲ್ಲಿ ಉತ್ತರವನ್ನು ಕೊಡುತ್ತಾನೆ.

ಅನಿಷ್ಟ–ನರಕಾದಿಗಳು, ಇಷ್ಟ–ಸ್ವರ್ಗಾದಿಗಳು, ಮಿಶ್ರ–ಅನಿಷ್ಟದಿಂದ ಬೆರೆತಿರುವ ಪುತ್ರ, ಪಶು, ಅನ್ನ ಮುಂತಾದುವುಗಳು ; ಈ ಮುಬ್ಬಗೆಯ ಫಲಗಳು ಅತ್ಯಾಗಿಗಳಿಗೆ ಎಂದರೆ ಕರ್ತೃತ್ವ, ಮಮತೆ ಮತ್ತು ಫಲಗಳನ್ನು ತ್ಯಾಗಮಾಡದವರಿಗೆ ಕರ್ಮಾನುಷ್ಠಾನಾನಂತರಕಾಲದಲ್ಲಿ ಉಂಟಾಗುತ್ತವೆ. (ಪ್ರೇತ್ಯ ) ಕರ್ಮಾನುಷ್ಠಾನಾನಂತರಕಾಲದಲ್ಲಿ ಕರ್ತೃತ್ವ ಮುಂತಾದುವನ್ನು ಪರಿತ್ಯಾಗಮಾಡಿದ ಸಂನ್ಯಾಸಿಗಳಿಗೆ ಎಲ್ಲಿಯೂ ಮೋಕ್ಷವಿರೋಧಿಯಾದ ಫಲವು ಉಂಟಾಗುವುದಿಲ್ಲ.

ಅಭಿಪ್ರಾಯವೇನೆಂದರೆ : ಅಗ್ನಿಹೋತ್ರ, ಮಹಾಯಜ್ಞ ಮುಂತಾದುವು ಗಳನ್ನು ಫಲಾಭಿಸಂಧಿಯುಳ್ಳವರು, ಇಲ್ಲದವರು ಇಬ್ಬರೂ ಮಾಡುತ್ತಾರೆ. ಆದರೂ ಜೀವನಾಧಿಕಾರ ಮತ್ತು ಕಾಮಾಧಿಕಾರಗಳಲ್ಲಿ ಇರುವಂತೆ ಮೋಕ್ಷಾಧಿಕಾರದಲ್ಲಿಯೂ ಕೂಡ ಅದಕ್ಕೆ ಪ್ರತ್ಯೇಕವಾದ ವಿನಿಯೋಗವುಂಟು. ಅವುಗಳಿಗೆ (ಯಜ್ಞ-ದಾನ-ತಪಸ್ಸುಗಳಿಗೆ) ಮೋಕ್ಷದಲ್ಲಿ ವಿನಿಯೋಗ ವುಂಟೆಂದು ಬೃಹದಾರಣ್ಯಕವೇ ಮುಂತಾದ ಶ್ರುತಿಗಳು ಹೇಳುತ್ತವೆ. **ತಮೇತಂ ವೇದಾನುವಚನೇನ ಬ್ರಾಹ್ಮಣಾ ವಿವಿದಿಷನ್ತಿ ಯಜ್ಞೇನ ದಾನೇನ ತಪಸಾನಾಶಕೇನ** ಬೃ. ೬-೪-೨೨

ಆದುದರಿಂದ ಕರ್ಮಗಳನ್ನು ಮಾಡುತ್ತಲೇ ಕರ್ತೃತ್ವ ಮುಂತಾದುವು

ಗಳನ್ನು ತ್ಯಾಗಮಾಡುವುದೇ ಶಾಸ್ತ್ರಸಂನ್ಯಾಸ (ಶಾಸ್ತ್ರೋಕ್ತಸಂನ್ಯಾಸ). ತ್ಯಾಗ ಎಂದು ಕರೆಯಲ್ಪಟ್ಟಿರುವುದೂ ಅದೇ. (ರಾ. ಭಾ.)

ಈ ಶ್ಲೋಕದಲ್ಲಿ ಭಗವಂತನು ತ್ಯಾಗವನ್ನು ಸ್ತುತಿಸುತ್ತಾನೆ.

ಕರ್ಮಫಲಾಭಾವ ಎಂದರೆ ಸಂಸಾರದ ನಿವೃತ್ತಿಯೇ ಆಗಿದೆ. ಅದು ತ್ಯಾಗದ ಫಲವೆಂದು ಏಕೆ ಹೇಳಲ್ಪಡುತ್ತದೆ? ಎಂದರೆ–ಇದು ತ್ಯಾಗದ ಸ್ತುತಿ. **ತ್ಯಾಗಾಚ್ಛಾನ್ತಿರನನ್ತರಮ್**–ಎಂಬಲ್ಲಿ ಇದಕ್ಕೆ ಉಪಪತ್ತಿಯನ್ನು ಹೇಳಿದ್ದೇವೆ. (ಮ. ಭಾ.)

**ಓಂ ಪಞ್ಚೈತಾನಿ ಮಹಾಬಾಹೋ ಕಾರಣಾನಿ ನಿಬೋಧ ಮೇ ।**
**ಸಾಂಖ್ಯೇ ಕೃತಾನ್ತೇ ಪ್ರೋಕ್ತಾನಿ ಸಿದ್ಧಯೇ ಸರ್ವಕರ್ಮಣಾಮ್ ॥**

ಮಹಾಬಾಹುವೇ! ಎಲ್ಲ ಕರ್ಮಗಳೂ ಸಿದ್ಧಿಸುವುದಕ್ಕೆ ಈ ಐದು ಕಾರಣಗಳೆಂದು ಸಾಂಖ್ಯಸಿದ್ಧಾಂತದಲ್ಲಿ ಹೇಳಲ್ಪಟ್ಟಿದೆ. ಅವನ್ನು ನನ್ನಿಂದ ತಿಳಿ.

* * *

(**ಸರ್ವಕರ್ಮಣಾಂ ಸಿದ್ಧಯೇ** = ಸರ್ವಕರ್ಮಗಳ ಸಿದ್ಧಿಗೂ : ಸರ್ವಕರ್ಮಗಳು ಎಂದರೆ ನಿತ್ಯ-ನೈಮಿತ್ತಿಕ-ಕಾಮ್ಯ-ನಿಷಿದ್ಧಕರ್ಮಗಳು. ಇವುಗಳ ಸಿದ್ಧಿ ಎಂದರೆ ಈ ಎಲ್ಲ ಕರ್ಮಗಳನ್ನೂ ಮಾಡಿ ಮುಗಿಸುವುದು. ಇದಕ್ಕೆ ಐದು ಕಾರಣಗಳಿವೆ. ಐದು ಕಾರಣಗಳು ಸೇರಿದರೆ ಒಂದು ಕಾರ್ಯ ವಾಗುತ್ತದೆ. ಯದ್ಯಪಿ ಈ ಐದೂ ಕಾರಣಗಳು ಸೇರದಿದ್ದರೆ ಒಂದು ಕಾರ್ಯ ವಾಗುವುದಿಲ್ಲವೆಂಬುದು ನಿಜವಾದರೂ ನಾವು ಈ ಐದು ಕಾರಣಗಳನ್ನು ತಿಳಿದುಕೊಂಡಿರುವುದಿಲ್ಲ. ಕಾರ್ಯ-ಕಾರಣಗಳ ವಿಷಯವನ್ನು ಕೂಲಂಕಷ ವಾಗಿ ವಿಮರ್ಶಿಸಿ ಸಿದ್ಧಪಡಿಸಿರುವ ಶಾಸ್ತ್ರವೇ ಸಾಂಖ್ಯಶಾಸ್ತ್ರ ; ಅಥವಾ ಪರಮಾತ್ಮನನ್ನು ಚೆನ್ನಾಗಿ ತಿಳಿಸುವ ಶಾಸ್ತ್ರವಾಗಿರುವ ವೇದಾಂತವನ್ನೂ ಸಾಂಖ್ಯ ಎಂದು ಕರೆಯಬಹುದು. ತತ್ತ್ವಗಳನ್ನು ನಿರ್ಣಯಿಸಿ ಹೇಳುವ ಶಾಸ್ತ್ರ. ಈ ಶಾಸ್ತ್ರವನ್ನು ರಚಿಸಿರುವವರು ಕಾಪಿಲರೆಂಬ ಋಷಿಗಳು. **ಸಮ್ಯಕ್ ಖ್ಯಾಯತೇ = ಜ್ಞಾಯತೇ ಪರಮಾತ್ಮಾ ಅನೇನ ಇತಿ ಸಾಂಖ್ಯಂ, ಅರ್ಥಾತ್ ತತ್ತ್ವಜ್ಞಾನಂ ।**

**ಕೃತಾನ್ತ** = ಎಂದರೆ ಸಿದ್ಧಾಂತ ಅಥವಾ ನಿರ್ಣಯ ಎಂದಾಗುತ್ತದೆ. **ಸಾಂಖ್ಯೇ ಕೃತಾನ್ತೇ** ಎಂದರೆ ಜ್ಞಾನಶಾಸ್ತ್ರದ ನಿರ್ಣಯದಂತೆ.)

o o o

ಆದುದರಿಂದ ಪರಮಾರ್ಥದರ್ಶಿಯಾದ ಆತ್ಮಜ್ಞಾನಿಗೆ ಮಾತ್ರವೇ ಸಂಪೂರ್ಣವಾಗಿ ಕರ್ಮಗಳನ್ನು ತ್ಯಾಗಮಾಡಲು ಸಾಧ್ಯ. ಅಧಿಷ್ಠಾನವಾದ ಶರೀರ, ಕರ್ತೃ, ಕ್ರಿಯೆ–ಮುಂತಾದ ಕಾರಕಗಳನ್ನು ಆತ್ಮಭಾವದಿಂದ ನೋಡುವ ಅಜ್ಞಾನಿಯು ಸಂಪೂರ್ಣವಾಗಿ ಕರ್ಮಗಳನ್ನು ತ್ಯಾಗಮಾಡಲಾರನು.

ನಾನು ಮುಂದೆ ಹೇಳುವ ಐದು ಕಾರಣಗಳನ್ನು ಎಂದರೆ ಕರ್ಮದ ಸಾಧನಗಳನ್ನು ನನ್ನಿಂದ ತಿಳಿ.

ಮುಂದಿನ ಉಪದೇಶದಲ್ಲಿ ಅರ್ಜುನನ ಚಿತ್ತವನ್ನು ನೆಲೆಗೊಳಿಸುವುದಕ್ಕೋಸ್ಕರ ಮತ್ತು ಅಧಿಷ್ಠಾನ ಮುಂತಾದುವುಗಳ ಜ್ಞಾನವು ಅತ್ಯಂತಕಠಿನ–ಎಂಬುದನ್ನು ತೋರಿಸುವುದಕ್ಕೋಸ್ಕರ ಆ ಕಾರಣಗಳನ್ನು ತಿಳಿಯಲು ಯೋಗ್ಯವಾದುವು ಎಂದು ಹೇಳಿ ಅವುಗಳನ್ನು ಸ್ತುತಿಸುತ್ತಾನೆ.

ಸಾಂಖ್ಯ ಎಂದರೆ ವೇದಾಂತ. ತಿಳಿಯಬೇಕಾಗಿರುವ ಪದಾರ್ಥಗಳನ್ನು ಲೆಕ್ಕಿಸುವ ಶಾಸ್ತ್ರ. **ಜ್ಞಾತವ್ಯಾಃ ಪದಾರ್ಥಾಃ ಸಂಖ್ಯಾಯನ್ತೇ ಯಸ್ಮಿನ್ ಶಾಸ್ತ್ರೇ. ಕೃತಾನ್ತೇ ಇತಿ ಸಾಂಖ್ಯಂ** ಎಂಬುದು ಅದಕ್ಕೆ ವಿಶೇಷಣ. ಕೃತ ಎಂದರೆ ಕರ್ಮ; ಅದರ ಅಂತವು ಎಲ್ಲಿ ಆಗುತ್ತದೆಯೋ ಎಂದರೆ ಯಾವುದರಲ್ಲಿ ಕರ್ಮಗಳು ಸಮಾಪ್ತಿಹೊಂದುತ್ತವೆಯೋ ಅದು ಕೃತಾನ್ತ.

ಅಂತಹುದು ವೇದಾಂತ. ಆತ್ಮಜ್ಞಾನವುಂಟಾದ ಮೇಲೆ ಸಮಸ್ತಕರ್ಮಗಳೂ ನಿವೃತ್ತಿಹೊಂದುತ್ತವೆ ಎಂದು **ಯಾವಾನರ್ಥ ಉದಪಾನೇ** ಎಂಬ ಶ್ಲೋಕವು ಹೇಳುತ್ತದೆ. ಆದುದರಿಂದ ಆತ್ಮಜ್ಞಾನವನ್ನು ಕೊಡುವ ಸಾಂಖ್ಯ (ವೇದಾಂತ) ಶಾಸ್ತ್ರದಲ್ಲಿ ಎಲ್ಲ ಕರ್ಮಗಳೂ ಸಿದ್ಧಿಹೊಂದಲು ಸಾಧನವೆಂದು ಹೇಳಲ್ಪಟ್ಟಿರುವ ಐದು ಕಾರಣಗಳನ್ನೂ ನೀನು ತಿಳಿದುಕೊ. (ಶಂ. ಭಾ.)

ಅಂತರ್ಯಾಮಿಯಾಗಿರುವ ಭಗವಂತನಾದ ಪುರುಷೋತ್ತಮನಲ್ಲಿ

ಕರ್ತೃತ್ವವನ್ನು ಅನುಸಂಧಾನಮಾಡಿ ತಾನು ಅಕರ್ತಾ ಎಂದು ಅನುಸಂಧಾನ ಮಾಡುವ ಪ್ರಕಾರವನ್ನು ಈಗ ಹೇಳುತ್ತಾನೆ. ಅದರಿಂದಲೂ ಫಲ ಮತ್ತು ಕರ್ಮಗಳಲ್ಲಿಯೂ ಮಮತಾತ್ಯಾಗವುಂಟಾಗುತ್ತದೆ ಎಂಬ ಕಾರಣದಿಂದ ಪರಮಪುರುಷನೇ ತನ್ನವನಾಗಿರುವ ಜೀವಾತ್ಮನಿಂದ ತನ್ನವೇ ಆಗಿರುವ ಕರಣ-ಕಳೇಬರ ಮತ್ತು ಪ್ರಾಣಗಳಿಂದ ತನ್ನ ಲೀಲೆಯ ಪ್ರಯೋಜನಕ್ಕೋಸ್ಕರ ಕರ್ಮಗಳನ್ನು ಆರಂಭಿಸುತ್ತಾನೆ. ಆದುದರಿಂದ ಜೀವಾತ್ಮನಲ್ಲಿ ಉಂಟಾಗುವ ಹಸಿವು ಹೋಗುವಿಕೆ ಮುಂತಾದ ಫಲವೂ ಮತ್ತು ಅದಕ್ಕೆ ಸಾಧನವಾಗಿರುವ ಕರ್ಮವೂ ಪರಮಪುರುಷನದೇ. ಸಾಂಖ್ಯ ಎಂದರೆ ಬುದ್ಧಿ. **ಕೃತಾನ್ತ** ಎಂದರೆ ನಿರ್ಣಯ. **ಸಾಂಖ್ಯೇ ಕೃತಾನ್ತೇ** ಎಂದರೆ ಯಥಾರ್ಥವಾಗಿ ತತ್ತ್ವವನ್ನು ಹೇಳುವ ವೈದಿಕವಾದ ಬುದ್ಧಿಯಿಂದ ಅನುಸಂಧಾನಮಾಡಲ್ಪಟ್ಟ ನಿರ್ಣಯದಲ್ಲಿ. ಎಲ್ಲ ಕರ್ಮಗಳೂ ಉಂಟಾಗಬೇಕಾದರೆ ಯಾವ ಐದು ಕಾರಣಗಳು ಹೇಳಲ್ಪಟ್ಟಿವೆಯೋ ಅವುಗಳನ್ನು ನನ್ನಿಂದ ತಿಳಿದು ಅನುಸಂಧಾನಮಾಡು. ವೈದಿಕವಾದ ಬುದ್ಧಿಯು ಶರೀರ, ಇಂದ್ರಿಯ, ಪ್ರಾಣ ಮತ್ತು ಜೀವಾತ್ಮಗಳನ್ನು ಉಪಕರಣವನ್ನಾಗಿ ಹೊಂದಿರುವ ಪರಮಾತ್ಮನನ್ನೇ ಕರ್ತೃವೆಂದು ನಿಶ್ಚಯಿಸುತ್ತದೆ :

**ಯ ಆತ್ಮನಿ ತಿಷ್ಠನ್ ಆತ್ಮನೋಽನ್ತರೋಽಯಮಾತ್ಮಾ ನ ವೇದ ಯಸ್ಯಾತ್ಮಾ ಶರೀರಮ್ । ಯ ಆತ್ಮಾನಮನ್ತರೋ ಯಮಯತ್ಯೇಷ ತ ಆತ್ಮಾನ್ತರ್ಯಾಮ್ಯಮೃತಃ** ಬೃ. ೫-೭-೨೨

**ಅನ್ತಃಪ್ರವಿಷ್ಟಃ ಶಾಸ್ತಾ ಜನಾನಾಂ ಸರ್ವಾತ್ಮಾ**

ಯಜುರಾರಣ್ಯಕ ೩-೧೧-೨ (ರಾ. ಭಾ.)

ಮತ್ತೆ ಸಂನ್ಯಾಸವನ್ನು ವಿಸ್ತರಿಸುವುದಕ್ಕೋಸ್ಕರ (ಎಂದರೆ ಕೇವಲ ಕಾಮ್ಯಕರ್ಮಗಳ ನ್ಯಾಸಮಾತ್ರವಾದ ಸಂನ್ಯಾಸವಲ್ಲ. ಕರ್ತೃತ್ವಾಭಿಮಾನವನ್ನು ತ್ಯಾಗಮಾಡುವುದು ಸಂನ್ಯಾಸ ಎಂದು ಹಿಂದೆ ಹೇಳಿದ ಸಂನ್ಯಾಸವನ್ನು ವಿಸ್ತಾರವಾಗಿ ಹೇಳಲು) ಕರ್ಮದ ಕಾರಣಗಳನ್ನು ಭಗವಂತನು ಇಲ್ಲಿ ಹೇಳು ತ್ತಾನೆ. ಆತ್ಮನು ಅಕರ್ತೃವಾದರೆ ಕ್ರಿಯೆಯು ನೆರವೇರುವುದಿಲ್ಲ. ಹೀಗಿರು ವಾಗ ಕರ್ತೃತ್ವದಲ್ಲಿ ಅವನು ಅಭಿಮಾನವನ್ನು ಬಿಡುವುದು ಹೇಗೆ ಸಾಧ್ಯ? ಎಂಬ ಶಂಕೆಯನ್ನು ಹೋಗಲಾಡಿಸಲು ಕರ್ಮವು ನೆರವೇರಲು ಆತ್ಮದಿಂದ

ಬೇರೆಯಾಗಿರುವ ಕಾರಣಗಳನ್ನು ಹೇಳುತ್ತಾರೆ. ಸಾಂಖ್ಯಕೃತಾಂತ ಎಂದರೆ ಜ್ಞಾನಸಿದ್ಧಾಂತ. (ಮ. ಭಾ.)

ಸರ್ವಕರ್ಮಗಳ ಸಿದ್ಧಿಗಾಗಿ ಹೇಳಿರುವ ಐದು ಕಾರಣಗಳನ್ನು ನಾನು ಹೇಳುತ್ತೇನೆ. ಚೆನ್ನಾಗಿ ಕೇಳು, ಎನ್ನುತ್ತಾನೆ ಶ್ರೀಕೃಷ್ಣ.

**ಓಂ ಅಧಿಷ್ಠಾನಂ ತಥಾ ಕರ್ತಾ ಕರಣಂ ಚ ಪೃಥಗ್ವಿಧಮ್ ।**
**ವಿವಿಧಾಶ್ಚ ಪೃಥಕ್ಚೇಷ್ಟಾ ದೈವಂ ಚೈವಾತ್ರ ಪಞ್ಚಮಮ್ ॥೧೪॥**

ಅಧಿಷ್ಠಾನ, ಕರ್ತಾ, ಬೇರೆ ಬೇರೆ ಬಗೆಯ ಕರಣ, ಅನೇಕ ವಿಧವಾದ ಪ್ರತ್ಯೇಕವಾದ ಚೇಷ್ಟೆಗಳು ಮತ್ತು ಇಲ್ಲಿ ದೈವವು ಐದನೆಯದು.

* * *

(**ಅಧಿಷ್ಠಾನಂ** = ಆಶ್ರಯ, ವಾಸಸ್ಥಾನ. **ಅಧಿಷ್ಠಾನ** ಎಂದರೆ ಜೀವನಿಗೆ ಆಶ್ರಯವಾಗಿರುವ ದೇಹವು. ಈ ದೇಹದಲ್ಲಿಯೇ ಭೋಕ್ತೃವಾದ ಜೀವನು ಸುಖ-ದುಃಖಾದಿ ಭೋಗಗಳೊಂದಿಗೆ ಜೀವಿಸುವನು. ದಶೇಂದ್ರಿಯಗಳ ಮೂಲಕವಾಗಿ ಸುಖ-ದುಃಖಗಳನ್ನು ಹೊಂದುವನು. ಅವುಗಳನ್ನು ಭೋಗಿಸಲು ಅವನಿಗೆ ದೇಹವು ಹೊರತಾಗಿ ಮತ್ತೊಂದು ಸ್ಥಳವಿಲ್ಲ. ಈ ದೇಹವೇ ಇಪ್ಪತ್ತುನಾಲ್ಕು ತತ್ತ್ವರೂಪವಾದ ಕುಟುಂಬಕ್ಕೆ ವಾಸದ ಮನೆ ಯಾಗಿದೆ. ಆದುದರಿಂದ ಅಧಿಷ್ಠಾನ ಎಂದರೆ ಶರೀರ.

**ಕರ್ತಾ** = ಇದು ಸರ್ವಕರ್ಮಗಳ ಸಿದ್ಧಿಗೆ ಎರಡನೆಯ ಕಾರಣವಾಗಿದೆ. ಇದನ್ನು ಚೇತನ ಅಥವಾ ಜೀವಾತ್ಮ ಎನ್ನುತ್ತಾರೆ. ಪ್ರಕೃತಿಸ್ಥನಾದ ನಿಃಸಂಗ ನಾಗಿರುವ ಪುರುಷನು–ಸ್ವಸ್ವರೂಪವನ್ನು ಮರೆತು, ದೇಹಕ್ಕೂ ತನಗೂ ಸಂಬಂಧವನ್ನು ಕಲ್ಪಿಸಿಕೊಂಡು, ಅದರ ಕರ್ತೃತ್ವವನ್ನು ತನ್ನಲ್ಲಿ ಆರೋಪಿಸಿ ಕೊಂಡಿರುತ್ತಾನೆ. ಆದುದರಿಂದ ಜೀವಾತ್ಮನು ಕರ್ತಾ ಎನಿಸುತ್ತಾನೆ.

**ಪೃಥಗ್ವಿಧಂ ಕರಣಂ** = ನಾನಾಬಗೆಯ ಕರಣಗಳು. ಕರಣ ಎಂದರೆ ಸಾಧನ ಅಥವಾ ಸಲಕರಣೆ.

ಸರ್ವಕರ್ಮಗಳ ಸಿದ್ಧಿಗೆ ನಾನಾಬಗೆಯ ಸಾಧನಗಳಿವೆ. ಸಾಧನ

ಗಳೆಂದರೆ ಐದು ಕರ್ಮೇಂದ್ರಿಯಗಳು, ಐದು ಜ್ಞಾನೇಂದ್ರಿಯಗಳು ಮತ್ತು ಅಂತಃಕರಣ. ಇವು ಸರ್ವಕಾರ್ಯಗಳ ಸಿದ್ಧಿಗೆ ಮೂರನೆಯ ಕಾರಣವಾಗಿವೆ.

**ವಿವಿಧಾಶ್ಚ ಪೃಥಕ್ಚೇಷ್ಟಾಃ** = ವಿಧ-ವಿಧವಾದ ಮತ್ತು ಪ್ರತ್ಯೇಕ-ಪ್ರತ್ಯೇಕವಾದ ಚೇಷ್ಟೆಗಳು. ಐದು ಜ್ಞಾನೇಂದ್ರಿಯಗಳೂ ಮತ್ತು ಐದು ಕರ್ಮೇಂದ್ರಿಯಗಳೂ ಮಾಡುವ ಕಾರ್ಯಗಳು. ಒಂದೊಂದು ಇಂದ್ರಿಯವೂ ಪ್ರತ್ಯೇಕ-ಪ್ರತ್ಯೇಕವಾಗಿಯೇ ಕಾರ್ಯಮಾಡುತ್ತದೆ ಮತ್ತು ನಾನಾವಿಧವಾದ ಕಾರ್ಯಮಾಡುತ್ತದೆ. ಕಾಲು ನಡೆಯುತ್ತದೆ, ಓಡುತ್ತದೆ, ಕುಣಿಯುತ್ತದೆ, ಕುಪ್ಪುತ್ತದೆ. ಇವು ವಿಧ-ವಿಧವಾದ ಚೇಷ್ಟೆಗಳು. ಆದರೆ ಇದು ಪ್ರತ್ಯೇಕವಾಗಿಯೇ ತನ್ನ ಕಾರ್ಯವನ್ನು ಮಾಡುತ್ತದೆ. ಕಾಲು ಕುಣಿಯಲು ಕೈಯನ್ನು ಅವಲಂಬಿಸುವುದಿಲ್ಲ. ಇಲ್ಲಿ ಚೇಷ್ಟಾ ಎಂದರೆ ಕರ್ಮ ಅಥವಾ ಕ್ರಿಯೆ ಎಂದೂ ಅರ್ಥಮಾಡಬಹುದು. ಈ ವಿವಿಧಕರಣಗಳಿಂದ ವಿವಿಧಕ್ರಿಯೆಗಳಾಗುತ್ತವೆ. ಒಳ್ಳೆಯ ಕ್ರಿಯೆಗಳೂ ಆಗುತ್ತವೆ. ಕೆಟ್ಟಕ್ರಿಯೆಗಳೂ ಆಗುತ್ತವೆ. ಕೈಯಿಂದ ದೇವರನ್ನು ಪೂಜಿಸಬಹುದು. ಅದೇ ಕೈಯಿಂದ ದೇವರ ವಿಗ್ರಹವನ್ನು ಕಿತ್ತುಹಾಕಲೂಬಹುದು. ಹೀಗೆಯೇ ಪ್ರತಿಯೊಂದು ಕರಣ ದಿಂದಲೂ ಒಳ್ಳೆಯ ಅಥವಾ ಕೆಟ್ಟಚೇಷ್ಟೆಗಳನ್ನು ಮಾಡಬಹುದು.

**ದೈವಂ ಚೈವಾತ್ರ ಪಞ್ಚಮಂ = ಸರ್ವಕರ್ಮಣಾಂ ಸಿದ್ಧಯೇ ಪಂಚಮಂ ಕಾರಣಂ ದೈವಂ**–ಎಂದು ಅಧ್ಯಾಹಾರಮಾಡಿಕೊಳ್ಳಬೇಕು. ದೈವಂ ಎಂದರೆ ಅದೃಷ್ಟ. ದೈವಂ ದಿಷ್ಟಂ ಭಾಗಧೇಯಂ (ಅಮರಃ) ಕಣ್ಣಿಗೆ ಕಾಣಿಸದ ಅಗೋಚರಫಲ. ಜನ್ಮಾಂತರದಲ್ಲಿ ಮಾಡಿದ ಪಾಪ-ಪುಣ್ಯಗಳ ಕರ್ಮಫಲ. ಹಿಂದಿನ ಜನ್ಮದ, ಜನ್ಮಾಂತರದ ಅಥವಾ ಇದೇ ಜನ್ಮದ ಪುಣ್ಯ-ಪಾಪಗಳಿಗೆ ಅನುಸಾರವಾಗಿ ಅಥವಾ ಪುಣ್ಯ-ಪಾಪಫಲಗಳ ಪ್ರಭಾವ ದಿಂದ ಅನೇಕಕಾರ್ಯಗಳು ನಡೆಯುತ್ತವೆ ಮತ್ತು ಆ ಕಾರ್ಯಗಳ ಸಿದ್ಧಿಯೂ ಆಗುತ್ತದೆ. ತಾತ್ಪರ್ಯತಃ : ಒಬ್ಬನು ಮಾಡುವ ಕಾರ್ಯವು ಈ ಐದು ಕರಣಗಳನ್ನೂ ಅನುಸರಿಸಿಯೇ ಇರುತ್ತದೆ. ಮೊದಲನೆಯದೇ ದೇಹ. ದೇಹವಿಲ್ಲದಿದ್ದರೆ ಯಾವ ಕರ್ಮವೂ ಇಲ್ಲ. ಕರ್ಮಮಾಡಲು ಪಾಂಚಭೌತಿಕ ವಾದ ದೇಹವೇ ಬೇಕು. ಸೂಕ್ಷ್ಮಶರೀರದಲ್ಲಿ ಕರ್ಮಗಳನ್ನು ಮಾಡಲು

ಸಾಧ್ಯವಾಗುವುದಿಲ್ಲ. ಆದರೆ ಬರಿಯ ದೇಹದಿಂದ ಯಾವ ಕರ್ಮವೂ ನಡೆಯುವುದಿಲ್ಲ. ಕರ್ಮಮಾಡಲು ದೇಹದಷ್ಟೇ ಅತಿಮುಖ್ಯವಾದುದು ಕರ್ತಾ, ಎಂದರೆ ಜೀವ. ಅದಕ್ಕಾಗಿಯೇ ಶ್ರೀಕೃಷ್ಣನು **ಅಧಿಷ್ಠಾನಂ ತಥಾ ಕರ್ತಾ** ಎಂದು ಹೇಳಿದ್ದಾನೆ. ಅನಂತರ ಕರಣಗಳು–ಅಂತಃಕರಣ ಮತ್ತು ಹತ್ತು ಇಂದ್ರಿಯಗಳು, ಇವುಗಳ ಚೇಷ್ಟೆ. ಈ ಚೇಷ್ಟೆಯನ್ನು ವ್ಯವಸ್ಥಿತವಾದ ರೀತಿಯಲ್ಲಿ ಮಾಡಿದರೆ ಅದೇ ಸತ್ಕರ್ಮ ಅಥವಾ ದುಷ್ಕರ್ಮ ಎನಿಸುತ್ತದೆ. ಕೈಯನ್ನು ಅಳ್ಳಾಡಿಸುವುದು ಚೇಷ್ಟೆಯಾಗುತ್ತದೆ. ಗೊತ್ತುಗುರಿಯಿಲ್ಲದೇ ಮಾಡಿದರೆ ಅದು ಕರ್ಮವಾಗುವುದಿಲ್ಲ. ಎರಡು ಕೈಗಳನ್ನೂ ಸಮನಾಗಿ ಜೋಡಿಸಿ ಹಿಡಿದುಕೊಂಡರೆ ಅದು ನಮಸ್ಕಾರಕರ್ಮವಾಗುತ್ತದೆ. ದೈವ ಎಂದರೆ ಅದೃಷ್ಟ. ಕಣ್ಣಿಗೆ ಕಾಣಿಸದೇ ಇರುವುದು. ಕಣ್ಣಿಗೆ ಕಾಣಿಸದೇ ಇರುವ ಪುಣ್ಯಾಪುಣ್ಯಫಲಗಳೇ ಮನುಷ್ಯನ ಆಗು-ಹೋಗುಗಳಿಗೆ ಕಾರಣವಾಗುತ್ತವೆ. ಇದನ್ನು ಪ್ರಾರಬ್ಧ, ವಾಸನೆ, ಗುಣತ್ರಯಗಳ ಕ್ರಿಯೆ–ಮುಂತಾದ ಇನ್ನೂ ಅನೇಕ ಹೆಸರುಗಳಿಂದ ಕರೆಯುತ್ತಾರೆ. ಇವುಗಳೆಲ್ಲವೂ ಒಂದಕ್ಕೊಂದು ಕೊಂಡಿಯಂತೆ ಅಂಟಿಕೊಂಡೇ ಇರುತ್ತವೆ. ಪ್ರಾಣಿಯ ಮುಂದಿನ ಜನ್ಮಗಳಿಗೂ ಸಹ 'ದೈವ' ಎಂಬುದೇ ಕಾರಣವಾಗುತ್ತದೆ.)

O O O

**ಅಧಿಷ್ಠಾನಂ** = ಇಚ್ಛಾ, ದ್ವೇಷ, ಸುಖ, ದುಃಖ ಮತ್ತು ಜ್ಞಾನ ಮುಂತಾದುವುಗಳ ಅಭಿವ್ಯಕ್ತಿಗೆ ಕಾರಣವಾಗಿರುವ ಶರೀರ. **ಕರ್ತಾ** = ಉಪಾಧಿಸ್ವರೂಪವಾಗಿರುವ ಭೋಕ್ತೃವಾದ ಜೀವ.

**ಪೃಥಗ್ವಿಧಂ ಕರಣಂ** = ಶಬ್ದವೇ ಮುಂತಾದ ವಿಷಯಗಳನ್ನು ಗ್ರಹಿಸುವ ಕಿವಿ ಮುಂತಾದ ಹನ್ನೆರಡು ಬಗೆಯ ಕರಣಗಳು. ಬಗೆ-ಬಗೆಯ ಚೇಷ್ಟೆಗಳು ಎಂದರೆ ಉಚ್ಛ್ವಾಸ-ನಿಃಶ್ವಾಸ ಮುಂತಾದ ಬೇರೆ ಬೇರೆಯಾದ ವಾಯುವಿನ ಕ್ರಿಯೆಗಳು ಮತ್ತು ಇವುಗಳ ಜೊತೆಯಲ್ಲಿ ಐದನೆಯದಾದುದು ದೈವ–ಎಂದರೆ ಕಣ್ಣು ಮುಂತಾದ ಇಂದ್ರಿಯಗಳನ್ನು ಅನುಗ್ರಹಿಸುವ ಸೂರ್ಯನೇ ಮುಂತಾದ ದೇವತೆಗಳು. (ಶಂ. ಭಾ.)

**ಅಧಿಷ್ಠಾನಂ** = ಶರೀರ. **ಅಧಿಷ್ಠೀಯತೇ ಜೀವಾತ್ಮನಾ** ಎಂಬ

ವ್ಯುತ್ಪತ್ತಿಯಂತೆ ಮಹಾಭೂತಗಳ ಸಂಘಾತವಾಗಿರುವ ಶರೀರ. **ಕರ್ತಾ** = ಜೀವಾತ್ಮನು. ಜೀವಾತ್ಮನಿಗೆ ಜ್ಞಾತೃತ್ವ ಮತ್ತು ಕರ್ತೃತ್ವಗಳು ಉಂಟೆಂಬುದನ್ನು **ಜ್ಞೋsತ ಏವ** ಬ್ರ. ಸೂ. ೨-೩-೧೯

**ಕರ್ತಾ ಶಾಸ್ತ್ರಾರ್ಥವತ್ತ್ವಾತ್** ಬ್ರ. ಸೂ. ೨-೩-೩೩

ಎಂಬ ಸೂತ್ರಗಳು ಪ್ರತಿಪಾದಿಸುತ್ತವೆ. **ಪೃಥಗ್ವಿಧಂ ಕರಣಂ** ಮನಸ್ಸಿನಿಂದ ಕೂಡಿದ ವಾಕ್ ಪಾಣಿ–ಮುಂತಾದ ಐದು ಕರ್ಮೇಂದ್ರಿಯಗಳು.

**ಪೃಥಗ್ವಿಧಂ** = ಕೆಲಸವನ್ನು ನೆರವೇರಿಸುವಾಗ ಬೇರೆ ಬೇರೆ ವ್ಯಾಪಾರವುಳ್ಳದ್ದು.

**ವಿವಿಧಾಃ ಪೃಥಕ್ಚೇಷ್ಟಾಃ** = ಇಲ್ಲಿ ಪಂಚವಾಯುಗಳ ವೃತ್ತಿಗಳನ್ನು ನೇರವಾಗಿ ಹೇಳುವ ಚೇಷ್ಟಾಶಬ್ದದಿಂದ ಪಂಚಾತ್ಮಕನಾಗಿರುವ ವಾಯುವು ಹೇಳಲ್ಪಟ್ಟಿದೆ. ಶರೀರೇಂದ್ರಿಯಗಳನ್ನು ಧರಿಸಿ ಪ್ರಾಣ, ಅಪಾನ ಮುಂತಾದ ಭೇದಗಳುಳ್ಳ ಐದು ಬಗೆಯ ವಾಯುವಿಗೆ ಬೇರೆ ಬೇರೆ ಚೇಷ್ಟೆಗಳು ಅಥವಾ ವೃತ್ತಿಗಳುಂಟು ಮತ್ತು ಕರ್ಮಹೇತುಗಳ ಈ ಕಲಾಪದಲ್ಲಿ ಐದನೆಯದು ದೈವ ಎಂದರೆ ಅಂತರ್ಯಾಮಿಯಾದ ಪರಮಾತ್ಮ. ಕೆಲಸಗಳು ನೆರವೇರುವಲ್ಲಿ ಅವನೇ ಮುಖ್ಯವಾದ ಕಾರಣ. ಅದನ್ನೇ ಗೀತೆಯಲ್ಲಿ ಹಿಂದೆ **ಸರ್ವಸ್ಯ ಚಾಹಂ ಹೃದಿ ಸಂನಿವಿಷ್ಟಃ.... ಅಪೋಹನಂ ಚ** ||೧೫-೧೫|| ಎಂಬಲ್ಲಿ ಹೇಳಿದೆ. ಮುಂದೆ **ಈಶ್ವರಃ ಸರ್ವಭೂತಾನಾಂ.... ಮಾಯಯಾ** ||೬೧|| ಎಂದು ಹೇಳುತ್ತಾನೆ. ಜೀವಾತ್ಮನ ಕರ್ತೃತ್ವವೂ ಪರಮಾತ್ಮನಿಗೆ ಅಧೀನವಾದುದು. **ಪರಾತ್ತು ತಚ್ಛ್ರುತೇಃ** ಬ್ರ. ಸೂ. ೨-೩-೪೦ ಎಂಬ ಸೂತ್ರವು ಇದನ್ನು ನಿರೂಪಿಸುತ್ತದೆ.

ಹೀಗೆಯೇ ಜೀವಾತ್ಮನ ಕರ್ತೃತ್ವವು ಪರಮಾತ್ಮನಿಗೆ ಅಧೀನವಾಗಿದ್ದರೆ, ಜೀವಾತ್ಮನಿಗೆ ಕರ್ಮದಲ್ಲಿ ನಿಯೋಗವನ್ನು ಶಾಸ್ತ್ರಗಳು ಮಾಡುವಂತೆಯೇ ಇಲ್ಲ, ಅಲ್ಲವೇ? ವಿಧಿ-ನಿಷೇಧಶಾಸ್ತ್ರಗಳೆಲ್ಲವೂ ವ್ಯರ್ಥವಾಗುತ್ತವೆಯಲ್ಲವೇ? ಎಂದರೆ ಈ ಪ್ರಶ್ನೆಗೆ **ಕೃತಪ್ರಯತ್ನಾಪೇಕ್ಷಸ್ತು ವಿಹಿತಪ್ರತಿಷಿದ್ಧಾವೈಯರ್ಥ್ಯಾದಿಭ್ಯಃ** – ಎಂಬ ಬ್ರಹ್ಮಸೂತ್ರವು ಪರಿಹಾರವನ್ನು ಹೇಳಿದೆ.

ಅಭಿಪ್ರಾಯವೇನೆಂದರೆ : ಪರಮಾತ್ಮನು ದಯಪಾಲಿಸಿರುವ ಮತ್ತು ಅವನನ್ನು ಆಧರಿಸಿರುವ, ಅವನಿಂದ ಶಕ್ತಿಯನ್ನು ಪಡೆದಿರುವ ಕರಣ- ಕಳೇಬರ ಮುಂತಾದುವುಗಳಿಂದ ಜೀವಾತ್ಮನು ಕೆಲಸವನ್ನು ಮಾಡುತ್ತಾನೆ ಮತ್ತು ತಾನೂ ಪರಮಾತ್ಮನಿಗೆ ಅಧೀನನಾಗಿ, ಅವನು ಕೊಟ್ಟಿರುವ ಶಕ್ತಿಯಿಂದ ಕೂಡಿ, ತನ್ನ ಇಚ್ಛೆಯಂತೆ ಕರಣ ಮತ್ತು ಅಧಿಷ್ಠಾನ ಮುಂತಾದುವುಗಳ ಚೇಷ್ಟಾರೂಪವಾದ ಪ್ರಯತ್ನಗಳನ್ನು ಮಾಡುತ್ತಾನೆ. ಈ ರೀತಿಯಲ್ಲಿ ಆ ಜೀವಾತ್ಮನ ಒಳಗಿರುವ ಪರಮಾತ್ಮನು ಅನುಮತಿಕೊಟ್ಟು ಅವನನ್ನು ಕಾರ್ಯದಲ್ಲಿ ತೊಡಗಿಸುತ್ತಾನೆ. ಆದುದರಿಂದ ಪರಮಾತ್ಮನ ಬುದ್ಧಿಯಿಂದ ಪ್ರವೃತ್ತನಾಗಿರುವ ಕಾರಣ ಜೀವಾತ್ಮನೂ ಕೂಡ ಕರ್ಮಪ್ರವೃತ್ತಿಗೆ ಕಾರಣನಾಗಿರುವನೆಂಬುದು ಸಿದ್ಧವಾಗುತ್ತದೆ. ಅನೇಕಪುರುಷರಿಂದ ಸಾಧ್ಯವಾಗುವಂತಹ ಕೆಲಸವಾದ ದೊಡ್ಡಬಂಡೆ ಅಥವಾ ಮರವನ್ನು ಅಲ್ಲಾಡಿಸುವಿಕೆಯಲ್ಲಿ ಅನೇಕರು ಒಂದುಗೂಡಿಯೇ ಕಾರಣರಾಗುತ್ತಾರೆ ಮತ್ತು ವಿಧಿ-ನಿಷೇಧಗಳ ಅಧಿಕಾರಿಗಳೂ ಕೂಡ ಅನೇಕರಾಗುತ್ತಾರೆ. (ರಾ. ಭಾ.)

ಅಧಿಷ್ಠಾನಂ = ಶರೀರವೇ ಮುಂತಾದುವು. ಕರ್ತಾ ಎಂದರೆ ವಿಷ್ಣು. ಅವನೇ ಸರ್ವಕರ್ತಾ ಎಂದು ಹೇಳಲ್ಪಟ್ಟಿರುವವನು. ಜೀವನಿಗೆ ಕರ್ತೃತ್ವವಿಲ್ಲ ಎಂಬುದಕ್ಕೆ ಪ್ರಮಾಣವನ್ನು ಹೇಳಿಯಾಗಿದೆ. **ಕರಣಂ** = ಇಂದ್ರಿಯ ಮುಂತಾದುವುಗಳು. **ಚೇಷ್ಟಾಃ** = ಕ್ರಿಯೆಗಳು. ಕೈ ಮುಂತಾದ ಕ್ರಿಯೆಗಳಿಂದ ಹೋಮವೇ ಮುಂತಾದ ಕರ್ಮಗಳು ಆಗುತ್ತವೆ. ಧ್ಯಾನವೇ ಮುಂತಾದುವುಗಳಿಗೂ ಕೂಡ ಮಾನಸಿಕಚೇಷ್ಟೆಯು ಕಾರಣವಾಗುತ್ತದೆ. ದೈವ ಎಂದರೆ ಅದೃಷ್ಟ.

**ದೇಹೋ ಬ್ರಹ್ಮಾರ್ಥೇ ಇನ್ದ್ರಿಯಾದ್ಯಾಃ ಕ್ರಿಯಾಶ್ಚ ತಥಾ ಅದೃಷ್ಟಂ ಪಞ್ಚಮಂ ಕರ್ಮಹೇತುರಿತಿ ಆಯಾಸ್ಯಶ್ರುತಿಃ ||೩-೫-೧||**
**(ಮ. ಭಾ.)**

**ಓಂ ಶರೀರವಾಙ್ಮನೋಭಿರ್ಯತ್ಕರ್ಮ ಪ್ರಾರಭತೇ ನರಃ |**
**ನ್ಯಾಯ್ಯಂ ವಾ ವಿಪರೀತಂ ವಾ ಪಞ್ಚೈತೇ ತಸ್ಯ ಹೇತವಃ ||೧೫||**

ಶರೀರ, ವಾಕ್ ಮತ್ತು ಮನಸ್ಸು–ಇವುಗಳಿಂದ ಮನುಷ್ಯನು ಯಾವ ಕರ್ಮವನ್ನು ಪ್ರಾರಂಭಿಸುತ್ತಾನೆಯೋ, ಅದು ನ್ಯಾಯವಾದ ಕರ್ಮವಾಗಲೀ ಅನ್ಯಾಯವಾದ ಕರ್ಮವಾಗಲೀ ಅದಕ್ಕೆ ಈ ಐದೂ ಕಾರಣಗಳಾಗಿರುತ್ತವೆ.

* * *

(ಯಾವ ಕಾರ್ಯವನ್ನು ಆರಂಭಿಸಬೇಕಾದರೂ ಶರೀರ, ವಾಕ್ ಮತ್ತು ಮನಸ್ಸು ಇವುಗಳಿಂದಲೇ ಪ್ರಾರಂಭಿಸಬೇಕಾಗುತ್ತದೆ. ಶರೀರವೆಂದರೆ ಅಧಿಷ್ಠಾನ. ವಾಕ್ (ಬಾಯಿ) ಒಂದನ್ನು ಬಿಟ್ಟು ಉಳಿದ ಶರೀರ ಎಂದು ಇಟ್ಟುಕೊಳ್ಳಬೇಕು. ಮನಸ್ಸು ಎಂಬುದು ಕರಣಗಳಲ್ಲೊಂದಾಗಿದೆ. ಎಲ್ಲ ಕರ್ಮಗಳೂ ಈ ಮೂರರಿಂದಲೇ ನಡೆಯುತ್ತವೆ. ಕಾಯಿಕ, ವಾಚಿಕ ಮತ್ತು ಮಾನಸಿಕವೆಂಬ ಮೂರು ಬಗೆಯ ತಪಸ್ಸನ್ನೂ ಸಹ ಹಿಂದೆ ಶ್ರೀಕೃಷ್ಣನು ಹೇಳಿದ್ದಾನೆ. ಮೂರು ವಿಧವಾದ ತಪಸ್ಸನ್ನು ಮಾಡಿ ಸತ್ಕರ್ಮಿಯಾಗ ಬಹುದು. ಇವು ಮೂರನ್ನೂ ಸ್ವೇಚ್ಛಾವರ್ತನೆಗೊಳಪಡಿಸಿ ದುಷ್ಕರ್ಮಿ ಯಾಗಲೂಬಹುದು. ಆದುದರಿಂದಲೇ ಶ್ರೀಕೃಷ್ಣನು ಹೇಳುತ್ತಾನೆ : ಮುಖ್ಯ ವಾದ ಈ ಮೂರರಿಂದ ಯಾವ ಕರ್ಮವನ್ನು ಪ್ರಾರಂಭಿಸುತ್ತಾನೆಯೋ ಅದು ನ್ಯಾಯವಾದ ಕರ್ಮವಾಗಿರಬಹುದು ಅಥವಾ ಧರ್ಮವಿರುದ್ಧವಾದ ಕರ್ಮವಾಗಿರಬಹುದು. ಆದರೆ ಈ ಮೂರು ಸಹ ಕಾರಣಗಳಾಗಿರುತ್ತವೆ. ಐದರಲ್ಲಿ ಮೂರು ಶರೀರ, ವಾಕ್ ಮತ್ತು ಮನಸ್ಸುಗಳಾದುವು. ವಾಸನೆಗಳು (ದೈವ ಅಥವಾ ಅದೃಷ್ಟ) ಮತ್ತು ವಾಸನಾಮಯನಾದ ಜೀವ–ಇವೆರಡೂ ಒಂದು ಶರೀರದಲ್ಲಿ ಸೇರಿಕೊಂಡರೆ ಅದಕ್ಕೆ ಅನುರೂಪವಾದ ಒಳ್ಳೆಯ ಅಥವಾ ಕೆಟ್ಟ ಕೆಲಸಗಳು ನಡೆಯುತ್ತವೆ. ಆದುದರಿಂದ ಸರ್ವಕಾರ್ಯಗಳ ಸಿದ್ಧಿಗೂ ಈ ಐದೇ ಕಾರಣಗಳಾಗಿರುತ್ತವೆ.

ಇಲ್ಲಿ ಶ್ರೀಕೃಷ್ಣನು ನರಃ ಎಂದೇ ಹೇಳಿದ್ದಾನೆ. ಮನುಷ್ಯನು ಮಾತ್ರವೇ ತಿಳಿವಳಿಕೆಯಿಂದ ಕರ್ಮಮಾಡಲು ಅಧಿಕಾರಿ. ದೇವತೆಗಳು ಮುಂತಾದವರು ಭೋಗಿಗಳೇ ಆಗಿರುತ್ತಾರೆ. ಪಶು-ಪ್ರಾಣಿ-ವನಸ್ಪತಿಗಳಿಗೆ ಅವು ಕರ್ಮಮಾಡುತ್ತಿದ್ದರೂ ಸತ್ಕರ್ಮ ಮತ್ತು ದುಷ್ಕರ್ಮಗಳ ವಿವೇಚನೆ ಯಿಂದ ಕೂಡಿರುವುದಿಲ್ಲ. ಆದುದರಿಂದ ನರಃ (ಮನುಷ್ಯನು) ಎಂಬ ಪದವನ್ನು ನ್ಯಾಯ ಅಥವಾ ಅನ್ಯಾಯರೂಪವಾದ ಕರ್ಮಿಯನ್ನಾಗಿ ಹೇಳಿದೆ.

ಕರ್ಮ ಎಂದರೆ ಇಲ್ಲಿ ಪುಣ್ಯ-ಪಾಪಹೇತುವಾದ ಶುಭಾಶುಭಕರ್ಮಗಳು. ಇಂತಹ ಕರ್ಮಗಳನ್ನು ಮಾಡಲು ಮನುಷ್ಯನ ಹೊರತಾಗಿ ಮತ್ತಾರಿಗೂ ಸಾಧ್ಯವಾಗುವುದಿಲ್ಲ. )

o o o

ಮನುಷ್ಯನು ಮನಸ್ಸು, ವಾಣಿ ಮತ್ತು ಶರೀರ–ಈ ಮೂರರ ಮೂಲಕ ನ್ಯಾಯ ಮತ್ತು ಅನ್ಯಾಯವಾದ ಎಂದರೆ ಶಾಸ್ತ್ರೀಯವಾಗಿರುವ (ಧರ್ಮಾನುಗುಣವಾಗಿರುವ) ಮತ್ತು ಅಶಾಸ್ತ್ರೀಯವಾಗಿರುವ (ಅಧರ್ಮಮಯವಾಗಿರುವ) ಯಾವ ಯಾವ ಕರ್ಮಗಳನ್ನು ಪ್ರಾರಂಭಿಸುತ್ತಾನೆಯೋ ಅವೆಲ್ಲಕ್ಕೂ ಮೇಲೆ ಹೇಳಿರುವ ಐದೇ ಕಾರಣಗಳು. ಕಣ್ಣುಮಿಟಿಕಿಸುವುದು–ತೆರೆಯುವುದು ಮುಂತಾದ ಜೀವನಕ್ಕೆ ಕಾರಣವಾದ ಯಾವ ಚೇಷ್ಟೆಗಳುಂಟೋ ಅವುಗಳೂ ಕೂಡ ಹಿಂದೆ ಮಾಡಿದ ಪುಣ್ಯ ಮತ್ತು ಪಾಪಗಳ ಫಲಗಳೇ ಆಗಿವೆ. ಆದುದರಿಂದ ನ್ಯಾಯ ಮತ್ತು ಅನ್ಯಾಯ ಎಂಬ ಎರಡು ಪದಗಳನ್ನು ಹೇಳಿದ್ದರಿಂದ ಈ ಎಲ್ಲ ಚೇಷ್ಟೆಗಳೂ ಅದರಿಂದಲೇ ಹೇಳಲ್ಪಟ್ಟಿವೆಯೆಂದು ತಿಳಿಯಬೇಕು. ಅಧಿಷ್ಠಾನ ಮುಂತಾದುವುಗಳೇ ಎಲ್ಲ ಕರ್ಮಗಳಿಗೂ ಕಾರಣವಾಗಿರುವಾಗ ಮನಸ್ಸು, ವಾಣಿ ಮತ್ತು ಶರೀರಗಳಿಂದ ಕರ್ಮಮಾಡುತ್ತಾನೆ ಎಂದು ಏಕೆ ಹೇಳಿತು? ಎಂದರೆ ಹಾಗೆ ಹೇಳಿದರೆ ತಪ್ಪೇನೂ ಇಲ್ಲ. ವಿಧಿ ಮತ್ತು ನಿಷೇಧರೂಪವಾದ ಎಲ್ಲ ಕರ್ಮಗಳೂ ಶರೀರ, ವಾಣಿ ಮತ್ತು ಮನಸ್ಸು–ಈ ಮೂರರ ಪ್ರಧಾನತೆಯಿಂದಲೇ ಆಗುತ್ತವೆ ಮತ್ತು ಇದಲ್ಲದೇ ನೋಡುವಿಕೆ–ಕೇಳುವಿಕೆ ಮುಂತಾದ ಚೇಷ್ಟೆಗಳೂ ಕೂಡ ಈ ಕರ್ಮಗಳ ಅಂಗಗಳೇ ಆಗಿವೆ. ಆದುದರಿಂದ ಎಲ್ಲ ಕರ್ಮಗಳನ್ನೂ ಮೂರು ಭಾಗಗಳಾಗಿ ವಿಂಗಡಿಸಿ ಶರೀರ, ವಾಣಿ ಮತ್ತು ಮನಸ್ಸುಗಳಿಂದ ಮಾಡಲ್ಪಡುತ್ತವೆ–ಎಂದು ಹೇಳಿದೆ. ಫಲಭೋಗದ ಸಮಯದಲ್ಲೂ ಕೂಡ ಶರೀರವೇ ಮುಂತಾದ ಪ್ರಧಾನವಾದ ಕಾರಣಗಳ ಮೂಲಕವೇ ಫಲವನ್ನು ಅನುಭವಿಸುವುದು. ಮೇಲೆ ಹೇಳಿದ ಅಧಿಷ್ಠಾನವೇ ಮುಂತಾದ ಐದರ ಕಾರಣತ್ವವೂ ಸರಿಯಾಗಿದೆ. ಅದರಲ್ಲಿ ವಿರೋಧವೇನೂ ಇಲ್ಲ.

(ಶಂ. ಭಾ.)

ನ್ಯಾಯವಾದ (ಶಾಸ್ತ್ರಸಿದ್ಧವಾಗಿರುವ) ಮತ್ತು ಅದಕ್ಕೆ ವಿಪರೀತವಾದ

ಎಂದರೆ ಶಾಸ್ತ್ರನಿಷಿದ್ಧವಾದ ಶಾರೀರ, ವಾಚಿಕ ಮತ್ತು ಮಾನಸವಾದ ಯಾವ ಯಾವ ಕರ್ಮಗಳುಂಟೋ ಅವೆಲ್ಲಕ್ಕೂ ಮೇಲೆ ಹೇಳಿದ ಐದೇ ಕಾರಣಗಳು.

(ರಾ. ಭಾ.)

**ಓಂ ತತ್ರೈವಂ ಸತಿ ಕರ್ತಾರಮಾತ್ಮಾನಂ ಕೇವಲಂ ತು ಯಃ ।**
**ಪಶ್ಯತ್ಯಕೃತಬುದ್ಧಿತ್ವಾನ್ನ ಸ ಪಶ್ಯತಿ ದುರ್ಮತಿಃ ॥೧೬॥**

ಆದರೆ ವಿಷಯವು ಹೀಗಿದ್ದರೂ ಕೂಡ ಯಾವನು ಆತ್ಮನೊಬ್ಬನನ್ನೇ ಕರ್ತೃವನ್ನಾಗಿ ತಿಳಿಯುತ್ತಾನೆಯೋ ಅವನು ದುಷ್ಟವಾದ ಬುದ್ಧಿಯುಳ್ಳವನು. ಸಂಸ್ಕೃತವಾದ ತಿಳಿವಳಿಕೆಯು ಇಲ್ಲದಿರುವುದರಿಂದ ಅವನು (ಯಥಾರ್ಥ ವಾಗಿ) ಕರ್ತೃವನ್ನು ಅರಿತಿರುವುದಿಲ್ಲ.

* * *

(ಹೀಗಿರುವಾಗ [ಐದು ಕಾರಣಗಳಿಂದಲೇ ಎಲ್ಲ ಕರ್ಮಗಳೂ ಸಿದ್ಧ ವಾಗುತ್ತಿರುವಾಗ] ಯಾವನು ದುಷ್ಟವಾದ ಬುದ್ಧಿಯುಳ್ಳವನಾಗಿ ಕೇವಲ ಶುದ್ಧನಾಗಿರುವ ಆತ್ಮನನ್ನೇ ಕರ್ತೃವನ್ನಾಗಿ ತಿಳಿಯುತ್ತಾನೆಯೋ ಅವನು ಸರಿಯಾದ ನೋಟವುಳ್ಳವನಲ್ಲ ; ಏಕೆಂದರೆ : ಅವನ ಬುದ್ಧಿಯು ಸಂಸ್ಕೃತ ವಾಗಿರುವುದಿಲ್ಲ. ಹೀಗೆ ವಾಸ್ತವವಾಗಿ ಯಾವ ಕೆಲಸವು ನಡೆಯಬೇಕಾಗಿ ದ್ದರೂ ಐದು ಕಾರಣಗಳೂ ಇರಲೇಬೇಕು. ಹೀಗಿರುವಾಗ ಉಳಿದ ನಾಲ್ಕನ್ನು ಗಮನಿಸದೇ ಕೇವಲ ಜೀವನೊಬ್ಬನೇ ಕಾರಣ ಎಂದು ಹೇಳುವವನು ಸರಿಯಾದ ತಿಳಿವಳಿಕೆಯುಳ್ಳವನಲ್ಲ. ಉಳಿದ ನಾಲ್ಕರ ಸಹಕಾರವಿಲ್ಲದೆ ಜೀವನೊಬ್ಬನೇ ಕರ್ಮಗಳನ್ನು ಮಾಡಲು ಸಾಧ್ಯವೂ ಇಲ್ಲ. ಬೇರೆ ಯಾವ ಕಾರಣಗಳ ಸಹಕಾರವೂ ಇಲ್ಲದೇ ಸ್ವತಂತ್ರನಾದ ಜೀವನೇ ಕರ್ಮಗಳಿಗೆ ಕಾರಣ ಎಂದು ಹೇಳುವವನ ದೃಷ್ಟಿಯು ಸರಿಯಾದುದಲ್ಲ. ಏಕೆಂದರೆ : ಅವನ ಬುದ್ಧಿಯು ಸುಸಂಸ್ಕೃತವಾಗಿರುವುದಿಲ್ಲ. ಪರಿಪಕ್ವವಾಗಿರುವುದಿಲ್ಲ.

ಅಥವಾ **ಏವಂ ಸತಿ** = ನಿಶ್ಚಯಾಂಶವು ಹೀಗಿರಲಾಗಿ : ಹೇಗೆ? ಸರ್ವ ಕರ್ಮಗಳ ಸಿದ್ಧಿಗೆ ಐದು ಕಾರಣಗಳಿವೆ. ಅಧಿಷ್ಠಾನ, ಕರ್ತಾ, ಕರಣಗಳು, ಚೇಷ್ಟೆ ಮತ್ತು ದೈವ–ಈ ಐದು ಕಾರಣಗಳಿಂದ ಸರ್ವಕರ್ಮಗಳೂ ಸಿದ್ಧ ವಾಗುವುದೆಂದು ನಿಶ್ಚಿತವಾಗಿರುವಾಗ : **ಕೇವಲಂ ಆತ್ಮಾನಂ ಕರ್ತಾರಂ ತು**

**ಯಃ ಪಶ್ಯತಿ = ಕೇವಲ ಆತ್ಮ** ಎಂದರೆ ಶುದ್ಧಾತ್ಮ. ನಿತ್ಯಬುದ್ಧನಿರ್ವಿಕಾರನಾದ, ಅಸಂಗನಾದ ಶುದ್ಧಾತ್ಮ. ದೇಹಾದಿ ಆವರಣವಿಶಿಷ್ಟವಾದ ಆತ್ಮವು ಜೀವಾತ್ಮವೆನಿಸಿಕೊಳ್ಳುತ್ತದೆ. ತತ್ತ್ವದಲ್ಲಿ ಜೀವೋಪಾಧಿಗಳಿಂದ ಬೇರೆಯಾದುದು ಶುದ್ಧಾತ್ಮ ಅಥವಾ ಕೇವಲಾತ್ಮ. ಇಂತಹ ಕೇವಲಾತ್ಮನನ್ನು **ಕರ್ತಾರಂ ಯಃ ಪಶ್ಯತಿ**–ಇವನೇ ಮಾಡುವವನು ಎಂದು ಯಾವನು ತಿಳಿಯುತ್ತಾನೆಯೋ ಅವನು ದುರ್ಮತಿಯು–ದುಷ್ಟವಾದ ಬುದ್ಧಿಯುಳ್ಳವನು. **ಅಕೃತಬುದ್ಧಿತ್ವಾತ್** = ಬುದ್ಧಿಯ ಸಂಸ್ಕಾರವಾಗದೇ ಇರುವಿಕೆಯಿಂದ. ಕೃತಬುದ್ಧಿ ಎಂದರೆ ಶಾಸ್ತ್ರಾಧ್ಯಯನದಿಂದ ಆಚಾರ್ಯೋಪದೇಶದಿಂದ ಸಂಸ್ಕೃತವಾದ ಬುದ್ಧಿ. ಅಕೃತಬುದ್ಧಿಯೆಂದರೆ ಅಸಂಸ್ಕೃತವಾದ ಬುದ್ಧಿ. ಇಂತಹ ಅಸಂಸ್ಕೃತವಾದ ಬುದ್ಧಿಯಿರುವ ಕಾರಣದಿಂದ **ಸಃ ನ ಪಶ್ಯತಿ**–ಅವನು ನಿಶ್ಚಯಾಂಶವನ್ನು ತಿಳಿದವನಾಗಿರುವುದಿಲ್ಲ ; ಯಥಾರ್ಥವನ್ನು ತಿಳಿದವನಾಗಿರುವುದಿಲ್ಲ.

ಸರ್ವಕರ್ಮಗಳ ಸಿದ್ಧಿಗೆ ಐದು ಕಾರಣಗಳನ್ನು ಹೇಳುವಾಗ **ಅಧಿಷ್ಠಾನಂ ತಥಾ ಕರ್ತಾ**–ಎಂಬುದಾಗಿ ಶ್ರೀಕೃಷ್ಣನು ಹೇಳಿರುವನು. ಅಲ್ಲಿ **ಕರ್ತಾ** ಎಂದರೆ ಜೀವಾತ್ಮ. ತ್ರಿಗುಣಾತ್ಮಕವಾಸನಾಸಹಿತನಾದವನು. ಅಹಂಕಾರಯುಕ್ತನಾದವನು. ಉಳಿದ ನಾಲ್ಕು ಕಾರಣಗಳ ಸಂಬಂಧದಿಂದಾಗಿ ಇವನು ಕರ್ತೃವಿನಂತೆ ಕಾಣುತ್ತಾನೆ. ಅಜ್ಞಾನದಿಂದ ಆವೃತನಾಗಿರುವುದರಿಂದ 'ನಾನೇ ದೇಹ' ಎಂಬ ಭಾವವನ್ನು ಹೊಂದುತ್ತಾನೆ. ಆದರೆ ಈ ಭಾವನೆ ಮತ್ತು ಕರ್ಮಗಳೆಲ್ಲವೂ ತ್ರಿಗುಣಗಳ ಕಾರ್ಯವೆಂಬುದನ್ನು ಈ ಹಿಂದೆಯೇ ಹೇಳಿಯಾಗಿದೆ. ಆದುದರಿಂದ ಆತ್ಮನು ತೋರಿಕೆಗೆ ಮಾತ್ರ ಕರ್ತೃವಾಗಿ ಕಾಣುತ್ತಾನೆಯೇ ಹೊರತು ನಿಜವಾಗಿಯೂ ಶುದ್ಧನಾದ ಇವನು ಕರ್ತೃವೂ ಅಲ್ಲ ; ಕಾರಣನೂ ಅಲ್ಲ. ಬುದ್ಧಿಯ ಸಂಸ್ಕಾರವಿಲ್ಲದವರು ಶುದ್ಧಾತ್ಮವೇ ಎಲ್ಲವನ್ನೂ ಮಾಡುತ್ತದೆಂದು ಭ್ರಮಿಸುತ್ತಾರೆ. ದೇಹವನ್ನೇ ಆತ್ಮವೆಂದೂ ಬಗೆಯುತ್ತಾರೆ. ಸೂರ್ಯನ ಅಸ್ತಿತ್ವದಿಂದ ಹಗಲು-ರಾತ್ರಿಗಳಾಗುವುದೇನೋ ನಿಜ. ಆದರೆ ಸೂರ್ಯನು-ಹಗಲು-ರಾತ್ರಿಗಳನ್ನು ಮಾಡಹೋಗುವುದಿಲ್ಲ. ಅದರಂತೆ ಶುದ್ಧಾತ್ಮನ ಅಸ್ತಿತ್ವದಿಂದ ಎಲ್ಲ ಕರ್ಮಗಳೂ ನಡೆಯುತ್ತವೆ. ಆದರೆ ಅವನು ಕರ್ತೃವೂ ಅಲ್ಲ ; ಕರ್ಮವೂ ಅಲ್ಲ. ಅವನ

ಉಪಸ್ಥಿತಿಯಲ್ಲಿ ಮಾತ್ರ ಕರ್ಮವು ನಡೆಯುವುದರಿಂದ ಅವನೇ ಕರ್ತಾ ಎಂದು ದುರ್ಮತಿಗಳು ಭಾವಿಸುತ್ತಾರೆ.)

o o o

ಹೀಗೆ ಮೇಲೆ ಹೇಳಿದ ಐದು ಕಾರಣಗಳಿಂದಲೂ ಎಲ್ಲ ಕರ್ಮಗಳೂ ಸಿದ್ಧವಾಗುತ್ತಿರುವಾಗ, ಯಾವ ವಿಜ್ಞಾನಿಯು ವೇದಾಂತ ಮತ್ತು ಆಚಾರ್ಯರ ಉಪದೇಶಗಳು ಮತ್ತು ತರ್ಕದಿಂದ ಸಂಸ್ಕೃತವಾದ ಬುದ್ಧಿಯು ತನಗೆ ಉಂಟಾಗದೇ ಇರುವುದರಿಂದ, ಅಧಿಷ್ಠಾನವೇ ಮುಂತಾದ ಐದು ಕಾರಣಗಳ ಜೊತೆಯಲ್ಲಿ ಆತ್ಮನು ಐಕ್ಯನೆಂದು ತಿಳಿದು–'ಅವುಗಳ ಮೂಲಕ ಮಾಡಲ್ಪಟ್ಟ ಕರ್ಮಗಳನ್ನು ನಾನೇ ಮಾಡುತ್ತೇನೆ. ಅವುಗಳ ಕರ್ತೃ ನಾನು'– ಎಂದು ಕೇವಲನಾದ (ಶುದ್ಧನಾದ) ಆತ್ಮನನ್ನೇ ಕರ್ಮಗಳ ಕರ್ತಾ ಎಂದು ತಿಳಿಯುತ್ತಾನೆಯೋ ಅವನು ಏನೂ ಅರಿಯದವನು. ಇದಲ್ಲದೇ ಆತ್ಮವನ್ನು ಶರೀರ ಮುಂತಾದುವುಗಳಿಂದ ಬೇರೆಯೆಂದು ಒಪ್ಪಿದ್ದರೂ ಕೂಡ ಶರೀರ ಮುಂತಾದುವುಗಳಿಂದ ಪ್ರತ್ಯೇಕವಾಗಿ ಕೇವಲವಾದ ಆತ್ಮವನ್ನೇ ಕರ್ತೃವೆಂದು ತಿಳಿಯುತ್ತಾನೆಯೋ ಅವನೂ ಕೂಡ ಅಕೃತಬುದ್ಧಿಯವನೆಂದು ತಿಳಿಯ ಬೇಕು. ಅವನ ಬುದ್ಧಿಯು ಅಸಂಸ್ಕೃತವಾಗಿರುವುದರಿಂದ ಅವನು ವಾಸ್ತವವಾಗಿ ಆತ್ಮದ ಅಥವಾ ಕರ್ಮದ ತತ್ತ್ವವನ್ನು ಅರಿತಿಲ್ಲ. ಆದುದರಿಂದ ಅವನು ದುರ್ಬುದ್ಧಿಯು. ದುರ್ಬುದ್ಧಿ ಎಂದರೆ ಕುತ್ಸಿತವೂ, ವಿಪರೀತವೂ, ದುಷ್ಟವೂ, ಮತ್ತೆ ಮತ್ತೆ ಹುಟ್ಟು–ಸಾವುಗಳನ್ನುಂಟುಮಾಡಲು ಕಾರಣವಾದುದೂ ಆದ ಬುದ್ಧಿಯುಳ್ಳವನು. ಇಂತಹವನು ನೋಡುತ್ತಿದ್ದರೂ ವಾಸ್ತವವಾಗಿ ನೋಡುತ್ತಿಲ್ಲವೆಂದೇ ಹೇಳಬೇಕು. ತಿಮಿರರೋಗಿಗೆ ಎದುರಿನಲ್ಲಿ ಒಬ್ಬನಿದ್ದರೂ ಅನೇಕ ಜನರಿರುವಂತೆ ಭಾಸವಾಗುತ್ತದೆ. ಓಡುತ್ತಾ ಇರುವ ಮೋಡಗಳಲ್ಲಿ ಚಂದ್ರನು ಓಡುತ್ತಿರುವಂತೆ ಬಾಲಕನು ಕಾಣುತ್ತಾನೆ. ವಾಹನದಲ್ಲಿ ಕುಳಿತು ಹೋಗುತ್ತಿರುವವನು ಇತರರು ಓಡುತ್ತಿರುವಾಗ ತಾನೇ ಓಡುತ್ತಿರುವುದಾಗಿ ಭ್ರಮಿಸುತ್ತಾನೆ. ಮೇಲೆ ಹೇಳಿದ ದುರ್ಬುದ್ಧಿಯವನ ರೀತಿ ಈ ತೆರನಾದುದು. (ಶಂ. ಭಾ.)

ಹೀಗೆ ಜೀವಾತ್ಮನ ಕರ್ತೃತ್ವವು ಪರಮಾತ್ಮನ ಅನುಮತಿಪೂರ್ವಕ ವಾಗಿರುವಾಗ ಕರ್ಮದ ವಿಷಯದಲ್ಲಿ ಕೇವಲ ಆತ್ಮನೊಬ್ಬನೇ ಕರ್ತಾ ಎಂದು

ಯಾವನು ತಿಳಿಯುತ್ತಾನೆಯೋ ಅವನು ದುರ್ಮತಿಯು–ವಿಪರೀತವಾದ ಬುದ್ಧಿಯುಳ್ಳವನು. ಏಕೆಂದರೆ ಅವನು ಯಥಾವಸ್ಥಿತವಾದ ವಸ್ತುವಿಷಯಕವಾದ ಬುದ್ಧಿಯ ಸಿದ್ಧಿಯನ್ನು ಹೊಂದಿಲ್ಲ. ಅವನು ಕರ್ತೃರೂಪವನ್ನು ಯಥಾವಸ್ಥಿತವಾಗಿ ನೋಡುತ್ತಿಲ್ಲ. (ರಾ. ಭಾ.)

**ಕೇವಲಂ ಆತ್ಮಾನಂ** =ನಿಷ್ಕ್ರಿಯನಾಗಿರುವ ಆತ್ಮನನ್ನು (ಇಲ್ಲಿ ಹೇಳಿರುವ ಕೇವಲ ಶಬ್ದಕ್ಕೆ ಏಕಾಕೀ ಎಂಬ ಅರ್ಥವಲ್ಲ. ನಿಷ್ಕ್ರಿಯ ಎಂಬ ಅರ್ಥ. )

**ಏನಂ ಕೇವಲಮಾತ್ಮಾನಂ ನಿಷ್ಕ್ರಿಯತ್ವಾತ್ ವದನ್ತಿ** ಎಂದು ಅದೇ ಆಯಾಸ್ಯಶ್ರುತಿಯಲ್ಲೇ ಹೇಳಿದೆ.

**ಓಂ ಯಸ್ಯ ನಾಹಂಕೃತೋ ಭಾವೋ ಬುದ್ಧಿರ್ಯಸ್ಯ ನ ಲಿಪ್ಯತೇ ।**
**ಹತ್ವಾಪಿ ಸ ಇಮಾಲ್ಲೋಕಾನ್ನ ಹನ್ತಿ ನ ನಿಬಧ್ಯತೇ ॥೧೭॥**

ಯಾವನಿಗೆ 'ನಾನು ಮಾಡಿದೆನು' ಎಂಬ ಭಾವನೆಯಿರುವುದಿಲ್ಲವೋ, ಯಾವನ ಬುದ್ಧಿಗೆ ಲೇಪವಿಲ್ಲವೋ (ಅಂಟಿಲ್ಲವೋ) ಅವನು ಈ ಲೋಕ ಗಳನ್ನೇ (ಜನರನ್ನೇ ) ನಿಜವಾಗಿ ಕೊಂದರೂ ಕೊಲ್ಲುವುದೂ ಇಲ್ಲ ; ಬಂಧನಕ್ಕೆ ಒಳಗಾಗುವುದೂ ಇಲ್ಲ.

* * *

**(ಅಹಂಕೃತೋ ಭಾವೋ ಯಸ್ಯ ನ** = ಅಹಂಕಾರವಿಲ್ಲದಿದ್ದರೆ, ಅಹಂಕಾರವು ಅವನಲ್ಲಿ (ಆತ್ಮನಲ್ಲಿ ) ಲೀನವಾಗಿಬಿಟ್ಟರೆ ಎಲ್ಲವೂ ಬ್ರಹ್ಮಮಯವಾಗಿಬಿಡುತ್ತದೆ. ಅಹಂಕಾರಭಾವದ ನಿರಾಕರಣವೆಂದರೆ ಇದೇ ಆಗಿದೆ. ಆದರೆ ಇಂತಹ ಸ್ಥಿತಿಯನ್ನು ಪಡೆದುಕೊಂಡನಂತರ ದೇಹವು ತಾನೆಂಬ ಭ್ರಾಂತಿಯು ಹೋಗಿ ತಾವರೆ ಎಲೆಯ ಮೇಲಿನ ನೀರಿನಂತೆ ಶುದ್ಧಾತ್ಮನು ದೇಹದ ಅಧಿಷ್ಠಾನವನ್ನು ಹೊಂದಿದ್ದರೂ ಸಹ ಅದಕ್ಕೆ ಅಂಟಿಕೊಳ್ಳದೆಯೇ ಇದ್ದುಬಿಡುತ್ತಾನೆ. ಅಂತಹ ಜ್ಞಾನಿಯ ವಿಷಯವನ್ನು ಶ್ರೀಕೃಷ್ಣನಿಲ್ಲಿ ವರ್ಣಿಸಿದ್ದಾನೆ.

ಅಹಂಕೃತಭಾವವಿಲ್ಲದವನೆಂದರೆ ಅಹಂ ಎಂಬುದನ್ನು ಪರಮಾತ್ಮನಲ್ಲಿ ಲಯಗೊಳಿಸಿದವನು. ನಾನು ; ನನ್ನದು–ಎಂಬ ಸಂಸ್ಕಾರವೇ ಇಲ್ಲದವನು. ವಿಶ್ವವನ್ನೇ ತಾನೆಂದು ಭಾವಿಸಿರತಕ್ಕವನು ; ಎಲ್ಲದರಲ್ಲಿಯೂ ಸಮಭಾವ

ವಿರತಕ್ಕವನು. ಇಂತಹವನು ಅಹಂಕೃತಭಾವವಿಲ್ಲದವನಾಗುತ್ತಾನೆ. ಬುದ್ಧಿರ್ಯಸ್ಯ ನ ಲಿಪ್ಯತೇ = ಅಹಂಕಾರ, ಬುದ್ಧಿ, ಮನಸ್ಸು–ಇವುಗಳು ಒಂದಕ್ಕೊಂದು ಅಂಟಿಕೊಂಡಿರತಕ್ಕುವುಗಳು, ಪ್ರತ್ಯೇಕವಾಗಿರತಕ್ಕುವುಗಳಲ್ಲ. ಅಹಂಕಾರವು ಆತ್ಮತತ್ತ್ವದಲ್ಲಿ ಲೀನವಾಯಿತೆಂದರೆ ಬುದ್ಧಿಯೂ ಸಹ ಅದರೊಡನೆಯೇ ಲೀನವಾಗಲೇಬೇಕು. 'ನಾನು, ನನ್ನದು' ಎಂಬುದೇ ಅಳಿಸಿಹೋದಮೇಲೆ ಬುದ್ಧಿಯು ಹೇಗೆ ತಾನೇ ಉಳಿದೀತು? ಒಂದು ವೇಳೆ ದೇಹದ ಅಧಿಷ್ಠಾನದಿಂದ ಅದು ನಾಮಮಾತ್ರಕ್ಕೆ ಇರುವುದಾದರೂ ಬುದ್ಧಿಯ ಗುಣವು ಆತ್ಮದ ಗುಣವನ್ನೇ ಹೊಂದಿಬಿಡುತ್ತದೆ. ಆತ್ಮದ ಗುಣವೆಂದರೆ ನಿರ್ಲಿಪ್ತತ್ವ-ನಿರ್ವಿಕಲ್ಪತ್ವ ಇತ್ಯಾದಿ. ಬುದ್ಧಿಗೂ ಸಹ ಅದೇ ಗುಣಗಳೇ ಬಂದುಬಿಡುತ್ತವೆ. ಸ್ಪರ್ಶಶಿಲೆಯನ್ನು ಮುಟ್ಟಿದ ಎಲ್ಲ ಪದಾರ್ಥಗಳೂ ಚಿನ್ನವೇ ಆಗಿಬಿಡುವಂತೆ ಆತ್ಮಸಂಬಂಧವನ್ನು ಹೊಂದಿದ ಎಲ್ಲ ಕರಣಗಳೂ ಆತ್ಮಭಾವವನ್ನೇ ಹೊಂದಿಬಿಡುತ್ತವೆ. ಆದುದರಿಂದ ಯಸ್ಯ ಬುದ್ಧಿರ್ನ ಲಿಪ್ಯತೇ ಎಂದು ಹೇಳಬೇಕಾಗಿಯೇ ಇರಲಿಲ್ಲ. ಯಸ್ಯ ನಾಹಂಕೃತೋ ಭಾವಃ ಎಂಬುದರಿಂದಲೇ ಇದು ಸಿದ್ಧವಾಗಿತ್ತು. ಆದರೂ ಸಹ ಶ್ರೀಕೃಷ್ಣನು ಜ್ಞಾನಿಯನ್ನು ವರ್ಣಿಸುತ್ತಿರುವುದರಿಂದ ವಿಷಯವನ್ನು ಸ್ಪಷ್ಟವಾಗಿ ವಿವರಿಸು ವುದಕ್ಕೋಸ್ಕರ ಯಸ್ಯ ಬುದ್ಧಿರ್ನ ಲಿಪ್ಯತೇ ಯಾವನ ಬುದ್ಧಿಯು ಯಾವು ದರಲ್ಲಿಯೂ ಲೇಪಹೊಂದದೇ ಇರುವುದೋ ಎಂಬುದಾಗಿಯೂ ಹೇಳಿ ದ್ದಾನೆ. ಬುದ್ಧಿಯ ಲೇಪವೆಂದರೆ ಕರ್ಮಮಾಡುವ ಆಸೆ ; ಸ್ವರ್ಗಾದಿ ಫಲ ಗಳನ್ನು ಪಡೆಯುವ ಆಸೆ ; ಸ್ತ್ರೀ-ಪುತ್ರ-ಧನ-ಗೃಹಾದಿಗಳ ಕಾಮನೆ–ಇವುಗಳಾ ವುದೂ ಇಲ್ಲದಿರುವಿಕೆ : 'ಅಹಂ' ಎಂಬುದೊಂದಿದ್ದರೆ ಈ ಕಾಮನೆಗಳೆಲ್ಲವೂ ಸ್ವಾಭಾವಿಕವಾಗಿ ಜೊತೆಯಲ್ಲೇ ಸೇರಿ ಬರುತ್ತವೆ. 'ಅಹಂ' ಎಂಬುದೇ ಇಲ್ಲದ ಮೇಲೆ ಈ ಕಾಮನೆಗಳಿರಲು ಅವಕಾಶವೇ ಇಲ್ಲ.

ಇದಕ್ಕೆ ಮತ್ತೊಂದು ವಿಧವಾದ ಅರ್ಥವನ್ನೂ ಮಾಡಬಹುದಾಗಿದೆ. 'ನಾನು ಮಾಡಿದೆನು ; ನಾನು ಯುದ್ಧದಲ್ಲಿ ಗೆದ್ದೆನು. ನನ್ನಿಂದ ಇವೆಲ್ಲವೂ ಆಯಿತು' ಈ ಮುಂತಾಗಿ ಅಹಂಭಾವವನ್ನು ತಾಳದೇ, ಎಲ್ಲವೂ ಪರಮಾತ್ಮನ ಸಂಕಲ್ಪಶಕ್ತಿಯಿಂದ ಆಗುತ್ತಿದೆ ; ಪರಮಾತ್ಮನ ಪ್ರೇರಣೆಯಿಂದ ಮಾಡಬೇಕಾದ ಕರ್ತವ್ಯವನ್ನು ಮಾಡುತ್ತಿದ್ದೇನೆ ; ಈ ಕರ್ಮಗಳ ಫಲಾಫಲ

ಗಳು ನನ್ನವಲ್ಲ. ಕರ್ತೃತ್ವವೂ ಪರಮಾತ್ಮನಿಗೇ ಸೇರಿದುದು ; ಅದರ ಫಲವೂ ಕೂಡ ಭಗವಂತನ ಪ್ರೀತಿಯೇ ಹೊರತು ಬೇರೇನೂ ಅಲ್ಲ–ಎಂಬ ಭಾವನೆಯಿಂದ ಫಲಾಫಲಗಳ ವಿಷಯವಾಗಿ ಬುದ್ಧಿಯನ್ನು ಕೆಡಿಸಿಕೊಳ್ಳದೇ ಇರುವವನು ಲೋಕಗಳನ್ನೆಲ್ಲಾ ಸಂಹರಿಸಿದರೂ ಅದರಿಂದ ಬಂಧಿತನಾಗುವುದಿಲ್ಲ.

**ಹತ್ವಾಪಿ ಸ ಇಮಾಲ್ಲೋಕಾನ್ ನ ಹನ್ತಿ ನ ನಿಬಧ್ಯತೇ**

ಇಂತಹವನು ಒಂದು ವೇಳೆ ಈ ಎಲ್ಲ ಲೋಕಗಳನ್ನೂ ಹನನಮಾಡಿದರೂ ಸಹ 'ಅವನು ಕೊಂದನು' ಎಂದಾಗುವುದಿಲ್ಲ. ಈ ಕೊಲ್ಲುವಿಕೆಯೆಂಬ ಕರ್ಮ ಮತ್ತು ಅದರ ಶುಭಾಶುಭಫಲ ಇವುಗಳಿಗೂ ಸಹ ಅವನು ಲಕ್ಷ್ಯನಾಗುವುದಿಲ್ಲ. ಆ ಕರ್ಮವಾಗಲೀ ಅದರ ಫಲವಾಗಲೀ ಇವನನ್ನು ಬಂಧಿಸುವುದಿಲ್ಲ.

ಇಂತಹ ಜ್ಞಾನಿಯು ಹಂತಕನಾಗುವುದಿಲ್ಲ ; ಹನನಮಾಡಿದರೂ ಅವನು ಹಂತಕನಲ್ಲ. ಅದರಿಂದ ಅವನು ಬಂಧನಕ್ಕೆ ಸಿಕ್ಕಿಬೀಳುವುದೂ ಇಲ್ಲ. ಇಲ್ಲಿ ಶ್ರೀಕೃಷ್ಣನು ಕರ್ಮಯೋಗದ ವಿಷಯವನ್ನು ಹೇಳುತ್ತಿದ್ದಾನೆ. ಹಿಂದೆ ಎರಡನೆಯ ಅಧ್ಯಾಯದಲ್ಲಿ ಆತ್ಮನ ವರ್ಣನೆಮಾಡುತ್ತಾ–**ಅಚ್ಛೇದ್ಯೋಽಯಮದಾಹ್ಯೋಽಯಂ । ದೇಹೀ ನಿತ್ಯಮವಧ್ಯೋಽಯಂ**–ಎಂದು ಮುಂತಾಗಿ ಹೇಳಿ, ಆತ್ಮನನ್ನು ಕೊಲ್ಲುವ ಸಾಧ್ಯತೆಯೇ ಇಲ್ಲ. ಕೇವಲ ಶರೀರವು ಮಾತ್ರ ವ್ಯತ್ಯಾಸವಾಗುತ್ತದೆ ಎಂದು ಹೇಳಿ, ವರ್ಣಾಶ್ರಮೋಕ್ತವಾದ ಯುದ್ಧವು ದೋಷಾವಹವಲ್ಲವೆಂದು ಪ್ರತಿಪಾದಿಸಿದ್ದನು. ಅಲ್ಲಿಂದ ಇಲ್ಲಿಯವರೆಗೆ ಶ್ರೀಕೃಷ್ಣನು ಅರ್ಜುನನಿಗೆ ಅನೇಕಾನೇಕ ಸಂಶಯಗಳನ್ನು ನಿವಾರಿಸಿ ಜ್ಞಾನಿಯಾದವನು ಕೊಂದರೆ ಅವನು ಕೊಂದವನಾಗುವುದಿಲ್ಲ–ಎಂದು ಇಲ್ಲಿ ಹೇಳಿದ್ದಾನೆ. ಕೊಲ್ಲುವ ಪ್ರಕರಣವು ಬರುವುದು ಕರ್ಮಯೋಗದಲ್ಲಿ ಮಾತ್ರವೇ. ಸಂನ್ಯಾಸದಲ್ಲಿ ಕೊಲ್ಲುವ ಪ್ರಕರಣವೇ ಬರುವುದಿಲ್ಲ. ವರ್ಣಾಶ್ರಮೋಕ್ತವಾದ ಧರ್ಮಗಳನ್ನು ಪರಿಪಾಲಿಸುತ್ತಿರುತ್ತಾನೆ. ಆತ್ಮಾನುಸಂಧಾನವನ್ನೂ ಮಾಡುತ್ತಿದ್ದು ಅಹಂಕಾರಭಾವವನ್ನೂ ತೊರೆದಿರುತ್ತಾನೆ. ಅಂತಹವನೂ ಒಮ್ಮೆ ವರ್ಣಾಶ್ರಮಾನುಸಾರವಾಗಿ ಯುದ್ಧಮಾಡಬೇಕಾಗಿ ಬರುತ್ತದೆ.

ಆಗವನು ಶತ್ರುಗಳನ್ನು ಕೊಲ್ಲಬೇಕೆಂಬ ಭಾವನೆಯಿಂದ ಕೊಲ್ಲುವುದಿಲ್ಲ. ಕರ್ತವ್ಯದೃಷ್ಟಿಯಿಂದ ಧರ್ಮರಕ್ಷಣೆಗೋಸ್ಕರ ಯುದ್ಧಮಾಡುತ್ತಾನೆ. ಆತ್ಮನು ಅವಿನಾಶೀ ಎಂಬ ಕಾರಣದಿಂದಲೂ ಅವನು ಶತ್ರುಗಳನ್ನು ಕೊಂದಂತಾಗು ವುದಿಲ್ಲ. 'ನಾನು ಕೊಂದೆನು' ಎಂಬ ಭಾವನೆಯು ಅವನಿಗೆ ಇಲ್ಲದೇ ಇರುವುದರಿಂದಲೂ ಅವನು ಶತ್ರುಗಳನ್ನು ಕೊಂದಂತಾಗುವುದಿಲ್ಲ ಎಂದ ಮೇಲೆ ಅವನಿಗೆ ಬಂಧನದ ವಿಷಯವೇ ಇಲ್ಲ.

ನ್ಯಾಯಾಧೀಶರೊಬ್ಬರು ಕೊಲೆಪಾತಕನಿಗೆ ಮರಣದಂಡನೆಯನ್ನು ವಿಧಿಸುವುದರಿಂದ ನ್ಯಾಯಾಧೀಶರು ಕೊಲೆಗಡುಕರಾಗುವುದಿಲ್ಲ. ಏಕೆಂದರೆ ಅವರು ನ್ಯಾಯದ ಪ್ರತಿನಿಧಿಯಾಗಿ ಆ ಶಾಸನವನ್ನು ವಿಧಿಸಿದ್ದಾರೆಯೇ ಹೊರತು ತಮ್ಮ ವೈಯಕ್ತಿಕವಾದ ದ್ವೇಷಬುದ್ಧಿಯಿಂದಲ್ಲ. ಹಾಗೆಯೇ ಜ್ಞಾನಿಯು ಲೌಕಿಕವಾಗಿ ಯಾರನ್ನಾದರೂ ಸಂಹರಿಸಿದರೂ ಅದು ಧರ್ಮ ಶಾಸನವನ್ನೊಳಗೊಂಡ ಶಿಕ್ಷಣವಾಗುತ್ತದೆಯೇ ಹೊರತು ಕೊಲೆಯಾಗು ವುದಿಲ್ಲ.)

o o o

ಯಥಾರ್ಥವಾಗಿ ನೋಡುವ ಸುಬುದ್ಧಿಯವನು ಯಾರು ಎಂದರೆ : ಯಾವನ ಭಾವವು ಅಹಂಕಾರದಿಂದ ಕೂಡಿರುವುದಿಲ್ಲವೋ ಮತ್ತು ಯಾವನ ಬುದ್ಧಿಗೆ ಲೇಪವುಂಟಾಗುವುದಿಲ್ಲವೋ ಅವನು. ಶಾಸ್ತ್ರ ಮತ್ತು ಆಚಾರ್ಯರ ಉಪದೇಶ ಮತ್ತು ನ್ಯಾಯಗಳಿಂದ ಶುದ್ಧವಾದ ಅಂತಃಕರಣವುಳ್ಳವನಾಗಿರುವ ಅವನ ಅಂತಃಕರಣದಲ್ಲಿ 'ನಾನು ಕರ್ತೃವು' ಎಂಬ ಪ್ರತೀತಿಯು ಉಂಟಾಗುವುದಿಲ್ಲ. ಅವಿದ್ಯೆಯಿಂದ ಆತ್ಮನಲ್ಲಿ ಆರೋಪಿತವಾಗಿರುವ ಈ ಅಧಿಷ್ಠಾನವೇ ಮುಂತಾದ ಐದು ಕಾರಣಗಳೇ ಎಲ್ಲ ಕರ್ಮಗಳಿಗೂ ಕರ್ತೃಗಳಾಗಿವೆ. ನಾನು ಕರ್ತೃವಲ್ಲ ; ನಾನಾದರೋ ಅವುಗಳ ವ್ಯಾಪಾರಗಳಿಗೆ ಸಾಕ್ಷಿಮಾತ್ರ ಆಗಿರುವವನು ; **ಅಪ್ರಾಣೋ ಹ್ಯಮನಾಃ ಶುಭ್ರಃ ಅಕ್ಷರಾತ್ಪರತಃ ಪರಃ** ಎಂದು ಉಪನಿಷತ್ತು ಹೇಳುವ ಕೇವಲನೂ ಅವಿಕ್ರಿಯನೂ ಆದ ಆತ್ಮ ಸ್ವರೂಪವಾಗಿದ್ದೇನೆ–ಎಂದು ಯಾವನು ನೋಡುತ್ತಾನೆಯೋ ಅವನೇ ಸಮ್ಯಗ್ದರ್ಶನವುಳ್ಳವನು.

ಆತ್ಮನಿಗೆ ಉಪಾಧಿಯಾಗಿರುವ ಯಾವನ ಬುದ್ಧಿಯು (ಅಂತಃಕರಣವು) ಅನುತಾಪಕ್ಕೆ ಒಳಗಾಗುವುದಿಲ್ಲವೋ–'ನಾನು ಈ ಕೆಲಸವನ್ನು ಮಾಡಿದೆನು, ಇದರಿಂದ ನಾನು ನರಕಕ್ಕೆ ಹೋಗುತ್ತೇನೆ'–ಎಂದು ಮೊದಲಾಗಿ ಯಾವನ ಬುದ್ಧಿಗೆ ಲೇಪವುಂಟಾಗುವುದಿಲ್ಲವೋ ಅವನೇ ಸುಬುದ್ಧಿಯುಳ್ಳವನು. ಯಥಾರ್ಥವಾಗಿ ನೋಡುವವನು. ಅವನು ಎಲ್ಲ ಲೋಕಗಳನ್ನೂ ಪ್ರಾಣಿಗಳನ್ನೂ ಕೊಂದರೂ ವಾಸ್ತವವಾಗಿ ಕೊಲ್ಲುವುದಿಲ್ಲ. ಅದರ ಕಾರ್ಯವಾದ ಅಧರ್ಮದ ಫಲವು ಅವನನ್ನು ಬಂಧಿಸುವುದಿಲ್ಲ. ಕೊಂದರೂ ಕೊಲ್ಲುವುದಿಲ್ಲ–ಎಂಬುದು ಪರಸ್ಪರ ವಿರುದ್ಧವಲ್ಲವೇ? ಎಂದರೆ : ಇದರಲ್ಲಿ ದೋಷವೇನೂ ಇಲ್ಲ. ಒಂದು ಲೌಕಿಕದೃಷ್ಟಿಯಿಂದ ಹೇಳಿದ ಮಾತು. ಮತ್ತೊಂದು ಪಾರಮಾರ್ಥಿಕ ದೃಷ್ಟಿಯಿಂದ ಹೇಳಿದ ಮಾತು. ಶರೀರ ಮುಂತಾದುವುಗಳಲ್ಲಿ ಆತ್ಮಬುದ್ಧಿಯನ್ನಿಟ್ಟುಕೊಂಡು ನಾನು ಕೊಲ್ಲುವವನು ಎಂದು ಲೌಕಿಕ ದೃಷ್ಟಿಯಿಂದ ಮೊದಲನೇ ಮಾತನ್ನು ಹೇಳಿದೆ. ಪಾರಮಾರ್ಥಿಕವಾದ ದೃಷ್ಟಿಯಿಂದ ನೋಡಿದಾಗ ಅವನು ಕೊಲ್ಲುವುದಿಲ್ಲ ಮತ್ತು ಬಂಧನಕ್ಕೆ ಸಿಕ್ಕಿ ಬೀಳುವುದಿಲ್ಲ ಎಂಬ ಮಾತು ಹೊಂದಿಕೆಯಾಗುತ್ತದೆ. ಆತ್ಮನು ಅವಿಕಾರೀ. **ಅವಿಕಾರ್ಯೋಽಯಮುಚ್ಯತೇ । ಗುಣೈರೇವ ಕರ್ಮಾಣಿ ಕ್ರಿಯನ್ತೇ । ಶರೀರಸ್ಥೋಽಪಿ ನ ಕರೋತಿ** = ಎಂದು ಮೊದಲಾಗಿ ಗೀತೆಯು ಅನೇಕ ಬಾರಿ ಹೇಳಿದೆ. **ಧ್ಯಾಯತೀವ ಲೇಲಾಯತೀವ**–ಎಂದು ಶ್ರುತಿಗಳು ಪ್ರತಿಪಾದಿಸುತ್ತವೆ. ಆತ್ಮವು ಸ್ವತಂತ್ರವೂ ಮತ್ತು ವಿಕಾರರಹಿತವೂ ಆಗಿರುವುದರಿಂದ ಮೇಲ್ಕಂಡ ವಿಷಯವು ನ್ಯಾಯದಿಂದಲೂ ಸಿದ್ಧವಾಗುತ್ತದೆ. (ಶಂ. ಭಾ.)

ಕರ್ತೃತ್ವವು ಪರಮಪುರುಷನಿಗೆ ಸೇರಿದುದು ಎಂಬ ವಿಷಯವನ್ನು ಅನುಸಂಧಾನಮಾಡುವುದರಿಂದ ಯಾವನ ಕರ್ತೃತ್ವಭಾವನೆಯು ಅಹಂಕಾರಕ್ಕೆ ಒಳಗಾಗುವುದಿಲ್ಲವೋ, 'ನಾನು ಮಾಡುತ್ತೇನೆ' ಎಂಬ ಜ್ಞಾನವು ಯಾವನಿಗೆ ಇರುವುದಿಲ್ಲವೋ ಮತ್ತು ಯಾವನ ಬುದ್ಧಿಗೆ ಲೇಪವಿಲ್ಲವೋ ಎಂದರೆ 'ಈ ಕರ್ಮದಲ್ಲಿ ನನಗೆ ಕರ್ತೃತ್ವವಿಲ್ಲವಾದುದರಿಂದ ಇದರ ಫಲವೂ ನನಗೆ ಸಂಬಂಧಿಸಿದುದಲ್ಲ. ಈ ಕರ್ಮವೂ ನನ್ನದಲ್ಲ' ಎಂಬ ಬುದ್ಧಿಯು ಯಾವನಿಗೆ ಉಂಟಾಗುತ್ತದೆಯೋ–ಅವನು ಭೀಷ್ಮರೇ ಮುಂತಾದವರನ್ನು ಮಾತ್ರವಲ್ಲ ಇಡೀ ಲೋಕವನ್ನೇ ಯುದ್ಧದಲ್ಲಿ ಕೊಂದರೂ ಅವನು ಕೊಂದಂತೆ ಆಗುವುದಿಲ್ಲ.

ಯುದ್ಧವೆಂಬ ಕರ್ಮವು ಅವನನ್ನು ಬಂಧಿಸುವುದೂ ಇಲ್ಲ. ಅದರ ಫಲವನ್ನು ಅವನು ಅನುಭವಿಸುವುದೂ ಇಲ್ಲ ಎಂದು ಅರ್ಥ. (ರಾ. ಭಾ.)

ತನ್ನ ಆತ್ಮವು ನಿಷ್ಕ್ರಿಯ ಎಂದು ತಿಳಿದುಕೊಳ್ಳಬೇಕು. ಈ ನಿಷ್ಕ್ರಿಯತ್ವ ಜ್ಞಾನವನ್ನು ಈ ಶ್ಲೋಕದಲ್ಲಿ ಸ್ತೋತ್ರಮಾಡಿದೆ. ಅಂತಹ ಜ್ಞಾನವುಳ್ಳವನಿಗೆ ಬಂಧನವಿಲ್ಲ. ಇಂದ್ರಾದಿಗಳು ನಿರಹಂಕಾರಿಗಳಾದರೂ ಅವರಿಗೆ ವೃತ್ರವಧೆಯೇ ಮುಂತಾದುವುಗಳಿಂದ ಸ್ವಲ್ಪ ಬಂಧನವಾಯಿತಲ್ಲ ಎಂದರೆ ಯಾವನು ಸ್ವಲ್ಪಮಟ್ಟಿಗೆ ಬಂಧನಕ್ಕೆ ಒಳಗಾಗುತ್ತಾನೆಯೋ ಅವನು ಅಹಂಕಾರಿಯೂ ಆಗಿದ್ದಾನೆಂದು ತಿಳಿಯಬೇಕು. (ಮ. ಭಾ.)

**ಓಂ ಜ್ಞಾನಂ ಜ್ಞೇಯಂ ಪರಿಜ್ಞಾತಾ ತ್ರಿವಿಧಾ ಕರ್ಮಚೋದನಾ ।**
**ಕರಣಂ ಕರ್ಮ ಕರ್ತೇತಿ ತ್ರಿವಿಧಃ ಕರ್ಮಸಂಗ್ರಹಃ ॥೧೮॥**

ಜ್ಞಾನ, ಜ್ಞೇಯ, ಪರಿಜ್ಞಾತಾ–ಎಂದು ಕರ್ಮಚೋದನೆಯು ಮೂರು ವಿಧ. ಕರಣ, ಕರ್ಮ, ಕರ್ತೃ–ಎಂದು ಕರ್ಮಸಂಗ್ರಹವೂ ಮೂರು ವಿಧ.

* * *

(ಕರ್ಮದ ಅಥವಾ ಕಾರ್ಯದ ಚೋದನೆಗೆ ಅಂತರಂಗದ ಮೂರು ಅಂಶಗಳಿವೆ. ಅವುಗಳೇ ಜ್ಞಾನ, ಜ್ಞೇಯ ಮತ್ತು ಪರಿಜ್ಞಾತಾ. ಜ್ಞಾನಂ = ತಿಳುವಳಿಕೆ. ಜ್ಞೇಯಂ = ತಿಳಿಯಲ್ಪಡುವ ವಿಷಯ. ಪರಿಜ್ಞಾತಾ = ತಿಳಿಯುವವನು. ಮೊದಲು ಜ್ಞೇಯವು (ತಿಳಿಯಲ್ಪಡಬೇಕಾದ ವಸ್ತುವು) ಅಥವಾ ವಿಷಯವು ಜ್ಞಾತೃವಿನ ಮನಸ್ಸಿನಲ್ಲಿ ಪ್ರತಿಬಿಂಬಿಸುತ್ತದೆ. ಆಗಲೇ ಅವನು ವಸ್ತುವನ್ನು ತಿಳಿದವನಾಗುತ್ತಾನೆ. ಮಾವಿನಹಣ್ಣು ಜ್ಞೇಯ. ತಿಳಿಯಬೇಕಾದ ಅಥವಾ ಅನುಭವಿಸಬೇಕಾದ ವಸ್ತು. ಇದು ಜ್ಞಾತೃವಿನ ಮನಸ್ಸಿನಲ್ಲಿ ಪ್ರತಿಬಿಂಬಿಸುತ್ತದೆ. ಅದರ ವಿಷಯವಾದ ಅರಿವಿಗೆ ಜ್ಞಾನ ಎಂದು ಹೆಸರು. ಜ್ಞಾನವೆಂದರೆ ಯಾವುದರ ಮೂಲಕ ಯಾವುದು ತಿಳಿಯಲ್ಪಡುತ್ತದೆಯೋ ಅದು ಜ್ಞಾನ. ಪದಾರ್ಥವಿಷಯಕವಾದ ಯಾವ ತಿಳುವಳಿಕೆ ಯುಂಟೋ ಅದನ್ನು ಇಲ್ಲಿ ಜ್ಞಾನ ಎಂದು ಕರೆದಿದೆ. ಪರಮಾತ್ಮಜ್ಞಾನ– ಎಂಬ ಅರ್ಥದಲ್ಲಿ ಇಲ್ಲಿ ಜ್ಞಾನಶಬ್ದವನ್ನು ಬಳಸಿಲ್ಲ. ಜ್ಞೇಯಂ = ತಿಳಿಯಲು ಯೋಗ್ಯವಾದುದು. ಇದೂ ಕೂಡ ಸಾಮಾನ್ಯವಾಗಿ ತಿಳಿಯಲ್ಪಡುವ ಎಲ್ಲ

ವಸ್ತುಗಳನ್ನೂ ಕುರಿತದ್ದಾಗಿದೆ. **ಪರಿಜ್ಞಾತಾ** = ಇವುಗಳನ್ನು ಚೆನ್ನಾಗಿ ತಿಳಿಯುವವನು. ಇವನಿಗೆ ಭೋಕ್ತೃ ಎಂದು ಹೆಸರು. ಈ ಜ್ಞಾನವು ಅನೇಕ ಕರ್ಮಗಳ ಸಮುದಾಯವಾಗಿರುತ್ತದೆ. ಜ್ಞಾತೃವು ಮೇಲೇಳಬೇಕು. ಹಣವನ್ನು ಕಿಸೆಯಿಂದ ತೆಗೆಯಬೇಕು. ಒಳ್ಳೆಯ ಹಣ್ಣನ್ನಿಟ್ಟಿರುವವನ, ಹೆಚ್ಚು ಬೆಲೆಯನ್ನು ಹೇಳದವನ ಅಂಗಡಿಗೆ ಹೋಗಬೇಕು. ಅಲ್ಲಿ ಒಳ್ಳೆಯ ಹಣ್ಣನ್ನು ಆರಿಸಿಕೊಂಡು ಬರಬೇಕು. ಇವೆಲ್ಲಾ ಜ್ಞಾನವೇ ಆಗುತ್ತದೆ. ಜ್ಞೇಯದ ಲಾಭಕ್ಕಾಗಿ ಜ್ಞಾತೃವಿಗೆ ಉಂಟಾದ ಈ ಜ್ಞಾನವು ಕರ್ಮಕ್ಕೆ ಪ್ರೇರಣೆಮಾಡುತ್ತದೆ. ಆದುದರಿಂದ ಜ್ಞೇಯದ ಮೂಲಕ ಜ್ಞಾತೃವಿಗೆ ಉಂಟಾಗುವ ಜ್ಞಾನವು ಕರ್ಮಕ್ಕೆ ಪ್ರಚೋದಕವಾಗುತ್ತದೆ. ಒಬ್ಬನು ಯಾವ ಕಾರ್ಯದಲ್ಲಿ ಪ್ರವೃತ್ತನಾಗಬೇಕಾದರೂ ಅಂತರಂಗದಲ್ಲಿ ಇವಿಷ್ಟೂ ನಡೆದೇ ತೀರಬೇಕಾಗುತ್ತದೆ. ನಾವು ಕಾರ್ಯಮಾಡುವಾಗ ಈ ವಿಷಯವನ್ನು ಯೋಚಿಸಿರಬಹುದು ಅಥವಾ ಯೋಚಿಸದೇ ಇರಬಹುದು. ಬುದ್ಧಿವಂತ-ದಡ್ಡ ಎಂಬ ತಾರತಮ್ಯವಿಲ್ಲದೆ ಕಾರ್ಯಗಳ ಪ್ರೇರಣೆಗೆ ಈ ಮೂರೂ ಸಹ ಕಾರಣಗಳಾಗುತ್ತವೆ.

ಹಾಗೆಯೇ ಬಹಿರಂಗದ ಕರ್ಮಗಳೂ ಸಹ ಮೂರು ವಿಧವಾಗಿರುತ್ತವೆ. **ಕರಣಂ ಕರ್ಮ ಕರ್ತೇತಿ ತ್ರಿವಿಧಃ ಕರ್ಮಸಂಗ್ರಹಃ** = ಕರ್ಮಸಂಗ್ರಹ ಮತ್ತು ಕರ್ಮಚೋದನೆ ಎಂಬ ಎರಡು ಶಬ್ದಗಳೂ ಪಾರಿಭಾಷಿಕ ಶಬ್ದಗಳು. ಕರ್ಮಸಂಗ್ರಹ ಎಂದರೆ ಕರ್ಮಗಳನ್ನು ನೆರವೇರಿಸತಕ್ಕುವುಗಳು. ಕರಣ ಎಂದರೆ ಜ್ಞಾನವು ಸಿದ್ಧಪಡಿಸಿದ ಮಾರ್ಗವನ್ನೇ ಅನುಸರಿಸಿ ಜ್ಞೇಯದ ಪ್ರಾಪ್ತಿಗಾಗಿ ಸಿದ್ಧಪಡಿಸಿಕೊಂಡ ಸಾಧನೆಗಳ ಸಮುದಾಯ. ಅಂಗಡಿಗೆ ನಡೆದು ಹೋಗುವಾಗ ಅದಕ್ಕೆ ಕಾಲು ಕರಣವಾಗುತ್ತದೆ. ವಾಹನವೂ ಕರಣವಾಗಬಹುದು. ಹಣ್ಣನ್ನು ತೆಗೆದು ಚೀಲದೊಳಗೆ ಹಾಕುವುದೂ ಕರಣವೇ. ಒಟ್ಟಿನಲ್ಲಿ ಜ್ಞೇಯದ ಪ್ರಾಪ್ತಿಗೆ ಸಾಧನವಾದುವುಗಳೆಲ್ಲವೂ ಕರಣಗಳೇ. ಆ ಸಾಧನಗಳ (ಕರಣಗಳ) ಮೂಲಕ ಜ್ಞೇಯವನ್ನು ಪಡೆದುಕೊಳ್ಳುವ ಕೆಲಸವು ಕರ್ಮ. ಜ್ಞೇಯವಸ್ತುವನ್ನು ಮೊದಲು ನಿರ್ಧರಿಸುವವನೂ ಕ್ಷೇತ್ರಜ್ಞನೇ. ಅನಂತರ ಕರಣ ಮತ್ತು ಕರ್ಮಗಳ ಮೂಲಕವಾಗಿ ಅದನ್ನು ಪಡೆದುಕೊಂಡು

ಅನುಭವಿಸುವವನೂ ಕ್ಷೇತ್ರಜ್ಞನೇ. ಜ್ಞಾನ, ಜ್ಞೇಯ, ಜ್ಞಾತೃ ಎಂಬ ತ್ರಿಪುಟಿಯಲ್ಲಿ ಜ್ಞಾತೃ ಎಂಬ ಹೆಸರಿನಿಂದಲೂ–**ಕರಣಂ, ಕರ್ಮ, ಕರ್ತಾ** ಎಂಬ ತ್ರಿಪುಟಿಯಲ್ಲಿ ಕರ್ತಾ ಎಂಬ ಹೆಸರಿನಿಂದಲೂ ಈ ಕ್ಷೇತ್ರಜ್ಞನೇ ಕರೆಯಲ್ಪಟ್ಟಿದ್ದಾನೆ. ಅಲ್ಲಿ ಜ್ಞಾತೃಶಬ್ದದಿಂದ ಏಕೆ ನಿರ್ದೇಶಿತನಾದನೆಂದರೆ : ಆ ಸಮಯದಲ್ಲಿ ಅಂತರಂಗದ ಕೆಲಸವು ಮಾತ್ರವೇ ನಡೆಯುತ್ತದೆ. ಇದು ಕೇವಲ ಮನಸ್ಸಿನ ಅಥವಾ ಬುದ್ಧಿಯ ಕಾರ್ಯ ; ಅಂತರಿಂದ್ರಿಯಕಾರ್ಯ. ಆದುದರಿಂದ ಅವನು 'ಜ್ಞಾತಾ ; ತಿಳಿದುಕೊಳ್ಳುವವನು' ಆಗುತ್ತಾನೆ. ಎರಡನೆಯ ತ್ರಿಪುಟಿಯಲ್ಲಿ ಕರ್ತಾ ಎಂಬ ಹೆಸರು ಏಕೆಂದರೆ : ಇಲ್ಲವನು ಬಹಿರಿಂದ್ರಿಯಗಳ ಸಹಕಾರದಿಂದ ಕಾರ್ಯಮಾಡಬೇಕಾಗುತ್ತದೆ. ಆದುದರಿಂದ ಅವನು 'ಕರ್ತಾ ; ಕಾರ್ಯಮಾಡುವವನು' ಆಗುತ್ತಾನೆ.

ಇದಕ್ಕೆ ಶ್ರೀ ಡಾ|| ಡಿ. ವಿ. ಜಿ. ಯವರು ಕೊಟ್ಟಿರುವ ನಿರೂಪಣೆಯು ಹೀಗಿದೆ : **ಜ್ಞಾನಂ ಜ್ಞೇಯಂ ಪರಿಜ್ಞಾತಾ ತ್ರಿವಿಧಾ ಕರ್ಮಚೋದನಾ ।**

ಕರ್ಮಪ್ರೇರಣೆಯು ಮೂರು ಅಂಶಗಳ ಸಂಯೋಗದಿಂದ ಆಗತಕ್ಕುದು. ತಿಳಿವಳಿಕೆ, ತಿಳಿಯಲ್ಪಡುವ ವಿಷಯ ಮತ್ತು ತಿಳಿದವನು. ಇದನ್ನೇ **ಜ್ಞಾತಾ ಜ್ಞೇಯಂ ಪರಿಜ್ಞಾನಂ** ಎಂದಾದರೂ ಹೇಳಬಹುದು. ನೆಲುವಿನ ಮೇಲೆ ಮುಚ್ಚಿಟ್ಟಿರುವ ಪಾತ್ರೆಯಲ್ಲಿ ಭಕ್ಷ್ಯವಿದೆ. ಇದು ಜ್ಞೇಯ. ಅದು ಹುಡುಗನಿಗೆ ಗೊತ್ತಾಗುತ್ತದೆ. ಅವನು ಜ್ಞಾತಾ. ಅದು ಭಕ್ಷ್ಯದ ಘಮಲಿನಿಂದ ಗೊತ್ತಾದುದು. ಆ ಘಮಲು ಆ ಪಾತ್ರೆಯಿಂದ ಹೊರಟು ಅವನ ಮೂಗನ್ನು ತಲುಪಿದಾಗ ಆ ಇಂದ್ರಿಯದ ಮೂಲಕ ಮನಸ್ಸನ್ನು ಕೆರಳಿಸಿದುದು ಜ್ಞಾನ. ತಿಂಡಿ-ಮೂಗು-ಮನಸ್ಸು ಇವುಗಳ ಸಂಸರ್ಗದಿಂದ ಲಡ್ಡುಕತಸ್ಕರ ಕರ್ಮಕ್ಕೆ ಪ್ರೇರಣೆ. ಆ ಪ್ರೇರಣೆಯು ಅಂತರಂಗದೊಳಗೆ ಆಗುವ ಕೆಲಸ. ಅದಾದ ಮೇಲೆ ಬಹಿರಂಗದ್ದು. **ಕರಣಂ ಕರ್ಮ ಕರ್ತೇತಿ ತ್ರಿವಿಧಃ ಕರ್ಮಸಂಗ್ರಹಃ ।** ಆ ನೆಲುವನ್ನು ಕೈಗೆ ಎಟುಕಿಸಿಕೊಳ್ಳಲು ಏರ್ಪಟ್ಟ ಏಣಿ ಮೊದಲಾದ ಸಾಧನಗಳು ಕರಣ. ಪಾತ್ರೆಯೊಳಕ್ಕೆ ಕೈಹಾಕಿ ಭಕ್ಷ್ಯವನ್ನು ತೆಗೆದುಕೊಂಡು ಬಾಯೊಳಕ್ಕೆ ತುರುಕಿಕೊಳ್ಳುವುದು ಕರ್ಮ. ಆ ಬಳಿಕ ನಾಲಿಗೆ

ಚಪ್ಪರಿಸಿದವನು ಕರ್ತಾ. ಹೀಗೆ ಕರ್ಮಪೂರಣಕ್ಕೆ ಬೇಕಾದ ಅಂಶಗಳು ಮೂರು.

ಕರ್ಮಚೋದನೆಯು ಜ್ಞಾತಾ, ಜ್ಞಾನ, ಜ್ಞೇಯ–ಎಂಬ ಅಂತರಂಗದ ಮೂರಂಶಗಳಿಂದ. ಕರ್ಮಸಾಧನೆಯು ಕರ್ತಾ, ಕರಣ, ಕರ್ಮ–ಎಂಬ ಬಹಿರಂಗದ ಮೂರಂಶಗಳಿಂದ, ಒಂದಂಶವು ಎರಡು ವರ್ಗಗಳಿಗೂ ಸಮಾನವಾದುದು. ಮೊದಲು ಜೀವಕ್ಕೆ ಜ್ಞಾನಲಾಭವಾಗುತ್ತದೆ. ಆಮೇಲೆ ಜ್ಞಾನದಿಂದ ಕರ್ಮಪ್ರಯತ್ನವು ನಡೆಯುತ್ತದೆ.”

ಶ್ರೀತಿಲಕರ ನಿರೂಪಣೆಯು ಹೀಗಿದೆ :

ಕರ್ಮಚೋದನೆ ಹಾಗೂ ಕರ್ಮಸಂಗ್ರಹ–ಎಂಬ ಈ ಶಬ್ದಗಳು ಪಾರಿಭಾಷಿಕವಾದುವುಗಳು. ಗಡಿಗೆಯನ್ನು ಮಾಡಬೇಕಾಗಿದೆ ಎಂದು ತಿಳಿಯಿರಿ. ಆಗ ‘ನಾನೇನು ಮಾಡತಕ್ಕದ್ದು’ ಎಂಬುದು ಜ್ಞೇಯವು. ಅದನ್ನು ಹೀಗೆ ಹೀಗೆಯೇ ಮಾಡಬೇಕೆಂಬುದು ಜ್ಞಾನವು. ಈ ಬಗೆಯಾಗಿ ಮನದಲ್ಲಿ ವಿಚಾರಮಾಡುವ ಕುಂಬಾರನು ಜ್ಞಾತೃವು. ಇದೆಲ್ಲವೂ ಕರ್ಮಚೋದನೆಯು. ಹೀಗೆ ಮನಸ್ಸಿನ ನಿಶ್ಚಯವಾದ ಬಳಿಕ ಆ ಕುಂಬಾರನು (ಕರ್ತೃವು) ಮಣ್ಣು, ತಿಗರಿ ಮೊದಲಾದ ಸಾಧನಗಳನ್ನು (ಕರಣಗಳನ್ನು) ಹುಡುಕಿಕೊಂಡು ಪ್ರತ್ಯಕ್ಷಗಡಿಗೆಯನ್ನು (ಕರ್ಮವನ್ನು) ಮಾಡುತ್ತಾನೆ. ಇದಕ್ಕೆ ಕರ್ಮಸಂಗ್ರಹವೆನ್ನುತ್ತಾರೆ.)

o o o

ಜ್ಞಾನ, ಜ್ಞೇಯವಸ್ತು ಮತ್ತು ಜ್ಞಾತೃ ಎಂಬ ಮೂರು ಕರ್ಮಗಳ ಪ್ರವರ್ತಕವಾದುವು. ಕರಣ, ಕರ್ಮ ಮತ್ತು ಕರ್ತೃ ಎಂದು ಮೂರು ಬಗೆಯಾಗಿದೆ ಕರ್ಮಸಂಗ್ರಹವು.

ಜ್ಞಾನಂ = ಜ್ಞಾನವು ಸಾಮಾನ್ಯವಾಗಿ ಎಲ್ಲ ಪದಾರ್ಥವಿಷಯಕವಾದ ಜ್ಞಾನ. ಕರಣಗಳ ಮೂಲಕ ಯಾವ ಪದಾರ್ಥವನ್ನು ತಿಳಿಯುತ್ತೇವೆಯೋ ಅದು ಜ್ಞೇಯ. ಎಂದರೆ ತಿಳಿವಳಿಕೆಗೆ ಬರುವ ಪದಾರ್ಥ. ಎಲ್ಲ ಪದಾರ್ಥಗಳೂ ಆಗುತ್ತವೆ. ಪರಿಜ್ಞಾತಾ ಎಂದರೆ ಉಪಾಧಿಯಿಂದ ಕೂಡಿದ ಅವಿದ್ಯಾಕಲ್ಪಿತವಾದ ಭೋಕ್ತೃ ಎಂಬ ಈ ಮೂರರ ಸಮುದಾಯವು ಯಾವು

ದುಂಟೋ ಅದೇ ಸಾಮಾನ್ಯವಾಗಿ ಎಲ್ಲ ಕರ್ಮಗಳಿಗೂ ಪ್ರವರ್ತಕವಾಗಿರುವುದರಿಂದ ಅದು ಕರ್ಮಚೋದನೆ ಎನಿಸುತ್ತದೆ. ಏಕೆಂದರೆ ಈ ಮೂರೂ ಒಟ್ಟಿಗೆ ಸೇರಿದಾಗ ತಾನೇ ಪದಾರ್ಥಗಳ ತ್ಯಾಗ, ಸ್ವೀಕಾರ ಮುಂತಾದ ಪ್ರಯೋಜನವುಳ್ಳ ಎಲ್ಲ ಕರ್ಮಗಳು ಪ್ರಾರಂಭವಾಗುವುವು?

ಈಗ ಅಧಿಷ್ಠಾನವೇ ಮುಂತಾದ ಐದು ಕಾರಣಗಳಿಂದ ಉತ್ಪನ್ನವಾಗಿ ಮನಸ್ಸು, ಮಾತು ಮತ್ತು ಶರೀರಗಳೆಂಬ ಆಶ್ರಯಗಳ ಭೇದದಿಂದ ಮೂರು ವರ್ಗಗಳಾಗಿ ವಿಂಗಡಿಸಲ್ಪಟ್ಟಿರುವ ಎಲ್ಲ ಕರ್ಮಗಳೂ ಕರಣವೇ ಮುಂತಾದ ಮೂರರಿಂದ ಸಂಗ್ರಹಿಸಲ್ಪಟ್ಟಿವೆ.

**ಕರಣಂ** ಎಂದರೆ ಕಿವಿಯೇ ಮುಂತಾದ ಹೊರಗಿನ ಕರಣಗಳು ಮತ್ತು ಬುದ್ಧಿಯೇ ಮುಂತಾದ ಒಳಗಿನ ಕರಣಗಳು. **ಕ್ರಿಯತೇ ಅನೇನ ಇತಿ ಕರಣಂ.** ಯಾವುದರ ಮೂಲಕ ಕಾರ್ಯವನ್ನು ಮಾಡುತ್ತೇವೆಯೋ ಅದು ಕರಣ. ಕರ್ಮ ಕರ್ತೃವಿಗೆ ಈಪ್ಸಿತವಾದುದು ; ಕ್ರಿಯೆಯಿಂದ ವ್ಯಾಪ್ಯವಾದುದು. ಕರ್ತಾ ಎಂದರೆ ಕಿವಿಯೇ ಮುಂತಾದ ಕರಣಗಳನ್ನು ಅವುಗಳ ವ್ಯಾಪಾರದಲ್ಲಿ ತೊಡಗಿಸುವ ಉಪಾಧಿಸ್ವರೂಪವಾದ ಜೀವ–ಹೀಗೆ ಮೂರು ಬಗೆಯಾಗಿದೆ. **ಕರ್ಮಸಂಗ್ರಹಃ** = ಸಂಗ್ರಹ ಎಂದರೆ ಯಾವುದರಲ್ಲಿ ಎಲ್ಲವೂ ಸಂಗ್ರಹಿಸಲ್ಪಡುತ್ತದೆಯೋ ಅದು. (ಶಂ. ಭಾ.)

**ಜ್ಞಾನಂ** = ಕರ್ತವ್ಯವಾದ ಕರ್ಮದ ಅರಿವು. **ಜ್ಞೇಯಂ** = ಕರ್ತವ್ಯವಾದ ಕರ್ಮ. **ಪರಿಜ್ಞಾತಾ** = ಅದನ್ನು ಅರಿಯುವವನು–ಎಂದು ಮೂರು ಬಗೆಯಾಗಿದೆ. **ಕರ್ಮಚೋದನೆ**–ಎಂದರೆ ಜ್ಯೋತಿಷ್ಟೋಮವೇ ಮುಂತಾದ ಕರ್ಮಗಳ ವಿಧಿ. ಅವುಗಳಲ್ಲಿ ಜ್ಞೇಯವಾಗಿರುವ ಕರ್ಮವು ಕರಣ, ಕರ್ಮ ಮತ್ತು ಕರ್ತಾ ಎಂಬ ಮೂರರಲ್ಲಿ ಅಡಕವಾಗುತ್ತದೆ.

**ಕರಣ**–ಎಂದರೆ ಸಾಧನವಾದ ದ್ರವ್ಯವೇ ಮುಂತಾದುವು. **ಕರ್ಮ**–ಎಂದರೆ ಯಜ್ಞವೇ ಮುಂತಾದುವು. **ಕರ್ತಾ**–ಎಂದರೆ ಕರ್ಮಗಳನ್ನು ಅನುಷ್ಠಾನಮಾಡುವವನು. (ಯಜಮಾನ.) (ರಾ. ಭಾ.)

ಹಾಗಾದರೆ **ಶ್ರೌತ-ಸ್ಮಾರ್ತಗಳೇ** ಮುಂತಾದ ವಿಧಿಗಳು ಪುರುಷನನ್ನು ಕುರಿತದ್ದೇ ಅಲ್ಲ. ಏಕೆಂದರೆ ಅವನು ಅಕರ್ತಾ ಎಂಬ ಶಂಕೆಯನ್ನು

ಪರಿಹರಿಸಲು ಈ ಶ್ಲೋಕವನ್ನು ಹೇಳಿದೆ. **ತ್ರಿವಿಧಾ ಕರ್ಮಚೋದನಾ** = ಈ ಮೂರು ವಿಧಿಗಳನ್ನು ಕುರಿತು ಕರ್ಮಗಳ ವಿಧಿಯು ಇರುವುದರಿಂದ ಅದು ತ್ರಿವಿಧಾ ಎಂದು ಹೇಳಲ್ಪಟ್ಟಿದೆ. ಕಾರಣಗಳನ್ನು ಸಂಕ್ಷೇಪಿಸಿ ಹೇಳುತ್ತದೆ ಶ್ಲೋಕದ ಉತ್ತರಾರ್ಧ. **ಕರ್ಮಸಂಗ್ರಹಃ**=ಕರ್ಮ ಮತ್ತು ಕಾರಣಗಳ ಸಂಗ್ರಹ. ಅಧಿಷ್ಠಾನವೇ ಮುಂತಾದುವು ಕಾರಣದಲ್ಲಿ ಅಂತರ್ಭೂತವಾಗು ತ್ತವೆ. ಜೀವನು ಅಕರ್ತೃವಾದರೂ ವಿಧಿಯ ಮೂಲಕ ಈಶ್ವರನ ಪ್ರಸಾದ ದಿಂದ ಇಚ್ಛೆಯುಂಟಾದುದರಿಂದ ಮೇಲೆ ಹೇಳಿದ ಕಾರಣಗಳಿಂದ ಕರ್ಮಗಳ ಮೂಲಕ ಅದು ಪುರುಷಾರ್ಥ ಎಂದರೆ ಪುರುಷನನ್ನು ಕುರಿತದ್ದೇ ಆಗುತ್ತದೆ. ಜೀವನು ಈಶ್ವರಾಧೀನನಾದರೂ ವಿಧಿಯ ಮೂಲಕ ಅವನಿಂದಲೇ ನಿಯಂತ್ರಿತನಾಗಿ ಇಚ್ಛೆ ಮತ್ತು ಪ್ರಯತ್ನಗಳನ್ನು ಮಾಡುತ್ತಾನೆ. ವಸ್ತುತಃ ಜೀವನು ಅಕರ್ತನೇ ಆದರೂ ಆಭಿಮಾನಿಕವಾದ ಕರ್ತೃತ್ವವು ಅವನಿಗೇ ಇರುವುದು.

ಅವನಿಗೆ ಇರುವ ಸ್ವಾತಂತ್ರ್ಯವು ಜಡದ ದೃಷ್ಟಿಯಿಂದ. ಆದುದರಿಂದ ಪ್ರವೃತ್ತಿವಿಧಿಗಳು ವ್ಯರ್ಥವಾಗುವುದಿಲ್ಲ. (ಮ. ಭಾ.)

**ಓಂ ಜ್ಞಾನಂ ಕರ್ಮ ಚ ಕರ್ತಾ ಚ ತ್ರಿಧೈವ ಗುಣಭೇದತಃ ।**
**ಪ್ರೋಚ್ಯತೇ ಗುಣಸಂಖ್ಯಾನೇ ಯಥಾವಚ್ಛೃಣು ತಾನ್ಯಪಿ ॥೧೯॥**

ಜ್ಞಾನವೂ, ಕರ್ಮವೂ, ಕರ್ತೃವೂ ಗುಣಭೇದದಿಂದ ಮೂರು ಬಗೆ ಎಂದು ಗುಣದ ಪರಿಗಣನೆಯಲ್ಲಿ ಹೇಳಲ್ಪಟ್ಟಿರುತ್ತದೆ. ಅವುಗಳನ್ನು ಯಥಾವತ್ತಾಗಿ ಹೇಳುತ್ತೇನೆ ಕೇಳು.

* * *

(**ಗುಣಸಂಖ್ಯಾನ**–ಎಂದರೆ ಸಾಂಖ್ಯಶಾಸ್ತ್ರ. ಪ್ರಕೃತಿ-ಪುರುಷರ ಏಕೀಕರಣದಲ್ಲಿ ಇವನು ಪುರುಷನು ; ಇದು ಪ್ರಕೃತಿಯು–ಎಂದು ಸ್ಪಷ್ಟವಾಗಿ ನಿರ್ಣಯಿಸುವ ಶಾಸ್ತ್ರವಿದು. ಸ್ವರೂಪವನ್ನು ಇಪ್ಪತ್ತುನಾಲ್ಕು ತತ್ತ್ವಗಳ ಮಾಪನದಿಂದ ಅಳತೆಮಾಡಿ ಜೀವನಿಗೆ ಪರತತ್ತ್ವವನ್ನು ದೊರಕಿಸಿಕೊಟ್ಟು ಸುಖಿಯನ್ನಾಗಿ ಮಾಡುವುದು. ಈ ಶಾಸ್ತ್ರವು ಗುಣಭೇದವನ್ನು ವರ್ಣಿಸುವುದು. ಆ ಗುಣಗಳು ತಮ್ಮ ಸಾಮರ್ಥ್ಯದಿಂದ ದೃಶ್ಯಗಳನ್ನೆಲ್ಲಾ ಮೂರು ಭಾಗವಾಗಿ ವಿಂಗಡಿಸಿ ಅವನ್ನು ತಮ್ಮ ಅಂಕಿತದಲ್ಲಿ ಇಟ್ಟುಕೊಳ್ಳುವುವು.

ಬ್ರಹ್ಮನಿಂದ ಹಿಡಿದು ಕೀಟದವರೆಗಿನ ಎಲ್ಲ ವಸ್ತುಗಳನ್ನೂ ಸತ್ತ್ವ-ರಜಸ್ತಮಸ್ಸುಗಳೆಂದು ಮೂರು ಭಾಗವಾಗಿ ಈ ಶಾಸ್ತ್ರವು ವಿಂಗಡಿಸಿದೆ. ಅದೇ ರೀತಿಯಲ್ಲಿ ಜ್ಞಾನ, ಕರ್ಮ ಮತ್ತು ಕರ್ತೃಗಳನ್ನೂ ಸಹ ಸಾಂಖ್ಯಶಾಸ್ತ್ರವು ಸತ್ತ್ವ-ರಜಸ್ತಮೋಗುಣಗಳೆಂಬ ಮೂರು ಭಾಗಗಳಾಗಿ ವಿಂಗಡಿಸಿದೆ. ಜ್ಞಾನ ಎಂದ ಮಾತ್ರದಲ್ಲಿ ಅದು ಸತ್ತ್ವಗುಣದ್ದಾಗುವುದಿಲ್ಲ. ಜ್ಞಾನದಲ್ಲಿಯೇ ಮೂರು ಭೇದಗಳಿವೆ. ಸತ್ತ್ವಜ್ಞಾನ, ರಜೋಜ್ಞಾನ, ತಮೋಜ್ಞಾನ. ಇದೇ ರೀತಿಯಲ್ಲಿ ಕರ್ಮ-ಕರ್ತೃಗಳನ್ನೂ ಸಹ ಮೂರು ವಿಭಾಗವಾಗಿ ವಿಂಗಡಿಸಿ ಈ ಶಾಸ್ತ್ರದಲ್ಲಿ ಹೇಳಿದ್ದಾರೆ. ಅದನ್ನೇ ನಿನಗೆ ಯಥಾವತ್ತಾಗಿ ಹೇಳುತ್ತೇನೆ, ಕೇಳು ಎನ್ನುತ್ತಾನೆ ಶ್ರೀಕೃಷ್ಣ.

ಪಾರಿಭಾಷಿಕವಾದ ಸಾಂಖ್ಯದರ್ಶನ ಎಂದು ಅರ್ಥೈಸುವುದರ ಬದಲು **ಗುಣಸಂಖ್ಯಾನೇ** ಎಂಬುದಕ್ಕೆ ಗುಣಗಳನ್ನು ಪರಿಗಣನೆಮಾಡುವ ಸಂದರ್ಭದಲ್ಲಿ ಎಂದೂ ಅರ್ಥಮಾಡಬಹುದು.)

o o o

ಇವು ಸತ್ತ್ವವೇ ಮುಂತಾದ ಗುಣಗಳ ಭೇದದಿಂದ ಜ್ಞಾನ, ಕ್ರಿಯೆ ಮತ್ತು ಕರ್ತಾ (ಕ್ರಿಯೆಯನ್ನು ನೆರವೇರಿಸುವವನು) ಎಂದು ಮೂರೇ ಬಗೆ. (ಇಲ್ಲಿ ಕರ್ಮ ಎಂದರೆ ವ್ಯಾಕರಣದಲ್ಲಿ ಪಾರಿಭಾಷಿಕವಾಗಿರುವ ಕಾರಕವಿಶೇಷವಲ್ಲ ). ಗುಣಸಂಖ್ಯಾನದಲ್ಲಿ ಎಂದರೆ ಗುಣಗಳ ಪರಿಗಣನೆಯನ್ನು ಮಾಡುವ ಕಪಿಲಪ್ರಣೀತವಾದ ಶಾಸ್ತ್ರದಲ್ಲಿ ಹೇಳಲ್ಪಟ್ಟಿದೆ. ಈ ಕಾಪಿಲಶಾಸ್ತ್ರವು ಕೂಡ ಪಾರಮಾರ್ಥಿಕವಾದ ಬ್ರಹ್ಮೈಕ್ಯವಿಷಯದಲ್ಲಿ ತತ್ತ್ವಕ್ಕೆ ವಿರುದ್ಧವಾಗಿದ್ದರೂ ಗುಣಗಳ ಭೋಕ್ತೃವಿನ (ಜೀವನ) ವಿಷಯದಲ್ಲಿ ಪ್ರಮಾಣವೇ ಆಗಿದೆ. ಕಪಿಲರು ಗುಣಗಳನ್ನು ಮತ್ತು ಗುಣಗಳ ವ್ಯಾಪಾರಗಳನ್ನು ನಿರೂಪಿಸುವುದರಲ್ಲಿ ನಿಪುಣರೇ ಆಗಿದ್ದಾರೆ ಎಂದು ಸ್ತುತಿಸುವುದಕ್ಕೋಸ್ಕರ ಅದನ್ನು ಪ್ರಮಾಣವನ್ನಾಗಿ ಗ್ರಹಿಸಿದೆ. 'ಅವುಗಳನ್ನೂ ಕೂಡ ನ್ಯಾಯ ಮತ್ತು ಶಾಸ್ತ್ರಗಳಿಗೆ ಅನುಗುಣವಾಗಿ ಹೇಳುತ್ತೇನೆ, ಕೇಳು. ನಾನು ಹೇಳುವ ವಿಷಯದ ಬಗೆಗೆ ಮನಃಸಮಾಧಿಯನ್ನು ಹೊಂದು' ಎನ್ನುತ್ತಾನೆ ಶ್ರೀಕೃಷ್ಣ. (ಶಂ. ಭಾ.)

ಕರ್ತವ್ಯಕರ್ಮವಿಷಯವಾದ ಜ್ಞಾನ, ಅನುಷ್ಠಾನಮಾಡಲ್ಪಡುವ

ಕರ್ಮ ಮತ್ತು ಅದನ್ನು ಅನುಷ್ಠಾನಮಾಡುವವನು–ಇವು ಮೂರು, ಸತ್ತ್ವವೇ ಮುಂತಾದ ಗುಣಗಳ ಭೇದದಿಂದ ಮೂರೇ ಬಗೆ–ಎಂದು ಗುಣಗಳ ಕಾರ್ಯವನ್ನು ವರ್ಣನೆಮಾಡುವಾಗ ಹೇಳುತ್ತಾರೆ. ಹಾಗೆ ಗುಣಗಳಿಂದ ಭಿನ್ನ ವಾಗಿರುವ ಜ್ಞಾನ ಮುಂತಾದುವುಗಳನ್ನು ಯಥಾವತ್ತಾಗಿ ಹೇಳುತ್ತೇನೆ ಕೇಳು.

(ರಾ. ಭಾ.)

**ಗುಣಸಂಖ್ಯಾನೇ** = ಗುಣಗಳನ್ನು ಗಣನೆಮಾಡುವ ಪ್ರಕರಣದಲ್ಲಿ.

(ಮ. ಭಾ.)

**ಓಂ ಸರ್ವಭೂತೇಷು ಯೇನೈಕಂ ಭಾವಮವ್ಯಯಮೀಕ್ಷತೇ ।**
**ಅವಿಭಕ್ತಂ ವಿಭಕ್ತೇಷು ತಜ್ಜ್ಞಾನಂ ವಿದ್ಧಿ ಸಾತ್ತ್ವಿಕಮ್ ॥೨೦॥**

ಎಲ್ಲ ಭೂತಗಳಲ್ಲಿಯೂ ಅವ್ಯಯವಾದ ಒಂದೇ ಭಾವವನ್ನು ಯಾವುದರಿಂದ ನೋಡುತ್ತಾನೆಯೋ, ವಿಭಕ್ತವಾಗಿರುವ ಭೂತಗಳಲ್ಲಿ ಅವಿಭಕ್ತವಾಗಿರುವ ಒಂದೇ ಭಾವವನ್ನು ಯಾವುದರಿಂದ ಕಾಣುತ್ತಾನೆಯೋ ಆ ಜ್ಞಾನವನ್ನು ಸಾತ್ತ್ವಿಕವೆಂದು ತಿಳಿ.

* * *

(ಹದಿಮೂರನೆಯ ಅಧ್ಯಾಯದ ೧೬ನೆಯ ಶ್ಲೋಕದಲ್ಲಿ ಆತ್ಮನ ವರ್ಣನೆಮಾಡುವಾಗ :

**ಅವಿಭಕ್ತಂ ಚ ಭೂತೇಷು ವಿಭಕ್ತಮಿವ ಚ ಸ್ಥಿತಮ್ ।**

ಎಲ್ಲ ಪ್ರಾಣಿಗಳಲ್ಲಿಯೂ ಬೇರೆ ಬೇರೆಯಾಗಿ ಇಲ್ಲದವನು, ದೇಹದೃಷ್ಟಿ ಯಿಂದ ನೋಡುವವರಿಗೆ ಬೇರೆ ಬೇರೆಯಾಗಿರುವವನಾಗಿ ಕಾಣುವನು–ಎಂದು ಶ್ರೀಕೃಷ್ಣನೇ ಹೇಳಿದ್ದಾನೆ. ಅದನ್ನೇ ಉಪಸಂಹಾರಮಾಡುತ್ತಾ ಈ ಶ್ಲೋಕದಲ್ಲಿ ; **ವಿಭಕ್ತೇಷು ಸರ್ವಭೂತೇಷು**–ಎಲ್ಲ ಪ್ರಾಣಿಗಳೂ ವಿಭಕ್ತ ವಾಗಿವೆ ; ಪ್ರತ್ಯೇಕ-ಪ್ರತ್ಯೇಕವಾಗಿವೆ ; ಶರೀರಗಳೂ ಬೇರೆ ಬೇರೆ ; ಗುಣ-ಸ್ವಭಾವಗಳೂ ಸಹ ಬೇರೆ-ಬೇರೆ. ಇಂತಹ ವಿಭಿನ್ನವಾಗಿರುವ ಅನೇಕಾನೇಕ ಪ್ರಾಣಿಗಳಲ್ಲಿ **ಅವಿಭಕ್ತಂ ಅವ್ಯಯಂ ಏಕಂ ಭಾವಂ ಯೇನ ಈಕ್ಷತೇ** ಯಾವ ವಿಭಾಗವೂ ಇಲ್ಲದೇ ಅಖಂಡವಾದ, ಪೂರ್ಣವಾದ, ಅವಿನಾಶಿಯಾದ, ಒಂದೇ ವಸ್ತುವನ್ನು ಯಾವ ಪೂರ್ಣಜ್ಞಾನದಿಂದ ನೋಡುತ್ತಾನೆಯೋ. ಪೃಥ

ಕ್ಕಾಗಿ ಕಂಡರೂ ಎಲ್ಲ ಪ್ರಾಣಿಗಳಲ್ಲಿಯೂ ಇರತಕ್ಕವನು ಒಬ್ಬನೇ. ನೀರು ತುಂಬಿದ ಸಾವಿರಾರು ಪಾತ್ರೆಗಳಲ್ಲಿ ಸೂರ್ಯನ ಸಾವಿರಾರು ಪ್ರತಿಬಿಂಬಗಳು ಕಂಡರೂ ಸೂರ್ಯನಿರುವವನು ಒಬ್ಬನೇ–ಎಂಬುದನ್ನು ಅರಿಯಬೇಕು. ಗುಣ-ಸ್ವಭಾವಗಳು ಚಿದಾತ್ಮನಿಗಿರುವ ಆವರಣಮಾತ್ರ. ಆತ್ಮನಿಗೆ ಸಹಜವಾಗಿ ಗುಣ-ಧರ್ಮಗಳೊಂದೂ ಇರುವುದಿಲ್ಲ. ಇದೊಂದು ಹಾವಿನ ಪೊರೆ ಇದ್ದಂತೆ. ಕಾಲಚಕ್ರವು ಉರುಳಿದಂತೆ ಆವರಣರೂಪವಾದ ಈ ಗುಣ- ಧರ್ಮಗಳು ವ್ಯತ್ಯಾಸವಾಗುತ್ತಾ ಕಡೆಯಲ್ಲಿ ಕಳಚಿಬೀಳುತ್ತವೆ. ಆಗ ಉಳಿಯುವುದು ಒಂದೇ **ಏಕಂ ಸತ್**. ಅಲ್ಲಿಯವರೆಗೂ **ಬಹುಧಾ ವದನ್ತಿ** ಅನೇಕವಾಗಿದೆಯೆಂದು ಹೇಳುತ್ತಾರೆ. ಈ ರಹಸ್ಯವನ್ನು ತಿಳಿಯುವುದೇ ಸಾತ್ತ್ವಿಕಜ್ಞಾನ. ಆದರೆ ಈ ಜ್ಞಾನದಲ್ಲಿ ಜ್ಞೇಯ ಮತ್ತು ಜ್ಞಾತಾ ಎರಡೂ ಲೀನವಾಗಿಬಿಡುವುವು. ಸೂರ್ಯನು ಕತ್ತಲೆಯನ್ನು ಕಾಣದಂತೆ–ಸಮುದ್ರನು ತನ್ನೊಳಗೆ ಪ್ರವೇಶಿಸಿದ ನದಿಗಳಾವುದೆಂಬುದನ್ನು ಅರಿಯದಂತೆ–ಜ್ಞಾನಸೂರ್ಯನು ಬೆಳಗಲಾಗಿ ಜ್ಞೇಯ ಜ್ಞಾತೃಗಳ ಅರಿವು ಉಳಿಯುವುದಿಲ್ಲ. ಎಲ್ಲವೂ ಜ್ಞಾನಮಯವೇ ಆಗಿಬಿಡುತ್ತದೆ.

ಆ ಜ್ಞಾನಕ್ಕೆ ಬ್ರಹ್ಮನಿಂದ ಸ್ತಂಬಪರ್ಯಂತವಾಗಿ ಯಾವುದರಲ್ಲಿಯೂ ಭಿನ್ನತೆಯು ತೋರುವುದಿಲ್ಲ. ಗೋಡೆಯ ಮೇಲಿನ ಚಿತ್ರದಲ್ಲಿ ಕೈ-ಕಾಲು-ಕಣ್ಣುಗಳೆಲ್ಲವೂ ಕಾಣುತ್ತವೆ. ಆದರೆ ಅದನ್ನು ಮುಟ್ಟಿನೋಡಲು ಗೋಡೆಯಷ್ಟೇ ತಿಳಿಯುವುದಲ್ಲದೇ ಚಿತ್ರದ ಅವಯವಭಿನ್ನತೆಗಳು ತಿಳಿಯಲಾರವು. ಅದರಂತೆ ಈ ಜ್ಞಾನದ ಮೂಲಕವಾಗಿ ದೃಶ್ಯವನ್ನು ನೋಡಹೋಗಲು ಜ್ಞಾತಾ, ಜ್ಞಾನ ಮತ್ತು ಜ್ಞೇಯ ಈ ತ್ರಿಪುಟಿಯು ಇಲ್ಲದಾಗುವುದು. ಇಂತಹ ಪರಮಶ್ರೇಷ್ಠವಾದ ಜ್ಞಾನವನ್ನು ಸಾತ್ತ್ವಿಕಜ್ಞಾನವೆಂದು ತಿಳಿ, ಎನ್ನುತ್ತಾನೆ ಶ್ರೀಕೃಷ್ಣ.

ಉಪನಿಷತ್ತುಗಳಲ್ಲಿ ಇದೇ ಅರ್ಥದ ಮಂತ್ರಗಳಿವೆ.

**ಮನಸೈವಾನು ದ್ರಷ್ಟವ್ಯಂ ನೇಹ ನಾನಾಸ್ತಿ ಕಿಂಚನ ।**
**ಮೃತ್ಯೋಃ ಸ ಮೃತ್ಯುಮಾಪ್ನೋತಿ ಯ ಇಹ ನಾನೇವ ಪಶ್ಯತಿ ॥**

ಬೃ-೪-೪-೧೯

ಇದನ್ನು ಮನಸ್ಸಿನಿಂದಲೇ (ಪರಮಾರ್ಥಜ್ಞಾನದಿಂದ ಸಂಸ್ಕೃತವಾದ ಮನಸ್ಸಿನಿಂದಲೇ) ಮತ್ತು ಆಚಾರ್ಯೋಪದೇಶಪೂರ್ವಕವಾಗಿ ತಿಳಿದುಕೊಳ್ಳ ಬೇಕು. ಇಲ್ಲಿ ನಾನಾತ್ವವು ಸ್ವಲ್ಪವೂ ಇಲ್ಲ. ಯಾವನು ಇಲ್ಲಿ ನಾನಾತ್ವವಿರುವಂತೆ ನೋಡುತ್ತಾನೆಯೋ ಅವನು ಮೃತ್ಯುವಿನಿಂದ ಮೃತ್ಯುವನ್ನು ಪಡೆಯುತ್ತಾನೆ.

**ಮನಸೈವೇದಮಾಪ್ತವ್ಯಂ ನೇಹ ನಾನಾಸ್ತಿ ಕಿಂಚನ ।**
**ಮೃತ್ಯೋಃ ಸ ಮೃತ್ಯುಂ ಗಚ್ಛತಿ ಯ ಇಹ ನಾನೇತಿ ಪಶ್ಯತಿ ॥**

ಕಠ ೪-೧೧

ಇದು ಮನಸ್ಸಿನಿಂದಲೇ ಹೊಂದಲ್ಪಡತಕ್ಕದ್ದು. ಇಲ್ಲಿ ಏನೂ ಭೇದವಿಲ್ಲ. ಯಾವನು ಇಲ್ಲಿ ಭೇದವಿರುವಂತೆ ನೋಡುತ್ತಾನೆಯೋ ಅವನು ಮೃತ್ಯುವಿನಿಂದ ಮೃತ್ಯುವನ್ನು ಹೊಂದುತ್ತಾನೆ.)

o o o

ಅವ್ಯಕ್ತದಿಂದ ಆರಂಭವಾಗಿ ಸ್ಥಾವರಪರ್ಯಂತವಾದ ಎಲ್ಲ ಭೂತ ಗಳಲ್ಲಿಯೂ ಯಾವ ಜ್ಞಾನದಿಂದ ಅವ್ಯಯವಾದ ಒಂದೇ ಭಾವವನ್ನು ನೋಡುತ್ತಾನೆಯೋ ಮತ್ತು ವಿಭಕ್ತವಾಗಿರುವ ಬೇರೆ ಬೇರೆ ದೇಹಗಳಲ್ಲಿ ಅವಿಭಕ್ತವಾಗಿರುವ ಆ ಭಾವವನ್ನು (ಆತ್ಮವಸ್ತುವನ್ನು ) ಆಕಾಶದಂತೆ ನಿರಂತರ ವಾಗಿ ಯಾವುದರಿಂದ ನೋಡುತ್ತಾನೆಯೋ ಆ ಅದ್ವೈತಾತ್ಮದರ್ಶನವೆಂಬ ಭಾವವನ್ನು ಸಾತ್ತ್ವಿಕಜ್ಞಾನ ; ಸಮ್ಯಗ್ದರ್ಶನ ಎಂದು ತಿಳಿದರೂ, ದ್ವೈತದರ್ಶನ ಗಳೆಂಬ ಜ್ಞಾನಗಳು ಅಯಥಾರ್ಥವಾದುವುಗಳು. ಅವು ರಾಜಸಗಳೂ ಮತ್ತು ತಾಮಸಗಳೂ ಆಗಿರುವುದರಿಂದ ಸಂಸಾರವನ್ನು ಧ್ವಂಸಮಾಡುವ ಬಗೆಗೆ ಸಾಕ್ಷಾತ್ ಕಾರಣಗಳಾಗುವುದಿಲ್ಲ. ಏಕಂ ಅವ್ಯಯಂ ಭಾವಂ–ಇಲ್ಲಿ ಭಾವ ಎಂಬುದಕ್ಕೆ ವಸ್ತು ಎಂದು ಅರ್ಥ. ಏಕವಾದ ಆತ್ಮವಸ್ತುವನ್ನು, ಅವ್ಯಯಂ : ಯಾವುದು ತನ್ನ ಸ್ವರೂಪಗಳಿಂದಾಗಲೀ–ಧರ್ಮದಿಂದಾಗಲೀ ಕ್ಷಯ ಹೊಂದುವುದಿಲ್ಲವೋ ಅಂತಹ ಕೂಟಸ್ಥವೂ ನಿತ್ಯವೂ ಆದ ಆತ್ಮವಸ್ತುವನ್ನು.

(ಶಂ. ಭಾ.)

ಬ್ರಾಹ್ಮಣ, ಕ್ಷತ್ರಿಯ, ಬ್ರಹ್ಮಚಾರೀ, ಗೃಹಸ್ಥ–ಮುಂತಾದ ರೂಪ ಗಳಿಂದ ವಿಭಾಗಗೊಂಡಿರುವ ಎಲ್ಲ ಭೂತಗಳಲ್ಲಿಯೂ, ಕರ್ಮಾಧಿಕಾರಿಗಳ

ಲ್ಲಿಯೂ ಯಾವ ಜ್ಞಾನದಿಂದ ಆತ್ಮವೆಂಬ ಒಂದೇ ಭಾವವನ್ನು ನೋಡುತ್ತಾನೆಯೋ, ಅದರಲ್ಲಿಯೂ ಅವಿಭಕ್ತವಾಗಿ–ಬ್ರಾಹ್ಮಣತ್ವವೇ ಮುಂತಾದ ಅನೇಕ ಆಕಾರಗಳು ಭೂತಗಳಲ್ಲಿದ್ದರೂ, ಬಿಳುಪು, ಉದ್ದ ಮುಂತಾದ ಅನೇಕ ವಿಭಾಗಗಳು ಅವುಗಳಲ್ಲಿದ್ದರೂ ಎಲ್ಲದರಲ್ಲಿಯೂ ಜ್ಞಾನಾಕಾರವಾಗಿರುವ ಆತ್ಮದಲ್ಲಿ ವಿಭಾಗವಿಲ್ಲದೇ ಇರುವುದನ್ನಾಗಿ ತಿಳಿಯುತ್ತಾನೆಯೋ, ಬ್ರಾಹ್ಮಣಾದಿ ಸಂಬಂಧಶರೀರಗಳು ಕ್ಷಯಹೊಂದಿದರೂ ತಾನು ಅಕ್ಷಯವಾಗಿರುತ್ತಾನೆಯೋ, ಅವಿಕಾರಿಯಾಗಿ ಫಲವೇ ಮುಂತಾದ ಸಂಗಕ್ಕೆ ಯೋಗ್ಯವಲ್ಲದೆ ಇರುವವನನ್ನಾಗಿ ಕರ್ಮಾಧಿಕಾರವೇಳೆಯಲ್ಲಿ ನೋಡುತ್ತಾನೆಯೋ–ಅಂತಹ ಜ್ಞಾನವನ್ನು ಸಾತ್ತ್ವಿಕಜ್ಞಾನವೆಂದು ತಿಳಿ. (ರಾ. ಭಾ.)

ಏಕಂ ಭಾವಂ = ವಿಷ್ಣುವನ್ನು. (ಮ. ಭಾ.)

**ಓಂ ಪೃಥಕ್ತ್ವೇನ ತು ಯಜ್ಜ್ಞಾನಂ ನಾನಾಭಾವಾನ್ಪೃಥಗ್ವಿಧಾನ್ ।**
**ವೇತ್ತಿ ಸರ್ವೇಷು ಭೂತೇಷು ತಜ್ಜ್ಞಾನಂ ವಿದ್ಧಿ ರಾಜಸಮ್ ॥೨೧॥**

ಯಾವ ಜ್ಞಾನವು ಎಲ್ಲ ಭೂತಗಳಲ್ಲಿಯೂ ಬೇರೆ ಬೇರೆ ಪ್ರಕಾರವಾಗಿರುವ ನಾನಾಭಾವಗಳನ್ನು ಬೇರೆ-ಬೇರೆಯಾಗಿಯೇ ತಿಳಿಯುತ್ತದೆಯೋ ಆ ಜ್ಞಾನವನ್ನು ರಾಜಸವೆಂದು ತಿಳಿ.

* * *

**(ಸರ್ವಭೂತೇಷು ನಾನಾಭಾವಾನ್ ಪೃಥಗ್ವಿಧಾನ್ ಪೃಥಕ್ತ್ವೇನ ವೇತ್ತಿ)**

ಹಿಂದೆ ಹೇಳಿದಂತೆ ಪ್ರಪಂಚದಲ್ಲಿ ಹುಟ್ಟುವ ಅಥವಾ ಬ್ರಹ್ಮಾಂಡದಲ್ಲಿರುವ ಒಂದೊಂದು ಪ್ರಾಣಿಗೂ ಪ್ರತ್ಯೇಕ-ಪ್ರತ್ಯೇಕವಾಗಿ ಒಂದೊಂದು ಗುಣವಿರುತ್ತದೆ. ಈ ಕಾರಣದಿಂದಲೇ ಅದನ್ನು ವಾಸ್ತವಿಕವಾಗಿಯೂ ಪ್ರತ್ಯೇಕವಾಗಿದೆ ಎಂದು ಭಾವಿಸುವುದು. ಎಷ್ಟು ಬಗೆಯಾಗಿ ಭೂತಕೋಟಿಗಳು ಕಾಣಿಸುತ್ತವೆಯೋ ಅವೆಲ್ಲವೂ ವಾಸ್ತವವಾಗಿಯೂ ಬೇರೆ ಬೇರೆ ಎಂದು ಭಾವಿಸುವುದು ; ಅವುಗಳಲ್ಲಿ ಏಕತೆ ಇಲ್ಲ ಎಂದು ತಿಳಿಯುವುದು–ರಾಜಸ ಜ್ಞಾನವೆನಿಸುತ್ತದೆ. ರಾಜಸಜ್ಞಾನದಲ್ಲಿ ತ್ರಿಪುಟಿಯು ಎಂದಿಗೂ ಹೋಗುವುದಿಲ್ಲ. ಯಾವಾಗಲೂ ಇದ್ದೇ ಇರುತ್ತದೆ. ಜ್ಞಾನ, ಜ್ಞೇಯ, ಜ್ಞಾತಾ ಈ

ಮೂರು ಪ್ರತ್ಯೇಕವಾಗಿಯೇ ಉಳಿದಿರುತ್ತವೆ. ಪ್ರಪಂಚದಲ್ಲಿ ಭಿನ್ನತೆಯಿರುವಂತೆ ಕಾಣುವುದು ಸ್ವಾಭಾವಿಕವೇ. ಚಿತ್ರದಲ್ಲಿರುವ ಕೈ-ಕಾಲುಗಳು, ಕಿರೀಟ, ಮುಖಾರವಿಂದ, ಎಲ್ಲವೂ ಪ್ರತ್ಯೇಕ-ಪ್ರತ್ಯೇಕವಾಗಿಯೇ ಕಾಣುವುವು. ಆದರೆ ಹಿನ್ನೆಲೆಯಲ್ಲಿ ಸ್ವಚ್ಛವಾದ ಕಾಗದ ಒಂದೇ ಇದೆ–ಎಂಬುದನ್ನು ಅರಿಯುವುದು ಕಷ್ಟ. ವಿಧ-ವಿಧವಾದ ವಸ್ತ್ರಗಳನ್ನುಡುವಾಗ ಅವುಗಳ ಹಿಂದಿರುವ ದಾರದ ಅಥವಾ ಹತ್ತಿಯ ಸ್ಮರಣೆಯು ಬರುವುದಿಲ್ಲ. ದೀಪದಲ್ಲಿರುವುದೂ ಅಗ್ನಿಯೇ. ಆದರೂ ಅದನ್ನು ಅಗ್ನಿ ಎಂದು ಕರೆಯುವುದಿಲ್ಲ. ಲಕ್ಷ್ಮಿಯ ಪ್ರತಿಮೆಯು ಬಂಗಾರದ್ದೇ ಆದರೂ ಅದನ್ನು ಬಂಗಾರವೆಂದು ಪರಿಗಣಿಸುವುದಿಲ್ಲ. ಒಂದು ಬಂಗಾರದ ಪ್ರತಿಮೆಗೂ ಮತ್ತೊಂದು ಬಂಗಾರದ ಪ್ರತಿಮೆಗೂ ತಾರತಮ್ಯವನ್ನು ತೋರುವರು. ಈ ಜ್ಞಾನವನ್ನು ರಾಜಸವೆಂದೂ ರಜೋಗುಣದಿಂದ ಆದುದೆಂದೂ ತಿಳಿ ಎನ್ನುತ್ತಾನೆ ಶ್ರೀಕೃಷ್ಣ.)

o o o

ಯಾವ ಜ್ಞಾನದಿಂದ ಎಲ್ಲ ಭೂತಗಳಲ್ಲಿಯೂ ಬೇರೆ ಬೇರೆ ಪ್ರಕಾರವಾಗಿರುವ ಬೇರೆ ಬೇರೆ ಭಾವಗಳನ್ನು ಆತ್ಮದಿಂದ ಬೇರೆಯಾಗಿ ವಿಲಕ್ಷಣವನ್ನಾಗಿ ಪ್ರತ್ಯೇಕರೂಪದಿಂದ ನೋಡುತ್ತಾನೆಯೋ ಎಂದರೆ ಪ್ರತಿಶರೀರದಲ್ಲಿಯೂ ಬೇರೆ ಬೇರೆಯಾಗಿ ತನ್ನಿಂದ ಹೊರತಾದ ಬೇರೆ ಆತ್ಮನನ್ನು ನೋಡುತ್ತಾನೆಯೋ–ಆ ಜ್ಞಾನವನ್ನು ನೀನು ರಾಜಸವೆಂದು ತಿಳಿ. ಜ್ಞಾನವು ಕರ್ತೃವಾಗುವುದಿಲ್ಲ. ಆದುದರಿಂದ ಯಾವ ಜ್ಞಾನವು ತಿಳಿಯುತ್ತದೆಯೋ ಎಂದರೆ ಯಾವ ಜ್ಞಾನದಿಂದ ಮನುಷ್ಯನನ್ನು ನೋಡುತ್ತಾನೆಯೋ ಎಂದರ್ಥ. ರಾಜಸಂ = ರಜೋಗುಣದಿಂದ ಉಂಟಾದುದು. (ಶಂ. ಭಾ.)

ಬ್ರಾಹ್ಮಣರೇ ಮುಂತಾದ ಆಕಾರಗಳು ಬೇರೆ-ಬೇರೆಯಾಗಿರುವುದರಿಂದ ಆತ್ಮ ಎಂಬ ಭಾವಗಳೂ ಕೂಡ ಬೇರೆ-ಬೇರೆಯಾಗಿವೆ. ಬಿಳುಪು, ಉದ್ದ ಮುಂತಾದ ರೀತಿಯಲ್ಲಿ ಬೇರೆಯಾಗಿರುವುದರಿಂದ ಅವು ಬೇರೆ-ಬೇರೆ ಪ್ರಕಾರವಾಗಿಯೇ ಇವೆ. ಬೇರೆ-ಬೇರೆ ಬಗೆಯಾಗಿ ಫಲವೇ ಮುಂತಾದ ಯೋಗವನ್ನು ಹೊಂದಲು ಯೋಗ್ಯವಾಗಿವೆ–ಎಂದು ಕರ್ಮಾಧಿಕಾರದ ವೇಳೆಯಲ್ಲಿ ಯಾವ ಜ್ಞಾನವು ತಿಳಿಯುತ್ತದೆಯೋ ಅದನ್ನು ರಾಜಸವೆಂದು ತಿಳಿ. ಜ್ಞಾನದಲ್ಲಿ ಕರ್ತೃತ್ವವನ್ನು ಔಪಚಾರಿಕವಾಗಿ ಹೇಳಿದೆ. (ರಾ. ಭಾ.)

**ತು**–ಎಂಬ ಶಬ್ದವಿರುವುದರಿಂದ ಅಥವಾ ಉಪಲಕ್ಷಣವಾಗಿ ಈಶ್ವರನ ವಿಷಯದಲ್ಲಿ ಯಾವ ಜ್ಞಾನಕ್ಕೆ ಸಂದೇಹವಿದೆಯೋ ಅದು ರಾಜಸ ಎಂದು ತಿಳಿಯಬೇಕು. ಈ ಕಾರಣದಿಂದಲೇ ಅದು ರಾಜಸ. (ಮ. ಟೀಕಾ.)

**ಓಂ ಯತ್ತು ಕೃತ್ಸ್ನವದೇಕಸ್ಮಿನ್ಕಾರ್ಯೇ ಸಕ್ತಮಹೈತುಕಮ್ ।**
**ಅತತ್ತ್ವಾರ್ಥವದಲ್ಪಂ ಚ ತತ್ತಾಮಸಮುದಾಹೃತಮ್ ॥೨೨॥**

ಆದರೆ ಒಂದು ಕಾರ್ಯದಲ್ಲಿ ತಾನೇ ಎಲ್ಲವೂ ಎಂಬಂತೆ ಯಾವುದು ಅಂಟಿಕೊಂಡಿರುವುದೋ, ಯಾವ ಯುಕ್ತಿಯೂ ಇಲ್ಲದ್ದೋ, ಯಥಾಭೂತ ವಾದ ಅರ್ಥವಿಲ್ಲದೇ ಅಲ್ಪವಾಗಿರುವುದೋ–ಅದು ತಾಮಸವೆನಿಸುವುದು.

* * *

(**ಕೃತ್ಸ್ನವತ್ ಏಕಸ್ಮಿನ್ ಕಾರ್ಯೇ ಸಕ್ತಂ** = ಪ್ರಪಂಚದಲ್ಲಿರುವುದು ಇದೊಂದೇ ಎಂಬಂತೆ ನಿರ್ಧರಿಸಿ ಒಂದೇ ಕಾರ್ಯದಲ್ಲಿ ಆಸಕ್ತವಾಗುವಿಕೆ.

ಪ್ರಪಂಚದಲ್ಲಿ ಆತ್ಮಜ್ಞಾನವೊಂದೇ ಮುಖ್ಯವಾದುದು ಎಂದು ನಿರ್ಧರಿಸಿ ಆತ್ಮಜ್ಞಾನಸಾಧನೆಯೆಂಬ ಉತ್ತಮವಾದ ಆ ಕಾರ್ಯವೊಂದರಲ್ಲೇ ತೊಡಗುವುದು ತಾಮಸವೇ? ಎಂದರೆ : ಶ್ರೀಕೃಷ್ಣನು ಇಷ್ಟುಮಾತ್ರ ಹೇಳಿದ್ದರೆ ಹೀಗೆ ಪ್ರಶ್ನಿಸಬಹುದಾಗಿತ್ತು. ಆದರೆ ಅವನು **ಅಹೈತುಕಮ್**, **ಅತತ್ತ್ವಾರ್ಥವತ್**, **ಅಲ್ಪಂ**–ಎಂಬ ಮೂರು ವಿಶೇಷಣಗಳನ್ನು ಕೊಟ್ಟು ಹೇಳಿದ್ದಾನೆ. ಆದುದರಿಂದ ಅದು ಆತ್ಮಜ್ಞಾನಕ್ಕೆ ಸಂಬಂಧಿಸಿದುದೇ ಅಲ್ಲ.

**ಅಹೈತುಕಮ್** = ಕಾರಣವಿಲ್ಲದ್ದು ; ಯುಕ್ತಿಯೂ ಇಲ್ಲದ್ದು. **ಅತತ್ತ್ವಾರ್ಥವತ್** = ಅತತ್ತ್ವಾರ್ಥದಿಂದ ಕೂಡಿದುದು ಎಂದರೆ ತತ್ತ್ವಕ್ಕೆ, ಆತ್ಮಜ್ಞಾನವೆಂಬ ಅರ್ಥಕ್ಕೆ ವಿರೋಧವಾದುದು. **ಅಲ್ಪಂ** = ಅಲ್ಪವಾದುದು ; ನಿಕೃಷ್ಟವಾದುದು ; ಅಯೋಗ್ಯವಾದುದು. ಇಂತಹ ಒಂದೇ ವಿಷಯವೇ ಇರು ವುದು ಎಂದು ಭಾವಿಸಿ ಆ ವಿಷಯದಲ್ಲಿಯೇ ಜೀವಮಾನಪೂರ್ತಿಯಾಗಿ ಆಸಕ್ತವಾಗಿರುವ ಜ್ಞಾನಕ್ಕೆ ತಾಮಸಜ್ಞಾನವೆಂದು ಹೆಸರು. ತಾಮಸಜ್ಞಾನ ಎಂದರೆ ಕಪ್ಪುಜ್ಞಾನ. ಸಾತ್ತ್ವಿಕಜ್ಞಾನಕ್ಕೆ ತೀರಾ ವಿರುದ್ಧವಾದ ಜ್ಞಾನ. ದೇಹವನ್ನೇ ಆತ್ಮವೆಂದು ತಿಳಿದಿರುವ ಜ್ಞಾನ. ಐಹಿಕಸುಖೋಪಭೋಗ

ಗಳೇ ಶಾಶ್ವತ ಎಂದು ನಿರ್ಧರಿಸಿರುವ ಜ್ಞಾನ. ಅಂತಹ ಭೋಗಗಳನ್ನು ಅನುಭವಿಸುವುದೇ ಜೀವನದ ಪರಮಾರ್ಥವೆಂದು ತಿಳಿದಿರುವ ಜ್ಞಾನ.

ಯಾವುದಾದರೂ ಒಂದು ಕಾರ್ಯದಲ್ಲಿ ಅಥವಾ ಸೃಷ್ಟಿಯಾಗಿರುವ ಪದಾರ್ಥದಲ್ಲಿ ಇರುವುದೆಲ್ಲವೂ ಇದೇ ಆಗಿದೆ ; ಇದಲ್ಲದಾಗಿರುವುದು ಬೇರಾವುದೂ ಇಲ್ಲ ; ಬೇರೆಲ್ಲಿಯೂ ಇಲ್ಲ. ಇದರ ಮೂಲ, ಇದರ ಶರೀರ, ಇದರ ಧ್ಯೇಯ ಎಂದು ಇದರ ಸಮಸ್ತತೆಯೂ ಇದೇ ಆಗಿದೆ. ಇದರ ಬೇರೆ ಕಾರಣವಾಗಲೀ, ಇದಕ್ಕೆ ಧ್ಯೇಯ-ಧೋರಣೆಗಳಾಗಲೀ ಬೇರೆ ಯಾವುದೂ ಇಲ್ಲ ಎಂಬುದಾಗಿ ಕ್ಷುದ್ರವಾದ ದೃಷ್ಟಿಯಿಂದ ಅದಕ್ಕೆ ಕೆಲವರು ಅಂಟಿಕೊಳ್ಳು ತ್ತಾರೆ. ಅವರ ತಿಳಿವಳಿಕೆಗೆ ಯುಕ್ತಿಯಿಲ್ಲ. ಅದು ವಿಷಯವನ್ನು ಆಮೂಲಾಗ್ರ ವಾಗಿ ವಿಚಾರಕ್ಕೆ ತೆಗೆದುಕೊಳ್ಳದೇ ಹೊರಗೆ ತೋರುವುದಷ್ಟನ್ನು ಮಾತ್ರವೇ ಪರಮಾರ್ಥವೆಂದು ತಿಳಿಯುವುದರಿಂದ ಅದರಲ್ಲಿ ತತ್ತ್ವಾರ್ಥವಿಲ್ಲ. ಆ ದರ್ಶನವು ಅಲ್ಪವಾದುದು. ಅದರ ವಿಧಾನವೂ ಅಲ್ಪವಾದುದು ಮತ್ತು ಅದರ ಫಲವೂ ಅಲ್ಪವಾದುದು. ಇಂತಹ ಜ್ಞಾನಕ್ಕೆ ತಾಮಸ ಎಂದು ಹೆಸರು. ತೋರಿಕೆಯಾಗಿ ಕಾಣುವ ಸ್ಥೂಲವಾದ ಕಾರ್ಯವನ್ನೇ ಪರಮಾತ್ಮನೆಂದು ತಿಳಿದು ಅದರ ಮೂಲ ಅಥವಾ ಧ್ಯೇಯದ ಬಗೆಗೆ ವಿಚಾರವನ್ನೇ ಮಾಡದೇ ತನ್ನ ಅಲ್ಪವಾದ ತಿಳಿವಳಿಕೆಯೇ ಪರಮಾರ್ಥ ಎಂದು ತಿಳಿದಿರುವ ಮೊಂಡುತನದ ಬುದ್ಧಿಯೇ ಈ ತಾಮಸಜ್ಞಾನ. ಇದು ಮೂಲದ ವಿಕಾಸ ಕ್ಕಾಗಲೀ ಅದರ ಫಲದ ಪ್ರಕಾಶಕ್ಕಾಗಲೀ ಎಡೆಯನ್ನೇ ಕೊಡುವುದಿಲ್ಲ.

ಏಕಸ್ಮಿನ್ ಕಾರ್ಯೇ ಕೃತ್ಸ್ನವತ್–ಎಂಬುದಕ್ಕೆ ಯಾವುದಾದರೂ ಒಂದು ಕಾರ್ಯದಲ್ಲಿ ಅಖಂಡತೆ, ಏಕತೆಯನ್ನು ಕಾಣುವ ಭಾವ ಎಂದು ಅರ್ಥಮಾಡಬಹುದು. ಏಕೆಂದರೆ ಕಾರ್ಯದಲ್ಲಿ ಆಸಕ್ತಿ, ಯುಕ್ತಿಯಿಲ್ಲದಿರು ವಿಕೆ, ತತ್ತ್ವಾರ್ಥವಿಲ್ಲದಿರುವಿಕೆ ಮತ್ತು ಅಲ್ಪತೆಗಳನ್ನು ಅದರ ಲಕ್ಷಣಗಳನ್ನಾಗಿ ಹೇಳಿದೆ.

ತಾಮಸಜ್ಞಾನವನ್ನು ಸಂತಜ್ಞಾನೇಶ್ವರರು ಹೃದಯಂಗಮವಾಗಿ ವರ್ಣಿ ಸಿದ್ದಾರೆ :

ತಮೋಗುಣವೆಂಬ ಪಿಶಾಚಿಯಿಂದ ಪೀಡಿತವಾದ ಈ ಜ್ಞಾನವು ಹುಚ್ಚು ಹಿಡಿದು ಅತ್ತಲಿತ್ತ ತಿರುಗುತ್ತಿರುತ್ತದೆ. ಇದಕ್ಕೆ ವಿಷಯಭೋಗಗಳಲ್ಲಿಯೇ ಅಪಾರವಾದ ಆಸಕ್ತಿ. ಕಾಡುಗಿಚ್ಚಿಗೆ ವರ್ಜ್ಯಾವರ್ಜ್ಯವಿಲ್ಲದಂತೆ ; ತಾನು ತಿನ್ನುತ್ತಿರುವ ಪದಾರ್ಥವು ಜೀವಂತವಾದುದೋ ಮೃತವಾದುದೋ ಎಂದು ನೊಣವು ನೋಡಹೋಗದಂತೆ ; ಅನ್ನವು ವಾಂತಿಯದೋ, ಬಡಿಸಿದುದೋ, ಬಿಸಿಯಾದುದೋ, ಹಳಸಿದುದೋ ಎಂದು ಕಾಗೆಯು ವಿಚಾರಿ ಸದೇ ಅದನ್ನು ತಿನ್ನುವಂತೆ–ತಾಮಸಜ್ಞಾನಕ್ಕೆ ಯಾವುದೂ ನಿಷಿದ್ಧವಲ್ಲ. ಭಕ್ಷ್ಯ-ಅಭಕ್ಷ್ಯ, ನಿಂದ್ಯ-ಅನಿಂದ್ಯ ಎಂಬ ವಿಚಾರವೇ ತಾಮಸಜ್ಞಾನಿಗಿರುವು ದಿಲ್ಲ. ನಾಲಿಗೆಗೆ ರುಚಿಯಾದುದೇ ಪವಿತ್ರವೆಂಬುದು ಅವನ ಮತವಾಗಿರು ತ್ತದೆ. ಸ್ತ್ರೀಯೆಂದರೆ ಅದೊಂದು ಭೋಗ್ಯವಸ್ತುವೆಂದು ಮಾತ್ರವೇ ಅವನ ಭಾವನೆಯಾಗಿರುತ್ತದೆ. ಆಕಾಶದಿಂದ ಕೆಳಕ್ಕೆ ಬೀಳುವ ನೀರಿನ ಕೊನೆಯ ಸ್ಥಾನವು ಸಮುದ್ರವು ಹೇಗೋ ಹಾಗೆ ಕ್ರಿಯಾಮಾತ್ರವೆಲ್ಲಾ ಹೊಟ್ಟೆಗಾಗಿ, ಬಟ್ಟೆಗಾಗಿ ಮತ್ತು ಉಪಭೋಗಕ್ಕಾಗಿ–ಎಂದು ತಾಮಸಿಗಳ ಅಭಿಮತ.

ಸ್ವರ್ಗ, ನರಕ ಎಂಬುವುಗಳು ಇಲ್ಲವೇ ಇಲ್ಲ. ಒಂದು ವೇಳೆ ಇದ್ದರೂ ಕಲ್ಲಿನ ರೂಪದ ದೇವರಿಗೆ ಸೇವೆಸಲ್ಲಿಸಿ ಪಾಪದಿಂದ ಪಾರಾಗಬಹುದು ಎಂದು ಭಾವಿಸುವವನಿವನು. ಇದರಾಚೆಗೆ ಅವನ ಬುದ್ಧಿಯು ಚಲಿಸಲಾರದು.

ಶರೀರಪತನವಾದೊಡನೆಯೇ ಅನೇಕಕರ್ಮಗಳಿಗೆ ಕಾರಣವಾದ ಆ ಶರೀರವನ್ನೇ ಸುಟ್ಟುಬಿಡುತ್ತಾರೆ. ಅನಂತರ ಅದು ಕರ್ಮಫಲವನ್ನು ಉಪಭೋಗಿಸುವುದಾದರೂ ಹೇಗೆ ಸಾಧ್ಯ?–ಎಂಬುದು ಅವರ ತರ್ಕ ವಾಗಿದೆ. 'ಸತ್ತಮೇಲೆ ಏನಾಗುತ್ತದೆಯೋ ಕಂಡವರಾರು? ಸತ್ತಮೇಲಾಗು ವುದನ್ನು ಯೋಚಿಸುತ್ತಾ ಕೈಗೆ ಸಿಕ್ಕಿರುವ ಸುಖವೈಭವವನ್ನು ತೊರೆಯುವವನು ಮೂಢ' ಎಂಬ ಸಿದ್ಧಾಂತ ಇವರದು.)

o o o

ಯಾವ ಜ್ಞಾನವು–ಯಾವುದಾದರೂ ಒಂದು ಕಾರ್ಯದಲ್ಲಿ ಶರೀರ ದಲ್ಲಿ ಅಥವಾ ಶರೀರದಿಂದ ಹೊರಗಿನದಾಗಿರುವ ಪ್ರತಿಮೆ ಮುಂತಾದುವು ಗಳಲ್ಲಿ ಸರ್ವವಿಷಯವಾದ ಸಂಪೂರ್ಣಜ್ಞಾನವು ಇದೆ ಎಂದು ಭಾವಿಸಿ

ಆಸಕ್ತವಾಗಿರುತ್ತದೆಯೋ–ಎಂದರೆ ಆತ್ಮ ಅಥವಾ ಈಶ್ವರ ಎಂದರೆ ಇಷ್ಟೇಯೇ; ಇದಕ್ಕಿಂತಲೂ ಬೇರೆಯಾದುದು ಯಾವುದೂ ಇಲ್ಲ ಎಂದು ತಿಳಿಯುವಿಕೆ. ಆತ್ಮನು ಶರೀರದಲ್ಲಿ ಇರುವುದಲ್ಲದೇ ಶರೀರದಷ್ಟೇ ಪ್ರಮಾಣವುಳ್ಳವನಾಗಿದ್ದಾನೆ. ಶರೀರದ ಪರಿಣಾಮವಾಗಿದ್ದಾನೆ. ಕಲ್ಲು ಅಥವಾ ಮರದ ಪ್ರತಿಮೆಯಷ್ಟೇ ದೇವರು–ಇತ್ಯಾದಿ ತಿಳಿವಳಿಕೆಯಿಂದ ಯಾವುದಾದರೂ ಒಂದು ಕಾರ್ಯದಲ್ಲಿ ಆಸಕ್ತನಾಗುವಿಕೆ. ಹೇತುಯುಕ್ತಿಯಿಲ್ಲದೇ ಇರುವುದು. ಯಥಾಭೂತವಾದ ಅರ್ಥವನ್ನು ಜ್ಞೇಯವಾಗಿ ಹೊಂದಿಲ್ಲದೇ ಇರುವಿಕೆ ಮತ್ತು ಯುಕ್ತಿರಹಿತವಾಗಿರುವುದರಿಂದಲೇ ಅಲ್ಪವಾಗಿರುವಿಕೆ, ಎಂದರೆ ಅಲ್ಪ ವಿಷಯವಾಗಿರುವುದರಿಂದ–ಅಲ್ಪಫಲವನ್ನು ಹೊಂದಿರುವುದರಿಂದ ಅಲ್ಪವಾಗಿರುವಿಕೆ. ಈ ಜ್ಞಾನವು ತಾಮಸ ಎನಿಸುತ್ತದೆ. ಏಕೆಂದರೆ ಅವಿವೇಕಿಗಳಾದ ತಾಮಸಪ್ರಾಣಿಗಳಲ್ಲಿಯೇ ಇಂತಹ ಜ್ಞಾನವು ಕಂಡುಬರುವುದು. (ಶಂ. ಭಾ.)

ಯಾವ ಜ್ಞಾನವು ಒಂದೇ ಕರ್ಮದಲ್ಲಿ ಎಂದರೆ ಭೂತ-ಪ್ರೇತಗಣಗಳ ಆರಾಧನೆ ಮುಂತಾದ ಅಲ್ಪಫಲವುಳ್ಳ ಕರ್ಮದಲ್ಲಿ ಇದೇ ಸಂಪೂರ್ಣಫಲವುಳ್ಳದ್ದು ಎಂದು ಆಸಕ್ತವಾಗಿದೆಯೋ, ವಾಸ್ತವವಾಗಿ ಸಂಪೂರ್ಣಫಲವನ್ನು ಕೊಡದೇ ಇರುವುದರಿಂದ ಅಂತಹ ಫಲವನ್ನು ಕೊಡುವ ಕಾರಣವಲ್ಲದುದು ಆಗಿರುತ್ತದೆಯೋ, ತತ್ತ್ವಾರ್ಥರಹಿತವಾಗಿರುತ್ತದೆಯೋ–ಎಂದರೆ ಹಿಂದೆ ಹೇಳಿದಂತೆ ಆತ್ಮನಲ್ಲಿ ವೈವಿಧ್ಯವನ್ನು ಕಾಣುವಿಕೆಯೇ ಮುಂತಾದ ಭಾವವನ್ನು ಹೊಂದಿರುವುದರಿಂದ ಮಿಥ್ಯೆಯಾದ ಅರ್ಥವನ್ನು ವಿಷಯವನ್ನಾಗಿ ಹೊಂದಿದೆಯೋ, ಅತ್ಯಲ್ಪವಾದ ಫಲವನ್ನು ಕೊಡುತ್ತದೆಯೋ ಭೂತ-ಪ್ರೇತಾದಿಗಳ ಆರಾಧನೆಯನ್ನು ವಿಷಯವಾಗಿ ಹೊಂದಿರುವುದರಿಂದ ಅಲ್ಪವಾಗಿರುತ್ತದೆಯೋ ಆ ಜ್ಞಾನವು ತಾಮಸ ಎನಿಸುತ್ತದೆ. (ರಾ. ಭಾ.)

ಯಾವುದು ಜೀವದಲ್ಲಿ ಬ್ರಹ್ಮದಂತಹ ಭಾವನೆಯನ್ನು ಹೊಂದಿದೆಯೋ, ಯುಕ್ತಿಶೂನ್ಯವಾದ ಮಿಥ್ಯಾಜ್ಞಾನವಾಗಿದೆಯೋ ಮತ್ತು ಬಹಳ ಅಜ್ಞಾನದಿಂದ ಕೂಡಿರುವುದರಿಂದ ಅಲ್ಪವಾಗಿದೆಯೋ–ಅದು ತಾಮಸ ಎನಿಸುತ್ತದೆ. (ಮ. ಟೀಕಾ.)

ಮುಂದೆ ಶ್ರೀಕೃಷ್ಣನು ಕರ್ಮಗಳಲ್ಲಿನ ಗುಣಭೇದಗಳನ್ನು ಹೇಳುತ್ತಾನೆ :

**ಓಂ ನಿಯತಂ ಸಙ್ಗರಹಿತಮರಾಗದ್ವೇಷತಃ ಕೃತಮ್ ।**
**ಅಫಲಪ್ರೇಪ್ಸುನಾ ಕರ್ಮ ಯತ್ತತ್ಸಾತ್ತ್ವಿಕಮುಚ್ಯತೇ ॥೨೩॥**

ಯಾವುದು ನಿಯತವಾಗಿ, ಸಂಗರಹಿತವಾಗಿ, ರಾಗ-ದ್ವೇಷಗಳಿಲ್ಲದೇ ಫಲವನ್ನು ಪಡೆಯಬೇಕೆಂಬ ಇಚ್ಛೆಯಿಲ್ಲದೇ ಮಾಡಲ್ಪಡುತ್ತದೆಯೋ–ಆ ಕರ್ಮವು ಸಾತ್ತ್ವಿಕವೆನಿಸುತ್ತದೆ.

* * *

(ಕರ್ಮಗಳಲ್ಲಿ ಸಾತ್ತ್ವಿಕ, ರಾಜಸ ಮತ್ತು ತಾಮಸ ಎಂದು ಮೂರು ಬಗೆ. ಅವುಗಳಲ್ಲಿ ಸಾತ್ತ್ವಿಕಕರ್ಮದ ಲಕ್ಷಣವನ್ನು ಇಲ್ಲಿ ಭಗವಂತನು ಹೇಳುತ್ತಾನೆ. ಕರ್ಮವು ನಿಯತವಾಗಿರಬೇಕು. ಎಂದರೆ ನಿತ್ಯವಾಗಿರಬೇಕು. ಮಾಡಲೇಬೇಕೆಂದು ಶಾಸ್ತ್ರದಲ್ಲಿ ವಿಹಿತವಾಗಿರಬೇಕು. ನಿತ್ಯ-ನೈಮಿತ್ತಿಕ ಎಂದು ಕರೆಯಲ್ಪಟ್ಟಿರುವ ಸಂಧ್ಯಾಕಾರ್ಯ, ಪಂಚಮಹಾಯಜ್ಞಗಳು, ಗ್ರಹಣ ತರ್ಪಣ–ಮುಂತಾದುವುಗಳು ಇದಕ್ಕೆ ಉದಾಹರಣೆ. ಅಭಿಚಾರ, ಮದ್ದು-ಮಾಟ ಮುಂತಾದುವು ಶಾಸ್ತ್ರವು ನಿಷೇಧಮಾಡಿರುವ ಕರ್ಮಗಳು. ನಾಗ ಪ್ರತಿಷ್ಠೆ, ಸಂಕಷ್ಟಚತುರ್ಥೀವ್ರತ–ಮುಂತಾದುವು ಕಾಮ್ಯಕರ್ಮಗಳು. ಸಙ್ಗ ರಹಿತಮ್=ನಿತ್ಯಕರ್ಮಗಳನ್ನು ಮಾಡಿದರೂ ಅದಕ್ಕೆ ಅಂಟಿಕೊಂಡಿರ ಬಾರದು. ಕರ್ಮವು ನಮಗೊಂದು ಬಂಧನವಾಗದ ರೀತಿಯಲ್ಲಿ ಕರ್ಮ ಮಾಡಬೇಕು. ಫಲಾಭಿಸಂಧಿಯಿಲ್ಲದೇ ಪರಮಾತ್ಮಪ್ರೀತಿಗಾಗಿ ಕರ್ಮಮಾಡ ಬೇಕು.

ಒಬ್ಬರು ಒಂದು ಕಛೇರಿಯಲ್ಲಿ ಕೆಲಸ ಮಾಡುತ್ತಿರುತ್ತಾರೆ. ಅವರಿಗೆ ಎಲ್ಲ ಕೆಲಸಗಳೂ ಗೊತ್ತಿರುತ್ತವೆ. ಎಲ್ಲ ಕೆಲಸಗಳನ್ನೂ ಶ್ರದ್ಧೆಯಿಂದಲೇ ಮಾಡುತ್ತಿರುತ್ತಾರೆ. ಇದೆಲ್ಲವೂ ಉಚಿತವಾದುದೇ. ಆದರೆ ಹಲವಾರು ವರ್ಷ ಗಳಲ್ಲಿ ಅವರಿಗೆ ಒಂದು ವಿಧವಾದ ಭಾವನೆಯು ಮೂಡುತ್ತದೆ. ನಾನೇ ಎಲ್ಲ ಕೆಲಸಗಳನ್ನು ಮಾಡುತ್ತಿದ್ದೇನೆ ; ನಾನಿಲ್ಲದಿದ್ದರೆ ಈ ಕಛೇರಿಯು ನಡೆ ಯುತ್ತಲೇ ಇರಲಿಲ್ಲ ; ಅಸ್ತವ್ಯಸ್ತವಾಗಿಬಿಡುತ್ತಿದ್ದಿತು–ಈ ವಿಧವಾದ ಭಾವನೆ ಯಿರುವುದೇ ಕರ್ಮಸಂಗ. ಶ್ರದ್ಧೆಯಿಂದ ಕರ್ಮಮಾಡುವುದು ಕರ್ತವ್ಯವೇ ಆದರೂ ಕರ್ಮದೊಡನೆಯೇ ಸೇರಿಕೊಂಡುಬಿಡಬಾರದು. ತಾನು ಅದರ ಕರ್ತಾ. ಅದರ ಫಲ ತನಗೆ ಸೇರಿದ್ದು–ಎಂಬ ಭಾವನೆಯು ಇದ್ದರೆ

ಅದು ಸಾತ್ತ್ವಿಕಕರ್ಮವಾಗುವುದಿಲ್ಲ. ಆದುದರಿಂದ ಸಂಗರಹಿತನಾಗಿ ಕರ್ಮ ಮಾಡುವುದು ಸಾತ್ತ್ವಿಕಕರ್ಮ ಎನ್ನುತ್ತಾನೆ ಶ್ರೀಕೃಷ್ಣ. **ಅರಾಗದ್ವೇಷತಃ ಕೃತಂ–ರಾಗ** ಎಂದರೆ ಪ್ರೀತಿ ; **ದ್ವೇಷ** ಎಂದರೆ ಶತ್ರುತ್ವ. ಇವುಗಳು ನಾನಾಕರ್ಮಗಳಿಗೆ ಕಾರಣವಾಗುತ್ತವೆ. ಆದರೆ ಸಾತ್ತ್ವಿಕಕರ್ಮವು ರಾಗ ಮತ್ತು ದ್ವೇಷಗಳಿಂದ ವಿಮುಕ್ತವಾಗಿರುತ್ತದೆ. ಪ್ರೀತಿ ಅಥವಾ ದ್ವೇಷದಿಂದ ಸಾತ್ತ್ವಿಕಕರ್ಮವು ನಡೆಯುವುದಿಲ್ಲ. ಪ್ರೀತಿಯಿಂದ ಒಂದು ಕರ್ಮವನ್ನು ಮಾಡಿದರೆ ಅದು ರಾಜಸವಾಗುತ್ತದೆ. ದ್ವೇಷದಿಂದ ಮಾಡಿದರೆ ಅದು ತಾಮಸವಾಗುತ್ತದೆ. ರಾಗವೂ ದ್ವೇಷವೂ ಇಲ್ಲದುದು ಸಾತ್ತ್ವಿಕ. **ಅಫಲ ಪ್ರೇಪ್ಸುನಾ** =ಕರ್ಮಫಲವನ್ನು ಪಡೆಯಲು ಇಚ್ಛೆಯಿಲ್ಲದೇ ; ಫಲಾಭಿಸಂಧಿ ಯಿಲ್ಲದೇ ಕರ್ಮಮಾಡುವುದು. ಹೀಗೆ ಮಾಡುವ ಕರ್ಮವು ಯಾವುದೋ ಅದಕ್ಕೆ ಸಾತ್ತ್ವಿಕಕರ್ಮವೆಂದು ಹೆಸರು.)

o o o

**ನಿಯತಂ** = ನಿತ್ಯವಾದುದು. **ಸಙ್ಗರಹಿತಂ** = ಆಸಕ್ತಿಯಿಲ್ಲದ್ದು. **ಅರಾಗದ್ವೇಷತಃ ಕೃತಂ** = ಫಲವನ್ನು ಬಯಸದೇ ರಾಗ-ದ್ವೇಷಗಳಿಲ್ಲದೇ ಮಾಡುವ ಕರ್ಮವು ಸಾತ್ತ್ವಿಕ ಎನಿಸುತ್ತದೆ. ರಾಗ ಅಥವಾ ದ್ವೇಷದಿಂದ ಪ್ರೇರಿತನಾಗಿ ಮಾಡುವ ಕರ್ಮವು ರಾಗ-ದ್ವೇಷಕೃತಕರ್ಮವಾಗುತ್ತದೆ. ಅದಕ್ಕೆ ವಿರುದ್ಧವಾದುದು ಸಾತ್ತ್ವಿಕಕರ್ಮ. ಯಾವ ಕರ್ತೃವು ಕರ್ಮಫಲವನ್ನು ಬಯಸುತ್ತಾನೆಯೋ ಅವನು ಕರ್ಮಫಲದಲ್ಲಿ ತೃಷ್ಣೆಯುಳ್ಳವನು. ಅದಕ್ಕೆ ವಿರುದ್ಧವಾದವನು **ಅಫಲಪ್ರೇಪ್ಸು**. (ಶಂ. ಭಾ.)

**ನಿಯತಂ** =ತನ್ನ ವರ್ಣಾಶ್ರಮಗಳಿಗೆ ಯೋಗ್ಯವಾದುದು. **ಸಙ್ಗರಹಿತಂ**= ಕರ್ತೃತ್ವವೇ ಮುಂತಾದ ಸಂಗವಿಲ್ಲದ್ದು. **ಅರಾಗದ್ವೇಷತಃ ಕೃತಂ** = ಕೀರ್ತಿಯಲ್ಲಿ ರಾಗ ಮತ್ತು ಅಕೀರ್ತಿಯಲ್ಲಿ ದ್ವೇಷ ಇವುಗಳಿಂದ ಮಾಡಲ್ಪಡದೇ ಇರುವುದು. ಎಂದರೆ ದಂಭವಿಲ್ಲದೇ ಆಚರಿಸಲ್ಪಡುವುದು. **ಅಫಲಪ್ರೇಪ್ಸುನಾ** = ಫಲಾಭಿಸಂಧಿಯಿಲ್ಲದೇ ಇದು ಕರ್ತವ್ಯ ಎಂಬ ದೃಷ್ಟಿಯಿಂದ ಮಾಡಲ್ಪಡತಕ್ಕದ್ದು. ಇಂತಹ ಕರ್ಮವು ಸಾತ್ತ್ವಿಕವೆನಿಸುತ್ತದೆ.

(ರಾ. ಭಾ.)

**ನಿಯತಂ ಸಙ್ಗರಹಿತಂ** = ನನ್ನದು ಎಂಬ ಸ್ನೇಹವಿಲ್ಲದುದು. ಹರಿಯು ಸರ್ವೋತ್ತಮ ಎಂಬ ಜ್ಞಾನ-ಭಕ್ತಿಪೂರ್ವಕವಾಗಿ ಮಾಡಲ್ಪಡುವ ವರ್ಣಾಶ್ರಮಗಳಿಗೆ ಉಚಿತವಾದ ಕರ್ಮ. **ಅರಾಗದ್ವೇಷತಃ ಕೃತಂ** = ಕೀರ್ತಿ-ಅಕೀರ್ತಿ ಮುಂತಾದುವುಗಳಲ್ಲಿ ರಾಗ-ದ್ವೇಷಗಳಿಲ್ಲದವನಾಗಿ ಮಾಡುವುದು. **ಅಫಲಪ್ರೇಪ್ಸುನಾ** = ಫಲವನ್ನು ಹೊಂದಬೇಕು ಎಂಬ ಆಸೆಯಿಲ್ಲದವನಿಂದ ಮಾಡಲ್ಪಡುವುದು. (ಮ. ಭಾ.)

**ಓಂ ಯತ್ತು ಕಾಮೇಪ್ಸುನಾ ಕರ್ಮ ಸಾಹಂಕಾರೇಣ ವಾ ಪುನಃ ।**
**ಕ್ರಿಯತೇ ಬಹುಲಾಯಾಸಂ ತದ್ರಾಜಸಮುದಾಹೃತಮ್ ॥೨೪॥**

ಯಾವ ಕರ್ಮವು ಕಾಮೇಚ್ಛೆಯುಳ್ಳವನಿಂದ ಮತ್ತು ಅಹಂಕಾರ ವುಳ್ಳವನಿಂದ ಬಹಳ ಆಯಾಸದಿಂದ ಮಾಡಲ್ಪಡುವುದೋ ಅದು ರಾಜಸ ವೆನಿಸುತ್ತದೆ.

* * *

(ರಾಜಸಕರ್ಮದ ಲಕ್ಷಣಗಳನ್ನು ಶ್ರೀಕೃಷ್ಣನು ಹೇಳುತ್ತಾನೆ. ಮೊದಲನೆಯದಾಗಿ ಫಲವನ್ನುದ್ದೇಶಿಸಿ ಕರ್ಮಮಾಡುವುದು ರಾಜಸಕರ್ಮ ವೆನಿಸುತ್ತದೆ.

ಇಲ್ಲಿ 'ಫಲವನ್ನುದ್ದೇಶಿಸಿ ಮಾಡುವವನು' ಎಂದರೆ ಸ್ವರ್ಗವೇ ಮುಂತಾದ ಅದೃಶ್ಯಫಲವನ್ನೂ, ಧನಪ್ರಾಪ್ತಿಯೇ ಮುಂತಾದ ಪ್ರತ್ಯಕ್ಷಫಲವನ್ನೂ ಉದ್ದೇಶಿಸಿ ಕರ್ಮಮಾಡುವವನು ಎಂದರ್ಥ. ತಂದೆ-ತಾಯಿಗಳ ಸೇವೆಯು ಕರ್ತವ್ಯ. ಆದರೆ ಅದರಿಂದ ಪ್ರತ್ಯಕ್ಷಫಲವು ಸಿಕ್ಕುವುದೆಂಬ ನಿಯಮವೇನೂ ಇಲ್ಲ. ಆದುದರಿಂದ ಅದನ್ನು ಉದಾಸೀನಮಾಡುವನು. ಧನಿಕನೊಬ್ಬನು ಅಯೋಗ್ಯನಾದರೂ ಸಹ ಹಣದ ಆಸೆಯಿಂದಾಗಿ ಅಂತಹ ಧನಿಕನ ಸೇವೆಮಾಡುವನು. ನಿತ್ಯ-ನೈಮಿತ್ತಿಕಕರ್ಮಗಳನ್ನು ಮಾಡಿಯೇ ತೀರಬೇಕು. ಈ ಕರ್ಮಗಳಿಗೂ ಫಲವಿದೆ. ಬ್ರಹ್ಮಲೋಕಪ್ರಾಪ್ತಿಯೇ ಅದರ ಫಲ. ಆದರೆ ರಾಜಸಿಗೆ ಇಂತಹ ಕರ್ಮಗಳಲ್ಲಿ ಅಷ್ಟು ನಿಷ್ಠೆಯಿರುವುದಿಲ್ಲ. ಕಾಮ್ಯ ಕರ್ಮಗಳಲ್ಲಿಯೇ ಹೆಚ್ಚು ನಿಷ್ಠೆ. ಐಶ್ವರ್ಯಕಾಮನೆ, ಗೃಹಕಾಮನೆ, ಅಧಿ ಕಾರಕಾಮನೆ–ಮುಂತಾದುವುಗಳಿಗೆ ಸಂಬಂಧಿಸಿದಂತೆ ಅವುಗಳ ಪ್ರಾಪ್ತಿಗಾಗಿ

ಇವನು ವ್ರತಾದಿಗಳನ್ನು ಮಾಡುತ್ತಿರುತ್ತಾನೆ. ಅಂತಹ ಕಾಮ್ಯಕರ್ಮಗಳಲ್ಲಿಯೇ ಇವನಿಗೆ ಹೆಚ್ಚು ನಿಷ್ಠೆಯಿರುತ್ತದೆ. ಕರ್ಮಗಳನ್ನು ಮಾಡುವಾಗಲೂ ಅಹಂಕಾರಪೂರ್ವಕವಾಗಿ ಮಾಡುತ್ತಾನೆ. ಇಂತಹವನಿಗೆ ಅಹಂಕಾರವು ಸ್ವಾಭಾವಿಕವಾಗಿಯೇ ಇರುತ್ತದೆ. 'ನಾನು ಮಾಡಿದೆನು ; ನನ್ನ ಸಂಪತ್ತನ್ನು ವೃದ್ಧಿಗೊಳಿಸುವ ಸಲುವಾಗಿ ಮಾಡಿದೆನು ; ನನ್ನಿಂದ ಇಂತಹ ಮಹಾಕಾರ್ಯವು ನಡೆಯಿತು ; ನಾನಿಲ್ಲದಿದ್ದರೆ ಇದು ಆಗುತ್ತಲೇ ಇರಲಿಲ್ಲ'–ಇತ್ಯಾದಿ 'ಅಹಂ' ಭಾವನೆಗಳು ಇವನಲ್ಲಿ ತುಂಬಿರುತ್ತವೆ. ಇವನು ಬಹಳ ಆಯಾಸಕರವಾದ ಕರ್ಮವನ್ನೇ ಮಾಡುತ್ತಾನೆ. ಆಯಾಸಕರವಾದ ಕರ್ಮಮಾಡುವುದು ಕೆಲವರ ಸ್ವಭಾವವೇ ಆಗಿರುತ್ತದೆ. ದೊಂಬರವನು ಉದರನಿಮಿತ್ತವಾಗಿ ಕಷ್ಟಪಟ್ಟು ಅಂಗಸಾಧನೆ ಮಾಡುತ್ತಾನೆ. ಒಂದು ಹಿಡಿ ಭಿಕ್ಷೆಗಾಗಿ ಹಾವಾಡಿಗನು ಹಾವಿನ ಬುಟ್ಟಿಯನ್ನು ಹೊತ್ತು ತಿರುಗುವನು. ಅದರಂತೆ ರಾಜಸಗುಣದವನೂ ಸಹ ಐಶ್ವರ್ಯಪ್ರಾಪ್ತಿಗಾಗಿ ಸ್ವರ್ಗಪ್ರಾಪ್ತಿಗಾಗಿ ಸಾಧಾರಣರಿಂದಾಗದ, ಬಹಳ ಆಯಾಸಕರವಾದ, ಬಹುಮೌಲ್ಯವಾದ ಯಜ್ಞ-ಯಾಗಾದಿಗಳನ್ನೂ ವ್ರತಾದಿಗಳನ್ನೂ ಮಾಡುತ್ತಲೇ ಇರುತ್ತಾನೆ. ಇಂತಹ ಕರ್ಮಗಳಿಗೆ ರಾಜಸಕರ್ಮಗಳೆಂದು ಹೆಸರು.)

o o o

ಯಾವ ಕರ್ಮವು ಭೋಗರೂಪವಾದ ಫಲದಲ್ಲಿ ಇಷ್ಟವುಳ್ಳ ಪುರುಷರಿಂದ ಅಥವಾ ಅಹಂಕಾರವುಳ್ಳ ಪುರುಷರಿಂದ ಮಾಡಲ್ಪಡುತ್ತದೆಯೋ ಅದು ರಾಜಸ ಎನಿಸುತ್ತದೆ. **ಸಾಹಂಕಾರೇಣ** = ಇಲ್ಲಿ ಅಹಂಕಾರದಿಂದ ಎಂಬ ಪದವನ್ನು ತತ್ತ್ವಜ್ಞಾನದೊಡನೆ ಹೋಲಿಕೆಯಿಂದ ಹೇಳಿಲ್ಲ. ಲೌಕಿಕನಾದ ಶ್ರೋತ್ರಿಯನಲ್ಲಿ ಯಾವ ನಿರಹಂಕಾರತೆಯು ಇರುತ್ತದೆಯೋ ಅದರ ಹೋಲಿಕೆಯಿಂದ ಹೇಳಿದ ಮಾತು. ಏಕೆಂದರೆ : ಪಾರಮಾರ್ಥಿಕವಾಗಿ ನಿರಹಂಕಾರಿಯಾಗಿರುವ ಆತ್ಮಜ್ಞಾನಿಯಲ್ಲಿ ಫಲವನ್ನು ಬಯಸುವಿಕೆ, ಬಹಳ ಆಯಾಸವುಳ್ಳ ಕರ್ಮದ ಕರ್ತೃತ್ವ–ಇವುಗಳ ಸಂಭವವೇ ಇಲ್ಲ. ಸಾತ್ತ್ವಿಕವಾದ ಕರ್ಮಗಳ ಕರ್ತೃವೂ ಕೂಡ ಆತ್ಮತತ್ತ್ವವನ್ನರಿಯದೇ ಅಹಂಕಾರಿಯಾದ ಮನುಷ್ಯನಾಗುವ ಸಂಭವವಿರುವಾಗ ಇನ್ನು ರಾಜಸ-ತಾಮಸಕರ್ಮಗಳ ಕರ್ತೃಗಳ ಬಗೆಗೆ ಹೇಳತಕ್ಕದ್ದೇನು? ಲೋಕದಲ್ಲಿ ಆತ್ಮಜ್ಞಾನಿಗಳಲ್ಲದೇ

ಇದ್ದರೂ ಅಹಂಕಾರವಿಲ್ಲದ ಕೆಲವರನ್ನು 'ಶ್ರೋತ್ರಿಯ, ಸಾತ್ವಿಕ' ಎಂದು ಹೇಳುತ್ತೇವೆ. ಅವನೊಡನೆ ಹೋಲಿಕೆಮಾಡಿ ರಾಜಸನನ್ನು ಸಾಹಂಕಾರೀ ಎಂದು ಕರೆದಿದೆ. **ಕ್ರಿಯತೇ ಬಹುಲಾಯಾಸಂ** = ಕರ್ತೃವು ಬಹಳ ಆಯಾಸದಿಂದ ನೆರವೇರಿಸುವ ಕರ್ಮ. ಇದು ರಾಜಸ ಎನಿಸುತ್ತದೆ.

(ಶಂ. ಭಾ.)

ಯಾವ ಕರ್ಮವು ಫಲದ ಬಯಕೆಯುಳ್ಳವನಿಂದ ಮತ್ತು ಅಹಂಕಾರವುಳ್ಳವನಿಂದ ತಾನೇ ಕರ್ತಾ ಎಂಬ ಅಭಿಮಾನವುಳ್ಳವನಿಂದ ಬಹಳ ಆಯಾಸಪೂರ್ವಕವಾಗಿ ಮಾಡಲ್ಪಡುತ್ತದೆಯೋ ಅದು ರಾಜಸ. 'ಬಹಳ ಆಯಾಸದಿಂದ ಕೂಡಿದ ಈ ಕರ್ಮವು ನನ್ನಿಂದಲೇ ಮಾಡಲ್ಪಡುತ್ತದೆ'–ಎಂಬ ಅಭಿಮಾನವುಳ್ಳವನಿಂದ ಯಾವ ಕರ್ಮವು ಮಾಡಲ್ಪಡುತ್ತದೆಯೋ ಅದು ರಾಜಸ. 'ವಾ' ಎಂಬ ಶಬ್ದವು ಆಶ್ಚರ್ಯವನ್ನು ಸೂಚಿಸುತ್ತದೆ. (ರಾ. ಭಾ.)

**ಸಾಹಂಕಾರೇಣ** = ಕರ್ತೃತ್ವಾಭಿಮಾನದಿಂದ ಮತ್ತು ಫಲಪ್ರಾಪ್ತಿಯ ಇಷ್ಟದಿಂದ. 'ಪುನಃ' ಎಂಬ ಶಬ್ದವು ಸಮುಚ್ಚಯದ ಅರ್ಥವನ್ನು ಹೇಳುತ್ತದೆ. **ಬಹುಲಾಯಾಸಂ** = ಬಹಳ ಆಯಾಸವುಳ್ಳ. (ಮ. ಟೀಕಾ)

**ಓಂ ಅನುಬನ್ಧಂ ಕ್ಷಯಂ ಹಿಂಸಾಮನವೇಕ್ಷ್ಯ ಚ ಪೌರುಷಮ್ ।**
**ಮೋಹಾದಾರಭ್ಯತೇ ಕರ್ಮ ತತ್ತಾಮಸಮುದಾಹೃತಮ್ ॥೨೫॥**

ಕೊನೆಯಲ್ಲಿ ಆಗುವ ಪರಿಣಾಮವನ್ನೂ, ಕ್ಷಯವನ್ನೂ, ಹಿಂಸೆಯನ್ನೂ, ಪೌರುಷವನ್ನೂ ಲೆಕ್ಕಿಸದೇ, ಯಾವ ಕರ್ಮವು ಮೋಹದಿಂದ ಆರಂಭಿಸಲ್ಪಡುತ್ತದೆಯೋ ಅದು ತಾಮಸಕರ್ಮವೆನಿಸಿಕೊಳ್ಳುತ್ತದೆ.

* * *

(ಅನುಬನ್ಧಂ ಎಂದರೆ ಮುಂದೆ ಉಂಟಾಗುವ ಶುಭ ಮತ್ತು ಅಶುಭ ಫಲಗಳು. ಒಂದು ಕಾರ್ಯವನ್ನು ವಿವೇಚನೆಯಿಲ್ಲದೇ ಫಲಿತಾಂಶದಲ್ಲಿ ಒಳ್ಳೆಯ ಪ್ರಯೋಜನವಾಗುವುದೇ, ಕೆಟ್ಟದಾಗುವುದೇ–ಎಂಬುದನ್ನು ವಿವೇಚಿಸದೇ ಆರಂಭಿಸುವುದು. ಶುಭಾಶುಭಫಲಗಳನ್ನು ವಿವೇಚಿಸದಿರುವುದು ಮಾತ್ರವಲ್ಲ ; **ಕ್ಷಯಂ** = ಈ ಕರ್ಮದಿಂದಾಗುವ ಶಕ್ತಿವ್ಯಯವೆಷ್ಟು? ಧನವ್ಯಯವೆಷ್ಟು? ಧಾನ್ಯವ್ಯಯವೆಷ್ಟು?–ಎಂಬುದಾವುದನ್ನೂ ಲಕ್ಷಿಸದೇ

ಕೆಲಸವನ್ನು ಪ್ರಾರಂಭಿಸುವುದು. ತನಗಾಗಲೀ, ಇತರರಿಗಾಗಲೀ ಅದರಿಂದ ಹಿಂಸೆಯಾಗುತ್ತದೆಯೇ ಎಂಬುದನ್ನು ಗಮನಿಸದೇ ಮಾಡುವ ಕೆಲಸ. ನೊಣವು ಆಹಾರದಲ್ಲಿ ಬೆರೆತು ಸಾಯುವುದೇನೋ ನಿಜ. ಆದರೆ ಅದು ಹೊಟ್ಟೆಗೆ ಹೋಯಿತೆಂದರೆ ತಿಂದುದನ್ನೂ ಕಕ್ಕಿಸುವುದು. ಅದರಂತೆ ತನಗೂ ಹಿಂಸೆಮಾಡಿಕೊಂಡು ಇತರರಿಗೂ ಹಿಂಸೆಮಾಡುವುದು. ದೀಪದ ಹುಳುವಿನದು ಮತ್ತೊಂದು ದೃಷ್ಟಾಂತ. ದೀಪದ ಹುಳುವು ದೀಪದ ಮೇಲೆ ತೊಪ್ಪನೆ ಬಿದ್ದು ತಾನೂ ಸಾಯುವುದಲ್ಲದೇ ದೀಪವನ್ನೂ ಆರಿಸಿ ಇತರರಿಗೂ ತೊಂದರೆಯನ್ನುಂಟುಮಾಡುತ್ತದೆ. ತಾಮಸಕರ್ಮವೆಂದರೆ ಇಂತಹುದೇ ಕರ್ಮ.

ಈ ಕಾರ್ಯವು ತನ್ನಿಂದ ಸಾಧ್ಯವೇ? ತನಗೆ ಈ ಕಾರ್ಯವನ್ನು ಪೂರೈಸುವ ಸಾಮರ್ಥ್ಯವಿರುವುದೇ?–ಎಂಬುದನ್ನು ವಿವೇಚಿಸದೆಯೇ ಮೋಹದಿಂದ ಪ್ರಾರಂಭಿಸಿಬಿಡುವುದು.

ಅಜ್ಞಾನದಿಂದ ಹೀಗೆ ಆರಂಭಿಸುವ ಕರ್ಮಕ್ಕೆ ತಾಮಸಕರ್ಮ ಎಂದು ಹೆಸರು.

ಇಂತಹ ತಾಮಸಕರ್ಮಗಳ ಪ್ರಯೋಜನವೆಷ್ಟೆಂಬುದನ್ನು ಸಂತ ಜ್ಞಾನೇಶ್ವರರು ದೃಷ್ಟಾಂತದೊಡನೆ ಹೇಳಿದ್ದಾರೆ.

ಗಂಜಿಯನ್ನು ಕಡೆದರೆ, ಮಳಲನ್ನು ಗಾಣದಲ್ಲಿ ಹಾಕಿ ತಿರುವಿದರೆ, ಹೊಟ್ಟನ್ನು ಕುಟ್ಟಿದರೆ, ಗಾಳಿಯನ್ನು ಹಿಡಿಯಲು ಬಲೆಯನ್ನು ಬೀಸಿದರೆ ಯಾವ ಫಲವು ಸಿಕ್ಕುವುದೋ ಅದೇ ಫಲವೇ ತಾಮಸಿಗೂ ಲಭಿಸುವುದು. ಅರ್ಥಾತ್ ಅವನು ಪ್ರಾರಂಭಿಸಿದ ಕೆಲಸಗಳು ಮುಗಿಯುವುದೇ ಇಲ್ಲ. ನಿಷ್ಫಲವಾಗಿ ಅರ್ಧದಲ್ಲೇ ನಿಂತುಹೋಗುವುವು.)

O O O

**ಅನುಬನ್ಧಃ**=ಮುಂದೆ ಉಂಟಾಗುವ ಪರಿಣಾಮ. **ಕ್ಷಯಃ**=ಶಕ್ತಿ, ಹಣ, ಮುಂತಾದುವುಗಳ ನಾಶ. ಹಿಂಸಾ = ಪ್ರಾಣಿಪೀಡೆ, **ಪೌರುಷಂ** = ಆತ್ಮ ಸಾಮರ್ಥ್ಯ. ಯಾವುದಾದರೂ ಕರ್ಮವನ್ನು ಮಾಡಿಮುಗಿಸಲು ತನಗೆ ಇರುವ ಸಾಮರ್ಥ್ಯ. ಇವುಗಳನ್ನು ಗಮನಿಸದೇ ಅವಿವೇಕದಿಂದ ಯಾವ ಕರ್ಮವು ಆರಂಭಿಸಲ್ಪಡುತ್ತದೆಯೋ ಅದು ತಾಮಸ. ತಮೋಗುಣದಿಂದ ಆದುದು.

(ಶಂ. ಭಾ.)

**ಅನುಬನ್ಧಃ**= ಕರ್ಮವನ್ನು ಮಾಡಿದರೆ ಮುಂದೆ ಬಂದು ಸೇರಿಕೊಳ್ಳುವ ದುಃಖ. **ಕ್ಷಯಃ** = ಕರ್ಮವನ್ನು ಆಚರಿಸಿದರೆ ಉಂಟಾಗುವ ಅರ್ಥವಿನಾಶ. ಹಿಂಸಾ = ಅದರಲ್ಲಿ ಉಂಟಾಗುವ ಪ್ರಾಣಿಪೀಡನೆ. **ಪೌರುಷಂ** = ಕರ್ಮವನ್ನು ಮುಗಿಸಲು ತನಗಿರುವ ಸಾಮರ್ಥ್ಯ. ಇವುಗಳನ್ನು ವಿಮರ್ಶಿಸದೇ ಮೋಹದಿಂದ ಎಂದರೆ ಪರಮಪುರುಷನೇ ಕರ್ತಾ ಎಂಬ ಅರಿವಿಲ್ಲದೇ ಯಾವ ಕರ್ಮವು ಆರಂಭಿಸಲ್ಪಡುತ್ತದೆಯೋ ಅದು ತಾಮಸ ಎನಿಸುತ್ತದೆ.(ರಾ. ಭಾ.)

**ಅನುಬನ್ಧಃ** = ಅನುಷ್ಠಾನಮಾಡಿದೊಡನೆಯೇ ಎಂದು ಸಂಬಂಧಿಸಿಕೊಳ್ಳುವುದು.

**ಕ್ಷಯಃ**= ಸ್ವನಾಶ. ಹಿಂಸಾ = ಪರಪೀಡೆ. **ಅನವೇಕ್ಷ್ಯ** = ವಿಮರ್ಶಿಸದೆ. **ಪೌರುಷಂ** = ತನಗಿರುವ ಕರ್ಮಸಾಮರ್ಥ್ಯ. (ಮ. ಟೀಕಾ)

ಹೀಗೆ ಕರ್ಮಗಳನ್ನು ಮೂರು ವಿಭಾಗಮಾಡಿ ಹೇಳಿದನಂತರ ಸತ್ತ್ವ-ರಜಸ್ತಮಸ್ಸುಗಳ ಕರ್ಮಗಳನ್ನು ಮಾಡುವವನು ಅನುಕ್ರಮವಾಗಿ ಸಾತ್ತ್ವಿಕ ಕರ್ತಾ, ರಾಜಸಕರ್ತಾ, ತಾಮಸಕರ್ತಾ ಎಂಬುದು ನಿಶ್ಚಯವಾದರೂ ಶ್ರೀಕೃಷ್ಣನು ತಾನು ಪ್ರತಿಜ್ಞೆಮಾಡಿದಂತೆ ವಿವರಣೆಗೋಸ್ಕರ ಮೂರು ವಿಧ ವಾದ ಕರ್ತೃಗಳನ್ನೂ ಪ್ರತ್ಯೇಕ-ಪ್ರತ್ಯೇಕವಾಗಿಯೇ ವರ್ಣಿಸಿ ಹೇಳುತ್ತಾನೆ :

**ಓಂ ಮುಕ್ತಸಙ್ಗೋऽನಹಂವಾದೀ ಧೃತ್ಯುತ್ಸಾಹಸಮನ್ವಿತಃ ।**
**ಸಿದ್ಧ್ಯಸಿದ್ಧ್ಯೋರ್ನಿರ್ವಿಕಾರಃ ಕರ್ತಾ ಸಾತ್ತ್ವಿಕ ಉಚ್ಯತೇ ॥೨೬॥**

ಅಹಂ ಎಂದು ಹೇಳಿಕೊಳ್ಳದೇ ಇರತಕ್ಕವನು. ಸಂಗವನ್ನು ತ್ಯಜಿಸಿದವನು. ಧಾರಣಾಶಕ್ತಿಯಿಂದ ಮತ್ತು ಉತ್ಸಾಹದಿಂದ ಕೂಡಿರುವವನು. ಕಾರ್ಯವು ಸಿದ್ಧಿಸಲಿ, ಸಿದ್ಧಿಸದಿರಲಿ ವಿಕಾರವಿಲ್ಲದೇ ಇರತಕ್ಕವನು. ಇಂತಹ ಕರ್ತೃವು ಸಾತ್ತ್ವಿಕನೆನಿಸಿಕೊಳ್ಳುತ್ತಾನೆ.

* * *

(ಇದು ಜ್ಞಾನಿಯ ಲಕ್ಷಣ. ಈ ಹಿಂದೆಯೇ ೨೨-೨೩ನೇ ಶ್ಲೋಕಗಳಲ್ಲಿ ಹೇಳಿರುವುದನ್ನು ಶ್ರೀಕೃಷ್ಣನು ಉಪಸಂಹಾರದ ಪ್ರಕರಣದಲ್ಲಿಯೂ ಹೇಳಿದ್ದಾನೆ.

**ಮುಕ್ತಸಙ್ಗಃ** = ಸಂಗ ಎಂದರೆ ಸಹವಾಸ. ಪ್ರಾಕೃತಸಂಬಂಧಗಳಲ್ಲಿ

ಆಸಕ್ತಿ. ಸಂಪತ್ತು, ಕೀರ್ತಿ ಮುಂತಾದುವುಗಳಲ್ಲಿ ಆಸಕ್ತಿ. ಇಂತಹ ಆಸಕ್ತಿಗೆ ಕಾರಣವಾದುವುಗಳ ಸಂಗವನ್ನೇ ಬಿಟ್ಟವನು ಮುಕ್ತಸಂಗ. ಸಂಗಯುಕ್ತ ನಾಗಿದ್ದರೂ ಸಂಗವಿಹೀನನಂತೆ ಇರತಕ್ಕವನು ಅಥವಾ ನಿತ್ಯ-ನೈಮಿತ್ತಿಕಕರ್ಮ ಗಳನ್ನು ಮಾಡುತ್ತಿದ್ದರೂ ಅದರ ಫಲಸಂಗದಿಂದ ಮುಕ್ತನಾದವನು. ಫಲಾಭಿ ಸಂಧಿಯಿಲ್ಲದೇ ಕರ್ಮಮಾಡತಕ್ಕವನು. **ಅನಹಂವಾದೀ = ಅಹಂವಾದೀ** ಎಂದರೆ ದೇಹಾತ್ಮಭಾವದಿಂದ ನಾನು ; ನನ್ನದು ; ನಾನು ಮಾಡಿದೆನು ; ನನ್ನಿಂದಲೇ ಎಲ್ಲವೂ ನಡೆಯುತ್ತದೆ. **ಈಶ್ವರೋಽಹಮಹಂ ಭೋಗೀ** ಮುಂತಾಗಿ ಭಾವಿಸಿರತಕ್ಕವನು. ಹೀಗೆ ಭಾವಿಸದೇ 'ನಾನು ಎಂಬುದಿಲ್ಲ ; ದೇಹವು ನಾನಲ್ಲ. ಕರಣಗಳೂ ನಾನಲ್ಲ. ನನ್ನದು ಎಂಬುದು ಯಾವುದೂ ಇಲ್ಲ. ಇಂದ್ರಿಯಗಳು ವಿಷಯಗಳಲ್ಲಿ ಪ್ರವರ್ತಿಸುತ್ತವೆ'–ಎಂದು ಭಾವಿಸು ವಿಕೆಯು **ಅನಹಂವಾದಿತ್ವ**. ಇಂತಹವನನ್ನೇ ಹಿಂದೆ ಶ್ರೀಕೃಷ್ಣನು ಪ್ರಾಜ್ಞನೆಂದೂ ಕರೆದಿರುತ್ತಾನೆ.

**ಧೃತ್ಯುತ್ಸಾಹಸಮನ್ವಿತಃ** = ಧೃತಿ ಎಂದರೆ ಧೈರ್ಯ. ಯಾವುದೇ ಕಷ್ಟ ಸಂದರ್ಭದಲ್ಲಿಯೂ ಶಾಸ್ತ್ರವಿಹಿತವಾದ ಸ್ವಧರ್ಮಪಾಲನೆಯನ್ನು ಮಾಡು ವುದಕ್ಕೆ ಧೃತಿ ಎಂದು ಹೆಸರು. ಸ್ವಧರ್ಮಪರಿಪಾಲನೆಯು ಬಹುಕಷ್ಟಕರ ವಾದುದು. ಕುಂಟುನೆಪವನ್ನು ಹೇಳಿಕೊಂಡು ಆಪದ್ಧರ್ಮಕ್ಕೆ ಮರೆಹೋಗು ವವರೇ ಹೆಚ್ಚು. ಸ್ವಧರ್ಮಪರಿಪಾಲನೆಗೆ ಹೆಚ್ಚಿನ ಧೈರ್ಯಬೇಕು. ಸ್ವಧರ್ಮ ಎಂದರೆ ಆತ್ಮಧರ್ಮ ಎಂದೂ ಆಗುತ್ತದೆ. ಇದರ ಸಾಧನೆಗೂ ಹೆಚ್ಚು ಧೈರ್ಯ ಅಥವಾ ಧಾರಣಾಶಕ್ತಿಯಿರಬೇಕೆಂಬುದು ನಿರ್ವಿವಾದ. ಪುಕ್ಕಲನಿಗೆ ಆತ್ಮಜ್ಞಾನ ವಾಗುವುದಿಲ್ಲ. ಧೀರರಾದವರು ಮಾತ್ರವೇ ಆತ್ಮಜ್ಞಾನವನ್ನು ಪಡೆದುಕೊಳ್ಳ ಬಲ್ಲರು. ಸ್ವಧರ್ಮದಂತೆ ಕರ್ಮಮಾಡಲೂ ಸಹ ಧೈರ್ಯವಿರಬೇಕು. 'ಶಾಸ್ತ್ರ ವೆಂಬುದು ತಂದೆ-ತಾಯಿಗಳಿಗಿಂತಲೂ ಹೆಚ್ಚಿನದು. ಶಾಸ್ತ್ರನಿಯಮದಂತೆ ನಡೆ ಯುವುದು ನನ್ನ ಕರ್ತವ್ಯ'–ಎಂದು ಭಾವಿಸಿ ಯಾವುದೇ ಸಮಯದಲ್ಲಿಯೂ ಸದಾಚಾರ-ಸದ್ವ್ಯವಹಾರಗಳನ್ನು ಬಿಡದವನು ಧೃತಿವಂತ.

ಇಂತಹ ಧೈರ್ಯವಿದ್ದರೇನೇ ಸಾಧನೆಮಾಡಲು ಉತ್ಸಾಹವಿರುತ್ತದೆ. ಉತ್ಸಾಹಕ್ಕೆ ಧೃತಿಯು ಅಡಿಗಲ್ಲಿದ್ದಂತೆ. ಧೃತಿಯಿಲ್ಲದಿದ್ದರೆ ಉತ್ಸಾಹವೂ

ಇರುವುದಿಲ್ಲ. ಧೃತ್ಯುತ್ಸಾಹಗಳಿದ್ದರೆ ಸಾಧನೆಯ ಮಾರ್ಗದಲ್ಲಿ ಯಾವುದೇ ವಿಘ್ನಗಳಿದ್ದರೂ ತೊಡೆದುಹಾಕಿ ಮುಂದುವರಿಯಬಲ್ಲನು. ಆದುದರಿಂದ ಜ್ಞಾನಿಯು ಅಥವಾ ಈ ಶ್ಲೋಕದಲ್ಲಿ ಹೇಳಿರುವ ಸಾತ್ತ್ವಿಕಕರ್ತೃವು ಧೈರ್ಯೋತ್ಸಾಹಗಳಿಂದ ಕೂಡಿದವನಾಗಿರುತ್ತಾನೆ.

**ಸಿದ್ಧ್ಯಸಿದ್ಧ್ಯೋರ್ನಿರ್ವಿಕಾರಃ** = ಇಲ್ಲಿ ಹೇಳಿರುವುದು ಆತ್ಮಸಿದ್ಧಿಯ ವಿಷಯವಲ್ಲ. ಕಾರ್ಯಸಿದ್ಧಿಯ ವಿಷಯ. ಯಾವುದಾದರೂ ಕೆಲಸದಲ್ಲಿ ಪ್ರವೃತ್ತನಾಗಿ ಒಂದು ವೇಳೆ ಆ ಕೆಲಸವು ಸಿದ್ಧಿಯಾಗದಿದ್ದರೆ (ಪೂರ್ಣವಾಗದಿದ್ದರೆ) ದುಃಖವೆಂಬ ವಿಕಾರವನ್ನು ಹೊಂದುವುದಿಲ್ಲ. ಪೂರ್ಣವಾದರೆ ಸಂತೋಷವೆಂಬ ವಿಕಾರವನ್ನೂ ಹೊಂದುವುದಿಲ್ಲ. ಫಲಾಭಿಸಂಧಿಯಾಗಲೀ ಕಾರ್ಯವು ಪೂರ್ಣವಾಗಲಿಲ್ಲವೆಂಬ ನಿರ್ವೇದವಾಗಲೀ ಇಲ್ಲದೇ ಪುನಃ ಕಾರ್ಯದಲ್ಲಿ ಪ್ರವೃತ್ತನಾಗುತ್ತಾನೆ. ಕೇವಲ ಕರ್ತವ್ಯದೃಷ್ಟಿಯಿಂದ ಕಾರ್ಯ ಪ್ರವೃತ್ತನಾಗುವನೇ ಹೊರತು ಕಾರ್ಯವು ಮುಗಿದು ತನಗೆ ಯಶಸ್ಸು ಲಭಿಸಬೇಕೆಂಬ ಆಶಯದಿಂದಲ್ಲ. ಕಾರ್ಯದಲ್ಲಿ ಸಕ್ತನಾಗದ ಇವನು ಕರ್ಮಫಲವನ್ನು ಬಿಟ್ಟಿರುತ್ತಾನೆ. ಕರ್ಮದಲ್ಲಿ ಆಸಕ್ತಿಯನ್ನೂ ಬಿಟ್ಟಿರುತ್ತಾನೆ. ಆದರೂ ಸಹ ಮಾಡುವ ಕರ್ಮವನ್ನು ಶ್ರದ್ಧೆಯಿಂದ ಮಾಡುತ್ತಾನೆ. ಜಯ ಮತ್ತು ಅಪಜಯ ಎರಡನ್ನೂ ಇವನು ಸಮವಾಗಿ ಕಾಣುತ್ತಾನೆ. ಇಂತಹ ಕರ್ತೃವು ಸಾತ್ತ್ವಿಕಕರ್ತಾ ಎನಿಸಿಕೊಳ್ಳುತ್ತಾನೆ.)

o o o

ಯಾವ ಕರ್ತೃವು ಆಸಕ್ತಿಯನ್ನು ತ್ಯಜಿಸಿರುತ್ತಾನೆಯೋ, ನಾನು ಕರ್ತಾ ಎಂದು ಹೇಳಿಕೊಳ್ಳುವ ಸ್ವಭಾವವಿಲ್ಲದೇ ಇರುತ್ತಾನೆಯೋ, ಧಾರಣಾಶಕ್ತಿ ಮತ್ತು ಉದ್ಯಮಗಳಿಂದ ಕೂಡಿರುತ್ತಾನೆಯೋ, ತಾನು ಮಾಡುವ ಕರ್ಮದ ಫಲವು ಸಿದ್ಧಿಸಲಿ ಅಥವಾ ಸಿದ್ಧಿಸದೇ ಇರಲಿ–ಎರಡರಲ್ಲೂ ವಿಕಾರವಿಲ್ಲದೇ ಇರುತ್ತಾನೆಯೋ ಎಂದರೆ ಫಲದ ಇಚ್ಛೆ ಅಥವಾ ಆಸಕ್ತಿ ಮುಂತಾದುವುಗಳಿಂದಲ್ಲದೇ ಕೇವಲ ಶಾಸ್ತ್ರಪ್ರಮಾಣದಿಂದ ಕರ್ಮಗಳಲ್ಲಿ ತೊಡಗುತ್ತಾನೆಯೋ ಅಂತಹ ಕರ್ತೃವು ಸಾತ್ತ್ವಿಕ ಎನಿಸುತ್ತಾನೆ. (ಶಂ. ಭಾ.)

**ಮುಕ್ತಸಙ್ಗಃ** = ಫಲಸಂಗವಿಲ್ಲದವನು. **ಅನಹಂವಾದೀ** = ಕರ್ತೃತ್ವದ

ಅಭಿಮಾನವಿಲ್ಲದವನು. **ಧೃತ್ಯುತ್ಸಾಹಸಮನ್ವಿತಃ** = ಧೃತಿ ಎಂದರೆ ಕೆಲಸವನ್ನು ಪ್ರಾರಂಭಿಸಿಯಾದ ಬಳಿಕ ಅದು ಮುಗಿಯುವವರೆಗೂ ಅನಿವಾರ್ಯವಾಗಿ ಒದಗುವ ದುಃಖವನ್ನು ಧರಿಸಿಕೊಳ್ಳುವಿಕೆ, ಇಂತಹ ಧೃತ್ಯುತ್ಸಾಹಗಳಿಂದ ಕೂಡಿದವನು. **ಸಿದ್ಧ್ಯಸಿದ್ಧ್ಯೋರ್ನಿರ್ವಿಕಾರಃ** = ಯುದ್ಧವೇ ಮುಂತಾದ ಕರ್ಮದಲ್ಲಿಯೂ ಅದಕ್ಕೆ ಸಾಧನವಾದ ದ್ರವ್ಯಸಂಪಾದನೆ ಮುಂತಾದ ಕರ್ಮದಲ್ಲಿಯೂ ಕಾರ್ಯದ ಸಿದ್ಧಿ ಅಥವಾ ಅಸಿದ್ಧಿ ಯಾವುದೇ ಆದರೂ ವಿಕಾರವಿಲ್ಲದ ಚಿತ್ತವುಳ್ಳವನು ಸಾತ್ತ್ವಿಕಕರ್ತಾ ಎನಿಸುತ್ತಾನೆ. (ರಾ. ಭಾ.)

**ಮುಕ್ತಸಙ್ಗಃ**=ಫಲದಲ್ಲಿ ಸ್ನೇಹವಿಲ್ಲದವನು. **ಅನಹಂವಾದೀ** =ಎಲ್ಲವೂ ಭಗವಂತನಿಗೆ ಅಧೀನ ಎಂಬ ನಿಶ್ಚಯವನ್ನು ಹೊಂದಿರುವುದರಿಂದಲೇ ತಾನು ಕರ್ತಾ ಎಂದು ಹೇಳದವನು. **ಧೃತ್ಯುತ್ಸಾಹಸಮನ್ವಿತಃ** = ಕರ್ಮದಲ್ಲಿ ಅನಿವಾರ್ಯವಾದ ದುಃಖವನ್ನು ಸಹಿಸುವವನು ಮತ್ತು ಕಾತರತೆಯಿಲ್ಲದವನು. (ಮ. ಟೀಕಾ)

**ಓಂ ರಾಗೀ ಕರ್ಮಫಲಪ್ರೇಪ್ಸುರ್ಲುಬ್ಧೋ ಹಿಂಸಾತ್ಮಕೋಽಶುಚಿಃ ।**
**ಹರ್ಷಶೋಕಾನ್ವಿತಃ ಕರ್ತಾ ರಾಜಸಃ ಪರಿಕೀರ್ತಿತಃ ॥೨೭॥**

ರಾಗವುಳ್ಳವನೂ, ಕರ್ಮಫಲವನ್ನು ಬಯಸುವವನೂ, ಲುಬ್ಧನೂ, ಹಿಂಸಾತ್ಮಕನೂ, ಅಶುಚಿಯೂ, ಹರ್ಷ ಮತ್ತು ಶೋಕಗಳಿಂದ ಕೂಡಿರುವವನೂ ಆದ ಕರ್ತೃವು ರಾಜಸನೆನಿಸುತ್ತಾನೆ.

* * *

(ರಾಗ' ಎಂದರೆ ಅನುರಾಗ ; ಪ್ರೀತಿ. ರಾಗೀ ಎಂದರೆ ಅನುರಾಗವುಳ್ಳವನು ; ಪ್ರೀತಿಯುಳ್ಳವನು. 'ಸಂಸಾರದಲ್ಲಿ' ಎಂಬುದು ಸ್ವಯಂಸಿದ್ಧವಾದುದು. ಸಂಸಾರದಲ್ಲಿ ಪ್ರೀತಿ ಅಥವಾ ಅನುರಾಗವಿರುವವನು ರಾಗೀ. ಈ ಕಾರಣದಿಂದಲೇ ವಿರಾಗೀ ಎಂಬುದಕ್ಕೆ ಸಂಸಾರದಿಂದ ವಿರಕ್ತನಾದವನು ಎಂದು ಅರ್ಥವಾಗುತ್ತದೆ.

**ಕರ್ಮಫಲಪ್ರೇಪ್ಸುಃ** = ಪ್ರಯೋಜನವಿಲ್ಲದೇ ಯಾವ ಕಾರ್ಯವನ್ನೂ ಮಾಡತಕ್ಕವನಲ್ಲ. ಐಹಿಕವಾಗಲೀ, ಆಮುಷ್ಮಿಕವಾಗಲೀ–ಕರ್ಮದ ಫಲವು ಇವನಿಗೆ ಬೇಕೇ ಬೇಕು. ಅದಕ್ಕಾಗಿಯೇ ಕರ್ಮಮಾಡುತ್ತಾನೆ. ಫಲವಿಲ್ಲದ

ಕಾರ್ಯವನ್ನು ಮಾಡಹೋಗುವುದಿಲ್ಲ. ಕಾಮ್ಯಗಳಲ್ಲಿಯೇ ಹೆಚ್ಚಿನ ಆಸಕ್ತಿ ಮತ್ತು ಶ್ರದ್ಧೆ.

ಲುಬ್ಧಃ = ಜಿಪುಣನು. ಧನದ ಗಳಿಕೆಯಲ್ಲಿಯೇ ಹೆಚ್ಚಿನ ಆಸಕ್ತಿ. ವೆಚ್ಚ ಮಾಡಲರಿಯನು. ಮೇಲಾಗಿ ಧನಸಂಪಾದನೆಗೆ ಸನ್ಮಾರ್ಗ–ದುರ್ಮಾರ್ಗ ಗಳೆಂಬ ಭೇದವೇ ಇವನಿಗಿರುವುದಿಲ್ಲ. ಧನಸಂಪಾದನೆಯೇ ಮುಖ್ಯ. ದ್ರವ್ಯದ ಮೇಲೆ ದುರ್ಧನ ಅಥವಾ ಸದ್ಧನವೆಂಬ ಚಿಹ್ನೆಯಿರುವುದಿಲ್ಲವೆಂಬುದು ಇವನ ವಾದವಾಗಿರುತ್ತದೆ. ಆದುದರಿಂದ ಇವನಿಗೆ ದ್ರವ್ಯಾರ್ಜನೆಯನ್ನು ಮಾಡಬೇಕೆಂಬ ಏಕೈಕದೃಷ್ಟಿಯೇ ಹೊರತು ಧರ್ಮಮೂಲವಾದ ಧನಾರ್ಜನೆಯು ಇವನ ಧ್ಯೇಯವಾಗಿರುವುದಿಲ್ಲ. ಹಣದ ರಾಶಿಯನ್ನು ನೋಡು-ನೋಡುತ್ತಾ ಹಿಗ್ಗುವವನಿವನು. ಹಣದ ಅಧಿಕವಾದ ಗಳಿಕೆಯು ಇವನ ದಾಹವನ್ನು ಹೆಚ್ಚಿಸುತ್ತದೆಯೇ ಹೊರತು ತೃಪ್ತಿಯನ್ನುಂಟುಮಾಡು ವುದಿಲ್ಲ. ಒಳ್ಳೆಯ ಕರ್ಮಗಳನ್ನು ಮಾಡಬೇಕಾದರೆ ಎಷ್ಟು ದ್ರವ್ಯವನ್ನು ವ್ಯಯಮಾಡಬೇಕೋ ಅದರಲ್ಲಿಯೂ ಜಿಪುಣತೆಯನ್ನು ತೋರುವವನು ಅಥವಾ ಇತರರ ದ್ರವ್ಯದಲ್ಲಿಯೂ ಆಸೆಯಿರುವವನು.

ಹಿಂಸಾತ್ಮಕಃ = ಹಣದ ಗಳಿಕೆಗೆ ನೀತಿ-ನಿಯಮಗಳನ್ನಿಡದ ಇವನು ಇತರರನ್ನು ಹಿಂಸಿಸಿಯಾದರೂ ಹಣಗಳಿಸುವವನು. ಉದಾಹರಣೆಗೆ ಸಾಲ ಕೊಟ್ಟ ಹಣಕ್ಕೆ ಹೆಚ್ಚು ಬಡ್ಡಿಹಾಕಿ ಅವರಿಂದ ಬಲಾತ್ಕಾರವಾಗಿ ವಸೂಲು ಮಾಡುವನು. ಹೀಗೆ ಮಾಡಿದರೆ ಅವರು ಸಂಕಟಪಟ್ಟಾರೆಂಬ ಸಂಕೋಚವೇ ಇವನಿಗೆ ಇರುವುದಿಲ್ಲ. ಅವರು ಇದರಿಂದಾಗಿ ಸಂಕಟಪಟ್ಟರೆ ಅದರಿಂದ ಆನಂದಪಡತಕ್ಕವನಿವನು. ತನ್ನ ಕೆಲಸವನ್ನು ಸಾಧಿಸಲು ಬೇರೆಯವರ ಹಿತಾ ಹಿತಗಳನ್ನು ಲಕ್ಷಿಸುವುದಿಲ್ಲ. ಇವನನ್ನು ಸಂತಜ್ಞಾನೇಶ್ವರರು ಬೋರೆಯ ಗಿಡಕ್ಕೆ ಹೋಲಿಸಿದ್ದಾರೆ.

ಬೋರೆಯ ಗಿಡದ ಬಳಿಗೆ ಹೋದರೆ ಅದರ ಮುಳ್ಳಿಗೆ ವಸ್ತ್ರವು ತೊಡಕು ವುದು. ಅಂಗಸ್ಪರ್ಶವಾದರೆ ಮೈದೊಗಲು ಹರಿಯುವುದು. ಅದರ ಹಣ್ಣನ್ನು ಬಾಯಲ್ಲಿ ಹಾಕಿಕೊಂಡರೆ ನಾಲಿಗೆ ಕತ್ತರಿಸಿಬೀಳುವಷ್ಟು ಹುಳಿ ಹತ್ತುವುದು. ಅದರಂತೆ ಇವನೂ ಸಹ ಅನ್ಯರಿಗೆ ಸರ್ವಪ್ರಕಾರದಿಂದಲೂ ದುಃಖವನ್ನುಂಟು

ಮಾಡಲು ಕಾರಣನಾಗುವನು. **ಅಶುಚಿಃ** = ಅಶುಚಿ ಎಂದರೆ ಹೊರಗಿನ ಕೊಳಕು ಮಾತ್ರವಲ್ಲ ; ವಿಶೇಷವಾಗಿ ಒಳಗಿನ ಕೊಳಕು. ಮನಸ್ಸಿನಲ್ಲಿ ರಾಗ-ದ್ವೇಷಗಳೆಂಬ ಕೊಳೆಯನ್ನು ತುಂಬಿಕೊಂಡಿರುವವನು. ಇವನ ಮನಸ್ಸು ಯಾವಾಗಲೂ ಹೊಲಸಾಗಿಯೇ ಇರುತ್ತದೆ. ಮನಸ್ಸಿನ ನೆಮ್ಮದಿಯು ಇವನಿಗಿರುವುದಿಲ್ಲ. 'ಯಾರಿಗೆ ಮೋಸಮಾಡಲಿ? ಯಾರನ್ನು ವಂಚಿಸಲಿ? ಧನವನ್ನು ಹೇಗೆ ವೃದ್ಧಿಸಲಿ?'–ಇತ್ಯಾದಿ ಕಲ್ಮಷಯುಕ್ತವಾದ ಭಾವನೆಗಳೇ ಇವನ ಮನಸ್ಸನ್ನು ತುಂಬಿಕೊಂಡುಬಿಟ್ಟಿರುತ್ತವೆ. ಆದುದರಿಂದ ಇವನು ಅಶುಚಿ. **ಹರ್ಷಶೋಕಾನ್ವಿತಃ** = ಹರ್ಷ ಮತ್ತು ಶೋಕ ಎರಡೂ ಸಹ ಇವನಲ್ಲಿರುತ್ತವೆ. ಅರ್ಥಾತ್ ಇವನು ಧನವು ಅಧಿಕಗೊಳ್ಳುತ್ತಿದ್ದರೆ ಯಾವುದಾದರೂ ಕಾರ್ಯದ ಸಿದ್ಧಿಯಾದರೆ ಹಿಗ್ಗಿಬಿಡುತ್ತಾನೆ. 'ತನಗೆ ಸಮಾನರಿಲ್ಲ' ಎಂದುಕೊಂಡುಬಿಡುತ್ತಾನೆ. ಯಾವುದಾದರೂ ಕಾರಣದಿಂದ ಧನದ ವ್ಯಯವಾದಾಗ, ಯಾವುದಾದರೂ ಕಾರ್ಯವು ಆಗದೇ ಇದ್ದಾಗ ಶೋಕಯುಕ್ತನಾಗುತ್ತಾನೆ ; ಕುಗ್ಗಿಹೋಗುತ್ತಾನೆ. ಸುಖ-ದುಃಖಗಳು ಇವನ ಮೇಲೆ ಹೆಚ್ಚಿನ ಪರಿಣಾಮವನ್ನುಂಟುಮಾಡುತ್ತವೆ. ಹೀಗಿರುವವನು ರಾಜಸಕರ್ತಾ ಎಂದು ಹೇಳಲ್ಪಡುತ್ತಾನೆ.)

o o o

**ರಾಗೀ** = ರಾಗ (ಆಸಕ್ತಿ ) ವುಳ್ಳವನು. **ಕರ್ಮಫಲಪ್ರೇಪ್ಸುಃ** = ಕರ್ಮದ ಫಲವನ್ನು ಬಯಸುವವನು. **ಲುಬ್ಧಃ** = ಇತರರ ದ್ರವ್ಯಗಳಲ್ಲಿ ಆಸೆಯುಳ್ಳವನು ಮತ್ತು ತೀರ್ಥಕ್ಷೇತ್ರವೇ ಮುಂತಾದ ಜಾಗಗಳಲ್ಲಿಯೂ ತನ್ನ ಸಂಪತ್ತನ್ನು ವೆಚ್ಚಮಾಡದವನು. **ಹಿಂಸಾತ್ಮಕಃ** = ಇತರರನ್ನು ಪೀಡಿಸುವ ಸ್ವಭಾವ ವಿರುವವನು. **ಅಶುಚಿಃ** = ಒಳಗಿನ ಮತ್ತು ಹೊರಗಿನ ಶುದ್ಧಿಯಿಲ್ಲದವನು. **ಹರ್ಷಶೋಕಾನ್ವಿತಃ** = ಇಷ್ಟಪ್ರಾಪ್ತಿಯಾದಾಗ ಹರ್ಷ ; ಅದರ ವಿಯೋಗವುಂಟಾದಾಗ ದುಃಖಹೊಂದುವವನು–ಇಂತಹ ಮನುಷ್ಯನಿಗೆ ಕರ್ಮದಲ್ಲಿ ವೃದ್ಧಿ ಅಥವಾ ವಿಪತ್ತಿಯುಂಟಾದಾಗ ಸುಖ-ದುಃಖಗಳೂ ಹರ್ಷ-ಶೋಕಗಳೂ ಉಂಟಾಗುತ್ತವೆ. ಇವುಗಳಿಂದ ಕೂಡಿದವನು ರಾಜಸಕರ್ತಾ. (ಶಂ. ಭಾ.)

**ರಾಗೀ** = ಕೀರ್ತಿಯನ್ನು ಬಯಸುವವನು. **ಕರ್ಮಫಲಪ್ರೇಪ್ಸುಃ** =

ಕರ್ಮಗಳ ಫಲವನ್ನು ಬಯಸುವವನು. **ಲುಬ್ಧಃ** = ಕರ್ಮಕ್ಕೆ ಅವಶ್ಯವಾದ ದ್ರವ್ಯವನ್ನು ವೆಚ್ಚಮಾಡುವ ಸ್ವಭಾವವಿಲ್ಲದವನು. **ಹಿಂಸಾತ್ಮಕಃ** = ಇತರರನ್ನು ಪೀಡಿಸಿ ಅದರಿಂದ ಸುಖಪಡುವವನು. **ಅಶುಚಿಃ** = ಕರ್ಮಾಚರಣೆಗೆ ಅಪೇಕ್ಷಿತವಾದ ಶುದ್ಧಿಯಿಲ್ಲದವನು. **ಹರ್ಷಶೋಕಾನ್ವಿತಃ** = ಯುದ್ಧವೇ ಮುಂತಾದ ಕರ್ಮಗಳಲ್ಲಿ ಜಯಪ್ರಾಪ್ತಿ ಅಥವಾ ಪರಾಜಯವುಂಟಾದಾಗ ಸುಖ ಮತ್ತು ದುಃಖದಿಂದ ಕೂಡಿರುವವನು–ಇಂತಹ ಕರ್ತೃವು ರಾಜಸ ಎನಿಸುತ್ತಾನೆ. (ರಾ. ಭಾ.)

**ರಾಗೀ** = ಕೀರ್ತಿ ಮುಂತಾದುವುಗಳನ್ನು ಬಯಸುವವನು. **ಲುಬ್ಧಃ** = ಕರ್ಮಕ್ಕೆ ಅಪೇಕ್ಷಿತವಾದ ದ್ರವ್ಯವನ್ನು ವ್ಯಯಮಾಡದವನು. **ಅಶುಚಿಃ** = ದ್ರವ್ಯಶುದ್ಧಿಯೇ ಮುಂತಾದ ಶುದ್ಧಿಯಿಲ್ಲದವನು. **ಹರ್ಷಶೋಕಾನ್ವಿತಃ** = ಸಿದ್ಧಿ ಅಥವಾ ಅಸಿದ್ಧಿಯು–ಉಂಟಾದಾಗ ಹರ್ಷಪಡುವವನು ಮತ್ತು ದುಃಖಪಡುವವನು. (ಮ. ಟೀಕಾ)

**ಓಂ ಅಯುಕ್ತಃ ಪ್ರಾಕೃತಃ ಸ್ತಬ್ಧಃ ಶಠೋ ನೈಕೃತಿಕೋಽಲಸಃ ।**
**ವಿಷಾದೀ ದೀರ್ಘಸೂತ್ರೀ ಚ ಕರ್ತಾ ತಾಮಸ ಉಚ್ಯತೇ ॥೨೮॥**

ಚಿತ್ತಸಮಾಧಾನವಿಲ್ಲದವನೂ, ಪ್ರಕೃತಿಯಲ್ಲಿ ಸಂಪೂರ್ಣವಾಗಿ ಮುಳುಗಿದವನೂ, ಅತ್ಯಂತಸಾಧಾರಣನಾದವನೂ, ಅವಿನೀತನೂ, ಮೋಸಗಾರನೂ, ಕೆಲಸಗೇಡಿಯೂ, ಸೋಮಾರಿಯೂ, ಯಾವಾಗಲೂ ವಿಷಾದ ಭಾವವನ್ನೇ ಹೊಂದಿರುವವನೂ, ಮಾಡಬೇಕಾದ ಕೆಲಸವನ್ನು ಬಹುಕಾಲ ಮುಂದೆ ಹಾಕುವವನೂ ಆದ ಕರ್ತೃವು ತಾಮಸನೆನಿಸುತ್ತಾನೆ.

* * *

(**ಅಯುಕ್ತಃ** = **ಯುಕ್ತಃ** ಎಂದರೆ ಸಮಾಹಿತಚಿತ್ತನು. ಸಮಾಧಾನವಾದ ಬುದ್ಧಿಯಿರುವವನು. ಶಾಂತನಾಗಿರತಕ್ಕವನು. **ಅಯುಕ್ತಃ** ಎಂದರೆ ಸಮಾಧಾನವಾದ ಬುದ್ಧಿಯಿಲ್ಲದವನು. ಅಶಾಂತಮನಸ್ಕನು. ಯಾವಾಗಲೂ ಯಾವುದಕ್ಕಾದರೂ ಧಾವಂತಪಡುತ್ತಿರುವವನು. ಅಥವಾ ಯುಕ್ತವಾದುದು ಎಂದರೆ ಉಚಿತವಾದುದು. ಉಚಿತವಾದುದನ್ನು ಯಾವಾಗಲೂ ಮಾಡದೇ ಇರುವವನು **ಅಯುಕ್ತ**. **ಪ್ರಾಕೃತಃ** = ಪ್ರಕೃತಿಯಂತೆ

ಇರತಕ್ಕವನು ಪ್ರಾಕೃತ. ಪ್ರಕೃತಿ ಎಂದರೆ ಸ್ವಾಭಾವಿಕವಾಗಿಯೇ ಇರುವುದು. ಯಾರ ಹತೋಟಿಗೂ ಸಿಕ್ಕದೇ ಇರುವುದು. ಬಿರುಗಾಳಿ ಮಳೆ ಮುಂತಾದುವು. ಬಿರುಗಾಳಿಯು ಯಾವಾಗಲೋ ಎಲ್ಲಿಯೋ ಹೇಗೋ ಬೀಸುತ್ತದೆ. ನದಿಯ ಪ್ರವಾಹವು ಯಾವಾಗ–ಹೇಗೆ? ಬರುವುದೆಂಬುದನ್ನು ಹೇಳಲಾಗುವುದಿಲ್ಲ. ಇವುಗಳು ಯಾರ ಹತೋಟಿಗೂ ಸಿಕ್ಕತಕ್ಕುವುಗಳಲ್ಲ. ತಾಮಸಿಯಾದ ಮನುಷ್ಯನೂ ಸಹ ಶಾಸ್ತ್ರಾದಿಗಳ ನ್ಯಾಯ-ನಿಯಮಗಳ ಹತೋಟಿಯೇ ಇಲ್ಲದೆ ಸ್ವೇಚ್ಛೆಯಿಂದ ಜೀವನನಡೆಸತಕ್ಕವನು ಅಥವಾ ವಿವೇಕವಿಲ್ಲದೇ ಪ್ರಕೃತಿಯ ಸೆಳೆತಕ್ಕೆ ಅನುಗುಣವಾಗಿ ಕೆಲಸಗಳನ್ನು ನಡೆಸತಕ್ಕವನು. ಯಾವ ವಿಧವಾದ ಸಂಸ್ಕಾರವೂ ಇಲ್ಲದೇ ಇರತಕ್ಕವನು. ಬಿರುಗಾಳಿಯಿಂದ ಮತ್ತು ಪ್ರವಾಹಾದಿಗಳಿಂದ ಜನರಿಗೆ ತೊಂದರೆಯಾಗುವಂತೆಯೇ ಸ್ವೇಚ್ಛಾಚಾರಿಯಾದ ಇಂತಹ ಪ್ರಾಕೃತನಿಂದಲೂ ಜನಗಳಿಗೆ ತೊಂದರೆಯೇ ಆಗುತ್ತದೆ.

ಸ್ತಬ್ಧಃ = ಅಲುಗಾಡದೇ, ನಿಶ್ಚಲನಾಗಿ ಇರುವವನು ಎಂದರ್ಥ. ಗುರು-ಹಿರಿಯರು ಎದುರಾಗಿ ಬಂದರೂ ಸಹ ತಲೆಯನ್ನೂ ತಗ್ಗಿಸದೇ ನಿಶ್ಚಲನಾಗಿ ಇರುತ್ತಾನೆ. 'ಕೆಲಸಮಾಡಬೇಕಾದಾಗ ಅಳ್ಳಾಡದೇ ಕಲ್ಲಿನಂತೆ ಕುಳಿತಿರುತ್ತಾನೆ' ಎಂದು ಬೇಕಾದರೂ ಅರ್ಥಮಾಡಬಹುದು. ಸೂಕ್ಷ್ಮವಾದ, ಉಚ್ಚವಾದ ಯಾವ ಭಾವನೆಗಳೂ ಇವನ ಮೇಲೆ ಪರಿಣಾಮವನ್ನುಂಟು ಮಾಡುವುದಿಲ್ಲ. ಸ್ಥೂಲಬುದ್ಧಿಯವನು.

ಶಠಃ = ಮೋಸಗಾರ, ವಂಚಕ. ನೈಕೃತಿಕಃ = ನಿಕೃತಿ ಎಂದರೆ ಮೋಸ. ನೈಕೃತಿಕ ಎಂದರೆ ಮೋಸವೇ ವೃತ್ತಿಯಾಗಿ ಇರುವವನು.

ಅಲಸಃ = ಸೋಮಾರಿ. ಕರ್ತವ್ಯವಿಷಯದಲ್ಲಿ ಜಾಡ್ಯವುಳ್ಳವನು.

ವಿಷಾದೀ = 'ಹುಟ್ಟಿ ಕೆಟ್ಟೆನೋ' ಎಂಬ ಭಾವನೆಯನ್ನು ಹೊಂದಿರುವವನು. ಯಾವಾಗಲೂ ಜೋಲುಮುಖದಿಂದಲೇ ಇರತಕ್ಕವನು. ಇಂತಹವನ ಮುಖದಲ್ಲಿ ನಗೆಯೆಂಬುದು ಒಮ್ಮೆಯಾದರೂ ಸುಳಿಯುವುದೇ ಇಲ್ಲ.

ದೀರ್ಘಸೂತ್ರೀ = ಇವನು ಕೆಲಸಕಾರ್ಯಗಳನ್ನು ಅಲ್ಪಸಮಯದಲ್ಲಿ ಮಾಡತಕ್ಕವನಲ್ಲ. ವಿಧಿ-ನಿಯಮಗಳ ಚೌಕಟ್ಟಿನಲ್ಲಿಯೂ ಮಾಡುವವನಲ್ಲ. ಒಂದು ದಿನದಲ್ಲಾಗುವ ಕಾರ್ಯವನ್ನು ಒಂದು ತಿಂಗಳಿನಲ್ಲಿ ಮಾಡುವ

ಯೋಜನೆಯನ್ನು ಹೊಂದಿರುವವನು. ಈಗ ಮಾಡಿದರಾಯಿತು ; ಆಗ ಮಾಡಿದರಾಯಿತು–ಎಂದು ಹೇಳಿಕೊಂಡು ಕಾಲತಳ್ಳುತ್ತಲೇ ಇರುವವನು. ಕಾರ್ಯಮಾಡುವುದನ್ನು ತಪ್ಪಿಸಿಕೊಳ್ಳುವುದರಲ್ಲಿಯೇ ಆಸಕ್ತಿಯಿರುವವನು. ಈ ರೀತಿ ಇರುವವನು ದೀರ್ಘಸೂತ್ರೀ. ಇಂತಹವನನ್ನು ತಾಮಸಕರ್ತಾ ಎಂದು ಹೇಳುತ್ತಾರೆ.)

O O O

**ಅಯುಕ್ತಃ** = ಸಮಾಧಾನವುಳ್ಳ ಚಿತ್ತವಿಲ್ಲದವನು. **ಪ್ರಾಕೃತಃ** = ಹೆಚ್ಚು ಅಸಂಸ್ಕೃತವಾದ ಬುದ್ಧಿಯುಳ್ಳವನು. ಹುಡುಗಬುದ್ಧಿಯವನು. **ಶಠಃ** = ಮಾಯಾವೀ ; ತನ್ನ ಶಾಠ್ಯಗುಣವನ್ನು ಉಪಯೋಗಿಸಿಕೊಂಡು ಮೋಸ ಮಾಡುವವನು. **ನೈಕೃತಿಕಃ** = ಇತರರ ವೃತ್ತಿಯನ್ನು ಕತ್ತರಿಸಿಹಾಕುವುದರಲ್ಲಿ ಆಸಕ್ತನಾದವನು. **ಅಲಸಃ** = ಕರ್ತವ್ಯವಾದ ಕಾರ್ಯಗಳಲ್ಲಿಯೂ ಪ್ರವೃತ್ತಿಯಿಲ್ಲದ ಸ್ವಭಾವದವನು. **ವಿಷಾದೀ** = ಯಾವಾಗಲೂ ದುಃಖದಿಂದ ಕೂಡಿದ ಸ್ವಭಾವದವನು. **ದೀರ್ಘಸೂತ್ರೀ** = ಕರ್ತವ್ಯಗಳನ್ನು ಮುಂದಕ್ಕೆ ದೂಡುವವನು. ಇಂದು ಅಥವಾ ನಾಳೆ ಮಾಡಬೇಕಾದುದನ್ನು ತಿಂಗಳಾದರೂ ಮಾಡದವನು. ಇಂತಹವನು **ತಾಮಸಕರ್ತಾ** ಎನಿಸಿಕೊಳ್ಳುತ್ತಾನೆ. (ಶಂ. ಭಾ.)

**ಅಯುಕ್ತಃ** = ಶಾಸ್ತ್ರೀಯವಾದ ಕರ್ಮಕ್ಕೆ ಅಯೋಗ್ಯನಾದವನು, ವಿಕರ್ಮದಲ್ಲಿರುವವನು. **ಪ್ರಾಕೃತಃ**= ವಿದ್ಯೆಯನ್ನು ಪಡೆಯದವನು. **ಸ್ತಬ್ಧಃ** =ಕೆಲಸಗಳನ್ನು ಆರಂಭವೇ ಮಾಡದ ಸ್ವಭಾವದವನು. **ಶಠಃ** =ಮದ್ದು-ಮಾಟ ಮುಂತಾದ ಕರ್ಮಗಳಲ್ಲಿ ಅಭಿರುಚಿಯುಳ್ಳವನು. (ಗೂಢವಾಗಿ ಅನಿಷ್ಟವನ್ನುಂಟುಮಾಡುವವನು.) **ನೈಕೃತಿಕಃ** = ವಂಚನೆಮಾಡುವುದರಲ್ಲಿ ಆಸಕ್ತನಾದವನು. **ಅಲಸಃ** = ಪ್ರಾರಂಭಮಾಡಿದ ಕೆಲಸಗಳಲ್ಲಿಯೂ ಅತ್ಯಂತನಿಧಾನವಾದ ಪ್ರವೃತ್ತಿಯುಳ್ಳವನು. **ವಿಷಾದೀ** = ಅತ್ಯಂತದುಃಖಪಡುವ ಸ್ವಭಾವದವನು. **ದೀರ್ಘಸೂತ್ರೀ** = ಅಭಿಚಾರವೇ ಮುಂತಾದ ಕರ್ಮಗಳನ್ನು ಮಾಡುತ್ತಾ ಇತರರಿಗೆ ದೀರ್ಘಕಾಲ ಉಂಟಾಗುವ ಅನರ್ಥವನ್ನು ಯೋಚಿಸುವುದರಲ್ಲಿ ಆಸಕ್ತಿಯುಳ್ಳವನು. ಇಂತಹ ಕರ್ತೃವು ತಾಮಸಿ ಎನಿಸುತ್ತಾನೆ. (ರಾ. ಭಾ.)

**ದೀರ್ಘಸೂತ್ರೀ** = ಇತರರು ಮಾಡಿದ ದೋಷವು ಬಹಳ ಹಿಂದೆ ಮಾಡಲ್ಪಟ್ಟಿದ್ದರೂ ಅನುಚಿತವಾದ ( ಇತರರಿಗೆ ಉಪದ್ರವವನ್ನು ಉಂಟು

ಮಾಡುವುದರಿಂದ ಮಾತನಾಡಲು ಅಯೋಗ್ಯವಾದ) ಅಂತಹ ದೋಷ ಗಳನ್ನು ಎತ್ತಿ ಆಡುವವನು.

**ಪರೇಣ ಯಃ ಕೃತೋ ದೋಷಃ ದೀರ್ಘಕಾಲಕೃತೋऽಪಿ ವಾ ।**
**ಯಸ್ತಸ್ಯ ಸೂಚಕೋ ದೋಷಾದ್ದೀರ್ಘಸೂತ್ರೀ ಸ ಉಚ್ಯತೇ ॥**

(ಮ. ಭಾ.)

**ಓಂ ಬುದ್ಧೇರ್ಭೇದಂ ಧೃತೇಶ್ಚೈವ ಗುಣತಸ್ತ್ರಿವಿಧಂ ಶೃಣು ।**
**ಪ್ರೋಚ್ಯಮಾನಮಶೇಷೇಣ ಪೃಥಕ್ತ್ವೇನ ಧನಂಜಯ ॥೨೯॥**

ಧನಂಜಯನೇ! ಬುದ್ಧಿ ಮತ್ತು ಧೃತಿಗಳು ಗುಣಗಳಿಗೆ ಅನುಗುಣವಾಗಿ ಮೂರು ಬಗೆಯಾಗಿವೆ. ಅವುಗಳನ್ನು ಕುರಿತು ಸಂಪೂರ್ಣವಾಗಿ ಬೇರೆ-ಬೇರೆಯಾಗಿ ಹೇಳುವುದನ್ನು ಕೇಳು.

* * *

(ಬುದ್ಧಿ ಮತ್ತು ಜ್ಞಾನ ಇವುಗಳಿಗೆ ಸ್ವಲ್ಪ ವ್ಯತ್ಯಾಸವಿದೆ. ಬುದ್ಧಿ ಮತ್ತು ಜ್ಞಾನಗಳನ್ನು ಬಳಕೆಯಲ್ಲಿ ಪರ್ಯಾಯವಾಗಿಯೇ ಉಪಯೋಗಿಸುವು ದುಂಟು. 'ಬುದ್ಧಿಯಿಲ್ಲವೇ?' 'ಜ್ಞಾನವಿಲ್ಲವೇ?' ಎಂಬೆರಡಕ್ಕೂ ಸಾಮಾನ್ಯವಾಗಿ ಒಂದೇ ಅರ್ಥ. ಬುದ್ಧಿಯು ವಸ್ತುವಿನ ಗುಣಾವಗುಣಗಳನ್ನು ನಿರ್ಣಯಮಾಡುತ್ತದೆ. ನಿರ್ಣಯಿಸಿದುದನ್ನು ಕೂಲಂಕಷವಾಗಿ ತಿಳಿದು ಕೊಳ್ಳುವುದು ಮತ್ತು ತಿಳಿದುಕೊಂಡುದನ್ನು ಕಾರ್ಯರೂಪಕ್ಕೆ ತರುವುದು ಜ್ಞಾನ. ಇದುವರೆಗೆ ಕರ್ಮಚೋದನೆಗೆ ಕಾರಣವಾದ ಜ್ಞಾನ, ಕರ್ಮಗಳಿಗೆ ಸಂಬಂಧಿಸಿದಂತೆ ಕರ್ಮ ಮತ್ತು ಕರ್ತೃಗಳ ಮೂರು ವಿಧವಾದ ಲಕ್ಷಣಗಳನ್ನೂ ಹೇಳಿದ್ದಾಯಿತು. ಈಗ ಬುದ್ಧಿಯ ಮತ್ತು ಧೃತಿಯ ಮೂರು ಲಕ್ಷಣಗಳನ್ನೂ ವಿಶದವಾಗಿ ಹೇಳುತ್ತೇನೆ, ಕೇಳು–ಎನ್ನುತ್ತಾನೆ ಶ್ರೀಕೃಷ್ಣ.

ಸಾತ್ತ್ವಿಕಕರ್ತೃವಿನ ಲಕ್ಷಣವನ್ನು ಹೇಳುವಾಗ **ಧೃತ್ಯುತ್ಸಾಹಸಮನ್ವಿತಃ**– ಎಂದು ಹೇಳಿದ್ದರಿಂದ ಧೃತಿಯು ಒಂದೇ ಬಗೆಯದು ಎಂದು ಭಾವಿಸಬಾರದು. ಅದರಲ್ಲಿಯೂ ಮೂರು ಭೇದಗಳಿವೆ. ಬುದ್ಧಿಯೆಂಬುದು ಕರಣಕ್ಕೆ ಸೇರಿದ್ದು. ಅದರಲ್ಲಿಯೂ ಮೂರು ಭೇದಗಳಿವೆ.

ಹೇಳುವುದರಲ್ಲಿ ಯಾವುದೊಂದನ್ನೂ ಬಿಡದೇ ವಿವೇಕದಿಂದ ಪ್ರತ್ಯೇಕ-ಪ್ರತ್ಯೇಕವಾಗಿ ಹೇಳುತ್ತೇನೆಂದು ಶ್ರೀಕೃಷ್ಣನು ಪ್ರತಿಜ್ಞೆಮಾಡಿ ಹೇಳುತ್ತಾನೆ.)

o o o

**ಬುದ್ಧಿ** ಮತ್ತು **ಧೃತಿ**–ಇವುಗಳು ಸತ್ತ್ವವೇ ಮುಂತಾದ ಗುಣಗಳಿಗೆ ಅನುಗುಣವಾಗಿ ಮುಬ್ಬಗೆಯಾಗಿವೆ. ಆ ಭೇದಗಳನ್ನು ನೀನು ವಿಭಾಗ ಪೂರ್ವಕವಾಗಿ, ಸಂಪೂರ್ಣವಾಗಿ, ಯಥಾವತ್ತಾಗಿ ಹೇಳುವುದನ್ನು ಕೇಳು. **ಬುದ್ಧೇಃ....ಶೃಣು** ಇದು ಸೂತ್ರರೂಪವಾದ ಮಾತು.

**ಧನಂಜಯಃ** = ಅರ್ಜುನನು ದಿಗ್ವಿಜಯದ ಸಮಯದಲ್ಲಿ ಹೇರಳವಾಗಿ ದೈವ ಮತ್ತು ಮಾನುಷವಾದ ಸಂಪತ್ತುಗಳನ್ನು ಜಯಿಸಿದ್ದರಿಂದ ಅವನಿಗೆ ಧನಂಜಯ ಎಂದು ಹೆಸರು. (ಶಂ. ಭಾ.)

**ಬುದ್ಧಿ**–ಎಂದರೆ ವಿವೇಕಪೂರ್ವಕವಾದ ನಿಶ್ಚಯರೂಪವಾದ ಜ್ಞಾನ. **ಧೃತಿ**–ಎಂದರೆ ಆರಂಭಿಸಿದ ಕೆಲಸವನ್ನು ವಿಘ್ನಗಳು ಬಂದು ಒದಗಿದರೂ ಕೂಡ ಬಿಡದೇ ಧರಿಸಿಕೊಳ್ಳುವಿಕೆ. ಬುದ್ಧಿ ಮತ್ತು ಧೃತಿಗಳು ಸತ್ತ್ವವೇ ಮುಂತಾದ ಗುಣಗಳಿಗೆ ಅನುಗುಣವಾಗಿ ಮೂರು ಬಗೆಯಾಗಿ ಇರುವ ಭೇದವನ್ನು ಪ್ರತ್ಯೇಕ-ಪ್ರತ್ಯೇಕವಾಗಿ ಯಥಾವತ್ತಾಗಿ ಕೇಳು. (ಅರ್ಜುನನನ್ನು ಧನಂಜಯ ಎಂದು ಸಂಬೋಧಿಸಲು ಕಾರಣ : ದಿಗ್ವಿಜಯದಲ್ಲಿ ಮಾನುಷ ಮತ್ತು ದೈವಸಂಪತ್ತುಗಳನ್ನು ಜಯಿಸಿದಂತೆ ಶಮ-ದಮಾದಿ ಸಂಪತ್ತುಗಳನ್ನೂ ಕೂಡ ನೀನು ಜಯಿಸಬೇಕು ಎಂದು ತಿಳಿಸುವುದಕ್ಕೋಸ್ಕರ.)

೨೦-೨೧-೨೨ನೇ ಶ್ಲೋಕಗಳಲ್ಲಿ ಜ್ಞಾನದ ತ್ರೈವಿಧ್ಯವನ್ನು ಹೇಳಿದೆ. ಅಲ್ಲಿ ಜ್ಞಾನ ಎಂದರೆ ಕರ್ತವ್ಯವಾದ ಕರ್ಮದ ವಿಷಯವಾದ ಜ್ಞಾನ. ಇಲ್ಲಿ ಬುದ್ಧಿಯ ತ್ರೈವಿಧ್ಯವನ್ನು ಹೇಳಲು ಪ್ರತಿಜ್ಞೆಮಾಡಲಾಗಿದೆ. ಬುದ್ಧಿ ಎಂದರೆ ಎಲ್ಲ ತತ್ತ್ವ, ಎಲ್ಲ ಪುರುಷಾರ್ಥಗಳ ನಿಶ್ಚಯರೂಪವಾದ ಜ್ಞಾನ. ಆದುದರಿಂದ ಬುದ್ಧಿ–ಜ್ಞಾನ ಎಂಬುದು ಪುನರುಕ್ತಿಯಿಲ್ಲ. (ರಾ. ಭಾ.)

**ಗುಣತಃ**=ಗುಣಭೇದದ ಕಾರಣದಿಂದ ಶೃಣು =ಕೇಳು ಮತ್ತು ಅದರಲ್ಲಿ ನಿಷ್ಠೆಯನ್ನು ಹೊಂದುವವನಾಗು. (ಮ. ಟೀಕಾ.)

**ಓಂ ಪ್ರವೃತ್ತಿಂ ಚ ನಿವೃತ್ತಿಂ ಚ ಕಾರ್ಯಾಕಾರ್ಯೇ ಭಯಾಭಯೇ ।**
**ಬಂಧಂ ಮೋಕ್ಷಂ ಚ ಯಾ ವೇತ್ತಿ ಬುದ್ಧಿಃ ಸಾ ಪಾರ್ಥ ಸಾತ್ತ್ವಿಕೀ ॥೩೦॥**

ಪಾರ್ಥನೇ! ಪ್ರವೃತ್ತಿಯನ್ನೂ–ನಿವೃತ್ತಿಯನ್ನೂ ಕಾರ್ಯ-ಅಕಾರ್ಯ

ಗಳನ್ನೂ, ಭಯ-ಅಭಯಗಳನ್ನೂ, ಬಂಧವನ್ನೂ, ಮೋಕ್ಷವನ್ನೂ ಯಾವ ಬುದ್ಧಿಯು ತಿಳಿಯುವುದೋ ಆ ಬುದ್ಧಿಯು ಸಾತ್ತ್ವಿಕವು.

ಸಾತ್ತ್ವಿಕಬುದ್ಧಿಯು ಒಳ್ಳೆಯದು–ಕೆಟ್ಟುದು ಎರಡನ್ನೂ ತಿಳಿದಿರುತ್ತದೆ ಎನ್ನುತ್ತಾನೆ ಶ್ರೀಕೃಷ್ಣ. ಕೆಟ್ಟುದು ಯಾವುದು? ಯಾವುದರಿಂದ ಅದು ಕೆಟ್ಟುದು? ಎಂಬುದು ತಿಳಿಯದಿದ್ದರೆ–ಒಳ್ಳೆಯದು ಯಾವುದು? ಎಂಬುದನ್ನು ಪರಿಶೀಲಿಸಲೇ ಸಾಧ್ಯವಾಗುವುದಿಲ್ಲ. ಮೊದಲು ಎರಡು ವಿಷಯ ಗಳಿವೆಯೆಂಬ ಅರಿವು ಇರಬೇಕು. ಅನಂತರ ಒಂದೊಂದು ವಿಷಯದ ಗುಣಭೇದಗಳನ್ನು ತಿಳಿಯಬೇಕು. ಅದರಲ್ಲಿ ಯಾವುದು ಉತ್ತಮ ಮತ್ತು ಅನುಸರಿಸಲು ಯಾವುದು ಯೋಗ್ಯ?–ಎಂಬುದನ್ನು ನಿಶ್ಚಯಿಸಬೇಕು. ಹೀಗೆ ನಿಶ್ಚಯಿಸುವುದೇ ಸಾತ್ತ್ವಿಕಬುದ್ಧಿ. ಮೊದಲನೆಯದಾಗಿ ಪ್ರವೃತ್ತಿ-ನಿವೃತ್ತಿ ಎಂಬುದನ್ನು ಯಾವ ಬುದ್ಧಿಯು ತಿಳಿಯುತ್ತದೆಯೋ ಆ ಬುದ್ಧಿಯು ಸಾತ್ತ್ವಿಕ ಬುದ್ಧಿ ಎನ್ನುತ್ತಾನೆ ಶ್ರೀಕೃಷ್ಣ.

ಪ್ರವೃತ್ತಿ ಎಂದರೆ ತೊಡಗುವುದು. ನಿವೃತ್ತಿ ಎಂದರೆ ವಿರಮಿಸುವುದು. ಯಾವುದರಲ್ಲಿ ತೊಡಗುವುದು? ಯಾವುದರಿಂದ ವಿರಮಿಸುವುದು? ಪ್ರವೃತ್ತಿಮಾರ್ಗ ಅಥವಾ ನಿವೃತ್ತಿಮಾರ್ಗ ಎಂಬುದು ರೂಢವಾದ ಶಬ್ದ. ಪ್ರವೃತ್ತಿಮಾರ್ಗ ಎಂದರೆ ಸಂಸಾರದಲ್ಲಿರುವಿಕೆ. ಸಂಸಾರದಲ್ಲಿಯೇ ತೊಡಗಿ ಕೊಂಡಿರುವುದು. ನಿವೃತ್ತಿಮಾರ್ಗ ಎಂದರೆ ಸಂಸಾರದಿಂದ ಹಿಂದೆಗೆ ಯುವುದು. ಸಂಸಾರಕ್ಕೆ ವಿಷಯಗಳಾದ ಇಂದ್ರಿಯಗಳನ್ನು ಹೊರಕ್ಕೆ ಬಿಡುವುದು ಪ್ರವೃತ್ತಿಮಾರ್ಗ. ಅದೇ ಇಂದ್ರಿಯಗಳನ್ನೇ ಒಳಕ್ಕೆ ಸೆಳೆದುಕೊಳ್ಳು ವುದೇ ನಿವೃತ್ತಿಮಾರ್ಗ. ಇಂದ್ರಿಯಗಳು ಬಹಿರ್ಮುಖವಾಗಿ ವಿಷಯಗಳಲ್ಲಿ ಆಸಕ್ತವಾಗಿದ್ದರೆ ಪ್ರವೃತ್ತಿಮಾರ್ಗವಾಗುತ್ತದೆ. ಇದಕ್ಕೆ ಸಂಸಾರವೆಂದು ಹೆಸರು. ಅದೇ ಇಂದ್ರಿಯಗಳು ಆತ್ಮನ ಕಡೆಗೆ ಒಳಸರಿದರೆ ಅದೇ ನಿವೃತ್ತಿಮಾರ್ಗ. ಸಂಸಾರದಿಂದ ಹಿಂತೆಗೆದ ಮಾರ್ಗ. ಇದನ್ನು ಚೆನ್ನಾಗಿ ತಿಳಿದುಕೊಳ್ಳಬೇಕು. ಇದನ್ನು ಸಂಪೂರ್ಣವಾಗಿ ವಿಮರ್ಶಿಸಿ ತಿಳಿದುಕೊಂಡ ಬುದ್ಧಿಗೆ ಸಾತ್ತ್ವಿಕ ಬುದ್ಧಿ ಎಂದು ಹೆಸರು. **ಕಾರ್ಯಾಕಾರ್ಯೇ** = ಕಾರ್ಯವು ಯಾವುದು?

ಅಕಾರ್ಯವು ಯಾವುದು? ಎಂಬುದನ್ನು ತಿಳಿದುಕೊಳ್ಳಬೇಕು. ಪ್ರವೃತ್ತಿ ಮಾರ್ಗದವನಿಗೆ ಕೆಲವು ಕರ್ಮಗಳಿವೆ. ನಿವೃತ್ತಿಮಾರ್ಗದವನು ಮಾಡುವ ಕರ್ಮಗಳನ್ನು ಪ್ರವೃತ್ತಿಮಾರ್ಗದವನು ಮಾಡಹೋಗಬಾರದು. ಅದು ಅವನಿಗೆ ನಿಷಿದ್ಧವಾಗುತ್ತದೆ. ಪ್ರವೃತ್ತಿಮಾರ್ಗದವನು ಮಾಡುವ ಕರ್ಮವನ್ನು ನಿವೃತ್ತಿಮಾರ್ಗದವನೂ ಮಾಡಹೋಗಬಾರದು. ಇವರಿಬ್ಬರೂ ಕೂಡ ಮಾಡಬಾರದ ಕರ್ಮಗಳೂ ಇವೆ. 'ಯಾವನಿಗೆ ಯಾವುದು ವಿಹಿತಕರ್ಮ? ಯಾವುದು ನಿಷಿದ್ಧಕರ್ಮ?'–ಎಂಬುದು ಶಾಸ್ತ್ರದಲ್ಲಿ ನಿಶ್ಚಯಿಸಲ್ಪಟ್ಟಿರುವುದರಿಂದ, ಯಾರಿಗೆ ಯಾವುದು ಕಾರ್ಯ? ಯಾವುದು ಅಕಾರ್ಯ? ಎಂಬುದನ್ನು ಸಾತ್ತ್ವಿಕಬುದ್ಧಿಯು ನಿರ್ಧರಿಸುತ್ತದೆ ಅಥವಾ ಆ ವಿಷಯವನ್ನು ನಿರ್ಣಯಮಾಡಿ ಹೇಳುವ ಬುದ್ಧಿಗೆ ಸಾತ್ತ್ವಿಕಬುದ್ಧಿ ಎಂದು ಹೆಸರು. ಅಥವಾ ಪ್ರವೃತ್ತಿಮಾರ್ಗದವನು ಕಾರ್ಯಮಾಡಬೇಕು. ನಿವೃತ್ತಿಮಾರ್ಗದವನು ಯಾವ ಕಾರ್ಯವನ್ನೂ ಮಾಡಬೇಕಾಗಿಲ್ಲ ಎಂಬುದನ್ನು ಸಾತ್ತ್ವಿಕಬುದ್ಧಿಯು ನಿರ್ಣಯಿಸುತ್ತದೆ. ಕಾರ್ಯ ಎಂದರೆ ಕರ್ಮಮಾರ್ಗ. ಅಕಾರ್ಯ ಎಂದರೆ ನೈಷ್ಕರ್ಮ್ಯ (ಜ್ಞಾನ) ಮಾರ್ಗ. ಪ್ರವೃತ್ತಿಯು ಕರ್ಮರೂಪದಲ್ಲಿರುತ್ತದೆ. ನಿವೃತ್ತಿಯು ಕರ್ಮಶಮದ ರೂಪದಲ್ಲಿರುತ್ತದೆ–ಎಂದೂ ಅರ್ಥಮಾಡಬಹುದು.

**ಭಯಾಭಯೇ** = ಭಯವು ಯಾವುದು? ಭಯವಿಲ್ಲದೇ ಇರುವುದು ಯಾವುದು?–ಎಂಬುದನ್ನು ಸಾತ್ತ್ವಿಕಬುದ್ಧಿಯು ನಿಶ್ಚಯಿಸುತ್ತದೆ. ಪ್ರವೃತ್ತಿ ಮಾರ್ಗವು ಮೃತ್ಯುವಿನ ಇರುವಿಕೆಯಿಂದ ಭಯಾವಹವಾದುದು. ನಿವೃತ್ತಿ ಮಾರ್ಗವು ಮೃತ್ಯುವನ್ನು ಜಯಿಸುವುದರಿಂದ ಭಯವಿಲ್ಲದ್ದು ಎಂಬುದನ್ನು ಸಾತ್ತ್ವಿಕೀಬುದ್ಧಿಯು ಅರಿತುಕೊಳ್ಳುತ್ತದೆ.

**ಬನ್ಧಂ ಮೋಕ್ಷ ಚ** = ಮೊದಲು ಬಂಧ ಎಂದರೇನು? ಮೋಕ್ಷ ಎಂದರೇನು? ಎಂಬುದನ್ನು ನಿರ್ಣಯಿಸಿ ಪ್ರವೃತ್ತಿಮಾರ್ಗದಿಂದ ಜೀವನಿಗೆ ಬಂಧವೂ ನಿವೃತ್ತಿಮಾರ್ಗದಿಂದ ಜೀವನಿಗೆ ಮೋಕ್ಷವೂ ಆಗುವುದೆಂಬುದನ್ನು ಸಾತ್ತ್ವಿಕೀಬುದ್ಧಿಯು ಅರಿತುಕೊಳ್ಳುತ್ತದೆ. **ತಾತ್ಪರ್ಯತಃ** ಪ್ರವೃತ್ತಿ ಮಾರ್ಗವು (ಕರ್ಮಮಾರ್ಗವು) ಭಯಾವಹವಾದುದು ಮತ್ತು ಬಂಧಕವಾದುದು. ನಿವೃತ್ತಿಮಾರ್ಗವು ಕರ್ಮರಹಿತವಾದುದು, ಭಯವಿಲ್ಲದ್ದು

ಮತ್ತು ಮೋಕ್ಷಪ್ರದವಾದುದು. ಈ ವಿಷಯವನ್ನು ನಿರ್ಣಯಿಸುವುದೇ ಸಾತ್ತ್ವಿಕೀಬುದ್ಧಿ.)

o o o

ಪ್ರವೃತ್ತಿ ಎಂದರೆ ಬಂಧನಕ್ಕೆ ಕಾರಣವಾದ ಕರ್ಮಮಾರ್ಗ. ನಿವೃತ್ತಿ ಎಂದರೆ ಮೋಕ್ಷಕ್ಕೆ ಕಾರಣವಾದ ಸಂನ್ಯಾಸಮಾರ್ಗ. ಬಂಧನ ಮತ್ತು ಮೋಕ್ಷ ಎನ್ನುವುದರೊಡನೆ ಪ್ರವೃತ್ತಿ ಮ್ತತು ನಿವೃತ್ತಿಗಳು ಸಮಾನವಾಕ್ಯದಲ್ಲಿರುವುದ ರಿಂದ ಪ್ರವೃತ್ತಿ ಮತ್ತು ನಿವೃತ್ತಿಗಳು ಕ್ರಮವಾಗಿ ಕರ್ಮಮಾರ್ಗ ಮತ್ತು ಸಂನ್ಯಾಸಮಾರ್ಗಗಳು ಎಂಬುದು ಸಿದ್ಧವಾಗುತ್ತದೆ.

ಕಾರ್ಯ ಎಂದರೆ ವಿಧಿಸಲ್ಪಟ್ಟಿರುವುದು. ಅಕಾರ್ಯ ಎಂದರೆ ನಿಷಿದ್ಧವಾದುದು. ಇವು ಕರ್ತವ್ಯ ಮತ್ತು ಅಕರ್ತವ್ಯಗಳು. ಯಾವ ಸಂಬಂಧದಲ್ಲಿ ಎಂದರೆ ದೇಶ, ಕಾಲ ಮುಂತಾದುವುಗಳಿಗೆ ಅನುಗುಣವಾಗಿ ಯಾವ ಕರ್ಮಗಳಿಗೆ ಕಾಣುವ ಮತ್ತು ಕಾಣದೇ ಇರುವ ಫಲಗಳು ಇರುತ್ತವೆಯೋ, ಅಂತಹ ಕರ್ಮಗಳ ಸಂಬಂಧದಲ್ಲಿ, ಭಯಾಭಯಗಳ ದೃಷ್ಟ ಮತ್ತು ಅದೃಷ್ಟವಿಷಯವಾದ ಯಾವ ಭಯ ಮತ್ತು ಅಭಯಗಳಂತೆಯೇ ಅವೆರಡರ ಕಾರಣಗಳನ್ನೂ ತಿಳಿಯುವುದು ಸಾತ್ತ್ವಿಕಬುದ್ಧಿ. ಬನ್ಧ–ಮೋಕ್ಷ, ಬಂಧವು ಯಾವುದು ಎಂಬುದನ್ನು ಅದರ ಕಾರಣದೊಡನೆ ತಿಳಿಯುವುದು. ಹಾಗೆಯೇ ಮೋಕ್ಷವು ಯಾವುದೆಂಬುದನ್ನು ಅದರ ಕಾರಣದೊಡನೆ ತಿಳಿಯುವುದು.

ಜ್ಞಾನ ಎಂಬುದು ಬುದ್ಧಿಯ ಒಂದು ವೃತ್ತಿವಿಶೇಷ. ಬುದ್ಧಿಯು ವೃತ್ತಿಯುಳ್ಳದ್ದು. ಧೃತಿಯೂ ಕೂಡ ಬುದ್ಧಿಯ ಒಂದು ವೃತ್ತಿವಿಶೇಷವೇ ಆಗಿದೆ. (ಶಂ. ಭಾ.)

ಪ್ರವೃತ್ತಿ ಎಂದರೆ ಅಭ್ಯುದಯಕ್ಕೆ ಸಾಧನವಾದ ಧರ್ಮ. ನಿವೃತ್ತಿ ಎಂದರೆ ಮೋಕ್ಷಕ್ಕೆ ಸಾಧನವಾದ ಧರ್ಮ. ಇವೆರಡನ್ನೂ ಯಾವ ಬುದ್ಧಿಯು ಅರಿಯುತ್ತದೆಯೋ ಅದು ಸಾತ್ತ್ವಿಕಬುದ್ಧಿ. ಕಾರ್ಯಾಕಾರ್ಯೇ= ಪ್ರವೃತ್ತಿ ಮತ್ತು ನಿವೃತ್ತಿಧರ್ಮಗಳಲ್ಲಿ ಯಾವುದಾದರೂ ಒಂದರಲ್ಲಿ ನಿಷ್ಠರಾಗಿ ರುವ, ಎಲ್ಲ ವರ್ಣಗಳವರೂ ಆಯಾ ದೇಶ, ಕಾಲ ಮತ್ತು ಅವಸ್ಥೆ ಗಳಿಗೆ ತಕ್ಕಂತೆ ಯಾವುದನ್ನು ಮಾಡಬೇಕು ; ಯಾವುದನ್ನು ಮಾಡಬಾರದು–

ಎಂಬುದನ್ನು ಯಾವುದು ಅರಿಯುತ್ತದೆಯೋ ಅದು ಸಾತ್ತ್ವಿಕಬುದ್ಧಿ. **ಭಯಾಭಯೇ** =ಶಾಸ್ತ್ರವನ್ನು ಮೀರಿ ನಡೆಯುವುದು ಭಯಕ್ಕೆ ವಿಷಯ. ಅದಕ್ಕೆ ಅನುಸಾರವಾಗಿ ನಡೆಯುವುದು ಅಭಯಕ್ಕೆ ಕಾರಣ. ಹೀಗೆ ಭಯಾಭಯಗಳನ್ನು ತಿಳಿಯುವುದು ಸಾತ್ತ್ವಿಕಬುದ್ಧಿ. **ಬನ್ಧಂ ಮೋಕ್ಷಂ ಚ** =ಸಂಸಾರದ ಯಥಾರ್ಥಸ್ವರೂಪವನ್ನೂ ಮತ್ತು ಅದರ ತೊಲಗುವಿಕೆಯ ಯಥಾರ್ಥಸ್ವರೂಪವನ್ನೂ ಯಾವುದು ತಿಳಿಯುತ್ತದೆಯೋ ಅದು ಸಾತ್ತ್ವಿಕವಾದ ಬುದ್ಧಿ. (ರಾ. ಭಾ.)

**ಪ್ರವೃತ್ತಿಂ** =ಸಂಸಾರದ ಪ್ರವೃತ್ತಿಗೆ ಹೇತುವಾದ ಧರ್ಮವನ್ನು. **ನಿವೃತ್ತಿಂ** =ಮೋಕ್ಷಕ್ಕೆ ಕಾರಣವಾದ ಧರ್ಮವನ್ನು. **ಕಾರ್ಯಾಕಾರ್ಯೇ ಭಯಾಭಯೇ।** **ಅಭಯಂ ಚ ಭಯಂ ಚ** ಎಂದು ವಿಗ್ರಹವಾಕ್ಯ. ಇವೆರಡೂ ಕರ್ತವ್ಯ ಮತ್ತು ಅಕರ್ತವ್ಯಗಳಿಗೆ ಕಾರಣ. **ಬನ್ಧಂ-ಮೋಕ್ಷಂ ಚ** = ಬಂಧಪ್ರಕಾರ-ಮೋಕ್ಷಪ್ರಕಾರಗಳನ್ನು. (ಮ. ಟೀಕಾ)

**ಓಂ ಯಯಾ ಧರ್ಮಮಧರ್ಮಂ ಚ ಕಾರ್ಯಂ ಚಾಕಾರ್ಯಮೇವ ಚ**
**ಅಯಥಾವತ್ಪ್ರಜಾನಾತಿ ಬುದ್ಧಿಃ ಸಾ ಪಾರ್ಥ ರಾಜಸೀ ॥೩೧॥**

ಪಾರ್ಥ! ಯಾವುದರಿಂದ ಧರ್ಮವನ್ನೂ–ಅಧರ್ಮವನ್ನೂ, ಕಾರ್ಯವನ್ನೂ–ಅಕಾರ್ಯವನ್ನೂ ಹೇಗಿಲ್ಲವೋ ಹಾಗೆ ತಿಳಿಯುತ್ತಾನೆಯೋ (ಇರುವಂತಲ್ಲದೇ ವ್ಯತ್ಯಸ್ತವಾಗಿ ತಿಳಿಯುತ್ತಾನೆಯೋ) ಆ ಬುದ್ಧಿಯು ರಾಜಸವು.

* * *

(ಯಾವ ಬುದ್ಧಿಯು, ಧರ್ಮವು ಯಾವುದು? ಅಧರ್ಮವು ಯಾವುದು? ಕರ್ತವ್ಯವು ಯಾವುದು? ಅಕರ್ತವ್ಯವು ಯಾವುದು?– ಎಂಬುದನ್ನು ಯಥಾವತ್ತಾಗಿ ತಿಳಿಯುವುದಿಲ್ಲವೋ ಆ ಬುದ್ಧಿಯು ರಾಜಸಿಕ ಬುದ್ಧಿ ಎನಿಸಿಕೊಳ್ಳುತ್ತದೆ.

ಧರ್ಮ ಎಂದರೆ ಯಾವುದು?

ಅಹಿಂಸಾ, ಸತ್ಯ, ದಯೆ, ಶಾಂತಿ, ಬ್ರಹ್ಮಚರ್ಯ, ಶಮ, ದಮ, ತಿತಿಕ್ಷೆ, ಯಜ್ಞ, ದಾನ, ತಪಸ್ಸು, ಅಧ್ಯಯನ, ಅಧ್ಯಾಪನ, ಪ್ರಜಾಪಾಲನೆ, ಕೃಷಿ, ಪಶುಪಾಲನೆ–ಇತ್ಯಾದಿ ಯಥೋಚಿತವಾದ ಧರ್ಮಗಳು.

ಬೃಹದ್ಧರ್ಮಪುರಾಣದಲ್ಲಿ ಧರ್ಮವನ್ನು ನಾಲ್ಕು ಬಗೆಯಾಗಿ ವಿಂಗಡಿಸಿದ್ದಾರೆ.

**ಸತ್ಯಂ ದಯಾ ತಥಾ ಶಾನ್ತಿರಹಿಂಸಾ ಚೇತಿ ಕೀರ್ತಿತಾಃ ।**
**ಧರ್ಮಸ್ಯಾವಯವಾಸ್ತಾತ ಚತ್ವಾರಃ ಪೂರ್ಣತಾಂ ಗತಾಃ ॥**

ಸತ್ಯ, ದಯೆ, ಶಾಂತಿ, ಅಹಿಂಸೆ-ಇವುಗಳೇ ಧರ್ಮದ ನಾಲ್ಕು ಅವಯವಗಳು. ಈ ನಾಲ್ಕು ಇದ್ದಲ್ಲಿ ಧರ್ಮವು ಪೂರ್ಣಸ್ವರೂಪದಲ್ಲಿದ್ದಂತಾಗುತ್ತದೆ.

ಮೊದಲನೆಯದಾದ ಸತ್ಯದಲ್ಲಿ ಭೇದಗಳಿವೆ.

**ಅಮಿಥ್ಯಾವಚನಂ ಸತ್ಯಂ ಸ್ವೀಕಾರಪ್ರತಿಪಾಲನಮ್ ।**
**ಪ್ರಿಯವಾಕ್ಯಂ ಗುರೋಃ ಸೇವಾ ದೃಢಂ ಚೈವ ವ್ರತಂ ಕೃತಮ್ ॥**

**ಆಸ್ತಿಕ್ಯಂ ಸಾಧುಸಙ್ಗಶ್ಚ ಪಿತುರ್ಮಾತುಃ ಪ್ರಿಯಂಕರಃ ।**
**ಶುಚಿತ್ವಂ ದ್ವಿವಿಧಂ ಚೈವ ಹ್ರೀರಸಞ್ಚಯ ಏವ ಚ ॥**

ಸುಳ್ಳು ಹೇಳದಿರುವುದು, ಸ್ವೀಕೃತರನ್ನು ಪರಿಪಾಲಿಸುವುದು, ಇತರರಿಗೆ ಪ್ರಿಯವಾಗುವಂತೆ ಮಾತನಾಡುವುದು, ಗುರುವಿನ ಸೇವೆಮಾಡುವುದು, ವ್ರತ-ನಿಯಮಗಳನ್ನು ದೃಢತೆಯಿಂದ ಪರಿಪಾಲಿಸುವುದು, ಆಸ್ತಿಕತೆ, ಸಾಧುಸಂಗ, ತಂದೆ-ತಾಯಿಗಳಿಗೆ ಪ್ರಿಯವಾದುದನ್ನು ಮಾಡುವುದು, ಬಹಿಃಶೌಚ ಮತ್ತು ಅಂತಃಶೌಚಗಳು, ಪಾಪಕಾರ್ಯಗಳಲ್ಲಿ ನಾಚಿಕೆಗೊಳ್ಳುವುದು ಮತ್ತು ಅಪರಿಗ್ರಹ–ಇವು ಸತ್ಯದ ಭೇದಗಳು.

ಧರ್ಮದ ಎರಡನೆಯ ಅಂಗವಾದ ದಯೆಯಲ್ಲಿಯೂ ಆರು ಭೇದಗಳಿವೆ.

**ಪರೋಪಕಾರೋ ದಾನಂ ಚ ಸರ್ವದಾ ಸ್ಮಿತಭಾಷಣಮ್ ।**
**ವಿನಯೋ ನ್ಯೂನತಾಭಾವಃ ಸ್ವೀಕಾರಃ ಸಮತಾ ಮತಿಃ ॥**

ಪರೋಪಕಾರ, ದಾನ, ಹಸನ್ಮುಖನಾಗಿ ಇತರರೊಡನೆ ಮಾತನಾಡುವುದು, ವಿನಯ, ತನ್ನನ್ನು ಇತರರಿಗಿಂತಲೂ ಕಮ್ಮಿಯವನೆಂದು ಭಾವಿಸಿಕೊಳ್ಳುವುದು ಮತ್ತು ಎಲ್ಲರಲ್ಲಿಯೂ ಸಮಬುದ್ಧಿ.

ಧರ್ಮದ ಮೂರನೆಯ ಅಂಗವಾದ ಶಾಂತಿಯಲ್ಲಿ ಮೂವತ್ತು ಭೇದಗಳಿವೆ.

**ಅನಸೂಯಾಲ್ಪಸನ್ತೋಷ ಇನ್ದ್ರಿಯಾಣಾಂ ಚ ಸಂಯಮಃ ।**
**ಅಸಙ್ಗಮೋ ಮೌನಮೇವಂ ದೇವಪೂಜಾವಿಧೌ ಮತಿಃ ॥**

**ಅಕುತಶ್ಚಿದ್ಭಯತ್ವಂ ಚ ಗಾಮ್ಭೀರ್ಯಂ ಸ್ಥಿರಚಿತ್ತತಾ ।**
**ಅರೂಕ್ಷಭಾವಃ ಸರ್ವತ್ರ ನಿಃಸ್ಪೃಹತ್ವಂ ದೃಢಾ ಮತಿಃ ॥**

**ವಿವರ್ಜನಂ ಹ್ಯಕಾರ್ಯಾಣಾಂ ಸಮಃ ಪೂಜಾಪಮಾನಯೋಃ ।**
**ಶ್ಲಾಘಾ ಪರಗುಣೇಽಸ್ತೇಯಂ ಬ್ರಹ್ಮಚರ್ಯಂ ಧೃತಿಃ ಕ್ಷಮಾ ॥**

**ಆತಿಥ್ಯಂ ಚ ಜಪೋ ಹೋಮಸ್ತೀರ್ಥಸೇವಾರ್ಯಸೇವನಮ್ ।**
**ಅಮತ್ಸರೋ ಬನ್ಧಮೋಕ್ಷಜ್ಞಾನಂ ಸಂನ್ಯಾಸಭಾವನಾ ॥**

**ಸಹಿಷ್ಣುತಾ ಸುದುಃಖೇಷು ಅಕಾರ್ಪಣ್ಯಮಮೂರ್ಖತಾ ।**

ಯಾರಲ್ಲಿಯೂ ದೋಷವನ್ನು ಎಣಿಸದೇ ಇರುವುದು, ಅಲ್ಪತೃಪ್ತಿ, ಇಂದ್ರಿಯಸಂಯಮ, ಭೋಗಗಳಲ್ಲಿ ಅನಾಸಕ್ತಿ, ಮೌನ (ಕೆಲಸಕ್ಕೆ ಬಾರದ ಮಾತುಗಳನ್ನು ಆಡದೇ ಇರುವುದು), ದೇವಪೂಜಾದಿಗಳಲ್ಲಿ ಮನಸ್ಸನ್ನು ಯೋಜಿಸುವುದು, ನಿರ್ಭಯತೆ, ಗಾಂಭೀರ್ಯ, ಚಿತ್ತಸ್ಥಿರತೆ, ಕಾಠಿನ್ಯದ ಅಭಾವ, ಸರ್ವತ್ರ ನಿಃಸ್ಪೃಹತೆ, ನಿಶ್ಚಯಾತ್ಮಿಕವಾದ ಬುದ್ಧಿ, ಅಕಾರ್ಯಗಳನ್ನು ಮಾಡದೇ ಇರುವುದು, ಮಾನಾಪಮಾನಗಳೆರಡನ್ನೂ ಸಮವಾಗಿ ಕಾಣುವುದು, ಇತರರಲ್ಲಿರುವ ಗುಣಗಳನ್ನು ಶ್ಲಾಘಿಸುವುದು, ಅಸ್ತೇಯ, ಬ್ರಹ್ಮಚರ್ಯ, ಧೈರ್ಯ, ಕ್ಷಮೆ, ಅತಿಥಿಸತ್ಕಾರ, ಜಪ, ಹೋಮ, ತೀರ್ಥಯಾತ್ರೆ, ಶ್ರೇಷ್ಠಪುರುಷರ ಸೇವೆ, ಮಾತ್ಸರ್ಯವಿಲ್ಲದಿರುವುದು, ಬಂಧ ಮತ್ತು ಮೋಕ್ಷ ಎರಡರ ಸ್ವರೂಪವನ್ನೂ ತಿಳಿದುಕೊಂಡಿರುವುದು, ಸಂನ್ಯಾಸಭಾವನೆ, ಅತಿಹೆಚ್ಚಿನ ದುಃಖವನ್ನೂ ಸಹ ತಾಳಿಕೊಳ್ಳುವುದು, ಕೃಪಣತೆಯಿಲ್ಲದೇ ಇರುವುದು, ಮೂರ್ಖತೆಯಿಲ್ಲದೇ ಇರುವುದು–ಇವು ಮೂವತ್ತು ಶಾಂತಿಯ ಭೇದಗಳು.

ಧರ್ಮದ ನಾಲ್ಕನೆಯ ಅಂಗವಾದ ಅಹಿಂಸೆಯಲ್ಲಿ ಏಳು ಭೇದಗಳಿವೆ.

**ಅಹಿಂಸಾ ತ್ವಾಸನಜಯಃ ಪರಪೀಡಾವಿವರ್ಜನಮ್ ।**
**ಶ್ರದ್ಧಾ ಚಾತಿಥ್ಯಸೇವಾ ಚ ಶಾನ್ತರೂಪಪ್ರದರ್ಶನಮ್ ॥**
**ಆತ್ಮೀಯತಾ ಚ ಸರ್ವತ್ರ ಆತ್ಮಬುದ್ಧಿಃ ಪರಾತ್ಮಸು ।**

ಆಸನಜಯ, ಇತರರಿಗೆ ಮನಸ್ಸು-ಮಾತು ಮತ್ತು ಶರೀರಗಳ ಮೂಲಕವಾಗಿ ಬಾಧೆಪಡಿಸದೇ ಇರುವುದು, ಶ್ರದ್ಧೆ, ಅತಿಥಿಸತ್ಕಾರ, ಸರ್ವದಾ ಶಾಂತಭಾವದಿಂದಿರುವುದು, ಸರ್ವತ್ರ ಆತ್ಮೀಯತೆಯಿಂದಿರುವುದು, ಇತರರೂ ತನ್ನಂತೆಯೇ ಎಂದು ಭಾವಿಸುವುದು—ಈ ಏಳು ಅಹಿಂಸೆಯ ಭೇದಗಳು.

**ಯಥಾ ಸ್ವಲ್ಪಮಧರ್ಮಂ ಹಿ ಜನಯೇತ್ತು ಮಹಾಭಯಮ್ ।**
**ಸ್ವಲ್ಪಮಪ್ಯಸ್ಯ ಧರ್ಮಸ್ಯ ತ್ರಾಯತೇ ಮಹತೋ ಭಯಾತ್ ॥**

ಯಾವ ರೀತಿಯಲ್ಲಿ ಸ್ವಲ್ಪವೇ ಅಧರ್ಮವು ಮಹಾಭಯವನ್ನು ಉಂಟು ಮಾಡುತ್ತದೆಯೋ—ಅದೇ ರೀತಿಯಲ್ಲಿ ಧರ್ಮವನ್ನು ಸ್ವಲ್ಪವೇ ಆಚರಿಸಿದರೂ ಅದು ಮಹಾಭಯದಿಂದ ಸಂರಕ್ಷಿಸುತ್ತದೆ. ಇಲ್ಲಿ ಹೇಳಿರುವ ಧರ್ಮಕ್ಕೆ ವಿರೋಧವಾದುದೆಲ್ಲಾ ಅಧರ್ಮ. ಸುಳ್ಳು, ಕಪಟ, ಕಳ್ಳತನ, ಹಿಂಸೆ, ದಂಭ, ಅಭಕ್ಷ್ಯಭಕ್ಷಣ—ಇತ್ಯಾದಿಗಳು.

ಈ ಧರ್ಮಗಳನ್ನೂ ಮತ್ತು ಇದಕ್ಕೆ ವಿರುದ್ಧವಾದ ಅಧರ್ಮಗಳನ್ನೂ ಯಥಾವತ್ತಾಗಿ ತಿಳಿದುಕೊಳ್ಳದೇ ಇರತಕ್ಕವನಿಗೆ, ಅರ್ಥಾತ್ ರಾಜಸಿಗೆ ಧರ್ಮಾಧರ್ಮಗಳ ತಿಳಿವಳಿಕೆ ಇಲ್ಲವೆಂದಲ್ಲ. ಸರಿಯಾದ ತಿಳಿವಳಿಕೆಯಿಲ್ಲ. ಎಂದರೆ : ಇವನು ಧರ್ಮವನ್ನು ಯಥಾವತ್ತಾಗಿ ತಿಳಿದುಕೊಂಡಿಲ್ಲ. ಇವನಿಗೆ ಸುಳ್ಳು ಹೇಳಕೂಡದೆಂಬ ವಿಷಯವು ತಿಳಿದಿದೆ. ಆದರೆ 'ಸಮಯಗಳಲ್ಲಿ ಸುಳ್ಳು ಹೇಳದೆ ಸಾಧ್ಯವೇ ಆಗುವುದಿಲ್ಲ' ಎಂಬ ಸಿದ್ಧಾಂತಕ್ಕೆ ಇವನು ಬಂದಿರುತ್ತಾನೆ. ಅಥವಾ ವಿವೇಚನೆಯಿಲ್ಲದೇ ಸಮಯಾಸಮಯಗಳನ್ನು ವಿವೇಚಿಸದೇ ನಿಜಹೇಳುತ್ತಾನೆ. ಇದರಿಂದ ಮತ್ತೊಬ್ಬರಿಗೆ ಆಗಬಹುದಾದ ತೊಂದರೆಯನ್ನು ಪರಿಗಣಿಸುವುದಿಲ್ಲ. ಉದಾಹರಣೆಗೆ ಪ್ರಾಣಿಗಳನ್ನು ಹಿಂಸಿಸದಿರುವುದಕ್ಕೆ ಅಥವಾ ಕೊಲ್ಲದೇ ಇರುವುದಕ್ಕೆ 'ಅಹಿಂಸೆ' ಎಂದು ಹೆಸರು ಎಂದು ಮಾತ್ರ ಇವನು ತಿಳಿದಿರುತ್ತಾನೆ. ತಾನು ಮತ್ತೊಬ್ಬರನ್ನು ತೆಗಳುವುದು ಸಹ ಹಿಂಸೆಯಾಗುತ್ತದೆಂದು ಇವನು ಭಾವಿಸುವುದಿಲ್ಲ. ಇಂತಹವನು ರಾಜಸಿ. ಅಥವಾ ಹೀಗಿರುವುದು ರಾಜಸಗುಣದ ಸ್ವಭಾವವಾಗಿರುತ್ತದೆ.

**ಕಾರ್ಯಂ ಚಾಕಾರ್ಯಮೇವ ಚ** = ಈ ರಾಜಸೀಬುದ್ಧಿಯು ಕಾರ್ಯ ಮತ್ತು ಅಕಾರ್ಯಗಳನ್ನು ಯಥಾವತ್ತಾಗಿ ತಿಳಿದಿರುವುದಿಲ್ಲ.

ಕಾರ್ಯ ಎಂದರೆ ಕರ್ತವ್ಯಕರ್ಮಗಳು. ಅಕಾರ್ಯ ಎಂದರೆ ನಿಷಿದ್ಧ ಕರ್ಮಗಳು. ಶಾಸ್ತ್ರನಿಷಿದ್ಧವಾದ ಕಾರ್ಯಗಳೆಲ್ಲವೂ ಅಕಾರ್ಯಗಳೆನಿಸಿ ಕೊಳ್ಳುತ್ತವೆ. ಶಾಸ್ತ್ರವಿಹಿತಕರ್ಮಗಳೇ ಆದರೂ ಇವು ಕೆಲವರಿಗೆ ಕಾರ್ಯ ಗಳೂ (ಕರ್ತವ್ಯಗಳೂ) ಮತ್ತೆ ಕೆಲವರಿಗೆ ಅಕಾರ್ಯಗಳೂ (ಅಕರ್ತವ್ಯಗಳೂ) ಆಗುತ್ತವೆ. ಅಧ್ಯಯನ-ಅಧ್ಯಾಪನ, ಯಜನ-ಯಾಜನ ಮತ್ತು ದಾನ-ಪ್ರತಿಗ್ರಹ–ಇವುಗಳು ಶಾಸ್ತ್ರವಿಹಿತಕರ್ಮಗಳೇ ಆಗಿವೆ. ಆದರೆ ಬ್ರಾಹ್ಮಣನು ಈ ಆರು ಕರ್ಮಗಳನ್ನೂ ಮಾಡಬೇಕು. ಕ್ಷತ್ರಿಯ-ವೈಶ್ಯರಿಗೆ ಮೂರು ಕರ್ಮಗಳು ಮಾತ್ರವೇ ವಿಹಿತವಾಗಿವೆ. ಕ್ಷತ್ರಿಯ-ವೈಶ್ಯರು ಷಟ್ಕರ್ಮನಿರತರಾಗುವುದು ಅಕಾರ್ಯವೆನಿಸುತ್ತದೆ. ಸಂನ್ಯಾಸಿಯು ಕಾಮ್ಯಕರ್ಮಗಳನ್ನು ತಾನೂ ಮಾಡಬಾರದು ; ಬೇರೆಯವರಿಂದ ಮಾಡಿಸಲೂಬಾರದು. ಸಂನ್ಯಾಸಿಗೆ ಕಾಮ್ಯಕರ್ಮಗಳು ನಿಷಿದ್ಧ. ಗೃಹಸ್ಥನಾದವನು ಕಾಮ್ಯಕರ್ಮಗಳನ್ನು ಅಪೇಕ್ಷೆ ಯಿದ್ದರೆ ಮಾಡಬಹುದು. ಹೀಗೆ ಯದ್ಯಪಿ ಶಾಸ್ತ್ರವಿಹಿತವಾದ ಕರ್ಮಗಳೇ ಆದರೂ ಈ ಕರ್ಮಗಳು ಕೆಲವರಿಗೆ ಕರ್ತವ್ಯಕರ್ಮಗಳೂ ಮತ್ತೆ ಕೆಲವರಿಗೆ ಅಕರ್ಮಗಳೂ ಆಗುತ್ತವೆ. ರಾಜಸಿಯು ಕಾರ್ಯ-ಅಕಾರ್ಯ ಎಂಬುದನ್ನು ವಿವೇಚಿಸುವುದಿಲ್ಲ. ಹೀಗೆ ಧರ್ಮಾಧರ್ಮಗಳನ್ನೂ ಕಾರ್ಯಾ ಕಾರ್ಯಗಳನ್ನೂ ನಿರ್ಣಯಿಸದೇ ಇರುವುದೇ ರಾಜಸೀಬುದ್ಧಿ.)

O O O

**ಧರ್ಮಂ** =ಶಾಸ್ತ್ರವು ಯಾವುದನ್ನು ವಿಧಿಸಿದೆಯೋ ಅದನ್ನು. **ಅಧರ್ಮಂ** =ಶಾಸ್ತ್ರವು ಯಾವುದನ್ನು ನಿಷೇಧಮಾಡಿದೆಯೋ ಅದನ್ನು. **ಕಾರ್ಯಾಕಾರ್ಯೇ** = ಹಿಂದೆ ಹೇಳಿದ ಕರ್ತವ್ಯ ಮತ್ತು ಅಕರ್ತವ್ಯಗಳನ್ನು. **ಅಯಥಾವತ್ ಪ್ರಜಾನಾತಿ** = ಯಥಾರ್ಥವಾಗಿ ಹೇಗಿದೆಯೋ ಹಾಗೆ ಎಲ್ಲ ಕಡೆಯಿಂದಲೂ ನಿರ್ಣಯಪೂರ್ವಕವಾಗಿ ಯಾವ ಬುದ್ಧಿಯು ತಿಳಿದು ಕೊಳ್ಳುವುದಿಲ್ಲವೋ ಅದು ರಾಜಸೀಬುದ್ಧಿ. (ಶಂ. ಭಾ.)

ಯಾವುದರಿಂದ ಹಿಂದೆ ಹೇಳಿದ ಎರಡು ಬಗೆಯ ಧರ್ಮವನ್ನು ಮತ್ತು ಅದಕ್ಕೆ ವಿರುದ್ಧವಾದ ಅಧರ್ಮವನ್ನು. ಧರ್ಮದಲ್ಲಿ ನಿಷ್ಠರಾದವರು ಆಯಾ ದೇಶ-ಕಾಲಗಳಲ್ಲಿ ಮತ್ತು ಅವಸ್ಥೆಗಳಲ್ಲಿ ಮಾಡಬೇಕಾದ ಮತ್ತು ಮಾಡ

ಬಾರದ ಕರ್ಮ ಯಾವುದು ಎಂಬುದನ್ನು ಯಥಾರ್ಥವಾಗಿ ತಿಳಿಯುವುದಿಲ್ಲವೋ ಅದು ರಾಜಸೀಬುದ್ಧಿ. (ರಾ. ಭಾ.)

**ಓಂ ಅಧರ್ಮಂ ಧರ್ಮಮಿತಿ ಯಾ ಮನ್ಯತೇ ತಮಸಾವೃತಾ ।**
**ಸರ್ವಾರ್ಥಾನ್ವಿಪರೀತಾಂಶ್ಚ ಬುದ್ಧಿಃ ಸಾ ಪಾರ್ಥ ತಾಮಸೀ ॥೩೨॥**

ಪಾರ್ಥ! ತಮಸ್ಸಿನಿಂದ ಆವರಿಸಲ್ಪಟ್ಟು ಅಧರ್ಮವನ್ನು ಧರ್ಮವೆಂದು ಯಾವುದು ತಿಳಿಯುವುದೋ, ಸರ್ವಾರ್ಥಗಳನ್ನೂ ವಿಪರೀತವಾಗಿಯೂ (ವಿರುದ್ಧವಾಗಿಯೂ) ತಿಳಿದುಕೊಳ್ಳುತ್ತಿರುವುದೋ ಆ ಬುದ್ಧಿಯು ತಾಮಸವು.

* * *

(ಧರ್ಮಾಧರ್ಮಗಳನ್ನು ನಿರ್ಣಯಿಸದೇ ಕಾರ್ಯಾಕಾರ್ಯಗಳನ್ನು ವಿವೇಚಿಸದೆ ಇರತಕ್ಕದ್ದು ರಾಜಸೀಬುದ್ಧಿ. ನಿರ್ಣಯಿಸದೇ ಕಾರ್ಯಮಾಡುವಾಗ ಧರ್ಮಕಾರ್ಯವನ್ನು ಕೆಲವು ಸಮಯಗಳಲ್ಲಿ ಮಾಡಲು ಅವಕಾಶವಿದೆ. ಆದರೆ ತಾಮಸೀಬುದ್ಧಿಯು ಹಾಗಲ್ಲ. ಧರ್ಮವನ್ನೇ ಅಧರ್ಮವೆಂದೂ, ಕಾರ್ಯವನ್ನೇ ಅಕಾರ್ಯವೆಂದೂ ನಿರ್ಧರಿಸಿ ಅದರಂತೆ ಕರ್ಮಗಳನ್ನು ಮಾಡುವುದು. ಸಂಧ್ಯಾವಂದನೆಯನ್ನು ಮಾಡಬೇಕು. ಶಾಸ್ತ್ರದಲ್ಲಿ ಹೇಳಿದೆ. ಇದನ್ನು ಮಾಡುತ್ತಾ ಕುಳಿತರೆ ವೃಥಾ ಕಾಲಯಾಪನೆಯಾಗುತ್ತದೆ. ಅದೇ ಸಮಯದಲ್ಲಿ ಮತ್ತಷ್ಟು ದುಡಿದರೆ ಕೈಗೆ ಮತ್ತಷ್ಟು ಕಾಸಾದರೂ ಸಿಕ್ಕೀತು. ಇದು ತಾಮಸಬುದ್ಧಿಯ ಕಾರ್ಯ. ವರ್ಣಾಶ್ರಮಧರ್ಮಕ್ಕೆ ಅನುಸಾರವಾಗಿ ನಡೆಯಬೇಕು ಎಂದು ಶಾಸ್ತ್ರಗಳು ಹೇಳುತ್ತವೆ. ವರ್ಣವೂ ಇಲ್ಲ ; ಧರ್ಮವೂ ಇಲ್ಲ. ವರ್ಣಸಾಂಕರ್ಯದಿಂದಲೇ ಸಮಾಜದ ಉದ್ಧಾರ. ಇದಕ್ಕಿಂತಲೂ ಮಿಗಿಲಾದ ಧರ್ಮವು ಯಾವುದೂ ಇಲ್ಲ ಎಂದು ತೀರ್ಮಾನಿಸುವುದು ತಾಮಸೀಬುದ್ಧಿ. ಸರ್ವಾರ್ಥಾನ್ವಿಪರೀತಾಂಶ್ಚ = ಎಲ್ಲ ವಿಷಯಗಳನ್ನೂ ಹೇಗೆ ಇದೆಯೋ ಅದಕ್ಕೆ ವಿರುದ್ಧವಾಗಿ ತಿಳಿಯುವುದು. ಐಹಿಕವಾದ ಭೋಗಾದಿಗಳು ಕ್ಷಣಿಕವಾದುವು. ಇದನ್ನೇ ಪರಮಾರ್ಥಸುಖವೆಂದು ಪರಿಗಣಿಸಬಾರದು ಎಂಬುದು ಶಾಸ್ತ್ರವು ಬೋಧಿಸುವ ಧರ್ಮ. ಐಹಿಕಭೋಗಾದಿಗಳೇ ನಿಜವಾದ ಸುಖ. ಪರವಿರುವುದೆಂಬುದನ್ನು ಭ್ರಾಂತಿಯಿಂದ ನಂಬಿಕೊಂಡು ಐಹಿಕ

ಸುಖೋಪಭೋಗಗಳನ್ನು ಕಳೆದುಕೊಳ್ಳುವುದು ಮೂಢತನ. ಇದು ತಾಮಸೀಬುದ್ಧಿ. ಆತ್ಮವು ನಿತ್ಯ ; ದೇಹವೇ ಬೇರೆ ; ಆತ್ಮವೇ ಬೇರೆ–ಎಂಬುದು ಶಾಸ್ತ್ರಬೋಧಿತವಾದ ತಿಳಿವಳಿಕೆ. ದೇಹವೇ ಆತ್ಮ. ದೇಹವನ್ನು ಬಿಟ್ಟು, ದೈಹಿಕಸುಖವನ್ನು ಬಿಟ್ಟು ಬೇರೆ ಯಾವುದೂ ಇಲ್ಲ. ಇದು ತಾಮಸೀ ಬುದ್ಧಿ. ಕಾಮ-ಕ್ರೋಧಗಳನ್ನು ಬಿಡಬೇಕು (ಶಾಸ್ತ್ರವಚನ). ಕ್ರೋಧವನ್ನು ಬಿಟ್ಟವನು ಪುರುಷನೆನಿಸಿಕೊಳ್ಳುವುದಿಲ್ಲ. ಕಾಮವಿಲ್ಲದಿದ್ದರೆ ಜಗತ್ತೇ ವ್ಯರ್ಥ ವಾಗಿಬಿಡುತ್ತದೆ ಎನ್ನುವುದು ತಾಮಸೀಬುದ್ಧಿ. ಅಮಾವಾಸ್ಯೆಯಂದು ಶುಭ ಕರ್ಮಗಳನ್ನು ಪ್ರಾರಂಭಿಸಬಾರದು–ಎಂಬುದು ಶಾಸ್ತ್ರವಚನವಾದರೆ ಅದೇ ದಿವಸದಲ್ಲಿ ಮಾಡಬೇಕು ಎನ್ನುವುದು ತಾಮಸೀಬುದ್ಧಿ.

ಹೀಗೆ ಎಲ್ಲಕ್ಕೂ ವಿಪರೀತಾರ್ಥಗಳನ್ನು ಕಲ್ಪಿಸುತ್ತಾ ಧರ್ಮವನ್ನೇ ಅಧರ್ಮವೆಂದೂ–ಕಾರ್ಯವನ್ನೇ ಅಕಾರ್ಯವೆಂದೂ ಕಲ್ಪನೆಮಾಡಿಕೊಳ್ಳು ವುದೇ ತಾಮಸೀಬುದ್ಧಿ.)

**o o o**

ತಮೋಗುಣದಿಂದ ಆವೃತವಾದ ಯಾವ ಬುದ್ಧಿಯು ನಿಷಿದ್ಧವಾದ ಕಾರ್ಯವನ್ನು ಧರ್ಮವೆಂದು ತಿಳಿಯುತ್ತದೆಯೋ ತಿಳಿಯಲು ಯೋಗ್ಯವಾದ ಎಲ್ಲ ಪದಾರ್ಥಗಳನ್ನೂ ಇರುವುದಕ್ಕೆ ವಿರುದ್ಧವಾಗಿಯೇ ತಿಳಿಯುತ್ತದೆಯೋ ಅದು ತಾಮಸೀಬುದ್ಧಿ. (ಶಂ. ಭಾ.)

ತಾಮಸೀಬುದ್ಧಿಯಾದರೋ ತಮಸ್ಸಿನಿಂದ ಆವರಿಸಲ್ಪಟ್ಟು ಎಲ್ಲ ವಿಷಯಗಳನ್ನೂ ವಿಪರೀತ (ವಿರುದ್ಧ)ವಾಗಿಯೇ ತಿಳಿಯುತ್ತದೆ. ಅಧರ್ಮ ವನ್ನು ಧರ್ಮವನ್ನಾಗಿಯೂ–ಧರ್ಮವನ್ನು ಅಧರ್ಮವನ್ನಾಗಿಯೂ, ಸತ್ತನ್ನು ಅಸತ್ತನ್ನಾಗಿಯೂ, ಪರತತ್ತ್ವವನ್ನು ಅಪರತತ್ತ್ವವನ್ನಾಗಿಯೂ–ಅಪರತತ್ತ್ವವನ್ನು ಪರತತ್ತ್ವವನ್ನಾಗಿಯೂ ಹೀಗೆ ಎಲ್ಲವನ್ನೂ ವಿರುದ್ಧವಾಗಿಯೇ ತಿಳಿಯುತ್ತದೆ. ಇದು ತಾಮಸೀಬುದ್ಧಿ. (ರಾ. ಭಾ.)

**ಅಧರ್ಮಂ ಧರ್ಮಮಿತಿ** = ಅಧರ್ಮದಲ್ಲಿ ಧರ್ಮಬುದ್ಧಿಯನ್ನು ಇಟ್ಟುಕೊಳ್ಳುವುದೇ ಎಲ್ಲ ಅರ್ಥಗಳನ್ನೂ ವಿಪರೀತವಾಗಿ ಗ್ರಹಿಸುವ ಬುದ್ಧಿಗೆ

ಕಾರಣ ಎಂದು ಸೂಚಿಸುವುದಕ್ಕೋಸ್ಕರ ಧರ್ಮಾಧರ್ಮಗಳನ್ನು ಪ್ರತ್ಯೇಕ ವಾಗಿ ಮೊದಲೇ ಹೇಳಿದೆ. (ಮ. ಟೀಕಾ)

**ಓಂ ಧೃತ್ಯಾ ಯಯಾ ಧಾರಯತೇ ಮನಃಪ್ರಾಣೇನ್ದ್ರಿಯಕ್ರಿಯಾಃ ।**
**ಯೋಗೇನಾವ್ಯಭಿಚಾರಿಣ್ಯಾ ಧೃತಿಃ ಸಾ ಪಾರ್ಥ ಸಾತ್ತ್ವಿಕೀ ॥೩೩॥**

ಪಾರ್ಥ! ಅವ್ಯಭಿಚಾರಿಯಾದ ಯಾವ ಧೃತಿಯಿಂದ ಮನಸ್ಸು, ಪ್ರಾಣ, ಇಂದ್ರಿಯ ಮತ್ತು ಅವುಗಳ ಕರ್ಮಗಳನ್ನು ಯೋಗದಿಂದ ಧರಿಸುತ್ತಾನೆಯೋ ಆ ಧೃತಿಯು ಸಾತ್ತ್ವಿಕವು.

* * *

(ಧೃತಿ ಎಂದರೆ ಯೋಗಶಾಸ್ತ್ರೋಕ್ತವಾದ 'ಧಾರಣಾ' ಎಂಬ ಒಂದು ಯೋಗಾಂಗ. ಅರ್ಥಾತ್ ಧೃತಿ ಎಂದರೆ ಶ್ರದ್ಧೆ, ಮೇಧೆ, ಪ್ರಜ್ಞೆಗಳಂತೆ ಅಂತಃಕರಣದಲ್ಲಿರುವ ಒಂದು ಅಗೋಚರವಾದ ಧಾರಣಾಶಕ್ತಿ. ಇಲ್ಲಿ ಸಾತ್ತ್ವಿಕ ವಿಷಯವಾಗಿ ಶ್ರೀಕೃಷ್ಣನು ಹೇಳುತ್ತಿರುವುದರಿಂದ **ಅವ್ಯಭಿಚಾರಿಣ್ಯಾ ಧೃತ್ಯಾ** ಎಂದು ಹೇಳಿದ್ದಾನೆ. ವ್ಯಭಿಚಾರಿಣೀಧೃತಿ ಎಂದರೆ ಒಂದು ವಸ್ತುವಿನಲ್ಲಿ ನಿಲ್ಲದೇ ನಾನಾವಿಷಯಗಳನ್ನು ಧಾರಣೆಮಾಡುವುದು. ಅವ್ಯಭಿಚಾರಿಣೀಧೃತಿಯೆಂದರೆ ಪರಮಾತ್ಮನೊಬ್ಬನನ್ನೇ ಧರಿಸುವಿಕೆ. ಈ ಧೃತಿಗೆ ಬೇರಾವ ಪ್ರಯೋಜನವೂ ಇಲ್ಲ. ಆದುದರಿಂದ ಅವ್ಯಭಿಚಾರಿಣೀಧೃತಿಯೆಂದರೆ ಆತ್ಮಸಾಧನೆಗೆ ಮಾತ್ರವೇ ಸೀಮಿತವಾದ ಧಾರಣಾಶಕ್ತಿ. ಈ ಧೃತಿಯು ಮಾಡುವ ಕಾರ್ಯವಾದರೂ ಯಾವುದು? **ಯೋಗೇನ ಮನಃ ಪ್ರಾಣೇನ್ದ್ರಿಯಕ್ರಿಯಾಃ ಧಾರಯತೇ** = ಈ ಧೃತಿಯು ಯೋಗದ ಮೂಲಕವಾಗಿ ಅಥವಾ ಯೋಗಕ್ಕೋಸ್ಕರ ಮನಸ್ಸಿನ ಕ್ರಿಯೆಗಳನ್ನೂ, ಪ್ರಾಣಗಳ ಕ್ರಿಯೆಗಳನ್ನೂ ಮತ್ತು ಇಂದ್ರಿಯಕ್ರಿಯೆಗಳನ್ನೂ ಧರಿಸುತ್ತದೆ ; ಹತೋಟಿಯಲ್ಲಿಟ್ಟುಕೊಳ್ಳುತ್ತದೆ. ಎಲ್ಲೆಲ್ಲಿಗೋ ಹಾರಿಕೊಂಡು ಹೋಗುತ್ತಿರುವ ಮನಸ್ಸನ್ನು ಜಗ್ಗಿಸಿ ಹಿಂದಕ್ಕೆ (ಆತ್ಮನೆಡೆಗೆ) ಸೆಳೆಯುತ್ತದೆ. ಪ್ರಾಣಾಪಾನವ್ಯಾನೋದಾನಸಮಾನಗಳೆಂಬ ಶರೀರಸ್ಥವಾಗಿರುವ ವಾಯು ಗಳನ್ನು ಧೃತಿಯು ನಿಯಂತ್ರಿಸುತ್ತದೆ. ಶ್ರೀಜ್ಞಾನೇಶ್ವರರು ಹೇಳಿರುವಂತೆ–ಈ ಧೃತಿಯು ಪಂಚಪ್ರಾಣಗಳು ಮತ್ತು ನಾಗ, ಕೂರ್ಮ, ಕೃಕರ, ದೇವದತ್ತ ಎಂಬ ನಾಲ್ಕು ಉಪಪ್ರಾಣಗಳು ಇವೆಲ್ಲವುಗಳಲ್ಲಿನ ಭೇದಗಳನ್ನೂ ನಾಶ

ಗೊಳಿಸಿ, ಅವನ್ನೆಲ್ಲಾ ಒಣಗಿಸಿ, ಸುಷುಮ್ನಾನಾಡಿಯ ಕೋಣೆಯಲ್ಲಿ ಪ್ರತಿಬಂಧಿಸುತ್ತದೆ. ಸಿಂಹವು ಗರ್ಜಿಸುತ್ತಾ ಎದುರಿಗೆ ಬಂದಾಗ ಮದಿಸಿದ ಆನೆಯೂ ಕೂಡ ಮುಂದಡಿಯಿಕ್ಕಲು ಅಸಮರ್ಥವಾಗುವಂತೆ–ಸಾತ್ತ್ವಿಕಧೃತಿಯೆಂಬ ರಾಜನು ಉದಯಿಸಿದೊಡನೆಯೇ ಮನಃಪ್ರಾಣೇಂದ್ರಿಯಕ್ರಿಯೆಗಳು ಅವನಲ್ಲಿಯೇ ಅಡಗಿಹೋಗುವುವು. ಮನಸ್ಸು, ಪ್ರಾಣ, ಇಂದ್ರಿಯ ಮತ್ತು ಅವುಗಳ ಕ್ರಿಯೆಗಳನ್ನು ಸಂಪೂರ್ಣವಾಗಿ ಹತೋಟಿಯಲ್ಲಿಟ್ಟುಕೊಳ್ಳುವ ಇಂತಹ ಧೃತಿಗೆ ಅಥವಾ ಧಾರಣಾಶಕ್ತಿಗೆ ಸಾತ್ತ್ವಿಕೀಧೃತಿ ಎಂದು ಹೆಸರು.)

o o o

**ಅವ್ಯಭಿಚಾರಿಣ್ಯಾ** ಎಂಬ ಪದವು ದೂರದಲ್ಲಿರುವ **ಧೃತ್ಯಾ** ಎಂಬ ಪದಕ್ಕೆ ಸಂಬಂಧಿಸಿದೆ. ಯಾವ ಅವ್ಯಭಿಚಾರಿಣಿಯಾದ ಎಂದರೆ ಸಮಾಧಿಯಲ್ಲಿ ಲಗ್ನವಾದ ಧಾರಣೆಯಿಂದ ಮನಸ್ಸು, ಪ್ರಾಣಗಳು ಮತ್ತು ಇಂದ್ರಿಯಗಳ ಕ್ರಿಯೆಗಳನ್ನು ಶಾಸ್ತ್ರವಿರುದ್ಧವಾದ ಪ್ರವೃತ್ತಿಯಿಂದ ತಡೆಯಲಾಗುತ್ತದೋ ಅದು ಸಾತ್ತ್ವಿಕವಾದ ಧೃತಿ. ಅಂತಹ ಧೃತಿಯಿಂದ ಧಾರಣೆಮಾಡಲ್ಪಟ್ಟ ಇಂದ್ರಿಯಗಳೇ ಶಾಸ್ತ್ರಕ್ಕೆ ವಿರುದ್ಧವಾದ ವಿಷಯದಲ್ಲಿ ಪ್ರವೃತ್ತವಾಗಲಾರವು. ಯಾವ ಅವ್ಯಭಿಚಾರಿಣಿಯಾದ ಧೃತಿಯಿಂದಲೇ ಮನುಷ್ಯರು ಸಮಾಧಿಯೋಗದಿಂದ ಮನಸ್ಸು, ಪ್ರಾಣ ಮತ್ತು ಇಂದ್ರಿಯಗಳ ಚೇಷ್ಟೆಗಳನ್ನು ಧರಿಸುತ್ತಾರೆಯೋ ಅಂತಹ ಧೃತಿಯು ಸಾತ್ತ್ವಿಕವೆನಿಸುತ್ತದೆ. **ಯೋಗೇನ** = ಸಮಾಧಿಯಿಂದ. **ಅವ್ಯಭಿಚಾರಿಣ್ಯಾ** = ಯಾವಾಗಲೂ ಸಮಾಧಿಗೆ ಲಗ್ನವಾಗಿರುವ.

(ಶಂ. ಭಾ.)

ವ್ಯಭಿಚಾರರಹಿತವಾದ ಯಾವ ಧೃತಿ ಎಂಬ ಯೋಗದಿಂದ ಮನು ಷ್ಯನು ಮನಸ್ಸು, ಪ್ರಾಣ ಮತ್ತು ಇಂದ್ರಿಯಕ್ರಿಯೆಗಳನ್ನು ಧರಿಸುತ್ತಾನೆಯೋ ಅದು ಸಾತ್ತ್ವಿಕವಾದ ಧೃತಿ. ಯೋಗವೆಂದರೆ ಮೋಕ್ಷಕ್ಕೆ ಸಾಧನಭೂತವಾದ ಭಗವಂತನ ಉಪಾಸನೆ. ಆ ಯೋಗವನ್ನೇ ಪ್ರಯೋಜನವನ್ನಾಗಿಟ್ಟುಕೊಂಡು ವ್ಯಭಿಚಾರರಹಿತವಾಗಿರುವ–ಯೋಗದ ಉದ್ದೇಶದಿಂದ ಪ್ರವೃತ್ತವಾಗುವುದಕ್ಕೆ ಸಾಧನವಾಗಿರುವ ಮನಸ್ಸು ಮುಂತಾದುವುಗಳ ಕ್ರಿಯೆಗಳನ್ನು ಯಾವ ಧೃತಿಯಿಂದ ಧರಿಸುತ್ತಾನೆಯೋ ಅದು ಸಾತ್ತ್ವಿಕಧೃತಿ. (ರಾ. ಭಾ.)

**ಅವ್ಯಭಿಚಾರಿಣ್ಯಾ ಯೋಗೇನ = ಯೋಗದಿಂದ ಕೂಡಿರುವ.**

**(ಮ. ಟೀಕಾ)**

**ಓಂ ಯಯಾ ತು ಧರ್ಮಕಾಮಾರ್ಥಾನ್ಧೃತ್ಯಾ ಧಾರಯತೇಽರ್ಜುನ ।**
**ಪ್ರಸಙ್ಗೇನ ಫಲಾಕಾಂಕ್ಷೀ ಧೃತಿಃ ಸಾ ಪಾರ್ಥ ರಾಜಸೀ ॥೩೪॥**

ಆದರೆ ಅರ್ಜುನ! ಯಾವ ಧೃತಿಯಿಂದ ಧರ್ಮ, ಕಾಮ ಮತ್ತು ಅರ್ಥಗಳನ್ನು ಅತ್ಯಂತಾಸಕ್ತಿಯಿಂದ ಕೂಡಿ ಫಲವನ್ನು ಬಯಸುವವನಾಗಿ ಧರಿಸಿಕೊಂಡಿರುತ್ತಾನೆಯೋ ಆ ಧೃತಿಯು ರಾಜಸವು.

* * *

(ಹಿಂದಿನ ಶ್ಲೋಕದಲ್ಲಿ ಸಾತ್ತ್ವಿಕೀಧೃತಿಯ ವಿಷಯವನ್ನು ಶ್ರೀಕೃಷ್ಣನು ಹೇಳುವಾಗ ಮನಸ್ಸು, ಪ್ರಾಣ ಮತ್ತು ಇಂದ್ರಿಯಕ್ರಿಯೆಗಳನ್ನು ಧರಿಸಿರುವುದು ಸಾತ್ತ್ವಿಕೀಧೃತಿ ಎಂದು ಹೇಳಿದನು. ಈ ಶ್ಲೋಕದಲ್ಲಿ ಧರ್ಮ-ಕಾಮಾರ್ಥಗಳನ್ನು ಧರಿಸಿರುವ ಧೃತಿಯು ರಾಜಸವಾದುದು ಎಂದು ಹೇಳಿದ್ದಾನೆ. ಸಾತ್ತ್ವಿಕೀಧೃತಿಯು ಪರಮಪುರುಷಾರ್ಥಕ್ಕೋಸ್ಕರ ಮನಃ ಪ್ರಾಣೇಂದ್ರಿಯಕ್ರಿಯೆಗಳನ್ನು ಸಂಯಮಮಾಡಿ ಯೋಗದಿಂದ ಹತೋಟಿಯಲ್ಲಿಟ್ಟುಕೊಂಡರೆ ರಾಜಸೀಧೃತಿಯೂ ಪ್ರಸಙ್ಗೇನ = ಪ್ರಕೃಷ್ಟವಾದ ಸಂಗದಿಂದ ಎಂದರೆ ಹೆಚ್ಚಿನ ಆಸಕ್ತಿಯಿಂದ ಧರ್ಮ-ಕಾಮಾರ್ಥಗಳನ್ನು ಧರಿಸಿರುತ್ತದೆ. ಅವುಗಳನ್ನು ಕುರಿತು ಚಿಂತಿಸುತ್ತದೆ. ಅವುಗಳೇ ಲಕ್ಷ್ಯಗಳೆಂದು ನಿಶ್ಚಯಿಸಿಕೊಳ್ಳುತ್ತದೆ.

ಸಾತ್ತ್ವಿಕೀಧೃತಿಯು ನಿವೃತ್ತಿಮಾರ್ಗದ್ದು. ರಾಜಸೀಧೃತಿಯು ಪ್ರವೃತ್ತಿಮಾರ್ಗದ್ದು. ಪ್ರವೃತ್ತಿಮಾರ್ಗದಲ್ಲಿಯೂ ಕರ್ಮಗಳನ್ನಾಚರಿಸಲು ಧಾರಣಾಶಕ್ತಿಯು ಅತ್ಯಾವಶ್ಯಕ. ಮೋಕ್ಷವನ್ನು ಹಿಂದಿನ ಶ್ಲೋಕಕ್ಕೆ ಮೀಸಲಾಗಿಟ್ಟು ಈ ಶ್ಲೋಕದಲ್ಲಿ ಧರ್ಮ-ಕಾಮಾರ್ಥಗಳನ್ನು ಮಾತ್ರವೇ ಉದ್ಧರಿಸಿದ್ದಾನೆ ಶ್ರೀಕೃಷ್ಣ. ರಾಜಸೀಧೃತಿಯ ಮುಖ್ಯಲಕ್ಷಣ ಫಲಾಕಾಂಕ್ಷೆ. ಫಲಾಕಾಂಕ್ಷಿಯಾದ ಮನುಷ್ಯನು ಈ ಧೃತಿಯಿಂದ ಧರ್ಮಾರ್ಥ-ಕಾಮಗಳನ್ನು ಹೆಚ್ಚಿನ ಆಸಕ್ತಿಯಿಂದ ಧರಿಸುತ್ತಾನೆ. ಧರ್ಮಕಾರ್ಯಗಳು ಎಂದರೆ ಕೆರೆ ತೋಡಿಸುವುದು, ಬಾವಿ ತೆಗೆಸುವುದು, ಛತ್ರ ಕಟ್ಟಿಸುವುದು ಇತ್ಯಾದಿ ಫಲಾಭಿಸಂಧಿಯಿಂದ ಮಾಡುವ ಧರ್ಮಕಾರ್ಯಗಳು. ಕಾಮ್ಯವಾದ

ಯಜ್ಞ-ಯಾಗಾದಿಗಳೂ ಸಹ ಧರ್ಮಕಾರ್ಯಗಳೇ ಆಗುತ್ತವೆ. ಇವೆಲ್ಲವೂ ಐಹಿಕಾಮುಷ್ಮಿಕ್ರಫಲಗಳನ್ನು ಪಡೆಯುವ ಸಲುವಾಗಿ ಮಾಡುವ ಧರ್ಮ ಕಾರ್ಯಗಳೇ ಆಗಿವೆ. ಕಾಮ ಎಂದರೆ ಇಂದ್ರಿಯಸುಖಗಳ ಉಪಭೋಗ. ಧರ್ಮದ ಮೂಲಕವಾಗಿಯೇ ಕಾಮತೃಪ್ತಿಯನ್ನು ಹೊಂದುವುದು. ಧರ್ಮದ ಮೂಲಕವಾಗಿಯೇ ಅರ್ಥವನ್ನೂ ಸಂಪಾದಿಸುವುದು. ಫಲದ ಕಾಮನೆಯಿದ್ದರೂ ಸಹ ಅಧರ್ಮದಿಂದ ವರ್ತಿಸುವ ಸ್ವಭಾವವು ರಾಜಸಿಗಿರುವುದಿಲ್ಲ. ಕರ್ಮಗಳಲ್ಲಿ ಹೆಚ್ಚಿನ ಆಸಕ್ತಿಯಿರುತ್ತದೆ. ಇದಕ್ಕೆ ಫಲಾಭಿಲಾಷೆಯೇ ಕಾರಣ. ಹೀಗೆ ಧರ್ಮಕಾರ್ಯಗಳನ್ನು ಮಾಡಲು ಧರ್ಮಮೂಲವಾಗಿ ಕಾಮನೆಗಳನ್ನು ಪಡೆದುಕೊಳ್ಳಲು ಮತ್ತು ಧರ್ಮಮೂಲವಾಗಿ ಧನವನ್ನು ಸಂಪಾದಿಸಲು ಸಹ ಧಾರಣಾಶಕ್ತಿಯಿರಬೇಕು. ಇಂತಹ ಧೃತಿಗೆ ರಾಜಸೀಧೃತಿಯೆಂದು ಹೆಸರು.)

O O O

ಮನುಷ್ಯನು ಯಾವ ಧೃತಿಯಿಂದ ಧರ್ಮ, ಕಾಮ ಮತ್ತು ಅರ್ಥಗಳನ್ನು ಧರಿಸುತ್ತಾನೆಯೋ ಎಂದರೆ ಅವುಗಳನ್ನೇ ನಿತ್ಯಕರ್ತವ್ಯಗಳೆಂದು ಮನಸ್ಸಿನಲ್ಲಿ ನಿಶ್ಚಯಿಸಿಕೊಳ್ಳುತ್ತಾನೆಯೋ ಮತ್ತು ಪ್ರಸಂಗಕ್ಕೆ ಅನುಗುಣವಾಗಿ ಎಂದರೆ ಯಾವ ಯಾವ ಧರ್ಮ, ಅರ್ಥ ಮುಂತಾದುವುಗಳನ್ನು ಧಾರಣೆ ಮಾಡುವ ಪ್ರಸಂಗವು ಬರುತ್ತದೆಯೋ ಆಯಾ ಪ್ರಸಂಗದಿಂದಲೇ ಫಲವನ್ನೂ ಬಯಸುತ್ತಾನೆಯೋ ಆ ಧೃತಿಯು ರಾಜಸಧೃತಿ ಎನಿಸುತ್ತದೆ.

(ಶಂ. ಭಾ.)

ಫಲವನ್ನು ಬಯಸುವ ಪುರುಷನು ಪ್ರಕೃಷ್ಟವಾದ (ವಿಶೇಷವಾದ) ಆಸಕ್ತಿಯಿಂದ ಧರ್ಮ, ಕಾಮ ಮತ್ತು ಅರ್ಥಗಳನ್ನು ಯಾವ ಧೃತಿಯಿಂದ ಧರಿಸುತ್ತಾನೆಯೋ ಆ ಧೃತಿಯು ರಾಜಸೀಧೃತಿಯೆನಿಸುತ್ತದೆ. ಧರ್ಮ-ಕಾಮಾರ್ಥಶಬ್ದಗಳಿಂದ ಅವುಗಳಿಗೆ ಸಾಧನವಾಗಿರುವ ಮನಸ್ಸು, ಪ್ರಾಣ ಮತ್ತು ಇಂದ್ರಿಯಗಳ ಕ್ರಿಯೆಗಳು ಲಕ್ಷಿತವಾಗುತ್ತವೆ. ಫಲಾಕಾಂಕ್ಷಿ ಎಂಬ ಲ್ಲಿಯೂ ಕೂಡ ಫಲಶಬ್ದವು ರಾಜಸವಾಗಿರುವುದರಿಂದ ಧರ್ಮಾರ್ಥ-ಕಾಮ ಗಳನ್ನೇ ಹೇಳುತ್ತದೆ. ಆದುದರಿಂದ ಧರ್ಮ, ಕಾಮ ಮತ್ತು ಅರ್ಥಗಳನ್ನು ಬಯಸುತ್ತಾ ಮನಸ್ಸು ಮುಂತಾದುವುಗಳ ಕ್ರಿಯೆಗಳನ್ನು ಯಾವ ಧೃತಿಯಿಂದ ಧರಿಸುತ್ತಾನೆಯೋ ಅದು ರಾಜಸೀಧೃತಿ. (ರಾ. ಭಾ.)

ಪ್ರಸಙ್ಗೇನ = ವಿಶೇಷವಾಗಿ ಅದು ತನ್ನದು ಎಂಬ ಆಸಕ್ತಿಯಿಂದ.
(ಮ. ಟೀಕಾ)

**ಓಂ ಯಯಾ ಸ್ವಪ್ನಂ ಭಯಂ ಶೋಕಂ ವಿಷಾದಂ ಮದಮೇವ ಚ ।**
**ನ ವಿಮುಞ್ಚತಿ ದುರ್ಮೇಧಾ ಧೃತಿಃ ಸಾ ಪಾರ್ಥ ತಾಮಸೀ ॥೩೫॥**

ಯಾವುದರಿಂದ ಸ್ವಪ್ನವನ್ನೂ, ಭಯವನ್ನೂ, ಶೋಕವನ್ನೂ, ವಿಷಾದ ವನ್ನೂ, ಮದವನ್ನೂ–ದುಷ್ಟಬುದ್ಧಿಯವನಾಗಿ ಬಿಡದೇ ಇರುವನೋ ಆ ಧೃತಿಯು ತಾಮಸವೆನಿಸುತ್ತದೆ.

* * *

(ಈ ಧಾರಣಾಶಕ್ತಿಯು ಅಥವಾ ಧೃತಿಯು ಕೇವಲ ಮನಃ ಪ್ರಾಣೇಂದ್ರಿಯಕ್ರಿಯೆಗಳನ್ನು ಮತ್ತು ಧರ್ಮ-ಕಾಮಾರ್ಥಗಳನ್ನು ಮಾತ್ರವೇ ಧರಿಸಿರುವುದಿಲ್ಲ. ಇದಕ್ಕೆ ಇನ್ನೂ ಅನೇಕಬಗೆಯ ವಿಷಯಗಳನ್ನು ಧರಿಸುವ ಶಕ್ತಿಯಿದೆ. ಸ್ವಪ್ನವನ್ನೂ ಇದು ಧರಿಸಬಲ್ಲುದು. ಭಯವನ್ನೂ ಧರಿಸ ಬಲ್ಲುದು. ಶೋಕವನ್ನೂ, ವಿಷಾದವನ್ನೂ ಧರಿಸಬಲ್ಲುದು. ಮದವನ್ನೂ ಧರಿಸಬಲ್ಲುದು. ಇಂತಹ ಗುಣಗಳನ್ನು ಪಡೆದುಕೊಂಡ ಧಾರಣಾಶಕ್ತಿಯು ಯಾವನಿಗಿರುವುದೆಂದರೆ ದುಷ್ಟವಾದ ಬುದ್ಧಿಯುಳ್ಳವನಿಗೆ ಇರುತ್ತದೆ. ದುರ್ಬುದ್ಧಿಯವನು ಅಥವಾ ತಾಮಸಿಯು ಅಥವಾ ತಾಮಸವಾದ ಧಾರಣಾ ಶಕ್ತಿಯಿರುವವನು ಸರ್ವದಾ ಸ್ವಪ್ನಶೀಲನಾಗಿರುತ್ತಾನೆ. ಸರ್ವದಾ ತೂಕಡಿ ಸುತ್ತಿರುತ್ತಾನೆ. ಇವನಿಗೆ ಸ್ವಪ್ನವಿಲ್ಲದ ನಿದ್ದೆಯೇ ಬರುವುದಿಲ್ಲ. ಕಣ್ಣುಮುಚ್ಚಿ ತೆಂದರೆ ಸ್ವಪ್ನಸಾಮ್ರಾಜ್ಯದಲ್ಲಿ ಬಿದ್ದು ಒದ್ದಾಡುತ್ತಿರುತ್ತಾನೆ. ಇವನನ್ನು ಯಾವಾಗಲೂ ಭಯವು ಕಾಡಿಸುತ್ತಲೇ ಇರುತ್ತದೆ. ದುರ್ಬುದ್ಧಿಯಾದ ಇವನು ಯಾವ ಕಾರ್ಯವನ್ನೂ ವಿವೇಕದಿಂದ ಮಾಡುವವನಲ್ಲ. ಆದುದ ರಿಂದ ತಾನು ಅಕೃತ್ಯವನ್ನು ಮಾಡಿದ್ದೇನೆಂದು ಭಾವಿಸುವ ಇವನಿಗೆ ಸದಾಕಾಲ ದಲ್ಲಿಯೂ ಭಯವಿದ್ದೇ ಇರುತ್ತದೆ. ಭಯವಿದ್ದ ಮಾತ್ರದಿಂದ ಅಕೃತ್ಯದ ಫಲವು ದೂರವಾಗಿ ಬಿಡುವುದಿಲ್ಲ. ಅಕೃತ್ಯದ ಪರಿಣಾಮವಾಗಿ ಶೋಕಪಡುತ್ತಾನೆ. ಆಗಬಾರದುದೆಲ್ಲವೂ ಇವನಿಗೆ ಆಗುತ್ತಲೇ ಇರುತ್ತದೆ. ಅನಂತರ ತಾನು ಮಾಡಿದ ಅಕೃತ್ಯಕ್ಕಾಗಿ ವಿಷಾದಿಸುತ್ತಾನೆ. ಸಾತ್ವಿಕಧೃತಿಗೆ

ನಿಯಾಮಕವಾದುದು ಯೋಗ (ಚಿತ್ತವೃತ್ತಿನಿರೋಧ.) ರಾಜಸೀಧೃತಿಗೆ ನಿಯಾಮಕವಾದುದು ಪ್ರಸಂಗ. ಎಂದರೆ ವಿಷಯಗಳಲ್ಲಿ ಅತ್ಯಂತವಾದ ಆಸಕ್ತಿ. ತಾಮಸೀಧೃತಿಗೆ ನಿಯಾಮಕವಾದುದು ಅಕೃತ್ಯ, ಭಯ, ಶೋಕ, ವಿಷಾದ ಮತ್ತು ಮದ. ಇವುಗಳು ಇವನ ಅವಸಾನಪರ್ಯಂತವಾಗಿ ಬರುತ್ತಲೇ ಇರುತ್ತವೆ. ಮಂದಬುದ್ಧಿಯವನಾದ ಇವನು ಇವುಗಳನ್ನು ಅನುಭವಿಸುತ್ತಿರುತ್ತಾನೆಯೇ ಹೊರತು ಇದರಿಂದ ಇವನಿಗೆ ವಿವೇಕವು ಬಂದುಬಿಡುವುದಿಲ್ಲ. ಇವನಲ್ಲಿರುವ ಧೃತಿಯು ಈ ಸ್ವಪ್ನ, ಭಯ, ಶೋಕ, ವಿಷಾದಗಳನ್ನು ಧರಿಸಿಕೊಂಡಿರುವುದೇ ಇದಕ್ಕೆ ಕಾರಣವಾಗಿರುತ್ತದೆ. ಜೊತೆಗೆ ಇವನ ಧಾರಣಾಶಕ್ತಿಯಲ್ಲಿ ಮದವೂ ಸೇರಿಕೊಂಡಿರುತ್ತದೆ. ಅನ್ಯಾಯದಿಂದ ಧನವನ್ನು ಸಂಪಾದಿಸುವುದು ; ಬಲಾತ್ಕಾರದಿಂದ ಸ್ತ್ರೀಯನ್ನು ಉಪಭೋಗಿಸುವುದು ; ಅದರಿಂದಲೇ ತನಗೆ ಸಮಾನರಿಲ್ಲವೆಂದು ಹೆಮ್ಮೆ ಪಡುವುದು, ಉನ್ಮತ್ತನಾಗಿರುವುದು–ಇದಕ್ಕೆ ಮದ ಎಂದು ಹೆಸರು. ಇಂತಹ ಮದವೂ ಸಹ ತಾಮಸಧೃತಿಯಿರುವವರನ್ನು ಆವರಿಸಿರುತ್ತದೆ. ದುಷ್ಟಬುದ್ಧಿ ಯವನಾದವನಿಗೆ ಇವುಗಳನ್ನು ಬಿಡಲು ಸಾಧ್ಯವೇ ಆಗುವುದಿಲ್ಲ. ಯಾವನ ಧಾರಣಾಶಕ್ತಿಯು ಅಥವಾ ಧೃತಿಯು ಸ್ವಪ್ನ, ಭಯ, ಶೋಕ, ವಿಷಾದ, ಮದ ಗಳನ್ನು ಧರಿಸಿರುವುದೋ ಆ ಧೃತಿಗೆ (ಧಾರಣಾಶಕ್ತಿಗೆ) ತಾಮಸೀಧೃತಿಯೆಂದು ಹೆಸರು.)

o o o

ಕುತ್ಸಿತವಾದ ಬುದ್ಧಿಯುಳ್ಳ ಮನುಷ್ಯನು ತನ್ನ ಯಾವ ಧೃತಿಯಿಂದ ನಿದ್ರೆ, ಭಯ, ಶೋಕ, ಖಿನ್ನತೆ ಮತ್ತು ಮದಗಳನ್ನು ಬಿಡುವುದಿಲ್ಲವೋ ಎಂದರೆ ವಿಷಯಸೇವನೆಯನ್ನೇ ತನ್ನ ಮಹಾಪುರುಷಾರ್ಥವೆಂದು ಭಾವಿಸಿ ಉನ್ಮತ್ತನಂತೆ ಮನಸ್ಸಿನಲ್ಲಿ ಮದವನ್ನೇ ಸದಾ ಕರ್ತವ್ಯವೆಂದು ತಿಳಿಯುತ್ತಾ ಅವುಗಳನ್ನು ಬಿಡುವುದಿಲ್ಲವೋ, ಧರಿಸಿಕೊಂಡೇ ಇರುತ್ತಾನೆಯೋ ಅಂತಹವನ ಧೃತಿಯು ತಾಮಸೀಧೃತಿ ಎನಿಸುತ್ತದೆ. (ಶಂ. ಭಾ.)

ದುಷ್ಟವಾದ ಮೇಧೆಯನ್ನು ಹೊಂದಿರುವುದರಿಂದ ಮನುಷ್ಯನು ನಿದ್ರೆ, ಮದ, (ವಿಷಯಾನುಭವದಿಂದ ಉಂಟಾದ ಮದ ), ಭಯ, ಶೋಕ, ವಿಷಾದ ಇವುಗಳನ್ನು ಬಿಡುವುದಿಲ್ಲವೋ–ನಿದ್ರೆ ಮತ್ತು ಮದಗಳಲ್ಲಿ ತೊಡ

ಗಿದ್ದು ಮನಸ್ಸು, ಪ್ರಾಣ–ಮುಂತಾದುವುಗಳ ಕ್ರಿಯೆಗಳನ್ನು ಬಿಡದೇ ಧರಿಸಿ ಕೊಂಡಿರುತ್ತಾನೆಯೋ ಆ ಧೃತಿಯು ತಾಮಸೀಧೃತಿಯೆನಿಸುತ್ತದೆ. ಭಯ, ಶೋಕ ಮತ್ತು ವಿಷಾದಶಬ್ದಗಳು ಅವುಗಳನ್ನು ಕೊಡುವ ವಿಷಯಗಳನ್ನು ಹೇಳುತ್ತವೆ. ಅವುಗಳಿಗೆ ಸಾಧಕವಾದ ಮನಸ್ಸು, ಪ್ರಾಣ ಮುಂತಾದ ಕ್ರಿಯೆ ಗಳನ್ನು ಯಾವ ಧೃತಿಯಿಂದ ಧರಿಸುತ್ತಾನೆಯೋ ಅದು ತಾಮಸೀಧೃತಿ.

(ರಾ. ಭಾ.)

ಭೀರುವಿಗೆ ಧೃತಿಯಿರುವುದು ವಿರುದ್ಧವಲ್ಲವೇ?–ಎಂದು ಆಶಂಕೆ ಮಾಡಬಾರದು. ದುರ್ಮತಿಯಾದವನು ಮುಂದೆ ಬರುವುದನ್ನು (ಮುಂದೆ ಬರುವ ಭಯವನ್ನು) ಗಮನಿಸದೇ ಇರುವುದರಿಂದ ಅದಕ್ಕೆ ಯಾವುದು ಕಾರಣವೋ ಅದನ್ನೇ ಅನುವರ್ತಿಸುತ್ತಾನೆ. ಭಯವನ್ನು ಕೊಡುವ ವಿಷಯವು ದುರಭಿಮಾನಮೂಲಕವಾದ ಪ್ರಬಲಶತ್ರುವಿರೋಧವೇ ಮುಂತಾದುವು. ಶೋಕದಾಯಕವಾದ ವಿಷಯವೆಂದರೆ, ಕೋಪ ಮುಂತಾದುವುಗಳಿಂದ ಉಂಟಾದ ಬಂಧುವಧೆ ಮುಂತಾದುವು. ವಿಷಾದವನ್ನು ಉಂಟುಮಾಡುವ ವಿಷಯವೆಂದರೆ ವ್ಯರ್ಥವಾಗಿ ಹಣವನ್ನು ವ್ಯಯಮಾಡುವಿಕೆ ಮುಂತಾದುವು.

(ವೇದಾಂತದೇಶಿಕರು.)

ಸ್ವಪ್ನ, ಭಯ–ಮುಂತಾದುವು ಎಲ್ಲ ನಿಷಿದ್ಧವಸ್ತುಗಳನ್ನೂ ಸೂಚಿಸು ತ್ತವೆ. (ಮ. ಟೀಕಾ)

ಓಂ ಸುಖಂ ತ್ವಿದಾನೀಂ ತ್ರಿವಿಧಂ ಶೃಣು ಮೇ ಭರತರ್ಷಭ ।
ಅಭ್ಯಾಸಾದ್ರಮತೇ ಯತ್ರ ದುಃಖಾನ್ತಂ ಚ ನಿಗಚ್ಛತಿ ॥೩೬॥
ಓಂ ಯತ್ತದಗ್ರೇ ವಿಷಮಿವ ಪರಿಣಾಮೇಽಮೃತೋಪಮಮ್ ।
ತತ್ಸುಖಂ ಸಾತ್ತ್ವಿಕಂ ಪ್ರೋಕ್ತಮಾತ್ಮಬುದ್ಧಿಪ್ರಸಾದಜಮ್ ॥೩೭॥

ಭರತಶ್ರೇಷ್ಠನೇ! ಈಗ ಮೂರು ವಿಧವಾದ ಸುಖವನ್ನೂ ಹೇಳುತ್ತೇನೆ, ಕೇಳು. ಯಾವುದರಲ್ಲಿ ಅಭ್ಯಾಸದಿಂದ ರಮಿಸುವನೋ, ದುಃಖದ ಅವಸಾನ ವನ್ನೂ ಹೊಂದುವನೋ, ಯಾವುದು ಮೊದಲು ವಿಷದಂತೆಯೂ–ಪರಿ ಣಾಮದಲ್ಲಿ ಅಮೃತದಂತೆಯೂ ಇರುವುದೋ ಆತ್ಮನ ಸಂಬಂಧದ ಬುದ್ಧಿಯ

ಪ್ರಸನ್ನತೆಯಿಂದ ಉಂಟಾದ ಆ ಸುಖವು ಸಾತ್ತ್ವಿಕಸುಖ ಎಂಬುದಾಗಿ ಹೇಳಲ್ಪಡುತ್ತದೆ.

*　　　*　　　*

('ಮೂರು ವಿಧವಾದ ಸುಖಗಳನ್ನು ಹೇಳುತ್ತೇನೆ, ಕೇಳು'–ಎಂದು ಅರ್ಜುನನಿಗೆ ಹೇಳುತ್ತಾನೆ ಶ್ರೀಕೃಷ್ಣ.

ಸುಖ ಎಂದರೆ ಮನಸ್ಸಿನ ಮೂಲಕವಾಗಿ ಒಳಗೆ ಆಗುವ ಒಂದು ಪ್ರತಿಕ್ರಿಯೆ. ಅನುಭವೈಕವೇದ್ಯವಾದುದು. ವರ್ಣಿಸಲು ಸಾಧ್ಯವಾಗದೇ ಇರತಕ್ಕದ್ದು. 'ಹಾಸಿಗೆಯ ಮೇಲೆ ಮಲಗಿದೆನು ; ಸುಖವಾಗಿ ನಿದ್ದೆ ಹತ್ತಿತು" ಎಂದು ಸ್ವಾನುಭವವನ್ನು ಹೇಳಬಹುದೇ ಹೊರತು 'ಸುಖ' ಎಂಬುದಕ್ಕೆ ಯಾವ ವಿಧವಾದ ವಿವರಣೆಯನ್ನೂ ಕೊಡಲು ಸಾಧ್ಯವಾಗುವುದಿಲ್ಲ. ಇಂತಹ ಅನಿರ್ವಾಚ್ಯವಾದ ಸುಖದಲ್ಲಿಯೂ ಮೂರು ವಿಧಗಳಿವೆ ಎನ್ನುತ್ತಾನೆ ಶ್ರೀಕೃಷ್ಣ. ಮೊದಲನೆಯದಾಗಿ ಸಾತ್ತ್ವಿಕಸುಖವನ್ನು ವರ್ಣಿಸುತ್ತಾನೆ. **ಅಭ್ಯಾಸಾದ್ರಮತೇ** = ಅಭ್ಯಾಸ ಎಂದರೆ ಆವೃತ್ತಿ. ಆವೃತ್ತಿಯಿಂದ ಈ ಸಾತ್ತ್ವಿಕಸುಖದ ಪರಿಚಯವಾಗಿ ಮನುಷ್ಯನು ಆನಂದಪಡುತ್ತಾನೆ. ಯಾವುದರ ಅಭ್ಯಾಸ? ಎಂದರೆ : ಆತ್ಮಾನುದರ್ಶನದ ಅಭ್ಯಾಸ. ಧ್ಯಾನಯೋಗದ ಮೂಲಕವಾಗಿ ಆತ್ಮದರ್ಶನಕ್ಕೆ ಪದೇ ಪದೇ ಪ್ರಯತ್ನಿಸುತ್ತಿರುವುದು. ಆತ್ಮದರ್ಶನವಾದ ಮೇಲೂ ಅದೇ ರೀತಿಯಲ್ಲಿ ಹೆಚ್ಚುಕಾಲ ಇರಲಾಗುವುದಿಲ್ಲ. ಸ್ವಲ್ಪಹೊತ್ತು ಆತ್ಮಾನುಭವವನ್ನು ಪಡೆದುಕೊಂಡನಂತರ ಪುನಃ ಬಹಿರ್ಮುಖನಾಗಲೇ ಬೇಕಾಗುತ್ತದೆ. ಪುನಃ ಧ್ಯಾನದ ಮೂಲಕ ಆತ್ಮಾನುಭವವನ್ನು ಪಡೆದುಕೊಳ್ಳಬೇಕು. ಆತ್ಮಾನುಭವದ ಅಥವಾ ಆತ್ಮದರ್ಶನದ ಸಮಯದಲ್ಲಿ ಆಗುವ ಸುಖವು ಅನಿರ್ವಚನೀಯ. ಅನುಭವಿಸಲು ಮಾತ್ರವೇ ಸಾಧ್ಯವಾಗುತ್ತದೆ. ಅದನ್ನು ವರ್ಣಿಸುವುದಕ್ಕೆ ಆಗುವುದಿಲ್ಲ.

**ದುಃಖಾನ್ತಂ ಚ ನಿಗಚ್ಛತಿ** = ಈ ಆತ್ಮಸುಖವನ್ನು ಬಿಟ್ಟು ಬೇರೆ ಯಾವುದೇ ಸುಖವಾದರೂ ಅದರ ಹಿಂದೆ ದುಃಖವೆಂಬುದು ಇದ್ದೇ ಇರುತ್ತದೆ. ಆದರೆ ಆತ್ಮಸುಖವನ್ನು ಪಡೆದುಕೊಂಡನಂತರ ದುಃಖವೆಂಬುದಿರುವುದಿಲ್ಲ. ಈ ಆತ್ಮಸುಖವು ದುಃಖದ (ಸಂಸಾರಸಾಗರದ) ಅಂತವನ್ನು ಹೊಂದಿಸುತ್ತದೆ. ಆತ್ಮಸಾಧನೆಯು ಮೊದಲು ವಿಷದಷ್ಟೇ ಕಠೋರ

ವಾಗಿರುತ್ತದೆ. ಸುಲಭಸಾಧ್ಯವಲ್ಲ. ಜನ್ಮ-ಜನ್ಮಾಂತರಗಳ ಸಾಧನೆಯು ಬೇಕು. ಅವಿಚ್ಛಿನ್ನವಾದ ಸಾಧನೆಯಾಗಬೇಕು. ತಪಸ್ಸು ಮಾಡಬೇಕು. ಯಮ-ನಿಯಮಾದಿಗಳನ್ನು ಪಾಲನೆಮಾಡಬೇಕು. ಆಸನಾದಿಗಳನ್ನು ಮಾಡುವಾಗ ಉಂಟಾಗುವ ಶಾರೀರಕಶ್ರಮ ಮತ್ತು ಧ್ಯಾನದ ಪ್ರಯತ್ನದಲ್ಲಿ ಉಂಟಾಗುವ ಮನಸ್ಸಿನ ಮಥನವನ್ನು ಅನುಭವಿಸಬೇಕು. ಮರ್ಯಾದೆಯನ್ನು ಮೀರಿದ ವಿಷಯಸುಖಗಳನ್ನು ತ್ಯಾಗಮಾಡಬೇಕು. ಇವೆಲ್ಲವೂ ಅತ್ಯಂತಕಷ್ಟದ ಕೆಲಸಗಳು. ಆದುದರಿಂದ ಆತ್ಮಸುಖಸಾಧನೆಯು ಮೊದಲು ವಿಷದಂತೆಯೇ ಇರುತ್ತದೆ. ಇದನ್ನು ಕಠೋಪನಿಷತ್ತು–'ಕತ್ತಿಯ ಅಲುಗಿನ ಮೇಲೆ ನಡೆದಂತೆ'–ಎಂದು ಹೇಳುತ್ತದೆ. **ಕ್ಷುರಸ್ಯ ಧಾರಾ ನಿಶಿತಾ ದುರತ್ಯಯಾ ದುರ್ಗಂ ಪಥಸ್ತತ್ಕವಯೋ ವದನ್ತಿ ।** ಸಾಧನೆಯನ್ನು ಮುಂದುವರಿಸಲು ಅಸಾಧ್ಯವಾಗಿಯೇ ಕಾಣುತ್ತದೆ. ಆದರೆ ಪರಿಣಾಮದಲ್ಲಿ ಮಾತ್ರ ಅಮೃತೋಪಮವಾಗಿರುತ್ತದೆ. ಅಮೃತೋಪಮ ಎಂದರೆ ಅಮೃತಕ್ಕೆ ಸಮಾನವಾಗಿರುವಂತೆ ಆಗುತ್ತದೆ. ಅಮೃತಕ್ಕೆ ಸಮಾನವಾದುದು ಅಮೃತವೇ ಹೊರತು ಬೇರೊಂದು ವಸ್ತುವಲ್ಲ. ಆದುದರಿಂದ ಪರಿಣಾಮದಲ್ಲಿ ಅಮೃತ ಎಂದರೆ ಶಾಶ್ವತವಾದ ಸುಖವೇ ಲಭ್ಯವಾಗುತ್ತದೆ. ಇದು ಆತ್ಮಬುದ್ಧಿಪ್ರಸಾದದಿಂದ ಹುಟ್ಟಿದ್ದು–ಆತ್ಮಬುದ್ಧಿಯೆಂದರೆ ಆತ್ಮನ ಸಂಬಂಧವನ್ನು ಪಡೆದ ಬುದ್ಧಿ ; ಆತ್ಮನ ಸಂಬಂಧವನ್ನು ಪಡೆದ ಬುದ್ಧಿಯ ಪ್ರಸನ್ನತೆಯಿಂದ ಹುಟ್ಟಿದ್ದು ಈ ಸುಖ. ಅರ್ಥಾತ್ ಆತ್ಮದರ್ಶನದಿಂದ ಪ್ರಾಪ್ತವಾದ ಸುಖ. ಈ ಸುಖವು ಸಾತ್ತ್ವಿಕಸುಖ ಎನಿಸಿಕೊಳ್ಳುತ್ತದೆ.

ಕ್ಷೀರಸಮುದ್ರಮಥನದ ಕಥೆಯಲ್ಲಿ ಪ್ರಾರಂಭದಲ್ಲಿ ಹಾಲಾಹಲವಿಷವು ಕಾಣಿಸಿಕೊಂಡರೂ ಸಾಧನೆಯನ್ನು ಮುಂದುವರಿಸಿದಾಗ ಕಟ್ಟಕಡೆಯಲ್ಲಿ ಅಮೃತವು ಪ್ರಾಪ್ತಿಯಾಯಿತು–ಎಂಬ ಧ್ವನಿಯನ್ನು ಇಲ್ಲಿ ಗಮನಿಸಬಹುದು.)

O O O

ಶೃಣು = ಕೇಳು. ಕೇಳುವುದಕ್ಕೋಸ್ಕರ ಚಿತ್ತವನ್ನು ಸಮಾಹಿತವನ್ನಾಗಿ ಮಾಡಿಕೋ.

ಸಾತ್ತ್ವಿಕಸುಖವು ಮೊದಲಿಗೆ ಎಂದರೆ ಜ್ಞಾನ-ವೈರಾಗ್ಯ-ಧ್ಯಾನ-

ಸಮಾಧಿಗಳ ಆರಂಭದಲ್ಲಿ ಅತ್ಯಂತಾಯಾಸದಿಂದ ಸಾಧ್ಯವಾಗುವುದರಿಂದ ವಿಷದಂತೆ ದುಃಖಾತ್ಮಕವಾಗಿರುತ್ತದೆ. ಆದರೆ ಪರಿಣಾಮದಲ್ಲಿ ಜ್ಞಾನ-ವೈರಾಗ್ಯ ಮುಂತಾದುವುಗಳ ಪರಿಪಾಕದಲ್ಲಿ ಉಂಟಾಗುವ ಅದೇ ಸುಖವು ಅಮೃತಕ್ಕೆ ಸಮಾನವಾಗುತ್ತದೆ. (ಶಂ. ಭಾ.)

ಹಿಂದೆ ಹೇಳಿದ ಜ್ಞಾನ, ಕರ್ಮ, ಕರ್ತೃ–ಮುಂತಾದ ಎಲ್ಲವೂ ಯಾವುದಕ್ಕೆ ಅಧೀನವಾಗಿದೆಯೋ, ಗುಣದಿಂದ ಮುಬ್ಬಗೆಯಾಗಿರುವ ಆ ಮೂರು ಬಗೆಯ ಸುಖವನ್ನು ಹೇಳುತ್ತೇನೆ, ಕೇಳು.

ಚಿರಕಾಲ ಅಭ್ಯಾಸಮಾಡಿದರೆ ಕ್ರಮವಾಗಿ ಆ ಸುಖದಲ್ಲಿ ನಿರತಿಶಯವಾದ ರತಿಯನ್ನು ಹೊಂದುತ್ತಾನೆ. ಎಲ್ಲ ಸಾಂಸಾರಿಕದುಃಖಗಳ ಕೊನೆಯನ್ನು ಹೊಂದುತ್ತಾನೆ.

ಆ ಸುಖದ ವಿವರಣೆ ಹೀಗಿದೆ :

ಆ ಸುಖವು ಯೋಗದ ಪ್ರಾರಂಭಸಮಯದಲ್ಲಿ ದುಃಖದಂತೆ ಇರುತ್ತದೆ. ಏಕೆಂದರೆ ಬಹಳ ಆಯಾಸದಿಂದ ಅದನ್ನು ಸಾಧಿಸಬೇಕಾಗುತ್ತದೆ ಮತ್ತು ವಿವಿಕ್ತವಾದ ಆತ್ಮಸ್ವರೂಪವು ಹಿಂದೆ ಅನುಭವಕ್ಕೆ ಬಂದ ವಿಷಯವೂ ಆಗಿರುವುದಿಲ್ಲ. ಈ ಕಾರಣಗಳಿಂದ ಪ್ರಾರಂಭದಲ್ಲಿ ದುಃಖದಂತೆ ಇದ್ದರೂ ಪರಿಣಾಮದಲ್ಲಿ ಅಮೃತಕ್ಕೆ ಸಮಾನವಾಗಿರುತ್ತದೆ. ಪರಿಪಕ್ವಾವಸ್ಥೆಯಲ್ಲಿ ಅಭ್ಯಾಸಬಲದಿಂದ ವಿವಿಕ್ತವಾದ ಪ್ರಕೃತಿಯಿಂದ ಬೇರೆಯಾಗಿರುವ ಆತ್ಮಸುಖವು ಆವಿರ್ಭವಿಸಿದಾಗ ಅಮೃತಕ್ಕೆ ಸಮಾನವಾಗಿರುತ್ತದೆ ಮತ್ತು ಅದು ಆತ್ಮಬುದ್ಧಿಯ ಪ್ರಸಾದದಿಂದ ಉಂಟಾಗುತ್ತದೆ. ಬುದ್ಧಿಯ ಪ್ರಸಾದ ಎಂದರೆ ಉಳಿದ ಎಲ್ಲ ವಿಷಯಗಳನ್ನೂ ಕಳೆದುಕೊಳ್ಳುವಿಕೆ. ಉಳಿದ ಎಲ್ಲ ವಿಷಯಗಳನ್ನು ಕಳೆದುಕೊಂಡ ಅಂತಹ ಶುದ್ಧವಾದ ಬುದ್ಧಿಯಿಂದ ಕೇವಲ ಸ್ವಭಾವವಾದ ಆತ್ಮಾನಂದದಿಂದ ಉಂಟಾಗುವ ಸುಖವು ಅಮೃತಕ್ಕೆ ಸಮಾನವಾಗಿರುತ್ತದೆ. ಆ ಸುಖವು ಸಾತ್ತ್ವಿಕಸುಖ ಎನಿಸುತ್ತದೆ. (ರಾ. ಭಾ.)

**ದುಃಖಾನ್ತಂ** = ದುಃಖದ ನಾಶವನ್ನು. **ನಿಗಚ್ಛತಿ** = ಸಂಪೂರ್ಣವಾಗಿ ಮತ್ತು ಖಂಡಿತವಾಗಿ ಹೊಂದುತ್ತಾನೆ. **ಆತ್ಮಬುದ್ಧಿಪ್ರಸಾದಜಮ್**

ವಿಷ್ಣುವಿನ ಪ್ರಸಾದದಿಂದ ಉಂಟಾಗುವ ಬುದ್ಧಿಯ ಪ್ರಸನ್ನತೆಯಿಂದ ತಾನಾಗಿಯೇ ವಿಷಯಗಳಲ್ಲಿ ಪ್ರವರ್ತಿಸದೇ ಇರುವುದರಿಂದ ಉಂಟಾದ.

(ಮ. ಟೀಕಾ)

**ಓಂ ವಿಷಯೇನ್ದ್ರಿಯಸಂಯೋಗಾದ್ಯತ್ತದಗ್ರೇऽಮೃತೋಪಮಮ್ ।**
**ಪರಿಣಾಮೇ ವಿಷಮಿವ ತತ್ಸುಖಂ ರಾಜಸಂ ಸ್ಮೃತಮ್ ॥೩೮॥**

ವಿಷಯ ಮತ್ತು ಇಂದ್ರಿಯಗಳ ಸೇರುವಿಕೆಯಿಂದ ಯಾವ ಸುಖವು ಮೊದಲು ಅಮೃತೋಪಮವಾಗಿರುವುದೋ, ಪರಿಣಾಮದಲ್ಲಿ ವಿಷದಂತೆ ಇರುವುದೋ–ಆ ಸುಖವು ರಾಜಸವೆನಿಸುವುದು.

* * *

(ಇಂದ್ರಿಯಗಳು ಮತ್ತು ಅವಕ್ಕೆ ಬೇಕಾದ ವಿಷಯಗಳ ಸಂಯೋಗವಾದೊಡನೆಯೇ ಸುಖವುಂಟಾಗುವುದು. ಈ ಸುಖಕ್ಕೆ ಹೆಚ್ಚೇನೂ ಕಷ್ಟಪಡಬೇಕಾಗಿಲ್ಲ. ತಪಸ್ಸು ಮಾಡಬೇಕಾಗಿಲ್ಲ. ಮನೋನಿಗ್ರಹವು ಇದಕ್ಕೆ ಅವಶ್ಯವಿಲ್ಲ. ಮನಸ್ಸಿನ ಸ್ವೇಚ್ಛಾವರ್ತನೆಯೇ ಇಂದ್ರಿಯಸುಖಕ್ಕೆ ಹೆದ್ದಾರಿ. ಇದು ಮೊದಲು-ಮೊದಲು ಅಮೃತದಂತೆ ಭಾಸವಾಗುತ್ತದೆ. ಆದರೆ ಇದರ ಪರಿಣಾಮ ವಿಷಮಯವಾಗುತ್ತದೆ. ಗಾಳದ ತುದಿಯಲ್ಲಿರುವ ಹುಳುವನ್ನು ಮೀನು ಚಾಪಲ್ಯದಿಂದ ತಿನ್ನಲು ಬರುತ್ತದೆ. ತಿನ್ನುತ್ತಿರುವಾಗಲೇ, ಸುಖವನ್ನನುಭವಿಸುತ್ತಿರುವಾಗಲೇ ಗಾಳಕ್ಕೇ ಸಿಕ್ಕಿಬಿದ್ದು ಸಾಯುತ್ತದೆ. ವಿಷಯಸುಖದ ಪರಿಣಾಮವೂ ಇಷ್ಟೇ. ವಿಷಯಸುಖಕ್ಕೆ ಮಾರುಹೋಗಿ ಮಾನವನು ಸಂಸಾರವೆಂಬ ಗಾಳಕ್ಕೆ ಸಿಕ್ಕಿಬೀಳುತ್ತಾನೆ. ಅನಂತರ ಅದರಿಂದ ತಪ್ಪಿಸಿಕೊಳ್ಳಲಾಗದೇ ಬಳಲಿ ಬೆಂಡಾಗಿ ಹಾನಿಹೊಂದುತ್ತಾನೆ. ಇಂದ್ರಿಯಸುಖಗಳೆಂಬುದು ಇಂದ್ರಿಯಗಳಲ್ಲಿ ಪಟುತ್ವವಿರುವವರಿಗೆ ಮಾತ್ರ. ಇಂದ್ರಿಯಪಟುತ್ವವಿದ್ದಾಗಲೂ ಸಹ ಮೇರೆಮೀರಿ 'ಸುಖ'ವನ್ನು ಅನುಭವಿಸಲು ಹೋದರೆ ನಾನಾವಿಧವಾದ ರೋಗಗಳಿಗೆ ಗುರಿಯಾಗಿ ಇಲ್ಲಿಯೇ ನರಕಯಾತನೆಯನ್ನು ಅನುಭವಿಸಬೇಕಾಗುತ್ತದೆ. ಒಂದು ಇಂದ್ರಿಯಕ್ಕೆ ಸುಖನೀಡುವ ಪದಾರ್ಥವು ಹಲವಾರು ದಿವಸಗಳಲ್ಲಿಯೇ ವಿಷವೂ ಆಗಬಹುದು. ಉದಾಹರಣೆಗೆ ಒಬ್ಬನಿಗೆ ಸಿಹಿತಿಂಡಿಯ ಮೇಲೆ ಹೆಚ್ಚು ಪ್ರೀತಿ. ಮೇಲೆ ಮೇಲೆ ತಿನ್ನುತ್ತಲೇ ಇರುತ್ತಾನೆ. ಕಾಲಾನುಕ್ರಮವಾಗಿ ಸಕ್ಕರೆ ರೋಗವು ಪ್ರಾರಂಭವಾಗುತ್ತದೆ. ಅವನಿಗೆ ಅತ್ಯಂತಪ್ರಿಯವಾದ ಸಿಹಿತಿಂಡಿಯನ್ನು

ಅನಂತರವೂ ತಿನ್ನುತ್ತಲೇ ಇದ್ದರೆ ಅದು ಅವನಿಗೆ ಮೃತ್ಯುವೇ ಆಗುತ್ತದೆ. ಅಮಿತವಾದ ಭೋಗಗಳಿಂದ ರೋಗಿಗಳಾಗಿರುವವರು ಅನೇಕರಿದ್ದಾರೆ. ಆದುದರಿಂದ ಈ ವಿಷಯಸುಖಗಳೆಲ್ಲವೂ ಮೊದಲು-ಮೊದಲು ಸುಖಕರ ವಾಗಿ ಕಾಣುತ್ತವೆ. ಕಡೆಕಡೆಗೆ ಅವೇ ಮಾರಕವಾಗಿಯೂ ಪರಿಣಮಿಸುತ್ತವೆ. ಒಂದು ಜಾತಿಯ ಹೂವಿದೆ. ಅದು ಅರಳಿ ತನ್ನಲ್ಲಿಗೆ ದುಂಬಿಗಳನ್ನು ಆಕರ್ಷಿಸುತ್ತದೆ. ದುಂಬಿಯು ಅದರೊಳಗೆ ಕುಳಿತೊಡನೆಯೇ ಅದರ ಎಸಳುಗಳು ಮುಚ್ಚಿಕೊಳ್ಳುತ್ತವೆ. ದುಂಬಿಗೆ ಹೊರಬರಲು ಸಾಧ್ಯವಾಗು ವುದಿಲ್ಲ. ಆ ಸಮಯಕ್ಕೆ ಸರಿಯಾಗಿ ಹೂವಿನಲ್ಲಿರುವ ಒಂದು ರಸವು ಹೊರ ಬಂದು ದುಂಬಿಯನ್ನು ಕರಗಿಸಿಬಿಡುತ್ತದೆ. ಅನಂತರ ಆ ಗಿಡಕ್ಕೆ ಅದೇ ಆಹಾರ ವಾಗಿ ಪರಿಣಮಿಸುತ್ತದೆ. ಇಂದ್ರಿಯಸುಖದ ಪರಿಣಾಮವೂ ಅಷ್ಟೆ. ಮಾನವನು ಇಂದ್ರಿಯಸುಖಕ್ಕೆ ಮರುಳಾಗಿ ವಿಷಯಗಳನ್ನು ಅರಸಿಕೊಂಡು ಹೊರಡುತ್ತಾನೆ. ಅದರಲ್ಲಿಯೇ ಲೀನವಾಗಿಯೂ ಬಿಡುತ್ತಾನೆ. ಆ ಸುಖವೇ ಕಬ್ಬನ್ನು ಅರೆಯುವ ಗಾಣದಂತೆ ಇವನಲ್ಲಿರುವ ಶಕ್ತಿಯೆಲ್ಲವನ್ನೂ ಹಿಂಡಿಹಾಕಿ ಗಾಣವು ಸಿಪ್ಪೆಯನ್ನು ಬಿಸುಡುವಂತೆ ಹೊರಕ್ಕೆ ಹಾಕಿಬಿಡುತ್ತದೆ. ಅನಂತರ ಅವನಿಗೆ ಇಹವೂ ಇಲ್ಲ ; ಪರವೂ ಇಲ್ಲ–ಎಂಬಂತಾಗುತ್ತದೆ. ಮನುಷ್ಯನ ಸ್ಥಿತಿಯನ್ನು ಸಾಮಾನ್ಯವಾಗಿಯೇ ತೆಗೆದುಕೊಂಡರೂ ಸಹ ಮನುಷ್ಯನ ಜೀವಮಾನದ ಮೊದಲಿನಲ್ಲಿ ಸಂಸಾರವು ಅಮೃತಮಯವಾಗಿ ಕಾಣುತ್ತದೆ. ಸಾಮಾನ್ಯವಾಗಿ ಜನರೆಲ್ಲರೂ ರಾಜಸಸುಖಿಗಳೇ ಆಗಿದ್ದಾರೆ. ಸಂಸಾರವು ದಃಖಮಯವೆಂಬುದನ್ನು ಮನಗಾಣುವ ವೇಳೆಗೆ ವೃದ್ಧಾಪ್ಯವು ಬಂದು ಮನುಷ್ಯನಿಗೆ ಚೇತನಾಶಕ್ತಿಯೇ ಉಡುಗಿಹೋಗಿರುತ್ತದೆ. ಸಾತ್ತ್ವಿಕ ಸುಖಾನುಭವಕ್ಕೆ ಅವಕಾಶವೇ ಇರುವುದಿಲ್ಲ. ಸಾತ್ತ್ವಿಕಸುಖವೆಂಬ ಪರಮಸುಖವಿದೆಯೆಂಬುದನ್ನು ಮನಗಾಣುವವರೂ ಸಹ ಬಹಳ ಕಡಿಮೆ. ಇಂದ್ರಿಯಗಳಿಗೆ ಬಹುಸುಲಭವಾಗಿ ಸಿಕ್ಕುವ ವಿಷಯಸುಖದಿಂದ ತೃಪ್ತಿಹೊಂದುವ ಆಸಕ್ತಿಯು ಮಾನವನಿಗಿರುವುದೇ ಹೊರತು ಇಂದ್ರಿಯಾ ತೀತವಾದ ಕಷ್ಟಸಾಧ್ಯವಾದ ಸಾತ್ತ್ವಿಕಸುಖವನ್ನು ಪಡೆದುಕೊಳ್ಳಬೇಕೆಂಬ ಇಚ್ಛೆಯೂ ಸಹ ಸಾಮಾನ್ಯರಿಗೆ ಉಂಟಾಗುವುದಿಲ್ಲ. ತಂದೆಯ ವೃದ್ಧಾಪ್ಯದ ದುಃಖವನ್ನು ಕಂಡು ಮಗನೇನೂ ಪಾಠಕಲಿಯುವುದಿಲ್ಲ. ತನ್ನ ವಿಷಯಸುಖಕ್ಕೆ ತೊಂದರೆ ಬಾರದಂತೆ ನೋಡಿಕೊಳ್ಳಲು ಮಗನು

ಹವಣಿಸುತ್ತಾನೆ. ಇದು ಹೀಗೆಯೇ ನಡೆಯುತ್ತಾ ಹೋಗುತ್ತದೆ. ಪ್ರಕೃತಿ ನಿಯಮವೇ ಹೀಗಿದೆ. ದುಂಬಿಯನ್ನು ಕಬಳಿಸುವ ಹೂವಿನ ಮೇಲೆ ಅದು ಅರಳಿದೊಡನೆಯೇ ಮತ್ತೊಂದು ದುಂಬಿಯು ಹೋಗಿ ಕುಳಿತುಕೊಳ್ಳುವಂತೆ 'ಇಂದ್ರಿಯಸುಖವು ಕ್ಷಣಿಕವಾದುದು ; ಕಡೆಯಲ್ಲಿ ವಿಷದ ಪರಿಣಾಮ ವನ್ನುಂಟುಮಾಡತಕ್ಕದ್ದು'–ಎಂದು ತಿಳಿದೂ ಸಹ ಮನುಷ್ಯರು ಅದನ್ನೇ ಬೆನ್ನಟ್ಟಿಹೋಗುತ್ತಲೇ ಇರುತ್ತಾರೆ. ಇಂತಹ ಸುಖಕ್ಕೆ ರಾಜಸಸುಖ ಎಂದು ಹೆಸರು.)

o o o

ವಿಷಯ ಮತ್ತು ಇಂದ್ರಿಯಗಳ ಸಂಯೋಗದಿಂದ ಯಾವ ಸುಖ ವುಂಟಾಗುತ್ತದೆಯೋ ಅದು ಮೊದಲನೇ ಕ್ಷಣದಲ್ಲಿ ಅಮೃತಕ್ಕೆ ಸಮನಾಗಿರು ತ್ತದೆ. ಆದರೆ ಪರಿಣಾಮದಲ್ಲಿ ವಿಷದಂತೆ ಆಗಿಬಿಡುತ್ತದೆ. ಬಲ, ವೀರ್ಯ, ರೂಪ, ಪ್ರಜ್ಞೆ, ಮೇಧೆ, ಧನ ಮತ್ತು ಉತ್ಸಾಹಗಳ ಹಾನಿಗೆ ಕಾರಣವಾಗು ವುದರಿಂದಲೂ, ಅಧರ್ಮ ಮತ್ತು ಅದರಿಂದುಂಟಾಗುವ ನರಕವೇ ಮುಂತಾದುವುಗಳಿಗೆ ಕಾರಣವಾಗುವುದರಿಂದಲೂ ಅದು ಪರಿಣಾಮದಲ್ಲಿ ಎಂದರೆ ಉಪಭೋಗವು ಮುಗಿದೊಡನೆಯೇ ವಿಷದಂತೆ ಆಗಿಬಿಡುತ್ತದೆ. ಈ ಸುಖವು ರಾಜಸ ಎನಿಸುತ್ತದೆ. (ಶಂ. ಭಾ.)

ಅನುಭವಸಮಯದಲ್ಲಿ ಯಾವುದು ವಿಷಯ ಮತ್ತು ಇಂದ್ರಿಯಗಳ ಸಂಯೋಗದಿಂದ ಅಮೃತದಂತೆ ಇರುತ್ತದೆಯೋ ಮತ್ತು ಪರಿಣಾಮದಲ್ಲಿ ವಿಷಯಗಳ ಸುಖತ್ವನಿಮಿತ್ತಕ್ಕೆ ಕಾರಣವಾದ ಹಸಿವು ಮುಂತಾದುವು ಇಂಗಿದ ಬಳಿಕ ಆ ಸುಖವು ನರಕವೇ ಮುಂತಾದುವುಗಳಿಗೆ ಕಾರಣವಾಗುವುದರಿಂದ ಕುಡಿದ ವಿಷದಂತಾಗಿಬಿಡುತ್ತದೆಯೋ–ಆ ಸುಖವು ರಾಜಸ ಎನಿಸುತ್ತದೆ.

(ರಾ. ಭಾ.)

ಓಂ ಯದಗ್ರೇ ಚಾನುಬನ್ಧೇ ಚ ಸುಖಂ ಮೋಹನಮಾತ್ಮನಃ ।
ನಿದ್ರಾಲಸ್ಯಪ್ರಮಾದೋತ್ಥಂ ತತ್ತಾಮಸಮುದಾಹೃತಮ್ ॥೩೯॥

ಯಾವ ಸುಖವು ಮೊದಲೂ, ಅನುಭವದಲ್ಲಿಯೂ, ಪರಿಣಾಮ

ದಲ್ಲಿಯೂ ತನಗೆ ಮೋಹಕವಾಗಿರುವುದೋ–ನಿದ್ರೆ, ಆಲಸ್ಯ ಮತ್ತು ಪ್ರಮಾದ ಇವುಗಳಿಂದುಂಟಾಗುವ ಆ ಸುಖವು ತಾಮಸವೆನಿಸುವುದು.

* * *

(ಸಾತ್ತ್ವಿಕಸುಖದಲ್ಲಿ ಮೊದಲು ಕಷ್ಟ ; ಕಡೆಗೆ ಸುಖ. ರಾಜಸಸುಖದಲ್ಲಿ ಮೊದಲು ಸುಖ ; ಕಡೆಗೆ ಕಷ್ಟ. ತಾಮಸಸುಖದಲ್ಲಿ ಮೊದಲಿನಿಂದ ಕಡೆಯವರೆಗೂ ಸುಖವಾಗಿರುವಂತೆ ಭಾಸವಾದರೂ ಶೋಕಮಯವಾಗಿರುತ್ತದೆ. ಆತ್ಮನಃ ಮೋಹನಂ = ಮನಸ್ಸಿನ ಮೋಹ ಎಂದರೆ ಮನಸ್ಸಿಗೆ ಮೋಹಕವಾಗಿರುತ್ತದೆ ತಾಮಸಿಕಸುಖ. ಹೇಗೆ? ಎಂದರೆ : ಮೊದಲನೆಯದಾಗಿ ನಿದ್ರೆ. ನಿದ್ರೆಯೇನೋ ಎಲ್ಲರಿಗೂ ಬೇಕು. ನಿದ್ರೆಯಿಂದ ಸುಖವು ಸಿಕ್ಕುವುದೂ ನಿಜ. ಆದರೆ ಅದಕ್ಕೆ ಒಂದು ಮಿತಿಯಿರಬೇಕು. ಸರ್ವದಾ ನಿದ್ರೆಮಾಡುತ್ತಲೇ ಇರುವುದು ಸುಖವೆಂದು ತಾಮಸಿಗೆ ಭಾಸವಾಗುತ್ತದೆ. ಆದರೆ ಸಾತ್ತ್ವಿಕನಾಗಲೀ–ರಾಜಸನಾಗಲೀ ಇದನ್ನು ಒಪ್ಪುವುದಿಲ್ಲ. ಸರ್ವದಾ ನಿದ್ರೆಮಾಡುತ್ತಿದ್ದರೆ ಕರ್ತವ್ಯಭ್ರಷ್ಟನಾಗಬೇಕಾಗುವುದೆಂದು ಅವರು ಎಣಿಸುವರು. ತಾಮಸಿಗೆ ನಿದ್ರೆಮಾಡುವುದೊಂದೇ ಕರ್ತವ್ಯ. ಅದರಿಂದಲೇ ಅವನಿಗೆ ಸುಖ. ದಿನಕ್ಕೆ ಹದಿನೆಂಟು ತಾಸು ನಿದ್ರೆಮಾಡಿದರೂ ಅದರಿಂದ ಅವನಿಗೆ ತೃಪ್ತಿಯಿಲ್ಲ. ನಿದ್ರೆಯಿಂದ ಏಳಬೇಕಾದರೆ ಸಂಕಟಪಡುತ್ತಾನೆ. ಕರ್ತವ್ಯಕರ್ಮಗಳ ಕಡೆಗೆ ಧರ್ಮಕಾರ್ಯಗಳ ಕಡೆಗೆ ಅವನ ದೃಷ್ಟಿಯಿಲ್ಲ. ಅವುಗಳನ್ನು ಮಾಡುವುದರ ಬದಲು ಅಷ್ಟು ಹೊತ್ತು ನಿದ್ರೆಮಾಡಿದರೆ ಕೃತಾರ್ಥ ಎಂದು ಅಂದುಕೊಳ್ಳುತ್ತಾನೆ. ಆಲಸ್ಯಂ = ಯಾವಾಗಲೂ ಮೈಮುರಿಯುತ್ತಲೇ ಇರುತ್ತಾನೆ. ಅತಿನಿದ್ರೆಮಾಡುವುದರಿಂದ ಅವನಿಗೆ ಹೆಚ್ಚಿನ ಆಯಾಸವೇ ಆಗುತ್ತದೆ. ಆಲಸ್ಯದಿಂದಾಗಿ ಯಾವ ವಿಧವಾದ ಕರ್ಮಗಳನ್ನು ಮಾಡಲೂ ಸಹ ಅವನು ಅಸಮರ್ಥನಾಗುತ್ತಾನೆ. ಅವನಿಗೆ ಯಾವ ಕಾರ್ಯವನ್ನು ಮಾಡುವುದೂ ಬೇಡವಾಗುತ್ತದೆ. ಕುಳಿತು ಕಾಲಕಳೆಯುವುದೆಂದರೆ ಅದೇ ಅವನಿಗೆ ಪರಮ ಸುಖ. ಹೀಗಾಗಿ ಅವನು ರಾಜಸಿಯಂತೆ ಐಹಿಕ ಮತ್ತು ಆಮುಷ್ಮಿಕ ಫಲಗಳನ್ನು ಕೊಡುವ ಕರ್ಮಗಳನ್ನು ಮಾಡುವವನಲ್ಲ. ಪ್ರಮಾದಃ = ಒಂದು ವೇಳೆ ಯಾವುದಾದರೂ ಕಾರ್ಯಮಾಡಲು ಹೋದರೂ

ಸಹ ತಪ್ಪಾಗಿ ಮಾಡುವುದು ; ಫಲವು ದೊರೆಯದಂತೆ ಮಾಡುವುದು–ಇದೇ ಅವನ ಸಹಜಸ್ವಭಾವವಾಗಿರುತ್ತದೆ.

ಅವನ ಮನಸ್ಸನ್ನು 'ಹೀಗಿರುವುದೇ ಸುಖ' ಎಂಬ ಮೋಹದ ಆವರಣವು ಮುಚ್ಚಿಕೊಂಡುಬಿಟ್ಟಿರುತ್ತದೆ. ಈ ವಿಧವಾದ ತಾಮಸಸುಖಾನುಭವದ ಮೋಹದಿಂದಾಗಿ ತಾಮಸಿಯು ಐಹಿಕ ಅಥವಾ ಆಮುಷ್ಮಿಕಫಲಗಳನ್ನು ಕೊಡುವ ಯಾವ ಕರ್ಮಗಳನ್ನೂ ಮಾಡುವುದಿಲ್ಲವಾದುದರಿಂದ ಬದುಕಿರುವವರೆಗೂ ಯಾರೊಬ್ಬರಿಗೂ ಯಾವ ಸಹಾಯವನ್ನೂ ಮಾಡದೇ ಪ್ರಮಾದದಿಂದಾಗಿ ಅನೇಕರಿಗೆ ತೊಂದರೆಕೊಡುತ್ತಾ ಬದುಕಿದ್ದು ಕಡೆಯಲ್ಲಿ ಹೇಳಹೆಸರಿಲ್ಲದೇ ಹೋಗಿಬಿಡುವುದರಿಂದ ಅವನು ತನ್ನ ಕರ್ಮಾನುಸಾರವಾಗಿ ನೀಚಯೋನಿಗಳಲ್ಲಿಯೇ ಜನ್ಮತಾಳುತ್ತಾನೆ. ತಾಮಸಸುಖದ ಫಲವು ಇದೇ ಆಗಿರುತ್ತದೆ. ಈ ರೀತಿಯಲ್ಲಿ ನಿದ್ರೆ-ಆಲಸ್ಯ-ಪ್ರಮಾದ ಇವುಗಳಿಂದ ಲಭ್ಯವಾಗುವ ಸುಖವು ತಾಮಸಸುಖವೆನಿಸುವುದು.)

o o o

ಯಾವ ಸುಖವು ಆರಂಭದಲ್ಲಿಯೂ ಮತ್ತು ಪರಿಣಾಮದಲ್ಲಿಯೂ ಎಂದರೆ ಉಪಭೋಗಾನಂತರವೂ ಆತ್ಮಕ್ಕೆ ಮೋಹವನ್ನು ಉಂಟುಮಾಡುತ್ತದೆಯೋ ಮತ್ತು ನಿದ್ರೆ, ಆಲಸ್ಯ, ಪ್ರಮಾದ–ಈ ಮೂರರಿಂದ ಉಂಟಾಗುತ್ತದೆಯೋ ಅದು ತಾಮಸಸುಖ ಎನಿಸುತ್ತದೆ. (ಶಂ. ಭಾ.)

ಯಾವು ಸುಖವು ಅನುಭವಸಮಯದಲ್ಲಿ ಮತ್ತು ಪರಿಣಾಮದಲ್ಲಿ ಎರಡರಲ್ಲೂ ಆತ್ಮಕ್ಕೆ ಮೋಹವನ್ನು ಉಂಟುಮಾಡಲು ಕಾರಣವಾಗುತ್ತದೆಯೋ (ಇಲ್ಲಿ ಮೋಹ ಎಂದರೆ ವಸ್ತುವು ಯಥಾಸ್ಥಿತವಾಗಿ ಪ್ರಕಾಶ ಪಡದೇ ಇರುವುದು) ಅಂತಹ ನಿದ್ರಾಲಸ್ಯ ಪ್ರಮಾದಗಳಿಂದುಂಟಾದ ಸುಖವು ತಾಮಸ ಎನಿಸುತ್ತದೆ. ನಿದ್ರೆ ಮುಂತಾದುವುಗಳು ಅನುಭವಸಮಯದಲ್ಲಿ ಕೂಡ ಮೋಹಕ್ಕೆ ಕಾರಣವಾಗುತ್ತವೆ. ನಿದ್ರೆಯು ಮೋಹಕ್ಕೆ ಕಾರಣವಾಗುವುದಂತೂ ಸ್ಪಷ್ಟವೇ ಆಗಿದೆ. ಆಲಸ್ಯ ಎಂದರೆ ಇಂದ್ರಿಯವ್ಯಾಪಾರದ ಮಂದತ್ವ. ಇಂದ್ರಿಯವ್ಯಾಪಾರದಲ್ಲಿ ಮಂದತೆಯುಂಟಾದರೆ ಜ್ಞಾನದಲ್ಲಿಯೂ ಮಂದತೆ ಉಂಟಾಗುತ್ತದೆ. ಪ್ರಮಾದವು ಕರ್ತವ್ಯವಿಷಯದಲ್ಲಿ ಅಸಾಧಾರಣರೂಪ

ವಾಗಿರುವುದರಿಂದ ಅದರಲ್ಲಿಯೂ ಜ್ಞಾನಮಾಂದ್ಯವು ಇರುತ್ತದೆ. ಈ ಸುಖವು ತಾಮಸ. ಆದುದರಿಂದ ಮುಮುಕ್ಷುವು ರಜಸ್ಸು ಮತ್ತು ತಮಸ್ಸು ಗಳನ್ನು ಮೆಟ್ಟಿ ಸತ್ತ್ವವನ್ನೇ ಸ್ವೀಕರಿಸಬೇಕು ಎಂದು ಭಾವ. (ರಾ. ಭಾ.)

**ವಿಷಯೇನ್ದ್ರಿಯಸಂಯೋಗಾತ್** = ವಿಷಯೇಂದ್ರಿಯಗಳ ಸಂಯೋಗ ದಿಂದುಂಟಾದ ವಿಷಯಾನುಭವದಿಂದ ಗ್ರಹಿಸಲ್ಪಡುವ. **ಪ್ರಮಾದಃ** = ಅಧರ್ಮದಲ್ಲಿ ಧರ್ಮವೆಂಬ ಬುದ್ಧಿ. (ಮ. ಟೀಕಾ)

**ಓಂ ನ ತದಸ್ತಿ ಪೃಥಿವ್ಯಾಂ ವಾ ದಿವಿ ದೇವೇಷು ವಾ ಪುನಃ ।**
**ಸತ್ತ್ವಂ ಪ್ರಕೃತಿಜೈರ್ಮುಕ್ತಂ ಯದೇಭಿಃ ಸ್ಯಾತ್ತ್ರಿಭಿರ್ಗುಣೈಃ ॥೪೦॥**

ಭೂಮಿಯಲ್ಲಾಗಲೀ, ಸ್ವರ್ಗದಲ್ಲಾಗಲೀ, ದೇವತೆಗಳಲ್ಲಾಗಲೀ– ಪ್ರಕೃತಿಯಿಂದ ಉಂಟಾದ ಈ ಮೂರು ಗುಣಗಳಿಂದ ಮುಕ್ತವಾದ (ಈ ಮೂರು ಗುಣಗಳಿಲ್ಲದ) ವಸ್ತುವು (ಪ್ರಾಣಿಯು) ಯಾವುದೂ ಇರುವುದಿಲ್ಲ.

* * *

(ಹದಿನೆಂಟನೆಯ ಶ್ಲೋಕದಿಂದ ಇಲ್ಲಿಯವರೆಗೆ ಶ್ರೀಕೃಷ್ಣನು ಜ್ಞಾನ, ಕರ್ಮ, ಕರ್ತೃ, ಬುದ್ಧಿ, ಧೃತಿ, ಸುಖ–ಇವೆಲ್ಲವುಗಳಲ್ಲಿನ ಭೇದಗಳನ್ನು ತೋರಿಸಿಕೊಟ್ಟು ಸಕಲಜಗತ್ತಿನಲ್ಲಿ ಪ್ರಕೃತಿಯ ಗುಣಭೇದಗಳಿಂದ ವೈಚಿತ್ರ್ಯವುಂಟಾಗುವುದೆಂಬುದನ್ನು ಅರ್ಜುನನಿಗೆ ಹೇಳಿ ಪ್ರಕೃತಿಯ ಗುಣಗಳ ವಿಷಯವಾಗಿ ಕಡೆಯ ಮಾತನ್ನು ಈ ಶ್ಲೋಕದಲ್ಲಿ ಹೇಳುತ್ತಾನೆ.

ಪೃಥ್ವಿಯಲ್ಲೇ ಆಗಲೀ, ದೇವಲೋಕದಲ್ಲೇ ಆಗಲೀ, ದೇವತೆಗಳಲ್ಲೇ ಆಗಲೀ ಪ್ರಕೃತಿಜನ್ಯವಾದ ಸತ್ತ್ವ, ರಜಸ್ಸು ಮತ್ತು ತಮಸ್ಸುಗಳಿಂದ ವಿಮುಕ್ತವಾದ ಪ್ರಾಣಿಯು ಯಾವುದೂ ಇಲ್ಲ. ದೇವತೆಗಳೂ ಸಹ ಸತ್ತ್ವ-ರಜಸ್ತಮೋಗುಣವಿಶಿಷ್ಟರಾಗಿರುತ್ತಾರೆಂದಮೇಲೆ ಮನುಷ್ಯರ ವಿಷಯವನ್ನು ಹೇಳಬೇಕಾಗಿಯೇ ಇಲ್ಲ. ಬ್ರಹ್ಮನಿಂದ ಹಿಡಿದು ಸ್ತಂಬಪರ್ಯಂತವಾಗಿ ಸಕಲ ಪ್ರಾಣಿಗಳಲ್ಲಿಯೂ ಈ ಮೂರು ಗುಣಗಳೂ ಇದ್ದೇ ಇರುತ್ತವೆ. (ಪ್ರಮಾಣ ದಲ್ಲಿ ಮಾತ್ರ ವ್ಯತ್ಯಾಸ.)

ಈ ತ್ರಿಗುಣಗಳನ್ನು ಮೀರಿರುವಿಕೆಯೇ ಪರಮಾತ್ಮಸ್ವರೂಪ.

ಪ್ರಕೃತಿಯೇ ತ್ರಿಗುಣಾತ್ಮಕವಾಗಿರುವುದರಿಂದ ಅದರಲ್ಲಿ ಪ್ರವೇಶಮಾಡಿರುವ ಜೀವನಿಗೆ ಈ ಆವರಣವು ಇದ್ದೇ ಇರುತ್ತದೆ. ಆವರಣವು ಹೋಗುವವರೆಗೂ ಜನ್ಮವು ತಪ್ಪಿದ್ದಲ್ಲ. ಉಣ್ಣೆಯಿಲ್ಲದೇ ಕಂಬಳಿಯಿರದಂತೆ-ನೀರಿಲ್ಲದೇ ತೆರೆಗಳು ಏಳದಂತೆ–ಗುಣವಿಲ್ಲದೇ ಯಾವ ಪ್ರಾಣಿಯೂ ಹುಟ್ಟುವುದಿಲ್ಲ. ಈ ಗುಣಗಳು ದೇವತೆಗಳನ್ನೂ ಬಿಟ್ಟಿಲ್ಲ. ಈ ತ್ರಿಗುಣಗಳಿಗೆ ಬ್ರಹ್ಮ-ವಿಷ್ಣು- ಮಹೇಶ್ವರರೇ ಅಧಿದೇವತೆಗಳು. ಈ ಗುಣಗಳ ಬೇರೆ ಬೇರೆ ಪ್ರಮಾಣಗಳೇ ವರ್ಣ, ಆಶ್ರಮ–ಮುಂತಾದ ಭೇದಗಳಿಗೂ ಕಾರಣವಾಗಿವೆ. ಈ ಗುಣಗಳ ಪರಿಣಾಮದಿಂದಾಗಿರುವ ಚಾತುರ್ವರ್ಣ್ಯದ ವಿಷಯವನ್ನೇ ಶ್ರೀಕೃಷ್ಣನು ಮುಂದೆ ಹೇಳುತ್ತಾನೆ.)

o o o

ಭೂಮಿಯಲ್ಲಿ ಮನುಷ್ಯನೇ ಮುಂತಾದ ಪ್ರಾಣಿಯಲ್ಲಿಯೇ ಆಗಲೀ ಅಥವಾ ಪ್ರಾಣವಿಲ್ಲದ ವಸ್ತುವಿನಲ್ಲಿಯೇ ಆಗಲೀ ಅಥವಾ ದಿವಿಯಲ್ಲಿ ದೇವತೆಗಳಲ್ಲಿಯೇ ಆಗಲೀ ಪ್ರಕೃತಿಯಿಂದ ಉಂಟಾದ ಸತ್ತ್ವವೇ ಮುಂತಾದ ತ್ರಿಗುಣಗಳಿಂದ ಮುಕ್ತವಾದುದು ಯಾವುದೂ ಇಲ್ಲ. (ಶಂ. ಭಾ.)

ಭೂಮಿಯಲ್ಲಿ ಮನುಷ್ಯರೇ ಮುಂತಾದವರಲ್ಲಾಗಲೀ, ದಿವಿಯಲ್ಲಿ ದೇವತೆಗಳೇ ಮುಂತಾದವರಲ್ಲಾಗಲೀ–ಪ್ರಕೃತಿಸಂಬಂಧಹೊಂದಿರುವ ಬ್ರಹ್ಮಾದಿಸ್ಥಾವರಪರ್ಯಂತವಾದ ಯಾವುದರಲ್ಲಿಯೇ ಆಗಲೀ ಪ್ರಕೃತಿಜನ್ಯವಾದ ಈ ಮೂರು ಗುಣಗಳಿಂದ ರಹಿತವಾದ ಪ್ರಾಣಿಯು ಯಾವುದೂ ಇಲ್ಲ. (ರಾ. ಭಾ.)

ಪೃಥಿವ್ಯಾಂ ದಿವಿ ದೇವೇಷು = ಮುಕ್ತಾತ್ಮರು ತ್ರಿಗುಣಗಳಿಗೆ ಒಳಪಟ್ಟಿಲ್ಲವೆಂದು ಅವರನ್ನು ಬೇರ್ಪಡಿಸುವುದಕ್ಕೋಸ್ಕರ ಪೃಥಿವ್ಯಾಂ ಮುಂತಾದ ಪದಗಳನ್ನು ಹೇಳಿದೆ. ಪುನಃ ಎಂಬ ಪದವು ಸಮುಚ್ಚಯದ ಅರ್ಥದಲ್ಲಿ ಬಂದಿದೆ. (ಮ. ಟೀಕಾ)

**ಓಂ ಬ್ರಾಹ್ಮಣಕ್ಷತ್ರಿಯವಿಶಾಂ ಶೂದ್ರಾಣಾಂ ಚ ಪರಂತಪ ।**
**ಕರ್ಮಾಣಿ ಪ್ರವಿಭಕ್ತಾನಿ ಸ್ವಭಾವಪ್ರಭವೈರ್ಗುಣೈಃ ॥೪೧॥**

ಪರಂತಪನೇ! ಬ್ರಾಹ್ಮಣ-ಕ್ಷತ್ರಿಯ-ವೈಶ್ಯರಿಗೂ, ಶೂದ್ರರಿಗೂ ಸ್ವಭಾವದಿಂದ ಉಂಟಾದ ಗುಣಗಳಿಂದ ಕರ್ಮಗಳು ವಿಂಗಡಿಸಲ್ಪಟ್ಟಿರುತ್ತವೆ.

*  *  *

(ಬ್ರಾಹ್ಮಣ-ಕ್ಷತ್ರಿಯ-ವೈಶ್ಯ-ಶೂದ್ರರಿಗೆ : **ಸ್ವಭಾವಪ್ರಭವೈಃ** = ಸ್ವಭಾವ ಎಂದರೆ ಪ್ರಕೃತಿ. ಇದರಿಂದ ಹುಟ್ಟಿದ ಗುಣಗಳಿಂದ ಸತ್ತ್ವ-ರಜಸ್ತಮೋ ಗುಣಗಳಿಂದ **ಕರ್ಮಾಣಿ ಪ್ರವಿಭಕ್ತಾನಿ** = ಅವರು ಮಾಡಬೇಕಾದ ಕರ್ಮಗಳು ವಿಭಾಗಮಾಡಲ್ಪಟ್ಟಿವೆ. ಅಥವಾ **ಸ್ವಭಾವಪ್ರಭವೈಃ** ಎಂದರೆ ಬ್ರಾಹ್ಮಣ-ಕ್ಷತ್ರಿಯ-ವೈಶ್ಯ-ಶೂದ್ರರ ಸ್ವಭಾವಕ್ಕೆ ಕಾರಣವಾದ ಗುಣಗಳಿಂದ ಸತ್ತ್ವ-ರಜಸ್ತಮೋಗುಣಗಳಿಂದ ಅವರವರ ಕರ್ಮಗಳು ವಿಭಾಗಿಸಲ್ಪಟ್ಟಿವೆ.

ಸತ್ತ್ವ-ರಜಸ್ತಮೋಗುಣಗಳಿಗೆ ಅನುಸಾರವಾಗಿ ಮೂರೇ ಪಂಗಡಗಳಿರಬೇಕಾಗಿದ್ದಿತು. ನಾಲ್ಕು ಪಂಗಡಗಳನ್ನು ಹೇಳಿರುವ ಕಾರಣವನ್ನು ಹೀಗೆ ನಿರೂಪಿಸಬಹುದಾಗಿದೆ. ಒಂದೇ ಗುಣವು ಒಬ್ಬನಲ್ಲಿ ಇರಲು ಸಾಧ್ಯವಾಗುವುದಿಲ್ಲ. ಎಲ್ಲರಲ್ಲಿಯೂ ಎಲ್ಲ ಗುಣಗಳೂ ಇರುತ್ತವೆ. ಆದರೆ ಯಾವ ಗುಣವು ಯಾರಲ್ಲಿ ಅಧಿಕವಾಗಿದೆ ಎಂಬುದನ್ನು ಗಣನೆಗೆ ತೆಗೆದುಕೊಂಡು ಇವರ ಸ್ವಭಾವಗಳನ್ನು ನಿರ್ಧರಿಸಲಾಗಿದೆ. ಆದುದರಿಂದ ಬ್ರಾಹ್ಮಣರು ಸತ್ತ್ವ ಗುಣಪ್ರಧಾನರು. ಕ್ಷತ್ರಿಯರಲ್ಲಿ ಸತ್ತ್ವಗುಣವು ಅಲ್ಪವಾಗಿರುತ್ತದೆ ; ರಜೋ ಗುಣವು ಹೆಚ್ಚಾಗಿರುತ್ತದೆ. ವೈಶ್ಯರಲ್ಲಿ ರಜೋಗುಣದೊಡನೆ ಸ್ವಲ್ಪಭಾಗ ತಮೋಗುಣವಿರುತ್ತದೆ. ಶೂದ್ರರಲ್ಲಿ ರಜೋಗುಣವು ಸ್ವಲ್ಪವಿದ್ದು ತಮೋ ಗುಣವು ಹೆಚ್ಚಾಗಿರುತ್ತದೆ. ಆದರೆ ಎಲ್ಲ ವರ್ಣದವರಲ್ಲಿಯೂ ಮೂರು ಗುಣಗಳೂ ಇರುತ್ತವೆಯೆಂಬುದರಲ್ಲಿ ಸಂಶಯವೇ ಇಲ್ಲ. ಬ್ರಾಹ್ಮಣರ ಸ್ವಭಾವಕ್ಕೆ ಕಾರಣವಾದ ಸತ್ತ್ವಗುಣದಿಂದ ಅವರ ಕರ್ಮಗಳೇನೆಂಬುದು ನಿರ್ಧಾರವಾಗಿದೆ. ಕ್ಷತ್ರಿಯರ ಸ್ವಭಾವಕ್ಕೆ ಕಾರಣವಾದ ಸತ್ತ್ವ-ರಜಸ್ಸುಗಳಿಂದ ಅವರ ಕರ್ಮಗಳೇನೆಂಬುದು ನಿರ್ಧಾರವಾಗಿದೆ. ವೈಶ್ಯರ ಸ್ವಭಾವಕ್ಕೆ ಕಾರಣವಾದ ರಜಸ್ತಮೋಗುಣಗಳಿಂದ ಅವರ ಕರ್ಮಗಳೇನೆಂಬುದು ನಿರ್ಧಾರವಾಗಿದೆ. ಶೂದ್ರರ ಸ್ವಭಾವಕ್ಕೆ ಕಾರಣವಾದ ತಮಸ್ಸು ಮತ್ತು ರಜಸ್ಸುಗಳಿಂದ ಅವರ ಕರ್ಮಗಳೇನೆಂಬುದು ನಿರ್ಧಾರವಾಗಿದೆ–ಎಂದು ಉತ್ತರಾರ್ಧದ

ತಾತ್ಪರ್ಯ. ಪ್ರಕೃತಿಯ ಈ ಸತ್ತ್ವ-ರಜಸ್ತಮಸ್ಸುಗಳೇ ಬ್ರಾಹ್ಮಣಾದಿ ನಾಲ್ಕು ವರ್ಣದವರಿಗೆ ಕರ್ಮಗಳನ್ನು ವಿಭಾಗಿಸಿಕೊಟ್ಟಿವೆ ಎಂದಂತಾಯಿತು. ಶಾಸ್ತ್ರ ಗಳಲ್ಲಿಯೂ ನಾಲ್ಕು ವರ್ಣದವರಿಗೂ ಕರ್ಮಗಳನ್ನು ವಿಂಗಡಿಸಿ ಹೇಳಿದೆ. ಅಲ್ಲಿ ವಿಂಗಡಿಸಿರುವುದೂ ಸಹ ಈ ಗುಣಗಳ ಆಧಾರದಿಂದಲೇ ಹೊರತು ಬೇರೆ ರೀತಿಯಲ್ಲಲ್ಲ. ಗುಣಗಳನ್ನೇ ಆಧಾರವನ್ನಾಗಿಟ್ಟುಕೊಂಡು ಶಾಸ್ತ್ರಗಳು ನಾಲ್ಕು ವರ್ಣದವರ ಕರ್ಮಗಳನ್ನೂ ವಿಭಾಗಿಸಿವೆ. ಕರ್ಮಗಳನ್ನು ವಿಭಾಗ ಮಾಡುವಾಗ–**ಬ್ರಹ್ಮಕರ್ಮ ಸ್ವಭಾವಜಮ್ । ಕ್ಷಾತ್ರಕರ್ಮ ಸ್ವಭಾ ವಜಮ್ ।ವೈಶ್ಯಕರ್ಮ ಸ್ವಭಾವಜಮ್ । ಮತ್ತು ಶೂದ್ರಸ್ಯಾಪಿ ಸ್ವಭಾವಜಮ್**–ಎಂದು ಹೇಳಿರುವುದು ಮಿಶ್ರಗುಣಗಳಿಂದಲೇ ಬ್ರಹ್ಮ ಕರ್ಮ-ಕ್ಷಾತ್ರಕರ್ಮ-ವೈಶ್ಯಕರ್ಮ ಮತ್ತು ಶೂದ್ರಕರ್ಮಗಳಾಗುತ್ತವೆಯೇ ಹೊರತು ಒಂದು ಗುಣಕ್ಕೆ ಒಂದೇ ವರ್ಣದ ಕರ್ಮವು ಸೀಮಿತವಾಗಿಲ್ಲ– ಎಂಬುದನ್ನು ಇದು ವಿಶದೀಕರಿಸುತ್ತದೆ.

ಒಬ್ಬನಲ್ಲಿ ಸತ್ತ್ವಗುಣವಿದೆಯೇ, ರಜೋಗುಣವಿದೆಯೇ, ತಮೋಗುಣ ವಿದೆಯೇ–ಎಂಬುದನ್ನು ಅವನ ಸ್ವಭಾವದಿಂದಲೇ ತಿಳಿಯಬೇಕಾಗುತ್ತದೆ. ಅವನ ನಡೆ-ನುಡಿಗಳಿಂದ ತಿಳಿಯಬೇಕಾಗುತ್ತದೆ. ಸ್ವಭಾವದಿಂದ ಗುಣವನ್ನು ಗುರುತಿಸಬಹುದು. ಇಲ್ಲಿ ವರ್ಣವನ್ನೇ ಸಾಮೂಹಿಕವಾಗಿ ತೆಗೆದುಕೊಂಡು ಅವರ ಸ್ವಭಾವವೇನೆಂಬುದನ್ನು ಸಾಮಾನ್ಯತಃ ನಿರ್ಧರಿಸಿ, ತಾರತಮ್ಯ ಹೊಂದಿ ರುವ ಗುಣಗಳನ್ನೂ ಸಹ ಆಯಾ ವರ್ಣದಲ್ಲಿ ಗುರುತಿಸಿ, ಅನಂತರ ಗುಣಕ್ಕೆ ಅನುಸಾರವಾಗಿ ಕರ್ಮಗಳನ್ನೂ ವಿಭಾಗಿಸಲಾಗಿದೆ.

ಈ ನಾಲ್ಕು ವರ್ಣಗಳು ಒಂದಕ್ಕೊಂದು ಪೂರಕವೂ ಮತ್ತು ಪೋಷ ಕವೂ ಆಗಿವೆ. ಎಲ್ಲಕ್ಕೂ ಸಮಾನವಾದ ಪ್ರಾಮುಖ್ಯ. ಎಲ್ಲರಿಗೂ ಜ್ಞಾನದಲ್ಲಿ ಅಧಿಕಾರವುಂಟು. (ಆದರೆ ತ್ರಿಗುಣಾತ್ಮಕವಾದ ಅವುಗಳು ತ್ರಿಗುಣಗಳನ್ನು ದಾಟಲು ತಮ್ಮ ತಮ್ಮ ಸ್ಥಾನ-ಯೋಗ್ಯತೆಗಳಿಗೆ ತಕ್ಕಂತೆ ಮಾಡಬೇಕಾಗಿರುವ ಸಹಜಕರ್ಮಗಳು ಬೇರೆ ಬೇರೆ ಅಷ್ಟೆ.) ಇವುಗಳಲ್ಲಿ ಯಾವುದೊಂದು ಕಳಚಿಕೊಂಡರೂ ಉಳಿದವುಗಳಿಗೆ ಹಾನಿ. ಇವುಗಳ ಪರಸ್ಪರ ಮೈತ್ರೀ ಮತ್ತು ಸಾಮರಸ್ಯಗಳು ಸಮಾಜದ ಉದ್ಧಾರಕ್ಕೆ ಕಾರಣ. ಇವುಗಳಿಗಿರುವ ಸಂಬಂಧವು

ಜೀವಂತದೇಹದ ಅಂಗಾಂಗಗಳ ಪರಸ್ಪರ ಸಂಬಂಧದಂತೆ. ವಿರಾಟ್ಪುರುಷನ ನಾಲ್ಕು ಅವಯವಗಳೆಂದು ಇವನ್ನು ನಿರೂಪಿಸಿರುವುದು ಗಮನಾರ್ಹ ವಾದುದು. ಇವುಗಳಲ್ಲಿ ಪ್ರತಿವರ್ಣಕ್ಕೂ ಅದರದರ ಕರ್ಮವು ಶ್ರೇಷ್ಠ ವಾದುದು. ವರ್ಣದ್ವೇಷ, ವರ್ಗದ್ವೇಷ, ಲಿಂಗದ್ವೇಷ ಮುಂತಾದುವುಗಳನ್ನು ಉಂಟುಮಾಡುವವನನ್ನು ರಾಷ್ಟ್ರದಿಂದ ದೂರಮಾಡಬೇಕು–ಎಂದು ಶಾಸ್ತ್ರಗಳು ಹೇಳುತ್ತವೆ.)

o o o

**ಸ್ವಭಾವಪ್ರಭವೈಃ ಗುಣೈಃ** =ಸ್ವಭಾವ ಎಂದರೆ ಈಶ್ವರನ ಪ್ರಕೃತಿಯಾದ ತ್ರಿಗುಣಾತ್ಮಕವಾದ ಮಾಯೆ. ಅದರಿಂದ ಉಂಟಾದ ಗುಣಗಳಿಂದ ಬ್ರಾಹ್ಮಣರೇ ಮುಂತಾದ ವರ್ಣಗಳ ಶಮವೇ ಮುಂತಾದ ಕರ್ಮಗಳನ್ನು ವಿಭಾಗಮಾಡಲಾಗಿದೆ. ಅಥವಾ ಸ್ವಭಾವ ಎಂದರೆ ಪ್ರಾಣಿಗಳು ಜನ್ಮಾಂತರ ದಲ್ಲಿ ಮಾಡಿರುವ ಕರ್ಮಗಳ ಸಂಸ್ಕಾರಗಳು. ಇವು ಈಗಿನ ಜನ್ಮದಲ್ಲಿ ತಮ್ಮ ಕಾರ್ಯಕ್ಕೆ ಅಭಿಮುಖವಾಗಿ ವ್ಯಕ್ತವಾಗಿವೆ. ಆ ಸಂಸ್ಕಾರಗಳೇ ಸ್ವಭಾವ. ಇಂತಹ ಸ್ವಭಾವವು ಯಾವ ಗುಣಗಳ ಉತ್ಪತ್ತಿಗೆ ಕಾರಣವಾಗಿರುವುದೋ ಅದು ಸ್ವಭಾವಪ್ರಭವವಾದ ಗುಣ. ಗುಣಗಳಿಗೆ ತಕ್ಕಂತೆ ಕರ್ಮಗಳ ವಿಭಾಗ. (ಶಂ. ಭಾ.)

**ಸ್ವಭಾವಃ = ಸ್ವಕೀಯಃ ಭಾವಃ ಸ್ವಭಾವಃ** –ಅವರ ಜನ್ಮಕ್ಕೆ ಕಾರಣವಾದ ಪ್ರಾಚೀನಕರ್ಮ ಎಂದರ್ಥ. ಅದರಿಂದ ಉಂಟಾದುವು ಸತ್ತ್ವಾದಿ ಗುಣಗಳು. ಉದಾಹರಣೆ : ಬ್ರಾಹ್ಮಣನಿಗೆ ರಜಸ್ಸು ಮತ್ತು ತಮೋಗುಣಗಳನ್ನು ತಿರಸ್ಕರಿಸಿ ಉದ್ಭವಿಸುವುದು ಅವನ ಸ್ವಭಾವಪ್ರಭವವಾದ ಸತ್ತ್ವಗುಣ. ಇಂತಹ ಗುಣ ಗಳೊಡನೆ ಅವರವರ ಕರ್ಮಗಳು ಶಾಸ್ತ್ರಗಳಿಂದ ಪ್ರತಿಪಾದಿಸಲ್ಪಟ್ಟಿವೆ. ಬ್ರಾಹ್ಮಣರೇ ಮುಂತಾದವರ ಗುಣಗಳು ಇವು, ಕರ್ಮಗಳು ಇವು ಮತ್ತು ವೃತ್ತಿಗಳು ಇವು–ಎಂಬುದನ್ನು ಶಾಸ್ತ್ರಗಳು ವಿಭಾಗಮಾಡಿ ತೋರಿಸುತ್ತವೆ. (ರಾ. ಭಾ.)

**ಗುಣೈಃ**= ಸತ್ತ್ವವೇ ಮುಂತಾದ ಗುಣಗಳಿಂದ. (ಮ. ಟೀಕಾ)

**ಓಂ ಶಮೋ ದಮಸ್ತಪಃ ಶೌಚಂ ಕ್ಷಾನ್ತಿರಾರ್ಜವಮೇವ ಚ ।**
**ಜ್ಞಾನಂ ವಿಜ್ಞಾನಮಾಸ್ತಿಕ್ಯಂ ಬ್ರಹ್ಮಕರ್ಮ ಸ್ವಭಾವಜಮ್ ॥೪೨॥**

ಶಮ, ದಮ, ತಪಸ್ಸು, ಶೌಚ, ಕ್ಷಾಂತಿ, ಋಜುತ್ವ, ಜ್ಞಾನ, ವಿಜ್ಞಾನ, ಆಸ್ತಿಕ್ಯ–ಇವು ಬ್ರಹ್ಮವರ್ಗಕ್ಕೆ ಸಹಜವಾದ ಸ್ವಾಭಾವಿಕಕರ್ಮಗಳು.

* * *

(**ಶಮ** ಮತ್ತು **ದಮ** ಇವುಗಳು ಇಂದ್ರಿಯನಿಗ್ರಹವನ್ನು ಹೇಳುತ್ತವೆ. ಶಮವು ಅಂತರಿಂದ್ರಿಯನಿಗ್ರಹವನ್ನೂ–ದಮವು ಬಹಿರಿಂದ್ರಿಯ ನಿಗ್ರಹವನ್ನೂ ಹೇಳುತ್ತದೆ. ಬಾಹ್ಯೇಂದ್ರಿಯಗಳಿಗೆ ವಿಧಿಯ ಶಾಸನವನ್ನು ಅಂಟಿಸಿ ಅವು ಅಧರ್ಮದತ್ತ ಪ್ರವೃತ್ತವಾಗದಂತೆ ನಿಯಂತ್ರಿಸುವುದು ದಮ. **ತಪಃ**=೧೭ನೆಯ ಅಧ್ಯಾಯದಲ್ಲಿ ೧೪-೧೫ ಮತ್ತು ೧೬ನೆಯ ಶ್ಲೋಕಗಳಲ್ಲಿ ಹೇಳಿರುವ ಕಾಯಕ-ವಾಚಿಕ-ಮಾನಸಿಕ ತಪಸ್ಸು ಮತ್ತು ಎಲ್ಲ ಕಾಲಗಳಲ್ಲಿಯೂ ಮನಸ್ಸಿನಲ್ಲಿ ಈಶ್ವರಸ್ವರೂಪವನ್ನು ವಿಚಾರಮಾಡುತ್ತಿರುವುದೇ ಶ್ರೇಷ್ಠವಾದ ತಪಸ್ಸು. **ಶೌಚ** ಎಂದರೆ ಶುಚಿತ್ವ, ಪವಿತ್ರತೆ. ಶುದ್ಧಭಾವನೆಯಿಂದ ಕೂಡಿದ ಮನಸ್ಸು ; ಸದಾಚಾರ-ಸತ್ಕರ್ಮಗಳಿಂದ ಸುಶೋಭಿತವಾದ ಶರೀರ. ಪ್ರಸನ್ನವಾದ ಮಾತು. ಈ ರೀತಿಯಾಗಿ ಶರೀರದ ಒಳಗೂ ಮತ್ತು ಹೊರಗೂ ಶುಚಿಯಾಗಿರುವುದೇ ಶೌಚ.

**ಕ್ಷಾನ್ತಿಃ**–ಎಂದರೆ ಕ್ಷಮೆ ; ಸಹನೆ. ಜೀವನದಲ್ಲಾಗುವ ಏರು-ಪೇರು ಗಳಿಗೆ ಹಿಗ್ಗದೇ ಮತ್ತು ಕುಗ್ಗದೇ ಇರುವುದು. ಯಾವ ಕಷ್ಟವನ್ನೇ ಆದರೂ ಸೌಮನಸ್ಯದಿಂದಲೇ ಸಹಿಸಿಕೊಳ್ಳುವುದು. ಕ್ಷಮೆಗೆ ಭೂಮಾತೆಯೇ ಆದರ್ಶಳು. **'ಕ್ಷಮಯಾ ಧರಿತ್ರೀ'**. **ಆರ್ಜವಂ** ಎಂದರೆ ಋಜುತ್ವ, ಕುಟಿಲತೆಯಿಲ್ಲದೇ ಇರುವುದು ; ಸರಳತೆ. **ಜ್ಞಾನಂ** = ತಿಳಿವಳಿಕೆ. ಈಶ್ವರ ಪ್ರಾಪ್ತಿಯೇ ಅಂತಿಮಫಲವೆಂದು ಸ್ಪಷ್ಟವಾಗಿ ತಿಳಿಯುವುದೇ ಜ್ಞಾನ. ಈಶ್ವರಪ್ರಾಪ್ತಿಗಾಗಿ ವಿಧಿ-ವಿಧಾನಗಳನ್ನು ವೇದ-ಶಾಸ್ತ್ರ-ಪುರಾಣೇತಿಹಾಸ ಗಳಿಂದ ತಿಳಿಯುವುದೇ ಜ್ಞಾನ. ಜ್ಞಾನ ಎಂದರೆ ಆತ್ಮಜ್ಞಾನ ಎಂದೂ ಅರ್ಥ ವಾಗುತ್ತದೆ. **ವಿಜ್ಞಾನಂ** = ವಿಶೇಷಜ್ಞಾನ–ಅಂತಃಕರಣದ ಅತ್ಯಂತ ಶುದ್ಧಸ್ಥಿತಿ ಯಲ್ಲಿ ಧ್ಯಾನಾದಿಗಳ ಅಭ್ಯಾಸದಿಂದ ಬುದ್ಧಿಯು ಆತ್ಮನಲ್ಲಿ ಲೀನವಾಗುವುದೇ ವಿಜ್ಞಾನ ಅಥವಾ ವಿಶೇಷಜ್ಞಾನ.

ಜ್ಞಾನ ಮತ್ತು ವಿಜ್ಞಾನಗಳಿಗೆ ಶ್ರೀರಂಗಮಹಾಗುರುಗಳು ಕೊಟ್ಟಿರುವ ನಿರೂಪಣೆಯು ಹೀಗಿದೆ :

ನದಿಯು ಸಮುದ್ರದೊಡನೆ ಒಂದಾಗಿಬಿಡುವಂತೆ–ಆತ್ಮದೀಪದೊಡನೆ ಐಕ್ಯಭಾವವನ್ನು ಹೊಂದುವುದಕ್ಕೆ ಜ್ಞಾನ ಎಂದು ಹೆಸರು. ವಿಶಾಲದೃಷ್ಟಿಯಲ್ಲಿ ಯಾವ ತತ್ತ್ವವು ಮೂಲವಾಗಿದ್ದು ಜಗತ್ತನ್ನು ನಡೆಸುತ್ತದೆಯೋ ಆವರಣವನ್ನು ಭೇದಿಸಿ ಒಳಹೊಕ್ಕು ನೋಡಿದಾಗ ಯಾವ ಜ್ಯೋತಿಯು ಕಾಣುವುದೋ ಅದಕ್ಕೆ ಜ್ಞಾನವೆಂದು ಹೆಸರು. ಜ್ಞಾನದ ವಿಕಾಸವೇ ವಿಜ್ಞಾನವಾಗಿರುವುದರಿಂದ ಎಲ್ಲ ವಿದ್ಯೆಗಳನ್ನೂ ಜ್ಞಾನಮೂಲಕವಾಗಿಯೇ ಜ್ಞಾನಿಗಳು ತಂದರು. ಆದುದರಿಂದ ಎಲ್ಲ ವಿದ್ಯೆ ಮತ್ತು ಕಲೆಗಳೂ ವಿಕಾಸದೆಸೆಯಲ್ಲಿ ಅಧ್ಯಯನವನ್ನು ನಡೆಸಿ ಆವರಣವನ್ನು ತೆಗೆದು ಒಳಹೊಕ್ಕು ನೋಡಿದಾಗ ಜ್ಞಾನದಲ್ಲೇ ನಿಲ್ಲುತ್ತವೆ. ಜ್ಞಾನವು ಶಾಲೆ, ಮಠ, ಪುಸ್ತಕ ಗಳಲ್ಲಿಲ್ಲ. **'ತತ್ಸ್ವಯಂ ಯೋಗಸಂಸಿದ್ಧಃ ಕಾಲೇನಾತ್ಮನಿ ವಿನ್ದತಿ'** ಎಂದು ಭಗವಂತನೇ ಹೇಳಿರುವಂತೆ ಕಾಲವಿಶೇಷದಲ್ಲಿ ಯೋಗಸಿದ್ಧಿಯಿಂದ ತನ್ನೊಳಗೆ ತಾನು ಪಡೆಯಬೇಕಾದ ಬದುಕು ಇದು.

ಜ್ಞಾನದ ವಿಕಾಸವೇ ವಿಜ್ಞಾನ. ವಿಜ್ಞಾನವು ವಿಕಾರ ತೊಲಗಿದಾಗ ಜ್ಞಾನವಾಗುತ್ತದೆ. ವಿಜ್ಞಾನದಿಂದ ಹಿಂದೆ ಹೊರಟಾಗ ಜ್ಞಾನ. ಜ್ಞಾನವು ವಿಕಾಸವಾಗಿ ಅವರೋಹಣಕ್ರಮದಿಂದ ವಿಜ್ಞಾನವೆನಿಸಿಕೊಳ್ಳುತ್ತದೆ. ಜ್ಞಾನ ದಿಂದ ವಿಕಾಸಗೊಂಡ ಪ್ರಕೃತಿಯೇ ವಿಜ್ಞಾನರೂಪವಾದುದು."

**ಆಸ್ತಿಕ್ಯಂ** = ಇದೆ ಎನ್ನುವ ಬುದ್ಧಿ. 'ಆತ್ಮ' ಎಂಬುದೊಂದಿದೆ. 'ದೇವ' ಎಂಬುವನಿದ್ದಾನೆ ಎಂಬ ಬುದ್ಧಿ. ಶಾಸ್ತ್ರವಿಹಿತಮಾರ್ಗವನ್ನು ಆದರಪೂರ್ವಕ ವಾಗಿ ಮನ್ನಿಸುವುದು. ಇದಕ್ಕೆ ಆಸ್ತಿಕ್ಯವೆಂದು ಹೆಸರು.

ಶಮ ಮೊದಲ್ಗೊಂಡು ಈ ಒಂಬತ್ತು ಬ್ರಾಹ್ಮಣನ ಸ್ವಾಭಾವಿಕ ಗುಣ ಗಳು.)

o o o

**ಕ್ಷಾನ್ತಿಃ** = ಕ್ಷಮೆ. **ಆಸ್ತಿಕ್ಯಂ** = ಶಾಸ್ತ್ರಾರ್ಥಗಳಲ್ಲಿ ಶ್ರದ್ಧೆ. **ಶಮ–ದಮ–ಶೌಚ–ಜ್ಞಾನ–ವಿಜ್ಞಾನ**–ಇವುಗಳನ್ನು ಹಿಂದೆಯೇ ವ್ಯಾಖ್ಯಾನಿಸ ಲಾಗಿದೆ. **ತಪಃ** = ಹಿಂದೆ ಹೇಳಿದ ಶಾರೀರವೇ ಮುಂತಾದ ಮುಬ್ಬಗೆಯ ತಪಸ್ಸು.

ಹಿಂದೆ **ಸ್ವಭಾವಪ್ರಭವೈಃ ಗುಣೈಃ ಪ್ರವಿಭಕ್ತಾನಿ**–ಎಂದು ಹೇಳಿರುವುದನ್ನೇ **ಸ್ವಭಾವಜಂ** ಎಂಬ ಪದದಿಂದ ಇಲ್ಲಿ ಹೇಳಲಾಗಿದೆ. (ಶಂ. ಭಾ.)

**ಶಮಃ**=ಹೊರಗಿನ ಇಂದ್ರಿಯಗಳ ನಿಯಮನ. **ದಮಃ**=ಅಂತಃಕರಣದ ನಿಯಮನ. **ತಪಃ**=ಶಾಸ್ತ್ರದಿಂದ ಸಿದ್ಧವಾಗುವ ಭೋಗನಿಯಮನ ರೂಪವಾದ ಕಾಯಕ್ಲೇಶ. **ಶೌಚಂ** = ಶಾಸ್ತ್ರೀಯಕರ್ಮಗಳನ್ನು ಮಾಡುವ ಯೋಗ್ಯತೆ. **ಶಾನ್ತಿಃ**=ಪರರು ಪೀಡಿಸಿದರೂ ಸಹ ಚಿತ್ತವಿಕಾರವುಂಟಾಗದಿರುವಿಕೆ. **ಆರ್ಜವಂ** = ಇತರರ ಮನಸ್ಸಿಗೆ ನೋವಾಗದಂತೆ ಹೊರಗಿನ ವ್ಯಾಪಾರವನ್ನು ಇಟ್ಟುಕೊಳ್ಳುವಿಕೆ. **ಜ್ಞಾನಂ** = ಪರಾವರತತ್ತ್ವದ ಯಥಾರ್ಥಸ್ವರೂಪವಾದ ಜ್ಞಾನ. **ವಿಜ್ಞಾನಂ** =ಪರತತ್ತ್ವದಲ್ಲಿರುವ ಅಸಾಧಾರಣ ವಿಶೇಷವಿಷಯಕವಾದ ಜ್ಞಾನ. **ಆಸ್ತಿಕ್ಯಂ** = ವೈದಿಕವಾದ ಅರ್ಥವೆಲ್ಲವೂ ಸತ್ಯ ಎಂಬ ಶ್ರೇಷ್ಠವಾದ ನಿಶ್ಚಯ. ಯಾವ ಕಾರಣದಿಂದಲೂ ಕದಲಿಸಲಾಗದ ನಿಶ್ಚಯ. ಭಗವಂತನಾದ ಪುರುಷೋತ್ತಮನಾದ ವಾಸುದೇವನೇ ಪರಬ್ರಹ್ಮ ಎಂಬ ಶಬ್ದದಿಂದ ಕರೆಯಲ್ಪಡುವವನು. ಯಾವ ದೋಷದ ಗಂಧವೂ ಇಲ್ಲದವನು. ಅನಂತಕಲ್ಯಾಣಗುಣಗಣಪರಿಪೂರ್ಣನು. ಸರ್ವವೇದಾಂತವೇದ್ಯನು. ಅವನೇ ಎಲ್ಲ ಜಗತ್ತಿಗೂ ಏಕಕಾರಣನು. ಎಲ್ಲಕ್ಕೂ ಆಧಾರ ಮತ್ತು ನಿಯಾಮಕನು. ವೈದಿಕವಾದ ಕರ್ಮಗಳಿಂದ ಆರಾಧಿಸಲ್ಪಟ್ಟ ಭಗವಂತನು ಕಾಮ-ಮೋಕ್ಷಗಳೆಂಬ ಫಲವನ್ನು ಕೊಡುತ್ತಾನೆ–ಎಂಬ ಅರ್ಥವು ಸತ್ಯವಾದುದು ಎಂಬ ನಿಶ್ಚಯ. (ರಾ. ಭಾ.)

**ಶಾನ್ತಿಃ** = ಕ್ರೋಧವುಂಟಾಗದೇ ಇರುವಿಕೆ. **ಜ್ಞಾನಂ** = ಸಾಮಾನ್ಯವಾದ ಜ್ಞಾನ. **ವಿಜ್ಞಾನಂ** = ವಿಶೇಷವಾದ ಜ್ಞಾನ.

**ಶಮಃ, ದಮಃ**–ಮುಂತಾದುವುಗಳು ಗುಣಗಳನ್ನೂ ಮತ್ತು ಅವುಗಳಿಗೆ ಅನುಗುಣವಾದ ಆಚರಣೆಯನ್ನೂ ಹೇಳುತ್ತವೆ. ಆದುದರಿಂದ ಅವುಗಳನ್ನು ಕರ್ಮ ಎಂದು ಕರೆದಿದೆ. (ಮ. ಟೀಕಾ)

**ಓಂ ಶೌರ್ಯಂ ತೇಜೋ ಧೃತಿರ್ದಾಕ್ಷ್ಯಂ ಯುದ್ಧೇ ಚಾಪ್ಯಪಲಾಯನಮ್ ।**
**ದಾನಮೀಶ್ವರಭಾವಶ್ಚ ಕ್ಷಾತ್ರಂ ಕರ್ಮ ಸ್ವಭಾವಜಮ್ ॥೪೩॥**

ಶೌರ್ಯ, ತೇಜಸ್ಸು, ಧೃತಿ, ದಕ್ಷತೆ, ಯುದ್ಧದಲ್ಲಿ ಓಡಿಹೋಗದಿರುವುದು, ದಾನ ಮತ್ತು ಈಶ್ವರಭಾವ–ಇವು ಕ್ಷತ್ರಿಯನ ಸ್ವಾಭಾವಿಕವಾದ ಕರ್ಮ.

*         *         *

(**ಶೌರ್ಯಂ** = ಶೂರನ ಭಾವ ಮತ್ತು ಕರ್ಮ. ಸಿಂಹವು ಸಂಚರಿಸುವಾಗ ಅಂಗರಕ್ಷಕರನ್ನು ಅಪೇಕ್ಷಿಸುವುದಿಲ್ಲ. ಅದರಂತೆಯೇ ಸ್ವಭಾವತಃ ಬಲಿಷ್ಠನಾಗಿ ಅನ್ಯರ ಬೆಂಬಲವನ್ನು ಅಪೇಕ್ಷಿಸದೇ ಇರುವವನನ್ನು ಶೂರ ಎನ್ನುತ್ತಾರೆ.

**ತೇಜಃ**=ತೇಜಸ್ಸು (ಪ್ರಕಾಶ) ತನ್ನ ಪ್ರಭಾವದಿಂದ ಇತರರ ಪ್ರಭಾವವನ್ನು ಕುಗ್ಗಿಸುವುದು. ಸೂರ್ಯನು ತನ್ನ ಅಮಿತವಾದ ತೇಜಸ್ಸಿನಿಂದ ಕೋಟ್ಯಂತರ ನಕ್ಷತ್ರಗಳ ತೇಜಸ್ಸನ್ನೂ ಅಡಗಿಸಿಬಿಡುವನು. ಮುಖದ ವರ್ಚಸ್ಸಿಗೂ ತೇಜಸ್ಸು ಎಂದು ಹೆಸರು.

**ಧೃತಿಃ** = ಧೈರ್ಯ ಅಥವಾ ಧಾರಣಾಶಕ್ತಿ. ಎಂತಹ ವಿಪತ್ತಿನ ಸಮಯದಲ್ಲಿಯೂ ಮನಸ್ಸನ್ನು ಸ್ಥಿರವಾಗಿ ಇಟ್ಟುಕೊಳ್ಳುವುದೇ ಧೈರ್ಯ ಅಥವಾ ಧೃತಿ.

**ದಾಕ್ಷ್ಯಂ** = ದಕ್ಷತೆ ; ಅಧಿಕಾರ ನಡೆಸುವ ಸಾಮರ್ಥ್ಯ, ಕುಶಲತೆ.

**ಯುದ್ಧೇ ಚಾಪ್ಯಪಲಾಯನಮ್** = ಯುದ್ಧದಲ್ಲಿ ಶತ್ರುಗಳನ್ನು ಎದುರಿಸಲು ಸಾಧ್ಯವಾಗದೇ ಇದ್ದರೂ, ತನ್ನ ಪ್ರಾಣವು ಹೋಗಿಬಿಡುವುದೆಂದು ನಿಶ್ಚಿತವಾಗಿದ್ದರೂ ಸಹ ಎದೆಗುಂದದೆ ಪ್ರಾಣಾಂತ್ಯದವರೆಗೂ ಯುದ್ಧಮಾಡುತ್ತಲೇ ಇರುವುದು. ಪ್ರಾಣಭಯದಿಂದ ಪಲಾಯನಮಾಡದೇ ಇರುವುದು.

**ದಾನಂ** = ಸಂಚಿತಧನವನ್ನು ಯಥಾಯೋಗ್ಯವಾಗಿ ಸತ್ಪಾತ್ರದಲ್ಲಿ ದಾನಮಾಡುವುದು.

**ಈಶ್ವರಭಾವಃ** = ಈಶ್ವರಭಾವ ಎಂದರೆ ಸ್ವಾಮಿಭಾವ, ಪ್ರಭುಭಾವ. ಇದೂ ಸಹ ಕ್ಷತ್ರಿಯನಾದವನಿಗಿರಬೇಕು. '**ಈಶ್ವರೋಽಹಮಹಂ ಭೋಗೀ**' ಎಂಬ ಪ್ರಕರಣದಲ್ಲಿರುವಂತೆ ಅಹಂಕಾರದ ಈಶ್ವರಭಾವವಲ್ಲ ; ರಕ್ಷಣೆಗೆ ಯೋಗ್ಯರಾದವರನ್ನು ತನ್ನ ಸಾಮರ್ಥ್ಯದಿಂದ ರಕ್ಷಿಸಿ ಹತೋಟಿ

ಯಲ್ಲಿಟ್ಟು ಆಳುವ ಶಕ್ತಿಯನ್ನು ಹೊಂದಿರುವಿಕೆ. ಇವಿಷ್ಟೂ ಸ್ವಭಾವಜನ್ಯವಾದ ಕ್ಷಾತ್ರಧರ್ಮವಾಗಿದೆ.)

o o o

**ಶೌರ್ಯಂ** = ಶೂರರ ಭಾವ, **ತೇಜಃ** = ಪ್ರಗಲ್ಭತೆ (ಇತರರಿಗೆ ಜಗ್ಗದಿರುವ ಸ್ವಭಾವ.) **ಧೃತಿಃ** = ಧಾರಣೆ. ಎಲ್ಲ ಸ್ಥಿತಿಗಳಲ್ಲಿಯೂ ವಿಷಾದ ಗೊಳ್ಳದೇ ಇರುವ ಶಕ್ತಿ. **ದಾಕ್ಷ್ಯಂ** = ದಕ್ಷತೆ ; ಒಡನೆಯೇ ಯಾವುದಾದರೂ ಕೆಲಸಗಳು ಬಂದು ಒದಗಿದರೂ ಧೃತಿಗೆಡದೇ ಆ ಕೆಲಸಗಳನ್ನು ನಿರ್ವಹಿಸುವ ಸ್ವಭಾವ.

**ಯುದ್ಧೇ ಚಾಪ್ಯಪಲಾಯನಮ್** = ಯುದ್ಧದಲ್ಲಿ ಶತ್ರುಗಳಿಗೆ ಬೆನ್ನು ತೋರಿಸದೇ ಇರುವಿಕೆ. **ದಾನಂ** = ಕೊಡಲ್ಪಡಬೇಕಾದ ವಸ್ತುಗಳ ಬಗೆಗೆ ಕೊಡುಗೈಯಿಂದ ಕೊಡುವ ಸ್ವಭಾವ. **ಈಶ್ವರಭಾವಃ** = ಯಾರನ್ನು ಆಳ ಬೇಕೋ ಅವರ ವಿಷಯದಲ್ಲಿ ಪ್ರಭುಶಕ್ತಿಯನ್ನು ಪ್ರಕಟಿಸಿಕೊಳ್ಳುವಿಕೆ–ಇವು ಕ್ಷತ್ರಿಯಜಾತಿಗೆ ವಿಹಿತವಾಗಿರುವ ಸ್ವಾಭಾವಿಕಕರ್ಮಗಳು. (ಶಂ. ಭಾ.)

**ಶೌರ್ಯಂ** = ಯುದ್ಧದಲ್ಲಿ ನಿರ್ಭಯವಾಗಿ ಪ್ರವೇಶಿಸುವ ಸಾಮರ್ಥ್ಯ. **ತೇಜಃ** = ಇತರರಿಂದ ತಿರಸ್ಕರಿಸಲ್ಪಡದೇ ಇರುವಿಕೆ. **ಧೃತಿಃ** = ಪ್ರಾರಂಭ ಮಾಡಿದ ಕೆಲಸಕ್ಕೆ ವಿಘ್ನಗಳು ಒದಗಿದರೂ ಅದನ್ನು ಮುಗಿಸುವ ಸಾಮರ್ಥ್ಯ. **ದಾಕ್ಷ್ಯಂ** = ಎಲ್ಲ ಕೆಲಸಗಳನ್ನೂ ನೆರವೇರಿಸುವ ಸಾಮರ್ಥ್ಯ. **ಯುದ್ಧೇ ಚಾಪ್ಯಪಲಾಯನಮ್** = ಯುದ್ಧದಲ್ಲಿ ತಾನು ಸಾಯುವುದು ನಿಶ್ಚಯವೆಂದು ತಿಳಿದರೂ ಅದರಿಂದ ಹಿಂದಿರುಗದೇ ಇರುವಿಕೆ. **ದಾನಂ** = ತನ್ನದಾಗಿರುವ ಹಣವನ್ನು ಇತರರ ಸ್ವತ್ತನ್ನಾಗಿ ಮಾಡುವವರೆಗಿನ ತ್ಯಾಗ. **ಈಶ್ವರಭಾವಃ**= ಎಲ್ಲ ಜನರನ್ನೂ ನಿಯಮಿಸುವ ಸಾಮರ್ಥ್ಯ. ಇದು ಕ್ಷತ್ರಿಯನ ಸ್ವಾಭಾವಿಕವಾದ ಕರ್ಮ. (ರಾ. ಭಾ.)

**ಈಶ್ವರಭಾವಃ**= ದುಷ್ಟನಿಗ್ರಹ ; ಶಿಷ್ಟಾನುಗ್ರಹಶಕ್ತಿ.

**ಪ್ರಸಹ್ಯ ನಿತ್ಯಾಹರಣಂ ಶಾರೀರೋ ದಣ್ಡ ಏವ ಚ ।**
**ಅಶಿಷ್ಟಾನಾಂ ಶಾಸನಂ ಚ ತಥೈವಾರ್ಥವಿನಾಶನಮ್ ॥**
**ಏಷ ಈಶ್ವರಭಾವಃ ಸ್ಯಾತ್ ನ ಕಾರ್ಯಃ ಕ್ಷತ್ರಿಯೇತರೈಃ ।**

ಎಂದು ಸ್ಮೃತಿಯು ಹೇಳುವಂತೆ–ಬಲಾತ್ಕಾರದಿಂದ ಹಣವನ್ನು ಕಿತ್ತುಕೊಳ್ಳುವಿಕೆ, ಶರೀರದಂಡನೆಯನ್ನು ಕೊಡುವಿಕೆ, ಶಾಸನಮಾಡಲು ಆಗದಿದ್ದವರ ಮೇಲೆ ಶಾಸನಮಾಡುವಿಕೆ, ಅರ್ಥವನ್ನು ನಾಶಮಾಡುವಿಕೆ–ಇವು ಈಶ್ವರಭಾವ ಎನಿಸುತ್ತವೆ. ಕ್ಷತ್ರಿಯರಲ್ಲದವರು ಇದನ್ನು ಮಾಡಬಾರದು.

(ಮ. ಟೀಕಾ)

**ಓಂ ಕೃಷಿಗೌರಕ್ಷ್ಯವಾಣಿಜ್ಯಂ ವೈಶ್ಯಕರ್ಮ ಸ್ವಭಾವಜಮ್ ।**
**ಪರಿಚರ್ಯಾತ್ಮಕಂ ಕರ್ಮ ಶೂದ್ರಸ್ಯಾಪಿ ಸ್ವಭಾವಜಮ್ ॥೪೪॥**

ವ್ಯವಸಾಯ, ಪಶುಪಾಲನೆ, ವ್ಯಾಪಾರ–ಇವು ಸ್ವಭಾವಜನ್ಯವಾದ ವೈಶ್ಯಕರ್ಮಗಳು. ಹಾಗೆಯೇ ಸೇವೆಮಾಡುವುದು ಶೂದ್ರನಿಗೂ ಕೂಡ ಸ್ವಾಭಾವಿಕವಾದ ಕರ್ಮ.

* * *

(**ಕೃಷಿಗೌರಕ್ಷ್ಯವಾಣಿಜ್ಯಂ** = **ಕೃಷಿಃ**–ನೆಲವನ್ನು ಉಳುವುದು. ಉತ್ತು-ಬಿತ್ತಿ ಬೇಕು-ಬೇಕಾದ ಆಹಾರಧಾನ್ಯವೇ ಮುಂತಾದುವುಗಳನ್ನು ಬೆಳೆಯುವುದು. **ಗೌರಕ್ಷ್ಯಂ** =ಗೋವುಗಳನ್ನು ರಕ್ಷಿಸುವವನು ಗೋರಕ್ಷನು. ಅವನ ಭಾವ ಮತ್ತು ಕರ್ಮ ಗೌರಕ್ಷ್ಯವು. ಗೋವುಗಳನ್ನು ಸಾಕುವ ವೃತ್ತಿ ಎಂದರ್ಥ. **ವಾಣಿಜ್ಯಂ** = ವ್ಯಾಪಾರ ; ಮಾರುವುದು, ಕೊಳ್ಳುವುದು ಇತ್ಯಾದಿಗಳು ಸ್ವಭಾವಜನ್ಯವಾದ ವೈಶ್ಯನ ಕರ್ಮಗಳು.

ಸೇವೆಮಾಡುವುದೆಂಬ ಕರ್ಮವು ಶೂದ್ರನಿಗೆ ಸ್ವಭಾವಜನ್ಯವಾದ ಕರ್ಮ.

ವರ್ಣಾಶ್ರಮದ ಹೆಸರಿನಲ್ಲಲ್ಲದಿದ್ದರೂ ಈಗಲೂ ಸಹ ಅಧಿಕಾರ ನಡೆಸುವವರು ; ಮಂತ್ರಾಲೋಚಕರು ; ವ್ಯವಸಾಯಮಾಡುವವರು ಮತ್ತು ಸೇವಕರು ಎಂಬ ವಿಂಗಡನೆ ಎಲ್ಲ ದೇಶಗಳಲ್ಲೂ ಇದ್ದೇ ಇದೆ. ಆದರೆ ಗೀತೆಯಲ್ಲಿ ನಿರೂಪಿಸಿರುವಷ್ಟು ವ್ಯವಸ್ಥಿತವಾಗಿಲ್ಲ : ಹೇಗೆಂದರೆ ದೇಶದ ಸಂಪತ್ಸಮೃದ್ಧಿಗೆ ಕಾರಣನಾಗುವವನು ಇಲ್ಲಿ ಹೇಳಿರುವಂತೆ ವೈಶ್ಯ ಅಥವಾ ವ್ಯವಸಾಯಗಾರ. ವೈಶ್ಯನಿಗೆ ಹಂಚಿಕೊಟ್ಟಿರುವ ಕರ್ಮಗಳೆಂದರೆ ಬೇಸಾಯ, ಗೋರಕ್ಷಣೆ ಮತ್ತು ವ್ಯಾಪಾರ. ಈ ಮೂರೂ ಸಹ ಒಂದಕ್ಕೊಂದು ಪೂರಕಗಳಾಗಿವೆ. ಬೇಸಾಯ-ಗೋರಕ್ಷಣೆಗಳು ಒಂದಕ್ಕೊಂದು ಪೂರಕಗಳು.

ಗೋರಕ್ಷಣೆ ಮಾಡದಿದ್ದರೆ ವ್ಯವಸಾಯವೇ ನಡೆಯುತ್ತಿರಲಿಲ್ಲ. ಹಾಲು, ಮೊಸರು, ಗೊಬ್ಬರ, ಉಳುವುದು ಇತ್ಯಾದಿಗಳಿಗೆಲ್ಲಾ ಗೋಸಂಪತ್ತೇ ಮುಖ್ಯ ವಾದುದು. ಆದುದರಿಂದ ಬೇಸಾಯಗಾರನಿಗೆ ಗೋರಕ್ಷಣೆಯು ಅನಿ ವಾರ್ಯ. ಇದರ ಜೊತೆಗೆ ವಾಣಿಜ್ಯವೂ ಸಹ ಇವನಿಗೆ ಸೇರಲೇಬೇಕು. ತಾನು ಬೆಳೆದ ಧಾನ್ಯವನ್ನು ತಾನೇ ಮಾರಾಟಮಾಡಬೇಕು. ಆಗ ಅವನು ಅದರ ಲಾಭವನ್ನು ಪೂರ್ಣವಾಗಿ ಪಡೆಯುತ್ತಾನೆ. ಹೆಚ್ಚು ಬೆಳೆಯಲು ಅವನಿಗೆ ಉತ್ಸಾಹವುಂಟಾಗುತ್ತದೆ. ಧಾರ್ಮಿಕನಾದ ವೈಶ್ಯನು ಹೆಚ್ಚು ಬೆಲೆಯಿಡದೇ ಜನಸಾಮಾನ್ಯರಿಗೆ ಸಹಾಯಮಾಡಲೂ ಸಾಧ್ಯವಾಗುತ್ತದೆ. ಆದರೆ ಇತ್ತೀಚೆಗೆ ವ್ಯವಸಾಯ, ಗೋರಕ್ಷಣೆ ಮತ್ತು ವಾಣಿಜ್ಯಗಳು ಒಂದಕ್ಕೊಂದು ಹೊಂದಿಕೊಂಡು ಹೋಗುತ್ತಿಲ್ಲ. ಗೋಮಾಳಗಳನ್ನು ನಾಶಮಾಡುವ ದುಷ್ಕೃತ್ಯಗಳು ನಡೆಯುತ್ತಿವೆ. ಗೋಮಯವನ್ನು ವರ್ಜನೆಮಾಡಿ ಬೇರೆ ತರಹ ಗೊಬ್ಬರಗಳನ್ನೇ ಉಪಯೋಗಿಸುತ್ತಿರುವುದು ಇದರ ಫಲವೇ ಆಗಿದೆ. ಎರಡನೆಯದಾಗಿ ಕೃಷಿ-ಗೋರಕ್ಷಣೆಗಳ ಜೊತೆಗೆ ವಾಣಿಜ್ಯವು ಸೇರಿ ಕೊಂಡಿಲ್ಲ. ಗೀತೆಯಲ್ಲಿ ಹೇಳಿರುವಂತೆ ಈ ಮೂರೂ ಸಹ ಒಂದಕ್ಕೊಂದು ಪೂರಕಗಳಾಗಿರಬೇಕು. ಗೋರಕ್ಷಣೆಯನ್ನು ಹೆಚ್ಚು ಅರ್ಥಪೂರ್ಣವನ್ನಾಗಿ ಮಾಡಬೇಕು. ಹಾಗೆಮಾಡಿದರೆ ಆರ್ಥಿಕಸ್ಥಿತಿಯು ಹೆಚ್ಚು ಬಲಗೊಳ್ಳುವುದರಲ್ಲಿ ಯಾವ ಸಂಶಯವೂ ಇಲ್ಲ.

ಸ್ವಭಾವ ಎಂದರೇನು? ಸ್ವಭಾವದಿಂದ ಹುಟ್ಟಿದ್ದು ಎಂದರೇನು? ಸ್ವಭಾವದ ವಿಷಯವಾಗಿ ಈ ಹಿಂದೆಯೇ ವಿವರಿಸಲಾಗಿದೆ. ಮನುಷ್ಯನಿಗೆ ಸ್ವಭಾವವೆಂಬುದು ಹಿಂದಿನ ಜನ್ಮದಿಂದ ಅನುವರ್ತಿತವಾಗಿ ಬರುತ್ತದೆ. ತಾನು ಮಾಡಿದ ಪುಣ್ಯ-ಪಾಪಗಳ ಫಲವಾಗಿ ಮತ್ತು ತನ್ನ ಸ್ವಭಾವಕ್ಕೆ ಅನುಗುಣವಾಗಿ ಮಾನವನಿಗೆ ಜನ್ಮಾಂತರವು ಪ್ರಾಪ್ತಿಯಾಗುತ್ತದೆ. ಹುಟ್ಟು-ಸಾವುಗಳಿಗೆ ಸ್ವತಃ ಜೀವನು ಕಾರಣನಾಗುವುದಿಲ್ಲ. ಹುಟ್ಟು-ಸಾವುಗಳು ಕರ್ಮಾ ಧೀನವಾದುವುಗಳು. ಅಥವಾ ಕರ್ಮಾಧ್ಯಕ್ಷನಾದ ಪರಮಾತ್ಮನ ಅಧೀನ. ಕರ್ಮಫಲ, ವಾಸನೆ ಅಥವಾ ಗುಣಗಳಿಂದ ಆವೃತವಾದ ಜೀವವು ಕರ್ಮ ಫಲಾನುಗುಣವಾಗಿ ಆಯಾ ಯೋನಿಗಳೆಡೆಗೆ ಸೆಳೆಯಲ್ಪಡುತ್ತದೆ. ಅದು

ಹುಟ್ಟುವಾಗಲೂ ಕರ್ಮಫಲ ಅಥವಾ ವಾಸನೆಯೊಡನೆಯೇ ಹುಟ್ಟುವುದು. ಈ ವಾಸನೆ ಅಥವಾ ಗುಣಗಳೇ ಆ ಪ್ರಾಣಿಗೆ ಸ್ವಭಾವವಾಗುತ್ತದೆ.)

o o o

**ಕೃಷಿಃ** = ಭೂಮಿಯನ್ನು ಉಳುವುದು. **ಗೌರಕ್ಷ್ಯಂ** = ಪಶುಗಳನ್ನು ಪಾಲಿಸುವಿಕೆ. **ವಾಣಿಜ್ಯಂ** = ಕ್ರಯ-ವಿಕ್ರಯಗಳೇ ಮುಂತಾದುವು ವರ್ತಕನ ಕರ್ಮ. ಇವು ಮೂರೂ ವೈಶ್ಯನ ಸ್ವಭಾವಜನ್ಯವಾದ ಕರ್ಮಗಳು. ಶುಶ್ರೂಷಾಸ್ವಭಾವವು, ಸೇವಾರೂಪವಾದ ಕರ್ಮವು ಶೂದ್ರನಿಗೆ ಸ್ವಾಭಾವಿಕ ವಾಗಿದೆ. (ಶಂ. ಭಾ.)

**ಕೃಷಿಃ** = ಸಸ್ಯೋತ್ಪಾದನೆಗಾಗಿ ಉಳುವಿಕೆ. **ಗೌರಕ್ಷ್ಯಂ** = ಪಶುಪಾಲನೆ. **ವಾಣಿಜ್ಯಂ** = ಹಣವನ್ನು ಸಂಗ್ರಹಮಾಡಲು ಕಾರಣವಾದ ಕ್ರಯ-ವಿಕ್ರಯ ರೂಪವಾದ ಕರ್ಮ. ಇವು ವೈಶ್ಯನಿಗೆ ಸಹಜವಾದ ಕರ್ಮ. ಹಾಗೆಯೇ ಹಿಂದೆ ಹೇಳಿದ ಮೂರು ವರ್ಣಗಳ ಪರಿಚರ್ಯೆಯನ್ನು ಮಾಡುವುದು ಶೂದ್ರನಿಗೆ ಸ್ವಾಭಾವಿಕವಾದ ಕರ್ಮ.

ವರ್ಣಗಳಿಗೆ ಈ ವೃತ್ತಿಗಳೊಡನೆ ಶಾಸ್ತ್ರವಿಹಿತಕರ್ತವ್ಯಗಳಾದ ಯಜ್ಞಾದಿಕರ್ಮಗಳೂ ಉಂಟು ಎಂದು ತಿಳಿಯಬೇಕು. (ರಾ. ಭಾ.)

**ಪರಿಚರ್ಯಾತ್ಮಕಂ** = ತ್ರೈವರ್ಣಿಕರ ಸೇವೆಯನ್ನು ಮಾಡುವ ರೂಪವಾದುದು. (ಮ. ಟೀಕಾ)

**ಓಂ ಸ್ವೇ ಸ್ವೇ ಕರ್ಮಣ್ಯಭಿರತಃ ಸಂಸಿದ್ಧಿಂ ಲಭತೇ ನರಃ ।**
**ಸ್ವಕರ್ಮನಿರತಃ ಸಿದ್ಧಿಂ ಯಥಾ ವಿನ್ದತಿ ತಚ್ಛೃಣು ॥೪೫॥**

ತನ್ನ-ತನ್ನ ಕರ್ಮದಲ್ಲಿ ತತ್ಪರನಾದ ಮನುಷ್ಯನು ಸಂಸಿದ್ಧಿಯನ್ನು ಪಡೆಯುತ್ತಾನೆ. ಸ್ವಕರ್ಮನಿರತನು ಹೇಗೆ ಸಿದ್ಧಿಹೊಂದುತ್ತಾನೆಂಬುದನ್ನು ಹೇಳುವೆನು ; ಕೇಳು.

* * *

(**ಸ್ವೇ ಸ್ವೇ ಕರ್ಮಣಿ ಅಭಿರತಃ** = ತನ್ನ-ತನ್ನ ಕರ್ಮಗಳಲ್ಲಿ ಅಭಿ ರತನಾದವನು ; ತತ್ಪರನಾದವನು. ತನ್ನ ಕರ್ಮ ಎಂದರೆ ತನ್ನ ವರ್ಣೋ ಚಿತವಾದ ಕರ್ಮ. ಅದರಲ್ಲಿಯೇ ತತ್ಪರನಾದವನು. ಅರ್ಥಾತ್ ಬ್ರಾಹ್ಮ

ಣನು ಶಮಾದಿಗಳಲ್ಲಿಯೂ, ಕ್ಷತ್ರಿಯನು ಶೌರ್ಯಾದಿಗಳಲ್ಲಿಯೂ–ದುಷ್ಟ ಶಿಕ್ಷಣ-ಶಿಷ್ಟಪರಿಪಾಲನೆಗಳಲ್ಲಿಯೂ–ಈಶ್ವರಭಾವದಲ್ಲಿಯೂ, ವೈಶ್ಯನು ಕೃಷಿ-ಗೌರಕ್ಷ್ಯ-ವಾಣಿಜ್ಯಗಳಲ್ಲಿಯೂ, ಶೂದ್ರನು ಪರಿಚರ್ಯೆಯಲ್ಲಿಯೂ ನಿರತನಾಗಿರಬೇಕು ; ತತ್ಪರನಾಗಿರಬೇಕು ಎಂದರ್ಥ. ತನ್ನ-ತನ್ನ ಕರ್ಮದಲ್ಲಿ ತತ್ಪರನಾದ 'ನರನು' ಎಂದು ಶ್ರೀಕೃಷ್ಣನು ಸಾಮೂಹಿಕವಾಗಿ ನಾಲ್ಕು ವರ್ಣ ದವರನ್ನೂ ಸೇರಿಸಿಯೇ ಹೇಳಿದ್ದಾನೆ. ನಾಲ್ಕು ವರ್ಣದವರಲ್ಲಿ ಯಾರಾದರೂ ಆಗಬಹುದು, ಅವರು ಸಂಸಿದ್ಧಿಯನ್ನು ಪಡೆಯುತ್ತಾರೆ. ಅದಕ್ಕಿರುವ ಒಂದೇ ಒಂದು ನಿಯಮವೆಂದರೆ **ಸ್ವೇ ಸ್ವೇ ಕರ್ಮಣಿ ಅಭಿರತಃ**–ತನ್ನ-ತನ್ನ ವರ್ಣಕ್ಕೆ ಉಚಿತವಾದ ಕರ್ಮಗಳಲ್ಲಿ ತತ್ಪರನಾಗಿರಬೇಕು. ಸ್ವವರ್ಣೋಕ್ತವಾದ ಕರ್ಮದಲ್ಲಿ ನಿರತನಾಗಿದ್ದರೆ ಅಂತಹವನು ಸಂಸಿದ್ಧಿಯನ್ನು, ಆತ್ಮಜ್ಞಾನವನ್ನು ಅಥವಾ ಆತ್ಮಜ್ಞಾನವನ್ನು ಪಡೆಯಲು ಅರ್ಹತೆಯನ್ನು ಹೊಂದುತ್ತಾನೆ.

ಶ್ರೀಕೃಷ್ಣನು ಪೂರ್ವಾರ್ಧದಲ್ಲಿ ಇಷ್ಟು ಸ್ಪಷ್ಟವಾಗಿ ಹೇಳಿದ್ದರೂ ಸಹ ಸ್ವಕರ್ಮದಲ್ಲಿಯೇ ನಿರತನಾಗಿರಬೇಕೆಂಬುದನ್ನು ಒತ್ತಿ ಹೇಳಲು ಉತ್ತರಾರ್ಧ ದಲ್ಲಿಯೂ ಸಹ **ಸ್ವಕರ್ಮನಿರತಃ** ಎಂದು ಹೇಳಿದ್ದಾನೆ. ತನ್ನ ವರ್ಣೋಚಿತ ವಾದ ಕರ್ಮದಲ್ಲಿಯೇ ನಿರತನಾದವನು ಅಥವಾ ತತ್ಪರನಾದವನು ಯಾವ ರೀತಿಯಲ್ಲಿ ಸಿದ್ಧಿಯನ್ನು ಹೊಂದುತ್ತಾನೆ ಎಂಬುದನ್ನು ಹೇಳುತ್ತೇನೆ, ಅದನ್ನು ಕೇಳು ಎನ್ನುತ್ತಾನೆ.

ಸಾಮಾನ್ಯವಾಗಿ ಇಲ್ಲಿ ಎಲ್ಲರಿಗೂ ಒಂದು ಸಂಶಯವು ಮೂಡ ಬಹುದು. ಒಂದೊಂದು ವರ್ಣದ ಸ್ವಭಾವವೂ ಪ್ರತ್ಯೇಕ-ಪ್ರತ್ಯೇಕವಾಗಿರು ವಾಗ ಈ ನಾಲ್ಕು ವರ್ಣದವರಿಗೂ ಸಮಾನವಾಗಿ ಬ್ರಹ್ಮಜ್ಞಾನವು ಹೇಗೆ ತಾನೇ ಲಭ್ಯವಾಗುತ್ತದೆ?–ಎಂಬ ಪ್ರಶ್ನೆ ಮೂಡಬಹುದು.

ವೇದಾಧ್ಯಯನ ಮುಂತಾದುವು ಆಯಾ ವರ್ಣದವರಿಗೆ ಮಾತ್ರ ವಿಧಿಸಿ ರುವ ಕರ್ಮವಾಗಿರಬಹುದು. ಆದರೆ ಆತ್ಮಜ್ಞಾನವೆಂಬುದು ಮನುಷ್ಯನಾಗಿ ಹುಟ್ಟಿದವರೆಲ್ಲರಿಗೂ ಸಾಧ್ಯ. ಈ ವಿಷಯವನ್ನೇ ಶ್ರೀಕೃಷ್ಣನು ಮುಂದಿನ ಶ್ಲೋಕದಲ್ಲಿ ಸ್ಪಷ್ಟಪಡಿಸಿದ್ದಾನೆ.)

o o o

ಜಾತಿವಿಹಿತವಾದ ಈ ಕರ್ಮಗಳನ್ನು ಸರಿಯಾಗಿ ಅನುಷ್ಠಾನಮಾಡಿದರೆ

ಅವುಗಳಿಗೆ ಸ್ವಾಭಾವಿಕವಾಗಿ ದೊರೆಯುವ ಫಲ ಸ್ವರ್ಗಪ್ರಾಪ್ತಿ. **ವರ್ಣಾಶ್ರಮಾಶ್ಚ ಸ್ವಕರ್ಮನಿಷ್ಠಾಃ ಪ್ರೇತ್ಯ ಕರ್ಮಫಲಮನುಭೂಯ ತತಃ ಶೇಷೇಣ ವಿಶಿಷ್ಟದೇಶಜಾತಿಕುಲಧರ್ಮಾಯುಃಶ್ರುತವೃತ್ತವಿತ್ತಸುಖಮೇಧಸೋ ಜನ್ಮ ಪ್ರತಿಪದ್ಯನ್ತೇ**–ಮುಂತಾದ ಸ್ಮೃತಿಗಳು ಮತ್ತು ಪುರಾಣಗಳ ವಾಕ್ಯಗಳು, ವರ್ಣಾಶ್ರಮಿಗಳಿಗೆ ಬೇರೆ ಬೇರೆ ಲೋಕಗಳ ಪ್ರಾಪ್ತಿಯೆಂಬ ಫಲಭೇದಗಳನ್ನು ಹೇಳುತ್ತವೆ. ಆದರೆ ಅವುಗಳನ್ನು ಬೇರೆ ಬೇರೆ ರೀತಿಯಲ್ಲಿ ಅನುಷ್ಠಾನಮಾಡಿದರೆ ಮುಂದೆ ಹೇಳುವ ಫಲವು ಉಂಟಾಗುತ್ತದೆ. ಕರ್ಮಾಧಿಕಾರಿಯಾದ ಮನುಷ್ಯನು ಮೇಲೆ ಹೇಳಿದ ಲಕ್ಷಣಗಳುಳ್ಳ ತನ್ನ-ತನ್ನ ಕರ್ಮಗಳಲ್ಲಿ ತತ್ಪರನಾಗಿದ್ದರೆ ಸಂಸಿದ್ಧಿಯನ್ನು ಪಡೆಯುತ್ತಾನೆ ಎಂದರೆ ತನ್ನ-ತನ್ನ ಕರ್ಮಗಳನ್ನು ಅನುಷ್ಠಾನಮಾಡುವುದರಿಂದ ಅಶುದ್ಧಿಯು ಹೋದ ಬಳಿಕ ಶರೀರ ಮತ್ತು ಇಂದ್ರಿಯಗಳಿಗೆ ಜ್ಞಾನನಿಷ್ಠೆಯ ಯೋಗ್ಯತೆಯೆಂಬ ಸಿದ್ಧಿಯನ್ನು ಪಡೆಯುತ್ತಾನೆ. ಸ್ವಕರ್ಮಾನುಷ್ಠಾನದಿಂದಲೇ ಸಾಕ್ಷಾತ್ತಾಗಿ ಸಂಸಿದ್ಧಿಯು ದೊರಕುತ್ತದೆಯೇ? ಎಂದರೆ : ಇಲ್ಲ. ಹಾಗಾದರೆ ಹೇಗೆ ದೊರಕುತ್ತದೆ? ಎಂದರೆ : ತನ್ನ ಕರ್ಮಗಳಲ್ಲಿ ತತ್ಪರನಾದ ಮನುಷ್ಯನು ಯಾವ ಪ್ರಕಾರದಿಂದ ಸಿದ್ಧಿಯನ್ನು ಪಡೆಯುತ್ತಾನೆಂಬುದನ್ನು ಹೇಳುತ್ತೇನೆ ; ಕೇಳು.

(ಶಂ. ಭಾ.)

ಮೇಲೆ ಹೇಳಿದ ತನ್ನ-ತನ್ನ ಕರ್ಮದಲ್ಲಿ ನಿರತನಾದ ಮನುಷ್ಯನು ಪರಮಪದವನ್ನು ಹೊಂದುತ್ತಾನೆ. ಸ್ವಕರ್ಮದಲ್ಲಿ ನಿರತನಾದವನು ಹೇಗೆ ಸಿದ್ಧಿಯನ್ನು ಹೊಂದುತ್ತಾನೆ? ಪರಮಪದವನ್ನು ಹೇಗೆ ಹೊಂದುತ್ತಾನೆ?–ಎಂಬುದನ್ನು ಹೇಳುತ್ತೇನೆ, ಕೇಳು. (ರಾ. ಭಾ.)

ವಿನ್ದತಿ = ಪಡೆಯುತ್ತಾನೆ. (ಮ. ಟೀಕಾ)

**ಓಂ ಯತಃ ಪ್ರವೃತ್ತಿರ್ಭೂತಾನಾಂ ಯೇನ ಸರ್ವಮಿದಂ ತತಮ್ ।**
**ಸ್ವಕರ್ಮಣಾ ತಮಭ್ಯರ್ಚ್ಯ ಸಿದ್ಧಿಂ ವಿನ್ದತಿ ಮಾನವಃ ॥೪೬॥**

ಯಾವಾತನಿಂದ ಭೂತಗಳ ಪ್ರವೃತ್ತಿಯೋ (ಉತ್ಪತ್ತಿಯೋ) ಮತ್ತು ಯಾರಿಂದ ಈ ಜಗತ್ತೆಲ್ಲವೂ ವ್ಯಾಪ್ತವಾಗಿರುವುದೋ–ಅವನನ್ನು ಸ್ವಕರ್ಮದಿಂದ ಪೂಜಿಸಿದರೆ ಮಾನವನು ಸಿದ್ಧಿಯನ್ನು ಹೊಂದುತ್ತಾನೆ.

* * *

(**ಯತಃ ಪ್ರವೃತ್ತಿರ್ಭೂತಾನಾಂ** = ವಿಶ್ವದಲ್ಲಿರುವ ಸಕಲಪ್ರಾಣಿಗಳ ಉತ್ಪತ್ತಿಯೂ ಸಹ ಎಲ್ಲಿಂದ ಆಗಿರುವುದೋ? ಎಂದರೆ : ಸಕಲಪ್ರಾಣಿಗಳ ಉತ್ಪತ್ತಿಗೂ ಪರಬ್ರಹ್ಮವೇ ಕಾರಣ. '**ಮಮ ಯೋನಿರ್ಮಹದ್ಬ್ರಹ್ಮ ತಸ್ಮಿನ್ಗರ್ಭಂ ದಧಾಮ್ಯಹಮ್**-೧೪-೩ ನನ್ನ ಸ್ವತ್ತಾಗಿರುವ ನನ್ನ ಸಂಬಂಧವಾದ ತ್ರಿಗುಣಾತ್ಮಕವಾದ ಮಾಯೆಯೆಂಬ ಪ್ರಕೃತಿಯು ಯೋನಿ. ಸರ್ವಭೂತಗಳಿಗೂ ಕಾರಣವಾದುದು. ಆ ಮಹತ್ತಾದ ಬ್ರಹ್ಮವೆಂಬ ಯೋನಿಯಲ್ಲಿ ಗರ್ಭವನ್ನು (ಹಿರಣ್ಯಗರ್ಭನು ಹುಟ್ಟುವುದಕ್ಕೆ ಬೇಕಾದ ಬೀಜವನ್ನೂ ಎಲ್ಲ ಭೂತಗಳೂ ಹುಟ್ಟುವುದಕ್ಕೆ ಬೇಕಾದ ಬೀಜವನ್ನೂ) ಇಡುತ್ತೇನೆ' ಎಂದು ಭಗವಂತನೇ ಹೇಳಿದ್ದಾನೆ. ಆದುದರಿಂದ ಎಲ್ಲ ಪ್ರಾಣಿಗಳೂ ಹುಟ್ಟುವುದು ಈಶ್ವರನಿಂದಲೇ. **ಯೇನ ಸರ್ವಮಿದಂ ತತಮ್** = ಯಾರಿಂದ ಅಖಂಡಬ್ರಹ್ಮಾಂಡವೂ ವ್ಯಾಪ್ತವಾಗಿರುವುದೋ? ಎಂದರೆ : ಅವನಿಲ್ಲದ ಜಾಗವೇ ಇಲ್ಲ. **ಸರ್ವಂ ವಿಷ್ಣುಮಯಂ ಜಗತ್**–ಅವನು ಸರ್ವತ್ರ ವ್ಯಾಪ್ತನಾಗಿದ್ದಾನೆ. ಅವನನ್ನು ಹುಡುಕಿಕೊಂಡು ಹೋಗಬೇಕಾದ ಪ್ರಮೇಯವೇ ಇಲ್ಲ. ಅಂತಹ ಪರಮಾತ್ಮನನ್ನು **ಸ್ವಕರ್ಮಣಾ ಅಭ್ಯರ್ಚ್ಯ** = ತನ್ನ ವರ್ಣೋಚಿತವಾದ ಕರ್ಮದಿಂದಲೇ ಪೂಜೆಮಾಡುವುದು. ಇದು ಬಹಳ ಮುಖ್ಯವಾದ ವಿಷಯ. ಒಂದು ವರ್ಣದವನು ಮತ್ತೊಂದು ವರ್ಣದವನಿಗೆ ವಿಹಿತವಾದ ಕರ್ಮಗಳನ್ನು ಕುತೂಹಲದಿಂದಲೋ ಅಥವಾ ಅದು ತನ್ನದಕ್ಕಿಂತಲೂ ಉತ್ತಮ ಎಂಬ ಮೂಢನಂಬಿಕೆಯಿಂದಲೋ ಮಾಡಿದರೆ ಅದು ಅಸಹಜವಾದ ಕರ್ಮ, ಚಾಪಲ್ಯಕರ್ಮ, ಸ್ವಕರ್ಮವಾಗುವುದಿಲ್ಲ. ಅವನವನ ವರ್ಣಾನುಸಾರವಾದ ಕರ್ಮಗಳನ್ನು ಮಾಡುವುದು ಮತ್ತು ಆ ಕರ್ಮವನ್ನು ಫಲಸಹಿತವಾಗಿ ಪರಮಾತ್ಮನಿಗೆ ಅರ್ಪಿಸುವುದು–ಇದೇ ಅವನ ಪೂಜೆ.

**ಸಿದ್ಧಿಂ ವಿನ್ದತಿ ಮಾನವಃ** = ಮನುಷ್ಯನು ಆತ್ಮಸಿದ್ಧಿಯನ್ನು ಹೊಂದುತ್ತಾನೆ ಅಥವಾ ಹೊಂದಲು ಯೋಗ್ಯನಾಗುತ್ತಾನೆ. ಬ್ರಹ್ಮಸಾಕ್ಷಾತ್ಕಾರಸಿದ್ಧಿಯನ್ನು ಅಥವಾ ಅದಕ್ಕೆ ಅವಶ್ಯವಾದ ಜ್ಞಾನನಿಷ್ಠಾಯೋಗ್ಯತೆಯ ಸಿದ್ಧಿಯನ್ನು ಭಗವದನುಗ್ರಹದಿಂದ ಪಡೆಯುತ್ತಾನೆ. ಇದೇ ಸ್ವಧರ್ಮನಿರತನಾದವನು ಸಿದ್ಧಿಯನ್ನು ಪಡೆಯುವ ವಿಧಾನ. ಅವನವನ ವರ್ಣೋಚಿತವಾದ ಕರ್ಮವು ಅವನಿಗೆ ಪರಮಪವಿತ್ರವಾದುದು. ತನ್ನ ಕರ್ಮದಲ್ಲಿ ಬೇಸರ

ಗೊಳ್ಳುವ ಅಥವಾ ನಾಚಿಕೆಪಟ್ಟುಕೊಳ್ಳುವ ಕಾರಣವೇನೂ ಇಲ್ಲ. ಈ ಕರ್ಮ ಗಳಿಂದಲೇ ಪರಮಾತ್ಮನನ್ನು ಆರಾಧಿಸಿ ಮಾನವನು ಸಿದ್ಧಿಯನ್ನು ಪಡೆಯ ಬಹುದೆಂದು ಶ್ರೀಕೃಷ್ಣನು ಹೇಳಿರುವಾಗ ಆ ಕರ್ಮಗಳ ಶ್ರೇಷ್ಠತೆಯನ್ನು ಎಲ್ಲರೂ ಮನಗಾಣಬಹುದಾಗಿದೆ. ಕರ್ಮಮಾಡುವಾಗ ಫಲಾಭಿಸಂಧಿಯಿಲ್ಲದೇ ಕರ್ಮಮಾಡುವುದು ಮತ್ತು ಪರಮಾತ್ಮನ ಪ್ರೀತ್ಯರ್ಥವಾಗಿ ಕರ್ಮಮಾಡುವುದು–ಇವಿಷ್ಟರಿಂದ ಮಾನವನಿಗೆ ಚಿತ್ತಶುದ್ಧಿಯಾಗಿ ಆತ್ಮ ಸಾಕ್ಷಾತ್ಕಾರವನ್ನು ಪಡೆಯುತ್ತಾನೆ–ಎನ್ನುತ್ತಾನೆ, ಶ್ರೀಕೃಷ್ಣ. )

o o o

ಯಾವ ಅಂತರ್ಯಾಮಿಯಾದ ಈಶ್ವರನಿಂದ ಪ್ರಾಣಿಗಳ ಉತ್ಪತ್ತಿ ಅಥವಾ ಚೇಷ್ಟೆಯು ಉಂಟಾಗುತ್ತದೆಯೋ ಮತ್ತು ಯಾವನಿಂದ ಈ ಜಗತ್ತೆಲ್ಲವೂ ವ್ಯಾಪಿಸಲ್ಪಟ್ಟಿದೆಯೋ–ಆ ಈಶ್ವರನನ್ನು ಹಿಂದೆ ಹೇಳಿದ ರೀತಿ ಯಲ್ಲಿ ತನ್ನ ವರ್ಣಕ್ಕೆ ಅನುಗುಣವಾಗಿ ಹೇಳಲ್ಪಟ್ಟಿರುವ ಕರ್ಮಗಳಿಂದ ಆರಾಧಿಸಿ ಕೇವಲ ಜ್ಞಾನನಿಷ್ಠೆಯ ಯೋಗ್ಯತೆಯೆಂಬ ಸಿದ್ಧಿಯನ್ನು ಮನುಷ್ಯನು ಪಡೆಯುತ್ತಾನೆ. (ಶಂ. ಭಾ.)

ಪ್ರಾಣಿಗಳ ಉತ್ಪತ್ತಿಯೇ ಮುಂತಾದ ಪ್ರವೃತ್ತಿಯು ಯಾವನಿಂದ ಉಂಟಾಗುತ್ತಿದೆಯೋ ಮತ್ತು ಯಾವನಿಂದ ಇವೆಲ್ಲವೂ ವ್ಯಾಪಿಸಲ್ಪಟ್ಟಿದೆಯೋ ಅಂತಹ ಇಂದ್ರಾದಿಗಳಿಗೂ ಅಂತರಾತ್ಮನಾಗಿರುವ ನನ್ನನ್ನು ಸ್ವಕರ್ಮದಿಂದ ಆರಾಧಿಸಿ, ನನ್ನ ಅನುಗ್ರಹದಿಂದ ನನ್ನನ್ನು ಹೊಂದುವಿಕೆಯೆಂಬ ಸಿದ್ಧಿಯನ್ನು ಮನುಷ್ಯನು ಪಡೆಯುತ್ತಾನೆ. (ರಾ. ಭಾ.)

ಪ್ರವೃತ್ತಿಃ=ಚೇಷ್ಟೆ. (ಮ. ಟೀಕಾ.)

**ಓಂ ಶ್ರೇಯಾನ್ಸ್ವಧರ್ಮೋ ವಿಗುಣಃ ಪರಧರ್ಮಾತ್ಸ್ವನುಷ್ಠಿತಾತ್ ।**
**ಸ್ವಭಾವನಿಯತಂ ಕರ್ಮ ಕುರ್ವನ್ನಾಪ್ನೋತಿ ಕಿಲ್ಬಿಷಮ್ ॥೪೭॥**

ಚೆನ್ನಾಗಿ ಅನುಷ್ಠಾನಮಾಡಿದ ಪರಧರ್ಮಕ್ಕಿಂತಲೂ ವಿಗುಣವಾದ ತನ್ನ ಧರ್ಮವೇ ಮೇಲು. ಸ್ವಭಾವನಿಯತವಾದ ಕರ್ಮವನ್ನು ಮಾಡುವವನು ಪಾಪವನ್ನು ಹೊಂದುವುದಿಲ್ಲ.

* * *

(ಪರಕೀಯಧರ್ಮಕ್ಕಿಂತಲೂ ಸ್ವಧರ್ಮವು ಒಳ್ಳೆಯದು, ಶ್ರೇಯಾ

**ಸ್ವಧರ್ಮೋ ವಿಗುಣಃ** ಎಂದು ೩-೩೫ ಹೇಳಿದುದನ್ನೇ ಉಪಸಂಹಾರಾತ್ಮಕವಾದ ಈ ಅಧ್ಯಾಯದಲ್ಲಿಯೂ ಮತ್ತೆ ಸುವ್ಯಕ್ತವಾಗಿ ಹೇಳಿದ್ದಾನೆ.

**ವಿಗುಣೋಽಪಿ** (ಅಪಿ ಎಂಬುದನ್ನು ಅಧ್ಯಾಹಾರಮಾಡಿಕೊಳ್ಳಬೇಕು.) **ಸ್ವಧರ್ಮಃ ಸು-ಅನುಷ್ಠಿತಾತ್ ಪರಧರ್ಮಾತ್ ಶ್ರೇಯಾನ್। ಸ್ವಧರ್ಮಃ ವಿಗುಣೋಽಪಿ** = ಸ್ವಧರ್ಮವು ಎಂದರೆ ತನ್ನ ವರ್ಣೋಚಿತವಾದ ಧರ್ಮವು ಗುಣಹೀನವಾಗಿದ್ದರೂ. ಸ್ವಧರ್ಮ ಎಂದರೆ ಆಯಾ ವರ್ಣದವನಿಗೆ ಸೇರಿದ ಅವನವನ ಧರ್ಮ. ಬ್ರಾಹ್ಮಣನಿಗೆ ಬ್ರಾಹ್ಮಣಧರ್ಮ. ಕ್ಷತ್ರಿಯನಿಗೆ ಕ್ಷತ್ರಿಯಧರ್ಮ. ವೈಶ್ಯನಿಗೆ ವೈಶ್ಯಧರ್ಮ. ಶೂದ್ರನಿಗೆ ಶೂದ್ರಧರ್ಮ. ಇವುಗಳು **ವಿಗುಣೋಽಪಿ** ಗುಣರಹಿತವಾಗಿದ್ದರೂ ಎಂದರೆ ಒಂದೊಂದು ವರ್ಣಧರ್ಮದಲ್ಲಿಯೂ ಒಂದೊಂದು ದೋಷವಿರುವಂತೆ ಕಂಡುಬರುತ್ತದೆ. ಮೇಲಾಗಿ ಕೆಲವು ಮನುಷ್ಯರಿಗೆ ಯಾವಾಗಲೂ 'ತಮ್ಮ ವರ್ಣದ ಧರ್ಮಾಚರಣೆಯು ಕಷ್ಟ. ಇತರವರ್ಣದ ಧರ್ಮಾಚರಣೆಯು ಸುಲಭ' ಎಂಬ ಭಾವನೆಯಿರುತ್ತದೆ. ಹಸುವಿಗೆ ತಾನು ಮೇಯುತ್ತಿರುವ ಕಡೆಗಿಂತಲೂ ದೂರದಲ್ಲಿ ದಟ್ಟವಾಗಿ ಹುಲ್ಲಿರುವಂತೆ ಕಾಣುತ್ತದೆ. ಎಲ್ಲ ಮನುಷ್ಯರೂ ತಾನು ಕ್ಲಿಷ್ಟಕರ್ಮಿ, ತನ್ನ ಪಕ್ಕದವರು ಸುಖೀ ಎಂದೇ ಭಾವಿಸುತ್ತಾರೆ. ಇದು ಮಾನವನ ಸ್ವಭಾವ. ಹೀಗೆಯೇ ತಿಳಿವಳಿಕೆಯಿಲ್ಲದ ಬ್ರಾಹ್ಮಣನು ಕ್ಷತ್ರಿಯ ಧರ್ಮವನ್ನು ಹೊಗಳುತ್ತಾನೆ. ಅವಿವೇಕಿಯಾದ ಕ್ಷತ್ರಿಯನು ಬ್ರಾಹ್ಮಣ ಧರ್ಮವು ಶ್ರೇಷ್ಠವೆನ್ನುತ್ತಾನೆ. ಹೀಗೆ ತನ್ನ ಧರ್ಮದಲ್ಲಿ ಗುಣದ ನ್ಯೂನತೆಯಿರುವಂತೆ ಪ್ರತಿಯೊಂದು ವರ್ಣದವನಿಗೂ ಭಾಸವಾಗುತ್ತದೆ. ತನ್ನ ವರ್ಣದ ಧರ್ಮವು ಕಷ್ಟಕರವಾದುದೆಂದು ಪ್ರತಿಯೊಂದು ವರ್ಣದವನೂ ಭಾವಿಸುತ್ತಾನೆ. ಆದರೆ ಈ ವರ್ಣಧರ್ಮಗಳು ಅವರವರ ಸ್ವಭಾವಾನುಗುಣವಾಗಿ ವಿಭಾಗಿಸಲ್ಪಟ್ಟಿವೆ. ಆದುದರಿಂದ ಬ್ರಾಹ್ಮಣನಾದವನಿಗೆ ಬ್ರಾಹ್ಮಣ ಕರ್ಮವು ಕಷ್ಟವೂ ಅಲ್ಲ ; ಅಸಹ್ಯವೂ ಅಲ್ಲ. ಉಳಿದ ವರ್ಣದವರಿಗೂ ಹೀಗೆಯೇ. ಈ ವರ್ಣಧರ್ಮಗಳು ಸಮಾಜದ ಸುವ್ಯವಸ್ಥೆಗೆ ಪೂರಕಗಳಾಗಿರುವುದರಿಂದ ಇವುಗಳಲ್ಲಿ ಯಾವ ವಿಧವಾದ ಹಿರಿಮೆ-ಕಿರಿಮೆಗಳೂ ಇಲ್ಲ. ಯಾವ ವರ್ಣದವರಿಲ್ಲದಿದ್ದರೂ ಧರ್ಮಮೂಲವಾದ ಸಮಾಜವು ಸುವ್ಯವಸ್ಥಿತವಾಗಿರುವುದಿಲ್ಲ. ಆದುದರಿಂದ ಒಬ್ಬನ ಧರ್ಮವು ವಿಗುಣ ; ಮತ್ತೊಬ್ಬನ ಧರ್ಮವು ಸುಗುಣ–ಎಂಬ ಪ್ರಶ್ನೆಯೇ

ಇಲ್ಲ. ಅವರವರಿಗೆ ವಿಹಿತವಾಗಿರುವ ಸಹಜಧರ್ಮವು ಶ್ರೇಷ್ಠವಾದುದು. ಮತ್ತೊಬ್ಬರಿಗೆ ವಿಹಿತವಾದ ಧರ್ಮವು ಅಸಹಜವಾದುದು. ಅಂತಹ ಅಸಹಜಧರ್ಮಕ್ಕೆ ಕೈಹಾಕಿದರೆ 'ತನ್ನದರಿಂದ ಜಾರಿದನು. ಮತ್ತೊಂದು ಸಿದ್ಧಿಸಲಿಲ್ಲ.' '**ಇತೋ ಭ್ರಷ್ಟಃ ತತೋ ಭ್ರಷ್ಟಃ**' ಎಂಬ ಸ್ಥಿತಿಯುಂಟಾಗುತ್ತದೆ. ಆದುದರಿಂದ **ಶ್ರೇಯಾನ್ಸ್ವಧರ್ಮೋ ವಿಗುಣಃ**– ಎಂದು ಶ್ರೀಕೃಷ್ಣನು ಸ್ಪಷ್ಟವಾಗಿ ಹೇಳಿದ್ದಾನೆ. ಆದರೆ ನನ್ನ ಧರ್ಮದಲ್ಲಿ ನನಗೆ ದೋಷವು ಕಾಣುತ್ತಿದೆಯಲ್ಲಾ? ಎಂದರೆ ಅದಕ್ಕುತ್ತರವಾಗಿ ಶ್ರೀಕೃಷ್ಣನು ಹೇಳುತ್ತಾನೆ. **ಸ್ವಭಾವನಿಯತಂ ಕರ್ಮ ಕುರ್ವನ್ ಕಿಲ್ಬಿಷಂ ನ ಆಪ್ನೋತಿ** = ತನ್ನ ಸ್ವಭಾವಕ್ಕೆ ನಿಯತವಾದ ಕರ್ಮವನ್ನು ಮಾಡುತ್ತಿರುವವನು (ಆ ಕರ್ಮವು ಯದ್ಯಪಿ ಇತರ ಸ್ವಭಾವದವರ ದೃಷ್ಟಿಯಿಂದ ಪಾಪಕರವೆಂದು ಕಂಡುಬಂದರೂ ಸಹ) ತನ್ನ ಸ್ವಭಾವಾನುಗುಣವಾಗಿ ಪಡೆದುಕೊಂಡ ವರ್ಣದ ನಿಯತವಾದ ಕರ್ಮಗಳನ್ನು ಮಾಡುವವನು ಪಾಪವನ್ನು ಹೊಂದುವುದಿಲ್ಲ.

ಸ್ವಧರ್ಮವೇ ಪ್ರತಿಯೊಬ್ಬನಿಗೂ ರಕ್ಷಕವಾಗುತ್ತದೆ. ವಿಷವು ಸಾಮಾನ್ಯ ವಾಗಿ ಎಲ್ಲರಿಗೂ ಮರಣಕಾರಿಯೆಂಬುದು ನಿಜ. ಆದರೆ ಅದರಲ್ಲಿಯೇ ಹುಟ್ಟಿಕೊಂಡ ಹುಳುವಿಗೆ ಅದು ಮರಣಕಾರಿಯಾಗುವುದಿಲ್ಲ. ವಿಷವೇ ಹುಳುವನ್ನು ರಕ್ಷಿಸುತ್ತದೆ. ತಾಯಿಯು ಕುರೂಪಿಯಾಗಿರಬಹುದು. ಆದರೆ ಮಗುವನ್ನು ರಕ್ಷಣೆಮಾಡಲು ರತಿಯಂತೆ ರೂಪವತಿಯಾದ ಹೆಂಗಸಿನಿಂದ ಪ್ರಯೋಜನವಾಗುವುದಿಲ್ಲ. ತಾಯಿಯು ಕುರೂಪಿಯಾದರೂ ಅವಳೇ ತನ್ನ ಮಗುವನ್ನು ರಕ್ಷಿಸುತ್ತಾಳೆ. ನೀರು ಮೀನುಗಳನ್ನು ರಕ್ಷಣೆಮಾಡುತ್ತದೆ. ಆದರೆ ನೀರಿಗಿಂತಲೂ ಹೆಚ್ಚು ಗುಣವಿರುವುದೆಂಬ ಕಾರಣದಿಂದ ಹಾಲಿನಲ್ಲಿ ಮೀನುಗಳು ಬದುಕಲಾರವು. ಬೇವಿನಸೊಪ್ಪು ಕಹಿಯಾಗಿರುವುದೆಂಬ ಕಾರಣದಿಂದ ಅದನ್ನು ವರ್ಜಿಸಬಾರದು. ಅದರ ಸೇವನೆಯಿಂದ ಶರೀರವು ವಜ್ರಕಾಯವಾಗುವುದೆಂಬುದನ್ನು ಮರೆಯಬಾರದು.

ಸ್ವವರ್ಣೋಕ್ತವಾದ ಕರ್ಮಗಳ ಮೂಲಕವೇ ಪರಮಾತ್ಮನನ್ನು ಆರಾಧನೆಮಾಡುವುದರಿಂದ ಮೋಕ್ಷದ ಸಿದ್ಧಿಯಾಗುತ್ತದೆ. ಅಥವಾ ಮೋಕ್ಷಕ್ಕೆ ಅರ್ಹತೆಯುಂಟಾಗುತ್ತದೆ.)

o o o

ಸ್ವಧರ್ಮವು ಗುಣರಹಿತವಾಗಿದ್ದರೂ ಅದು ಚೆನ್ನಾಗಿ ಅನುಷ್ಠಾನ ಮಾಡಲ್ಪಟ್ಟ ಮತ್ತೊಬ್ಬನ ಧರ್ಮಕ್ಕಿಂತಲೂ ಶ್ರೇಷ್ಠ. ಸ್ವಭಾವದಿಂದ ನಿಯತ ವಾಗಿರುವ ಕರ್ಮಗಳನ್ನು ಮಾಡುವ ಮನುಷ್ಯನಿಗೆ ಪಾಪವುಂಟಾಗುವುದಿಲ್ಲ. ಉದಾಹರಣೆಗೆ : ವಿಷದಲ್ಲಿ ಹುಟ್ಟಿದ ಹುಳುವಿಗೆ ವಿಷವು ದೋಷಕಾರಕ ವಾಗುವುದಿಲ್ಲ. ಹಿಂದೆ ಸ್ವಭಾವಜಂ ಎಂಬ ಪದದಿಂದ ಹೇಳಿದ ಆಶಯವನ್ನೇ ಸ್ವಭಾವನಿಯತಂ ಎಂಬ ಇಲ್ಲಿರುವ ಪದವು ಹೇಳುತ್ತದೆ. (ಶಂ. ಭಾ.)

ಹೀಗೆ ಕರ್ತೃತ್ವವೇ ಮುಂತಾದುವುಗಳನ್ನು ತೊರೆದ ನನ್ನ ಆರಾಧನಾ ರೂಪವಾದ ಸ್ವಧರ್ಮವು ಚೆನ್ನಾಗಿ ಆಚರಿಸಲ್ಪಟ್ಟ ಪರಧರ್ಮಕ್ಕಿಂತಲೂ ಶ್ರೇಷ್ಠವಾದುದು. ಸ್ವಧರ್ಮ ಎಂದರೆ ತಾನೇ ಸ್ವೀಕರಿಸಲು ಯೋಗ್ಯವಾದ ಧರ್ಮ. ಪ್ರಕೃತಿಯ ಸಂಸರ್ಗಹೊಂದಿರುವ ಪುರುಷನಿಗೆ ಇಂದ್ರಿಯವ್ಯಾಪಾರ ರೂಪವಾದ ಕರ್ಮಯೋಗವೆಂಬ ಧರ್ಮವು ಸುಲಭಸಾಧ್ಯವಾದುದು. ಆದುದರಿಂದ ಕರ್ಮಯೋಗವೆಂಬ ಸ್ವಧರ್ಮವು ವಿಗುಣವಾಗಿದ್ದರೂ ಪರಧರ್ಮವಾಗಿರುವ ಜ್ಞಾನಯೋಗಕ್ಕಿಂತಲೂ ಶ್ರೇಯಸ್ಕರವಾದುದು. ಜ್ಞಾನ ಯೋಗವು ಇಂದ್ರಿಯಜಯದಲ್ಲಿ ನಿಪುಣನಾದ ಪುರುಷನ ಧರ್ಮವಾದು ದರಿಂದ ಪರಧರ್ಮ. ಅದರಲ್ಲಿ ಎಲ್ಲ ಇಂದ್ರಿಯಗಳನ್ನೂ ನಿಯಮನ ಮಾಡುವ ಅವಶ್ಯಕತೆ ಇದೆ. ಅದರ ಅನುಷ್ಠಾನದಲ್ಲಿ ಪ್ರಮಾದಗಳು ಒದಗುತ್ತವೆ. ಎಂದಾದರೊಮ್ಮೆ ಅದನ್ನು ಚೆನ್ನಾಗಿ ಇವನು ಅನುಷ್ಠಾನಮಾಡಬಹು ದಾದರೂ ಅದು ಶ್ರೇಯಸ್ಕರವಲ್ಲ. (ರಾ. ಭಾ.)

ಶ್ರೇಯಾನ್ = ಪುರುಷಾರ್ಥಸಾಧನವಾದುದು. (ಮ. ಟೀಕಾ)

**ಓಂ ಸಹಜಂ ಕರ್ಮ ಕೌನ್ತೇಯ ಸದೋಷಮಪಿ ನ ತ್ಯಜೇತ್ ।**
**ಸರ್ವಾರಮ್ಭಾ ಹಿ ದೋಷೇಣ ಧೂಮೇನಾಗ್ನಿರಿವಾವೃತಾಃ ॥೪೮॥**

ಕುಂತೀಪುತ್ರ! ಸಹಜವಾದ ಕರ್ಮವು ದೋಷಯುಕ್ತವಾಗಿದ್ದರೂ ಅದನ್ನು ಬಿಡತಕ್ಕುದ್ದಲ್ಲ. ಏಕೆಂದರೆ : ಅಗ್ನಿಯು ಹೊಗೆಯಿಂದ ಆವರಿಸ ಲ್ಪಟ್ಟಿರುವಂತೆ ಎಲ್ಲ ಆರಂಭಗಳೂ (ಕರ್ಮಗಳೂ) ದೋಷದಿಂದ ಆವೃತ ವಾಗಿರುತ್ತವೆ.

* * *

(ಕರ್ಮವು ಸಹಜವಾದುದು ಎನ್ನುತ್ತಾನೆ ಶ್ರೀಕೃಷ್ಣ. **ಕರ್ಮ ಸಹಜಂ**=ಜೊತೆಯಲ್ಲೇ ಹುಟ್ಟಿದುದು. ಸ್ವಾಭಾವಿಕವಾದುದು. ಪ್ರವೃತ್ತಿಗೆ ಅನುಗುಣವಾದುದು. ಆಹಾರ, ನಿದ್ರೆ ಮುಂತಾದ ಅನಿವಾರ್ಯವಾದ ಕರ್ಮಗಳು ಇಲ್ಲಿ ಉದ್ದಿಷ್ಟವಾಗಿಲ್ಲ. ಅವನ ಜನ್ಮ-ಪ್ರಕೃತಿಗಳಿಗೆ ಅನುಗುಣವಾಗಿ ಅವನು ಶ್ರೇಯಸ್ಸಿಗೋಸ್ಕರ ಶಾಸ್ತ್ರದಲ್ಲಿ ವಿಧಾನಮಾಡಿರುವ ಕರ್ಮವನ್ನು ಇಲ್ಲಿ **ಸಹಜಂ ಕರ್ಮ** ಎಂದು ಕರೆದಿದೆ. ಹುಟ್ಟಿದೊಡನೆಯೇ ಆಯಾ ವರ್ಣಕ್ಕೆ ಅನುಸಾರವಾಗಿ ಪ್ರಾಪ್ತವಾಗುವ ಕರ್ಮ. ಬ್ರಾಹ್ಮಣಯೋನಿಯಲ್ಲಿ ಹುಟ್ಟಿದವನಿಗೆ ಬ್ರಾಹ್ಮಣಕರ್ಮ. ಕ್ಷತ್ರಿಯಯೋನಿಯಲ್ಲಿ ಹುಟ್ಟಿದವನಿಗೆ ಕ್ಷತ್ರಿಯಕರ್ಮ–ಇತ್ಯಾದಿಗಳು. ದೋಷದಿಂದ ಕೂಡಿದ್ದರೂ ಇವು ಆಯಾ ವರ್ಣದವರ ಸಹಜಕರ್ಮಗಳು. ಈ ಕರ್ಮಗಳು ದೋಷಯುಕ್ತವಾಗಿದ್ದರೂ ಬಿಡಕೂಡದು. ಕರ್ಮ ಅಥವಾ ಕ್ರಿಯೆಯು ದೋಷದಿಂದ ಕೂಡಿಯೇ ಇರುತ್ತದೆ. ದೋಷವಿಲ್ಲದೇ ಯಾವ ಕರ್ಮವನ್ನೂ ಮಾಡುವುದಕ್ಕಾಗುವುದಿಲ್ಲ. ಜೇನುತುಪ್ಪವನ್ನು ಬಿಡಿಸುವಾಗ ಹುಳುಗಳು ಕಡಿಯುತ್ತವೆ. ಹೊಗೆ ಹಾಕಿ ಅವುಗಳನ್ನು ಓಡಿಸಬೇಕಾಗುತ್ತದೆ. ಬಿಡಿಸುವುದರಲ್ಲಿ ಇರುವ ದೋಷವಿದು. ದೋಷವಿದೆಯೆಂದು ಜೇನನ್ನು ಬಿಡಿಸದೇ ಯಾರೂ ಇರುವುದಿಲ್ಲ. ನಡೆಯುವವನು ಎಡವದೇ ಇರುವುದಿಲ್ಲ. ಲೌಕಿಕಕರ್ಮವಾದರೂ ಅದರಲ್ಲಿಯೂ ದೋಷವಿದ್ದೇ ಇರುತ್ತದೆ. ದೋಷವಿದ್ದರೂ ಸಹ ನಾವು ಕರ್ಮ ಮಾಡದೇ ಇರುವುದಿಲ್ಲ. ಮದುವೆಯೆಂಬುದು ಒಂದು ಕರ್ಮ. ಅದರಲ್ಲಿರುವ ದೋಷ ಸಂಸಾರನಿರ್ವಹಣೆ. ನಾಲ್ಕು ಮಕ್ಕಳಾದರೆ ಮದುವೆಯೇಕಾದೆನೋ ಎನ್ನಿಸಲೂಬಹುದು. ಆದರೆ ಯಾರೂ ಮದುವೆಯಾಗುವುದನ್ನು ನಿಲ್ಲಿಸುವುದಿಲ್ಲ. ಅದಕ್ಕೆ ಒಂದು ಪ್ರಯೋಜನವುಂಟು. ಧರ್ಮ, ಪ್ರಜಾಸಂಪತ್ತು ಇವುಗಳನ್ನು ಪಡೆಯುವುದೇ ಪ್ರಯೋಜನ. ಹಾಗೆಯೇ ವರ್ಣಾಶ್ರಮಧರ್ಮಗಳಲ್ಲಿಯೂ ದೋಷಗಳಿವೆ. ಅವುಗಳಲ್ಲಿ ಕೆಲವು ದೋಷಗಳಿದ್ದರೂ ಇರಬಹುದು. ಕರ್ತವ್ಯದೃಷ್ಟಿಯಿಂದ ನೋಡಿದರೆ ಯಾವ ದೋಷವೂ ಇಲ್ಲ. ಆದರೆ ಅಸಹಜಸ್ಥಿತಿಯಲ್ಲಿ ಯೋಚಿಸಿದರೆ ದೋಷವು ಕಾಣಬಹುದು. ಯುದ್ಧವು ಕ್ಷತ್ರಿಯಧರ್ಮ. ಆದರೆ ಧರ್ಮಯುದ್ಧದಲ್ಲಿ ಬಂಧು-ಮಿತ್ರರನ್ನೇ ಕೊಲ್ಲಬೇಕಾಗುತ್ತದೆ. 'ಇದು ದೋಷ' ಎಂದು

ಯೋಚಿಸಬಹುದು. ಅದು ಸಹಜಧರ್ಮವಾದುದರಿಂದ ದೋಷವಿಲ್ಲ. ಒಂದು ವೇಳೆ ಸಹಜಧರ್ಮವು ದೋಷಯುಕ್ತವಾಗಿದ್ದರೂ ಬಿಡಕೂಡದು. ಹೀಗೆ ಎರಡು ರೀತಿಯಲ್ಲಿಯೂ ಯುದ್ಧಮಾಡುವುದು ಸಾಧು ಎಂದು ಪ್ರತಿ ಪಾದಿಸುತ್ತಾನೆ, ಶ್ರೀಕೃಷ್ಣ. ಕ್ಷತ್ರಿಯನಾದವನಿಗೆ ಯುದ್ಧವು ಸಹಜಧರ್ಮ. ಹುಟ್ಟಿದಾಗಲೇ ಬಂದಿದ್ದು. ಧರ್ಮಪ್ರಯೋಜನಕ್ಕೋಸ್ಕರ ಅದನ್ನು ಉಪ ಯೋಗಿಸಿಕೊಳ್ಳದಿದ್ದರೆ ಅದು ಧರ್ಮವಿರುದ್ಧವಾದ ಕ್ಷೇತ್ರದಲ್ಲಿ ಕೆಲಸ ಮಾಡುವ ಸಂಭವವಿದೆ. ಕೆಲವು ವೇಳೆ ಅಲ್ಪದೃಷ್ಟಿಯಲ್ಲಿ ನೋಡಿದಾಗ ದೋಷವಿರುವಂತೆ ಕಂಡುಬಂದರೂ ಅದರ ಮಹತ್ತಾದ ಉದ್ದೇಶ ಮತ್ತು ಅದರಿಂದಾಗುವ ಫಲ ಇವುಗಳ ದೃಷ್ಟಿಯಿಂದ ನೋಡಿದಾಗ ಅದು ಗುಣವೇ ಆಗುತ್ತದೆ. ಉದಾಹರಣೆಗೆ ಒಬ್ಬ ವ್ಯಕ್ತಿಯನ್ನು ಹೊಡೆದಾಗ ಅವನಿಗೆ ಹಿಂಸೆ ಯುಂಟಾಗುತ್ತದೆ. ಹಿಂಸೆ ಮಾಡುವುದು ಅಧರ್ಮ ಎಂದು ಅನ್ನಿಸುತ್ತದೆ. ಆದರೆ ಯಾರನ್ನು ಹೊಡೆಯುತ್ತೇವೆಯೋ ಅವನು ಅತಿದುಷ್ಟನಾಗಿದ್ದರೆ ಅವನಿಗೆ ಮಾಡುವ ಹಿಂಸೆಯಿಂದ ಅವನು ಮುಂದೆ ದುಷ್ಟಕಾರ್ಯಮಾಡುವುದನ್ನು ತಪ್ಪಿಸಿದಂತಾಗುತ್ತದೆ. ಅದರಿಂದ ಅವನಿಗೂ ಒಳ್ಳೆಯದು ; ಸಮಾಜಕ್ಕೂ ಒಳ್ಳೆಯದು. ಒಂದು ದೃಷ್ಟಿಯಲ್ಲಿ ಮೊದಲು ದೋಷವೆಂದು ಕಂಡುಬಂದುದು ವಿಶಾಲದೃಷ್ಟಿಯಿಂದ ನೋಡಿದಾಗ ಗುಣವೇ ಆಗುತ್ತದೆ.

**ಸರ್ವಾರಮ್ಭಾಃ ಹಿ ದೋಷೇಣ = ಸರ್ವಾರಮ್ಭಾಃ** ಎಂದರೆ ಆರಂಭಿ ಸಲ್ಪಡತಕ್ಕ ಎಲ್ಲ ಕರ್ಮಗಳೂ ಎಂದರ್ಥ. ಬ್ರಹ್ಮಕರ್ಮವಾಗಲೀ, ಕ್ಷಾತ್ರ ಕರ್ಮವಾಗಲೀ, ವೈಶ್ಯಕರ್ಮವಾಗಲೀ, ಶೂದ್ರಕರ್ಮವಾಗಲೀ ಯತ್ಕಿಂಚಿತ್ ದೋಷದಿಂದ ಕೂಡಿರುವುದು ಸ್ವಾಭಾವಿಕ. ಲೌಕಿಕಕರ್ಮಗಳಲ್ಲಿಯೂ ಸಹ ಈ ದೋಷಗಳಿದ್ದೇ ಇರುತ್ತವೆ. ಇದಕ್ಕೊಂದು ಉಪಮಾನವನ್ನು ಶ್ರೀಕೃಷ್ಣನು ಕೊಡುತ್ತಾನೆ. **ಧೂಮೇನ ಅಗ್ನಿರಿವ ಸರ್ವಾರಮ್ಭಾಃ ದೋಷೇಣ ಆವೃತಾಃ** –ಹೊತ್ತಿಕೊಳ್ಳುವ ಮೊದಲು ಬೆಂಕಿಯು ಹೊಗೆಯಿಂದ ಕೂಡಿರುವುದು ಸ್ವಾಭಾವಿಕ. ಅದೇ ರೀತಿಯಲ್ಲಿ ಕರ್ಮಗಳೆಲ್ಲವೂ ಸಾಮಾನ್ಯವಾಗಿ ದೋಷಗಳಿಂದ ಯುಕ್ತವಾಗಿರುತ್ತವೆ. ಬೆಂಕಿಗೆ ಹೊಗೆಯು ಅನಿವಾರ್ಯ ವಾಗಿರುವಂತೆ ಯಾವ ಕರ್ಮಕ್ಕೇ ಆಗಲೀ ದೋಷವೆಂಬುದು ಅನಿ

ವಾರ್ಯ. ಲೌಕಿಕಕರ್ಮಗಳಲ್ಲಂತೂ ಇದು ಇದ್ದೇ ಇರುತ್ತದೆ. ಆದರೆ ಯಾರೂ ಕರ್ಮಗಳನ್ನು ನಿಲ್ಲಿಸಿಬಿಡುವುದಿಲ್ಲ. ನಿಲ್ಲಿಸಿದರೆ ಜೀವನವೇ ಸಾಗುವುದಿಲ್ಲ. ಆರಂಭದಲ್ಲಿ ದೋಷವಿದ್ದರೂ ಮುಂದೆ ಅದರಿಂದ ದೋಷಪರಿಹಾರವೂ ಆಗಿ ಲೋಕಕಲ್ಯಾಣವೂ ಆಗುವಂತಹ ಕರ್ಮಗಳಿವೆ. ವರ್ಣಾಶ್ರಮಧರ್ಮಗಳಲ್ಲಿಯೂ ಹೀಗೆಯೇ. ಕೆಲವು ಸಮಯಗಳಲ್ಲಿ ದೋಷಗಳಂತೆ ಕಾಣಬಹುದು. ಉದಾಹರಣೆಗೆ ಶ್ರೇಷ್ಠಬ್ರಾಹ್ಮಣನಿಗೆ ಉಂಛವೃತ್ತಿಯನ್ನು ಹೇಳಿದೆ. ಆ ವೃತ್ತಿಯು ಕೆಲವರಿಗೆ ಕಷ್ಟವಾಗಿ ಕಾಣಬಹುದು. ಕಷ್ಟವೆಂಬ ದೋಷವು ಅದರಲ್ಲಿರಬಹುದು. ಆದರೂ ಸಹ ಅದು ಬಿಡತಕ್ಕದ್ದಲ್ಲ. ಕ್ಷತ್ರಿಯನಿಗೆ ಯುದ್ಧಸಮಯದಲ್ಲಿ ಬಂಧು-ಮಿತ್ರರನ್ನು ಕೊಲ್ಲುವುದು ಸಹ್ಯವಾಗದಿರಬಹುದು. ಅದು ನಿರ್ದಯತೆಯ ಕರ್ಮದಂತೆ ಕಾಣಬಹುದು. ಆದರೂ ಅದು ಅನಿವಾರ್ಯ.

ವೈಶ್ಯನು ವ್ಯವಸಾಯಮಾಡುವಾಗ ಎತ್ತುಗಳನ್ನು ನೊಗಕ್ಕೆ ಕಟ್ಟುವುದು ಹಿಂಸೆಯ ಕಾರ್ಯವೆಂದು ಕಾಣಬಹುದು. ಹಿಂಸೆಯ ದೋಷವು ಅದರಲ್ಲಿದೆಯೆಂದು ಭಾವಿಸಬಹುದು. ಆದರೂ ಅದು ಅನಿವಾರ್ಯ. ಅದು ದೋಷವೆಂದು ಮನಸ್ಸಿಗೆ ಬಂದರೂ ಸಹ ಅವನ ಆ ಕರ್ಮವನ್ನು ಬಿಡಲಾಗದು. ಕೆಲವರಿಗೆ ಸೇವಾವೃತ್ತಿಯು ಹೇಯವಾಗಿ ಕಾಣಬಹುದು. ಆದರೆ ಆತ್ಮಕಲ್ಯಾಣ ಮತ್ತು ಲೋಕಕಲ್ಯಾಣಗಳಿಗೋಸ್ಕರ ಸೇವೆಯನ್ನು ಮಾಡಿದರೆ ಆ ಸೇವೆಯಲ್ಲಿ ದೈನ್ಯವಿಲ್ಲ. ಕೈ-ಕಾಲು ಮುಂತಾದುವುಗಳು ಶರೀರದಲ್ಲಿರುವ ಆತ್ಮನ ಸೇವೆಮಾಡುವುದರಿಂದ ಅವುಗಳ ಮೇಲೆ–'ಅಯ್ಯೋ ಪಾಪ!'–ಎಂದು ಯಾರೂ ಕರುಣೆಯನ್ನು ತೋರಿಸಬೇಕಾಗಿಲ್ಲ. ಏಕೆಂದರೆ ಹಾಗೆ ಸೇವೆಮಾಡುವುದರಿಂದ ಅವುಗಳಿಗೂ ಲಾಭವೇ : ಲೋಕಕ್ಕೂ ಲಾಭವೇ–ಎಂದು ೪೬ನೆಯ ಶ್ಲೋಕದಲ್ಲಿ ಪರಮಾತ್ಮನ ಅಭಯಪ್ರದಾನವನ್ನು ಇಲ್ಲಿ ಪುನಃ ಸ್ಮರಿಸಬೇಕಾಗಿದೆ.

ಉದಾಹರಣೆಗೆ : ದೊಡ್ಡದಾದ ಬಾವಿಯನ್ನು ತೋಡುವುದಕ್ಕೋಸ್ಕರ ಭೂಮಿಯನ್ನು ಅಗೆಯುತ್ತಿರುವಾಗ ಮೈಯಲ್ಲಿ ಬೆವರು ಬರುತ್ತದೆ. ಕೈ-

ಕಾಲುಗಳಲ್ಲಿ ನೋವುಂಟಾಗುತ್ತದೆ. ಇವೆರಡೂ ದೋಷಗಳೇ. ಆದರೆ ಪ್ರಾರಂಭದಲ್ಲಿ ದೋಷವಿದೆಯೆಂದು ಅಗೆಯುವ ಕೆಲಸವನ್ನು ನಿಲ್ಲಿಸುವುದಿಲ್ಲ. ಏಕೆಂದರೆ ಪರಿಣಾಮದಲ್ಲಿ ಒಳ್ಳೆಯ ನೀರು ಚಿಮ್ಮಿಬರುತ್ತದೆ. ಅದರಲ್ಲಿ ಸ್ನಾನಮಾಡಿದಾಗ ಮೈ ಬೆವರು ಹೋಗುತ್ತದೆ. ಆಯಾಸವೂ ಪರಿಹಾರವಾಗುತ್ತದೆ. ಬಾವಿಯನ್ನು ಅಗೆದವರಿಗೆ ಮಾತ್ರವಲ್ಲದೇ ಇತರರಿಗೂ ಬಾಯಾರಿಕೆಯ ಪರಿಹಾರ, ಮಲನಿವಾರಣೆ, ಸಸ್ಯಗಳ ಬೆಳವಣಿಗೆ– ಮುಂತಾದ ಲೌಕಿಕೋಪಯೋಗಗಳೂ–ಧಾರ್ಮಿಕವಾದ ಉಪಯೋಗ ಗಳೂ ಪುಷ್ಕಳವಾಗಿ ಆಗುತ್ತವೆ. ಶ್ರೀರಂಗಮಹಾಗುರುಗಳು ಈ ಹೃದಯಂಗಮವಾದ ಉದಾಹರಣೆಯನ್ನು ಇಂತಹ ಪ್ರಸಂಗದಲ್ಲಿ ಕೊಡುತ್ತಿದ್ದರು. ಇದನ್ನು ಕೂಪಖನನನ್ಯಾಯ ಎಂದೂ ಕರೆಯುತ್ತಾರೆ.

ಹಟಮಾಡಿ ಚಂಡಿಹಿಡಿದ ಮಗುವನ್ನು ಹೊಡೆದಾಗ ಅದಕ್ಕೆ ನೋವುಂಟಾಗಿ ಅದು ಅಳುತ್ತದೆ. ಅದಕ್ಕೆ ಹಿಂಸೆಮಾಡುವುದು ದೋಷ ಎಂದು ಮೊದಲು ಕಂಡುಬಂದರೂ ಸಕಾಲದಲ್ಲಿ ಸರಿಯಾಗಿ ಸಮಾಧಾನಮಾಡಿದರೆ ಆ ನೋವು ಪರಿಹಾರವಾಗುವುದು ಮತ್ತು ಆ ನೋವಿನ ನೆನಪಿನಿಂದ ಮಗುವು ಮುಂದೆ ಚಂಡಿಹಿಡಿಯುವುದನ್ನು ನಿಲ್ಲಿಸುತ್ತದೆ.

ಎಲ್ಲ ಕರ್ಮಗಳಲ್ಲಿಯೂ ದೋಷವಿರುತ್ತದೆ–ಎನ್ನುವುದಕ್ಕೆ ಅಗ್ನಿಯು ಹೊಗೆಯಿಂದ ಆವರಿಸಲ್ಪಟ್ಟಿರುತ್ತದೆ ಎಂಬ ಉಪಮಾನವನ್ನು ಕೊಟ್ಟಿರುವುದು ಅತ್ಯಂತ ಉಚಿತವಾಗಿದೆ. ಹೊಗೆಯು ಮೈಯನ್ನೂ, ವಸ್ತ್ರಾದಿಗಳನ್ನೂ ಮಲಿನಮಾಡುತ್ತದೆ. ಕಣ್ಣಿಗೆ ಆತಂಕವನ್ನುಂಟುಮಾಡುತ್ತದೆ. ತೇಜಸ್ಸಿಗೆ ಆವರಣರೂಪವಾಗಿರುತ್ತದೆ. ಇವೇ ಮುಂತಾದ ದೋಷಗಳಿದ್ದರೂ ಅರಣಿ ಗಳನ್ನು ಕಡೆಯುವ ಕರ್ಮವನ್ನು ಮುಂದುವರಿಸುತ್ತಾ ಸ್ವಲ್ಪ ಕಾದುನೋಡಿದರೆ ಪರಿಣಾಮದಲ್ಲಿ ತೇಜೋರೂಪವಾದ ಅಗ್ನಿಯು ಬರುವಂತೆ–ಸತ್ಕರ್ಮ ವನ್ನಾಚರಿಸುವಾಗ ಆರಂಭದಲ್ಲಿ ದೋಷಗಳಿದ್ದರೂ ಕೊನೆಯಲ್ಲಿ ಪ್ರಕಾಶ ವುಂಟಾಗುತ್ತದೆ ಎನ್ನುವ ಭಾವವೂ ಅಡಕವಾಗಿದೆ.

ಸ್ವಕರ್ಮಣಾ ತಮಭ್ಯರ್ಚ್ಯ ಸಿದ್ಧಿಂ ವಿನ್ದತಿ ಮಾನವಃ = ಈ

ಅಮೃತಮಯವಾದ ಮಾತು ಪ್ರಪಂಚದಲ್ಲಿ ಹುಟ್ಟಿರುವ ಪ್ರಜಾಕೋಟಿಗಳಿಗೆಲ್ಲಾ ಅಭಯಪ್ರದಾನದ ಮಾತಾಗಿದೆ. ತನಗೆ ಅನಧಿಕೃತವಾದ ಕರ್ಮವು ಬೇರೆಯವರಿಗೆ (ಅಧಿಕೃತರಾದವರಿಗೆ) ಶ್ರೇಷ್ಠವಾಗಿದ್ದರೂ ತನಗೆ ಶ್ರೇಯಸ್ಕರವಲ್ಲ. ಆ ಶ್ರೇಷ್ಠಕರ್ಮವನ್ನು ತಾನು ಮಾಡಲಾಗಲಿಲ್ಲವಲ್ಲಾ ಎಂದು ಕೊರಗಬೇಕಾಗಿಲ್ಲ. ತನಗೆ ಯಾವುದು ನಿಯತವಾಗಿದೆಯೋ ಅದು ತನಗೆ ಅತ್ಯಂತ ಶ್ರೇಷ್ಠವಾದುದು. ಅದು ಸ್ವಕರ್ಮ-ಸಹಜಕರ್ಮ. ಅದನ್ನು ಭಗವತ್ಪ್ರೀತಿಗೆಂದು ಭಗವದರ್ಪಣಬುದ್ಧಿಯಿಂದ ಆಚರಿಸಿದರೆ ಜ್ಞಾನಸಿದ್ಧಿಯುಂಟಾಗುತ್ತದೆ. ಬೇರೆಯವರ ಕರ್ಮಕ್ಕೆ ಕೈಹಾಕಿದರೆ ಅದರಿಂದ ಜ್ಞಾನಸಿದ್ಧಿಯೂ ಉಂಟಾಗುವುದಿಲ್ಲ ; ಹಾನಿಯೇ ಉಂಟಾಗುತ್ತದೆ.)

o o o

ಅನಾತ್ಮಜ್ಞನಾದ ಯಾವನೂ ಕರ್ಮವಿಲ್ಲದೇ ಒಂದು ಕ್ಷಣವೂ ಇರಲಾರನು. ಆದುದರಿಂದ ಸಹಜಕರ್ಮವನ್ನು ಎಂದರೆ ಹುಟ್ಟಿನಿಂದ ಬಂದ ಕರ್ಮವನ್ನು ಅದು ದೋಷಯುಕ್ತವಾಗಿದ್ದರೂ ಮಾಡಲೇಬೇಕು. ಬಿಡಬಾರದು. ಕರ್ಮಗಳೆಲ್ಲವೂ ತ್ರಿಗುಣಮಯವಾಗಿರುವುದರಿಂದ ಅದರಲ್ಲಿ ದೋಷವಿರದೇ ಇರಲು ಸಾಧ್ಯವೇ ಇಲ್ಲ. ಸ್ವಧರ್ಮಗಳಾಗಲೀ, ಪರಧರ್ಮಗಳಾಗಲೀ ಎಲ್ಲವೂ ಕೂಡ ತ್ರಿಗುಣಾತ್ಮಕವಾಗಿರುವುದರಿಂದ ಎಲ್ಲವೂ ದೋಷಯುಕ್ತವೇ ಆಗಿವೆ. ದೋಷದಿಂದ ಆವೃತವಾಗಿರಲೇಬೇಕು–ಅಗ್ನಿಯು ಹೊಗೆಯಿಂದ ಆವರಿಸಲ್ಪಟ್ಟಿರುವಂತೆ.

ಸ್ವಧರ್ಮವೆಂಬ ಸಹಜಕರ್ಮವನ್ನು ಬಿಟ್ಟು ಪರಧರ್ಮವನ್ನು ಅನುಷ್ಠಾನಮಾಡಿದರೆ ಅದರ ದೋಷದಿಂದ ಬಿಡುಗಡೆಯಂತೂ ಆಗುವುದೇ ಇಲ್ಲ. (ಏಕೆಂದರೆ ಎಲ್ಲ ಕರ್ಮಗಳೂ ಗುಣಮಯವಾದುದರಿಂದ ದೋಷವುಳ್ಳವೇ ಆಗಿವೆ.) ಇಷ್ಟೇ ಅಲ್ಲದೇ ಪರಧರ್ಮವು ಭಯಂಕರವೂ ಆಗಿದೆ. ಅಜ್ಞಾನಿಯು ಕರ್ಮಗಳನ್ನು ಸಂಪೂರ್ಣವಾಗಿ ಬಿಡುವುದಕ್ಕೆ ಆಗುವುದೂ ಇಲ್ಲ. ಆದುದರಿಂದ ಸಹಜಕರ್ಮಗಳನ್ನು ಬಿಡಲೇಬಾರದು. (ಶಂ. ಭಾ.)

ಮೂರನೆಯ ಅಧ್ಯಾಯದಲ್ಲಿ ಹೇಳಿರುವಂತೆ ಕರ್ಮನಿಷ್ಠೆಯೇ ಶ್ರೇಷ್ಠವಾದುದು–ಎಂಬ ವಿಷಯವನ್ನು ಇಲ್ಲಿ ನೆನಪಿಗೆ ತರುತ್ತಾನೆ. ಕರ್ಮವು

ಎಂದರೆ ಕರ್ಮಯೋಗವು ಸಹಜವಾದುದು ಮತ್ತು ಪ್ರಮಾದವಿಲ್ಲದುದು. ಆದುದರಿಂದ ಅದು ದೋಷಸಹಿತವಾಗಿದ್ದರೂ (ದುಃಖಯುಕ್ತವಾಗಿದ್ದರೂ) ಅದನ್ನು ಬಿಡಬಾರದು. ಜ್ಞಾನಯೋಗಕ್ಕೆ ಯೋಗ್ಯನಾಗಿದ್ದರೂ ಕರ್ಮಯೋಗ ವನ್ನು ಆಚರಿಸಬಹುದು. ಏಕೆಂದರೆ ಅಗ್ನಿಯು ಹೊಗೆಯಿಂದ ಆವರಿಸ ಲ್ಪಟ್ಟಿರುವಂತೆ ಕರ್ಮಯೋಗಾರಂಭ, ಜ್ಞಾನಯೋಗಾರಂಭ–ಎರಡೂ ದುಃಖವೆಂಬ ದೋಷದಿಂದ ಕೂಡಿವೆ. ಆದರೆ ವಿಶೇಷವೇನೆಂದರೆ ಕರ್ಮ ಯೋಗವು ಮಾಡಲು ಸುಲಭ ಮತ್ತು ಅದರಲ್ಲಿ ಪ್ರಮಾದವಿರುವುದಿಲ್ಲ. ಜ್ಞಾನಯೋಗವು ಅದಕ್ಕೆ ವಿರುದ್ಧವಾದುದು. (ರಾ. ಭಾ.)

**ಸರ್ವಾರಮ್ಭಾಃ** = ಸರ್ವಕರ್ಮಗಳೂ. (ಮ. ಟೀಕಾ)

**ಅಸಕ್ತಬುದ್ಧಿಃ ಸರ್ವತ್ರ ಜಿತಾತ್ಮಾ ವಿಗತಸ್ಪೃಹಃ ।**
**ನೈಷ್ಕರ್ಮ್ಯಸಿದ್ಧಿಂ ಪರಮಾಂ ಸಂನ್ಯಾಸೇನಾಧಿಗಚ್ಛತಿ ॥೪೯॥**

ಎಲ್ಲ ವಿಷಯಗಳಲ್ಲಿಯೂ ಆಸಕ್ತಿಯಿಲ್ಲದ ಬುದ್ಧಿಯುಳ್ಳವನೂ, ಅಂತಃ ಕರಣವನ್ನು ಗೆದ್ದು ವಶಪಡಿಸಿಕೊಂಡಿರುವವನೂ, ಆಶಾರಹಿತನೂ ಆದವನು ಸಂನ್ಯಾಸದಿಂದ ಶ್ರೇಷ್ಠವಾದ ನೈಷ್ಕರ್ಮ್ಯದ ಸಿದ್ಧಿಯನ್ನು ಪಡೆಯುತ್ತಾನೆ.

* * *

**(ಸ್ವಕರ್ಮಣಾ ತಮಭ್ಯರ್ಚ್ಯ ಸಿದ್ಧಿಂ ವಿನ್ದತಿ ಮಾನವಃ ।**

ಎಂಬಲ್ಲಿಂದ ಅನುವರ್ತಿತವಾಗಿರುವ ಶ್ಲೋಕವಿದು. ತನ್ನ ವರ್ಣಕ್ಕೆ ವಿಹಿತವಾಗಿರುವ ಕರ್ಮದಿಂದಲೇ ಅವನನ್ನು ಅರ್ಚಿಸಿ ಅರ್ಥಾತ್ ಎಲ್ಲ ಕರ್ಮಗಳನ್ನೂ ಅವನಿಗಾಗಿಯೇ ಮಾಡುತ್ತಾ ಮಾನವನು ಸಿದ್ಧಿಯನ್ನು ಪಡೆಯುತ್ತಾನೆ–ಎಂದು ಅಲ್ಲಿ ಹೇಳಿದ್ದಾನೆ. ಅದನ್ನು ಕರ್ಮಸಿದ್ಧಿ ಎಂದೂ ಕರೆಯುತ್ತಾರೆ. ಅದನ್ನೇ ಮುಂದುವರಿಸಿ ಈ ಶ್ಲೋಕದಲ್ಲಿ ನೈಷ್ಕರ್ಮ್ಯಸಿದ್ಧಿಯ ವಿಷಯವಾಗಿ ಶ್ರೀಕೃಷ್ಣನು ಹೇಳಿದ್ದಾನೆ. ನೈಷ್ಕರ್ಮ್ಯಸಿದ್ಧಿ ಎಂದರೆ ಸಮಾಧಿಸ್ಥಿತಿ ; ಆತ್ಮಸಾಕ್ಷಾತ್ಕಾರ ಎಂದೇ ಆಗುತ್ತದೆ. ನೈಷ್ಕರ್ಮ್ಯ ಎಂದರೆ ಕರ್ಮವಿಲ್ಲದೇ ಇರುವುದು. ಕರ್ಮಮಾಡಿಯೂ ಮಾಡದಂತೆ ಇರುವುದು. ಇದರ ಸಿದ್ಧಿ ಎಂದರೆ ಕರ್ಮಮಾಡುವುದಕ್ಕೆ ಸಾಧ್ಯವಾಗದೆಯೇ ಇರುವುದು.

ಇದು ಸಮಾಧಿಸ್ಥಿತಿಯಲ್ಲಿ ಮಾತ್ರವೇ ಸಾಧ್ಯವಾಗತಕ್ಕುದು. ಆ ಸಮಯದಲ್ಲಿ ಉಚ್ಛ್ವಾಸ-ನಿಃಶ್ವಾಸಗಳ ಕ್ರಿಯೆಯೂ ಇರುವುದಿಲ್ಲ. ಪ್ರಯತ್ನವಿಲ್ಲದೆಯೇ ಆ ಕ್ರಿಯೆಗಳೂ ಸಹ ತಾವೇ ತಾವಾಗಿ ನಿಂತುಹೋಗುವುದರಿಂದ ಇದಕ್ಕೆ ಸಿದ್ಧಿ ಎಂದು ಕರೆದಿರುತ್ತಾರೆ. ಮೇಲಾಗಿ ಇದಕ್ಕೆ **ಪರಮಾಂ** ಎಂಬ ವಿಶೇಷಣವನ್ನು ಕೊಟ್ಟು ಶ್ರೀಕೃಷ್ಣನು ಹೇಳಿದ್ದಾನೆ. ನೈಷ್ಕರ್ಮ್ಯಸಿದ್ಧಿ ಎಂಬುದು ಅಣಿಮಾದಿ ಅಷ್ಟಸಿದ್ಧಿಗಳಿಗಿಂತಲೂ ಶ್ರೇಷ್ಠವಾದುದರಿಂದ **ಪರಮಾಂ** ಎಂದು ಶ್ರೀಕೃಷ್ಣನು ಹೇಳಿರುತ್ತಾನೆ. ಇದಕ್ಕಿಂತಲೂ ಮಿಗಿಲಾದುದು ಯಾವುದೂ ಇಲ್ಲ. ಇಂತಹ ಪರಮೋತ್ಕೃಷ್ಟವಾದ ನೈಷ್ಕರ್ಮ್ಯಸಿದ್ಧಿಯನ್ನು ಹೇಗೆ ಪಡೆಯುತ್ತಾನೆಂಬುದನ್ನು ಶ್ರೀಕೃಷ್ಣನು ವಿವರಿಸುತ್ತಾನೆ. **ಅಸಕ್ತಬುದ್ಧಿಃ ಸರ್ವತ್ರ** ಸಕ್ತವಾಗದ, ಅಂಟಿಕೊಳ್ಳದೇ ಇರುವ ಬುದ್ಧಿಯು ಸರ್ವತ್ರ ಇರಬೇಕು. **ಸರ್ವತ್ರ** ಶಬ್ದಕ್ಕೆ ಅರ್ಥವೇನೆಂದರೆ ಪರಮಾತ್ಮನೊಬ್ಬನನ್ನು ಬಿಟ್ಟು ಬೇರೆ ಯಾವುದರಲ್ಲಿಯೂ ಬುದ್ಧಿಯು ಆಸಕ್ತವಾಗಿರಕೂಡದು. ಉತ್ತರಮುಖಿಯನ್ನು ಯಾವುದೇ ಕಡೆಗೆ ತಿರುಗಿಸಿ ಇಟ್ಟರೂ ಸಹ ಉತ್ತರದಿಕ್ಕಿಗೇ ಹೋಗಿ ನಿಲ್ಲುವಂತೆ–ಬುದ್ಧಿಯೂ ಸಹ ಯಾವುದೇ ಪರಿಸರದಲ್ಲಿದ್ದರೂ ಪರಮಾತ್ಮನ ಕಡೆಗೇ ಮುಖಮಾಡಿ ಕೊಂಡಿರಬೇಕು. **ಜಿತಾತ್ಮಾ ವಿಗತಸ್ಪೃಹಃ** ಎಂಬುದು **ಅಸಕ್ತಬುದ್ಧಿಃ ಸರ್ವತ್ರ** ಎಂಬುದರ ವಿಸ್ತಾರವೇ ಆಗಿದೆ. ಬುದ್ಧಿಯನ್ನು ಬೇರೆ ಯಾವುದಕ್ಕೂ ಅಂಟಿಸಹೋಗದೇ ಪರಮಾತ್ಮನಲ್ಲಿಯೇ ಆಸಕ್ತವನ್ನಾಗಿ ಮಾಡಿರುವವನು ಜಿತಾತ್ಮನಾಗಿಯೇ ಇರುತ್ತಾನೆ. **ಜಿತ** ಎಂದರೆ ಜಯಿಸಿದ. **ಆತ್ಮ** ಎಂದರೆ ಅಂತಃಕರಣವಿರುವವನು. ಮನಸ್ಸನ್ನು ಜಯಿಸಿದವನು. ಮನಸ್ಸನ್ನು ಜಯಿಸಿದನಂತರವೇ ಅವನ ಬುದ್ಧಿಯು ನೇರವಾಗಿ ಪರಮಾತ್ಮನಲ್ಲಿ ನೆಲೆಗೊಳ್ಳಬಲ್ಲುದು.

**ವಿಗತಸ್ಪೃಹಃ** = ಬುದ್ಧಿಯು ಯಾವುದಕ್ಕೂ ಅಂಟಿಕೊಂಡಿಲ್ಲವೆಂದರೆ ಅವನು ಎಲ್ಲ ಆಶೆಗಳನ್ನೂ ತೊರೆದುಬಿಟ್ಟಿದ್ದಾನೆಂದೇ ಅರ್ಥವಾಗುತ್ತದೆ. ಬುದ್ಧಿ, ಮನಸ್ಸುಗಳ ಕಾರ್ಯವೇ ಇಚ್ಛೆ ಎಂಬುದು. ಮನಸ್ಸು ಸಕ್ತವಾಗಿದ್ದು ಬುದ್ಧಿಯು ಅಸಕ್ತವಾಗಿರಲು ಸಾಧ್ಯವಿಲ್ಲ. ಮೊದಲು ಮನಸ್ಸು ವಿಷಯ ಗಳಲ್ಲಿ ಅಸಕ್ತವಾಗಬೇಕು. ಅನಂತರವೇ ಶುದ್ಧವಾದ ಆ ಮನಸ್ಸು ಶುದ್ಧ

ಬುದ್ಧಿಯಲ್ಲಿ ಲೀನವಾಗುತ್ತದೆ. **ವಿಗತಸ್ಪೃಹಃ** ಎಂದರೆ ಅವನಿಗೆ ಆತ್ಮದರ್ಶನದ ಇಚ್ಛೆಯ ಹೊರತಾಗಿ ಬೇರಾವ ಇಚ್ಛೆಯೂ ಇರುವುದಿಲ್ಲ. **ಸಂನ್ಯಾಸೇನ ಅಧಿಗಚ್ಛತಿ** = ಸಂನ್ಯಾಸದಿಂದ ಹೊಂದುತ್ತಾನೆ. **ಸಂನ್ಯಾಸೇನ** ಬುದ್ಧಿಯನ್ನು ಆತ್ಮನಲ್ಲಿ ಚೆನ್ನಾಗಿ ಇಡುವುದರಿಂದ **ಸಮ್ಯಕ್ ನ್ಯಾಸೇನ ಪರಮಾಂ ನೈಷ್ಕರ್ಮ್ಯಸಿದ್ಧಿಂ ಅಧಿಗಚ್ಛತಿ । ಅಸಕ್ತಬುದ್ಧಿಃ ವಿಗತಸ್ಪೃಹಃ** ಎಂಬ ಪದಗಳು ಪರಮಾತ್ಮನನ್ನು ಬಿಟ್ಟು ಬೇರೆ ಯಾವುದರಲ್ಲಿಯೂ ಆಸಕ್ತಿ, ಸ್ಪೃಹೆ ಇರಬಾರದು ಎಂದು ಹೇಳುತ್ತವೆ. **ಸಂನ್ಯಾಸೇನ** ಎಂಬ ಶಬ್ದವು ಅಂತಹ ಅನಾಸಕ್ತವೂ, ನಿಃಸ್ಪೃಹವೂ ಆದ ಮನಸ್ಸನ್ನು ಪರಮಾತ್ಮನಲ್ಲಿ ಪೂರ್ಣವಾಗಿ ಇರಿಸಬೇಕು ಎಂಬುದನ್ನು ಒತ್ತಿ ಹೇಳುತ್ತದೆ. **ಸಂನ್ಯಾಸೇನ** ಎಂಬ ಶಬ್ದಕ್ಕೆ ಎಲ್ಲ ಕರ್ಮಗಳನ್ನೂ ಅಥವಾ ಅವುಗಳ ಫಲ ಮುಂತಾದುವುಗಳನ್ನು ಪೂರ್ಣವಾಗಿ ತ್ಯಾಗಮಾಡುವುದರಿಂದ–ಎಂಬ ಅರ್ಥವನ್ನೂ ಹೇಳಬಹುದು. ಶ್ರೇಷ್ಠವಾದ ಉತ್ತಮೋತ್ತಮವಾದ **ನೈಷ್ಕರ್ಮ್ಯಸಿದ್ಧಿಂ** ಕರ್ಮರಾಹಿತ್ಯದ ಸಿದ್ಧಿಯನ್ನು ಅರ್ಥಾತ್ ಸಮಾಧಿಸ್ಥಿತಿಯನ್ನು ಪಡೆಯುತ್ತಾನೆ.

**ಅಸಕ್ತಬುದ್ಧಿಃ ಸರ್ವತ್ರ**–ಎಂಬುದಕ್ಕೆ ಸಂತಜ್ಞಾನೇಶ್ವರರು ಉದಾಹರಣ ಪೂರ್ವಕವಾಗಿ ಅರ್ಥಮಾಡಿರುತ್ತಾರೆ.

ಹಣ್ಣು ಪಕ್ವವಾಯಿತೆಂದರೆ ತೊಟ್ಟನ್ನೂ, ತೊಟ್ಟು ಹಣ್ಣನ್ನೂ ಹಿಡಿದಿರಲಾರದು. ಅದು ತಾನೇ ತಾನಾಗಿ ಬಿದ್ದುಹೋಗುವುದು. ಅದರಂತೆಯೇ ಅಧ್ಯಾತ್ಮಚಿಂತನೆಯಿಂದ ಬುದ್ಧಿಯು ಪರಿಪಕ್ವವಾಯಿತೆಂದರೆ ವಿಷಯವಾಸನೆಗಳೂ ಈ ಬುದ್ಧಿಯನ್ನು ಹಿಡಿದಿಡಲು ಸಾಧ್ಯವಾಗುವುದಿಲ್ಲ. ಆ ಬುದ್ಧಿಯೂ ವಿಷಯವಾಸನೆಗಳಿಗೆ ಅಂಟಿಕೊಂಡು ಇರಲು ಸಾಧ್ಯವಾಗುವುದಿಲ್ಲ. ವಿಷದ ಪಾತ್ರೆಯ ಬಗೆಗೆ ಯಾರೂ ಮಮತ್ವಬುದ್ಧಿಯನ್ನು ತಾಳಲಾರರು. ಅದರಂತೆ ಪುತ್ರ, ವಿತ್ತ ಮತ್ತು ಸ್ತ್ರೀ ಮೊದಲಾದವರು ತನ್ನವರೆಂಬಂತೆ ವರ್ತಿಸತಕ್ಕವರಾದಾಗ್ಯೂ ಅವರ ಬಗೆಗೆ ಅವನಲ್ಲಿ ಮಮತ್ವಬುದ್ಧಿಯಿರುವುದಿಲ್ಲ.

ರಾತ್ರಿಯು ಮುಗಿದೊಡನೆಯೇ ಕತ್ತಲೆಯು ಇಲ್ಲದಂತಾಗುವುದು. ಅದರಂತೆ ಅಜ್ಞಾನದ ಹೊಟ್ಟೆಯಲ್ಲಿ ಕರ್ತಾ, ಕರ್ಮ ಮತ್ತು ಕಾರ್ಯ ಎಂಬ ತ್ರಿಪುಟಿಯು ಇರುವುದು. ಅಜ್ಞಾನದ ನಾಶದೊಂದಿಗೆ ಗರ್ಭಿಣಿಯ ಮರಣ

ದಿಂದ ಗರ್ಭವೂ ನಾಶವಾಗುವಂತೆ–ತ್ರಿಪುಟಿಯೂ ನಾಶವಾಗುವುದು. ಅದರಂತೆ ಅಜ್ಞಾನವು ನಾಶವಾದಾಗ ಅದರೊಡನೆ ಎಲ್ಲ ಕರ್ಮಗಳೂ ನಾಶ ಹೊಂದುವುವು. ಅಂತಹ ಸ್ಥಿತಿಯಲ್ಲಿ ತಿಳಿಯಬೇಕಾದುದೆಂದರೆ ಸ್ವಸ್ವರೂಪ. ಎರಡನೆಯದೇನೂ ಇರುವುದಿಲ್ಲ. ನೀರಿನ ಮಡುವಿನಲ್ಲಿ ತಾನು ಮುಳುಗಿದಂತೆ ಸ್ವಪ್ನವನ್ನು ಕಂಡವನು ಎಚ್ಚೆತ್ತಮೇಲೆ ಆ ಮಡುವಿನಿಂದ ಪಾರಾಗಲು ಪ್ರಯತ್ನಿಸುವನೇ? 'ಆಗ ತನ್ನನ್ನು ತಾನು ತಿಳಿದುಕೊಂಡಿರಲಿಲ್ಲ. ಈಗ ನನ್ನನ್ನು ನಾನು ತಿಳಿದುಕೊಂಡಿರುವೆನು' ಎಂಬ ತಿಳಿವಳಿಕೆಯು ಬಂದು ಅವನ ಭ್ರಮೆಯ ನಿರಸನವಾಗುವುದು. ಜ್ಞಾತಾ, ಜ್ಞೇಯ ಎಂಬ ಭಾವವೂ ಇಲ್ಲದಾಗುವುದು. ಅವನು ಕೇವಲ ನಿರುಪಾಧಿಕಜ್ಞಾನಸ್ವರೂಪನಾಗುವನು. ಮುಖದ ಪ್ರತಿಬಿಂಬದೊಡನೆ ಕನ್ನಡಿಯನ್ನು ದೂರಮಾಡಿದರೆ ನೋಡುವಿಕೆಯು ಇಲ್ಲದಂತಾದರೂ (ಕರ್ಮ) ನೋಡುವವನು ಮಾತ್ರ ಸ್ಥಿರವಾಗಿ ಇದ್ದೇ ಇರುವನು. ಅದರಂತೆ ಅಜ್ಞಾನವು ಹೋಗುವಾಗ ತಾನೊಂದೇ ಹೋಗದೇ ಸಂಗಡ ತಿಳಿವಳಿಕೆಯನ್ನೂ ಒಯ್ಯುವುದು. ಆಗ ಜ್ಞಾನವು ಸಂಗರಹಿತವಾಗಿ ಉಳಿಯುವುದು. ಜ್ಞಾನಮಾತ್ರದಲ್ಲಿ ಸ್ವಭಾವತಃ ಯಾವುದೇ ಕರ್ಮದ ಸಂಭವವಿಲ್ಲದ್ದರಿಂದ ಅದಕ್ಕೆ ನೈಷ್ಕರ್ಮ್ಯಸಿದ್ಧಿ ಎಂಬ ಹೆಸರು ಪ್ರಾಪ್ತವಾಯಿತು. ಗಾಳಿಯು ನಿಂತಮೇಲೆ ತರಂಗಗಳು ಸಮುದ್ರರೂಪವನ್ನು ಹೊಂದುವುವು. ಅದರಂತೆ ಆತ್ಮಜ್ಞಾನವಾದ ಮೇಲೆ ಎಲ್ಲ ಉಪಾಧಿಗಳೂ ಲಯವಾಗುವುವು. ಆದುದರಿಂದ ಸಮುದ್ರದ ತೆರೆಗಳಂತೆ ಜ್ಞಾನ ಎಂದರೆ ತಿಳಿವಳಿಕೆಯಾದರೂ ಸ್ವರೂಪಜ್ಞಾನದಲ್ಲಿ ಲಯಹೊಂದುವುದು. ಈ ಪ್ರಕಾರ ಏನೊಂದು ಕರ್ಮವೂ ಆಗದ ಸ್ಥಿತಿಗೆ ನೈಷ್ಕರ್ಮ್ಯಸಿದ್ಧಿ ಎಂದೆನ್ನುವರು. ಸಹಜವಾಗಿ ಇದೇ ಎಲ್ಲ ಸ್ಥಿತಿಗಳಲ್ಲಿಯೂ ಶ್ರೇಷ್ಠವಾಗಿರುವುದು. ಕಳಸವನ್ನಿಟ್ಟಾಗ ಮಾತ್ರ ದೇವಾಲಯದ ಕೆಲಸವು ಮುಗಿದಂತಾಗುವುದು. ಸಮುದ್ರವನ್ನು ಸೇರುವವರೆಗೆ ಮಾತ್ರವೇ ಗಂಗಾನದಿಗೆ ಗಂಗಾತ್ವವಿರುತ್ತದೆ. ಅದರಂತೆ ಅಜ್ಞಾನವು ಜ್ಞಾನದಿಂದ ಇಲ್ಲದಂತಾಗಲು ಜ್ಞಾನವೂ ಕೂಡ ಮೈಚೆಲ್ಲಿ ಸ್ವರೂಪ ಸ್ಥಿತಿಗೆ ಬರುವುದು. ಆ ಸ್ಥಿತಿಯಲ್ಲಿ ಬೇರಾವ ಪ್ರಾಪ್ಯವೂ ಉಳಿಯುವುದಿಲ್ಲ. ಆದುದರಿಂದಲೇ ಇದಕ್ಕೆ ಪರಮಸಿದ್ಧಿ ಎಂದೆನ್ನುವರು.)

o o o

**ಸರ್ವತ್ರ ಅಸಕ್ತಬುದ್ಧಿಃ**=ಹೆಂಡತಿ ಮಕ್ಕಳು ಮುಂತಾದ ಎಲ್ಲ ಆಸಕ್ತಿಯ ವಿಷಯಗಳಲ್ಲಿಯೂ ನಿರಾಸಕ್ತವಾದ ಅಂತಃಕರಣವುಳ್ಳವನು. **ಜಿತಾತ್ಮಾ** = ಅಂತಃಕರಣವನ್ನು ವಶಪಡಿಸಿಕೊಂಡವನು. **ವಿಗತಸ್ಪೃಹಃ** = ಶರೀರ, ಜೀವನ ಮತ್ತು ಭೋಗಗಳಲ್ಲಿಯೂ ತೃಷ್ಣೆಯಿಲ್ಲದವನು. ಇಂತಹ ಜ್ಞಾನಿಯು ಸಂನ್ಯಾಸದಿಂದ ಎಂದರೆ **ಸಮ್ಯಕ್ ದರ್ಶನ**ದಿಂದ ಅಥವಾ ಅಂತಹ ದರ್ಶನ ಪೂರ್ವಕವಾದ ಸರ್ವಕರ್ಮಸಂನ್ಯಾಸದಿಂದ ಶ್ರೇಷ್ಠವಾದ ನೈಷ್ಕರ್ಮ್ಯಸಿದ್ಧಿಯನ್ನು ಹೊಂದುತ್ತಾನೆ. ನಿಷ್ಕರ್ಮಿ ಎಂದರೆ ನಿಷ್ಕ್ರಿಯವಾದ ಬ್ರಹ್ಮವೇ ಆತ್ಮವು ಎಂಬ ಜ್ಞಾನವು ಉಂಟಾಗಿರುವುದರಿಂದ ಯಾವನ ಎಲ್ಲ ಕರ್ಮಗಳೂ ತೊಲಗಿಹೋಗಿವೆಯೋ ಅವನು. ಅವನ ಭಾವವು ನೈಷ್ಕರ್ಮ್ಯ. ನಿಷ್ಕರ್ಮತಾರೂಪವಾದ ಸಿದ್ಧಿಯೇ ನೈಷ್ಕರ್ಮ್ಯಸಿದ್ಧಿ ಅಥವಾ ನೈಷ್ಕರ್ಮ್ಯ ಸಿದ್ಧಿಯೆಂದರೆ ನಿಷ್ಕ್ರಿಯವಾದ ಆತ್ಮ ಸ್ವರೂಪದಲ್ಲಿ ಇರುವಿಕೆ ಎಂಬ ಸಿದ್ಧಿ. ಇದು ಕರ್ಮದಿಂದ ಉಂಟಾದ ಸಿದ್ಧಿಯಿಂದ ಬೇರೆ ಮತ್ತು ವಿಲಕ್ಷಣವಾದುದು. ಒಡನೆಯೇ ಮುಕ್ತಿಯಲ್ಲಿ ನೆಲೆಗೊಳ್ಳುವ ರೂಪವಾದುದು. ಇದನ್ನು ಆತ್ಮಜ್ಞಾನಿಯು ಸಂನ್ಯಾಸದಿಂದ ಹೊಂದುತ್ತಾನೆ. **ಸರ್ವಕರ್ಮಾಣಿ ಮನಸಾ ಸಂನ್ಯಸ್ಯ ನೈವ ಕರ್ಮ-ಕುರ್ವನ್ ನ ಕಾರಯನ್ನಾಸ್ತೇ** (ಶಂ. ಭಾ.)

ಫಲವೇ ಮುಂತಾದ ಎಲ್ಲದರಲ್ಲಿಯೂ ಆಸಕ್ತಿಯಿಲ್ಲದವನು. ಮನಸ್ಸನ್ನು ಜಯಿಸಿದವನು. ಪರಮಪುರುಷನೇ ಕರ್ತಾ ಎಂಬುದನ್ನು ಅನುಸಂಧಾನ ಮಾಡಿದ್ದರಿಂದ, ತಾನು ಕರ್ತಾ ಎಂಬ ವಿಷಯದಲ್ಲಿ ಆಸೆಯಿಲ್ಲದವನು. ತ್ಯಾಗವೂ, ಸಂನ್ಯಾಸವೂ ಒಂದೇ ಎಂದು ಹಿಂದೆ ನಿರ್ಣಯಿಸಲ್ಪಟ್ಟಿರುವ ರೀತಿಯಲ್ಲಿ ಸಂನ್ಯಾಸ (ತ್ಯಾಗ)ದಿಂದ ಕೂಡಿ ಕರ್ಮವನ್ನಾಚರಿಸುತ್ತಾ ಶ್ರೇಷ್ಠವಾದ ನೈಷ್ಕರ್ಮ್ಯಸಿದ್ಧಿಯನ್ನು ಪಡೆಯುತ್ತಾನೆ. ನೈಷ್ಕರ್ಮ್ಯಸಿದ್ಧಿ ಎಂದರೆ ಶ್ರೇಷ್ಠವಾದ ಧ್ಯಾನನಿಷ್ಠೆ, ಜ್ಞಾನಯೋಗಕ್ಕೂ ಫಲವಾದುದು. ಎಲ್ಲ ಇಂದ್ರಿಯ ಕರ್ಮಗಳ ಶಾಂತವಾಗುವಿಕೆ ಎಂಬ ರೂಪವುಳ್ಳ ಮುಂದೆ ಹೇಳುವ ಅಂತಹ ಧ್ಯಾನದ ಪ್ರಾಪ್ತಿಯೆಂಬ ಸಿದ್ಧಿಯನ್ನು ಹೊಂದುತ್ತಾನೆ. (ರಾ. ಭಾ.)

**ನೈಷ್ಕರ್ಮ್ಯಸಿದ್ಧಿಂ** = ನೈಷ್ಕರ್ಮ್ಯವನ್ನೇ ಫಲವನ್ನಾಗಿ ಉಳ್ಳ ಯೋಗ

ಸಿದ್ಧಿಯನ್ನು. ನೈಷ್ಕರ್ಮ್ಯಾರ್ಥಸಿದ್ಧಿಃ ನೈಷ್ಕರ್ಮ್ಯಸಿದ್ಧಿಃ ಎಂದರೆ ಯೋಗದ ಸಿದ್ಧಿ.

(ಮ. ಭಾ.)

**ಓಂ ಸಿದ್ಧಿಂ ಪ್ರಾಪ್ತೋ ಯಥಾ ಬ್ರಹ್ಮ ತಥಾಪ್ನೋತಿ ನಿಬೋಧ ಮೇ ।**
**ಸಮಾಸೇನೈವ ಕೌನ್ತೇಯ ನಿಷ್ಠಾ ಜ್ಞಾನಸ್ಯ ಯಾ ಪರಾ ॥೫೦॥**

ಕೌನ್ತೇಯ! ಸಿದ್ಧಿಯನ್ನು ಪಡೆದವನು ಯಾವ ಪ್ರಕಾರದಿಂದ ಬ್ರಹ್ಮವನ್ನು ಹೊಂದುತ್ತಾನೆಯೋ ಆ ಪ್ರಕಾರವನ್ನು ನನ್ನಿಂದ ಸಂಕ್ಷೇಪವಾಗಿ ಕೇಳು. ಆ ಬ್ರಹ್ಮಪ್ರಾಪ್ತಿಯೆಂಬುದು ಜ್ಞಾನದ ಶ್ರೇಷ್ಠವಾದ ಅವಧಿಯಾಗಿದೆ.

* * *

(ಹಿಂದಿನ ಶ್ಲೋಕದಲ್ಲಿ ನೈಷ್ಕರ್ಮ್ಯಸಿದ್ಧಿಯನ್ನು ಹೇಳಿರುವುದರಿಂದ ಅದಾದನಂತರ ಬಂದಿರುವ ಈ ಶ್ಲೋಕದಲ್ಲಿರುವ ಸಿದ್ಧಿಂ ಎಂಬ ಪದಕ್ಕೆ ನೈಷ್ಕರ್ಮ್ಯಸಿದ್ಧಿ ಎಂದೇ ಅರ್ಥಮಾಡಬಹುದಾಗಿದೆ. ಹಿಂದಿನ ಶ್ಲೋಕದಲ್ಲಿ ನೈಷ್ಕರ್ಮ್ಯಸಿದ್ಧಿಂ ಸಂನ್ಯಾಸೇನ ಅಧಿಗಚ್ಛತಿ–ಎಂದು ಶ್ರೀಕೃಷ್ಣನು ಹೇಳಿರುವನು. ನೈಷ್ಕರ್ಮ್ಯಸಿದ್ಧಿ ಎಂದರೆ ಸಮಾಧಿಸ್ಥಿತಿ. ಆ ಸಿದ್ಧಿಯನ್ನು ಪಡೆದವನು ಹೇಗೆ ಬ್ರಹ್ಮ (ಪರಮಾತ್ಮ ) ನನ್ನೇ ಪಡೆಯುತ್ತಾನೆ ಎಂಬುದನ್ನು ಭಗವಂತನು ಸಂಕ್ಷೇಪರೂಪದಲ್ಲಿ ಹೇಳುತ್ತಾನೆ. ಆ ಸಾರಾಂಶವನ್ನು ಚೆನ್ನಾಗಿ ಗಮನಿಸಿಕೊಳ್ಳಬೇಕು. ಆ ಬ್ರಹ್ಮವೇ ಅಥವಾ ಬ್ರಹ್ಮಪ್ರಾಪ್ತಿಯೇ ಜ್ಞಾನದ ಶ್ರೇಷ್ಠತಮವಾದ ನಿಷ್ಠೆ ಎಂದರೆ ಜ್ಞಾನದ ಕಟ್ಟಕಡೆಯ ಲಕ್ಷ್ಯ. ಜ್ಞಾನಕ್ಕೆ ಪರಮ ಪ್ರಾಪ್ಯವಾದುದು. ಜ್ಞಾನಕ್ಕೆ ಇರಬೇಕಾದ ಪರಾನಿಷ್ಠೆಗಳನ್ನು ಶ್ರೀಕೃಷ್ಣನು ಹಿಂದೆ ಅನೇಕಬಾರಿ ಹೇಳಿದ್ದಾನೆ. ಇದು ಉಪಸಂಹಾರಾಧ್ಯಾಯವಾದುದರಿಂದ ಪುನಃ ಜ್ಞಾನದ ಶ್ರೇಷ್ಠವಾದ ನಿಷ್ಠೆಯು ಯಾವುದೆಂಬುದನ್ನು ಸಂಕ್ಷೇಪವಾಗಿ ಹೇಳುತ್ತೇನೆ ; ಕೇಳು ಎನ್ನುತ್ತಾನೆ.)

o o o

ತನ್ನ ಕರ್ಮದಿಂದ ಈಶ್ವರನನ್ನು ಆರಾಧಿಸಿ, ಅವನ ಅನುಗ್ರಹದಿಂದ ಸಿದ್ಧಿಯನ್ನು ಪಡೆದವನು ಎಂದರೆ–ಶರೀರ ಮತ್ತು ಇಂದ್ರಿಯಗಳು ಜ್ಞಾನ ನಿಷ್ಠೆಯ ಯೋಗ್ಯತೆಯನ್ನು ಹೊಂದುವಿಕೆ ಎಂಬ ಸಿದ್ಧಿಯನ್ನು ಪಡೆದವನು

ಯಾವ ಪ್ರಕಾರದಿಂದ ಎಂದರೆ ಜ್ಞಾನನಿಷ್ಠೆಯಿಂದ ಪರಮಾತ್ಮನನ್ನು ಹೊಂದುತ್ತಾನೆಯೋ–ಆ ಪ್ರಕಾರವನ್ನು ಎಂದರೆ ಜ್ಞಾನನಿಷ್ಠೆಯನ್ನು ಹೊಂದುವ ಕ್ರಮವನ್ನು ನನ್ನಿಂದ ಕೇಳು. ಸಂಕ್ಷೇಪವಾಗಿ ಹೇಳುತ್ತೇನೆ, ಅದನ್ನು ನಿಶ್ಚಯಪೂರ್ವಕವಾಗಿ ತಿಳಿ. ಆ ಬ್ರಹ್ಮಪ್ರಾಪ್ತಿಯೇ ಜ್ಞಾನದ ಶ್ರೇಷ್ಠವಾದ ನಿಷ್ಠೆ ಎಂದರೆ ಅವಧಿ ; ಪರಿಸಮಾಪ್ತಿ ; ಎಲ್ಲೆಕಟ್ಟು. (ಶಂ. ಭಾ.)

ಸಿದ್ಧಿಯನ್ನು ಪಡೆದವನು ಎಂದರೆ ದೇಹಾವಸಾನಕಾಲದವರೆಗೂ ಪ್ರತಿದಿನವೂ ಆಚರಿಸುವ ಕರ್ಮಯೋಗದಿಂದ ಉಂಟಾಗುವ ಧ್ಯಾನಸಿದ್ಧಿ (ನೈಷ್ಕರ್ಮ್ಯಸಿದ್ಧಿ) ಯನ್ನು ಪಡೆದವನು ಯಾವ ರೀತಿಯಲ್ಲಿ ನಡೆದುಕೊಂಡು ಬ್ರಹ್ಮವನ್ನು ಹೊಂದುತ್ತಾನೆ ಎಂಬ ವಿಷಯವನ್ನು ನನ್ನಿಂದ ಸಂಕ್ಷೇಪವಾಗಿ ಕೇಳು. ಆ ಬ್ರಹ್ಮವೇ ಜ್ಞಾನದ ಎಂದರೆ ಧ್ಯಾನಾತ್ಮಕವಾದ ಜ್ಞಾನದ ಪರಾ ನಿಷ್ಠೆ–ಅದಕ್ಕೆ ಪರಮಪ್ರಾಪ್ಯವಾದುದು. (ರಾ. ಭಾ.)

**ಯಥಾ** = ಯಾವ ಉಪಾಯದಿಂದ ಯಾವುದರಿಂದ ಸಿದ್ಧಿಯನ್ನು ಪಡೆದವನು ಬ್ರಹ್ಮವನ್ನು ಹೊಂದುತ್ತಾನೆಯೋ ಆ ಉಪಾಯವನ್ನು (ಅಪರೋಕ್ಷ ಜ್ಞಾನದ ಉಪಾಯವನ್ನು) ನನ್ನಿಂದ ಕೇಳು. (ಮ. ಭಾ.)

**ಓಂ ಬುದ್ಧ್ಯಾ ವಿಶುದ್ಧಯಾ ಯುಕ್ತೋ ಧೃತ್ಯಾತ್ಮಾನಂ ನಿಯಮ್ಯ ಚ ।**
**ಶಬ್ದಾದೀನ್ವಿಷಯಾಂಸ್ತ್ಯಕ್ತ್ವಾ ರಾಗದ್ವೇಷೌ ವ್ಯುದಸ್ಯ ಚ ॥೫೧॥**

**ಓಂ ವಿವಿಕ್ತಸೇವೀ ಲಘ್ವಾಶೀ ಯತವಾಕ್ಕಾಯಮಾನಸಃ ।**
**ಧ್ಯಾನಯೋಗಪರೋ ನಿತ್ಯಂ ವೈರಾಗ್ಯಂ ಸಮುಪಾಶ್ರಿತಃ ॥೫೨॥**

**ಓಂ ಅಹಂಕಾರಂ ಬಲಂ ದರ್ಪಂ ಕಾಮಂ ಕ್ರೋಧಂ ಪರಿಗ್ರಹಮ್ ।**
**ವಿಮುಚ್ಯ ನಿರ್ಮಮಃ ಶಾನ್ತೋ ಬ್ರಹ್ಮಭೂಯಾಯ ಕಲ್ಪತೇ ॥೫೩॥**

ವಿಶುದ್ಧವಾದ ಬುದ್ಧಿಯಿಂದ ಕೂಡಿದವನಾಗಿ, ಧಾರಣಾಶಕ್ತಿಯಿಂದ ತನ್ನನ್ನು ಹತೋಟಿಯಲ್ಲಿಟ್ಟುಕೊಂಡು, ಶಬ್ದವೇ ಮುಂತಾದ ವಿಷಯಗಳನ್ನು ಬಿಟ್ಟು, ರಾಗ-ದ್ವೇಷಗಳನ್ನು ತಿರಸ್ಕರಿಸಿ, ಜನಬಾಹುಳ್ಯವಿಲ್ಲದ ಕಡೆಯನ್ನೇ ಬಯಸುತ್ತಾ, ಮಿತಾಹಾರಿಯಾಗಿ, ಮಾತು-ಶರೀರ-ಮನಸ್ಸುಗಳನ್ನು ನಿಯಮನಮಾಡಿದವನಾಗಿ, ಯಾವಾಗಲೂ ಧ್ಯಾನಪರನಾಗಿ, ವೈರಾಗ್ಯವನ್ನು

ಹೊಂದಿ, ಅಹಂಕಾರ-ಬಲ-ದರ್ಪ-ಕಾಮ-ಕ್ರೋಧ-ಪರಿಗ್ರಹ-ಮಮತೆ ಇವುಗಳನ್ನು ಬಿಟ್ಟು ಶಾಂತನಾಗಿರತಕ್ಕವನು ಬ್ರಹ್ಮಭಾವವನ್ನು ಹೊಂದುವುದಕ್ಕೆ ಅರ್ಹನಾಗುತ್ತಾನೆ.

* * *

(**ವಿಶುದ್ಧಯಾ ಬುದ್ಧ್ಯಾ ಯುಕ್ತಃ** = ವಿಶುದ್ಧವಾದ ಬುದ್ಧಿಯಿಂದ ಕೂಡಿದವನಾಗಿ, ಕೇವಲ ಶುದ್ಧಬುದ್ಧಿಯಲ್ಲ; ವಿಶೇಷವಾಗಿ ಶುದ್ಧವಾದ ಬುದ್ಧಿ. ಸ್ಫಟಿಕದಂತಿರುವ ಸ್ವಚ್ಛವಾದ ಬುದ್ಧಿ. ರಜಸ್ತಮಸ್ಸುಗಳೆಂಬ ಗುಣಗಳ ಬಣ್ಣಗಳು ಹಿನ್ನೆಲೆಯಲ್ಲಿಲ್ಲದ ಬುದ್ಧಿ. ಶುದ್ಧಸಾತ್ತ್ವಿಕಬುದ್ಧಿ. ಇಂತಹ ಬುದ್ಧಿಯಿಂದ. **ಧೃತ್ಯಾ ಆತ್ಮಾನಂ ನಿಯಮ್ಯ** = ಮನಸ್ಸು, ಪ್ರಾಣ ಮತ್ತು ಇಂದ್ರಿಯಗಳನ್ನು ಯೋಗದಿಂದ ಧರಿಸಿರುವ ಸಾತ್ತ್ವಿಕೀಧೃತಿಯಿಂದ (ಧಾರಣಾಶಕ್ತಿಯಿಂದ) ತನ್ನ ಚಲನ-ವಲನಗಳನ್ನೂ, ನಡೆ-ನುಡಿಗಳನ್ನೂ ನಿಯಮನಮಾಡಿಕೊಂಡು, **ಶಬ್ದಾದೀನ್ ವಿಷಯಾನ್ ತ್ಯಕ್ತ್ವಾ** = ಶಬ್ದ-ಸ್ಪರ್ಶ-ರೂಪ-ರಸ-ಗಂಧಗಳು ವಿಷಯಗಳು. ಇವುಗಳನ್ನು ಬಿಡುವುದು ಎಂದರೆ ಹೇಗೆ? ಶಬ್ದವಾಗದಿರುವ ಸ್ಥಳವೇ ಇಲ್ಲ. ಶಬ್ದವನ್ನು ಕೇಳಿಸಿ ಕೊಳ್ಳಕೂಡದೆಂದು ಕಿವಿಗಳನ್ನು ಮುಚ್ಚಿಕೊಳ್ಳಬೇಕೆ? ಶಬ್ದಾದಿವಿಷಯಗಳನ್ನು ತ್ಯಜಿಸಿ ಎಂದು ಬೇರೆ ಹೇಳಿದ್ದಾನೆ. ತ್ಯಾಗಮಾಡುವುದು ಹೇಗೆ? ನಿರ್ಜನವಾದ ಪ್ರದೇಶಕ್ಕೆ ಹೊರಟುಹೋದರೆ, ದೇವಾಲಯ– ನದೀತೀರಗಳಿಗೆ ಹೋದರೆ ಪ್ರಾಪಂಚಿಕವಿಷಯವಾದ ಮಾತುಗಳು ಕೇಳದೇ ಇರಬಹುದು. ಅಲ್ಲಿಯೂ ಸಹ ಪಕ್ಷಿಗಳ ಶಬ್ದಗಳು ಇದ್ದೇ ಇರುತ್ತವೆ. ನಿರ್ಜನಪ್ರದೇಶಕ್ಕೆ ಹೋದರೂ **ತ್ಯಕ್ತ್ವಾ** ಎಂಬ ಶ್ರೀಕೃಷ್ಣನ ಮಾತಿನಂತೆ ಶಬ್ದದ ತ್ಯಾಗವೂ ಆಗುವುದಿಲ್ಲ. ಆದುದರಿಂದ **ಶಬ್ದಾದೀನ್ ವಿಷಯಾನ್** ಶಬ್ದಾದಿ ವಿಷಯಗಳನ್ನು **ತ್ಯಕ್ತ್ವಾ** ಎಂದರೆ ಮನಸ್ಸಿನಿಂದ ತ್ಯಾಗಮಾಡಿ ಎಂಬ ಅರ್ಥವು ಚೆನ್ನಾಗಿ ಕಾಣುತ್ತದೆ. ಮನಸ್ಸನ್ನು ಏಕಾಗ್ರಮಾಡಿ ಪರಮಾತ್ಮನಲ್ಲಿ ಕೇಂದ್ರೀಕರಿಸಿದರೆ ; ಧ್ಯಾನಯೋಗಾಸಕ್ತನಾದರೆ ಹೊರಗಿನ ವಿಷಯಗಳೆಲ್ಲವೂ ಹೊರಗೇ ಉಳಿದುಕೊಳ್ಳುವುವು. ಒಳಗೆ ಪ್ರವೇಶಿಸಲಾರವು. ಏಕೆಂದರೆ ಧ್ಯಾನಯೋಗದಲ್ಲಿ ಮನಸ್ಸು ಮಾತ್ರವೇ ಪರಮಾತ್ಮನಲ್ಲಿ ಏಕಾಗ್ರ ವಾಗಿರುವುದಿಲ್ಲ. ಅದು ಏಕಾಗ್ರವಾಗಬೇಕಾದರೆ ತನ್ನ ಹಿಂದೆ ಇಂದ್ರಿಯ

ಗಳನ್ನೂ ಸೆಳೆದುಕೊಂಡೇ ಹೋಗಬೇಕಾಗುತ್ತದೆ. ಅರ್ಥಾತ್ ಆ ಸಮಯದಲ್ಲಿ ಇಂದ್ರಿಯಗಳ ಬಾಗಿಲುಗಳು ಮುಚ್ಚಿಹೋಗುತ್ತವೆ. ಹೊರಗಿನ ವಿಷಯಗಳ ದೃಷ್ಟ್ಯಾ ಕಿವಿಯು ಕಿವುಡಾಗುತ್ತದೆ. ಕಣ್ಣು ಕುರುಡಾಗುತ್ತದೆ. ನಾಲಿಗೆ ಮತ್ತು ತ್ವಚೆಗಳು ತಮ್ಮ ಇರುವಿಕೆಯನ್ನೇ ಮರೆಯುತ್ತವೆ. ಮೂಗೂ ಸಹ ಹೊರಗಿನ ವಾಸನೆಯನ್ನು ಸೆಳೆದುಕೊಳ್ಳಲು ಶಕ್ತಿಹೀನವಾಗುತ್ತದೆ. ಶಬ್ದಾದಿ ವಿಷಯಗಳ ತ್ಯಾಗವು ಮನಸ್ಸಿನ ಏಕಾಗ್ರತೆಯಿಂದ ಅಥವಾ ಧ್ಯಾನಯೋಗದಿಂದ ಮಾತ್ರವೇ ಸಾಧ್ಯ. ಈ ರೀತಿಯಲ್ಲಿ ಮನಸ್ಸನ್ನು ಏಕಾಗ್ರಗೊಳಿಸಿ ಶಬ್ದಾದಿ ವಿಷಯಗಳನ್ನು ತ್ಯಾಗಮಾಡಿ.

ಶಬ್ದಾದಿಗಳನ್ನು ತ್ಯಜಿಸಿದ ಹೊರತು ಧ್ಯಾನಯೋಗವು ಸಿದ್ಧಿಸುವುದಿಲ್ಲ. ಧ್ಯಾನಯೋಗವು ಸಿದ್ಧಿಸಿದ ಹೊರತು ಶಬ್ದಾದಿಗಳ ಸಂಪೂರ್ಣತ್ಯಾಗವಾಗುವುದಿಲ್ಲ. ಹೀಗೆ ಅನ್ಯೋನ್ಯಾಶ್ರಯದೋಷವಿರುವುದರಿಂದ ಈ ಸಾಧನೆಯು ಅಸಾಧ್ಯವಲ್ಲವೇ? ಎಂದು ಆಶಂಕೆ ಮಾಡಬಾರದು. ಏಕಾಂತಸ್ಥಳಗಳಿಗೆ ಹೋಗುವಿಕೆ, ಮನಸ್ಸಿನ ನಿಯಮನ–ಮುಂತಾದ ಸಾಧನೆಗಳಿಂದ ತನ್ನ ಕೈಯಲ್ಲಿ ಸಾಧ್ಯವಾದಷ್ಟು ಮಟ್ಟಿಗೆ ಶಬ್ದವೇ ಮುಂತಾದ ವಿಷಯಗಳನ್ನು ದೂರಮಾಡಬೇಕು. ಧ್ಯಾನವನ್ನೂ ಮಾಡುತ್ತಿರಬೇಕು. ಧ್ಯಾನವು ಸಿದ್ಧಿಸಿದಾಗ ಮೇಲೆ ಹೇಳಿದ ಶಬ್ದಾದಿಗಳ ವಿಷಯಗಳಲ್ಲಿ ಉಳಿಯುವ ಅಂಶಗಳೂ ಬೀಜವೂ ಸಂಪೂರ್ಣವಾಗಿ ನಾಶವಾಗುವುವು. ಆದುದರಿಂದ ಪರಸ್ಪರ ವಿರೋಧವಿಲ್ಲ.

**ರಾಗದ್ವೇಷೌ ವ್ಯುದಸ್ಯ** = ರಾಗ-ದ್ವೇಷಗಳನ್ನೂ ಪರಿತ್ಯಜಿಸಿ. ರಾಗ ಎಂದರೆ ಪ್ರೀತಿ. ಹೆಂಡತಿ, ಮಕ್ಕಳು, ಸ್ನೇಹಿತ, ಮನೆ, ಬಂಧುಗಳು–ಇವರ ಮೇಲಿನ ಪ್ರೀತಿ. ದ್ವೇಷ ಎಂದರೆ ಹಗೆತನ. ಶತ್ರುಗಳ ಮೇಲಿನ ಹಗೆತನ. ಈ ಎರಡನ್ನೂ ಬಿಟ್ಟು. ಕಾಮದ ವಿಕಾರವೇ ರಾಗ. ಕ್ರೋಧದ ವಿಕಾರವೇ ದ್ವೇಷ. ಈ ಎರಡನ್ನೂ ಬಿಟ್ಟು ಎಂದರೆ ಪ್ರೀತಿಸಬೇಕಾದವರನ್ನು ದ್ವೇಷಿಸುವುದು ಎಂಬ ಅರ್ಥವಲ್ಲ. ಎಲ್ಲರನ್ನೂ ಸಮವಾಗಿ ಕಾಣಬೇಕೆಂಬ ಅಭಿಪ್ರಾಯ.

**ವಿವಿಕ್ತಸೇವೀ** = ವಿವಿಕ್ತ ಎಂದರೆ ಏಕಾಂತಕ್ಕೆ ತಕ್ಕುದಾದ ಸ್ಥಳ. ಜನರಹಿತವಾದ ಸ್ಥಳ. ಪವಿತ್ರವಾದ ಸ್ಥಳ. ಅರಣ್ಯ, ನದಿ, ಮಳಲೊಟ್ಟಲು,

ಬೆಟ್ಟದ ಗವಿ–ಮುಂತಾದ ಪ್ರದೇಶಗಳು. ಇಂತಹ ಸ್ಥಳಗಳಲ್ಲಿ ಇರತಕ್ಕ ಸ್ವಭಾವದವನು. ಇವನಿಗೆ ಜನಜಂಗುಳಿಯು ಬೇಡ. ಯಾರೊಬ್ಬರ ಸಹ ವಾಸವೂ ಬೇಡ. ಯಾರೊಬ್ಬರೊಡನೆ ಮಾತನಾಡುವುದೂ ಬೇಡ. ಏಕಾಂತ ಪ್ರಿಯ. ಲಘ್ವಾಶೀ = ಲಘು ಎಂದರೆ ಸ್ವಲ್ಪವೇ ಆಶೀ ಎಂದರೆ ತಿನ್ನುವವನು. ಅಲ್ಪಾಹಾರೀ ; ಮಿತಾಹಾರೀ. ಎಂದರೆ ಆತ್ಮಸಾಧನೆಗೆ ಎಷ್ಟು ಬೇಕೋ ಅಷ್ಟು ಮಾತ್ರ ಆಹಾರವನ್ನು ತೆಗೆದುಕೊಳ್ಳುವವನು. ಯತವಾಕ್ಕಾಯಮಾನಸಃ = ಯತ ಎಂದರೆ ತಡೆಹಿಡಿಯಲ್ಪಟ್ಟ, ನಿಯಂತ್ರಣ ಮಾಡಲ್ಪಟ್ಟ ಮಾತು, ಶರೀರ ಮತ್ತು ಮನಸ್ಸುಗಳುಳ್ಳವನು. ಎಂದರೆ ಹೆಚ್ಚು ಮಾತನಾಡುವವನಲ್ಲ. ಕೆಲಸಕ್ಕೆ ಬಾರದ ಮಾತನಾಡುವವನಲ್ಲ. ಮಿತಭಾಷೀ. ಎಷ್ಟು ಬೇಕೋ ಅಷ್ಟೇ ಮಾತನಾಡುತ್ತಾನೆ. ಶರೀರವನ್ನು ನಿಯಂತ್ರಿಸಿರುವವನು ಎಂದರೆ ಬಹಿರಿಂದ್ರಿಯಗಳನ್ನು ಶಿರಃಪಾಣಿಪಾದಪಾಯೂಪಸ್ಥಗಳನ್ನು ನಿಯಂತ್ರಿಸಿರುವವನು.

ತಲೆಯನ್ನು ಕಾರಣವಿಲ್ಲದೇ ಅತ್ತಲಿತ್ತ ತಿರುಗಿಸುವುದಿಲ್ಲ. ಕಂಡಿದ್ದನ್ನೆಲ್ಲಾ ಕೈಯೊಡ್ಡಿ ಕೇಳುವವನಲ್ಲ. ಉದ್ದೇಶವಿಲ್ಲದೇ ಅತ್ತಲಿತ್ತ ತಿರುಗಾಡುವವನೂ ಅಲ್ಲ. ಕಾಮಚಾರಿಯಲ್ಲ. ಇವಿಷ್ಟೂ ಶರೀರವನ್ನು ಹತೋಟಿಯಲ್ಲಿಟ್ಟುಕೊಳ್ಳುವ ಕ್ರಿಯೆಗಳು. ಮನಸ್ಸನ್ನೂ ಹತೋಟಿಯಲ್ಲಿಟ್ಟುಕೊಂಡಿರುವವನು. ಕರ್ಮೇಂದ್ರಿಯಕ್ರಿಯೆಗಳನ್ನೂ, ಜ್ಞಾನೇಂದ್ರಿಯಕ್ರಿಯೆಗಳನ್ನೂ ಮನಸ್ಸೊಂದೇ ಮಾಡಿ ಮುಗಿಸಬಲ್ಲುದು. ಅಂತಹ ಮನಸ್ಸನ್ನು ಹಿಡಿದು ನಿಲ್ಲಿಸುವುದೆಂದರೆ ಬಟ್ಟೆಯಲ್ಲಿ ನೀರನ್ನು ಹಿಡಿದಿಟ್ಟಂತೆಯೇ ಸರಿ. ಮನಸ್ಸಂಯಮವೆಂಬುದು ಬಹುಕಷ್ಟತರವಾದುದು. ಸತತವಾದ ಅಭ್ಯಾಸದಿಂದ ಮಾತ್ರವೇ ಮನಸ್ಸಿನ ಸಂಯಮವು ಸಾಧ್ಯವಾಗುತ್ತದೆ. ಈ ಎಲ್ಲದರ ಮೇಲೂ ನಿಯಂತ್ರಣವಿದ್ದರೇನೇ ಮುಂದೆ ಹೇಳಿರುವ ಧ್ಯಾನಯೋಗಪರತ್ವಕ್ಕೆ ಯೋಗ್ಯತೆ. ಇವುಗಳಾವುದನ್ನೂ ನಿಯಮನಮಾಡದೇ ಧ್ಯಾನಾಸಕ್ತನಾಗಿ ಕುಳಿತುಕೊಳ್ಳುವುದೆಂದರೆ ಅದು ಕೇವಲ ಮಾರ್ಜಾಲಧ್ಯಾನವೇ ಆದೀತು. ಕಣ್ಣುಮುಚ್ಚಿ ಧ್ಯಾನಕ್ಕೆಂದು ಕುಳಿತುಕೊಂಡರೆ ಮರ್ಕಟರೂಪವಾದ ಮನಸ್ಸು ಒಂದು ಕಡೆಯಿಂದ ಮತ್ತೊಂದು ಕಡೆಗೆ ನೆಗೆಯುತ್ತಿರುತ್ತದೆ. ಇಂದ್ರಿಯಗಳ ಕ್ರಿಯೆಗಳೆಲ್ಲವನ್ನೂ ಮನಸ್ಸೇ ಮುಗಿಸಿಬಿಡುತ್ತದೆ. ಪರಿಶುದ್ಧ

ವಾಗಿರುವ ಒಂದು ಸ್ಥಳದಲ್ಲಿ ಕುಳಿತುಕೊಂಡು ವಾಕ್ಕಾಯಗಳನ್ನು ನಿಯಮನ ಮಾಡುವುದು ಸುಲಭ. ಆದರೆ ಮನಸ್ಸಿನ ನಿಯಮನವು ಕಷ್ಟಸಾಧ್ಯ. ಮನಸ್ಸೆಂಬ ಕುದುರೆಗೆ ನಿಯಮನವೆಂಬ ಕಡಿವಾಣಗಳನ್ನು ಹಾಕಿ ಹಿಂದಕ್ಕೆ ಸೆಳೆದುಕೊಳ್ಳಬೇಕು. ಓಡಿಯೋಡಿ ಹೋಗುತ್ತಿರುವುದನ್ನು ಪುನಃ ಪುನಃ ವಿಶೇಷಪ್ರಯತ್ನದಿಂದ ಹಿಂದಕ್ಕೆ ಕರೆತರಬೇಕು. ಮನಸ್ಸನ್ನು ನಿರ್ವಿಷಯ ವನ್ನಾಗಿ ಮಾಡಬೇಕು. ಅನಂತರ ಅದನ್ನು ಧ್ಯಾನಕ್ಕೆ ಯೋಜಿಸಬೇಕು. ಹೀಗೆ ಮಾಡುವುದರಿಂದ ಧ್ಯಾನಯೋಗಪರನಾಗಬಹುದು. ಇಂತಹ ಧ್ಯಾನಯೋಗ ಪರತ್ವವು ನಿತ್ಯವಾಗಿರಬೇಕು ಎನ್ನುತ್ತಾನೆ ಶ್ರೀಕೃಷ್ಣ.

ನಿತ್ಯವೂ ಸರ್ವಕಾಲದಲ್ಲಿಯೂ ಧ್ಯಾನಪರನಾಗಿರಬೇಕು. ಕೇವಲ ನಾಲ್ಕಾರು ವರ್ಷಗಳಲ್ಲಿ ಈ ಧ್ಯಾನಯೋಗವು ಸಿದ್ಧಿಸಿಬಿಡುವುದಿಲ್ಲ. ಧ್ಯಾನ ಯೋಗದ ಮೂಲಕವಾಗಿ ನೈಷ್ಕರ್ಮ್ಯಸಿದ್ಧಿಯಾಗಬೇಕಾದರೆ ಹಲವಾರು ವರ್ಷಗಳು ಎಡಬಿಡದೇ ಧ್ಯಾನಯೋಗನಿರತನಾಗಿರಬೇಕು. ಒಂದೇ ಜನ್ಮ ದಲ್ಲಿ ಸಾಧನೆಯಾಗದೆಯೂ ಇರಬಹುದು. ಆದರೆ ಅದರಿಂದ ನಿರುತ್ಸಾಹಿ ಗಳಾಗಬೇಕಾಗಿಲ್ಲ. ಧ್ಯಾನಯೋಗಕ್ಕೆ ತೊಡಗುವುದೊಂದು ಬೇಕೇ ಹೊರತು ತೊಡಗಿದನಂತರ ಗುರುವಿನ ಅನುಗ್ರಹದಿಂದ ಅದೇ ಮುಂದು ಮುಂದಕ್ಕೆ ಕರೆದುಕೊಂಡು ಹೋಗುತ್ತಿರುತ್ತದೆ. ಆರುರುಕ್ಷುವಾದ ಇವನಿಗೆ ಈ ಧ್ಯಾನಯೋಗವೇ ನೂತನ ಚೈತನ್ಯವನ್ನೂ ಕೊಡುತ್ತಿರುತ್ತದೆ.

**ವೈರಾಗ್ಯಂ ಸಮುಪಾಶ್ರಿತಃ** = ವೈರಾಗ್ಯವನ್ನು ಚೆನ್ನಾಗಿ ಆಶ್ರಯಿಸಿರ ಬೇಕು. ಮೇಲೆ ಹೇಳಿದ ನಿಯಮಗಳೆಲ್ಲವೂ ವೈರಾಗ್ಯದ ಪೂರ್ವನಿಯಮ ಗಳೇ ಆಗಿವೆ. ಆ ನಿಯಮಗಳೆಲ್ಲದರ ಅನುಷ್ಠಾನದಿಂದ ವಿರಾಗಿಯಾಗುವ ನಲ್ಲದೇ ರಾಗಿಯಾಗುವ ಸಾಧ್ಯತೆಯೇ ಇಲ್ಲ. **ರಾಗದ್ವೇಷೌ ವ್ಯುದಸ್ಯ ಚ**– ಎಂದು ಈ ಹಿಂದೆಯೇ ಸ್ಪಷ್ಟವಾಗಿ ಹೇಳಿದ್ದಾನೆ. ಆದರೂ ಸಹ 'ವೈರಾಗ್ಯ' ಪದದ ಹಿರಿಮೆಯನ್ನು ಹೆಚ್ಚಿಸುವುದಕ್ಕಾಗಿ ಶ್ರೀಕೃಷ್ಣನು **ವೈರಾಗ್ಯಂ ಚ ಸಮುಪಾಶ್ರಿತಃ** ಎಂದು ಹೇಳಿದ್ದಾನೆ. ವಿರಾಗಭಾವವನ್ನು. ಆತ್ಮವೊಂದರ ಅಥವಾ ಪರಮಾತ್ಮನೊಬ್ಬನ ಹೊರತಾಗಿ ಎಲ್ಲ ವಸ್ತುಗಳಲ್ಲಿಯೂ ವಿರಕ್ತಿ ಯನ್ನು ಹೊಂದಿರುವುದನ್ನು. ವಿರಕ್ತಿಯನ್ನೇ ಚೆನ್ನಾಗಿ ಆಶ್ರಯಿಸಿಕೊಂಡಿರ

ಬೇಕು. ಯಾವ ಕಾರಣದಿಂದಲೂ ವಿಚಲಿತನಾಗಬಾರದು–ಎಂಬುದು **ಸಮುಪಾಶ್ರಿತಃ** ಎಂಬ ಪದದ ಅಭಿಪ್ರಾಯವಾಗಿದೆ.

**ಅಹಂಕಾರಂ ಬಲಂ ದರ್ಪಂ ಕಾಮಂ ಕ್ರೋಧಂ ಪರಿಗ್ರಹಂ ವಿಮುಚ್ಯ** = ಅಹಂಕಾರ ಎಂಬುದು ಆಜನ್ಮವಾಗಿ ಇರತಕ್ಕದ್ದೇ. 'ನಾನು, ನನ್ನದು' ಎಂದು ಹೇಳದೇ ಇರತಕ್ಕವನು ಪ್ರಪಂಚದಲ್ಲಿಯೇ ಯಾರೂ ಇಲ್ಲ. ಆದರೆ ಈ ಭಾವವು ಜ್ಞಾನಕ್ಕೆ ಪರಮಶತ್ರು. 'ನಾನು' 'ನನ್ನದು' ಎಂಬುದು ಅಶಾಶ್ವತವಾದ ದೇಹವನ್ನು ಕುರಿತು ಆಗಬಾರದು. 'ನಾನು' ಎನ್ನಿಸಿಕೊಳ್ಳುವ ದೇಹವು ಸ್ಥಿರವಾಗಿ ಉಳಿಯತಕ್ಕದ್ದಲ್ಲ. ಆದುದರಿಂದ ಅಸ್ಥಿರವಾದ ಶರೀರವನ್ನು 'ನಾನು' 'ನನ್ನದು' ಎಂಬುದನ್ನು ಬಿಟ್ಟು ನಾನು ಅವನ ಅಂಶ. ದೇಹವೆಂಬುದು ಒಂದು ಅಂಗಿ ಇದ್ದಂತೆ. ಇದೆಂದಿಗೂ 'ಅಹಂ' ಪದವಾಚಿ ಯಾಗುವುದಿಲ್ಲ–ಎಂಬ ರಹಸ್ಯವನ್ನು ಅರಿಯುವುದೇ ಅಹಂಕಾರದ ಪರಿ ತ್ಯಾಗ. **ಬಲಂ** = ಶರೀರಬಲವನ್ನೂ ಬಿಡಬೇಕೆಂದು ಇದರ ಅರ್ಥವಾಗುತ್ತದೆ. ಮೇಲಾಗಿ ಬಲವನ್ನು ಬಿಡುವುದಕ್ಕಾಗುವುದಿಲ್ಲ. ಶರೀರದಲ್ಲಿ ಸ್ವಾಭಾವಿಕ ವಾಗಿಯೇ ಇರುವ ಗುಣವಿದು. ಮಿತಾಹಾರ, ವೈರಾಗ್ಯ ಇತ್ಯಾದಿಗಳಿಂದಲೂ ನಿತ್ಯಧ್ಯಾನಯೋಗದಿಂದಲೂ ಶಾರೀರಿಕವಾದ ಬಲವು ಕುಗ್ಗುತ್ತದೆ ; ಮಾನ ಸಿಕಬಲವು ಹೆಚ್ಚುತ್ತದೆ ಎಂಬುದು ನಿಜ. ಆದರೆ ಸಾಧನೆಗೆ ಉಪಾಧಿಯೂ ಚೆನ್ನಾಗಿರಬೇಕಾಗಿರುವುದರಿಂದ ನೀರೋಗದೃಢಕಾಯತೆಯೂ ಅವಶ್ಯವೇ ಸರಿ. ಆದರೆ ಸಾಧನೆಗೆ ವಿರೋಧವಾಗುವಷ್ಟು ಪ್ರಮಾಣದಲ್ಲಿ ಶರೀರದ ಬಲ ವನ್ನು ಅಪೇಕ್ಷಿಸಬಾರದು. ಬಯಕೆ, ಅತಿಪ್ರೀತಿ ಮೊದಲಾದುವುಗಳ ಆವೇಶ ದಿಂದ ತೋರುವ ಒಂದು ಬಗೆಯ ವಿಶೇಷಸಾಮರ್ಥ್ಯ ಎಂದೂ ಅರ್ಥ ಮಾಡಬಹುದಾಗಿದೆ. **ದರ್ಪಂ** = ಸೊಕ್ಕು ; ಕೊಬ್ಬು ; ಗರ್ವ. ಎಲ್ಲರಲ್ಲಿಯೂ ಇಲ್ಲದುದು ತನ್ನ ಬಳಿ ವಿಶೇಷವಾಗಿದ್ದರೆ ಈ ಗುಣವು ಬರುತ್ತದೆ. ಹಣವು ಹೆಚ್ಚು ಪರಿಮಾಣದಲ್ಲಿ ಸಾಮಾನ್ಯವಾಗಿ ಎಲ್ಲರಲ್ಲಿಯೂ ಇರುವುದಿಲ್ಲ. ಎಲ್ಲರೂ ವಿದ್ಯಾವಂತರಾಗಿರುವುದಿಲ್ಲ. ಎಲ್ಲರೂ ಉಚ್ಚಮಟ್ಟದ ಸಂಗೀತಗಾರ ರಾಗಿರುವುದಿಲ್ಲ. ಎಲ್ಲರೂ ಉಚ್ಚಮಟ್ಟದ ಮಾತುಗಾರರಾಗಿರುವುದಿಲ್ಲ. ಹೆಚ್ಚು ಹಣವಂತನಾಗಿರುವುದು, ಹೆಚ್ಚು ವಿದ್ಯಾವಂತನಾಗಿರುವುದು, ದೊಡ್ಡ ಸಂಗೀತಗಾರನಾಗಿರುವುದು, ದೊಡ್ಡ ಮಾತುಗಾರನಾಗಿರುವುದು–ಇವುಗಳು

ಅವರಲ್ಲಿ ಗರ್ವವನ್ನುಂಟುಮಾಡುತ್ತವೆ. ಈ ಗರ್ವವೆಂಬುದು ಒಬ್ಬನಿಗೆ ಸ್ವಾಭಾವಿಕವಾಗಿಯೇ ಉಂಟಾಗುತ್ತದೆ. ಹೆಚ್ಚು ಐಶ್ವರ್ಯವಂತನಾಗಿರುವುದು, ಹೆಚ್ಚು ವಿದ್ಯಾವಂತನಾಗಿರುವುದು ಅವನಿಗೆ ಒಂದು ವಿಧವಾದ ಸಂತೋಷವನ್ನುಂಟುಮಾಡುತ್ತದೆ. ಈ ಸಂತೋಷವೇ ಕಾಲಕ್ರಮದಲ್ಲಿ ದರ್ಪಕ್ಕೆ ಕಾರಣವಾಗುತ್ತದೆ. ಆಪಸ್ತಂಬಧರ್ಮಸೂತ್ರದಲ್ಲಿಯೂ ಇದನ್ನು ಉದಾಹರಿಸಿದ್ದಾರೆ.

**ಹೃಷ್ಟೋ ದೃಪ್ಯತಿ ದೃಪ್ತೋ ಧರ್ಮಮತಿಕ್ರಾಮತಿ ೧-೧೩-೪**

ಇಂತಹ ದರ್ಪವನ್ನು ಬಿಡಬೇಕು. **ಕಾಮಂ ಕ್ರೋಧಂ = ಕಾಮಂ** ಎಂದರೆ ಧರ್ಮಕ್ಕೆ ವಿರುದ್ಧವಾದ ಇಚ್ಛೆಯನ್ನೂ, **ಕ್ರೋಧಂ** ಎಂದರೆ ಹಗೆತನ ವನ್ನೂ ಬಿಡಬೇಕು.

**ಪರಿಗ್ರಹಂ** = ಪರಿಗ್ರಹ ಎಂಬುದು ಬ್ರಾಹ್ಮಣನಿಗೆ ಉಕ್ತವಾಗಿರುವ ಷಟ್ಕರ್ಮಗಳಲ್ಲೊಂದು. ಬ್ರಹ್ಮಜ್ಞಾನದ ಸಾಧನೆಯಲ್ಲಿರತಕ್ಕವನು ಪರಿಗ್ರಹ ವನ್ನು ಸಾಧ್ಯವಾದಷ್ಟು ದೂರೀಕರಿಸಬೇಕು. ದಾನಕೊಡುವವನ ಮನಸ್ತರಂಗ ಗಳು ಆರುರುಕ್ಷುವಿನ ಮೇಲೆ ಪ್ರತಿಕ್ರಿಯೆಯನ್ನು ಉಂಟುಮಾಡುತ್ತವೆ. ಇವನ ಸಾಧನೆಗೆ ಪರಿಗ್ರಹದಿಂದ ತೊಂದರೆಯಾಗಬಹುದು. ಆದುದರಿಂದ ಪರಿಗ್ರಹವನ್ನೂ ಸಹ ಬಿಡಬೇಕು ಎನ್ನುತ್ತಾನೆ ಶ್ರೀಕೃಷ್ಣ.

ಇಷ್ಟನ್ನೂ ಅನುಷ್ಠಾನಮಾಡಿದನಂತರ ಇವನಿಗೆ ಮಮತೆಯೆಂಬುದೇ ಇರಲು ಸಾಧ್ಯವಾಗುವುದಿಲ್ಲ. **ನಿರ್ಮಮಃ**-'ಯಾವ ವಿಧವಾದ ಮಮತೆ ಅಥವಾ ಮಮಕಾರವಿಲ್ಲದವನು ಆಗಿಬಿಡುತ್ತಾನೆ. ನಿರ್ಮಮನೂ ಆದ ನಂತರ, ಮಮತ್ವವು ಭಗವಂತನಲ್ಲಿ ಸೇರಿಹೋದನಂತರ, ಭಗವಂತನೇ ಆಗಿಬಿಡುತ್ತಾನೆ. ಬ್ರಹ್ಮಭೂಯಾಯ ಎಂದರೆ ಬ್ರಹ್ಮಭಾವವನ್ನು ಹೊಂದಲು **ಕಲ್ಪತೇ** = ತಕ್ಕವನಾಗುತ್ತಾನೆ. ಸಮರ್ಥನಾಗುತ್ತಾನೆ.)

o o o

ಜ್ಞಾನದ ಪರಾನಿಷ್ಠೆಯನ್ನು ಹೇಗೆ ಮಾಡಬೇಕು ಎಂದರೆ : **ವಿಶುದ್ಧಯಾ ಬುದ್ಧ್ಯಾ-ಯುಕ್ತಃ ವಿಶುದ್ಧಯಾ** = ಮಾಯಾರಹಿತವಾದ

**ಬುದ್ಧ್ಯಾ ಯುಕ್ತಃ** = ನಿಶ್ಚಯಾತ್ಮಕವಾದ ಬುದ್ಧಿಯಿಂದ ಕೂಡಿದವನಾಗಿ– **ಧೃತ್ಯಾ** = ಧೈರ್ಯದಿಂದ ಆತ್ಮವನ್ನು, ಕಾರ್ಯ ಮತ್ತು ಕರಣಗಳ ಸೇರುವಿಕೆಯ ರೂಪವಾದ ಶರೀರವನ್ನು ನಿಯಮನಮಾಡಿ = ವಶಪಡಿಸಿಕೊಂಡು ಶಬ್ದವೇ ಮುಂತಾದ ವಿಷಯಗಳನ್ನು ತ್ಯಜಿಸಿ (ಶರೀರಸ್ಥಿತಿಗೆ ಎಷ್ಟು ಬೇಕೋ ಅಷ್ಟು ಮಾತ್ರ ಇಟ್ಟುಕೊಂಡು ಸುಖಭೋಗಗಳಿಗೋಸ್ಕರ ಅವುಗಳನ್ನು ಇಟ್ಟುಕೊಳ್ಳದೇ) ಕೇವಲ ಶರೀರಸ್ಥಿತಿಗೋಸ್ಕರವಾಗಿ ಎಷ್ಟು ಬೇಕೋ ಅಷ್ಟು ಮಾತ್ರ ಅವುಗಳನ್ನು ಇಟ್ಟುಕೊಂಡಿರುವಾಗಲೂ ಬಂದು ಒದಗುವ ರಾಗ-ದ್ವೇಷಗಳನ್ನು ತೊರೆದು ಅರಣ್ಯ, ನದಿಯ ಮರಳುದಂಡೆ, ಪರ್ವತ, ಗುಹೆ ಮುಂತಾದ ಏಕಾಂತಸ್ಥಳಗಳನ್ನು ಸೇವಿಸುವವನಾಗಿ, ಮಿತಾಹಾರಿಯಾಗಿ, (ಏಕಾಂತದೇಶಗಳ ಸೇವನೆ, ಲಘುವಾದ ಆಹಾರ ಇವುಗಳಿಂದ ನಿದ್ರೆಯೇ ಮುಂತಾದ ದೋಷಗಳು ತೊಲಗಿ ಮನಸ್ಸಿನಲ್ಲಿ ಪ್ರಸನ್ನತೆಯುಂಟಾಗುತ್ತದೆ.) ಮನಸ್ಸು, ಮಾತು ಮತ್ತು ಶರೀರಗಳನ್ನು ವಶದಲ್ಲಿಟ್ಟುಕೊಂಡು ಎಲ್ಲ ಇಂದ್ರಿಯಗಳನ್ನೂ ಕರ್ಮಗಳಿಂದ ವಿರಾಮ ಹೊಂದುವಂತೆ ಮಾಡಿ ಧ್ಯಾನ ಮತ್ತು ಯೋಗಗಳನ್ನು ಸದಾ ಪ್ರಧಾನಕರ್ತವ್ಯಗಳನ್ನಾಗಿಟ್ಟುಕೊಂಡು (ಧ್ಯಾನ ಎಂದರೆ ಆತ್ಮಸ್ವರೂಪದ ಚಿಂತನೆ. ಯೋಗ ಎಂದರೆ ಆತ್ಮವಿಷಯದಲ್ಲಿಯೇ ಮನಸ್ಸನ್ನು ಏಕಾಗ್ರವಾಗಿರಿಸುವಿಕೆ–ಇದರಿಂದ ಮಂತ್ರ, ಜಪ–ಮುಂತಾದ ಇತರ ಕರ್ತವ್ಯಗಳನ್ನಿಟ್ಟುಕೊಳ್ಳಬಾರದು ಎಂಬುದು ಸೂಚಿಸಲ್ಪಡುತ್ತದೆ.) ವೈರಾಗ್ಯ ಎಂದರೆ ವಿರಾಗಭಾವ. (ಐಹಿಕ ಮತ್ತು ಪಾರಲೌಕಿಕವಿಷಯಗಳಲ್ಲಿ ಆಸೆಯಿಲ್ಲದಿರುವಿಕೆ.) ಅಹಂಕಾರ-ಬಲ-ದರ್ಪ-ಕಾಮ-ಕ್ರೋಧ-ಪರಿಗ್ರಹಗಳನ್ನು ತೊರೆದು, ಪರಮಹಂಸಪರಿವ್ರಾಜಕನಾಗಿ ದೇಹ, ಜೀವನಮಾತ್ರದಲ್ಲಿಯೂ ಕೂಡ ಮಮತೆಯಿಲ್ಲದೇ, ಇದೇ ಕಾರಣದಿಂದ ಪ್ರಶಾಂತನಾಗಿ ಯಾವನು ಇರುತ್ತಾನೆಯೋ ಅಂತಹ ಆಯಾಸರಹಿತನಾದವನು ಜ್ಞಾನನಿಷ್ಠನಾದ ಯತಿ. ಅವನು ಬ್ರಹ್ಮರೂಪನಾಗಲು ಯೋಗ್ಯನಾಗುತ್ತಾನೆ. (ಅಹಂಕಾರ ಎಂದರೆ ಶರೀರ, ಇಂದ್ರಿಯ ಮುಂತಾದುವುಗಳನ್ನು ತಾನು ಎಂದು ಭಾವಿಸುವಿಕೆ. ಬಲ ಎಂದರೆ ಶರೀರವೇ ಮುಂತಾದ ಸಾಧಾರಣಸಾಮರ್ಥ್ಯವಲ್ಲ. ಏಕೆಂದರೆ : ಇದು ಸ್ವಾಭಾವಿಕ. ಇದನ್ನು ಬಿಡಲು ಸಾಧ್ಯವೂ ಇಲ್ಲ. ಆದುದರಿಂದ ಇಲ್ಲಿ

ಬಲ ಎಂದರೆ ಕಾಮದಿಂದ ಮತ್ತು ಆಸಕ್ತಿಯಿಂದ ಕೂಡಿದ ಸಾಮರ್ಥ್ಯ. ದರ್ಪ ಎಂದರೆ ಹರ್ಷದ ಅನಂತರ ಉಂಟಾಗುವ ಮತ್ತು ಧರ್ಮವನ್ನು ಮೀರುವುದಕ್ಕೆ ಕಾರಣವಾದ ಗರ್ವ. **ಹೃಷ್ಟೋ ದೃಪ್ಯತಿ, ದೃಪ್ತಃ ಧರ್ಮಮತಿಕ್ರಾಮತಿ ।)**

**ಕಾಮಂ** = ಇಚ್ಛೆಯನ್ನು ; **ಕ್ರೋಧಂ** = ದ್ವೇಷವನ್ನು ; **ಪರಿಗ್ರಹಂ** = ಶರೀರವನ್ನು ಧರಿಸುವ ಪ್ರಸಂಗದಲ್ಲಿ ಅಥವಾ ಧರ್ಮವನ್ನು ಅನುಷ್ಠಾನ ಮಾಡುವ ಕಾರಣದಿಂದ ಒದಗಬಹುದಾದ ಹೊರಗಿನ ಪರಿಗ್ರಹವನ್ನು. ಇಂದ್ರಿಯ ಮತ್ತು ಮನಸ್ಸುಗಳಲ್ಲಿರುವ ದೋಷಗಳನ್ನು ತ್ಯಜಿಸಿದರೂ ಕೂಡ ಈ ಪರಿಗ್ರಹದೋಷವು ಒದಗಬಹುದು. ಅದನ್ನೂ ತ್ಯಜಿಸಬೇಕು.

(ಶಂ. ಭಾ.)

**ವಿಶುದ್ಧಯಾ ಬುದ್ಧ್ಯಾ ಯುಕ್ತಃ** = ಯಥಾರ್ಥವಾಗಿರುವ ಆತ್ಮ ತತ್ತ್ವವಿಷಯಕವಾದ ಬುದ್ಧಿಯಿಂದ ಕೂಡಿದವನಾಗಿ. **ಧೃತ್ಯಾ ಆತ್ಮಾನಂ ನಿಯಮ್ಯ** = ಮನಸ್ಸನ್ನು ವಿಷಯಗಳಿಗೆ ವಿಮುಖವನ್ನಾಗಿ ಮಾಡುವುದರ ಮೂಲಕ ಯೋಗಕ್ಕೆ ಯೋಗ್ಯವನ್ನಾಗಿ ಮಾಡಿ. **ಶಬ್ದಾದೀನ್ ವಿಷಯಾನ್ ತ್ಯಕ್ತ್ವಾ** = ಶಬ್ದವೇ ಮುಂತಾದ ವಿಷಯಗಳನ್ನು ಹತ್ತಿರದಲ್ಲಿ ಇಲ್ಲದಂತೆ ಮಾಡಿ.

**ರಾಗದ್ವೇಷೌ ವ್ಯುದಸ್ಯ ಚ** = ಸಂಭವಿಸುವ ರಾಗ-ದ್ವೇಷಗಳನ್ನು ತೊರೆದು. **ವಿವಿಕ್ತಸೇವೀ** = ಧ್ಯಾನವಿರೋಧಿಗಳು ಯಾವುದೂ ಇಲ್ಲದೇ ಇರುವ ಏಕಾಂತಪ್ರದೇಶದಲ್ಲಿರುತ್ತಾ. **ಲಘ್ವಾಶೀ** = ಅತ್ಯನ್ನಭೋಜನ ಮತ್ತು ಅನ್ನಸ್ವೀಕಾರವೇ ಇಲ್ಲದಿರುವಿಕೆ–ಇವುಗಳನ್ನು ವರ್ಜಿಸಿ **ಯತವಾಕ್ಕಾಯ ಮಾನಸಃ** = ಧ್ಯಾನಕ್ಕೆ ಅಭಿಮುಖವಾಗಿ ಮಾಡಲ್ಪಟ್ಟ ಶರೀರ, ಮಾತು ಮತ್ತು ಮನಸ್ಸುಳ್ಳವನಾಗಿ. **ನಿತ್ಯಂ ಧ್ಯಾನಯೋಗಪರಃ** = ಪ್ರಾಣಪ್ರಯಾಣ ಕಾಲದವರೆಗೂ ಪ್ರತಿದಿನವೂ ಧ್ಯಾನಯೋಗಪರಾಯಣನಾಗಿ. **ವೈರಾಗ್ಯಂ ಸಮುಪಾಶ್ರಿತಃ** = ಧ್ಯೇಯತತ್ತ್ವವನ್ನು ಬಿಟ್ಟು ಉಳಿದ ವಿಷಯಗಳಲ್ಲಿ ದೋಷವಿದೆ ಎಂದು ವಿಮರ್ಶಿಸುವುದರಿಂದ ಅವುಗಳಲ್ಲಿ ನಿಃಸ್ಪೃಹತೆಯನ್ನು ಹೆಚ್ಚಿಸಿಕೊಳ್ಳುತ್ತಾ ಅಹಂಕಾರ, ಬಲ, ದರ್ಪ, ಕಾಮ, ಕ್ರೋಧ ಮತ್ತು ಪರಿ

ಗ್ರಹಗಳನ್ನು ತೊರೆದು. (ಅಹಂಕಾರಂ = ಆತ್ಮವಲ್ಲದ್ದರಲ್ಲಿ ಆತ್ಮ ಎಂಬ ಅಭಿಮಾನವನ್ನು ಇಟ್ಟುಕೊಳ್ಳುವಿಕೆ. ಬಲಂ = ಅಹಂಕಾರವೃದ್ಧಿಗೆ ಕಾರಣವಾದ ವಾಸನಾಬಲ. ಅದಕ್ಕೆ ಕಾರಣವಾದುವುಗಳು ದರ್ಪ, ಕಾಮ, ಕ್ರೋಧ ಮತ್ತು ಪರಿಗ್ರಹಗಳು.

ನಿರ್ಮಮಃ = ಯಾವುದು ಆತ್ಮಕ್ಕೆ ಸಂಬಂಧಪಟ್ಟಿಲ್ಲವೋ ಅದರಲ್ಲಿ ಆತ್ಮೀಯವೆಂಬ ಬುದ್ಧಿಯನ್ನು ತೊರೆದು, ಶಾಂತಃ = ಆತ್ಮಾನುಭವವೊಂದ ರಲ್ಲಿಯೇ ಸುಖಿಸುತ್ತಾ–ಹೀಗೆ ಧ್ಯಾನಯೋಗವನ್ನು ಮಾಡುವವನು ಬ್ರಹ್ಮ ಭಾವವನ್ನು ಹೊಂದುತ್ತಾನೆ. ಎಲ್ಲ ಬಂಧನಗಳನ್ನೂ ತೊರೆದು ಯಥಾವಸ್ಥಿತ ವಾದ ಆತ್ಮಾನಂದವನ್ನು ಅನುಭವಿಸುತ್ತಾನೆ. (ರಾ. ಭಾ.)

ಬ್ರಹ್ಮಭೂಯಾಯ ಕಲ್ಪತೇ = ಬ್ರಹ್ಮಭೂಯ ಎಂದರೆ ಬ್ರಹ್ಮದಲ್ಲಿ ಭಾವ–ಬ್ರಹ್ಮದಲ್ಲಿ ಇರುವಿಕೆ, ಸರ್ವದಾ ಬ್ರಹ್ಮದಲ್ಲಿ ಮನಸ್ಸುಳ್ಳವನಾಗಿ ಇರುವಿಕೆ. (ಮ. ಭಾ.)

**ಓಂ ಬ್ರಹ್ಮಭೂತಃ ಪ್ರಸನ್ನಾತ್ಮಾ ನ ಶೋಚತಿ ನ ಕಾಂಕ್ಷತಿ ।**
**ಸಮಃ ಸರ್ವೇಷು ಭೂತೇಷು ಮದ್ಭಕ್ತಿಂ ಲಭತೇ ಪರಾಮ್ ॥೫೪॥**

ಬ್ರಹ್ಮಭೂತನಾಗಿ ಪ್ರಸನ್ನಾತ್ಮನಾದವನು ಶೋಕಿಸುವುದಿಲ್ಲ. ಆಶಿಸು ವುದೂ ಇಲ್ಲ. ಸರ್ವಭೂತಗಳಲ್ಲಿಯೂ ಸಮನಾಗಿ ಶ್ರೇಷ್ಠವಾದ ನನ್ನ ಭಕ್ತಿ ಯನ್ನು ಪಡೆದುಕೊಳ್ಳುತ್ತಾನೆ.

* * *

(ಬ್ರಹ್ಮಭೂತಃ = ಬ್ರಹ್ಮವನ್ನು ಹೃದಯಗುಹೆಯಲ್ಲಿ ಕಂಡುಕೊಂಡವನು ಬ್ರಹ್ಮಭೂತನೇ ಆಗುತ್ತಾನೆ. ಆ ಸಮಯದಲ್ಲಿ ಅವನಿಗೆ ಬ್ರಹ್ಮವೊಂದನ್ನು ಬಿಟ್ಟು ಬೇರಾವುದೂ ಕಾಣುವುದೇ ಇಲ್ಲ. 'ನಾನು' ಎಂಬುದೇ ಇಲ್ಲದ ಆ ಸ್ಥಿತಿಯಲ್ಲಿ ಯಾವುದು ತಾನೇ ಕಂಡೀತು? ತಾನೆಲ್ಲಿ ಕುಳಿತಿದ್ದೇನೆಂಬ ಅರಿವೂ ಇರುವುದಿಲ್ಲ. ಪ್ರಪಂಚವೂ ಕಾಣುವುದಿಲ್ಲ. ಎಲ್ಲವೂ ಬ್ರಹ್ಮಮಯ ವಾಗಿಬಿಟ್ಟಿರುತ್ತದೆ. 'ಸಮಃ ಸರ್ವೇಷು ಭೂತೇಷು' ಎಂದು ಪರಮಾತ್ಮನು ಹೇಳಿರುವುದರ ಪ್ರತ್ಯಕ್ಷಾನುಭವವು ಆ ಸಮಯದಲ್ಲಾಗುವುದು. ತಾನೊಬ್ಬ ಪ್ರತ್ಯೇಕವಾಗಿದ್ದೇನೆಂಬ ಅರಿವೇ ಆ ಸಮಯದಲ್ಲಿ ಉಂಟಾಗುವುದಿಲ್ಲ. ಆದುದರಿಂದ ಶ್ರೀಕೃಷ್ಣನು ಅವನನ್ನು 'ಬ್ರಹ್ಮಭೂತ' 'ಬ್ರಹ್ಮಭಾವ

ವನ್ನು ಪಡೆದುಕೊಂಡವನು' ಎಂದಿದ್ದಾನೆ. ಆರೂಢನಾದವನ ಮುಂದಿನ ಸ್ಥಿತಿಯನ್ನು ಶ್ರೀಕೃಷ್ಣನು ಹೇಳುತ್ತಾನೆ. ಆರೂಢನಾದ ಅವನು **ನ ಶೋಚತಿ ನ ಕಾಂಕ್ಷತಿ** = ಅವನಿಗೆ ಶೋಕವೆಂಬುದೂ ಇರುವುದಿಲ್ಲ; ಆಸೆಯೆಂಬುದೂ ಇರುವುದಿಲ್ಲ. ಉತ್ತಮೋತ್ತಮವಾದ, ಅಮೃತಾನಂದದಾಯಕವಾದ ವಸ್ತುವನ್ನು ಕಂಡನಂತರ ಐಹಿಕವಾದ ಮತ್ತು ಕ್ಷಣಿಕವಾದ ಯಾವ ವಸ್ತುವಿನ ಮೇಲೆ ತಾನೇ ಆಸೆಯು ಹುಟ್ಟೀತು? ಕ್ಷೀರಸಾಗರದ ಸಮೀಪದಲ್ಲಿರುವವನು ಬಟ್ಟಲು ಹಾಲಿಗಾಗಿ ಗೋಪಾಲನ ಮನೆಗೆ ಹೋಗುವನೇ? ಆತ್ಮಾನಂದ ಅಥವಾ ಬ್ರಹ್ಮಾನಂದವೆಂಬುದು ಅವರ್ಣನೀಯವಾದುದು. ಈ ಮಾನವಪ್ರಪಂಚದಲ್ಲಿ ಅತ್ಯುನ್ನತಸ್ಥಾನದಲ್ಲಿರುವ ಶ್ರೇಷ್ಠಮಾನವನೊಬ್ಬನು ಪಡುವ ಆನಂದಕ್ಕಿಂತಲೂ ಸಾವಿರಪಟ್ಟು ಹೆಚ್ಚಿನದು ಬ್ರಹ್ಮಾನಂದ. ಇಂದ್ರ, ಬೃಹಸ್ಪತಿ ಮತ್ತು ಪ್ರಜಾಪತಿ–ಇವರ ಆನಂದಕ್ಕಿಂತಲೂ ನೂರಾರುಪಟ್ಟು ಹೆಚ್ಚಿನದು. ಅಂತಹ ಬ್ರಹ್ಮಾನಂದವನ್ನು ಪಡೆದನಂತರ ಮನುಷ್ಯನಿಗೆ ಮತ್ತೇನು ಬೇಕು? ಆದುದರಿಂದ **ನ ಕಾಂಕ್ಷತಿ** ಅವನಿಗೆ ಶೋಕಕ್ಕೆ ಕಾರಣವೇ ಇಲ್ಲ. ಶೋಕ-ದುಃಖಗಳು ಅವನಿಂದ ಕಳಚಿ ಬಿದ್ದುಹೋಗಿವೆ. **ಸಮಃ ಸರ್ವೇಷು ಭೂತೇಷು** = ಸರ್ವಪ್ರಾಣಿಗಳಲ್ಲಿಯೂ ಪರಮಾತ್ಮನು ಸಮನಾಗಿರುವನೆಂಬುದನ್ನು ಅನುಭವದಿಂದ ಕಂಡುಕೊಂಡ ಆರೂಢನು ಸರ್ವಪ್ರಾಣಿ ಗಳ ವಿಷಯದಲ್ಲಿಯೂ ಸಮಭಾವದಿಂದಲೇ ಇರುತ್ತಾನೆ. ಪ್ರಾಣಿಮಾತ್ರದವರೆಲ್ಲರನ್ನೂ ಅವನು ಪ್ರೀತಿಸುತ್ತಾನೆ. ಸಮವಾಗಿ ಪ್ರೀತಿಸುತ್ತಾನೆ.

ಕಡೆಯದಾಗಿ ಶ್ರೀಕೃಷ್ಣನು ಹೇಳುತ್ತಾನೆ. **ಮದ್ಭಕ್ತಿಂ ಲಭತೇ ಪರಾಂ** = ಶ್ರೇಷ್ಠವಾದ ನನ್ನ ಭಕ್ತಿಯನ್ನು ಪಡೆಯುತ್ತಾನೆ. ಜ್ಞಾನಿಯಾದ ಭಕ್ತನು ಶ್ರೇಷ್ಠ ಭಕ್ತನೆಂಬುದರಲ್ಲಿ ಸಂಶಯವಿಲ್ಲ. ಜ್ಞಾನಿಗಳಾದವರು ಪರಮಭಕ್ತರಾಗಿಯೇ ಇರುತ್ತಾರೆ. ಭಕ್ತಿಯಲ್ಲಿ ಸಾಧನಭಕ್ತಿ ಮತ್ತು ಸಾಧ್ಯಭಕ್ತಿ ಅಥವಾ ಪರಾಭಕ್ತಿ–ಎಂದು ಎರಡು ವಿಧಗಳೆಂದು ಭಕ್ತಿಶಾಸ್ತ್ರಗಳು ಹೇಳುತ್ತವೆ. ಪರಾಭಕ್ತಿಯು ಶುದ್ಧಜ್ಞಾನಸ್ವರೂಪವೇ ಆಗಿದೆ. ಏಕೆಂದರೆ : ಅದು ವಾಸುದೇವನೊಬ್ಬನನ್ನೇ ಸದಾ ಅನುಭವಿಸುತ್ತಿರುತ್ತದೆ. **ವಾಸುದೇವಃ ಸರ್ವಮಿತಿ ಸ ಮಹಾತ್ಮಾ ಸುದುರ್ಲಭಃ ।** ಸಾಧನಭಕ್ತಿಯು ಮೋಕ್ಷಕ್ಕೆ ಉಪಾಯವಾದರೆ ಸಾಧ್ಯಭಕ್ತಿಯು ಮೋಕ್ಷಸ್ವರೂಪವೇ ಆಗಿದೆ. **ಮೋಕ್ಷೋಪಾಯಸ್ಯ**

**ರೂಪಂ ತು ಭಕ್ತಿರಿತ್ಯಕ್ಷರದ್ವಯಮ್ ।** ಭಗವಂತನು ಇಲ್ಲಿ ಹೇಳಿರುವ ನಾಲ್ಕು ಬಗೆಯ ಭಗವಂತನ ಭಕ್ತರಲ್ಲಿ ಶ್ರೇಷ್ಠತಮನಾಗಿ '**ಜ್ಞಾನೀ ತ್ವಾತ್ಮೈವ ಮೇ ಮತಮ್**' ಎಂದು ಭಗವಂತನ ಕೊಂಡಾಟಕ್ಕೆ ಪಾತ್ರನಾಗಿರುವ ಪೂರ್ಣಜ್ಞಾನಿಯು ಹೊಂದಿರುವ ಭಕ್ತಿಯಾದುದರಿಂದ ಇದು ಪರಾಭಕ್ತಿ ).

o o o

ಈ ಕ್ರಮದಿಂದ ಬ್ರಹ್ಮವನ್ನು ಹೊಂದಿ ಅಧ್ಯಾತ್ಮಪ್ರಸಾದವನ್ನು ಪಡೆದವನು ಸ್ವಲ್ಪವೂ ಸಂತಾಪಪಡುವುದಿಲ್ಲ. ಯಾವುದೇ ಪದಾರ್ಥದ ಹಾನಿ ಯಾಯಿತು ಅಥವಾ ತನ್ನ ವಿಷಯದಲ್ಲಿ ವಿಗುಣತೆಯುಂಟಾಯಿತು–ಎಂದು ಸಂತಾಪಪಡುವುದಿಲ್ಲ. ಯಾವುದೇ ವಸ್ತುವನ್ನೂ ಬಯಸುವುದೂ ಇಲ್ಲ.

ಶೋಕಿಸುವುದಿಲ್ಲ ; ಬಯಸುವುದಿಲ್ಲ ಎಂಬ ಈ ಹೇಳಿಕೆಯು ಬ್ರಹ್ಮ ಭೂತನಾದವನ ಸ್ವಭಾವವನ್ನು ಹೇಳುತ್ತದೆ. ಏಕೆಂದರೆ : ಬ್ರಹ್ಮಜ್ಞಾನಿಯಲ್ಲಿ ಅಪ್ರಾಪ್ಯವಾದ ವಿಷಯಗಳ ಬಗೆಗೆ ಆಕಾಂಕ್ಷೆಯು ಉಂಟಾಗುವುದೇ ಇಲ್ಲ ಅಥವಾ **ನ ಕಾಂಕ್ಷತಿ** ಎನ್ನುವ ಜಾಗದಲ್ಲಿ **ನ ಹೃಷ್ಯತಿ** ಎಂಬ ಪಾಠವನ್ನು ಇಟ್ಟುಕೊಳ್ಳಬಹುದು.

**ಸಮಃ ಸರ್ವೇಷು ಭೂತೇಷು** = ಎಲ್ಲ ಭೂತಗಳಲ್ಲಿಯೂ ಸುಖ-ದುಃಖಗಳು ತನಗಿರುವಂತೆಯೇ ಇರುತ್ತವೆ ಎಂಬ ಅರ್ಥದ ಸಾಮ್ಯವನ್ನು ಇಲ್ಲಿ ಹೇಳಿಲ್ಲ. ಏಕೆಂದರೆ **ಭಕ್ತ್ಯಾ ಮಾಮಭಿಜಾನಾತಿ**–ಎಂದು ಮುಂದೆ ಹೇಳುತ್ತಾನೆ. ಇಂತಹ ಬ್ರಹ್ಮನಿಷ್ಠನು ಉತ್ತಮವಾದ ಜ್ಞಾನವೆಂಬ ನಾಲ್ಕನೆಯ ಹಂತದ ಪರಾಭಕ್ತಿಯನ್ನು ಪಡೆಯುತ್ತಾನೆ. (ಶಂ. ಭಾ.)

ಬ್ರಹ್ಮಭೂತಃ = ಅಪರಿಚ್ಛಿನ್ನವೂ–ಜ್ಞಾನೈಕಾಕಾರವೂ ಆದ ನನ್ನ ದಾಸ್ಯ ವೊಂದೇ ಸ್ವಭಾವವಾಗಿ ಉಳ್ಳ ಆತ್ಮಸ್ವರೂಪವುಳ್ಳವನು. (**ಇತಸ್ತ್ವನ್ಯಾಂ ಪ್ರಕೃತಿಂ ವಿದ್ಧಿ ಮೇ ಪರಾಮ್** = ಎಂಬ ಶ್ಲೋಕದಿಂದ ಅವರು ಪರಮಾತ್ಮನಲ್ಲಿ ಶೇಷಭೂತರು ಎಂದು ಹಿಂದೆಯೇ ಹೇಳಿದೆ.) **ಪ್ರಸನ್ನಾತ್ಮಾ** = ಕ್ಲೇಶ-ಕರ್ಮಗಳೇ ಮುಂತಾದುವುಗಳಿಂದ ಕಲುಷಿತವಾಗದ ಸ್ವರೂಪವುಳ್ಳ ವನು. **ನ ಶೋಚತಿ–ನ ಕಾಂಕ್ಷತಿ** = ನನ್ನನ್ನು ಬಿಟ್ಟು ಅವುಗಳನ್ನು ಬಯಸುವುದೂ ಇಲ್ಲ. ಶೋಕಿಸುವುದೂ ಇಲ್ಲ. ಉಳಿದ ಎಲ್ಲ ವಸ್ತುಗಳನ್ನೂ

ಅನಾದರಿಸುತ್ತಾನೆ. ಅವುಗಳ ಬಗೆಗೆ, ಅವುಗಳೆಲ್ಲವೂ ಅನಾದರಣೀಯವಾದುದರಿಂದ ಸಮ ಎಂದು ಭಾವಿಸಿ, ಆ ಎಲ್ಲ ವಸ್ತುಗಳನ್ನೂ ತೃಣದಂತೆ ಪರಿಗಣಿಸುತ್ತಾ ಸರ್ವೇಶ್ವರನೂ, ಜಗತ್ತುಗಳ ಸೃಷ್ಟಿ-ಸ್ಥಿತಿ-ಲಯಗಳಿಗೆ ಕಾರಣನೂ, ಯಾವ ಹೇಯಗಂಧವೂ ಇಲ್ಲದವನೂ, ಅನಂತಕಲ್ಯಾಣಗುಣ ಸಂಪೂರ್ಣನೂ, ಲಾವಣ್ಯಾಮೃತಸಮುದ್ರನೂ, ಶ್ರೀಸಂಪನ್ನನೂ, ಪುಂಡರೀಕಾಕ್ಷನೂ, ತನಗೆ ಸ್ವಾಮಿಯೂ ಆದ ನನ್ನಲ್ಲಿ ಹೇಳಲಸದಳವಾದ ಪ್ರಿಯಾನುಭವರೂಪವಾದ ಪರಾಭಕ್ತಿಯನ್ನು ಹೊಂದುತ್ತಾನೆ. (ರಾ. ಭಾ.)

ಬ್ರಹ್ಮಭೂತಃ = ಬ್ರಹ್ಮನಲ್ಲಿಯೇ ಮನಸ್ಸುಳ್ಳವನು. ಪ್ರಸನ್ನಾತ್ಮಾ = ತಾನಾಗಿಯೇ ವಿಷಯಗಳಲ್ಲಿ ಮನಸ್ಸನ್ನು ತೊಡಗಿಸದೇ ಇರುವವನು.

(ಮ. ಟೀಕಾ)

**ಓಂ ಭಕ್ತ್ಯಾ ಮಾಮಭಿಜಾನಾತಿ ಯಾವಾನ್ಯಶ್ಚಾಸ್ಮಿ ತತ್ತ್ವತಃ ।**
**ತತೋ ಮಾಂ ತತ್ತ್ವತೋ ಜ್ಞಾತ್ವಾ ವಿಶತೇ ತದನನ್ತರಮ್ ॥೫೫॥**

ನಾನು ಎಷ್ಟು ವಿಸ್ತಾರವಾಗಿರುವೆನು? ಯಾವ ರೂಪದಲ್ಲಿರುವೆನು?– ಎಂಬುದನ್ನು ಭಕ್ತಿಯಿಂದ ಯಥಾರ್ಥವಾಗಿ ಅರಿತುಕೊಳ್ಳುವನು ಮತ್ತು ನನ್ನನ್ನು ತಾತ್ತ್ವಿಕವಾಗಿ ಅರಿತು ಅನಂತರದಲ್ಲಿಯೇ ನನ್ನನ್ನು ಪ್ರವೇಶಿಸುತ್ತಾನೆ.

* * *

(**ಮದ್ಭಕ್ತಿಂ ಲಭತೇ**–ಬ್ರಹ್ಮಭೂತನಾದವನು ನನ್ನ ಭಕ್ತಿಯನ್ನು ಹೊಂದುತ್ತಾನೆ ಎಂದು ಹೇಳಿದ ಶ್ರೀಕೃಷ್ಣನು ಭಕ್ತಿಯಿಂದ ಅವನು ಸಾಧಿಸುವುದೇನು?–ಎಂಬುದನ್ನು ಈ ಶ್ಲೋಕದಲ್ಲಿ ವಿವರಿಸುತ್ತಾನೆ.

**ಭಕ್ತ್ಯಾ ಮಾಂ ಯಾವಾನ್-ಯಶ್ಚಾಸ್ಮಿ ಇತಿ ತತ್ತ್ವತಃ ಅಭಿಜಾನಾತಿ**= ಆತ್ಮಜ್ಞಾನಾನಂತರದಲ್ಲಿ ಸ್ವಾಭಾವಿಕವಾಗಿಯೇ ಉಂಟಾದ ಈ ಭಕ್ತಿಭಾವದಿಂದಾಗಿ ನಾನು ಎಷ್ಟರಮಟ್ಟಿನವನಾಗಿರುವೆನೋ ಮತ್ತು ಯಾವನಾಗಿರುವನೋ–ಎಂಬುದನ್ನು ತತ್ತ್ವತಃ ತಿಳಿಯುತ್ತಾನೆ. ತತ್ತ್ವತಃ ಎಂದರೆ ನಿಜವಾಗಿ ಗುರುತಿಸಿ ತಿಳಿಯುತ್ತಾನೆ. ಕೇವಲ ಪಾಠ-ಪ್ರವಚನಗಳಿಂದಲ್ಲ; ಅಂತರ್ದೃಷ್ಟಿಯಿಂದ ನೋಡಿ ಅನುಭವಿಸಿ ಗುರುತಿಸುತ್ತಾನೆ. ಯಾವನು ಎಷ್ಟರಮಟ್ಟಿನವನು? ಎಂದರೆ ನಾನು ಜನ್ಮ-ಮೃತ್ಯು-ಜರಾ-ವ್ಯಾಧಿಗಳಿಂದ

ರಹಿತನು, ಅಪೂರ್ವನು, ಅನಂತನು, ಆನಂದರೂಪನು, ಅಚಲನು, ಅಚ್ಯುತನು, ಆದ್ಯನು, ನಿರಾಕಾರನು, ನಿಯಾಮಕನು, ಅನಾದಿಯು, ಅಭಯನು, ಆಧಾರನು, ಸರ್ವನು, ಸರ್ವವ್ಯಾಪಕನು, ಅಶೋಕನು, ಪುರುಷೋತ್ತಮನು, ಅಶಬ್ದನು, ಅರೂಪನು, ಅಗೋತ್ರನು, ಸಮನು, ಅತರ್ಕ್ಯನು, ಚಿನ್ಮಯನು, ಚಿದಾನಂದಸ್ವರೂಪನು, ವೇದಸಾರನು, ದೀಪ ದಂತೆ ಇರತಕ್ಕವನು, ಅಪ್ರಮೇಯನು, ಹರಿ-ಗುರು-ಶಿವಸ್ವರೂಪನು, ಅಣೋರಣೀಯನು, ಮಹತೋಮಹೀಯನು, ಅಜನು, ಅಮರನು, ಅಭ ಯನು–ಮುಂತಾಗಿ ನನ್ನನ್ನು ಗುರುತಿಸುತ್ತಾನೆ. ಸಮಾಧಿಸ್ಥಿತಿಯಲ್ಲಿ ಆತ್ಮ ದರ್ಶನವನ್ನು ಮಾಡುತ್ತಾ ಮಾಡುತ್ತಾ ನಿಜವಾದ ಈ ನನ್ನ ಸ್ವರೂಪವನ್ನು ಗುರುತಿಸುತ್ತಾನೆ. ಬಹಿರ್ಮುಖನಾದಾಗಲೂ ಆ ದಿವ್ಯಸ್ವರೂಪವನ್ನೇ ನೆನೆದು-ನೆನೆದು ಆನಂದಿಸುತ್ತಾನೆ. ಆ ದಿವ್ಯಸ್ವರೂಪವನ್ನೇ ಹೃದಯದಿಂದ ಹೊರಬರುವ ಓಂಕಾರಶಬ್ದದೊಡನೆ ಅನುಸಂಧಾನಮಾಡಿ ಮನೋಜ್ಞವಾಗಿ ಹಾಡುತ್ತಾನೆ. ಈ ರೀತಿಯಲ್ಲಿ ಪದೇ-ಪದೇ ಆತ್ಮಾನುಸಂಧಾನಮಾಡುತ್ತಾ ಸಮಾಧಿಯೋಗದಿಂದ ಬ್ರಹ್ಮಭೂತನಾದ ಜ್ಞಾನಿಯಾದ ನನ್ನ ಭಕ್ತನು ನನ್ನನ್ನು ನಿಜವಾಗಿ ಗುರುತಿಸಿ ದೇಹಾವಸಾನಾನಂತರದಲ್ಲಿ ನನ್ನನ್ನೇ ಪ್ರವೇಶಿಸುತ್ತಾನೆ. ದೇಹದಲ್ಲಿರುವಾಗ ನನ್ನ ಸಾಕ್ಷಾತ್ಕಾರವನ್ನು ಯಥಾರ್ಥವಾಗಿ ಪಡೆಯುವನು. ದೇಹಪಾತವಾದೊಡನೆಯೇ ನನ್ನಲ್ಲಿ ಸಾಯುಜ್ಯವನ್ನು ಹೊಂದಿಬಿಡುತ್ತಾನೆ.

ಉದ್ಯಾನವನವು ಮನೋವಿನೋದಕ್ಕೆ ಶ್ರೇಷ್ಠವಾದ ಕ್ರೀಡಾಸ್ಥಾನವೆಂದು ಅದರ ಸಾಕ್ಷಾತ್ ಪರಿಚಯಪಡೆದಿರುವವನು ಒಡನೆಯೇ ಅದರಲ್ಲಿ ಪ್ರವೇಶಿಸುತ್ತಾನೆಯೇ ಹೊರತು ಮರುಪ್ರದೇಶದಲ್ಲಾಗಲೀ ಜನಜಂಗುಳಿ ಯಲ್ಲಾಗಲೀ ಪ್ರವೇಶಮಾಡುವುದಿಲ್ಲ. ಎಂದರೆ ನನ್ನ ಅನುಭವವನ್ನು ಹೊಂದಿ ಪರಿಚಯಪಡೆದಿರುವುದರಿಂದ ತನ್ನ ರತಿಗಾಗಿ ನನ್ನಲ್ಲಿ ಪ್ರವೇಶಿಸಿ ಆತ್ಮಕ್ರೀಡನೂ–ಆತ್ಮರತಿಯೂ ಆಗುತ್ತಾನೆ. ನನ್ನ ತಾತ್ತ್ವಿಕಜ್ಞಾನವಿಲ್ಲದವನಿಗೆ ನನ್ನನ್ನು ಪ್ರವೇಶಿಸುವ ಉತ್ಕಂಠೆಯು ಉಂಟಾಗುವುದಿಲ್ಲ. ಆದರೆ ನನ್ನ ಪರಿಪೂರ್ಣಬ್ರಹ್ಮಾನುಭವವನ್ನು ಹೊಂದಿ ನನ್ನ ಯಥಾರ್ಥಪರಿಚಯವನ್ನು ಹೊಂದಿರುವವನು ನನ್ನಲ್ಲಿ ಅಲ್ಲದೇ ಬೇರೇ ಯಾರಲ್ಲಿ ಪ್ರವೇಶಿಸುತ್ತಾನೆ?

**ವಿಮುಕ್ತಶ್ಚ ವಿಮುಚ್ಯತೇ**–ಎಂಬ ಶ್ರುತಿಯು ಈ ಅರ್ಥಕ್ಕೆ ಪೋಷಕವಾಗಿದೆ.

**ತತ್ತ್ವತಃ** = ಪರಮಾತ್ಮನ ನಿಜಸ್ವರೂಪವೇನೆಂಬುದನ್ನು ತಿಳಿಯಲು ಜ್ಞಾನಿಯಾದ ಭಕ್ತನಿಗೆ ಮಾತ್ರವೇ ಸಾಧ್ಯ. ಉಳಿದ ಆರ್ತ, ಜಿಜ್ಞಾಸು, ಅರ್ಥಾರ್ಥಿಗಳು ಅವನ ಏಕದೇಶವನ್ನು ಮಾತ್ರವೇ ತಿಳಿದಿರುತ್ತಾರೆ. ಸರ್ವ ಭೂತಸ್ಥನಾದ, ಸರ್ವವ್ಯಾಪಿಯಾದ, ಸಚ್ಚಿದಾನಂದಸ್ವರೂಪನಾದ ಅವನನ್ನು ಕಾಣಲು ಧ್ಯಾನಯೋಗಪರಾಯಣನಾದ ಜ್ಞಾನಿಗೆ ಮಾತ್ರವೇ ಸಾಧ್ಯವಾಗು ತ್ತದೆ. ಹೃದಯಗುಹೆಯಲ್ಲಿ ಅವನನ್ನು ಕಂಡುಕೊಂಡ ಮೇಲೆ 'ನಾನು' ಎಂಬುದು ಸಂಪೂರ್ಣವಾಗಿ ಅವನಲ್ಲೇ ಲೀನವಾಗಿ ಹೋಗುತ್ತದೆ. ಸಮುದ್ರಕ್ಕೆ ಸೇರಬೇಕಾಗಿರುವ ನೀರು ಕಟ್ಟೆಯೊಡೆದು ಹೋಗುವವರೆಗೂ ಕಟ್ಟೆಯಲ್ಲೇ ಇರಬೇಕು. 'ನಾನು' ಎಂಬುದು ಲೀನವಾಗಿ ಹೋದರೂ ಸಹ ದೇಹವೆಂಬ ಉಪಾಧಿಯಿರುವವರೆಗೆ ಜ್ಞಾನಿಯು 'ನಾನು' ಎಂಬುದನ್ನು ಕೇವಲ ವ್ಯವಹಾರಕ್ಕಾಗಿ ಮಾತ್ರವೇ ಇಟ್ಟುಕೊಂಡಿರುತ್ತಾನೆ. ಸಮುದ್ರವು ತನ್ನ ಅಸ್ತಿತ್ವವನ್ನು ಭೋರ್ಗರೆಯುವ ಅಲೆಗಳ ಮೂಲಕವಾಗಿ ತೋರ್ಪಡಿಸಿ ಕೊಳ್ಳುವಂತೆ–ತನ್ನ ದಿವ್ಯಸ್ವರೂಪವನ್ನು ತಾನೇ ತಾನಾಗಿ ಜ್ಞಾನಿಯಾದ ಭಕ್ತನ ದೇಹವೆಂಬ ಉಪಾಧಿಯ ಮೂಲಕವಾಗಿ ಪರಮಾತ್ಮನು ಹೊರಪಡಿಸು ತ್ತಾನೆ. ಅಂತಹವರ ದಿವ್ಯವಾಣಿಗಳೇ ಉಪನಿಷತ್ತುಗಳು. ಆದುದರಿಂದ ಮೊದಲು ಸಮಾಧಿಮೂಲಕವಾಗಿ ಆತ್ಮಜ್ಞಾನಸಾಧನೆ. ಅನಂತರ ಪರಮಾತ್ಮನ ಅಪಾರತೆಯ ಪ್ರತ್ಯಕ್ಷಾನುಭವದಿಂದ ಉಂಟಾಗುವ ಭಕ್ತಿ. ಭಕ್ತಿಯ ಮೂಲಕ ಪರಬ್ರಹ್ಮತತ್ತ್ವದ ಸಂಪೂರ್ಣಜ್ಞಾನ. ಅವಸಾನಾನಂತರದಲ್ಲಿ ಅವನಲ್ಲಿಯೇ ಸಾಯುಜ್ಯವನ್ನು ಹೊಂದುವಿಕೆ ; ಮೋಕ್ಷ )

o o o

**ಅಹಂ ಯಾವಾನ್ ಯಶ್ಚ ಅಸ್ಮಿ** = ನಾನು ಉಪಾಧಿಯಿಂದ ಉಂಟಾದ ವಿಸ್ತಾರಭೇದದಿಂದ ಯಾವ ಪ್ರಮಾಣದವನಾಗಿದ್ದೇನೆ? ಮತ್ತು ಯಥಾರ್ಥವಾಗಿ ಏನಾಗಿದ್ದೇನೆ? ಎಂದರೆ : ವಾಸ್ತವವಾಗಿ ಯಾವ ಉಪಾಧಿ ಭೇದವೂ ಇಲ್ಲದ ಉತ್ತಮಪುರುಷನಾಗಿದ್ದೇನೆ. ಆಕಾಶದಂತೆ ವ್ಯಾಪಿಸಿದ್ದೇನೆ. ಅದ್ವೈತವೂ, ಅಜವೂ, ಅಮರವೂ, ಅಭಯವೂ, ನಾಶರಹಿತವೂ ಆದ

ಚೈತನ್ಯೈಕರಸಸ್ವರೂಪನಾದ ಪರಮಾತ್ಮನು ಆಗಿದ್ದೇನೆ–ಎಂಬುದನ್ನು ಜ್ಞಾನ ಲಕ್ಷಣವಾದ ಭಕ್ತಿಯಿಂದ ತಿಳಿದುಕೊಳ್ಳುತ್ತಾನೆ. ಹಾಗೆ ತಾತ್ತ್ವಿಕವಾದುದನ್ನು ತಿಳಿದು ಒಡನೆಯೇ ನನ್ನನ್ನು ಪ್ರವೇಶಿಸಿಬಿಡುತ್ತಾನೆ.

ನನ್ನನ್ನು ತಿಳಿದು ಅನಂತರದಲ್ಲಿ ನನ್ನನ್ನು ಪ್ರವೇಶಿಸುತ್ತಾನೆ–ಎಂಬ ಹೇಳಿಕೆಯಲ್ಲಿ ಮೊದಲು ನನ್ನ ಜ್ಞಾನ, ಅನಂತರ ನನ್ನಲ್ಲಿ ಪ್ರವೇಶ–ಎಂಬ ಎರಡು ಬೇರೆ ಬೇರೆ ಕ್ರಿಯೆಗಳು ಇವೆ ಎಂದು ತಿಳಿಯಬಾರದು. ಇದಕ್ಕೆ ಬೇರೆ ಯಾವ ಫಲವೂ ಇಲ್ಲ–ಎಂಬ ಅರಿವನ್ನು ಇಲ್ಲಿ ಮಾಡಿಕೊಡಲಾಗಿದೆ ಎಂದು ತಿಳಿಯಬೇಕು. ಏಕೆಂದರೆ **ಕ್ಷೇತ್ರಜ್ಞಂ ಚಾಪಿ ಮಾಂ** ವಿದ್ಧಿ ಎಂದು ಹಿಂದೆ ಹೇಳಿದೆ. ಇಲ್ಲಿ ಹೇಳಿರುವುದರಿಂದ ಆರ್ತರೇ ಮುಂತಾದ ಮೂವರ ಭಕ್ತಿಗಿಂತಲೂ ಶ್ರೇಷ್ಠವಾದ ನಾಲ್ಕನೆಯ ಭಕ್ತಿ-ಪರಾಭಕ್ತಿ, ಜ್ಞಾನನಿಷ್ಠೆ. ಪರಾಭಕ್ತಿಯಿಂದ ಭಗವಂತನಾದ ನನ್ನನ್ನು ಯಥಾರ್ಥವಾಗಿ ತಿಳಿಯುತ್ತಾನೆ. ಇದರಿಂದ ಒಡನೆಯೇ ಅವನಿಗೆ ಈಶ್ವರ ಮತ್ತು ಕ್ಷೇತ್ರಜ್ಞರಲ್ಲಿ ಭೇದಬುದ್ಧಿಯು ತೊಲಗಿಹೋಗುತ್ತದೆ. (ಶಂ. ಭಾ.)

**ಅಹಂ ಯಾವಾನ್ ಯಶ್ಚ ಅಸ್ಮಿ** = ಸ್ವರೂಪತಃ ಮತ್ತು ಸ್ವಭಾವತಃ ನಾನು ಯಾರು? ಗುಣದಿಂದ ಮತ್ತು ವಿಭೂತಿಯಿಂದ ನಾನು ಎಷ್ಟರವನು? ಎಂಬುದಾಗಿ ನನ್ನನ್ನು ಮೇಲೆ ಹೇಳಿದ ಪರಾಭಕ್ತಿಯಿಂದ ತಾತ್ತ್ವಿಕವಾಗಿ ತಿಳಿಯುತ್ತಾನೆ. ಹಾಗೆ ನನ್ನನ್ನು ತಾತ್ತ್ವಿಕವಾಗಿ ತಿಳಿದನಂತರ ಭಕ್ತಿಯಿಂದ ನನ್ನಲ್ಲಿ ಪ್ರವೇಶಮಾಡುತ್ತಾನೆ. ತಾತ್ತ್ವಿಕವಾಗಿ ಸ್ವರೂಪ, ಸ್ವಭಾವ, ಗುಣ- ವಿಭೂತಿಗಳ ದರ್ಶನಾನಂತರದಲ್ಲಿ ಉಂಟಾಗುವ ಅನವಧಿಕಾತಿಶಯವಾದ ಭಕ್ತಿಯಿಂದ ನನ್ನನ್ನು ಹೊಂದುತ್ತಾನೆ ಎಂದರ್ಥ. ಇಲ್ಲಿ **ತತಃ** ಎಂದರೆ ನನ್ನನ್ನು ಹೊಂದಲು ಕಾರಣವಾಗಿ ಹೇಳಲ್ಪಟ್ಟಿರುವ ಭಕ್ತಿಯಿಂದ ಎಂದೇ ಅರ್ಥ. ಏಕೆಂದರೆ : **ಭಕ್ತ್ಯಾ ತ್ವನನ್ಯಯಾ ಶಕ್ಯಃ**–ಎಂದು ನನ್ನಲ್ಲಿ ಪ್ರವೇಶಮಾಡಲು ಅದನ್ನೇ ಕಾರಣವಾಗಿ ಹೇಳಿದೆ. (ರಾ. ಭಾ.)

**ಯಾವಾನ್ ಯಶ್ಚ ಅಸ್ಮಿ** = ದೇಶ-ಕಾಲ-ಗುಣಗಳಿಂದ ವ್ಯಾಪಿಸಲ್ಪಟ್ಟವನಾಗಿ ಯಾವ ನಾಮ ಮತ್ತು ರೂಪವುಳ್ಳವನಾಗಿ ಇದ್ದೇನೆ ಎಂಬುದನ್ನು ತತ್ತ್ವತಃ ತನ್ನ ಯೋಗ್ಯತೆಗೆ ಅನುಗುಣವಾಗಿ. (ಮ. ಟೀಕಾ)

ಮತ್ತೊಮ್ಮೆ ಅಂತರಂಗಸಾಧನೆಗಳನ್ನು ಹೇಳಿ ಉಪಸಂಹಾರಮಾಡ ಲಾಗಿದೆ. (ಮ. ಭಾ.)

**ಓಂ ಸರ್ವಕರ್ಮಾಣ್ಯಪಿ ಸದಾ ಕುರ್ವಾಣೋ ಮದ್ವ್ಯಪಾಶ್ರಯಃ ।**
**ಮತ್ಪ್ರಸಾದಾದವಾಪ್ನೋತಿ ಶಾಶ್ವತಂ ಪದಮವ್ಯಯಮ್ ॥೫೬॥**

ಎಲ್ಲ ಕರ್ಮಗಳನ್ನೂ ಯಾವಾಗಲೂ ಮಾಡುತ್ತಿದ್ದರೂ ನನ್ನನ್ನೇ ಆಶ್ರಯನನ್ನಾಗಿ ಭಾವಿಸಿರತಕ್ಕವನು ನನ್ನ ಅನುಗ್ರಹದಿಂದ ಶಾಶ್ವತವಾದ ವ್ಯಯರಹಿತವಾದ ಸ್ಥಾನವನ್ನು ಹೊಂದುತ್ತಾನೆ.

* * *

(**ಮದ್ವ್ಯಪಾಶ್ರಯಃ** = ನನ್ನನ್ನೇ ಗತಿಯೆಂದು ನಂಬಿರುವವನು. ವಾಸುದೇವನೇ ಸರ್ವವೆಂದು ತಿಳಿದಿರತಕ್ಕವನು. ಎಲ್ಲ ಕರ್ಮಗಳಲ್ಲಿಯೂ ವಾಸುದೇವನನ್ನೇ ಕಾಣತಕ್ಕವನು. ಯಾವುದೊಂದು ಕರ್ಮಮಾಡಿದರೂ ಕರ್ಮವನ್ನಾಗಲೀ-ಕರ್ಮದ ಫಲವನ್ನಾಗಲೀ ಆಶ್ರಯಿಸದೇ ವಾಸುದೇವನದೇ ಕರ್ಮ, ಅವನೇ ಕರ್ತಾ, ಫಲವೂ ಅವನದೇ. ಅವನ ಪ್ರೀತಿಗಾಗಿಯೇ ಈ ಕರ್ಮವನ್ನು ಮಾಡುತ್ತಿದ್ದೇನೆ. ಅವನೇ ಮಾಡಿಸುತ್ತಿದ್ದಾನೆ. ಮಾಡು ವವನು–ಮಾಡಿಸುವವನು ಎಂಬ ಭೇದವೇ ಇಲ್ಲ. ಅವನ ಇಚ್ಛೆಯಂತೆಯೇ ಎಲ್ಲವೂ ನಡೆಯುತ್ತಿದೆ. ನಾನು ಅವನ ಕೈಗೊಂಬೆ. ಅವನು ಮಾಡಿಸಿದಂತೆ ಮಾಡತಕ್ಕವನು. ನನ್ನದೆಂಬುದು ಯಾವುದೂ ಇಲ್ಲ. ಅವನೇ ನನ್ನ ಪರಮ ಗತಿ–ಎಂದು ಭಾವಿಸಿ ನನ್ನ ಆಶ್ರಯವನ್ನೇ ಸಂಪೂರ್ಣವಾಗಿ ಪಡೆದಿರತಕ್ಕ ವನು. ಮದ್ವ್ಯಪಾಶ್ರಯಃ–ಎಂದರೆ ಹೃದಯಕಮಲದಲ್ಲಿರುವ ಆತ್ಮನ ಆಶ್ರಯವನ್ನು ಪಡೆದವನು. ಆತ್ಮಾನುಸಂಧಾನವನ್ನೇ ಸರ್ವದಾ ಮಾಡುತ್ತಿರು ವವನು. ಆತ್ಮನಲ್ಲಿಯೇ ರತಿಯುಳ್ಳವನು. ಆತ್ಮನಲ್ಲಿ ಪರಾಭಕ್ತಿಯುಳ್ಳವನು– 'ನಾನು ಇಂತಹ ಕಾರ್ಯವನ್ನು ಮಾಡುವೆನು'–ಎಂದು ಯಾವಾಗಲೂ ಭಾವಿಸುವುದಿಲ್ಲ. ಎಲ್ಲವೂ ಅವನದೇ–ಎಂದು ಭಾವಿಸುತ್ತಾನೆ. ಯದ್ಯಪಿ ಉಪ್ಪು ಹರಳಿನ ಸ್ವರೂಪವೇ ಆಗಿದ್ದರೂ ನೀರಿನ ಸಂಪರ್ಕದಿಂದ ನೀರೇ ಆಗಿಬಿಡುತ್ತದೆ. ಆತ್ಮಾನುಸಂಧಾನದಲ್ಲಿಯೇ ರತನಾದ ಇವನಿಗೆ ಹರಳಿನ ರೂಪವಾದ 'ನಾನು' ಎಂಬುದು ಆತ್ಮನಲ್ಲೇ ಕರಗಿಹೋಗುತ್ತದೆ. ಆದುದ ರಿಂದ ಸರ್ವದಾ ಅವನ ಆಶ್ರಯದಲ್ಲಿಯೇ ಭಕ್ತನಾದವನು ಇರುತ್ತಾನೆಯೇ

ಹೊರತು ಬೇರೆಯ ಆಶ್ರಯವನ್ನು ಅವನು ಪಡೆಯಲು ಸಾಧ್ಯವೇ ಆಗುವುದಿಲ್ಲ. ಇಂತಹ ಭಕ್ತನು **ಸರ್ವಕರ್ಮಾಣಿ ಸದಾ ಕುರ್ವಾಣಃ** = ಎಲ್ಲ ಕರ್ಮಗಳನ್ನೂ ಎಲ್ಲ ಕಾಲಗಳಲ್ಲಿಯೂ ಮಾಡುತ್ತಿದ್ದರೂ ಇಂತಹವನಿಗೆ ಕರ್ಮಗಳನ್ನು ಮಾಡುತ್ತಿರಬೇಕೆಂಬ ನಿಯಮವೂ ಇಲ್ಲ; ಬಿಡಬೇಕೆಂಬ ನಿಯಮವೂ ಇಲ್ಲ. ಮಾಡಿದರೂ ದೋಷವಿಲ್ಲ; ಬಿಟ್ಟರೂ ದೋಷವಿಲ್ಲ. ಏಕೆಂದರೆ : ಅವನು ಯಾವುದೇ ಕರ್ಮಮಾಡಿದರೂ ಅದು ಕರ್ಮವೆನಿಸಿಕೊಳ್ಳುವುದಿಲ್ಲ. ಪರಮಾತ್ಮನ ಅರ್ಚನೆ ಎನಿಸಿಕೊಳ್ಳುತ್ತದೆ. **ಸ್ವಕರ್ಮಣಾ ತಮಭ್ಯರ್ಚ್ಯ** ಅವನು ಯಾವ ಕರ್ಮವನ್ನೂ ತನಗಾಗಿ ಮಾಡುವುದಿಲ್ಲ. ಎಲ್ಲವನ್ನೂ ಪರಮಾತ್ಮನಿಗಾಗಿ ಅವನ ಪ್ರೀತಿಗಾಗಿ ಮಾಡುತ್ತಾನೆ. **ಸರ್ವ ಕರ್ಮಾಣಿ** ಎಂಬುದಕ್ಕೆ ನಿಷಿದ್ಧಕರ್ಮಗಳನ್ನು ಮಾಡಬಹುದೇ? ಎಂದರೆ : ಅವು ತೋರಿಕೆಗೆ ಸಾಮಾನ್ಯದೃಷ್ಟಿಗೆ ನಿಷಿದ್ಧಕರ್ಮಗಳಂತೆ ಕಂಡುಬಂದರೂ ಭಗವಂತನ ಸಾಕ್ಷಾತ್ ಆಶ್ರಯದಿಂದ ನಡೆದಿರುವುದರಿಂದ ಅವು ಸತ್ಯಕ್ಕೆ ಸಮ್ಮತವಾದ ಕರ್ಮಗಳೇ ಆಗಿರುತ್ತವೆ. ಇಂತಹ ಭಕ್ತನಿಗೆ ಲಭಿಸುವ ಫಲವನ್ನು ಶ್ರೀಕೃಷ್ಣನು ಹೇಳುತ್ತಾನೆ. **ಮತ್ಪ್ರಸಾದಾದವಾಪ್ನೋತಿ ಶಾಶ್ವತಂ ಪದಮವ್ಯಯಮ್** = ನನ್ನ ಪ್ರಸಾದದಿಂದಾಗಿ ಶಾಶ್ವತವಾದ ಅಕ್ಷಯವಾದ ಪರಮಪದವನ್ನು ಪಡೆಯುತ್ತಾನೆ. **ಮದ್ವ್ಯಪಾಶ್ರಯಃ** ಎಂಬುದೇ ಪರಮಪದ. ಅವನ ಆಶ್ರಯವೇ ಬೇರೆ, ಪರಮಪದವೇ ಬೇರೆ ಅಲ್ಲ.

ಅವನ ಆಶ್ರಯವು ಸಿಕ್ಕುವುದೆಂದರೆ ಅವನ ಪ್ರಸಾದವೇ ಲಬ್ಧವಾದಂತೆ. ಅವನ ಪ್ರಸಾದವು ಲಬ್ಧವಾದರೆ ಅವನ ದಿವ್ಯಾಶ್ರಯವು ಸಿಕ್ಕಿದಂತೆ. ಆರ್ತ, ಜಿಜ್ಞಾಸು, ಅರ್ಥಾರ್ಥೀ–ಎಂಬ ಮೂರು ಬಗೆಯ ಭಕ್ತರಿಗೆ ಶಾಶ್ವತವಾದ ಪದವಿಲ್ಲವೇ? ಎಂದರೆ : ಭಗವಂತನ ಅನುಗ್ರಹದಿಂದ ಅನಿಷ್ಟಪರಿಹಾರ–ಇಷ್ಟಪ್ರಾಪ್ತಿಗಳು ಉಂಟಾಗುತ್ತವೆ. ಆದರೆ ಅವರಿಗೆ ಶಾಶ್ವತವಾದ ಮತ್ತು ಕ್ಷಯರಹಿತವಾದ ಪರಮಪದವು ಸಿಕ್ಕಬೇಕಾದರೆ ಜ್ಞಾನಭಕ್ತರು ಅಥವಾ ಪರಾಭಕ್ತರು ಆಗಲೇಬೇಕು. ಯಾವುದೋ ಒಂದು ಕಾರಣದಿಂದ ಭಗವಂತನನ್ನು ಆಶ್ರಯಿಸಿದ್ದರೂ ಅವರು ಕಾಲಕ್ರಮದಲ್ಲಾದರೂ ಭಗವಂತನ ಪರಾಭಕ್ತಿಯನ್ನು ಹೊಂದಲು ಹೆಚ್ಚು ಅವಕಾಶವಿದೆ.)

o o o

**ಮದ್ವ್ಯಪಾಶ್ರಯಃ** = ಈಶ್ವರನೂ, ವಾಸುದೇವನೂ ಆದ ನನ್ನನ್ನೇ ಪೂರ್ಣವಾದ ಆಶ್ರಯವನ್ನಾಗಿ ಭಾವಿಸಿ ಸರ್ವಾತ್ಮಭಾವವನ್ನೂ ನನ್ನಲ್ಲಿಯೇ ಅರ್ಪಿಸಿವದನು. ಎಲ್ಲ ಕರ್ಮಗಳನ್ನೂ ಮಾಡುತ್ತಿದ್ದರೂ ಎಂದರೆ ಪ್ರತಿಷಿದ್ಧ ಕರ್ಮಗಳನ್ನೇ ಮಾಡುತ್ತಿದ್ದರೂ ಅವನೂ ಕೂಡ ಈಶ್ವರನಾದ ನನ್ನ ಅನುಗ್ರಹದಿಂದ ನಿತ್ಯವೂ ಅವ್ಯಯವೂ ಆದ ನನ್ನ ವೈಷ್ಣವಪದವನ್ನು ಹೊಂದುತ್ತಾನೆ. (ಶಂ. ಭಾ.)

ನಿತ್ಯ-ನೈಮಿತ್ತಿಕಕರ್ಮಗಳನ್ನು ಮಾತ್ರವಲ್ಲದೇ ಎಲ್ಲ ಕಾಮ್ಯಕರ್ಮಗಳನ್ನೂ ಕೂಡ ನನ್ನನ್ನು ಆಶ್ರಯಿಸಿ ಎಂದರೆ ಕರ್ತೃತ್ವಾದಿಗಳನ್ನು ನನ್ನಲ್ಲಿ ಇರಿಸಿ ಆಚರಿಸುವವನು. ನನ್ನ ಅನುಗ್ರಹದಿಂದ ಶಾಶ್ವತವೂ ಅವ್ಯಯವೂ ಆದ ಪದವನ್ನು ಎಂದರೆ ಲಕ್ಷ್ಯನಾದ ನನ್ನನ್ನು ಪಡೆಯುತ್ತಾನೆ.

ವರ್ಣಾಶ್ರಮೋಚಿತವಾದ ನಿತ್ಯ-ನೈಮಿತ್ತಿಕಕರ್ಮಗಳನ್ನು ಫಲಾದಿಗಳ ಆಸೆಯನ್ನು ತೊರೆದು ಪರಮಪುರುಷನ ಆರಾಧನಾರೂಪವಾಗಿ ಮಾಡಿದರೆ ಅದರ ಫಲವೇನೆಂಬುದನ್ನು ಹಿಂದೆ ಹೇಳಿದೆ. ಮೇಲೆ ಹೇಳಿದ ಪ್ರಕಾರದಿಂದಲೇ ಕಾಮ್ಯಕರ್ಮಗಳನ್ನು ಮಾಡುತ್ತಿದ್ದರೂ ಅದರ ಫಲವೂ ಕೊನೆಯಲ್ಲಿ ಶಾಶ್ವತಪರಮಾತ್ಮಪ್ರಾಪ್ತಿಯೇ ಆಗುತ್ತದೆ. (ರಾ. ಭಾ.)

**ಓಂ ಚೇತಸಾ ಸರ್ವಕರ್ಮಾಣಿ ಮಯಿ ಸಂನ್ಯಸ್ಯ ಮತ್ಪರಃ ।**
**ಬುದ್ಧಿಯೋಗಮುಪಾಶ್ರಿತ್ಯ ಮಚ್ಚಿತ್ತಃ ಸತತಂ ಭವ ॥೫೭॥**

ಮನಸ್ಸಿನಿಂದ ಸರ್ವಕರ್ಮಗಳನ್ನೂ ನನ್ನಲ್ಲಿ ಸಂನ್ಯಾಸಮಾಡಿ ಮತ್ಪರನಾಗಿ ಬುದ್ಧಿಯೋಗವನ್ನು ಅವಲಂಬಿಸಿ ಯಾವಾಗಲೂ ನನ್ನಲ್ಲಿಯೇ ಮನಸ್ಸುಳ್ಳವನಾಗಿರು.

* * *

(**ಚೇತಸಾ ಸರ್ವಕರ್ಮಾಣಿ ಮಯಿ ಸಂನ್ಯಸ್ಯ** = ಬುದ್ಧಿಯಿಂದ ಸರ್ವಕರ್ಮಗಳನ್ನೂ ನನ್ನಲ್ಲಿಯೇ ಚೆನ್ನಾಗಿ ಇಟ್ಟು. ಬುದ್ಧಿಯಿಂದ ಸರ್ವಕರ್ಮಗಳನ್ನು ಅವನಲ್ಲಿ ಇಡುವುದೆಂದರೇನು? ಕರ್ಮವು ಮಾಡಲ್ಪಡತಕ್ಕುದು. ಅದನ್ನು ಎಲ್ಲಾದರೂ ಇಡುವುದಕ್ಕಾಗುತ್ತದೆಯೇ?—ಎಂಬ ಶಂಕೆ ಬರಬಹುದು. ಕರ್ಮಗಳನ್ನು ಅವನಲ್ಲಿ ಚೆನ್ನಾಗಿ ಇಡುವುದೆಂದರೆ ಕರ್ಮಗಳನ್ನು

ಅವನಿಗೇ ಸಮರ್ಪಿಸುವುದು ಅಥವಾ ಕರ್ಮಫಲವನ್ನು ಅವನಿಗೇ ಸಮರ್ಪಿಸುವುದು. ಪ್ರತಿಯೊಂದು ಕರ್ಮದ ಕಡೆಯಲ್ಲಿಯೂ ನಾವು ಶ್ರೀಕೃಷ್ಣಾರ್ಪಣಮಸ್ತು ಎಂದು ಹೇಳುವ ರೂಢಿಯಿದೆ. ಆದರೆ ಹಾಗೆ ಹೇಳುವಾಗ ಆ ಅರ್ಪಣೆಯು ಕೇವಲ ಗಿಳಿಯಪಾಠದಂತೆ ಆಗಬಾರದು. **ಚೇತಸಾ** = ಮನಃಪೂರ್ವಕವಾಗಿ ಅರ್ಪಿಸಬೇಕು. ಭಾವನಾಪೂರ್ವಕವಾಗಿ ಸಮರ್ಪಿಸಬೇಕು. ಕರ್ಮವನ್ನೇ ಅವನಿಗೆ ಅರ್ಪಿಸುವುದರಿಂದ ಕರ್ಮಫಲವನ್ನೂ ಅರ್ಪಿಸುತ್ತೇನೆಂದು ಹೇಳಲೇಬೇಕಾಗಿಲ್ಲ. **ಸರ್ವಕರ್ಮಾಣಿ** ಎಂದು ಹೇಳಿರುವುದರಿಂದ ನಿತ್ಯ-ನೈಮಿತ್ತಿಕಕರ್ಮಗಳು, ಲೌಕಿಕರ್ಮಗಳು ಎಲ್ಲವೂ ಸೇರುತ್ತವೆ. 'ಹೊಟ್ಟೇಪಾಡಿಗಾಗಿ ಕೆಲಸಮಾಡಿದರೂ ಸಹ ಕೆಲಸದ ಪ್ರಾರಂಭದಲ್ಲಿ ಮತ್ತು ಕೊನೆಯಲ್ಲಿ ಅದನ್ನೂ ಸಹ ಪರಮಾತ್ಮನಿಗೆ ಅರ್ಪಿಸುತ್ತೇನೆ. ಅವನು ಸುಪ್ರೀತನಾಗಲಿ'–ಎಂಬ ಪ್ರಾಮಾಣಿಕವಾದ ಭಾವದಿಂದ ಅರ್ಪಿಸಬೇಕು.

**ಮತ್ಪರಃ** = ನನ್ನ ಪರವಾಗಿರು. ನನ್ನ ಕಡೆಗೇ ಇರು. ಮತ್ತಾರ ಕಡೆಗೂ ಮನಸ್ಸನ್ನು ಹಾಯಿಸಬೇಡ. ಅವ್ಯಭಿಚಾರಿಣಿಯಾದ ಭಕ್ತಿಯನ್ನು ನನ್ನಲ್ಲಿಯೇ ಇಟ್ಟುಕೊ. ನನ್ನನ್ನೇ ಪರಮಾಶ್ರಯನನ್ನಾಗಿ ಭಾವಿಸು.

**ಬುದ್ಧಿಯೋಗಮುಪಾಶ್ರಿತ್ಯ ಮಚ್ಚಿತ್ತಃ ಸತತಂ ಭವ** = ಯಾವಾಗಲೂ ಚಿತ್ತವನ್ನು ಪರಮಾತ್ಮನಲ್ಲಿಯೇ ಲೀನಗೊಳಿಸಬೇಕಾದರೆ ಬುದ್ಧಿಯೋಗವನ್ನು ಆಶ್ರಯಿಸಬೇಕು. ಬುದ್ಧಿಯೋಗಕ್ಕೆ ಜ್ಞಾನಯೋಗವೆಂದೂ ಹೆಸರು. ಜ್ಞಾನಯೋಗದಲ್ಲಿ ಸಾಧಕನ ಚಿತ್ತವು ಭಗವಂತನಲ್ಲಿಯೇ ಸತತವಾಗಿ ಲೀನವಾಗಿರುತ್ತದೆ. ೨ನೇ ಅಧ್ಯಾಯದ ೪೯-೫೦ನೆಯ ಶ್ಲೋಕಗಳಲ್ಲಿ ಬುದ್ಧಿಯೋಗಕ್ಕೆ ವ್ಯಾಖ್ಯೆಯಿದೆ. ಫಲಾಶೆಯಲ್ಲಿ ಬುದ್ಧಿಯನ್ನಿಡದೇ ಕರ್ಮ ಮಾಡುವ ಯುಕ್ತಿ ಅಥವಾ ಸಮತ್ವಬುದ್ಧಿಗೆ ಬುದ್ಧಿಯೋಗವೆಂದು ಹೆಸರು. ಕರ್ಮಗಳನ್ನು ಫಲಾಭಿಸಂಧಿಯಿಲ್ಲದೇ ಮಾಡುವುದು ; ಪರಮಾತ್ಮನ ಪ್ರೀತಿಗಾಗಿ ಮಾಡುವುದು ; ಕರ್ಮಗಳನ್ನು ಮಾಡಿಯೂ ಮಾಡದಂತೆ ಇರುವುದು ; ಪುನರ್ಜನ್ಮಕ್ಕೆ ಕಾರಣವಾದ ಕರ್ಮಫಲಗಳು ಅಂಟದ ರೀತಿಯಲ್ಲಿ ಕರ್ಮಮಾಡುವುದು–ಹೀಗೆ ಮಾಡುತ್ತಿದ್ದರೆ ಚಿತ್ತವೃತ್ತಿಯು ಯಾವಾಗಲೂ ಪರಮಾತ್ಮನ ಕಡೆಗೇ ಇರುತ್ತದೆ.

**ಮಚ್ಚಿತ್ತಃ ಸತತಂ ಭವ**–ಎಂಬುದು ಇಲ್ಲಿಯೂ ಹೊಂದಿಕೊಳ್ಳುತ್ತದೆ.

**ಬುದ್ಧಿಯೋಗಮುಪಾಶ್ರಿತ್ಯ**–ಎಂಬುದಕ್ಕೆ ಸಮತ್ವಬುದ್ಧಿಯಿಂದ ಎಂದು ಅರ್ಥಮಾಡಿದರೆ **ಚೇತಸಾ ಸರ್ವಕರ್ಮಾಣಿ ಮಯಿ ಸಂನ್ಯಸ್ಯ** ಎಂಬ ಅರ್ಥದ ವ್ಯಾಖ್ಯಾನವೇ ಆಗುತ್ತದೆ.

ಸಿದ್ಧಿ-ಅಸಿದ್ಧಿ, ಸುಖ-ದುಃಖ, ಲಾಭ-ನಷ್ಟ, ಜಯ-ಅಪಜಯ, ಶೀತ-ಉಷ್ಣ, ಮಾನ-ಅಪಮಾನ–ಇವುಗಳಲ್ಲಿ ಸಮಬುದ್ಧಿ. ತಾರತಮ್ಯವನ್ನು ಕಾಣದಿರುವುದು. ಎಲ್ಲ ಕರ್ಮಗಳನ್ನೂ ಅವನಿಗೇ ಅರ್ಪಿಸುವುದೆಂದಮೇಲೆ ಸಿದ್ಧಿ-ಅಸಿದ್ಧಿಗಳ, ಜಯ-ಅಪಜಯಗಳ ವಿಷಯವೇ ಹುಟ್ಟುವುದಿಲ್ಲ. ಕರ್ಮಗಳನ್ನು ನಮಗಾಗಿ ನಾವು ಮಾಡಿಕೊಳ್ಳುವುದಾದರೆ ಈ ದ್ವಂದ್ವಗಳು ಬಾಧಿಸುವುದು ನಿಜ. ಎಲ್ಲ ಕರ್ಮಗಳನ್ನೂ ಈಶ್ವರಪ್ರೀತ್ಯರ್ಥವಾಗಿ ಈಶ್ವರನ ಪ್ರೇರಣೆಯಂತೆ ಮಾಡುವುದಾದರೆ ದ್ವಂದ್ವಗಳು ಹೇಗೆ ತಾನೇ ಬಾಧಿಸಿಯಾವು? ಬುದ್ಧಿಯೋಗವನ್ನು ಆಶ್ರಯಿಸಿ ಎಲ್ಲದರಲ್ಲಿಯೂ ಸಮತ್ವವನ್ನು ಕಂಡುಕೊಂಡು ಸರ್ವದಾ ನನ್ನಲ್ಲಿಯೇ ಚಿತ್ತವೃತ್ತಿಯುಳ್ಳವನಾಗು.)

o o o

**ಚೇತಸಾ** = ವಿವೇಕಬುದ್ಧಿಯಿಂದ. **ಸರ್ವಕರ್ಮಾಣಿ** = ದೃಷ್ಟ ಮತ್ತು ಅದೃಷ್ಟವಾದ ಫಲವುಳ್ಳ ಎಲ್ಲ ಕರ್ಮಗಳನ್ನೂ **ಮಯಿ ಸಂನ್ಯಸ್ಯ** = **ಯತ್ಕರೋಷಿ ಯದಶ್ನಾಸಿ**–ಎಂದು ಹಿಂದೆ ಹೇಳಿದ ನ್ಯಾಯದಿಂದ ಈಶ್ವರನಿಗೆ ಸಮರ್ಪಿಸಿ.

**ಮತ್ಪರಃ** = ವಾಸುದೇವನಾದ ನನ್ನಲ್ಲಿಯೇ ಪರಾಯಣನಾಗಿ, ನನ್ನನ್ನೇ ಪರಮಗತಿಯೆಂದು ಭಾವಿಸಿ, ಸಮಾಹಿತಬುದ್ಧಿಯನ್ನು ಹೊಂದಿರುವಿಕೆ ಎಂಬ ಬುದ್ಧಿಯೋಗದಿಂದ ಅನನ್ಯಶರಣನಾಗಿ ನಿರಂತರವಾಗಿ ನನ್ನಲ್ಲಿಯೇ ಚಿತ್ತವನ್ನು ಇರಿಸಿರು. (ಶಂ. ಭಾ.)

**ಚೇತಸಾ** = ತಾನು ನನ್ನವನು ನನ್ನಿಂದ ನಿಯಮಿಸಲ್ಪಡುವವನು ಎಂಬ ಬುದ್ಧಿಯಿಂದ. "**ಮಯಿ ಸರ್ವಾಣಿ ಕರ್ಮಾಣಿ ಸಂನ್ಯಸ್ಯ** = ಎಲ್ಲ ಕರ್ಮಗಳನ್ನೂ ಅವುಗಳ ಕರ್ತೃ ಮತ್ತು ಆರಾಧ್ಯಗಳೊಡನೆ ನನ್ನಲ್ಲಿರಿಸಿ ಮತ್ಪರನಾಗಿ–ನನ್ನನ್ನೇ ಫಲವನ್ನಾಗಿ ಅನುಸಂಧಾನಮಾಡುತ್ತಾ, ಕರ್ಮ

ಗಳನ್ನು ಆಚರಿಸುವವನಾಗಿ, ಇದೇ ಬುದ್ಧಿಯೋಗವನ್ನಾಶ್ರಯಿಸಿ ಯಾವಾಗಲೂ ನನ್ನಲ್ಲಿಯೇ ಚಿತ್ತವುಳ್ಳವನಾಗು. (ರಾ. ಭಾ.)

**ಮತ್ಪರಃ** = ನಾನೇ ಸರ್ವೋತ್ತಮನು ಎಂಬ ಭಾವದಿಂದ ಕೂಡಿದವನಾಗಿ. **ಮಚ್ಚಿತ್ತಃ** = ನನ್ನಲ್ಲಿಯೇ ಚಿತ್ತವನ್ನು ನಿರೋಧಿಸಿ. (ಮ. ಟೀಕಾ)

**ಓಂ ಮಚ್ಚಿತ್ತಃ ಸರ್ವದುರ್ಗಾಣಿ ಮತ್ಪ್ರಸಾದಾತ್ತರಿಷ್ಯಸಿ ।**
**ಅಥ ಚೇತ್ತ್ವಮಹಂಕಾರಾನ್ನ ಶ್ರೋಷ್ಯಸಿ ವಿನಂಕ್ಷ್ಯಸಿ ॥೫೮॥**

ನನ್ನಲ್ಲಿ ಚಿತ್ತವನ್ನಿಟ್ಟರೆ ನನ್ನ ಅನುಗ್ರಹದಿಂದ ಎಲ್ಲ ಸಂಕಟಗಳನ್ನೂ ದಾಟಿಬಿಡುವೆ. ಆದರೆ ಅಹಂಕಾರದಿಂದ ನನ್ನ ಮಾತನ್ನು ಕೇಳದಿದ್ದರೆ ವಿನಾಶಹೊಂದುವೆ.

* * *

(ಶ್ರೀಕೃಷ್ಣನು ಹಿಂದಿನ ಶ್ಲೋಕದಲ್ಲಿ **ಮಚ್ಚಿತ್ತಃ ಸತತಂ ಭವ**–ಎಂದು ಉಪದೇಶಿಸಿದನು. ಈ ಶ್ಲೋಕದಲ್ಲಿ ಅದರ ಪ್ರಯೋಜನವೇನೆಂಬುದನ್ನೂ ಅದಕ್ಕೆ ವಿರುದ್ಧವಾಗಿ ನಡೆದರೆ ಉಂಟಾಗುವ ಹಾನಿಯೇನೆಂಬುದನ್ನೂ ನಿರೂಪಿಸುತ್ತಾನೆ.

**ಮಚ್ಚಿತ್ತಃ ಸರ್ವದುರ್ಗಾಣಿ ಮತ್ಪ್ರಸಾದಾತ್ತರಿಷ್ಯಸಿ ।**

ನನ್ನಲ್ಲಿಯೇ ಸರ್ವದಾ ಚಿತ್ತವೃತ್ತಿಯುಳ್ಳವನಾದರೆ ನನ್ನನ್ನೇ ಸದಾಕಾಲದಲ್ಲಿಯೂ ಬುದ್ಧಿಯೋಗದ ಮೂಲಕವಾಗಿ ಅನುಸಂಧಾನ ಮಾಡುತ್ತಿದ್ದರೆ, **ಮತ್ಪ್ರಸಾದಾತ್** = ನನ್ನ ಕೃಪೆಯಿಂದ, **ಸರ್ವದುರ್ಗಾಣಿ** = ಎಲ್ಲ ದುರ್ಗಗಳನ್ನೂ, ಎಲ್ಲ ಸಂಕಟಗಳನ್ನೂ ದಾಟುವೆ. ದಾಟಲು ಕಷ್ಟಸಾಧ್ಯವಾದ ಕೋಟೆ, ಕೊತ್ತಲು, ಪ್ರಾಕಾರ, ಕಂದಕ, ಬೆಟ್ಟ-ಗುಡ್ಡ–ಮುಂತಾದುವುಗಳಿಗೆ ದುರ್ಗಗಳೆಂದು ಹೆಸರು. **ದುಷ್ಪ್ರವೇಶತಯಾ ದುರ್ಗಃ ಪಾಪಿಭಿಸ್ತು ಕದಾಚನ**–ದುಃಖದಿಂದ ಪ್ರವೇಶಿಸಲು ಸಾಧ್ಯವಾಗುವುದಕ್ಕೆ ದುರ್ಗ ಎಂದು ಹೆಸರು. ಇದನ್ನು ಪಾಪಿಗಳಾದವರು ದಾಟಲು ಸಾಧ್ಯವಾಗುವುದೇ ಇಲ್ಲ–ಎಂದು ನಿರುಕ್ತವು ಹೇಳುತ್ತದೆ. ಅಂತಹ ದುರ್ಗಗಳು ಒಂದಲ್ಲ, ಅನೇಕವಾಗಿವೆ. **ಸರ್ವದುರ್ಗಾಣಿ** ಎಂದು ಶ್ರೀಕೃಷ್ಣನು ಹೇಳಿದ್ದಾನೆ. ಸಂಸಾರರೂಪದ ದುರ್ಗಗಳು. ಸಂಸಾರದಲ್ಲಿನ ಸಕಲದುಃಖಗಳು. ಅಧಿ

ಭೌತಿಕ, ಆಧಿದೈವಿಕ, ಆಧ್ಯಾತ್ಮಿಕ–ಈ ಎಲ್ಲ ಕ್ಷೇತ್ರಗಳಿಗೂ ಸಂಬಂಧಿಸಿದ ದುಃಖಗಳನ್ನೂ, ಜನ್ಮ–ಮೃತ್ಯು–ಜರಾ–ವ್ಯಾಧಿಗಳನ್ನೂ ದಾಟಬೇಕಾದರೆ ಭಗವತ್ಪ್ರಸಾದವು ಅನಿವಾರ್ಯವೇ ಸರಿ. ಈ ಎಲ್ಲವನ್ನೂ ನನ್ನ ಪ್ರಸಾದದಿಂದ ದಾಟುವೆ ಎಂದು ಅಭಯಪ್ರದಾನಮಾಡುತ್ತಾನೆ, ಶ್ರೀಕೃಷ್ಣ. ವಿಷಯ ವಸ್ತುಗಳಿಂದ ಮನಸ್ಸನ್ನು ಹಿಂದಕ್ಕೆ ಸೆಳೆದುಕೊಂಡು ಒಳಸರಿಸಿ ಆತ್ಮನಲ್ಲಿ ಲೀನಗೊಳಿಸಲು ಪ್ರಯತ್ನಿಸಿದಾಗಲೇ ಸಂಸಾರದುರ್ಗವು ಕಳಚಿ ಕೆಳಕ್ಕೆ ಬೀಳಲು ಪ್ರಾರಂಭಿಸುತ್ತದೆ. ಅವನ ಪ್ರಸಾದದಿಂದ ಮನಸ್ಸು ಅವನಲ್ಲಿಯೇ ಲೀನವಾಗಿಬಿಟ್ಟರೆ ಸಂಸಾರವೆಂಬುದೇ ಇರುವುದಿಲ್ಲ. ಮನಸ್ಸಿನ ಬಹಿರ್ವಿಸ್ತಾರವೇ ಸಂಸಾರ. ಅದನ್ನು ಒಳಸರಿಸುವುದೇ ಸಂಸಾರದಿಂದ ನಿವೃತ್ತವಾಗುವಿಕೆ. ಮುಕ್ತಸಂಗವಾಗುವಿಕೆ. ಮನಸ್ಸು ಒಳಸರಿಯಿತೆಂದರೆ ಸಂಸಾರವಿದ್ದೂ ಇಲ್ಲದಂತೆಯೇ ಸರಿ. ಕಷ್ಟಗಳೆಲ್ಲವೂ ಇರುವುದು ಪ್ರಕೃತಿಕ್ಷೇತ್ರದಲ್ಲಿ. ಅದನ್ನೇ ಭಗವಂತನು ದಾಟಿಸಿಬಿಡುವುದದಿಂದ ಸರ್ವಸಂಕಷ್ಟಗಳನ್ನೂ ನಿವಾರಿಸಬಲ್ಲವನು ಅವನು ತಾನೇ?

ಹೀಗೆ ಮಾಡದಿದ್ದರೆ ಆಗುವ ಪರಿಣಾಮವನ್ನು ಉತ್ತರಾರ್ಧದಲ್ಲಿ ಹೇಳುತ್ತಾನೆ.

**ಅಹಂಕಾರಾತ್ ನ ಶ್ರೋಷ್ಯಸಿ ಚೇತ್** = ನಾನು ಹೇಳಿದುದನ್ನು ಅಹಂಕಾರದಿಂದ ಕೇಳದೇ ಹೋದರೆ. ವಿನಂಕ್ಷ್ಯಸಿ = ನಾಶಹೊಂದುವೆ. ದೇಹಾಭಿಮಾನವನ್ನು ತೊರೆದನಂತರ ಉಳಿದುಕೊಳ್ಳುವ 'ಅಹಂ' ಅನ್ನು ಅವನಲ್ಲಿಯೇ ಲೀನಗೊಳಿಸುವುದು ನಿವೃತ್ತಿಮಾರ್ಗ. ದೇಹಾಭಿಮಾನವನ್ನು ತೊರೆಯದೇ ಅದೇ 'ಅಹಂ' ಅನ್ನು ವಿಷಯಗಳೊಡನೆ ಸಂಯೋಜಿಸುವುದು ಪ್ರವೃತ್ತಿಮಾರ್ಗ. ಇದೇ ಅಹಂಕಾರ. ಮನಸ್ಸನ್ನು ಅವನಲ್ಲಿಯೇ ಲೀನಗೊಳಿಸಿಬಿಟ್ಟರೆ 'ಅಹಂ' ಎಂಬುದೂ ಹೋಗಿಯೇ ಬಿಡುತ್ತದೆ. ಹಾಗೆ ಲೀನಗೊಳಿಸದಿದ್ದರೆ ಅದೇ 'ಅಹಂ' ಎಂಬುದು ವಿಷಯಗಳಲ್ಲಿ ಪ್ರವೃತ್ತವಾಗುತ್ತದೆ. ಜನ್ಮ-ಮೃತ್ಯು-ಜರಾ-ವ್ಯಾಧಿರೂಪವಾದ ಸಂಸಾರಕ್ಕೆ ಸಿಕ್ಕಿಹಾಕಿಕೊಳ್ಳುತ್ತದೆ. ಇದೇ ವಿನಾಶ. ಆತ್ಮನು ಸ್ವತಃ ಅಜನೂ, ಅಮರನೂ ಆಗಿದ್ದರೂ ಪ್ರಕೃತಿಗೆ ಸಿಲುಕಿದರೆ ಜನ್ಮ-ಮೃತ್ಯುಗಳಿಗೆ ಒಳಗಾಗುತ್ತಾನೆ.)

o o o

ನನ್ನಲ್ಲಿ ಚಿತ್ತವುಳ್ಳವನಾಗಿ ನೀನು ಎಲ್ಲ ದುರ್ಗಗಳನ್ನೂ ಎಂದರೆ ಸಂಸಾರಕ್ಕೆ ಕಾರಣವಾದ ಎಲ್ಲವನ್ನೂ ನನ್ನ ಅನುಗ್ರಹದಿಂದ ದಾಟಿಬಿಡುವೆ. ಒಂದು ವೇಳೆ ನೀನು ಅಹಂಕಾರದಿಂದ ನಾನೇ ಪಂಡಿತ ಎಂದು ನನ್ನ ಮಾತನ್ನು ಗ್ರಹಿಸದಿದ್ದ ಪಕ್ಷದಲ್ಲಿ ವಿನಾಶಹೊಂದಿಬಿಡುವೆ. (ಶಂ. ಭಾ.)

ಹೀಗೆ ನನ್ನಲ್ಲಿ ಚಿತ್ತವಿಟ್ಟು ಎಲ್ಲ ಕರ್ಮಗಳನ್ನೂ ಮಾಡುತ್ತಾ ಸಂಸಾರಕ್ಕೆ ಸಂಬಂಧಪಟ್ಟ ಎಲ್ಲ ದುರ್ಗಗಳನ್ನೂ ನನ್ನ ಅನುಗ್ರಹದಿಂದಲೇ ದಾಟಿಬಿಡುವೆ. ಒಂದು ವೇಳೆ ಅಹಂಕಾರದಿಂದ ನಾನೇ–ಕೃತ್ಯಾಕೃತ್ಯವಿಷಯಗಳೆಲ್ಲವನ್ನೂ ಬಲ್ಲೆನು–ಎಂಬ ಅಹಂಭಾವದಿಂದ ನಾನು ಹೇಳಿದುದನ್ನು ಕೇಳದಿದ್ದರೆ ವಿನಾಶಹೊಂದಿಬಿಡುವೆ. ಎಲ್ಲ ಪ್ರಾಣಿಗಳ ಕೃತ್ಯಾಕೃತ್ಯಗಳನ್ನೂ ಬಲ್ಲವನು ಅಥವಾ ಅವುಗಳ ನಿಯಾಮಕನಾದವನು ನನ್ನ ಹೊರತು ಬೇರೆ ಯಾರೂ ಇಲ್ಲ. (ರಾ. ಭಾ.)

**ನ ಶ್ರೋಷ್ಯಸಿ** = ಕೇಳಿ ಆಚರಿಸದಿದ್ದರೆ ; **ವಿನಂಕ್ಷ್ಯಸಿ** = ಪುರುಷಾರ್ಥ ವಿಹೀನನಾಗುತ್ತೀಯೆ. (ಮ. ಟೀಕಾ.)

**ಓಂ ಯದಹಂಕಾರಮಾಶ್ರಿತ್ಯ ನ ಯೋತ್ಸ್ಯ ಇತಿ ಮನ್ಯಸೇ ।**
**ಮಿಥ್ಯೈಷ ವ್ಯವಸಾಯಸ್ತೇ ಪ್ರಕೃತಿಸ್ತ್ವಾಂ ನಿಯೋಕ್ಷ್ಯತಿ ॥೫೯॥**

ಅಹಂಕಾರವನ್ನು ಆಶ್ರಯಿಸಿ ಯುದ್ಧಮಾಡುವುದಿಲ್ಲ–ಎಂದು ಎಣಿಸುವೆಯಾದರೆ ಆ ನಿನ್ನ ನಿಶ್ಚಯವೂ ಸುಳ್ಳೇ ಆಗುತ್ತದೆ. ಏಕೆಂದರೆ : ಪ್ರಕೃತಿಯೇ ನಿನ್ನನ್ನು (ಯುದ್ಧದಲ್ಲಿ ) ತೊಡಗಿಸುವುದು.

* * *

(**ಯದಹಂಕಾರಮಾಶ್ರಿತ್ಯ** = 'ನಾನೇ ಸ್ವತಂತ್ರ ; ನನಗೆ ಸರಿ ಯಾವುದು ? ತಪ್ಪು ಯಾವುದು ? ಎಂಬುದನ್ನು ನಾನೇ ತೀರ್ಮಾನಿಸಬಲ್ಲೆನು' ಎಂಬ ಭಾವದಿಂದ ಕೂಡಿ ಯುದ್ಧಮಾಡುವುದಿಲ್ಲ ಎಂದು ತೀರ್ಮಾನಿಸಿದರೂ ನಿನ್ನ ನಿಶ್ಚಯವು ಉಳಿಯುವುದಿಲ್ಲ. ಏಕೆಂದರೆ : ಅದು ನಿನ್ನ ಪ್ರಕೃತಿಗೆ ವಿರುದ್ಧವಾದುದು. ಆದರೆ ಈ ಅಹಂಕಾರವನ್ನು ಆಶ್ರಯಿಸಿದಾಗಲೂ ನಾನು ಇಂತಹ ಕಾರ್ಯವನ್ನು ಮಾಡುತ್ತೇನೆ ; ಇಂತಹ ಕಾರ್ಯವನ್ನು ಮಾಡುವುದಿಲ್ಲ–ಎಂದು ಹೇಳಿಕೊಳ್ಳುವಾಗಲೂ ಸಹ ಸ್ವಭಾವಜವಾದ ಧರ್ಮಕ್ಕೆ

ವಿರೋಧವಾಗಿ ಪ್ರತಿಜ್ಞೆಮಾಡಲು ಹೋಗಬಾರದು. ಸ್ವಭಾವಜವಾದ ಕರ್ಮಕ್ಕೆ ವಿರೋಧವಾದ ಕರ್ಮವನ್ನು ಮಾಡಲು ಸಾಧ್ಯವೇ ಆಗುವುದಿಲ್ಲ– ಎಂಬುದು ಶ್ರೀಕೃಷ್ಣನ ಅಭಿಮತವಾಗಿದೆ. ಕ್ಷಾತ್ರಸ್ವಭಾವದವನು ಯಾವ ಸಂದರ್ಭದಲ್ಲಿಯೂ ಯುದ್ಧಮಾಡುವುದೇ ಇಲ್ಲ–ಎಂದು ಪ್ರತಿಜ್ಞೆಯನ್ನು ಮಾಡಬಾರದು. ಹುಲಿಯ ಮರಿಯನ್ನು ಹಸುಗಳ ಜೊತೆಯಲ್ಲೇ ಸಾಕಿದರೂ ಸಹ ಸ್ವಭಾವಾನುಗುಣವಾಗಿ ಕೆಲವು ವರ್ಷಗಳು ಕಳೆದನಂತರ ಹುಲಿಯು ಹಸುವಿನ ಕರುವನ್ನು ತಿನ್ನದೇ ಇರುವುದಿಲ್ಲ. ಹುಲ್ಲು ಹಾಕಿ ಸಾಕಿದ ಮಾತ್ರದಿಂದ ತನ್ನ ಸ್ವಭಾವವನ್ನು ಬದಲಾಯಿಸುವ ಸಾಧ್ಯತೆಯಿಲ್ಲ.

ಆದುದರಿಂದ ನೀನು ಕ್ಷತ್ರಿಯನಾಗಿ ಹುಟ್ಟಿ ಸ್ವಭಾವಗುಣಗಳನ್ನು ಜನ್ಮತಃ ಪಡೆದುಕೊಂಡು ಇಂದು ಯಾವುದೋ ಕ್ಷುಲ್ಲಕಕಾರಣಗಳಿಂದ 'ನಾನು ಯುದ್ಧಮಾಡುವುದಿಲ್ಲ' ಎಂದು ಭಾವಿಸುವೆಯಾದರೆ ಅದು ನಿನ್ನ ಈಗಿನ ಭಾವನೆಯಂತೆ ನಡೆಯುವುದಿಲ್ಲ.

ಪುರಾಣವೈರಾಗ್ಯ–ಪ್ರಸೂತಿವೈರಾಗ್ಯ ಮತ್ತು ಶ್ಮಶಾನವೈರಾಗ್ಯಗಳು ಆಯಾ ಕಾಲಗಳಲ್ಲಿ ಬರುವುದು ನಿಜ. ಆದರೆ ಅವು ಕೇವಲ ತಾತ್ಕಾಲಿಕಗಳು. ಆ ವೈರಾಗ್ಯಗಳೇ ಶಾಶ್ವತವಾಗಿದ್ದುಬಿಟ್ಟಿದ್ದರೆ ಈ ವೇಳೆಗೆ ಜನರೆಲ್ಲರೂ ವಿರಾಗಿ ಗಳೇ ಆಗಿಬಿಡುತ್ತಿದ್ದರು. ಆದುದರಿಂದ ಆಯಾ ಸಂದರ್ಭಗಳಲ್ಲಿ ವಿರಕ್ತಿಯ ಭಾವನೆಯು ಬಂದರೂ ಅದು ಸ್ಥಾಯಿಯಾಗಿ ನಿಲ್ಲದೇ ಮನುಷ್ಯನು ತನ್ನ ಸ್ವಭಾವಾನುಗುಣವಾಗಿ ಪ್ರವೃತ್ತಿಮಾರ್ಗದಲ್ಲಿಯೇ ಮುಂದೆ ಸಾಗುತ್ತಿರುತ್ತಾನೆ.

ಅದೇ ರೀತಿಯಲ್ಲಿ ಅರ್ಜುನನಿಗೆ ಈಗ ಬಂದಿರುವುದು ಬಂಧುವಿನಾಶ ಜನ್ಯವಾದ ವೈರಾಗ್ಯ. ಇದು ತಾತ್ಕಾಲಿಕವಾದುದು. ಈ ವೈರಾಗ್ಯದಿಂದ ಅರ್ಜುನನಲ್ಲಿದ್ದ ಕ್ಷಾತ್ರಸ್ವಭಾವದ ಪರಿವರ್ತನೆಯು ಖಂಡಿತವಾಗಿಯೂ ಆಗುವುದಿಲ್ಲ. ಆದುದರಿಂದ ಶ್ರೀಕೃಷ್ಣನು ಹೇಳುತ್ತಾನೆ : 'ನೀನೀಗ ಯುದ್ಧ ಮಾಡುವುದಿಲ್ಲ ಎಂದು ಭಾವಿಸಿಬಿಟ್ಟಿರಬಹುದು. ಆದರೆ ಈ ಭಾವನೆಯು ಶಾಶ್ವತವಾದ ಅಥವಾ ಚಿರಸ್ಥಾಯಿಯಾದ ಭಾವನೆಯಲ್ಲ. ಇದು ನಿನ್ನ ಮಿಥ್ಯಾ

ವ್ಯವಸಾಯ–ಸುಳ್ಳು ನಿಶ್ಚಯ. ಈ ನಿಶ್ಚಯದಂತೆ ನೀನು ನಡೆಯಲಾರೆ. ಅದಕ್ಕೆ ಕಾರಣವಿಷ್ಟೆ :–

**ಪ್ರಕೃತಿಸ್ತ್ವಾಂ ನಿಯೋಕ್ಷ್ಯತಿ** = ಪ್ರಕೃತಿ ಎಂದರೆ ಸ್ವಭಾವ. ನಿನ್ನ ಸಹಜಗುಣವೇನೆಂಬುದನ್ನು ನಾನು ಬಲ್ಲೆ. ಸಹಜಗುಣವೇ ನಿನ್ನನ್ನು ಯುದ್ಧದಲ್ಲಿ ತೊಡಗಿಸುತ್ತದೆ. ಯುದ್ಧಮಾಡುವುದು ನಿನ್ನ ಸ್ವಭಾವಕ್ಕೆ ಸೇರಿದ್ದು. ಈ ಗುಣವು (ರಜೋಗುಣವು) ನಿನ್ನಿಂದ ಬಿಟ್ಟುಹೋಗುವುದಿಲ್ಲ. ಅದೇ ನಿನ್ನನ್ನು ಯುದ್ಧಕ್ಕೆ ನಿಯೋಜಿಸುತ್ತದೆ. ಆದುದರಿಂದ 'ನ ಯೋತ್ಸ್ಯೇ' 'ಯುದ್ಧ ಮಾಡುವುದಿಲ್ಲ' ಎಂಬ ಈಗಿನ ನಿನ್ನ ನಿಶ್ಚಯವು ಹೆಚ್ಚುಕಾಲ ಉಳಿಯುವುದಿಲ್ಲ. ಸುಳ್ಳಾಗಿಬಿಡುತ್ತದೆ. ಹೀಗೆ ಯುದ್ಧಮಾಡುವುದು ನಿನ್ನ ಪ್ರಕೃತಿಗೆ ಅನಿವಾರ್ಯವಾಗಿರುವಾಗ ಧರ್ಮರಕ್ಷಣೆಗೋಸ್ಕರ ಆ ಪ್ರವೃತ್ತಿಯನ್ನು ಉಪಯೋಗಿಸಿಕೊಳ್ಳುವುದು ಒಳ್ಳೆಯದು. ಹಾಗೆ ಉಪಯೋಗಿಸಿಕೊಳ್ಳದಿದ್ದರೆ ಆ ಪ್ರವೃತ್ತಿಯು ಕ್ಷುದ್ರಪ್ರಯೋಜನಗಳಿಗಾಗಿ ವಿನಿಯೋಗಹೊಂದುವುದು.)

o o o

'ನಾನು ಸ್ವತಂತ್ರ ; ಮತ್ತೊಬ್ಬರ ಮಾತಿನಂತೆ ಏಕೆ ನಡೆಯಬೇಕು?' ಎಂಬುದಾಗಿಯೂ ನೀನು ತಿಳಿಯಕೂಡದು. ನೀನು ಅಹಂಕಾರವನ್ನು ಆಶ್ರಯಿಸಿ 'ನಾನು ಯುದ್ಧಮಾಡುವುದೇ ಇಲ್ಲ' ಎಂದು ತಿಳಿಯುತ್ತಿದ್ದೀಯಲ್ಲಾ! ಇದು ಸುಳ್ಳುನಿಶ್ಚಯ. ಏಕೆಂದರೆ : ನಿನ್ನ ಪ್ರಕೃತಿಯು (ಕ್ಷಾತ್ರಸ್ವಭಾವವು) ನಿನ್ನನ್ನು ಯುದ್ಧಕ್ಕೆ ತೊಡಗಿಸುತ್ತದೆ. (ಶಂ. ಭಾ.)

ಅಹಂಕಾರ ಎಂದರೆ ತನಗೆ ಯಾವುದು ಹಿತ? ಯಾವುದು ಅಹಿತ? ಎಂಬುದನ್ನು ತಿಳಿಯುವ ವಿಷಯದಲ್ಲಿ ತಾನೇ ಸ್ವತಂತ್ರನು ಎಂಬ ಅಭಿಮಾನ. ಅದನ್ನು ಆಶ್ರಯಿಸಿ ನನ್ನ ಅಪ್ಪಣೆಯನ್ನು ಅನಾದರಿಸಿ ಯುದ್ಧಮಾಡುವುದಿಲ್ಲ ಎಂದು ತಿಳಿದಿರುವೆಯಲ್ಲಾ! ನಿನ್ನ ಈ ಸ್ವಾತಂತ್ರ್ಯದ ನಿಶ್ಚಯವು ಸುಳ್ಳಾಗಿಬಿಡುತ್ತದೆ. ಏಕೆಂದರೆ : ಪ್ರಕೃತಿಯೇ ನಿನ್ನನ್ನು ಯುದ್ಧದಲ್ಲಿ ತೊಡಗಿಸುವುದು. ಸ್ವಾತಂತ್ರ್ಯದ ವಿಷಯದಲ್ಲಿ ಉದ್ವೇಗಗೊಂಡ ಅಜ್ಞಾನಿಯಾದ ನಿನ್ನನ್ನು ಪ್ರಕೃತಿಯೇ ಯುದ್ಧದಲ್ಲಿ ತೊಡಗಿಸಿಬಿಡುತ್ತದೆ. (ರಾ.ಭಾ.)

ನಾನು ಹೇಳಿದಂತೆ ಮಾಡಿದರೆ ಸರ್ವಜ್ಞನಾದ ನಾನೇ ಎಲ್ಲ ಹೊಣೆ

ಯನ್ನೂ ಭರಿಸುವೆನು. ನನ್ನ ನಿಯೋಗವನ್ನು ನೀನು ಮೀರಿದರೆ ನಾನು ಉದಾಸೀನನಾಗುವೆನು. ಆಗ ಪ್ರಕೃತಿಪರತಂತ್ರನಾದ ನೀನು ಅಹಿತದಲ್ಲಿಯೇ ತೊಡಗಿಸಲ್ಪಡುತ್ತೀಯೆ. (ವೇದಾಂತದೇಶಿಕರು.)

ಮಿಥ್ಯಾ = ವ್ಯರ್ಥವೇ ಆಗುತ್ತದೆ. ಪ್ರಕೃತಿಃ –ಈಶ್ವರೇಚ್ಛೆಯು. ಈ ವಿಷಯದ ವ್ಯಾಖ್ಯಾನವನ್ನೇ ಶ್ರೀಕೃಷ್ಣನು ಮುಂದಿನ ಶ್ಲೋಕದಲ್ಲೂ ಮಾಡು ತ್ತಾನೆ. (ಮ. ಭಾ.)

**ಓಂ ಸ್ವಭಾವಜೇನ ಕೌನ್ತೇಯ ನಿಬದ್ಧಃ ಸ್ವೇನ ಕರ್ಮಣಾ ।**
**ಕರ್ತುಂ ನೇಚ್ಛಸಿ ಯನ್ಮೋಹಾತ್ಕರಿಷ್ಯಸ್ಯವಶೋಽಪಿ ತತ್ ॥೬೦॥**

ಕೌಂತೇಯ! ಸ್ವಭಾವದಿಂದುಂಟಾದ ನಿನ್ನದೇ ಆದ ಕರ್ಮದಿಂದ ಕಟ್ಟಿ ಹಾಕಲ್ಪಟ್ಟಿರುವುದರಿಂದ ನೀನು ಕೇವಲ ಮೋಹದಿಂದ ಯಾವ ಸ್ವಭಾವಜ ವಾದ ಕರ್ಮವನ್ನು ಮಾಡಲು ಇಚ್ಛೆಪಡುತ್ತಿಲ್ಲವೋ–ಆ ಕರ್ಮವನ್ನು ನೀನು ಪರವಶನಾಗಿಯೇ ಮಾಡಬೇಕಾಗುತ್ತದೆ.

* * *

(ಪ್ರತಿಯೊಬ್ಬ ಮನುಷ್ಯನೂ ಸ್ವಭಾವಜವಾದ ತನ್ನ ಕರ್ಮಪಾಶಕ್ಕೆ ಸಿಲುಕಿಕೊಂಡಿರುತ್ತಾನೆ. ಸ್ವಭಾವಜವಾದ ಕರ್ಮವೆಂದರೆ ಶ್ರೀಕೃಷ್ಣನೇ ಈ ಹಿಂದೆ ಹೇಳಿದ ಆಯಾವರ್ಣದವರಿಗೆ ಸಹಜವಾಗಿರುವ ಕರ್ಮಗಳು. (**ಶೌರ್ಯಂ ತೇಜೋ ಧೃತಿರ್ದಾಕ್ಷ್ಯಂ..... ಕ್ಷಾತ್ರಂ ಕರ್ಮ ಸ್ವಭಾವಜಮ್.** (೧೮-೪೩) **ಸ್ವೇನ ಸ್ವಭಾವಜೇನ ಕರ್ಮಣಾ** = ತನ್ನ ಸ್ವಭಾವಜನ್ಯವಾದ ಈ ಗುಣಗಳಿಂದ ಮನುಷ್ಯನು ನಿಬದ್ಧನಾಗಿರುತ್ತಾನೆ. ಅಂತೆಯೇ ಅರ್ಜುನನೂ ಸಹ ತನ್ನ ಸ್ವಭಾವಜವಾದ ಕ್ಷಾತ್ರಕರ್ಮದಿಂದ ನಿಬದ್ಧನಾಗಿರುತ್ತಾನೆ. ಅಂತಹ ಕರ್ಮವನ್ನು ಅಜ್ಞಾನದಿಂದ ಮಾಡಲು ಇಚ್ಛೆಪಡದಿದ್ದರೂ ಆ ಕರ್ಮವಂತೂ ಬಿಟ್ಟುಹೋಗುವುದಿಲ್ಲ. ಪ್ರಕೃತಿಗೆ ಪರವಶನಾಗಿ ಅರ್ಜುನನು ಅದನ್ನು ಮಾಡಿಯೇ ಮಾಡಬೇಕಾಗುವುದು.

ಅವಶಃ = ಅಸ್ವತಂತ್ರ. ತನ್ನ ಹಿಡಿತಕ್ಕೆ ಸಿಕ್ಕದ ರೀತಿಯಲ್ಲಿ. ಒಬ್ಬನು ಹಗಲಿನಲ್ಲಿ ಪ್ರತಿನಿತ್ಯವೂ ನಿದ್ದೆಮಾಡುವ ಸ್ವಭಾವವನ್ನು ಬೆಳೆಸಿಕೊಂಡಿರು ತ್ತಾನೆ. ನಿದ್ದೆಮಾಡುವ ವೇಳೆಯು ಬಂತೆಂದರೆ ಅವನು ಪ್ರಯತ್ನಪೂರ್ವಕ

ವಾಗಿ ಮಲಗದೇ ಇದ್ದರೂ, ನಿದ್ರೆಯು ಅವನನ್ನು ಆವರಿಸಿಬಿಡುತ್ತದೆ. ತೂಕಡಿಸಲು ಪ್ರಾರಂಭಿಸುತ್ತಾನೆ. ಮದ್ಯಪಾಯಿಯ ಕಾಲುಗಳು ಸಾಯಂಕಾಲವಾಗುತ್ತಲೇ ತಾವೇ ತಾವಾಗಿ ಹೆಂಡದಂಗಡಿಯ ಕಡೆಗೆ ಹೋಗುತ್ತಿರುತ್ತವೆ. ಹೀಗೆ ಹುಟ್ಟಿದನಂತರ ಅಭ್ಯಸಿಸಿದ ಸ್ವಭಾವಗಳೇ ಇಷ್ಟು ಬಲವತ್ತರವಾಗಿರುವಾಗ ಹುಟ್ಟಿನಿಂದಲೇ ಬಂದ ಸ್ವಭಾವಗಳು ಮನುಷ್ಯನನ್ನು ಕರ್ಮದಲ್ಲಿ ಬಂಧಿಸುತ್ತವೆಯೆಂಬುದರಲ್ಲಿ ಸಂಶಯವೇ ಇಲ್ಲ.

'ಸ್ವಭಾವಸ್ತು ಪ್ರವರ್ತತೇ' 'ಸ್ವಭಾವೋ ಬಲವತ್ತರಃ' ಎಂಬಂತೆ ಸ್ವಭಾವವೇ ಎಲ್ಲ ಕರ್ಮಗಳನ್ನೂ ಮಾಡಿಸುತ್ತದೆಯೇ ಹೊರತು, ಜೀವನು ಯಾವಾಗಲೂ ಅಸ್ವತಂತ್ರನೇ. ತನ್ನ ಸ್ವಭಾವಕ್ಕೆ ವಿರುದ್ಧವಾಗಿ ಯಾವ ಪ್ರತಿಜ್ಞೆಮಾಡಿದರೂ ಅದು ನಡೆಯುವುದಿಲ್ಲ. ಅವನ ಸ್ವಭಾವಗುಣವು ಅವನ ಪ್ರತಿಜ್ಞೆಯನ್ನು ಮುರಿದುಹಾಕಿಬಿಡುತ್ತದೆ.

ಅವಶ ಎಂಬುದಕ್ಕೆ ಸ್ವತಂತ್ರ ಎಂಬ ಅರ್ಥವನ್ನೂ ಹೇಳಬಹುದು. ಹಾಗೆ ಅರ್ಥಮಾಡುವಾಗ 'ಅಪಿ' ಶಬ್ದದ ಅರ್ಥಸ್ವಾರಸ್ಯವೂ ಸಿಕ್ಕುತ್ತದೆ. ಆಗ ಅವಶಃ ಅಪಿ ಎಂದರೆ ಸ್ವತಂತ್ರನಾಗಿದ್ದರೂ ಕೂಡ ಎಂದು ಹೇಳಬೇಕಾಗುತ್ತದೆ. ತನ್ನ ಸ್ವಭಾವಜನ್ಯವಾದ ಕರ್ಮದಿಂದ ಮನುಷ್ಯನು ಬಂಧಿತನಾಗುತ್ತಾನೆ. ಸ್ವಭಾವವು ಅವನಿಂದ ಒಂದು ಕರ್ಮವನ್ನು ಮಾಡಿಸಲು ಸಿದ್ಧವಾಗಿರುವಾಗ, ಅಜ್ಞಾನದಿಂದ ಅಥವಾ ಸ್ವಭಾವವನ್ನು ಮೀರಿ ನಡೆಯುವೆನೆಂಬ ಭ್ರಾಂತಿಯಿಂದ, ಆ ಕರ್ಮವನ್ನು ಮಾಡಲು ಅವನು ಇಚ್ಛಿಸದೆಯೂ ಇರಬಹುದು. ಆ ಸ್ವಭಾವಕ್ಕೆ ವಶನಾಗದೆಯೂ ಇರಬಹುದು. ಹಾಗೆ ವಶನಾಗದೇ ಇದ್ದರೂ ಕೂಡ ಅವನ ಸ್ವಭಾವವನ್ನು ಅತಿಕ್ರಮಿಸಿಯೇ ಅವನು ನಡೆಯುವ ಸಾಮರ್ಥ್ಯವನ್ನು ಹೊಂದಿದ್ದರೂ ಸಹ ಆ ಕೆಲಸವನ್ನು ಅವನು ಮಾಡಿಯೇ ತೀರುವನು. ದೈವವು ಇಚ್ಛಿಪಟ್ಟರೆ ಅವನ ಹತ್ತಿರ ಆ ಕೆಲಸವನ್ನು ಮಾಡಿಸಿಬಿಡುತ್ತದೆ.

ಒಂದು ಕರ್ಮವು ನಡೆಯಬೇಕಾದರೆ ಐದು ಕಾರಣಗಳೆಂದು ಈ ಹಿಂದೆಯೇ ಶ್ರೀಕೃಷ್ಣನು ಹೇಳಿದ್ದಾನೆ. ಅಧಿಷ್ಠಾನಂ.. ..ಪಞ್ಚಮಮ್ ॥

ಆದುದರಿಂದ ಒಂದು ಕರ್ಮವು ತನ್ನ ಸ್ವಭಾವಜವಾದ ಕರ್ಮವಾಗಿರುವಾಗ ಆ ಕರ್ಮವನ್ನು ಮಾಡಬೇಕಾದ ಕಾಲವು ಸನ್ನಿಹಿತವಾಗಿರುವಾಗ ಅದನ್ನು ಮಾಡುವುದಿಲ್ಲವೆಂದು ಹೇಳಬಾರದು. ಹಾಗೆ ಹೇಳುವುದು ಕೇವಲ ಭ್ರಾಂತಿ. ನಾವು ಸುಮ್ಮನಿದ್ದರೂ ನಮ್ಮ ಸ್ವಭಾವ ಮತ್ತು ಐದನೆಯದಾದ ದೈವ ಆ ಕರ್ಮವನ್ನು ನಮಗೆ ಇಚ್ಛೆಯಿಲ್ಲದಿದ್ದರೂ ನಮ್ಮಿಂದಲೇ ಮಾಡಿಸಿಬಿಡುತ್ತದೆ.)

o o o

ಏಕೆಂದರೆ : ನಿನಗೆ ಸಹಜವಾದ ಶೌರ್ಯವೇ ಮುಂತಾದ ಹಿಂದೆ ಹೇಳಿದ ಕರ್ಮಗಳಿಂದ ನಿಶ್ಚಯವಾಗಿ ಕಟ್ಟಿಹಾಕಲ್ಪಟ್ಟಿರುವ ನೀನು ಅವಿವೇಕದಿಂದ ಯಾವುದನ್ನು ಮಾಡಲು ಬಯಸುತ್ತಿಲ್ಲವೋ ಅದೇ ಕರ್ಮವನ್ನು ಪರವಶನಾಗಿ ನೀನು ಮಾಡಿಯೇಮಾಡುವೆ. (ಶಂ. ಭಾ.)

ಕ್ಷತ್ರಿಯನಿಗೆ ಸ್ವಭಾವಜವಾದ ಕರ್ಮವು ಶೌರ್ಯ. ನಿನಗೆ ಸ್ವಭಾವಜವಾಗಿರುವ ಶೌರ್ಯವೆಂಬ ಸ್ವಕರ್ಮದಿಂದ ನೀನು ಬದ್ಧನಾಗಿರುವೆ. ಅದರಿಂದಲೇ ನೀನು ಪರವಶನು. ಅಜ್ಞಾನದಿಂದ ಯಾವುದನ್ನು ನೀನು ಈಗ ಮಾಡಲು ಬಯಸುತ್ತಿಲ್ಲವೋ ಆ ಯುದ್ಧವನ್ನು–ಶತ್ರುಗಳ ಧರ್ಷಣೆಯನ್ನು ಸಹಿಸಲಾರದೇ–ನೀನಾಗಿಯೇ ಮಾಡುವೆ. (ರಾ. ಭಾ.)

**ಸ್ವಭಾವಜೇನ** = ಸಂಸ್ಕಾರದಿಂದುಂಟಾದ **ಮೋಹಾತ್** = ಬಂಧುಸ್ನೇಹದಿಂದ. (ಮ. ಟೀಕಾ.)

**ಓಂ ಈಶ್ವರಃ ಸರ್ವಭೂತಾನಾಂ ಹೃದ್ದೇಶೇಽರ್ಜುನ ತಿಷ್ಠತಿ ।**
**ಭ್ರಾಮಯನ್ಸರ್ವಭೂತಾನಿ ಯನ್ತ್ರಾರೂಢಾನಿ ಮಾಯಯಾ ॥**

ಅರ್ಜುನ! ಈಶ್ವರನು ದೇಹಯಂತ್ರವನ್ನೇರಿರುವ ಎಲ್ಲ ಭೂತಗಳನ್ನೂ ಮಾಯೆಯಿಂದ ತಿರುಗಿಸುತ್ತಾ, ಎಲ್ಲ ಪ್ರಾಣಿಗಳ ಹೃದಯಪ್ರದೇಶದಲ್ಲಿ ಇರುತ್ತಾನೆ.

* * *

(ಗೀತೆಯಲ್ಲಿ ಬರುವ ಆತ್ಮ, ಪರಬ್ರಹ್ಮ, ಪರಮಾತ್ಮಾ, ಬ್ರಹ್ಮ, ಭಗವಂತ–ಈ ಶಬ್ದಗಳೆಲ್ಲವೂ ಈಶ್ವರಶಬ್ದದ ಪರ್ಯಾಯಪದಗಳೇ ಆಗಿವೆ.

**ಸರ್ವಭೂತಸ್ಥಮಾತ್ಮಾನಂ**–ಎನ್ನುವಾಗ ಆತ್ಮಶಬ್ದದಿಂದ ಇಲ್ಲಿ ಹೇಳಿರುವ ಈಶ್ವರನನ್ನು ಕರೆಯಲಾಗಿದೆ.

**ಸರ್ವಭೂತಾನಾಂ**–ಎಂಬ ಶಬ್ದವನ್ನು ದೇಹಲೀದೀಪನ್ಯಾಯದಂತೆ ಎರಡು ಕಡೆಗಳಿಗೂ ತೆಗೆದುಕೊಳ್ಳಬಹುದಾಗಿದೆ.

**ಸರ್ವಭೂತಾನಾಂ ಈಶ್ವರಃ ಸರ್ವಭೂತಾನಾಂ ಹೃದ್ದೇಶೇ ತಿಷ್ಠತಿ**= ಸರ್ವಭೂತಗಳಿಗೂ–ಎಲ್ಲ ಪ್ರಾಣಿಗಳಿಗೂ ಈಶ್ವರನಾದವನು, ಎಲ್ಲ ಪ್ರಾಣಿಗಳ ಹೃದಯಪ್ರದೇಶದಲ್ಲಿ (ಹೃದಯಗುಹೆಯಲ್ಲಿ) ಇದ್ದಾನೆ. ಬ್ರಹ್ಮ ದಿಂದ ಹಿಡಿದು ಸ್ತಂಬಪರ್ಯಂತವಾಗಿ ಎಲ್ಲದರಲ್ಲಿಯೂ ಇದ್ದಾನೆ. ಶರೀರದ ಮಧ್ಯದಲ್ಲಿ ಪರಮಪುರುಷನಿದ್ದಾನೆಂದು ಕಠೋಪನಿಷತ್ತು ಹೇಳುತ್ತದೆ.

**ಅಙ್ಗುಷ್ಠಮಾತ್ರಃ ಪುರುಷೋ ಮಧ್ಯ ಆತ್ಮನಿ ತಿಷ್ಠತಿ ।**
**ಈಶಾನೋ ಭೂತಭವ್ಯಸ್ಯ ನ ತತೋ ವಿಜುಗುಪ್ಸತೇ ॥**
**ಏತದ್ವೈತತ್** ೨-೪-೧೨

ಅಂಗುಷ್ಠಮಾತ್ರಪರಿಮಾಣವುಳ್ಳ ಪುರುಷನು ಶರೀರಮಧ್ಯದಲ್ಲಿ ಇರು ತ್ತಾನೆ. ಅವನು ಭೂತ-ಭವಿಷ್ಯಗಳಿಗೆ ಒಡೆಯನು. ಇದನ್ನು ತಿಳಿದವನು ಜಗತ್ತಿನ ಬಗೆಗೆ ಜುಗುಪ್ಸೆಪಡುವುದಿಲ್ಲ. ಇದೇ ಅದು.

**ಯನ್ತ್ರಾರೂಢಾನಿ ಸರ್ವಭೂತಾನಿ ಮಾಯಯಾ ಭ್ರಾಮಯನ್** = ಯಂತ್ರಾರೂಢವಾಗಿರುವ ಎಂದರೆ ಶರೀರವೆಂಬ ಅಥವಾ ಪ್ರಕೃತಿಯೆಂಬ ಯಂತ್ರದಲ್ಲಿ ಸೇರಿಕೊಂಡಿರುವ ಸರ್ವಪ್ರಾಣಿಗಳನ್ನೂ ಮಾಯಾಶಕ್ತಿಯಿಂದ ತಿರುಗಿಸುತ್ತಾ, ಎಲ್ಲ ಪ್ರಾಣಿಗಳ ಹೃದಯಗಳಲ್ಲಿಯೂ ಈಶ್ವರನಿದ್ದಾನೆ. ದೇಹ ವನ್ನು ಒಂದು ಯಂತ್ರಕ್ಕೆ ಹೋಲಿಸುತ್ತಾರೆ. ಅತ್ಯದ್ಭುತವಾದ ಪ್ರಾಣಿಮಾತ್ರ ದಿಂದ ತಯಾರಿಸಲಿಕ್ಕಾಗದ ಯಂತ್ರವದು. ಅದನ್ನೇರಿರುವ ಎಲ್ಲ ಶರೀರ ಗಳನ್ನೂ ಭಗವಂತನು ಮಾಯಾಶಕ್ತಿಯಿಂದ ಆಡಿಸುತ್ತಿದ್ದಾನೆ. ಅಥವಾ ಪ್ರಕೃತಿ ಎಂಬ ಯಂತ್ರದಲ್ಲಿ ಆರೂಢವಾಗಿ ಕುಳಿತಿರುವ ಪ್ರಾಣಿಗಳನ್ನು ಮಾಯಾ ಶಕ್ತಿಯಿಂದ ಆಡಿಸುತ್ತಾನೆ–ಎಂದೂ ಆಗುತ್ತದೆ. ಗೊಂಬೆಗಳನ್ನಾಡಿಸುವ ಸೂತ್ರಧಾರನು ತೆರೆಯ ಮರೆಯಲ್ಲಿ ಕುಳಿತು, ಯಂತ್ರಗಳ ಮೇಲೆ ಕುಳಿತಿ ರುವ ಗೊಂಬೆಗಳನ್ನು ಸೂತ್ರದಿಂದ ತಿರುಗಿಸುವಂತೆ–ಈಶ್ವರನು ಹೃದಯ ಗುಹೆಯಲ್ಲಿ ಕುಳಿತು ಮಾಯೆಯಿಂದ ಪ್ರಾಣಿಗಳನ್ನು ತಿರುಗಿಸುತ್ತಿರುತ್ತಾನೆ

ಅಥವಾ ತಿರುಗುವಂತೆ ಮಾಡುತ್ತಾನೆ. ಜಗದೇಕಸೂತ್ರಧಾರನೆಂದೇ ಪರಮಾತ್ಮನಿಗೆ ಹೆಸರು.

**ಮಾಯಯಾ ಭ್ರಾಮಯನ್** = ಈಶ್ವರನು ಹೃದಯಗುಹೆಯಲ್ಲಿ ಕುಳಿತಿರುತ್ತಾನೆಯೇ ಹೊರತು ಮತ್ತೇನೂ ಮಾಡಲು ಹೋಗುವುದಿಲ್ಲ. ಆದರೆ ಅವನ ಮಾಯೆಯೇ ಎಲ್ಲವನ್ನೂ ಮಾಡಿಸುತ್ತದೆ. ಪ್ರಾಣಿಗಳ ಮೂಲಕ ನಡೆಯುವ ಎಲ್ಲ ಕರ್ಮಗಳಿಗೂ ಈಶ್ವರನ ಉಪಸ್ಥಿತಿಯಿರುವುದೇ ಸಾಕು. ಉಳಿದ ಕರ್ಮಗಳನ್ನು ಅವನ ಸಂಕಲ್ಪಮಾತ್ರದಿಂದಲೇ ಮಾಯೆಯು ಗುಣಗಳ ಮೂಲಕವಾಗಿ ಮಾಡಿಬಿಡುತ್ತದೆ. ಗುಣಗಳೇ ಸ್ವಭಾವ. **ಸ್ವಭಾವಸ್ತು ಪ್ರವರ್ತತೇ** ಗುಣಗಳ ಮೂಲವಾದ ಸ್ವಭಾವಕ್ಕೆ ಅನುಗುಣವಾಗಿ ಇಂದ್ರಿಯಗಳ ಮೂಲಕ ಕರ್ಮಗಳು ನಡೆಯುತ್ತಿರುತ್ತವೆ. ಈಶ್ವರನು ಎಲ್ಲಕ್ಕೂ ಸಾಕ್ಷೀಭೂತನಾಗಿರುತ್ತಾನೆ. ಸೂರ್ಯನು ಹುಟ್ಟಿದಕೂಡಲೇ ಕಮಲಗಳು ಅರಳುತ್ತವೆ. ವಿಶ್ವವು ಎಚ್ಚರಗೊಳ್ಳುತ್ತದೆ. ಪ್ರಾಣಿಗಳು ತಮ್ಮ- ತಮ್ಮ ಕಾರ್ಯಗಳನ್ನು ಪ್ರಾರಂಭಿಸುತ್ತವೆ. ಪ್ರಾಣಿಗಳು ಮಾಡುವ ಕೆಟ್ಟ ಅಥವಾ ಒಳ್ಳೆಯ ಕರ್ಮಗಳಿಗೆ ಸೂರ್ಯನು ಹೊಣೆಯಲ್ಲ. ಆದರೆ ಸೂರ್ಯನ ಸಾನ್ನಿಧ್ಯದಲ್ಲಿ ಎಲ್ಲ ಕರ್ಮಗಳೂ ನಡೆಯುವುದಂತೂ ನಿಜ.

ಸೂರ್ಯನ ಸಾನ್ನಿಧ್ಯವಿಲ್ಲದಿದ್ದರೆ ಪ್ರಾಣಿಗಳು ಒಳ್ಳೆಯ ಅಥವಾ ಕೆಟ್ಟಕರ್ಮಗಳನ್ನು ಮಾಡಲಾರವು. ಅದರಂತೆಯೇ ಚೈತನ್ಯಸ್ವರೂಪಿಯಾದ ಈಶ್ವರನು ಹೃದಯಗುಹೆಯಲ್ಲಿ ಇರದಿದ್ದರೆ ಪ್ರಾಣಿಗಳು ಯಾವ ಕಾರ್ಯವನ್ನೂ ಮಾಡಲಾರವು. ಅವನು ಬೆಳಗುತ್ತಿರುವಷ್ಟು ಕಾಲವೂ ಶರೀರದಲ್ಲಿರುವ ವಿಧ-ವಿಧವಾದ ಅವಯವಗಳು ಅಥವಾ ಇಂದ್ರಿಯಗಳು ತಮ್ಮ-ತಮ್ಮ ಒಳ್ಳೆಯ ಅಥವಾ ಕೆಟ್ಟ ಕೆಲಸಗಳನ್ನು ನಡೆಸುತ್ತಲೇ ಇರುತ್ತವೆ. ಸ್ವಭಾವಾನುಗುಣವಾಗಿ ಆಗುವ ಇಂದ್ರಿಯಗಳ ಒಳ್ಳೆಯ ಅಥವಾ ಕೆಟ್ಟ ಕೆಲಸಗಳನ್ನು ಚಿತ್ಸೂರ್ಯನು ನಿಲ್ಲಿಸಹೋಗುವುದಿಲ್ಲ. ಸೂರ್ಯನಂತೆಯೇ ಸಕಲಕರ್ಮಗಳಿಗೂ ಈಶ್ವರನೂ ಸಾಕ್ಷಿಭೂತನಾಗಿರುತ್ತಾನೆ. ಅವನು ದೇಹದಿಂದ ತನ್ನನ್ನು ಉಪಸಂಹಾರಮಾಡಿಕೊಂಡೊಡನೆಯೇ ಇಂದ್ರಿಯಗಳ ಕರ್ಮಗಳೆಲ್ಲವೂ ನಿಂತುಹೋಗುತ್ತವೆ.

ಹೃದಯಗುಹೆಯಲ್ಲಿರುವ ಈಶ್ವರನು ತಾನು ತಟಸ್ಥನಾಗಿದ್ದು ಅಥವಾ ಸಾಕ್ಷಿಭೂತನಾಗಿದ್ದು ಮಾಯೆಯ ಮೂಲಕ ಎಂದರೆ ಪ್ರಕೃತಿಯ ಮೂಲಕ ಪ್ರಾಣಿಗಳನ್ನು ಮೇಲಕ್ಕೂ-ಕೆಳಕ್ಕೂ ಅಲೆದಾಡಿಸುತ್ತಿರುತ್ತಾನೆ. ಎಂದರೆ ಪ್ರಾಣಿಗಳ ಸ್ವಭಾವಾನುಗುಣವಾಗಿ ಕರ್ಮಗಳು ನಡೆಯುತ್ತಿರುತ್ತವೆ. ಸ್ವಭಾವ ಎಂಬುದೇ ಪ್ರಕೃತಿ ಅಥವಾ ಮಾಯೆ. ಸ್ವಭಾವಾನುಗುಣವಾಗಿ ನಡೆಯುವ ಕರ್ಮಗಳನ್ನು ಪ್ರಾಣಿಯು ತಪ್ಪಿಸಿಕೊಳ್ಳುವುದಕ್ಕಾಗುವುದಿಲ್ಲ. **ಅವಶೋಽಪಿ ಕರಿಷ್ಯಸಿ.**

ನೀನು ಅವುಗಳಿಗೆ ಎಂದರೆ ಸ್ವಭಾವಜನ್ಯವಾದ ಕರ್ಮಗಳಿಗೆ ಬದ್ಧನಾಗಿಲ್ಲ ಎಂದು ಭಾವಿಸಿದರೂ ಸಹ ಆ ಸ್ವಭಾವಜವಾದ ಕರ್ಮಗಳು ನಿನ್ನಿಂದ ಆ ಕರ್ಮವನ್ನು ಮಾಡಿಸಿಯೇ ತೀರುತ್ತವೆ. ಹೀಗೆ ಮಾಡಿಸಲು ಅವುಗಳಿಗಿರುವ ಸಾಮರ್ಥ್ಯವೆಂದರೆ ಪರಮಾತ್ಮನ ಸಾನ್ನಿಧ್ಯ ಮತ್ತು ಸಂಕಲ್ಪಶಕ್ತಿ. ಸಾಕ್ಷಿರೂಪನಾದ ಪರಮಾತ್ಮನ ಸಾನ್ನಿಧ್ಯದಲ್ಲಿ ಸ್ವಭಾವಜನ್ಯವಾದ ಗುಣಗಳು ಆ ಗುಣಗಳಿಗೆ ತಕ್ಕುದಾದ ಕರ್ಮಗಳನ್ನು ಪ್ರಾಣಿಗಳಿಂದ ಮಾಡಿಸುತ್ತಲೇ ಇರುತ್ತವೆ. ಆದುದರಿಂದ ಪ್ರಾಣಿಮಾತ್ರಕ್ಕೆ 'ನನ್ನ ಸ್ವಭಾವಗುಣಕ್ಕೆ ವಿರೋಧವಾದ ಕಾರ್ಯವನ್ನು ಮಾಡುತ್ತೇನೆ' ಎಂದು ಹೇಳುವ ಸ್ವಾತಂತ್ರ್ಯ ವಿಲ್ಲ. ಹಾಗಾದರೆ ಏನು ಮಾಡಬೇಕು? ಎಂಬುದನ್ನು ಶ್ರೀಕೃಷ್ಣನು ಮುಂದಿನ ಶ್ಲೋಕದಲ್ಲಿ ಹೇಳುತ್ತಾನೆ.)

O O O

**ಈಶ್ವರಃ** = ಎಲ್ಲವನ್ನೂ ಶಾಸನಮಾಡುತ್ತಿರುವ ಸ್ವಭಾವವುಳ್ಳ ನಾರಾಯಣ. ಅವನು ಎಲ್ಲ ಪ್ರಾಣಿಗಳ ಹೃದಯದಲ್ಲಿ ಸ್ಥಿತನಾಗಿದ್ದಾನೆ. ಹೇಗೆ ಸ್ಥಿತನಾಗಿದ್ದಾನೆ ಎಂದರೆ ಶರೀರರೂಪವಾದ ಯಂತ್ರವನ್ನು ಏರಿರುವ ಎಲ್ಲ ಪ್ರಾಣಿಗಳನ್ನೂ (ಯಂತ್ರವನ್ನೇರಿರುವ ಮರದ ಗೊಂಬೆಗಳನ್ನು ಹೇಗೋ ಹಾಗೆ) ತನ್ನ ಮಾಯೆಯಿಂದ ತಿರುಗಿಸುತ್ತಾ ಸ್ಥಿತನಾಗಿದ್ದಾನೆ.

ಅರ್ಜುನ! ಎಂದು ಸಂಬೋಧಿಸಲು ಕಾರಣ : ಅವನು ಶುದ್ಧವಾದ ಅಂತರಾತ್ಮಸ್ವಭಾವವುಳ್ಳವನು ; ವಿಶುದ್ಧವಾದ ಅಂತಃಕರಣವುಳ್ಳವನು–ಎಂಬ ಕಾರಣದಿಂದ.

**ಅಹಶ್ಚ ಕೃಷ್ಣಂ ಅಹರರ್ಜುನಂ ಚ (ಋಕ್ ಸಂಹಿತಾ) ೬-೯-೧**
**(ಶಂ. ಭಾ.)**

ಸರ್ವೇಶ್ವರನಾದ ನನ್ನಿಂದ ಎಲ್ಲ ಪ್ರಾಣಿಗಳೂ ತಮ್ಮ ಪೂರ್ವ ಕರ್ಮಾನುಗುಣವಾಗಿ ಪ್ರಕೃತಿಗೆ ತಕ್ಕಂತೆ ನಡೆಯುವಂತೆ ನಿಯಮಿಸಲ್ಪಟ್ಟಿವೆ. ಅದು ಹೇಗೆಂಬುದನ್ನು ಕೇಳು.

ಈಶ್ವರನು ಎಂದರೆ ಎಲ್ಲವನ್ನೂ ನಿಯಮಿಸುವ ವಾಸುದೇವನು. ಎಲ್ಲ ಭೂತಗಳ ಹೃದಯಪ್ರದೇಶದಲ್ಲಿ (ಎಲ್ಲ ಪ್ರವೃತ್ತಿ-ನಿವೃತ್ತಿಗಳಿಗೆ ಮೂಲವಾದ ಜ್ಞಾನವುದಯಿಸುವ ಜಾಗದಲ್ಲಿ) ಇದ್ದಾನೆ. ಏನು ಮಾಡುತ್ತಿದ್ದಾನೆಂದರೆ : ಯಂತ್ರವನ್ನೇರಿರುವ ಎಲ್ಲ ಪ್ರಾಣಿಗಳನ್ನೂ ಮಾಯೆಯಿಂದ ತಿರುಗಿಸುತ್ತಾ, ಪ್ರಕೃತಿ ಎಂಬ ಯಂತ್ರವನ್ನೇರಿರುವ ಎಲ್ಲ ಭೂತಗಳನ್ನೂ ಸತ್ವಾದಿಗುಣ ಮಯವಾದ ತನ್ನ ಮಾಯೆಯಿಂದ ಗುಣಗಳಿಗೆ ಅನುಗುಣವಾಗಿ ತೊಡಗಿಸು ತ್ತಿದ್ದಾನೆ. **ಸರ್ವಸ್ಯ ಚಾಹಂ ಹೃದಿ ಸನ್ನಿವಿಷ್ಟಃ ಮತ್ತಃ ಸ್ಮೃತಿ-ರ್ಜ್ಞಾನಮಪೋಹನಂ ಚ ॥** ೧೫-೧೫

**ಮತ್ತಃ ಸರ್ವಂ ಪ್ರವರ್ತತೇ** ೧೦-೮

ಎಂದು ಹಿಂದೆಯೂ ಹೇಳಿದೆ.

**ಯ ಆತ್ಮನಿ ತಿಷ್ಠನ್**–ಬೃ.-೫-೭-೨೨ ಮುಂತಾದ ಶ್ರುತಿಗಳೂ ಈ ಅಭಿಪ್ರಾಯವನ್ನೇ ಹೇಳುತ್ತವೆ. (ರಾ. ಭಾ.)

**ಯನ್ತ್ರಾರೂಢಾನಿ** = ಶರೀರದಲ್ಲಿರುವ. **ಮಾಯಯಾ** = ಸ್ವರೂಪ ಭೂತವಾದ ಇಚ್ಛೆಯಿಂದ. (ಮ. ಟೀಕಾ.)

**ಓಂ ತಮೇವ ಶರಣಂ ಗಚ್ಛ ಸರ್ವಭಾವೇನ ಭಾರತ ।**
**ತತ್ಪ್ರಸಾದಾತ್ಪರಾಂ ಶಾನ್ತಿಂ ಸ್ಥಾನಂ ಪ್ರಾಪ್ಸ್ಯಸಿ ಶಾಶ್ವತಮ್ ॥೬೨॥**

ಎಲೈ ಭಾರತನೇ! ಸರ್ವಭಾವದಿಂದಲೂ ಆತನನ್ನೇ ಶರಣುಹೊಂದು. ಆತನ ಪ್ರಸಾದದಿಂದ ಪರಮಶಾಂತಿಯನ್ನೂ–ಶಾಶ್ವತವಾದ ಸ್ಥಾನವನ್ನೂ ಪಡೆಯುವೆ.

* * *

(ಈಗಲಾದರೂ ನಿನ್ನನ್ನು ಬಂಧಿಸಿರುವವರು ಯಾರು? ನಿನಗೆ ಶತ್ರು ಗಳು ಯಾರು?–ಎಂಬುದನ್ನು ನೀನು ಅರ್ಥಮಾಡಿಕೊಂಡಿರಬಹುದು. ಈ

ಬಂಧನದಿಂದ ಬಿಡುಗಡೆಯನ್ನು ಹೊಂದಬೇಕಾದರೆ, ನಿನ್ನ ನಿಜಶತ್ರುಗಳಿಂದ ಪಾರಾಗಬೇಕಾದರೆ-**ತಮೇವ ಶರಣಂ ಗಚ್ಛ**= ನಿನ್ನ ಹೃದಯಗುಹೆಯಲ್ಲಿಯೇ ಕುಳಿತಿರುವ ಸಚ್ಚಿದಾನಂದಸ್ವರೂಪಿಯಾದ ಈಶ್ವರನನ್ನೇ ಶರಣುಹೊಂದು, ಅವನಿಗೆ ಶರಣಾಗತನಾಗು. **ಸರ್ವಭಾವೇನ** = ಎಲ್ಲ ಭಾವದಿಂದಲೂ 'ನೀನೇ ತಾಯಿ, ನೀನೇ ತಂದೆ, ನೀನೇ ಗುರು, ನೀನೇ ಹರಿ, ನೀನೇ ಹರ, ನೀನೇ ಬಂಧು, ನೀನೇ ಬಳಗ, ನೀನೇ ಸ್ನೇಹಿತ, ನೀನೇ ಆತ್ಮ, ಎಲ್ಲವೂ ನೀನೇ.' **ನಾನ್ಯಂ ದೈವಂ ನೈವ ಜಾನೇ ನ ಜಾನೇ** ಎಂಬ ಸರ್ವಭಾವದಿಂದ, ಅವ್ಯಭಿಚಾರಿಣೀಭಕ್ತಿಯಿಂದ ಹೃದಯಕಮಲಸ್ಥನಾದ ಈಶ್ವರನನ್ನೇ ಶರಣುಹೊಂದಬೇಕು. **ಮಚ್ಚಿತ್ತಃ ಸತತಂ ಭವ**-ಎಂದು ಅವನೇ ಹೇಳಿರುವಂತೆ ಯಾವಾಗಲೂ ಅವನಲ್ಲಿಯೇ ಮನಸ್ಸನ್ನಿಟ್ಟಿರಬೇಕು. ಸದಾ ಧ್ಯಾನಪರಾಯಣನಾಗಿರಬೇಕು. ಹೀಗೆ ಮಾಡುತ್ತಿದ್ದರೇನಾಗುತ್ತದೆ?

**ತತ್ಪ್ರಸಾದಾತ್ ಪರಾಂ ಶಾನ್ತಿಂ ಸ್ಥಾನಂ ಪ್ರಾಪ್ಸ್ಯಸಿ ಶಾಶ್ವತಮ್ ।**

ಅವನ ಪ್ರಸಾದದಿಂದ. ಆತ್ಮಸಾಕ್ಷಾತ್ಕಾರವೇ ಅವನ ಪ್ರಸಾದ. ಅದರ ದಿವ್ಯಾನುಭವದಿಂದ ಪರಾಶಾಂತಿಯನ್ನು ಹೊಂದುತ್ತೀಯೆ. ಪರಾಶಾಂತಿಯು ಯಾವುದೆಂಬುದನ್ನು ವರ್ಣಿಸುವುದಕ್ಕಾಗುವುದಿಲ್ಲ. ಅದು ಅನುಭವೈಕವೇದ್ಯವಾದುದು. ಆ ಸಮಯದಲ್ಲಿ ಆತ್ಮವು ಪ್ರಸನ್ನವಾಗಿರುತ್ತದೆ. ಆನಂದಮಯವಾಗಿರುತ್ತದೆ. ಆ ಸ್ಥಿತಿಯಲ್ಲಿ ಶೋಕ-ಮೋಹ, ಸುಖ-ದುಃಖಗಳಾವುವೂ ಇರುವುದಿಲ್ಲ. ತೆರೆಗಳಿಲ್ಲದ ಸಮುದ್ರದಂತೆ ಮನಸ್ಸು ಗಂಭೀರವಾಗಿರುತ್ತದೆ. ಆತ್ಮಾನುಭವವಾದನಂತರ **ಸ್ಥಾನಂ ಪ್ರಾಪ್ಸ್ಯಸಿ ಶಾಶ್ವತಮ್** = ಶಾಶ್ವತವಾದ, ನಿತ್ಯವಾದ, ಪರಮಪದವನ್ನು ಪಡೆಯುವೆ.)

o o o

ಸಂಸಾರದ ಎಲ್ಲ ಕ್ಲೇಶಗಳನ್ನೂ ನಾಶಪಡಿಸಿಕೊಳ್ಳುವುದಕ್ಕೋಸ್ಕರ ಸರ್ವಭಾವಗಳಿಂದಲೂ (ಮನಸ್ಸು-ವಾಣಿ-ಶರೀರ) ಎಲ್ಲ ಪ್ರಕಾರಗಳಿಂದಲೂ ಈಶ್ವರನನ್ನೇ ಶರಣುಹೊಂದು. ಅವನ ಅನುಗ್ರಹದಿಂದ ಉತ್ತಮವಾದ ಶಾಂತಿಯನ್ನೂ ಮತ್ತು ಶಾಶ್ವತವಾದ ಸ್ಥಾನವನ್ನೂ ಎಂದರೆ ವಿಷ್ಣುವಿನ ಪರಮನಿತ್ಯವಾದ ಧಾಮವನ್ನು ನೀನು ಹೊಂದುವೆ. (ಶಂ. ಭಾ.)

ಆ ಮಾಯೆಯಿಂದ ನಿವೃತ್ತಿಹೊಂದಲು ಯಾವುದು ಕಾರಣ?-ಎಂಬು

ದನ್ನು ಇಲ್ಲಿ ಹೇಳಲಾಗಿದೆ. ಆದುದರಿಂದ ನೀನು ಆ ಈಶ್ವರನನ್ನೇ ಎಂದರೆ, ಎಲ್ಲವನ್ನೂ ಆಳುವವನಾಗಿ ಆಶ್ರಿತವಾತ್ಸಲ್ಯದಿಂದ ನಿನ್ನ ಸಾರಥ್ಯವನ್ನು ಕೈಗೊಂಡಿರುವ ಅವನನ್ನೇ ಸರ್ವಭಾವದಿಂದಲೂ ಶರಣುಹೊಂದು. ಅನುವರ್ತಿಸು. ಹಾಗಿಲ್ಲದಿದ್ದರೂ ಅವನ ಮಾಯೆಯಿಂದ ಪ್ರೇರಿತನಾಗಿ ಅಜ್ಞಾನಿಯಾದ ನೀನು ಯುದ್ಧಾದಿಗಳನ್ನು ಮಾಡಿಯೇ ಮಾಡಬೇಕಾಗುತ್ತದೆ. ಹಾಗೆ ಮಾಡಿದರೆ ಅದು ಅನಿವಾರ್ಯ. ಆದರೆ ನೀನು ನಾಶಹೊಂದುತ್ತೀಯೆ. ಆದುದರಿಂದ ಅವನು ಹೇಳಿದ ರೀತಿಯಲ್ಲಿ ಯುದ್ಧಮುಂತಾದುವನ್ನು ಮಾಡು. ಹೀಗೆ ಮಾಡುತ್ತಿದ್ದರೆ ನಿನಗೆ ಅವನ ಅನುಗ್ರಹದಿಂದ ಪರಾ ಶಾಂತಿಯು–ಎಲ್ಲ ಕರ್ಮಬಂಧಗಳ ಉಪಶಮನವೂ ಮತ್ತು ಶಾಶ್ವತ ಸ್ಥಾನವೂ ದೊರೆಯುತ್ತದೆ.

ನೂರಾರು ಶ್ರುತಿಗಳು ಕೊಂಡಾಡುವ ಸ್ಥಾನವದು. **ತದ್ವಿಷ್ಣೋಃ ಪರಮಂ ಪದಂ ಸದಾ ಪಶ್ಯನ್ತಿ ಸೂರಯಃ ತೈ. ಸಂ. ತೇಹನಾಕಂ ಮಹಿಮಾನಃ ಸಚನ್ತೇ ಪು. ಸೂ. ಯತ್ರ ಋಷಯಃ ಪ್ರಥಮಜಾಯೇ ಪುರಾಣಾಃ । ಪರೇಣ ನಾಕಂ ನಿಹಿತಂ ಗುಹಾಯಾಮ್ ।**(ಮಹಾನಾ.) **ಯೋ ಅಸ್ಯಾಧ್ಯಕ್ಷಃ ಪರಮೇ ವ್ಯೋಮನ್ । ತೈ. ಬ್ರಾ.-೨-೮-೯ ಅಥ ಯದತಃ ಪರೋ ದಿವ್ಯೋ ಜ್ಯೋತಿರ್ದೀಪ್ಯತೇ । ಛಾಂ. ೩-೧೩-೭ ಸೋಽಧ್ವನಃ ಪಾರಮಾಪ್ನೋತಿ ತದ್ವಿಷ್ಣೋಃ ಪರಮಂ ಪದಮ್ ।** ಕಠ ೩-೯

(ರಾ. ಭಾ.)

ಪ್ರತ್ಯಕ್ಷವಾಗಿ ಎಲ್ಲರ ಹೃದಯಗಳಲ್ಲಿಯೂ ಸಹ ನಾನೇ ಇದ್ದೇನೆ. ನನ್ನನ್ನು ಶರಣುಹೊಂದು ಎಂದು ಹೇಳದೇ ಎಲ್ಲರ ಹೃದಯಗಳಲ್ಲಿಯೂ ಈಶ್ವರನಿದ್ದಾನೆ. ಅವನನ್ನು ಶರಣುಹೊಂದು–ಎಂದು ಪರೋಕ್ಷವಾದ ಮಾತುಗಳನ್ನು ಹೇಳಿರುವುದು ದ್ರೋಣಾಚಾರ್ಯರಿಗೆ ಭೀಮನಾಡುವ ಮಾತಿನಂತೆ (ಭೀಮನು ದ್ರೋಣರೊಡನೆ ಮಾತನಾಡುವಾಗ) **ಅದ್ಯಾರಿಂ ಮನ್ಯತೇ ದ್ರೋಣಃ ಭೀಮಃ ತದ್ವತ್ಕರಿಷ್ಯತಿ ।** ಈಗ ದ್ರೋಣನು ಭೀಮನನ್ನು ಶತ್ರುವಿನಂತೆ ತಿಳಿಯುತ್ತಿದ್ದಾನೆ. ಆದುದರಿಂದ ಭೀಮನು ಶತ್ರುವಿನಂತೆ ಕೆಲಸಮಾಡುತ್ತಾನೆ. ಎಂಬಲ್ಲಿ ನಾನು ಎನ್ನುವುದರ ಬದಲು 'ಭೀಮನು' ಎಂದು ಪರೋಕ್ಷವಾಗಿ ಮಾತನಾಡಿದ್ದಾನೆ. ಅದರಂತೆಯೇ ಈ ಮಾತು ಎಂದು ಗ್ರಹಿಸಬೇಕು. (ಮ. ಭಾ.)

**ಓಂ ಇತಿ ತೇ ಜ್ಞಾನಮಾಖ್ಯಾತಂ ಗುಹ್ಯಾದ್ಗುಹ್ಯತರಂ ಮಯಾ ।**
**ವಿಮೃಶ್ಯೈತದಶೇಷೇಣ ಯಥೇಚ್ಛಸಿ ತಥಾ ಕುರು ॥೬೩॥**

ಹೀಗೆ ಗೋಪ್ಯಕ್ಕಿಂತಲೂ ಗೋಪ್ಯವಾಗಿರುವ ಜ್ಞಾನವು ನನ್ನಿಂದ ಹೇಳಲ್ಪಟ್ಟಿರುತ್ತದೆ. ಇದನ್ನು ಸಂಪೂರ್ಣವಾಗಿ ವಿಮರ್ಶೆಮಾಡಿ ನಿನಗೆ ಹೇಗೆ ಇಷ್ಟವಾಗುವುದೋ ಹಾಗೆ ಮಾಡು.

* * *

(ಶ್ರೀಕೃಷ್ಣನು ಅರ್ಜುನನಿಗೆ–'ಅರ್ಜುನ! ಗುಟ್ಟಿಗಿಂತಲೂ ಅತಿಗುಟ್ಟಿನ ದಾದ ಅತ್ಯಂತರಹಸ್ಯವಾದುದನ್ನು ನಿನಗೆ ಹೇಳಿದ್ದೇನೆ'–ಎನ್ನುತ್ತಾನೆ. ಗುಹ್ಯ ಎಂದರೆ ಗುಹೆಯಲ್ಲಿ ಅಡಗಿರುವುದು. ಗೂಢವಾಗಿರುವುದು. ಸಾಮಾನ್ಯ ಬುದ್ಧಿಗಳಿಗೆ ಎಟುಕದೇ ಬುದ್ಧಿಗುಹೆಯಲ್ಲಿ ಪ್ರವೇಶಮಾಡುವ ವಿಜ್ಞಾನಿಗಳಿಗೆ ಮಾತ್ರವೇ ಲಭ್ಯವಾಗುವ ಪದಾರ್ಥ. ಅದನ್ನು ಪಡೆದ ಬಳಿಕವೂ ಅನಧಿಕಾರಿ ಗಳಿಗೆ ದೊರೆಯದಂತೆ ಸಂರಕ್ಷಿಸಬೇಕಾದ ಪದಾರ್ಥವೂ ಗುಹ್ಯ. ಅಂತಹ ಬಹುಮೌಲ್ಯಪದಾರ್ಥಗಳು ತತ್ತ್ವಗಳು. ಅವುಗಳಲ್ಲಿಯೂ ಶ್ರೇಷ್ಠತಮವೂ ಆದುದರಿಂದ ಗೋಪ್ಯತಮವೂ ಆಗಿರುವುದು. ಭಗವಂತನು ಗೀತಾಜ್ಞಾನ ಮತ್ತು ಆತ್ಮಜ್ಞಾನವಿಷಯಗಳ ಬಗೆಗೆ ಹೇಳಬೇಕಾದುದನ್ನು ಅಶೇಷವಾಗಿ ಹೇಳಿದ್ದಾನೆ. ಒಂದಿಷ್ಟೂ ಬಾಕಿ ಉಳಿಸಿಲ್ಲ. ಎಷ್ಟು ಬಗೆಯಿಂದ ಹೇಗೆ ಹೇಗೆ ಹೇಳಬೇಕೋ ಹಾಗೆಲ್ಲಾ ಹೇಳಿಬಿಟ್ಟಿದ್ದಾನೆ. ಮುಂದೆ ಅನುಗೀತೆಯಲ್ಲೂ ಭಗವಂತನು ಈ ಗೀತಾಶಾಸ್ತ್ರದ ಬಗೆಗೆ ಪರಮಪದವನ್ನು ಹೊಂದುವುದಕ್ಕೆ ಅತ್ಯಂತಸಮರ್ಥವೂ, ಪರಿಪೂರ್ಣವೂ ಆದ ಶಾಸ್ತ್ರ ಎಂಬ ಅಭಿಪ್ರಾಯವನ್ನು ಹೇಳುತ್ತಾನೆ. **ಸ ಹಿ ಧರ್ಮಃ ಸುಪರ್ಯಾಪ್ತಃ ಬ್ರಹ್ಮಣಃ ಪದವೇದನೇ ।**

ಆ ಅಧ್ಯಾತ್ಮಶಾಸ್ತ್ರವನ್ನು ಉಪದೇಶಿಸಲು ಸಮರ್ಥನಾದ, ಅಧಿಕಾರಿ ಯಾದ, ಸರ್ವೇಶ್ವರನಾದ ಸರ್ವಜ್ಞನಾದ ನಾನೇ ನಿನಗೆ ಹೇಳಿದ್ದೇನೆ.

**ಅಶೇಷೇಣ** = ಎಂಬ ಶಬ್ದವನ್ನು ಎರಡು ಕಡೆಗೂ ಬಳಸಿಕೊಳ್ಳ ಬಹುದು. **ಅಶೇಷೇಣ ಮಯಾ ಆಖ್ಯಾತಂ, ವಿಮೃಶ್ಯೈತದಶೇಷೇಣ ಯಥೇಚ್ಛಸಿ ತಥಾ ಕುರು** = ನಾನು ಹೇಳಿರುವ ಈ ಗುಹ್ಯಾದ್ಗುಹ್ಯತರವಾದ ಜ್ಞಾನವನ್ನು ಚೆನ್ನಾಗಿ ವಿಮರ್ಶಿಸಿ ನಿನಗೆ ಹೇಗೆ ಇಚ್ಛೆಯಾಗುವುದೋ ಹಾಗೆ

ಮಾಡು. **'ಯಥೇಚ್ಛಸಿ'** ಯಾವ ರೀತಿಯಲ್ಲಿ ಇಚ್ಛಿಸುವೆಯೋ ಎಂದು ಶ್ರೀಕೃಷ್ಣನು ಹೇಳಿದರೆ ತನ್ನ ಇಚ್ಛೆಯಂತೆ ಸ್ವಾತಂತ್ರ್ಯದಿಂದ ನಡೆಯಲು ಅರ್ಜುನನಿಗೆ ಸಾಧ್ಯವಾಗುವುದೇ? ಹಿಂದೆ ೫೯ನೆಯ ಶ್ಲೋಕದಲ್ಲಿ **ಪ್ರಕೃತಿ ಸ್ತ್ವಾಂ ನಿಯೋಕ್ಷ್ಯತಿ** ಎಂದು ಹೇಳಿದ್ದಾನೆ. ಕರ್ಮಕ್ಕೆ ಐದು ಕಾರಣಗಳಿವೆ ಯೆಂದೂ ಹೇಳಿದ್ದಾನೆ. ೬೧ನೆಯ ಶ್ಲೋಕದಲ್ಲಿ ಈಶ್ವರನೇ ಹೃದಯಗುಹೆ ಯಲ್ಲಿದ್ದಾನೆಂದೂ, ಮಾಯೆಯಿಂದ ಸರ್ವಪ್ರಾಣಿಗಳನ್ನೂ ಸೂತ್ರದಗೊಂಬೆ ಗಳಂತೆ ತಿರುಗಿಸುತ್ತಾನೆಂದೂ ಹೇಳಿದ್ದಾನೆ. ೬೨ನೆಯ ಶ್ಲೋಕದಲ್ಲಿ **ತಮೇವ ಶರಣಂ ಗಚ್ಛ**–ಎಂದು ಆಜ್ಞಾರೂಪವಾದ ಮಾತನ್ನೂ ಹೇಳಿದ್ದಾನೆ. ಪುನಃ ೬೫ನೆಯ ಶ್ಲೋಕದಲ್ಲಿ **ಮನ್ಮನಾ ಭವ ಮದ್ಭಕ್ತ**–ಎಂದು ಪುನಃ ಉಪ ದೇಶನೀಡಿದ್ದಾನೆ. ಹೀಗಿರುವಾಗ ಈ ಶ್ಲೋಕದ ಮೂಲಕ ಅರ್ಜುನನಿಗೆ ವಿಚಾರಸ್ವಾತಂತ್ರ್ಯವನ್ನು ಕೊಟ್ಟುಬಿಟ್ಟನೇ? ಹಾಗೇನಾದರೂ ಕೊಟ್ಟಿದ್ದರೆ ಅವನು ವಿಮರ್ಶಿಸಿ ಇತ್ಯರ್ಥಪಡಿಸುವುದರೊಳಗಾಗಿಯೇ **ಮನ್ಮನಾ ಭವ** ಎಂದು ಸಲಹೆ ನೀಡಿದ್ದೇಕೆ?–ಎಂದು ಕೆಲವರ ಪ್ರಶ್ನೆಯಿದೆ. ಇದಕ್ಕೆ ಕೆಲವರು : ಶ್ರೀಕೃಷ್ಣನು ಈ ಮಾತನ್ನು ಹೇಳಿರುವುದರಿಂದ ಅವನು ಧರ್ಮದ ವಿಷಯ ದಲ್ಲಿ ಮಹಾ ಉದಾರಿ. ಏಕೆಂದರೆ ತನ್ನ ಧರ್ಮವನ್ನು ಅರ್ಜುನನ ಮೇಲೆ ಬಲಾತ್ಕಾರವಾಗಿ ಹೊರಿಸದೇ ವಿಮರ್ಶೆಮಾಡಲು ಅವಕಾಶಕೊಟ್ಟ ನಲ್ಲವೇ?–ಎಂದು ಕೆಲವರು ವ್ಯಾಖ್ಯಾನಿಸುತ್ತಾರೆ. ಅರ್ಜುನನ ಉತ್ತರವನ್ನು ನಿರೀಕ್ಷಿಸದೇ ಪುನಃ ಹಿಂದಿನಂತೆಯೇ ಉಪದೇಶವನ್ನು ಪ್ರಾರಂಭಿಸಿದ್ದು ಈ ಅಭಿಪ್ರಾಯಕ್ಕೆ ವಿರೋಧವಾಗಿದೆ.

ಶ್ರೀಕೃಷ್ಣನು **ಯಥೇಚ್ಛಸಿ ತಥಾ ಕುರು**–ಎಂದು ಹೇಳಿರುವುದನ್ನು ಸ್ವಚ್ಛಂದಪ್ರವೃತ್ತಿಗೆ ಅರ್ಜುನನಿಗೆ ಅನುಮತಿಯನ್ನು ನೀಡಿದ್ದಾನೆ ಎಂದಾಗಲೀ, ಜನತಂತ್ರಪ್ರಜಾಪ್ರಭುತ್ವವಾದಿಗಳಾದ ರಾಜಕಾರಣಪಟುಗಳು ಹೇಳುವ ವಿಚಾರಸ್ವಾತಂತ್ರ್ಯ ಎಂಬ ಸಾಮಾನ್ಯವಾದ ಅರ್ಥವನ್ನಾಗಲೀ ಗ್ರಹಿಸಬಾರದು. ಅನುಭವದಿಂದ ತಿಳಿದುಬಂದ ವಿಷಯವನ್ನು ಬೌದ್ಧಿಕವಾಗಿಯೂ ಮನದಟ್ಟು ಮಾಡಿಕೊಂಡು ಆ ಹಿನ್ನೆಲೆಯಲ್ಲಿ ನಡೆ–ಎಂಬ ಜ್ಞಾನಿಯ ಉಪದೇಶವೆಂದು ತಿಳಿಯಬೇಕು. ಗೀತೆಯು ಅನುಭವಶಾಸ್ತ್ರವಾಗಿರುವಂತೆಯೇ ವಿಚಾರ ಶಾಸ್ತ್ರವೂ ಆಗಿದೆಯೆಂಬುದನ್ನು ಇಲ್ಲಿ ನಾವು ಮನಗಾಣಬೇಕು. ಸತ್ಯಾರ್ಥ

ವನ್ನು ವಿಮರ್ಶೆಯಿಂದಲೂ ಸ್ಥಿರಪಡಿಸಿಕೊಳ್ಳಬೇಕು–ಎಂಬುದು ಜ್ಞಾನಿಗಳ ಅಭಿಪ್ರಾಯ. **ಯೇ ತತ್ರ ಬ್ರಾಹ್ಮಣಾಃ ಸಂಮರ್ಶಿನಃ । ಯಸ್ತರ್ಕೇಣಾನುಸಂಧತ್ತೇ ಸ ಧರ್ಮಂ ವೇದ ನೇತರಃ** ಎಂಬ ಶಾಸ್ತ್ರವಚನಗಳೂ ಇದನ್ನೇ ಹೇಳುತ್ತವೆ. ಆದುದರಿಂದ ತಾನು ಹೇಳಿದ ಮಾತುಗಳನ್ನು ವಿಮರ್ಶೆ-ವಿಚಾರಗಳೊಡನೆ ತೆಗೆದುಕೊಳ್ಳಬೇಕೆಂದು ಹೇಳಿರುವುದು ವಿವೇಕದ ಮಾತಾಗಿದೆ. ಅನುಭವಕ್ಕೆ ಬಂದ ವಿಷಯವನ್ನು ವಿಮರ್ಶೆಯಿಂದ ಸ್ಥಿರಪಡಿಸಿಕೊಂಡಾದ ಬಳಿಕ ಉಂಟಾಗುವ ಇಷ್ಟವು ವಿವೇಕಪೂರ್ವಕವಾದ ಇಷ್ಟವೇ ಆಗಿರುತ್ತದೆ–ಎಂಬ ಧೈರ್ಯದಿಂದ ಜ್ಞಾನಿಯು ಶಿಷ್ಯನಿಗೆ ಹೇಳುವ ಮಾತು ಇದಾಗಿದೆ–ಎಂದು ತಿಳಿಯಬೇಕು. ಇದು ವಿವೇಕಿಗೆ ಕೊಟ್ಟಿರುವ, ಸತ್ಯಕ್ಕೆ ಪರತಂತ್ರವಾಗಿರುವ ಸ್ವಾತಂತ್ರ್ಯವನ್ನು ನಿನ್ನ ಇಷ್ಟಬಂದಂತೆ ಮಾಡು ಎಂದು ಹೇಳಿದನಂತರವೂ ಭಗವಂತನು ಅತ್ಯಂತವಿವೇಕಪೂರ್ಣವಾದ ವಾತ್ಸಲ್ಯದಿಂದ ಅರ್ಜುನನಿಗೆ ಹಿತಕರವಾದುದನ್ನು ಮುಂದುವರಿಸುವುದೂ ಸಹಜವಾಗಿದೆ.

ಶ್ರೀಕೃಷ್ಣನು ಅರ್ಜುನನಿಗೆ ಎಲ್ಲ ವಿಷಯಗಳನ್ನೂ ಸಮಗ್ರವಾಗಿ ಹೇಳಿರುವನು. ಶ್ರೀಕೃಷ್ಣನು ಹೇಳಿರುವ ರೀತಿಯಲ್ಲಿಯೇ ತಂದೆಯಾದವನು ಮಗನಿಗೂ ಸಹ ಬುದ್ಧಿವಾದವನ್ನು ಹೇಳುತ್ತಾನೆ. ಮಾತಿನ ಮಧ್ಯದಲ್ಲಿ–'ಇರುವ ವಿಷಯವನ್ನು ನಾನು ಹೇಳಿದ್ದೇನೆ. ನೀನೇ ಯೋಚಿಸಿ ಹೇಗೆ ತೋರುತ್ತದೆಯೋ ಹಾಗೆ ಮಾಡು'–ಎಂದು ಹೇಳಿದನಂತರವೂ ಮಗನ ಹಿತಕಾಮನಾದ ತಂದೆಯು–'ಈ ಮಾರ್ಗವು ಬಹಳ ಶ್ರೇಷ್ಠವಾದುದು. ದೋಷರಹಿತವಾದುದು'–ಮುಂತಾಗಿ ಮಾತನ್ನು ಮುಂದುವರಿಸಿ ಹೇಳುವುದಿಲ್ಲವೇ? ಆದುದರಿಂದ ಗುರು-ಶಿಷ್ಯರ ಸಂವಾದದಲ್ಲಿ, ತಂದೆ-ಮಕ್ಕಳ ಸಂವಾದದಲ್ಲಿ ಇಂತಹ ಮಾತುಗಳು ಬರುವುದು ಸ್ವಾಭಾವಿಕ. ಆದುದರಿಂದಲೇ ಶ್ರೀಕೃಷ್ಣನು ತನ್ನ ಉಪದೇಶವನ್ನು ಮುಂದುವರಿಸಿಕೊಂಡೇ ಹೋಗುತ್ತಾನೆ.

ಶ್ರೀತಿಲಕರ ನಿರೂಪಣೆಯು ಹೀಗಿದೆ :

ಈ ಶ್ಲೋಕದಲ್ಲಿ 'ಆಮೇಲೆ ನಿನ್ನ ಮನಸ್ಸಿಗೆ ಬಂದಂತೆ ಮಾಡು' ಎಂದು ಭಗವಂತನು ಹೇಳಿದರೂ ಅದರ ಅರ್ಥವು ಬಹುಗಹನವಾಗಿದೆ. ಜ್ಞಾನದಿಂದಾಗಲೀ, ಭಕ್ತಿಯಿಂದಾಗಲೀ–ಬುದ್ಧಿಯು ಸಾಮ್ಯಾವಸ್ಥೆಯನ್ನೈದಿತೆಂದರೆ

ದುರಿಚ್ಛೆಯು ನಿಃಶೇಷವಾಗಿ ಇಲ್ಲದಂತಾಗುವುದು. ಅಂತಹ ಜ್ಞಾನಿಗೆ ಕೊಟ್ಟ ಇಚ್ಛಾಸ್ವಾತಂತ್ರ್ಯದ ಮೂಲಕ ಅವನಿಗಾಗಲೀ, ಜಗತ್ತಿಗಾಗಲೀ ಅಪಾಯವಾಗುವ ಭೀತಿಯಿಲ್ಲ. ಆದುದರಿಂದ ಈ ಜ್ಞಾನವನ್ನು ನೀನು ಸಂಪೂರ್ಣವಾಗಿ ವಿಮರ್ಶಿಸಿಕೊಂಡೆಯಾದರೆ ನೀನು ಸ್ವಯಂಪ್ರಕಾಶನಾಗುವೆ. ಆಮೇಲೆ (ಅದಕ್ಕೆ ಮುಂಚಿತವಾಗಿ ಅಲ್ಲ.) ನೀನು ಸ್ವೇಚ್ಛೆಯಿಂದ ಮಾಡಿದ ಕರ್ಮವೇ ಧರ್ಮ್ಯವೂ ಪ್ರಮಾಣವೂ ಆಗುವುದು ಮತ್ತು ಈ ಪ್ರಕಾರವಾಗಿದ್ದ ಸ್ಥಿತಪ್ರಜ್ಞನ ಅವಸ್ಥೆಯು ನಿನಗೆ ಪ್ರಾಪ್ತವಾದನಂತರ ನಿನ್ನ ಇಚ್ಛೆಯನ್ನು ನಿರೋಧಿಸುವ ಅವಶ್ಯಕತೆಯುಂಟಾಗಲಾರದು–ಎಂಬುದು ಈ ಶ್ಲೋಕದ ನಿಜವಾದ ಅಭಿಪ್ರಾಯವಿರುವುದು.)

o o o

ಸರ್ವಜ್ಞನೂ, ಈಶ್ವರನೂ ಆದ ನಾನು ಗುಹ್ಯಕ್ಕಿಂತಲೂ ಗುಹ್ಯವಾದ–ಅತ್ಯಂತಗೋಪನೀಯವಾದ ರಹಸ್ಯವಾದ ಈ ಜ್ಞಾನವನ್ನು ತಿಳಿಸಿದ್ದೇನೆ. ಈ ಶಾಸ್ತ್ರವನ್ನು ಎಂದರೆ ಮೇಲೆ ಹೇಳಿದ ಎಲ್ಲ ಮಾತುಗಳನ್ನೂ ನೀನು ಪೂರ್ಣವಾಗಿ ವಿಚಾರಮಾಡಿ ನಿನ್ನ ಇಷ್ಟದಂತೆ ಆಚರಿಸು. (ಶಂ. ಭಾ.)

ಮುಮುಕ್ಷುಗಳು ತಿಳಿಯಬೇಕಾದ ಎಲ್ಲ ಗುಟ್ಟುಗಳಿಗಿಂತಲೂ ಗುಟ್ಟಾದ ಜ್ಞಾನವನ್ನು ಕರ್ಮಯೋಗವಿಷಯವೂ, ಜ್ಞಾನಯೋಗವಿಷಯವೂ ಮತ್ತು ಭಕ್ತಿಯೋಗವಿಷಯವೂ ಆದ ಎಲ್ಲ ಜ್ಞಾನವನ್ನೂ ಹೀಗೆ ನಿನಗೆ ಹೇಳಿದ್ದೇನೆ. ಇವೆಲ್ಲವನ್ನೂ ಸಂಪೂರ್ಣವಾಗಿ ವಿಚಾರಮಾಡಿ ನಿನ್ನ ಅಧಿಕಾರಕ್ಕೆ ಅನುಗುಣವಾಗಿ ಹೇಗೆ ಇಷ್ಟವೋ ಹಾಗೆ ಮಾಡು. ಕರ್ಮಯೋಗವನ್ನೋ, ಜ್ಞಾನಯೋಗವನ್ನೋ, ಭಕ್ತಿಯೋಗವನ್ನೋ ಯಥೇಚ್ಛವಾಗಿ ಆಚರಿಸು.
(ರಾ. ಭಾ.)

**ಯಥೇಚ್ಛಸಿ ತಥಾ ಕುರು** = ಇದು ಆಕ್ಷೇಪ. ಮುಂದಿನ ಶ್ಲೋಕದಲ್ಲಿ ತತ್ತ್ವಸಾರವನ್ನು ಉಪಸಂಹಾರಮಾಡಿದೆ. (ಮ. ಟೀಕಾ.)

**ಓಂ ಸರ್ವಗುಹ್ಯತಮಂ ಭೂಯಃ ಶೃಣು ಮೇ ಪರಮಂ ವಚಃ ।**
**ಇಷ್ಟೋಽಸಿ ಮೇ ದೃಢಮಿತಿ ತತೋ ವಕ್ಷ್ಯಾಮಿ ತೇ ಹಿತಮ್ ॥**

ನನ್ನ ಶ್ರೇಷ್ಠವಾದ ಮಾತನ್ನು ಮತ್ತೊಮ್ಮೆ ಕೇಳು. ನೀನು ನನಗೆ

ನಿಶ್ಚಯವಾಗಿಯೂ ಪ್ರಿಯನಾಗಿರುವೆ. ಆದುದರಿಂದ ನಿನಗೆ ಹಿತಕರವಾದುದನ್ನು ಹೇಳುತ್ತೇನೆ.

* * *

(**ಸರ್ವಗುಹ್ಯತಮಂ ಭೂಯಃ** = ಹಿಂದಿನ ಶ್ಲೋಕದಲ್ಲಿ ಶ್ರೀಕೃಷ್ಣನು ಗುಹ್ಯಾದ್ಗುಹ್ಯತರವಾದುದನ್ನು ಹೇಳಿದ್ದೇನೆ ಎಂದಿರುವನು. ಭಗವಂತನು ಉಪದೇಶಿಸಿರುವ ಎಲ್ಲ ಸತ್ಯವೂ ಗುಹ್ಯತಮವಾದುದೇ ಆದರೂ ಆಯಾ ಪ್ರಕರಣದಲ್ಲಿ ಉಪಾದೇಯವಾಗಿರುವ ಮಾರ್ಗವನ್ನು ಒಂದೊಂದನ್ನೂ ಗುಹ್ಯಕರ್ಮವೆಂದೇ ಹೇಳುವುದು ಸಹಜವಾಗಿದೆ. ಇದಲ್ಲದೇ ರಹಸ್ಯದ ಮಾತುಗಳನ್ನು ಹಿಂದೆ ಅನೇಕ ಬಾರಿ ಹೇಳಿದ್ದರೂ ಅತ್ಯಂತಗಹನವಾಗಿರುವುದರಿಂದ ಅದನ್ನು ಮತ್ತೊಮ್ಮೆ ಕೇಳು ಎಂಬುದನ್ನು ಶ್ರೀಕೃಷ್ಣನು ಒತ್ತಿ ಹೇಳುತ್ತಿದ್ದಾನೆ. ಗುಹ್ಯತಮವಾದುದನ್ನು ಹೇಳುತ್ತೇನೆ ಎಂದಿದ್ದಾನೆ. ೯ನೆಯ ಅಧ್ಯಾಯದಲ್ಲಿಯೂ ಸಹ **ಇದಂ ತು ತೇ ಗುಹ್ಯತಮಂ** ೯.೧. ಇಲ್ಲಿ **ಸರ್ವಗುಹ್ಯತಮಂ** ಎಂದು ಹೇಳಿ ಎಲ್ಲ ಗುಹ್ಯತಮಗಳಿಗೂ ಗುಹ್ಯತಮವಾದುದು ಎಂದಿದ್ದಾನೆ. ಗುಹ್ಯವಾಯಿತು. ಗುಹ್ಯತರವಾಯಿತು. ಗುಹ್ಯತಮವಾಯಿತು. ಈಗ ಸರ್ವಗುಹ್ಯತಮವಾದುದನ್ನು ಹೇಳುತ್ತೇನೆ. ಅರ್ಥಾತ್ ಅತ್ಯಂತಾತ್ಯಂತರಹಸ್ಯವಾದ ಮಾತನ್ನು ಹೇಳುತ್ತೇನೆ–ಎನ್ನುತ್ತಾನೆ ಶ್ರೀಕೃಷ್ಣ.

ಈ ಮಾತನ್ನು ಒತ್ತಿ ಹೇಳಲು ಎರಡು ಕಾರಣಗಳು. ಒಂದು ಆ ವಿಷಯವು ಅತ್ಯಂತಶ್ರೇಷ್ಠವಾದುದು. ಗುಹ್ಯತಮವಾದುದು. ಅರ್ಜುನನು ಶ್ರೀಕೃಷ್ಣನಿಗೆ ಅತ್ಯಂತಪ್ರಿಯನಾದವನು. ಮಾತಿನ ಶ್ರೇಷ್ಠತೆ ಮತ್ತು ಅದನ್ನು ಗ್ರಹಿಸುವವನು ಜ್ಞಾನಿಯಾದ ಉಪದೇಶಕನಿಗೆ ಅತ್ಯಂತಪ್ರಿಯವಾಗಿರುವಿಕೆ–ಇವೆರಡೂ ಸೇರಿದಾಗ ಬರುವುದು ಅತ್ಯಂತಹಿತವಾದ ಮಾತೇ ಆಗಿರಬೇಕು. ಹಾಗಾದರೆ ಹಿಂದೆ ಹೇಳದೇ ಇರುವುದೇ? ಎಂದರೆ : ಇಲ್ಲ. ಹಿಂದೆ ಹೇಳಿಯಾಗಿದೆ. ಅದು ಅತ್ಯಂತರಹಸ್ಯವಾದುದರಿಂದ ಅರ್ಥಮಾಡಿಕೊಳ್ಳಲು ಕಷ್ಟಸಾಧ್ಯ. ನೀನು ನನಗೆ ಬಹಳ ಇಷ್ಟನಾದವನೆಂದು ದೃಢವಾಗಿಬಿಟ್ಟಿದೆ. ಕೇವಲ ಇಷ್ಟರಾದವರಿಗೆ ಮಾತ್ರವೇ ಹೇಳುವ ರಹಸ್ಯವಿದು.)

o o o

ಎಲ್ಲ ರಹಸ್ಯಗಳಿಗಿಂತಲೂ ಅತ್ಯಂತರಹಸ್ಯವಾಗಿರುವ ನನ್ನ ಉತ್ತಮವಾದ ಮಾತನ್ನು ಮತ್ತೊಮ್ಮೆ ಕೇಳು. ಇದನ್ನು ನಾನು ಹಿಂದೆ ಹೇಳಿದ್ದರೂ ಪುನಃ ಕೇಳು. ಭಯದಿಂದಾಗಲೀ ಅರ್ಥಾಪೇಕ್ಷೆಯಿಂದಾಗಲೀ ಇದನ್ನು ಹೇಳುತ್ತಿಲ್ಲ. 'ನೀನು ನಿಶ್ಚಯವಾಗಿಯೂ ನನಗೆ ಅತ್ಯಂತಪ್ರಿಯನಾಗಿದ್ದೀಯೆ'–ಎಂಬ ಕಾರಣದಿಂದ ಪರಮವಾದ ಹಿತವನ್ನು ನಿನಗೆ ನುಡಿಯುತ್ತೇನೆ. ಪರಮಹಿತ ಎಂದರೆ ಜ್ಞಾನಪ್ರಾಪ್ತಿಗೆ ಶ್ರೇಷ್ಠವಾದ ಸಾಧನ. ಅದು ತಾನೇ ಎಲ್ಲ ಹಿತಗಳಲ್ಲಿಯೂ ಹಿತತಮವಾದುದು? (ಶಂ. ಭಾ.)

ಗುಹ್ಯವಾದ ಈ ಯೋಗಗಳೆಲ್ಲದರಲ್ಲಿಯೂ ಭಕ್ತಿಯೋಗವು ಅತ್ಯಂತ ಶ್ರೇಷ್ಠವಾದುದರಿಂದ ಗುಹ್ಯತಮವೆಂದು ಹಿಂದೆಯೇ **ಇದಂ ತು ತೇ ಗುಹ್ಯತಮಂ ಪ್ರವಕ್ಷ್ಯಾಮ್ಯನಸೂಯವೇ**–ಎಂದು ಹೇಳಿದೆ. ಮತ್ತೊಮ್ಮೆಯೂ ಈ ಭಕ್ತಿಯೋಗವಿಷಯಕವಾದ, ನನ್ನ ಶ್ರೇಷ್ಠವಾದ ಮಾತನ್ನು ಕೇಳು. ನೀನು ನನಗೆ ಅತ್ಯಂತಪ್ರಿಯನಾಗಿರುವುದರಿಂದ ನಿನಗೆ ಹಿತವನ್ನು ಹೇಳುತ್ತೇನೆ.

(ರಾ. ಭಾ.)

ಇಲ್ಲಿ ತತ್ತ್ವಸಾರವನ್ನು ಉಪಸಂಹಾರಮಾಡಿದೆ. ಸಾಧನಗಳ ಸಾರವನ್ನು ಉಪಸಂಹಾರಮಾಡಲು ಭಗವಂತನು ಹೀಗೆ ಪ್ರತಿಜ್ಞೆಮಾಡುತ್ತಾನೆ.

(ಮ. ಟೀಕಾ)

**ಓಂ ಮನ್ಮನಾ ಭವ ಮದ್ಭಕ್ತೋ ಮದ್ಯಾಜೀ ಮಾಂ ನಮಸ್ಕುರು ।**
**ಮಾಮೇವೈಷ್ಯಸಿ ಸತ್ಯಂ ತೇ ಪ್ರತಿಜಾನೇ ಪ್ರಿಯೋಽಸಿ ಮೇ ॥೬೫॥**

ನನ್ನಲ್ಲಿಯೇ ಮನಸ್ಸುಳ್ಳವನಾಗು. ನನ್ನ ಭಕ್ತನಾಗಿರು. ನನ್ನನ್ನೇ ಪೂಜಿಸು. ನನ್ನನ್ನೇ ನಮಸ್ಕರಿಸು. ನನ್ನನ್ನೇ ಸೇರುವೆ. ಸತ್ಯವಾಗಿ ಪ್ರತಿಜ್ಞೆಮಾಡುತ್ತೇನೆ. ನೀನು ನನಗೆ ಪ್ರಿಯನಾಗಿರುತ್ತೀಯೆ.

* * *

(೯ನೆಯ ಅಧ್ಯಾಯದ ಕಡೆಯಲ್ಲಿಯೂ ಭಗವಂತನು ಇದೇ ಶ್ಲೋಕವನ್ನು ಸ್ವಲ್ಪ ವ್ಯತ್ಯಾಸವಾಗಿ ಹೇಳಿದ್ದಾನೆ. ಶ್ರೀಕೃಷ್ಣನು ಈ ಶ್ಲೋಕದಲ್ಲಿ

ಅರ್ಜುನನಿಗೆ ಧ್ಯಾನಮೂರ್ತಿಯನ್ನು ದಯಪಾಲಿಸಿ ಹೇಳುತ್ತಿದ್ದಾನೆ. ಧ್ಯಾನ ಯೋಗಕ್ಕೆ ಮೊದಲು ಸದ್ಗುರುವಿನ ಮೂರ್ತಿಯೊಂದರ ಆವಶ್ಯಕತೆಯಿದೆ.

**ಮನ್ಮನಾ ಭವ** = ನನ್ನಲ್ಲಿಯೇ ಮನಸ್ಸನ್ನಿಡು. ಎಲ್ಲೆಲ್ಲಿಗೋ ಹೋಗಲು ಅವಕಾಶಕೊಡಬೇಡ. ವಿಷಯಗಳಿಂದ ಇಂದ್ರಿಯಗಳನ್ನು ಹಿಂತೆಗೆದುಕೊಂಡು ಆ ಇಂದ್ರಿಯಗಳೆಲ್ಲವನ್ನೂ ಮನಸ್ಸಿನಲ್ಲಿ ಲೀನಗೊಳಿಸಿ, ಅನಂತರ ಆ ಮನಸ್ಸನ್ನು ನನ್ನಲ್ಲಿ ಲೀನಗೊಳಿಸು. **ಮದ್ಭಕ್ತಃ** = ನನ್ನ ಭಕ್ತನಾಗು–ಪರಮಪ್ರೇಮದಿಂದ ನನ್ನನ್ನೇ ಸೇವಿಸು. ಅಂತರ್ಯಾಗವು (ಧ್ಯಾನಮಾಡುವುದು) ಮಾತ್ರವಲ್ಲದೇ ನನ್ನ ಸೃಷ್ಟಿಯಲ್ಲಿರುವ ಶ್ರೇಷ್ಠವಾದ ಹೊರಗಿನ ಪದಾರ್ಥಗಳ ಮೂಲಕವೂ ನನ್ನನ್ನೇ ಪೂಜಿಸುವುದು ನಿನ್ನ ಸ್ವಭಾವವಾಗಲಿ.

**ಮದ್ಯಾಜೀ = ಯಾಜೀ** ಎಂದರೆ ಯಜ್ಞಮಾಡುವವನು ಅಥವಾ ಮಾಡಿದವನು. **ಮದ್ಯಾಜೀ**–ಎಂದರೆ ನನ್ನನ್ನು (ಭಗವಂತನನ್ನು ) ಕುರಿತಾದ ಪೂಜೆಯನ್ನು ಸದಾಕಾಲದಲ್ಲಿಯೂ ಮಾಡುತ್ತಿರು. **ಮಾಂ ನಮಸ್ಕುರು** = ನನಗೇ ನಮಸ್ಕಾರಮಾಡು. ಹೀಗೆ ಅನವರತವಾಗಿ ಮಾಡುತ್ತಿದ್ದರೆ **ಮಾಮೇವ ಏಷ್ಯಸಿ** = ನೀನು ನನ್ನನ್ನೇ ಸೇರುವೆ. ಈ ಸತ್ಯವಿಷಯವನ್ನು ನಾನು ನಿನಗೆ ಪ್ರತಿಜ್ಞೆಮಾಡಿ ಹೇಳುತ್ತೇನೆ. ಈ ವಿಷಯದಲ್ಲಿ ಸ್ವಲ್ಪವಾದರೂ ನೀನು ಸಂಶಯಗೊಳ್ಳುವ ಕಾರಣವಿಲ್ಲ. ಈ ಸತ್ಯವಾದ ಪರಮೋಪಾಯವನ್ನು, ಮಹಾರಹಸ್ಯವನ್ನು ನಾನೇಕೆ ನಿನಗೆ ಹೇಳುತ್ತಿದ್ದೇನೆಂದರೆ ನೀನು ನನಗೆ ಅತ್ಯಂತಪ್ರಿಯನಾಗಿರುವೆ. ನಿನ್ನ ಉದ್ಧಾರವೇ ನನ್ನ ಸಂಕಲ್ಪವಾಗಿದೆ. ಆದುದರಿಂದ ನಾನು ನಿನಗೆ ಈ ಸತ್ಯಸಂಗತಿಯನ್ನು ಹೇಳುತ್ತಿದ್ದೇನೆ. ಇದೇ ನಿನಗೆ ನನ್ನ ಪರಮಹಿತವಾದ ಮಾತು.

ಭಗವಂತನು ಈ ಸಂದರ್ಭದಲ್ಲಿ ಅರ್ಜುನನಿಗೆ ಶುಭಾಶ್ರಯನೂ, ಸರ್ವೇಶ್ವರನೂ, ಭಕ್ತಪ್ರಿಯನೂ ಆದ ತನ್ನನ್ನೇ ಸರ್ವಭಾವದಿಂದಲೂ ಸದಾ ಭಜಿಸಬೇಕೆಂದು ಹೇಳುತ್ತಾನೆ. ಕೊಂಚಕಾಲ ಅವನ ಸ್ತೋತ್ರವನ್ನೂ, ಅರ್ಚನೆಯನ್ನೂ ಮಾಡಿ ನಿಲ್ಲಿಸಿ ಕೃತಕೃತ್ಯರಾದೆವೆಂದು ಭಾವಿಸಬಾರದು. ಭಕ್ತಿ, ಪೂಜೆ, ನಮಸ್ಕಾರ, ಧ್ಯಾನಾವಲಂಬನೆ–ಎಲ್ಲಕ್ಕೂ ಅವನನ್ನೇ ಸದಾ ವಿಷಯನನ್ನಾಗಿ ಮಾಡಿಕೊಳ್ಳಬೇಕು. ಇದರಿಂದ ಭಗವಂತನೇ ಪರಮ

ಪುರುಷಾರ್ಥವಾಗಿ ಪರಮಪ್ರಯೋಜನವಾಗಿ ದೊರೆಯುತ್ತಾನೆ ಎಂಬ ವಿಷಯವನ್ನು ತನ್ನ ಪ್ರಿಯತಮನಾದ ಅರ್ಜುನನಿಗೆ ಪ್ರತಿಜ್ಞೆಮಾಡುವುದರ ಮೂಲಕ ತನಗೆ ಪ್ರಿಯರಾದ ಎಲ್ಲ ಭಕ್ತರಿಗೂ ಇದೇ ಸಂದೇಶವನ್ನು ನೀಡುತ್ತಿದ್ದಾನೆ. ಭಗವಂತನನ್ನೇ ಏಕಮಾತ್ರಶರಣ್ಯನನ್ನಾಗಿ ಭಾವಿಸುವ ಪರಮೋಪಾಯವು ಈ ಶ್ಲೋಕದಲ್ಲಿಯೂ, ಮುಂದಿನ ಶ್ಲೋಕದಲ್ಲಿಯೂ ಪ್ರತಿಪಾದಿತವಾಗಿದೆ.)

o o o

ಹಿಂದಿನ ಶ್ಲೋಕದಲ್ಲಿ ಪ್ರತಿಜ್ಞೆಮಾಡಿದ ಸರ್ವಹಿತಗಳಲ್ಲಿಯೂ ಹಿತತಮವಾದ ವಿಷಯವು ಯಾವುದು?–ಎಂದರೆ : ನನ್ನಲ್ಲಿಯೇ ಚಿತ್ತವನ್ನಿರಿಸುವವನಾಗು, ನನ್ನನ್ನೇ ಭಜಿಸುವವನಾಗು, ನನ್ನನ್ನೇ ಪೂಜಿಸುವವನಾಗು, ನಮಸ್ಕಾರವನ್ನೂ ನನಗೇ ಮಾಡು. ಹೀಗೆ ಮಾಡುತ್ತಿದ್ದರೆ–ಎಂದರೆ ವಾಸುದೇವನಾದ ನನ್ನಲ್ಲಿಯೇ ಸಮಸ್ತವಾದ ಸಾಧ್ಯ-ಸಾಧನ ಮತ್ತು ಪ್ರಯೋಜನಗಳನ್ನೂ ಸಮರ್ಪಿಸಿದರೆ ನನ್ನನ್ನೇ ಹೊಂದುವೆ. ಈ ವಿಷಯದಲ್ಲಿ ನಾನು ನಿನ್ನಲ್ಲಿ ಸತ್ಯವಾದ ಪ್ರತಿಜ್ಞೆಯನ್ನು ಮಾಡುತ್ತಿದ್ದೇನೆ. ಏಕೆಂದರೆ : ನೀನು ನನಗೆ ಪ್ರಿಯನಾಗಿರುವೆ. ಹೀಗೆ ಭಗವಂತನು ಸತ್ಯಪ್ರತಿಜ್ಞನೆಂದು ತಿಳಿದು ಭಗವದ್ಭಕ್ತರಿಗೆ ಅವಶ್ಯವಾಗಿಯೂ ಐಕಾಂತಿಕಮೋಕ್ಷವೇ ಫಲವಾಗಿ ದೊರೆಯುವುದೆಂದು ನಿಶ್ಚಯಿಸಿ, ಭಗವಂತನನ್ನು ಶರಣುಹೊಂದುವುದೊಂದರಲ್ಲಿಯೇ ತತ್ಪರನಾಗಿರಬೇಕು–ಎಂಬುದು ಆಶಯ. (ಶಂ. ಭಾ.)

**ಮನ್ಮನಾ ಭವ** = ಈ ಶಬ್ದದಿಂದ ವೇದಾಂತಗಳಲ್ಲಿ–**ಆದಿತ್ಯವರ್ಣಂ ತಮಸಃ ಪರಸ್ತಾತ್ । ವೇದಾಹಮೇತಂ ಪುರುಷಂ ಮಹಾನ್ತಂ । ತಮೇವಂ ವಿದ್ವಾನಮೃತ ಇಹ ಭವತಿ । ನಾನ್ಯಃ ಪನ್ಥಾ ಅಯನಾಯ ವಿದ್ಯತೇ ।** ಮುಂತಾದ ವಾಕ್ಯಗಳಲ್ಲಿ ವಿಧಿಸಲ್ಪಟ್ಟಿರುವ ವೇದನ, ಧ್ಯಾನ, ಉಪಾಸನಾ–ಮುಂತಾದ ಶಬ್ದಗಳಿಂದ ಕರೆಯಲ್ಪಡುವ ದರ್ಶನಸಮಾನಾಕಾರವಾಗಿರುವ, ಅತ್ಯಂತಪ್ರಿಯವಾಗಿರುವ ಸ್ಮೃತಿಪರಂಪರೆಯನ್ನು ಭಗವಂತನು ವಿಧಿಸುತ್ತಾನೆ. **ಮದ್ಭಕ್ತಃ** = ಅತ್ಯರ್ಥವಾಗಿ ನನಗೆ ಪ್ರಿಯನಾದ ವನು. ಅತ್ಯರ್ಥವಾಗಿ ನನಗೆ ಪ್ರಿಯನಾಗಿ ನಿರತಿಶಯಪ್ರಿಯವಾದ ಸ್ಮೃತಿಪ್ರವಾಹವನ್ನು ನನ್ನ ವಿಷಯದಲ್ಲಿ ಹೊಂದಿರು. **ಮದ್ಯಾಜೀ** = ನನ್ನನ್ನು ಪೂಜಿಸುವವನಾಗು. ಇಲ್ಲಿಯೂ ಕೂಡ **ಮದ್ಭಕ್ತಃ**–ಎಂಬುದನ್ನು

ಅನ್ವಯಿಸಿಕೊಳ್ಳಬೇಕು. ಅತ್ಯಂತಪ್ರಿಯವಾದ ನನ್ನ ಆರಾಧನೆಯಲ್ಲಿ ತತ್ಪರನಾಗಿರು. ಆರಾಧನೆಯೆಂಬುದು ಪರಿಪೂರ್ಣವಾದ ಶೇಷವೃತ್ತಿಯೇ ಅಲ್ಲವೇ? ನನ್ನನ್ನು ನಮಸ್ಕರಿಸು. ನನ್ನಲ್ಲಿ ಅತ್ಯಂತಪ್ರೀತಿಯಿಂದ ಕೂಡಿದ ವಿನಮ್ರತೆಯನ್ನು ಹೊಂದಿರು. ಹೀಗಿರುವ ನೀನು ನನ್ನನ್ನೇ ಹೊಂದುವೆ. ಇದನ್ನು ನಿನಗೆ ಸತ್ಯವಾಗಿ ಪ್ರತಿಜ್ಞೆಮಾಡಿ ಕೊಡುತ್ತೇನೆ. ನಿನ್ನನ್ನು ಓಲೈಸುವುದಕ್ಕೋಸ್ಕರ ಹೇಳುವ ಮಾತಲ್ಲ. ಏಕೆಂದರೆ ನೀನು ನನಗೆ ಅತ್ಯಂತಪ್ರಿಯನು.

**ಪ್ರಿಯೋ ಹಿ ಜ್ಞಾನಿನೋಽತ್ಯರ್ಥಮಹಂ ಸ ಚ ಮಮ ಪ್ರಿಯಃ।** ಎಂದು ಈ ಹಿಂದೆಯೇ ಹೇಳಿದೆ. ಯಾವನಿಗೆ ನನ್ನಲ್ಲಿ ಎಣೆಯಿಲ್ಲದ ಪ್ರೀತಿಯಿದೆಯೋ–ಅವನಲ್ಲಿ ನನಗೂ ಎಣೆಯಿಲ್ಲದ ಪ್ರೀತಿಯಿದೆ. ಆದುದರಿಂದ ಅವನ ಅಗಲಿಕೆಯನ್ನು ಸಹಿಸಲಾರದೇ ಅವನೇ ನನ್ನನ್ನು ಹೊಂದುವಂತೆ ಮಾಡಿಕೊಳ್ಳುತ್ತೇನೆ. ಆದುದರಿಂದ **ಮಾಮೇವ** ಏಷ್ಯಸಿ–ಎಂದು ಮಾಡಿದ ಪ್ರತಿಜ್ಞೆಯು ಸತ್ಯ. (ರಾ. ಭಾ.)

**ಪ್ರತಿಜಾನೇ** = ಇದರಲ್ಲಿ ಸಂದೇಹಪಡಬಾರದು ಎಂದು ಭಾವ.

(ಮ. ಟೀಕಾ)

**ಓಂ ಸರ್ವಧರ್ಮಾನ್ಪರಿತ್ಯಜ್ಯ ಮಾಮೇಕಂ ಶರಣಂ ವ್ರಜ ।**
**ಅಹಂ ತ್ವಾ ಸರ್ವಪಾಪೇಭ್ಯೋ ಮೋಕ್ಷಯಿಷ್ಯಾಮಿ ಮಾ ಶುಚಃ ॥೬೬॥**

ಎಲ್ಲ ಧರ್ಮಗಳನ್ನೂ ಬಿಟ್ಟು ನನ್ನೊಬ್ಬನನ್ನೇ ಶರಣುಹೊಂದು. ನಾನು ನಿನ್ನನ್ನು ಎಲ್ಲ ಪಾಪಗಳಿಂದಲೂ ಬಿಡಿಸುತ್ತೇನೆ. ಮುಕ್ತನನ್ನಾಗಿ ಮಾಡುತ್ತೇನೆ. ಶೋಕಿಸಬೇಡ.

* * *

(ಇದು ಭಗವಂತನ ಉಪದೇಶದಲ್ಲಿ ಚರಮಶ್ಲೋಕ. (ಕೊನೆಯ ಮಾತು.) ಬಹುಮುಖ್ಯವಾದುದು. ಇದನ್ನು ಮಹಾಮಂತ್ರದಂತೆ ಪುನಶ್ಚರಣ ಮಾಡುವವರೂ ಇದ್ದಾರೆ.

ಸರ್ವಭಾವಗಳಿಂದಲೂ ಭಗವಂತನನ್ನು ಆಶ್ರಯಿಸಿದವರಿಗೆ ಭಗವತ್ಪ್ರಾಪ್ತಿಯು ಸತ್ಯವಾಗಿಯೂ ಆಗುತ್ತದೆ–ಎಂಬ ಭಗವಂತನ ಸತ್ಯಪ್ರತಿಜ್ಞೆ

ಯನ್ನು ಆಪ್ತವಚನವನ್ನು ಹಿಂದಿನ ಶ್ಲೋಕದಲ್ಲಿ ನಾವು ಗಮನಿಸಿದ್ದೇವೆ. ಅದೇ ಅಭಿಪ್ರಾಯಧಾರೆಯನ್ನೇ ಭಗವಂತನು ಈ ಶ್ಲೋಕದಲ್ಲಿ ಮುಂದುವರಿಸುತ್ತಾನೆ. ಹಿಂದಿನ ಶ್ಲೋಕದಲ್ಲಿ ಹೇಳಿದಂತೆ ಸರ್ವಭಾವಗಳಿಂದಲೂ ಭಗವಂತನನ್ನು ಆಶ್ರಯಿಸಿದರೆ ಎಲ್ಲ ಧರ್ಮಗಳೂ ಬಿಟ್ಟುಹೋಗುತ್ತವೆ. ಇಂದ್ರಿಯ, ಮನಸ್ಸು ಮತ್ತು ಬುದ್ಧಿಗಳ ಯಾವ ಧರ್ಮವೂ ಕೆಲಸಮಾಡದೇ ಪರಿಪೂರ್ಣ ಸಮಾಧಿಸಿದ್ಧಿಯುಂಟಾಗುತ್ತದೆ. ಹಾಗೆ ಇಂದ್ರಿಯಗಳೇ ಮುಂತಾದ ಎಲ್ಲದರ ಧರ್ಮಗಳನ್ನೂ ಕಳೆದುಕೊಂಡಾಗ ಪರಮಾತ್ಮನೊಬ್ಬನೇ ಬೋಧಕ್ಕೆ ಬರುತ್ತಾನೆ.

ಹಾಗೆ ಅನುಭವದಿಂದ ವೇದ್ಯನಾಗುವ ಏಕಮಾತ್ರನಾದ ಪರಮಾತ್ಮನನ್ನು ಶರಣುಹೊಂದಬೇಕು. ಸರ್ವಭಾವದಿಂದ ತನ್ಮಯನಾಗಬೇಕು. ಇದೇ ಜೀವದ ಪರಮಲಕ್ಷ್ಯ. ಹಿತತಮವಾದ ಉಪದೇಶ–ಆ ಬ್ರಾಹ್ಮೀಸ್ಥಿತಿಯಲ್ಲಿ **ಅಸ್ನಾವಿರಂ ಶುದ್ಧಮಪಾಪವಿದ್ಧಂ**–ಎಂದು ಉಪನಿಷತ್ತು ವರ್ಣಿಸುವ ಶುದ್ಧವಸ್ತುವಿನಲ್ಲಿ ತನ್ಮಯತೆಯು ಉಂಟಾಗುವುದರಿಂದ ಎಲ್ಲ ಪಾಪಗಳೂ ತೊಳೆದುಹೋಗುತ್ತವೆ. (ಪುಣ್ಯಗಳೂ ತೊಳೆದುಹೋಗುತ್ತವೆ.) ಎಲ್ಲ ಕರ್ಮಗಳೂ ಲಯಹೊಂದುತ್ತವೆ. ಆದುದರಿಂದ ದುಃಖಕ್ಕೆ ವಿಷಯವೇ ಇರುವುದಿಲ್ಲ. ಇಂತಹ ಅನನ್ಯಭಾವದ ಶರಣಾಗತಿಯನ್ನು ಮಾಡಿ–**ತರತಿ ಶೋಕಂ ತರತಿ ಪಾಪ್ಮಾನಂ**–ಎಂದು ಉಪನಿಷತ್ತು ಘೋಷಿಸುವಂತೆ ಸರ್ವ ಕರ್ಮಬಂಧದಿಂದ ಬಿಡುಗಡೆಹೊಂದು–ಎಂದು ಸರ್ವಜೀವಿಗಳಿಗೂ ಭಗವಂತನು ಹೇಳಿರುವ ಚರಮೋಪದೇಶ.

ಧರ್ಮಗಳನ್ನು ಬಿಡುವುದು ಸುಲಭಸಾಧ್ಯವಲ್ಲ. ಯಜ್ಞ, ದಾನ, ತಪಸ್ಸು–ಮುಂತಾದ ಧರ್ಮಗಳನ್ನು ಬಿಡುವುದು ಸುಲಭ. ಆದರೆ ಹಾಗೆ ಮಾಡಿದರೆ ಪ್ರಕೃತಿಯಲ್ಲಿರುವ ಎಲ್ಲ ಧರ್ಮಗಳನ್ನೂ ತೊರೆದಂತಾಗುವುದಿಲ್ಲ. ಕಣ್ಣಿಗೆ ನೋಡುವ ಧರ್ಮ, ಕಿವಿಗೆ ಕೇಳುವ ಧರ್ಮ, ಮನಸ್ಸಿಗೆ ಸಂಕಲ್ಪಿಸುವ ಧರ್ಮ, ಮೂಗಿಗೆ ವಾಸನೆ ನೋಡುವ ಧರ್ಮ, ತ್ವಚೆಗೆ (ಚರ್ಮಕ್ಕೆ) ಸ್ಪರ್ಶಧರ್ಮ-ಮುಂತಾದ ಧರ್ಮಗಳು ಇದ್ದೇ ಇರುತ್ತವೆ. ಶರಣಾಗತಿಗೆ ಬಹುಮುಖ್ಯವಾದ ಈ ಇಂದ್ರಿಯಧರ್ಮಗಳನ್ನು ದೂರ ಮಾಡದೆ ಧರ್ಮಕಾರ್ಯಗಳನ್ನು ದೂರಮಾಡುವುದರಿಂದ ಆಗುವ

ಪ್ರಯೋಜನವೇನೂ ಇಲ್ಲ. ಧರ್ಮಗಳೇ ಯಾವಾಗಲೂ ಚಿತ್ತಶುದ್ಧಿಗೆ–ತನ್ಮೂಲಕವಾಗಿ ಮೋಕ್ಷಕ್ಕೆ ಸಾಧನಗಳೆಂದು ಹೇಳಿರುವಾಗ ಅಂತಹ ಉತ್ತಮೋತ್ತಮವಾದ ಧರ್ಮಗಳನ್ನು ಬಿಡುವುದೆಂಬುದರಲ್ಲಿ ಅರ್ಥವೇ ಇಲ್ಲ. ಆದುದರಿಂದ **ಸರ್ವಧರ್ಮಾನ್** ಎಂಬುದಕ್ಕೆ ಸಕಲವಾದ ಇಂದ್ರಿಯ ಧರ್ಮಗಳು ಎಂದೇ ಅರ್ಥ. ಶಬ್ದಾದೀನ್ವಿಷಯಾಂಸ್ತ್ಯಕ್ತ್ವಾ–ಎಂದು ಶ್ರೀಕೃಷ್ಣನು ಹಿಂದೆಯೇ ಹೇಳಿರುವಂತೆ ಇಂದ್ರಿಯಧರ್ಮಗಳಾದ ಶಬ್ದಾದಿಗಳನ್ನು ಮನಸ್ಸಿನಿಂದ ದೂರಮಾಡಲು ಧ್ಯಾನಯೋಗದ ಮೂಲಕವಾಗಿ ಸತತವಾಗಿ ಪ್ರಯತ್ನಮಾಡಬೇಕು. ಇಂದ್ರಿಯಧರ್ಮಗಳು ದೂರವಾಗುತ್ತಿದ್ದಂತೆ ಶರಣಾಗತಿಧರ್ಮವು ಹತ್ತಿರವಾಗುತ್ತದೆ. ಶರಣಾಗತಿಧರ್ಮವೆಂದರೆ ಅವನಲ್ಲಿಯೇ ಸೇರಿಹೋಗುವ ಧರ್ಮ. ಇದೇ ನೈಷ್ಕರ್ಮ್ಯಸಿದ್ಧಿ. ಸರ್ವಧರ್ಮಗಳ ಪರಿತ್ಯಾಗದ ಸಿದ್ಧಿ. ಸಮಾಧಿಸ್ಥಿತಿ. ಸಿದ್ಧಿಸಿದ ಸಮಾಧಿಯಲ್ಲಿ ಎಲ್ಲ ಕರ್ಮಗಳೂ ಕಳಚಿಕೊಳ್ಳುತ್ತವೆ. ಆ ಸ್ಥಿತಿಯಲ್ಲಿದ್ದರೆ ಪುಣ್ಯ-ಪಾಪಗಳೆಲ್ಲವೂ ತಾವಾಗಿಯೇ ಬಿಟ್ಟುಹೋಗುತ್ತವೆ. ಹಾಗೆ ಬಿಡಿಸುವವನು ಸಮಾಧಿಗಮ್ಯನಾದ ಸಮಾಧಿಪ್ರದನಾದ ಪರಮಾತ್ಮನೇ ಆಗುತ್ತಾನೆ. ಈ ಅಭಿಪ್ರಾಯವು ಜ್ಞಾನಯೋಗ, ಕರ್ಮಯೋಗ, ಭಕ್ತಿಯೋಗ–ಯಾವುದಕ್ಕೂ ವಿರೋಧವಾಗುವುದಿಲ್ಲ. ಹಿಂದೆ ಹೇಳಿದ ಉಪದೇಶ, ಮುಂದೆ ಮಾಡುವ ಉಪದೇಶ–ಯಾವುದಕ್ಕೂ ವಿರೋಧವಾಗುವುದಿಲ್ಲ. ಮತ್ತು ಎಲ್ಲ ಯೋಗಗಳ ಫಲವನ್ನೂ ಹೇಳಿದಂತಾಗುತ್ತದೆ. ಸಮಾಧಿಯಿಂದ ವಿಕ್ಷೇಪಕ್ಕೆ ಬಂದಾಗ ಲೋಕಕಲ್ಯಾಣಾರ್ಥವಾಗಿ ಕರ್ಮಗಳನ್ನು ಆಚರಿಸಬಹುದು. ಆದರೆ ಅದು ಪ್ರಾಕೃತರು ಮಾಡುವ ಕರ್ಮವಾಗದೆ ಜ್ಞಾನಿಯ ಸಹಜವಾದ ಧರ್ಮದ ವಿಕಾಸರೂಪವಾಗಿರುತ್ತದೆ.)

o o o

ಕರ್ಮಯೋಗನಿಷ್ಠೆಯ ಪರಮರಹಸ್ಯವಾದ ಈಶ್ವರಶರಣಾಗತಿಯನ್ನು ಉಪಸಂಹಾರಮಾಡಿ ಅನಂತರ ಈಗ ಕರ್ಮಯೋಗನಿಷ್ಠೆಯ ಫಲಸ್ವರೂಪವಾದ ಮತ್ತು ಎಲ್ಲ ವೇದಾಂತಗಳಲ್ಲಿಯೂ ವಿಧಾನಮಾಡಲ್ಪಟ್ಟಿರುವ ಸಮ್ಯಗ್ದರ್ಶನವನ್ನು ಹೇಳಬೇಕಾಗಿರುವುದರಿಂದ ಈ ರೀತಿ ಹೇಳುತ್ತಾನೆ ಭಗವಂತ. ಎಲ್ಲ ಧರ್ಮಗಳನ್ನೂ ಮತ್ತು ಅಧರ್ಮಗಳನ್ನೂ ತ್ಯಾಗಮಾಡಿ (ಧರ್ಮಶಬ್ದದಿಂದ ಅಧರ್ಮವನ್ನೂ ಗ್ರಹಿಸಬೇಕು. ಏಕೆಂದರೆ :

ನೈಷ್ಕರ್ಮ್ಯದ ಪ್ರತಿಪಾದನೆಯನ್ನು ಹೇಳುವುದು ಪ್ರಧಾನವಾಗಿದೆ. **ನಾವಿರತೋ ದುಶ್ಚರಿತಾತ್** ೧-೨-೨೪. **ತ್ಯಜ–ಧರ್ಮಮಧರ್ಮಂ ಚ**–ಶಾಂತಿ ೩೨೦-೪೦ ಮುಂತಾದ ಶ್ರುತಿ-ಸ್ಮೃತಿಗಳಿಂದಲೂ ಇದು ಸಿದ್ಧವಾಗುತ್ತದೆ.) ಎಂದರೆ ಎಲ್ಲ ಕರ್ಮಗಳನ್ನು ಸಂನ್ಯಾಸಮಾಡಿ ನನ್ನೊಬ್ಬನನ್ನೇ ಶರಣುಹೊಂದು. ಸರ್ವಾತ್ಮನೂ, ಸರ್ವಭೂತಗಳಲ್ಲಿಯೂ ಸಮವಾಗಿರು ವವನೂ, ಈಶ್ವರನೂ, ಅಚ್ಯುತನೂ, ಗರ್ಭ-ಜನ್ಮ-ಜರಾಮರಣರಹಿತನೂ ಆಗಿರುವವನು ನಾನೇ ಎಂದು ನನ್ನೊಬ್ಬನನ್ನೇ ಶರಣುಹೊಂದು. ನನ್ನನ್ನು ಬಿಟ್ಟು ಬೇರೆ ಏನೂ ಇಲ್ಲ–ಎಂದು ನಿಶ್ಚಯಿಸು–ಎಂದು ಅರ್ಥ.

ಹೀಗೆ ಬುದ್ಧಿಯಲ್ಲಿ ನಿಶ್ಚಯಮಾಡಿಕೊಂಡ ನಿನಗೆ ನಾನು ಆತ್ಮಭಾವ ವನ್ನು ಪ್ರಕಾಶಪಡಿಸಿ ಎಲ್ಲ ಧರ್ಮಾಧರ್ಮಬಂಧನರೂಪವಾದ ಪಾಪಗಳ ದೆಸೆಯಿಂದ ಬಿಡಿಸುತ್ತೇನೆ. **ನಾಶಯಾಮ್ಯಾತ್ಮಭಾವಸ್ಥಃ ಜ್ಞಾನದೀಪೇನ ಭಾಸ್ವತಾ**–ಎಂದು ಹಿಂದೆಯೂ ಹೇಳಿದೆ. ಆದುದರಿಂದ ನೀನು ದುಃಖಪಡಬೇಡ. (ಶಂ. ಭಾ.)

ಪರಮಕಲ್ಯಾಣಕ್ಕೆ ಸಾಧನವಾಗಿರುವ ಕರ್ಮಯೋಗ, ಜ್ಞಾನಯೋಗ, ಭಕ್ತಿಯೋಗಗಳೆಂಬ ಎಲ್ಲ ಧರ್ಮಗಳನ್ನೂ ನನ್ನ ಆರಾಧನೆಯೆಂದು ತಿಳಿದು ಅತ್ಯಂತಪ್ರೀತಿಯಿಂದ ಅಧಿಕಾರಕ್ಕೆ ಅನುಗುಣವಾಗಿ ಆಚರಿಸುತ್ತಲೇ ಫಲ ತ್ಯಾಗ, ಕರ್ಮತ್ಯಾಗ (ಕರ್ಮವು ತನ್ನದು ಎಂಬ ಅಭಿಮಾನದ ತ್ಯಾಗ), ಕರ್ತೃತ್ವತ್ಯಾಗ–ಮುಂತಾದುವುಗಳ ಮೂಲಕ ಅವುಗಳನ್ನು ತ್ಯಜಿಸಿ ನಾನೊ ಬ್ಬನೇ ಕರ್ತಾ, ಆರಾಧ್ಯ, ಪ್ರಾಪ್ಯ ಮತ್ತು ಉಪಾಯ–ಎಂದು ಅನುಸಂಧಾನ ಮಾಡು. ಎಲ್ಲ ಧರ್ಮಗಳನ್ನೂ ಶಾಸ್ತ್ರೀಯವಾಗಿ ಪರಿತ್ಯಾಗಮಾಡುವುದು ಎಂದರೆ ಮೇಲೆ ಹೇಳಿದ ಕ್ರಮವೇ ಆಗಿದೆ. **ನಿಶ್ಚಯಂ ಶೃಣು ಮೇ ತತ್ರ । ತ್ಯಾಗೋ ಹಿ ಪುರುಷವ್ಯಾಘ್ರ ತ್ರಿವಿಧಃ ಸಂಪ್ರಕೀರ್ತಿತಃ**–ಎಂದು ಆರಂಭಿಸಿ **ಸಙ್ಗಂ ತ್ಯಕ್ತ್ವಾ ಫಲಂ ಚೈವ ಸ ತ್ಯಾಗಃ ಸಾತ್ತ್ವಿಕೋ ಮತಃ । ನ ಹಿ ದೇಹಭೃತಾ ಶಕ್ಯಂ ತ್ಯಕ್ತುಂ ಕರ್ಮಾಣ್ಯಶೇಷತಃ । ಯಸ್ತು ಕರ್ಮಫಲತ್ಯಾಗೀ ಸ ತ್ಯಾಗೀತ್ಯಭಿಧೀಯತೇ ।** ಎಂದು ಅಧ್ಯಾಯದ ಪ್ರಾರಂಭದಲ್ಲಿ ದೃಢವಾಗಿ ಇದನ್ನೇ ಉಪಪಾದನೆಮಾಡಿದೆ. ( ಆದುದ ರಿಂದ ಧರ್ಮಗಳ ತ್ಯಾಗ ಎಂದರೆ ಅವುಗಳನ್ನು ಸ್ವರೂಪತಃ ತ್ಯಾಗ

ಮಾಡುವುದಲ್ಲ ; ಅವುಗಳ ಫಲ, ಅಭಿಮಾನ ಮತ್ತು ಕರ್ತೃತ್ವ–ಮೊದಲಾದುವನ್ನು ತ್ಯಾಗಮಾಡುವುದು. ಹೀಗೆ ಎಲ್ಲ ಧರ್ಮಗಳನ್ನೂ ಪರಿತ್ಯಜಿಸಿ ನನ್ನೊಬ್ಬನನ್ನೇ ಶರಣುಹೊಂದಿದ ನಿನ್ನನ್ನು ಎಲ್ಲ ಪಾಪಗಳ ದೆಸೆಯಿಂದಲೂ ಎಂದರೆ ನನ್ನ ಪ್ರಾಪ್ತಿಗೆ ವಿರೋಧಿಗಳಾಗಿರುವ ಮತ್ತು ಅನಾದಿಕಾಲದಿಂದಲೂ ಕೂಡಿಹಾಕಲ್ಪಟ್ಟಿರುವ ಅನಂತವಾದ ಅಕೃತ್ಯಗಳನ್ನು ಮಾಡುವಿಕೆ ಮತ್ತು ಕೃತ್ಯಗಳನ್ನು ಮಾಡದೇ ಇರುವಿಕೆ–ಎಂಬ ಎಲ್ಲ ಪಾಪಗಳ ದೆಸೆಯಿಂದಲೂ ಬಿಡಿಸುತ್ತೇನೆ. ಅಥವಾ–ಎಲ್ಲ ಪಾಪಗಳನ್ನೂ ಕಳೆದುಕೊಂಡು ಅತ್ಯಂತವಾಗಿ ಭಗವತ್ಪ್ರಿಯನಾಗಿರುವ ಪುರುಷನಿಂದಲೇ ಭಕ್ತಿಯೋಗವನ್ನು ಆಚರಿಸಲು ಸಾಧ್ಯ. ಆದರೆ ಆರಂಭಕ್ಕೆ ವಿರೋಧಿಗಳಾಗಿರುವ ಪಾಪಗಳು ಅನಂತವಾಗಿವೆ. ಅದಕ್ಕೆ ಪ್ರಾಯಶ್ಚಿತ್ತರೂಪವಾಗಿರುವ ಧರ್ಮಗಳನ್ನು ಪರಿಮಿತಕಾಲದಲ್ಲಿ ಮಾತ್ರ ಆಚರಿಸಬಹುದು. ಅಂತಹವುಗಳಿಂದ ಆ ಅನಂತಪಾಪಗಳನ್ನು ದಾಟುವುದು ತುಂಬ ಕಷ್ಟ. ಆದುದರಿಂದ ತಾನು ಭಕ್ತಿಯೋಗವನ್ನು ಆರಂಭಿ ಸುವುದಕ್ಕೆ ಅನರ್ಹನಾಗಿರುವೆನಲ್ಲಾ–ಎಂದು ದುಃಖಿಸುತ್ತಿದ್ದ ಅರ್ಜುನನ ಶೋಕವನ್ನು ಹೋಗಲಾಡಿಸುತ್ತಾ ಶ್ರೀಭಗವಂತನು ಎಲ್ಲ ಧರ್ಮಗಳನ್ನೂ ಬಿಟ್ಟು ನನ್ನನ್ನೇ ಶರಣುಹೊಂದು ಎಂದು ಹೇಳುತ್ತಾನೆ. ಪರಿಮಿತವಾದ ಕಾಲದಲ್ಲಿ ಇರುವ ನೀನು ಭಕ್ತಿಯೋಗದ ಆರಂಭಕ್ಕೆ ವಿರೋಧಿಗಳಾಗಿ ಅನಾದಿಕಾಲದಿಂದ ಸಂಚಿತವಾಗಿರುವ ನಾನಾವಿಧವಾದ ಅನಂತಪಾಪಗಳಿಗೆ ತಕ್ಕ ಪ್ರಾಯಶ್ಚಿತ್ತಗಳಾದ ಕೃಚ್ಛ್ರ-ಚಾಂದ್ರಾಯಣಗಳೇ ಮುಂತಾದ ಅನುಷ್ಠಾನ ಮಾಡಲು ಅತಿಕಷ್ಟವಾದ, ನಾನಾವಿಧವೂ, ಅನಂತವೂ ಆದ ಎಲ್ಲ ಧರ್ಮಗಳನ್ನೂ ತ್ಯಜಿಸಿ ಭಕ್ತಿಯೋಗದ ಆರಂಭವು ಸಿದ್ಧಿಸುವುದಕ್ಕೋಸ್ಕರ ಪರಮ ಕಾರುಣಿಕನೂ, ಸರ್ವಶರಣ್ಯನೂ, ಆಶ್ರಿತವಾತ್ಸಲ್ಯಸಮುದ್ರನೂ ಆದ ನನ್ನೊಬ್ಬನನ್ನೇ ಶರಣುಹೊಂದು. ನಾನು ನಿನ್ನನ್ನು ಹಿಂದೆ ಹೇಳಿದ ಸ್ವರೂಪವುಳ್ಳ ಭಕ್ತಿಯ ಆರಂಭಕ್ಕೆ ವಿರೋಧಿಗಳಾದ ಎಲ್ಲ ಪಾಪಗಳ ದೆಸೆಯಿಂದಲೂ ಬಿಡಿಸುತ್ತೇನೆ, ದುಃಖಿಸಬೇಡ. (ರಾ. ಭಾ.)

ಧರ್ಮತ್ಯಾಗ ಎಂದರೆ ಫಲತ್ಯಾಗ, ಹಾಗಿಲ್ಲದಿದ್ದರೆ ಯುದ್ಧವನ್ನೇಕೆ ವಿಧಾನಮಾಡುತ್ತಿದ್ದ? **ಯಸ್ತು ಕರ್ಮಫಲತ್ಯಾಗೀ ಸ ತ್ಯಾಗೀತ್ಯ**

ಭಿಧೀಯತೇ–ಎಂದು ಭಗವಂತನೇ ತ್ಯಾಗಶಬ್ದಕ್ಕೆ ವ್ಯಾಖ್ಯಾನಮಾಡಿದ್ದಾನೆ.

(ಮ. ಭಾ.)

o o o

**ಸರ್ವಧರ್ಮಾನ್**–ಎಂಬುದಕ್ಕೆ ಇರುವ ಇನ್ನೂ ಹಲವಾರು ವ್ಯಾಖ್ಯಾನಗಳು :

1) ಸರ್ವಧರ್ಮಗಳೆಂದರೆ ಸರ್ವಕರ್ಮಫಲಗಳು ಎಂದು ಮಾತ್ರವೇ ಅರ್ಥ. ನಿತ್ಯ-ನೈಮಿತ್ತಿಕಕರ್ಮಗಳು ಎಂದಿಗೂ ಬಿಡತಕ್ಕುವುಗಳಲ್ಲ. ಅವುಗಳನ್ನು ಮಾಡಲೇಬೇಕು. ಫಲಾಭಿಸಂಧಿಯಿಲ್ಲದೇ ಮಾಡಬೇಕು–ಎಂಬ ಅರ್ಥವೇ ಹೊರತು ಎಲ್ಲ ಧರ್ಮಗಳನ್ನೂ ಬಿಡಬೇಕೆಂಬ ಅರ್ಥವಲ್ಲ.

2) **ಸರ್ವಧರ್ಮಾನ್**–ಎಂಬುದಕ್ಕೆ ನಿತ್ಯ-ನೈಮಿತ್ತಿಕಕರ್ಮಗಳನ್ನೊಳಗೊಂಡ ಎಲ್ಲ ಆಶ್ರಮಧರ್ಮಗಳನ್ನೂ ಬಿಟ್ಟು–ಎಂದೇ ಅರ್ಥ. ಅಶಕ್ತರಾದವರಿಗೆ ದಯಾಮಯನಾದ, ಕರುಣಾಸಾಗರನಾದ ಪರಮಾತ್ಮನು ತೋರಿಸಿ ಕೊಟ್ಟಿರುವ ಮಾರ್ಗವಿದು. ಯಾವ ಕರ್ಮಗಳನ್ನೂ ಮಾಡಬೇಕಾಗಿಲ್ಲ. ಅವನೊಬ್ಬನನ್ನೇ ಅನನ್ಯನಾಗಿ, ಅವ್ಯಭಿಚಾರಿಣೀಭಕ್ತಿಯಿಂದ ಆಶ್ರಯಿಸಿಬಿಟ್ಟರೆ ಸಾಕು. ಅವನು ಹೇಳಿರುವಂತೆ ಎಲ್ಲ ಪಾಪಗಳನ್ನೂ ಹೋಗಲಾಡಿಸಿ ಬಿಡುತ್ತಾನೆ.

3) ಸರ್ವಧರ್ಮಗಳು ಎಂದರೆ ಧರ್ಮಗಳೂ ಮತ್ತು ಅಧರ್ಮಗಳೂ ಸಹ ಇಲ್ಲಿ ವಿವಕ್ಷಿತವಾಗಿವೆ. ಧರ್ಮಾಧರ್ಮಗಳೆರಡೂ ಪ್ರತಿಬಂಧಕಗಳೇ. ಧರ್ಮವು ಪುಣ್ಯಫಲವನ್ನು ಕೊಟ್ಟು ಸ್ವರ್ಗಸುಖವನ್ನು ಕೊಡುತ್ತದೆ. ಅಧರ್ಮವು ಪಾಪಫಲವನ್ನು ಕೊಟ್ಟು ನರಕಕ್ಕೆ ಕಾರಣವಾಗುತ್ತದೆ. ಆದರೆ ಧರ್ಮ-ಅಧರ್ಮ ಎರಡರಿಂದಲೂ ಜನ್ಮ-ಮೃತ್ಯು-ಜರಾ-ವ್ಯಾಧಿಗಳು ತಪ್ಪುವುದಿಲ್ಲ. ಆದುದರಿಂದ ಧರ್ಮಾಧರ್ಮಗಳೆರಡನ್ನೂ ಬಿಡಬೇಕೆಂಬುದೇ ಪರಮಾತ್ಮನ ಅಭಿಪ್ರಾಯ. ಮಹಾಭಾರತದ ಶಾಂತಿಪರ್ವದಲ್ಲಿಯೂ ಸಹ ಇದೇ ಅರ್ಥದ ಶ್ಲೋಕವಿದೆ :

**ತ್ಯಜ ಧರ್ಮಮಧರ್ಮಂ ಚ ಉಭೇ ಸತ್ಯಾನೃತೇ ತ್ಯಜ ।**
**ಉಭೇ ಸತ್ಯಾನೃತೇ ತ್ಯಕ್ತ್ವಾ ಯೇನ ತ್ಯಜಸಿ ತತ್ತ್ಯಜ ॥**

**ಏತತ್ತೇ ಪರಮಂ ಗುಹ್ಯಮಾಖ್ಯಾತಮೃಷಿಸತ್ತಮ ॥**

ಶಾಂತಿಪರ್ವ ೩೨೯-೪೦

ಧರ್ಮವನ್ನೂ ತ್ಯಜಿಸು ; ಅಧರ್ಮವನ್ನೂ ತ್ಯಜಿಸು. ಸತ್ಯವನ್ನೂ ತ್ಯಜಿಸು; ಅಸತ್ಯವನ್ನೂ ತ್ಯಜಿಸು. ಸತ್ಯಾನೃತಗಳೆರಡನ್ನೂ ಬಿಟ್ಟು ಅವುಗಳನ್ನು ಯಾವುದರ ಮೂಲಕವಾಗಿ ತ್ಯಜಿಸುವೆಯೋ ಅದನ್ನೂ ತ್ಯಜಿಸಿಬಿಡು. (ಅದೇ 'ನಾನು' ಎಂಬುವ ಅಹಂಕಾರ.)

**ತ್ಯಜ ಧರ್ಮಮಸಙ್ಕಲ್ಪಾದಧರ್ಮಂ ಚಾಪ್ಯಲಿಪ್ಸಯಾ ।**
**ಉಭೇ ಸತ್ಯಾನೃತೇ ಬುದ್ಧ್ವಾ ಬುದ್ಧಿಂ ಪರಮನಿಶ್ಚಯಾತ್ ॥**

ಸಂಕಲ್ಪರಹಿತನಾಗುವಿಕೆಯಿಂದ–ಧರ್ಮವನ್ನೂ, ಆಶೆಯನ್ನು ಬಿಡುವುದರಿಂದ ಅಧರ್ಮವನ್ನೂ, ಬುದ್ಧಿಯಿಂದ–ಸತ್ಯಾನೃತಗಳನ್ನೂ, ಪರಮ ನಿಶ್ಚಯದಿಂದ–(ಪರತತ್ತ್ವದ ಸಾಕ್ಷಾತ್ಕಾರದಿಂದ) ಬುದ್ಧಿಯನ್ನೂ ತ್ಯಾಗಮಾಡು.

**ರಥ್ಯಾಕರ್ಪಟವಿರಚಿತಕನ್ಥಃ ಧರ್ಮಾಧರ್ಮವಿವರ್ಜಿತಪನ್ಥಃ ।**
**ಯೋಗೀ ಯೋಗನಿಯೋಜಿತಚಿತ್ತಃ ರಮತೇ ಬಾಲೋನ್ಮತ್ತವದೇವ ॥**

ಯಾವ ಸ್ಥಿತಿಯಲ್ಲಿ ಧರ್ಮಾಧರ್ಮಗಳ ತ್ಯಾಗವು ತಾನೇ ತಾನಾಗಿ ಉಂಟಾಗುವುದೆಂಬುದನ್ನೂ–ನೈಷ್ಕರ್ಮ್ಯಸಿದ್ಧಿಯಾಗುವುದೆಂಬುದನ್ನೂ ಶ್ರೀಶಂಕರರು ಈ ಶ್ಲೋಕದಲ್ಲಿ ಹೇಳಿದ್ದಾರೆ.

ಯೋಗದಲ್ಲಿಯೇ (ಪರಮಾತ್ಮನಲ್ಲಿಯೇ) ನೆಲೆಗೊಂಡ ಮನಸ್ಸುಳ್ಳ ಯೋಗಿಯು ಬೀದಿಯಲ್ಲಿ ಬಿದ್ದಿರುವ ಚಿಂದೀಬಟ್ಟೆಗಳನ್ನೇ ಗಂಟುಕಟ್ಟಿಕೊಂಡು ತಿರುಗುತ್ತಿರುತ್ತಾನೆ. ಧರ್ಮಾಧರ್ಮಗಳು ಎರಡೂ ಇಲ್ಲದ ಮಾರ್ಗವನ್ನೇ ಹಿಡಿದಿರುತ್ತಾನೆ. ಬಾಲಕನಂತೆ ಅಥವಾ ಹುಚ್ಚನಂತೆ ಅಥವಾ ಉನ್ಮನೀಭಾವ (ಸಮಾಧಿ) ಸ್ಥಿತಿಯಲ್ಲಿರುವವನಂತೆಯೇ ಸರ್ವದಾ ಆನಂದಪಡುತ್ತಿರುತ್ತಾನೆ.

ಈ ರೀತಿಯಲ್ಲಿ ಆತ್ಮಾರಾಮನನ್ನು ಆಶ್ರಯಿಸಿರುವವನಿಗೆ ಪಾಪಗಳ ಸೋಂಕೇ ಇರುವುದಿಲ್ಲ.

4) ಸರ್ವಧರ್ಮಗಳು ಎಂದರೆ ಎಲ್ಲ ಪುಣ್ಯಗಳು ; ವಿಹಿತಕರ್ಮಾಚರಣೆಯಿಂದ ಉಂಟಾಗುವ ಅದೃಷ್ಟವಿಶೇಷ ಅಥವಾ ಪುಣ್ಯ.

**ಏಕ ಏವ ಸುಹೃದ್ಧರ್ಮೋ ನಿಧನೇऽಪ್ಯನುಯಾತಿ ಯಃ ।**
**ಶರೀರೇಣ ಸಮಂ ನಾಶಂ ಸರ್ವಮನ್ಯತ್ತು ಗಚ್ಛತಿ ॥**

ಧರ್ಮವೊಂದೇ ನಿಜವಾದ ಸ್ನೇಹಿತ. ಇದು ಸತ್ತನಂತರವೂ ಜೀವನನ್ನು ಅನುಸರಿಸಿಯೇ ಹೋಗುತ್ತದೆ. ಉಳಿದುದೆಲ್ಲವೂ ಶರೀರದೊಡನೆಯೇ ವಿನಾಶಹೊಂದುತ್ತದೆ.

ಇದು ಕಾಯ, ವಾಕ್ಕು ಮತ್ತು ಮನಸ್ಸು–ಇವುಗಳಿಂದ ಉಂಟಾಗುವುದರಿಂದ ಮೂರು ವಿಧ. **ದಾನ-ಆರ್ತ-ಪರಿತ್ರಾಣ** ಇತ್ಯಾದಿ ಶರೀರವ್ಯಾಪಾರಗಳಿಂದ ಲಭ್ಯವಾಗುವ ಪುಣ್ಯ. ಹಿತವಾದ ನುಡಿ, ಸತ್ಯವಚನ ಇತ್ಯಾದಿ ವಾಗ್ವ್ಯಾಪಾರಗಳಿಂದ ಲಭ್ಯವಾಗುವ ಪುಣ್ಯ. **ಅಹಿಂಸಾ ಪರಮೋ ಧರ್ಮಃ ಹಿಂಸಾ ಚಾಧರ್ಮಲಕ್ಷಣಂ**–ಎಂಬ ವಚನದಂತೆ ಪರಹಿಂಸಾಪರಿಹಾರವು ಮನೋವ್ಯಾಪಾರದಿಂದ ಬರುವ ಪುಣ್ಯ. ಅರ್ಥಾತ್ ನಿತ್ಯ-ನೈಮಿತ್ತಿಕಕರ್ಮಗಳಿಂದ ಪ್ರಾಪ್ತವಾಗುವ ಸರ್ವಪುಣ್ಯಗಳನ್ನೂ ಪರಿತ್ಯಜಿಸಿ–ಎಂದೂ ಅರ್ಥಮಾಡಬಹುದಾಗಿದೆ. ಕರ್ಮಯೋಗದ ಮೂಲಕ ಸರ್ವಕರ್ಮಫಲಗಳನ್ನೂ ಪರಿತ್ಯಾಗಮಾಡಿ ಎಂಬ ಅಭಿಪ್ರಾಯ. ಪಾಪಗಳನ್ನು ಹೋಗಲಾಡಿಸಿಕೊಳ್ಳಲು ಪುಣ್ಯಕರ್ಮಗಳನ್ನು ಮಾಡಬೇಕು. ಮಾಡಿದ ಸತ್ಕರ್ಮಗಳ ಪುಣ್ಯಗಳೆಲ್ಲವನ್ನೂ ತ್ಯಾಗಮಾಡಿಬಿಟ್ಟರೆ ಸಂಚಿತವಾದ ಪಾಪವೆಲ್ಲಿ ಹೋಗಬೇಕು? ಜನ್ಮಾಂತರದಿಂದಲೂ ಸಂಚಿತವಾಗಿರುವ ಪಾಪಗಳೆಲ್ಲವೂ ಹಾಗೆಯೇ ಉಳಿದು ಅನೇಕಾನೇಕಪುನರ್ಜನ್ಮಗ್ರಳಿಗೆ ಕಾರಣವಾಗುವುದಿಲ್ಲವೇ?–ಎಂಬ ಸಂಶಯಕ್ಕೆ ಶ್ರೀಕೃಷ್ಣನು ಅಭಯನೀಡುತ್ತಾನೆ. ಕರ್ಮಸಂಬಂಧವಾದ ಸರ್ವಪುಣ್ಯಗಳನ್ನೂ ಪರಿತ್ಯಜಿಸಿ ಫಲಾಭಿಸಂಧಿಯಿಲ್ಲದೇ ಕರ್ಮಮಾಡಿ ಎಲ್ಲ ಕರ್ಮಗಳನ್ನೂ ಪರಮಾತ್ಮನ ಪಾದಾರವಿಂದಗಳಲ್ಲಿ ಅರ್ಪಿಸಿ '**ಚೇತಸಾ ಸರ್ವಕರ್ಮಾಣಿ ಮಯಿ ಸಂನ್ಯಸ್ಯ । ಮಾಮೇಕಂ ಶರಣಂ ವ್ರಜ । ಮತ್ಪರೋ ಭವ**–ನನ್ನನ್ನೇ ಶರಣುಹೊಂದು. ಅವ್ಯಭಿಚಾರಿಣೀಭಕ್ತಿಯಿಂದ ನನ್ನನ್ನೇ ಅನನ್ಯಶರಣನನ್ನಾಗಿ ಹೊಂದು. ಕೋತಿಯ ಮರಿಯಂತೆ ನೀನು ನನ್ನನ್ನು ಬಲವಾಗಿ ಹಿಡಿದುಕೊಂಡಿದ್ದೇ ಆದರೆ ನಿನ್ನ ಹಿಂದಿನ ಇಂದಿನ ಸರ್ವಪಾಪಗಳನ್ನೂ ನಾನು ಹೋಗಲಾಡಿಸುತ್ತೇನೆ. ಆದುದರಿಂದ 'ಪುಣ್ಯವನ್ನು

ಕಳೆದುಕೊಂಡ ನನಗೆ ಪಾಪವು ಹಾಗೆಯೇ ಉಳಿಯುವುದಲ್ಲಾ?' ಎಂದು ನೀನು ಶೋಕಿಸಬೇಕಾಗಿಲ್ಲ. **ಮಾ ಶುಚಃ**–ದುಃಖಿಸಬೇಡ ಎಂದು ಶ್ರೀಕೃಷ್ಣನು ಇಲ್ಲಿ ಹೇಳಿರುವುದರಿಂದ ಅರ್ಜುನನು ದುಃಖಿಸುತ್ತಿದ್ದಾನೆಂದು ಭಾವಿಸ ಬಾರದು. ಹನ್ನೊಂದನೆಯ ಅಧ್ಯಾಯದ ಮೊದಲನೆಯ ಶ್ಲೋಕದಲ್ಲಿಯೇ ಅರ್ಜುನನು **ಮೋಹೋಽಯಂ ವಿಗತೋ ಮಮ**–ನನ್ನಲ್ಲಿದ್ದ ಮೋಹವು (ಶೋಕವು) ಹೊರಟುಹೋಯಿತೆನ್ನುತ್ತಾನೆ. ಎರಡನೆಯ ಅಧ್ಯಾಯದ ೧೧ನೆಯ ಶ್ಲೋಕದಲ್ಲಿ **ಅಶೋಚ್ಯಾನನ್ವಶೋಚಸ್ತ್ವಂ**–ಎಂದು ಭಗವಂತನು ಹೇಳಿದ್ದನು. ಕಡೆಯಲ್ಲಿ ಪುನಃ ಪ್ರವಚನವನ್ನು ಉಪಸಂಹಾರಮಾಡುತ್ತಾ **ಮಾ ಶುಚಃ** ಎಂದು ಸಮಾಧಾನ ಹೇಳುತ್ತಾನೆ. ಒಟ್ಟರ್ಥವನ್ನು ಹೀಗೆ ಹೇಳ ಬಹುದಾಗಿದೆ : ಕರ್ಮಮಾಡು. ಪುಣ್ಯಫಲಗಳನ್ನು ತ್ಯಾಗಮಾಡು (ಸಾತ್ತ್ವಿಕತ್ಯಾಗ.) ಅನನ್ಯಶರಣ್ಯನಾಗು. ವಾಸುದೇವನೇ ಸರ್ವಸ್ವವೆಂದು ಭಾವಿಸು. ನಿನ್ನನ್ನು ಪಾಪಗಳಿಂದ ನಾನು ವಿಮೋಚಿಸುತ್ತೇನೆ. ಪಾಪ-ಪುಣ್ಯ ಗಳೆರಡರ ಸೋಂಕೇ ಇಲ್ಲದ ನೀನು ಆತ್ಮಜ್ಞಾನವನ್ನೂ ಸುಲಭವಾಗಿ ಪಡೆದು ಕೊಳ್ಳುವೆ. ನಿನಗೆ ಮುಂದೆ ಸಾಂಸಾರಿಕವಾದ ಶೋಕವಿರುವುದಿಲ್ಲ.

5) ಶ್ರೀ ವಿನೋಬಾಭಾವೆಯವರು ಇಲ್ಲಿನ ಪ್ರಕರಣವನ್ನು ಹೀಗೆ ಚಿತ್ರಿಸಿ ದ್ದಾರೆ :

'ಅರ್ಜುನ! ನಾನು ಹೇಳಿದುದನ್ನೆಲ್ಲಾ ಸರಿಯಾಗಿ ಕೇಳಿದೆಯಾ? ಈಗ ಪೂರ್ಣವಿಚಾರಮಾಡಿ ನಿನಗೆ ತಿಳಿದ ಹಾಗೆ ಮಾಡು.' ಭಗವಂತನು ದೊಡ್ಡಸ್ತಿಕೆಯಿಂದ ಅರ್ಜುನನಿಗೆ ಸ್ವಾತಂತ್ರ್ಯವನ್ನು ನೀಡಿದನು. ಭಗವ ದ್ಗೀತೆಯ ವಿಶೇಷವೇ ಇದು. ಆದರೆ ಭಗವಂತನಿಗೆ ಮತ್ತೆ ಕಳವಳವಾಯಿತು. ನೀಡಿದ ಇಚ್ಛಾಸ್ವಾತಂತ್ರ್ಯವನ್ನು ಮತ್ತೆ ಹಿಂತೆಗೆದುಕೊಂಡನು. 'ಅರ್ಜುನ! ನಿನ್ನ ಸಾಧನೆಗಳನ್ನು ನಿನ್ನ ಇಚ್ಛೆಗಳನ್ನು ಬಿಸುಡು. ನನಗೆ ಶರಣು ಬಾ ಸಾಕು' ಎಂದನು. ತನಗೆ ಶರಣು ಬಾರೆಂದು ಕೊಟ್ಟ ಇಚ್ಛಾಸ್ವಾತಂತ್ರ್ಯವನ್ನು ಮರಳಿ ಕಿತ್ತುಕೊಂಡನು. ಇದರ ಅರ್ಥ ಹೀಗೆ : ನಿನಗೆ ಸ್ವಾತಂತ್ರ್ಯದ ಇಚ್ಛೆಯೇ ಆಗದಿರಲಿ. ಸ್ವಂತ ಇಚ್ಛೆಯನ್ನು ನಡೆಯಗೊಡಬೇಡ. ಅವನ ಇಚ್ಛೆಯು ನಡೆಯುವಂತೆ ಮಾಡು. 'ಸ್ವತಂತ್ರತೆ ಬೇಡ ಎನಿಸಲಿ ನಿನಗೆ ;

ನಾನಿಲ್ಲ, ಇರುವುದೆಲ್ಲಾ ನೀನೇ' ಎಂಬಂತಾಗಲಿ. ಕುರಿಯು ಬದುಕಿರುವಾಗ ಮೇ-ಮೇ ನಾ-ನಾ ಎನ್ನುತ್ತದೆ. ಅದು ಸತ್ತು ಅದರ ನರವನ್ನು ಪಿಂಜಾರದ ಬಿಲ್ಲಿಗೆ ಬಿಗಿದಾಗ ಕವಿ 'ದಾದು' ಹೇಳಿದಂತೆ ತುಹಿ-ತುಹಿ ನೀನೇ-ನೀನೇ ಎನ್ನುತ್ತದೆ. ಕಟ್ಟಕಡೆಗೆ ಎಲ್ಲವೂ ತುಹಿ-ತುಹಿ ನೀನೇ. ನೀನೇ.

ಸಂತಜ್ಞಾನೇಶ್ವರರು ಹೀಗೆ ವ್ಯಾಖ್ಯಾನಮಾಡುತ್ತಾರೆ :

6) **ಸರ್ವಧರ್ಮಾನ್ ಪರಿತ್ಯಜ್ಯ**–ಆಶೆಯೇ ದುಃಖದ ತಾಯಿ. ನಿಂದೆಯು ಪಾಪದ ತಾಯಿ. ಹಾಗೂ ದುರ್ದೈವವು ದೈನ್ಯದ ತಾಯಿ. ಅದರಂತೆ ಅಜ್ಞಾನವು ಸ್ವರ್ಗ-ನರಕಪ್ರಾಪ್ತಿಯ ಸಾಧನಗಳಾದ ಧರ್ಮಾಧರ್ಮಗಳ ತಾಯಿಯಾಗಿರುವುದು. ಆ ಅಜ್ಞಾನವನ್ನು ಈ ಜ್ಞಾನದಿಂದ ನಾಶಗೊಳಿಸು. ಹಗ್ಗವು ಕೈಗೆ ಬಂದಾಗ ಮೊದಲು ಭಾಸವಾದ ಸರ್ಪವು ನಷ್ಟವಾಗುವುದು. ರೋಗನಿವೃತ್ತಿಯಿಂದ ಬಾಯಿಯ ಕಹಿಯು ಹೋಗುವುದು. ಕಾಷ್ಠತ್ಯಾಗದಿಂದ ವಹ್ನಿತ್ಯಾಗವನ್ನಾದರೂ ಮಾಡಿದಂತಾಗುವುದು. ಹಾಗೆ ಧರ್ಮಾಧರ್ಮಗಳ ಬಗೆಗೆ ಅಂಜಿಕೆಯನ್ನುಂಟುಮಾಡುವುದು ಅಜ್ಞಾನ. ಆ ಅಜ್ಞಾನವನ್ನು ತ್ಯಜಿಸಿ ಎಲ್ಲ ಧರ್ಮಾಧರ್ಮಗಳಿಂದ ಮುಕ್ತನಾಗು. ಮಾಮೇಕಂ ಶರಣಂ ವ್ರಜ. ನಿದ್ದೆಯೆಂಬ ದೋಷದೊಡನೆ ಸ್ವಪ್ನವು ನಾಶವಾಗಲು ಎಚ್ಚೆತ್ತವನು ಒಬ್ಬನೇ ಒಬ್ಬನಾಗಿರುವನು. ಹಾಗೆ ಅಜ್ಞಾನ ನಾಶವಾಗಲು ನಾನೊಬ್ಬನೇ ಸಹಜವಾಗಿ ಉಳಿಯುವೆನು. ಒಂದು ನನ್ನ ಸತ್ತೆಯ ಹೊರತು ಜಗತ್ತಿನಲ್ಲಿ ಯಾವ ಪದಾರ್ಥಕ್ಕೂ ಭಿನ್ನತೆಯಿಂದಾಗಲೀ, ಅಭಿನ್ನತೆಯಿಂದಾಗಲೀ ಬಾಳಲು ಸ್ವತಂತ್ರಸತ್ತೆಯಿಲ್ಲ. ಇಂತು ನನ್ನ ಸರ್ವವ್ಯಾಪಕರೂಪವುಂಟು ; ನನ್ನದಾದಾಗಲೂ ವಸ್ತುತಃ ಅದೇ ಸ್ವರೂಪವುಂಟು ಎಂಬ ಶುದ್ಧಬೋಧೆಯಿಂದ ಅದರೊಡನೆ (ಬ್ರಹ್ಮದೊಡನೆ ) ಅನನ್ಯನಾಗು. (ಬೇರೆಯಾಗಿ ಉಳಿಯಬೇಡ.) ನಾನು ಸ್ವತಃ ಬೇರೆಯಾಗಿ ಉಳಿಯದೇ ಎಲ್ಲೆಡೆಗೆ ನಾನೇ ಒಬ್ಬನೇ ಒಬ್ಬನು ಇರುವೆನೆಂದು ನಿಃಸಂದೇಹವಾಗಿ ಅರಿತವನೇ ನನ್ನ ನಿಜವಾದ ಶರಣನು. ಘಟವೆಂಬ ಉಪಾಧಿಯ ನಾಶದಿಂದ ಘಟಾಕಾಶವು ಮಹಾಕಾಶದಲ್ಲಿ ಪ್ರವೇಶಿಸುವುದು. ಅದರಂತೆ ನೀನು ನನಗೆ ಶರಣಾಗತನಾಗಿ ನನ್ನಲ್ಲಿ ಐಕ್ಯಹೊಂದು. ಬಂಗಾರದ ಗುಂಡು ಬಂಗಾರದೊಡನೆಯೂ–ತೆರೆಗಳು ನೀರಿನೊಡನೆಯೂ ನಿತ್ಯವೂ ಅನನ್ಯವಾಗಿರುವುವು. ಅದ

ರಂತೆ ಅರ್ಜುನ! ನೀನು ನನಗೆ ಶರಣಾಗತನಾಗಿರಬೇಕು. ಶರಣುಬರುವ ಬಗೆಯು ಇನ್ನೊಂದುಂಟು. ವಡವಾನಲವು ಸಮುದ್ರಕ್ಕೆ ಶರಣುಬಂದು ಅದರ ಆಂತರ್ಯದಲ್ಲಿ ಉಳಿಯಿತು. ಆದರೆ ಅದು ಅಲ್ಲಿಯಾದರೂ ದಾಹರೂಪ ದಿಂದಲೇ ಪ್ರತ್ಯೇಕವಾಗಿಯೇ ಉಳಿದಿದೆ. ಅಂತಹ ಶರಣಾಗತಿಯು ಮಾತ್ರ ಬೇಡ. ನನಗೂ ಶರಣಾಗತನಾಗಿ ತನಗೆ ಮತ್ತೆ ಜೀವವೆಂದು ಹೇಳಿಕೊಳ್ಳು ವವರಿಗೆ ಅದೆಂತು ನಾಚಿಕೆಯುಂಟಾಗುವುದಿಲ್ಲವೋ ತಿಳಿಯೆನು. ಒಬ್ಬ ಅರಸನು ಸಾಮಾನ್ಯಸ್ತ್ರೀಯನ್ನು ಅಂಗೀಕರಿಸಿದರೂ ಕೂಡ ಅವಳು ರಾಣಿ ಯೆಂದೆನಿಸುವಳು. ಎಲ್ಲ ವಿಶ್ವದ ಸ್ವಾಮಿಯು ನಾನು. ನನ್ನ ದರ್ಶನವಾದ ಮೇಲಾದರೂ ಜೀವದೆಶೆಯು ಹಾಗೆಯೇ ಸ್ಥಿರವಾಗಿ ಉಳಿದಿದೆ–ಎಂಬುದು ಅಮಂಗಲವಾದ ಮಾತು. ಆ ಮದ್ರೂಪವನ್ನೇ ಹೊಂದುವುದನ್ನು ಸಾಧಿಸು. ಮೊಸರನ್ನು ಕಡೆದು ಮಜ್ಜಿಗೆಯಿಂದ ಬೆಣ್ಣೆಯನ್ನು ಬೇರೆ ತೆಗೆಯಬೇಕು. ಬಳಿಕ ಅದನ್ನು ಮತ್ತೆ ಮಜ್ಜಿಗೆಯಲ್ಲಿಟ್ಟರೆ ಅದು ಏಕರೂಪವಾಗದು. ಶುದ್ಧಾದ್ವಯ ಬೋಧೆಯಿಂದ ಶರಣುಬಂದರೆ (ಮದ್ರೂಪನಾದರೆ) ನಿನಗೆ ಧರ್ಮಾಧರ್ಮಗಳ ಸ್ಪರ್ಶವಾಗದು. ಕಬ್ಬಿಣವು ಮಣ್ಣಿನಲ್ಲಿರುವಾಗ ಮಣ್ಣು ಅದನ್ನು ತಿನ್ನುವುದು. ಆದರೆ ಅದೇ ಕಬ್ಬಿಣವು ಸ್ಪರ್ಶಶಿಲೆಯಿಂದ ಬಂಗಾರ ವಾಗಿ ಬಿಟ್ಟರೆ ಮಣ್ಣಿನಿಂದ ಅದಕ್ಕೆ ಯಾವ ಉಪದ್ರವವೂ ಇರುವುದಿಲ್ಲ. **ಅಹಂ ತ್ವಾ ಸರ್ವಪಾಪೇಭ್ಯಃ ಮೋಕ್ಷಯಿಷ್ಯಾಮಿ**–ಕಟ್ಟಿಗೆಯ ಸಂಘರ್ಷಣ ದಿಂದ ಉತ್ಪನ್ನವಾದ ಬೆಂಕಿಯು ಅನಂತರದಲ್ಲಿ ಕಟ್ಟಿಗೆಗಳಿಂದ ಮುಚ್ಚಲ್ಪಡ ಲಾರದು. ಸೂರ್ಯನಿಗೆ ಎಂದಾದರೂ ಕತ್ತಲೆಯ ದರ್ಶನವಾಗುವುದೇ? ಸ್ವಪ್ನದಲ್ಲಿ ಕಲ್ಪಿಸಿದ ವ್ಯವಹಾರಗಳು ಜಾಗ್ರತಿಯಲ್ಲಿ ತೋರುವುದೇ? ಅದ ರಂತೆ ನನ್ನೊಡನೆ ಐಕ್ಯವಾದ ಮೇಲೆ ಮತ್ತು ನಾನು ಎಲ್ಲೆಡೆಗೆ ಏಕರೂಪ ದಿಂದ ತುಂಬಿಕೊಂಡಿರುವ ಮೂಲಕ ನನ್ನನ್ನುಳಿದು ಅನ್ಯಪದಾರ್ಥವು ಉಳಿ ಯುವ ಕಾರಣವೇನು? ಆದುದರಿಂದ ನಿನ್ನಲ್ಲಿದ್ದ ಪಾಪ-ಪುಣ್ಯಗಳ ಬಗೆಗೆ ಏನೂ ಚಿಂತಿಸದಿರು. ಅದಕ್ಕೆ ನಾನು ಹೊಣೆಗಾರನು. ಏಕೆಂದರೆ : ಅವೆರಡೂ ನಾನೇ ಆಗಿರುವೆನು. ಹೀಗಾದಮೇಲೆ ನನ್ನಿಂದ ಭಿನ್ನವಾಗಿರುವುದೇ ಪಾಪವು. ಅದೇ ನನ್ನ ಸರ್ವಾತ್ಮೈಕ್ಯಜ್ಞಾನದಲ್ಲಿ ಸುಳ್ಳಾಗಿಹೋಗುವುದು. ನೀರಿನಲ್ಲಿ ಬಿದ್ದ ಉಪ್ಪಿಗೆ ಸರ್ವಾಂಗದಿಂದಲೂ ಜಡರೂಪವು ಬರುವುದು. ಅದರಂತೆ

ನನ್ನಲ್ಲಿ ಅನನ್ಯಭಾವದಿಂದ ಶರಣಾಗತನಾದ ನಿನಗೆ ಮದ್ರೂಪತೆಯುಂಟಾಗುವುದು. ಹೀಗಾಯಿತೆಂದರೆ ನೀನು ಸಹಜವಾಗಿ ಮುಕ್ತನೇ ಇರುವೆ. ಆದರೆ ಯಥಾರ್ಥಸ್ವರೂಪದ ಪ್ರಕಾಶವನ್ನು (ಬೋಧೆಯನ್ನು ) ಅಂತಃಕರಣವೃತ್ತಿಯ ಮೇಲೆ ಸ್ಥಿರಗೊಳಿಸು. ಅರ್ಜುನ! ನಾನು ಒಬ್ಬನೇ ಒಬ್ಬನು ಸರ್ವವ್ಯಾಪಕನು. ಅಂತಹ ನನ್ನನ್ನು ಗುರುತಿಸಿ ಅರ್ಥಾತ್ ತತ್ತ್ವತಃ ತದ್ರೂಪನಾಗಿ ಶರಣು ಬಾ.

ಡಾ ॥ ಡಿ.ವಿ.ಜಿ. ಯವರ ವಿವರಣೆ :

7) ಇಲ್ಲಿ ಒಂದು ಪ್ರಶ್ನೆ. **ಸರ್ವಧರ್ಮಾನ್ ಪರಿತ್ಯಜ್ಯ**–ಎಲ್ಲ ಧರ್ಮಗಳನ್ನೂ ತ್ಯಜಿಸಿ. **ಮಾಂ ಏಕಂ ಶರಣಂ ವ್ರಜ**–ಭಗವಂತನೊಬ್ಬನನ್ನೇ ಶರಣುಹೊಂದು. ಇದು ಉಪದೇಶ. ಒಳ್ಳೆಯದು. "ಎಲ್ಲ ಧರ್ಮಗಳನ್ನೂ ಬಿಟ್ಟು ಶರಣಾಗು"–ಎಂಬುದರಲ್ಲಿ ಏನು ಅಭಿಪ್ರಾಯ? ಶರಣಾಗುವುದೂ ಒಂದು ಧರ್ಮವಲ್ಲವೋ? ಶರಣಾಗತಿ ಅಧರ್ಮವೋ? ಮೇಲಿನ ಶ್ಲೋಕದಲ್ಲಿ **ಸರ್ವಧರ್ಮಾನ್** ಎಂಬುದಕ್ಕೆ ಪ್ರತಿಯಾಗಿ **ಅನ್ಯಧರ್ಮಾನ್** ಎಂದು ಇದ್ದಿದ್ದರೆ ಈ ಪ್ರಶ್ನೆಗೆ ಅವಕಾಶವಿರುತ್ತಿರಲಿಲ್ಲ. ಶ್ಲೋಕವನ್ನು ಇರುವಂತೆ ಇರಿಸಿಕೊಂಡು **ಸರ್ವಧರ್ಮಾನ್ ಪರಿತ್ಯಜ್ಯ**–ಎಂಬ ಉಪದೇಶವನ್ನೂ, **ಶರಣಂ ವ್ರಜ**–ಎಂಬ ಉಪದೇಶವನ್ನೂ ಸಮಂಜಸವಾಗಿ ಹೊಂದಿಸಬೇಕಾದರೆ **ಸರ್ವಧರ್ಮಾನ್** ಎಂಬುದಕ್ಕೆ–'ಲೋಕದಲ್ಲಿ ಬಳಕೆಯಾಗಿರುವ ವಾದ-ವಿವಾದಾಸ್ಪದಗಳಾದ ಧರ್ಮಗಳನ್ನು ಬದಿಗಿರಿಸಿ'–ಎಂದೂ, **ಶರಣಂ ವ್ರಜ** ಎಂದರೆ–'ಲೋಕಧರ್ಮಗಳನ್ನು ಮೀರಿದ ಒಂದು ವಿಶೇಷಸನ್ಮಾರ್ಗವನ್ನು ಒಂದು ಅಧಿಧರ್ಮವನ್ನು ಅವಲಂಬಿಸು'–ಎಂದೂ ಭಾವಿಸಬೇಕಾಗುತ್ತದೆ.

**ಜಗಮಿರ್ವನ್ನಂ ಧರ್ಮಂ । ಜಗ ನಿನಗಿರದಂದು ಸರ್ವಮಾತ್ಮೈಕಮಯಂ**

ಅರ್ಜುನನು ಸಾಮಾನ್ಯಮನುಷ್ಯರಂತಲ್ಲ. ಎರಡು ಲಕ್ಷಣಗಳಲ್ಲಿ (೧) ಸಂದೇಹಿತೆಯಲ್ಲಿ. (೨) ವಿರಕ್ತತೆಯಲ್ಲಿ. ಮೊದಲನೆಯದಾಗಿ ಅವನು ವಿಶೇಷ ಸಂದೇಹಿ. ಪ್ರತಿಯೊಂದು ಉಪದೇಶಪ್ರಕರಣದಲ್ಲಿಯೂ ಅವನು ಪದೇ ಪದೇ ಪ್ರಶ್ನೆಹಾಕುತ್ತಿದ್ದ. ಭಗವಂತನು ಕೊಟ್ಟ ಪ್ರತ್ಯುತ್ತರವನ್ನು ಕೇಳುತ್ತಿದ್ದಾಗ ಅವನಿಗೆ ನಂಬಿಕೆ ಬರುತ್ತಿತ್ತು . ಮತ್ತೆ ಸಂಶಯ ; ಮತ್ತೆ ಪ್ರಶ್ನೆ. ಹೀಗೆ

ಡೋಲಾಯಮಾನವಾಗಿತ್ತು ಅವನ ಮನಸ್ಸು. ಹಳೆಯ ಶಂಕೆ ಹೋದರೆ ಹೊಸ ಶಂಕೆ. ಇಂತಹವನಿಗೆ ಬರಿಯ ಶಾಸ್ತ್ರೋಕ್ತಿಯಿಂದಲೂ, ತರ್ಕದಿಂದಲೂ, ವಾದಯುಕ್ತಿಯಿಂದಲೂ ಪ್ರಯೋಜನವಾಗದು. ಅವನಿಗೆ ಮೊದಲು ಆಗಬೇಕಾಗಿದ್ದ ಸಹಾಯ ಶ್ರದ್ಧಾಬಲ. ಶಾಸ್ತ್ರ-ತರ್ಕಗಳಲ್ಲಿ ಅವನಿಗೆ ಇಲ್ಲದಿದ್ದ ವಿಶ್ವಾಸವು ಕೃಷ್ಣಪ್ರೀತಿಯಲ್ಲಿತ್ತು. ಇದನ್ನು ಶ್ರೀಕೃಷ್ಣ ಎಷ್ಟೋ ಬಾರಿ ಕಂಡಿದ್ದ. ತನ್ನ ಸ್ನೇಹ-ವಾತ್ಸಲ್ಯಗಳ ಪ್ರಭಾವದಿಂದ ಅರ್ಜುನನಲ್ಲಿ ಉದ್ಭೂತವಾಗಿದ್ದ ವಿಶ್ವಾಸವನ್ನು ಭಗವಚ್ಛ್ರದ್ಧೆಯಾಗಿ ಪರಿವರ್ತಿಸಬೇಕೆಂದು ಸ್ವಾಮಿಯ ಆಶಯ. ಆದುದರಿಂದ ಸ್ವಾಮಿ ಹೇಳಿದ : ಅರ್ಜುನ! ಕರ್ಮಯೋಗ, ಸಾಂಖ್ಯಯೋಗ, ಧ್ಯಾನಯೋಗ, ಸಂನ್ಯಾಸಯೋಗ, ವರ್ಣಧರ್ಮ, ಕುಲಧರ್ಮ, ಆಶ್ರಮಧರ್ಮ, ಸಗುಣೋಪಾಸನೆ, ನಿರ್ಗುಣೋಪಾಸನೆ–ಈ ನಾನಾಜಿಜ್ಞಾಸೆಗಳ ಪ್ರಯಾಸ ನಿನಗೆ ಬೇಕಿಲ್ಲ. ಆ ತಕರಾರುಗಳಿಂದ ನಿನ್ನ ಮನಸ್ಸಿಗೆ ಸಮಾಧಾನ ಬರಲಾರದು. ನಿನಗೆ ನನ್ನಲ್ಲಿ ನಂಬಿಕೆಯುಂಟಷ್ಟೇ? ನನ್ನ ಮಾತಿನಂತೆ ನಡೆದುಬಿಡು. ಯಾವುದು ಹೇಗಾದರೂ ಇದ್ದುಕೊಳ್ಳಲಿ. ತರ್ಕಕ್ಲೇಶ ನಿನಗೆ ಬೇಡ. ನನ್ನನ್ನು ನಂಬಿ ನಡೆದುಕೋ. ಅದರಿಂದ ಕೇಡಾಗದಂತೆ ನೋಡಿಕೊಳ್ಳುವ ಭಾರ ನನ್ನ ಮೇಲಿನದು. ಶಾಸ್ತ್ರವೇನನ್ನಾದರೂ ಹೇಳಲಿ, ಲೋಕವೇನನ್ನಾದರೂ ಮಾಡಲಿ–ಆ ಚಿಂತೆಯನ್ನು ಬದಿಗಿರಿಸು. ನಿನ್ನ ಶ್ರೇಯಸ್ಸು ನನಗೆ ಸೇರಿದ್ದು. **'ಮಾಮೇಕಂ ಶರಣಂ ವ್ರಜ'** ಭಗವದ್ಭಕ್ತಿಯೊಂದು ಸಂಪೂರ್ಣವಾಗಿ ದೃಢವಾಗಿದ್ದಲ್ಲಿ ಅದು ಎಲ್ಲ ನ್ಯೂನತೆಗಳನ್ನೂ ಸರಿಪಡಿಸಿ ಎಲ್ಲ ದೋಷಗಳನ್ನೂ ಹೋಗಲಾಡಿಸಿ ಎಲ್ಲ ಹಿತಗಳನ್ನೂ ಸಂಪಾದಿಸಿ ಕೊಡುತ್ತದೆ. ಅದು ಎಲ್ಲಕ್ಕಿಂತ ಮೇಲ್ಪಟ್ಟದ್ದು. ಆದುದರಿಂದ ಇದು ಎಲ್ಲ ಸಾಮಾನ್ಯಧರ್ಮಗಳಿಗಿಂತ ಮೇಲ್ಪಟ್ಟ, ಎಲ್ಲ ಧರ್ಮಗಳಿಗೂ ಮಸ್ತಕಪ್ರಾಯವಾದ ಅಧಿಧರ್ಮ. ಇದು ಕೇವಲ ಶ್ರದ್ಧಾರೂಪವಾದುದು. ಇದು ಬಹಿಃಪ್ರಮಾಣಗಳನ್ನೂ, ತರ್ಕ-ಜಿಜ್ಞಾಸೆಗಳನ್ನೂ ಅಪೇಕ್ಷಿಸುವುದಿಲ್ಲ. ಕೃಷ್ಣನಲ್ಲಿ ನಂಬಿಕೆ, ಸಂಪೂರ್ಣವಾದ ನಂಬಿಕೆ. ಅದೇ ಶರಣಾಗತಿ. ಅದಕ್ಕೆ ಕಾರ್ಯ-ಕಾರಣವಿಚಾರ ಬೇಕಿಲ್ಲ.

**ಅನ್ಯಥಾ ಶರಣಂ ನಾಸ್ತಿ ತ್ವಮೇವ ಶರಣಂ ಮಮ ।**

ಭಕ್ತಿಯೆಂಬ ಭಾವೋದ್ರೇಕವು ನಾಲ್ಕಾರು ಅಂತಸ್ತುಗಳಲ್ಲಿರುತ್ತದೆ. ಅದರ ಶಿಖರಾಗ್ರವೇ ಆತ್ಮಸಮರ್ಪಣೆ. ಅದೇ ಆತ್ಮನಿವೇದನೆ. ಅದೇ ಪ್ರಪತ್ತಿ ಅಥವಾ ಶರಣಾಗತಿ.

ಶ್ರೀತಿಲಕರು :

**ಸರ್ವಧರ್ಮಾನ್ ಪರಿತ್ಯಜ್ಯ** = ಸರ್ವಧರ್ಮಗಳನ್ನೂ ತ್ಯಾಗಮಾಡು. ಬಿಟ್ಟುಬಿಡು. ಸರ್ವಧರ್ಮಗಳನ್ನು ಎಂದರೆ ಅಹಿಂಸಾಧರ್ಮ, ಸತ್ಯಧರ್ಮ, ಮಾತಾ-ಪಿತೃಸೇವಾಧರ್ಮ, ಗುರುಸೇವಾಧರ್ಮ, ಯಜ್ಞ-ಯಾಗಧರ್ಮ, ದಾನಧರ್ಮ, ಸಂನ್ಯಾಸಧರ್ಮ, ವರ್ಣಾಶ್ರಮಧರ್ಮ–ಮುಂತಾದ ಪರಮೇಶ್ವರನ ಪ್ರಾಪ್ತಿಗೋಸ್ಕರ ಹೇಳಿದ ಅನೇಕ ಶಾಸ್ತ್ರೋಕ್ತಧರ್ಮಗಳೇ ಅಭಿಪ್ರೇತವಾಗಿರುವುವೆಂದು ಹೇಳಬೇಕಾಗುವುದು. 'ಇಂತಹ ಧರ್ಮಗಳ ಗೋಜಿಗೆ ಹೋಗದೇ ನೀನು ನನ್ನೊಬ್ಬನನ್ನೇ ಭಜಿಸು. ನಾನು ನಿನ್ನನ್ನು ಉದ್ಧರಿಸುವೆನು. ಚಿಂತೆಮಾಡಬೇಡ'–ಎಂದು ಭಗವಂತನು ಈ ಸ್ಥಳದಲ್ಲಿ ಗೀತಾಪ್ರತಿಪಾದ್ಯವಾದ ಧರ್ಮವನ್ನು ಉದ್ದೇಶಿಸಿ ನಿಶ್ಚಯಾತ್ಮಕವಾಗಿ ಹೇಳಿದ್ದಾನೆ. ಸಾರಾಂಶವೆಂದರೆ : ನನ್ನಲ್ಲಿ ದೃಢವಾದ ಭಕ್ತಿಯನ್ನಿಟ್ಟು ಮತ್ಪರಾಯಣಬುದ್ಧಿಯಿಂದ ಸ್ವಧರ್ಮೋಚಿತಕರ್ಮಗಳನ್ನು ಮಾಡುತ್ತಿರುವವರಾಗಿ. ಅಂದರೆ ಇಹಲೋಕದಲ್ಲಿಯೂ ಪರಲೋಕದಲ್ಲಿಯೂ ನಿಮಗೆ ಕಲ್ಯಾಣವಾಗುವುದು. ಅಂಜಬೇಡಿರಿ–ಎಂದು ಅರ್ಜುನನ ಮಿಷದಿಂದ (ನೆಪದಿಂದ) ಭಗವಂತನು ಕೊನೆಗೆ ಸರ್ವರಿಗೂ ಆಶ್ವಾಸನೆಯನ್ನು ಕೊಟ್ಟಿರುವನು. ಇದಕ್ಕೆ ಕರ್ಮಯೋಗವೆಂದು ಹೇಳುತ್ತಾರೆ. ಇದೇ ಧರ್ಮವೇ ಗೀತಾಧರ್ಮದ ಸಾರ.

**ಓಂ ಇದಂ ತೇ ನಾತಪಸ್ಕಾಯ ನಾಭಕ್ತಾಯ ಕದಾಚನ ।**
**ನ ಚಾಶುಶ್ರೂಷವೇ ವಾಚ್ಯಂ ನ ಚ ಮಾಂ ಯೋಽಭ್ಯಸೂಯತಿ ॥**

ನಾನು ನಿನಗೆ ಹೇಳಿದ ಈ ವಿಷಯವನ್ನು ತಪೋರಹಿತನಾದವನಿಗಾಗಲೀ, ಭಕ್ತನಲ್ಲದವನಿಗಾಗಲೀ ಎಂದಿಗೂ ಹೇಳಬಾರದು. ಶುಶ್ರೂಷೆ

ಮಾಡದಿರುವವನಿಗೂ ಹೇಳಬಾರದು. ನನ್ನಲ್ಲಿ ಅಸೂಯೆಪಡುವವನಿಗೂ ಹೇಳಬಾರದು.

* * *

(**ಇದಂ ತೇ** = ಈ ಗುಹ್ಯತಮವಾದ ಅಧ್ಯಾತ್ಮಶಾಸ್ತ್ರವನ್ನು ನಿನಗೆ ಹೇಳಿರುತ್ತೇನೆ. ನಿನ್ನ ಉದ್ಧಾರಕ್ಕಾಗಿ ಹೇಳಿದ್ದೇನೆ. ನೀನು ನನಗೆ ಅತ್ಯಂತ ಪ್ರಿಯನಾದುದರಿಂದ ಹೇಳಿದ್ದೇನೆ. ಆದರೆ ಪರಮಪವಿತ್ರವಾದ ಈ ಅಧ್ಯಾತ್ಮಶಾಸ್ತ್ರವನ್ನು ಯಾರಿಗೆಂದರೆ ಅವರಿಗೆ–ಅನಧಿಕಾರಿಗೆ ಹೇಳಬಾರದು.

ಯಾರು-ಯಾರಿಗೆ ಹೇಳಬಾರದು? ಯಾರು ಇದನ್ನು ಕೇಳಲು ಅನಧಿಕಾರಿಗಳು ಎಂಬುದನ್ನು ಶ್ರೀಕೃಷ್ಣನೇ ಸ್ಪಷ್ಟವಾಗಿ ಹೇಳಿರುತ್ತಾನೆ. **ನಾತಪಸ್ಕಾಯ** = ತಪಸ್ಸು ಮಾಡದೇ ಇರುವವನು. ಶ್ರೀಕೃಷ್ಣನೇ ಹೇಳಿರುವ ಕಾಯಕ-ವಾಚಿಕ ಮತ್ತು ಮಾನಸಿಕತಪಸ್ಸನ್ನು (ಅಧ್ಯಾಯ ೧೭, ಶ್ಲೋಕ ೧೪-೧೫-೧೬) ಅನುಷ್ಠಾನಮಾಡದೇ ಇರುವವನು ಈ ಅಧ್ಯಾತ್ಮಶಾಸ್ತ್ರದ ಉಪದೇಶಕ್ಕೆ ಯೋಗ್ಯನಾಗುವುದಿಲ್ಲ. ಶ್ರೀಕೃಷ್ಣನು ಹೇಳಿರುವ ಕಾಯಕ- ವಾಚಿಕ ಮತ್ತು ಮಾನಸಿಕತಪಸ್ಸಿನಲ್ಲಿ ಭಕ್ತಿ-ಶುಶ್ರೂಷೆಗಳೂ ಸೇರಿಯೇ ಬಿಟ್ಟಿರುವುದರಿಂದ ಇಲ್ಲಿ ಹೇಳಿರುವ ತಪಸ್ಸನ್ನು ವಿವರಣೆಗಾಗಿ ಹೇಳಿದ್ದಾನೆಂದಾದರೂ ಇಟ್ಟುಕೊಳ್ಳಬಹುದು. ತಪಸ್ಸೆಂದರೆ ಅಂತಃಶುದ್ಧಿ-ಬಹಿಃಶುದ್ಧಿಗಳುಳ್ಳವನಾಗಿರಬೇಕು. ತಪಸ್ಸಿನ ಪ್ರಯೋಜನವೇ ಇದಾಗಿರುತ್ತದೆ.

**ನಾಭಕ್ತಾಯ ಕದಾಚನ** = ಭಕ್ತಿಯಿಲ್ಲದಿದ್ದರೆ ಅಂತಹವನಿಗೆ ಯಾವುದೇ ಕಾರಣದಿಂದಲೂ ಹೇಳಬಾರದು. ಪರಮೇಶ್ವರನಲ್ಲಿ ಮತ್ತು ಗುರುವಿನಲ್ಲಿ ವಿಶ್ವಾಸ ಮತ್ತು ಪರಮಪ್ರೇಮಭಾವನೆಗಳಿರಬೇಕು. ಭಕ್ತಿಯಿರದಿದ್ದರೆ ಉಪದೇಶರೂಪವಾದ ಈ ಗೀತಾಶಾಸ್ತ್ರವು ಮನಸ್ಸಿಗೆ ಹತ್ತುವುದಿಲ್ಲ. ಪರಮಾತ್ಮನಲ್ಲಿ ಮತ್ತು ಗುರುವಿನಲ್ಲಿ ಅನನ್ಯಭಕ್ತಿಯಿರಬೇಕು. ಅಂತಹವನಿಗೆ ಮಾತ್ರವೇ ಇದನ್ನು ಹೇಳಬಹುದು. 'ತದ್ವಿದ್ಧಿ ಪ್ರಣಿಪಾತೇನ' ಈ ಶ್ಲೋಕದಲ್ಲಿ ಹೇಳಿರುವುದಕ್ಕೆ ವಿರುದ್ಧನಾಗಿರತಕ್ಕವನಿಗೆ ಹೇಳಬಾರದು.

ಅಧ್ಯಾತ್ಮಶಾಸ್ತ್ರವನ್ನು ಬೋಧಿಸುವ ಗುರುಗಳನ್ನೂ ದೇವರಂತೆಯೇ ಕಾಣಬೇಕು.

ಇದನ್ನೇ ಶ್ವೇತಾಶ್ವತರೋಪನಿಷತ್ತಿನಲ್ಲಿಯೂ ಹೀಗೆ ಹೇಳಿದ್ದಾರೆ :

**ಯಸ್ಯ ದೇವೇ ಪರಾ ಭಕ್ತಿರ್ಯಥಾ ದೇವೇ ತಥಾ ಗುರೌ ।**
**ತಸ್ಯೈತೇ ಕಥಿತಾ ಹ್ಯರ್ಥಾಃ ಪ್ರಕಾಶನ್ತೇ ಮಹಾತ್ಮನಃ ॥** ೬-೨೩

ಯಾವನಿಗೆ ಪರಮೇಶ್ವರನಲ್ಲಿ ಪರಾಭಕ್ತಿಯಿರುವುದೋ, ಪರಮೇಶ್ವರನಲ್ಲಿದ್ದ ಹಾಗೆ ಗುರುವಿನಲ್ಲಿಯೂ ಪರಾಭಕ್ತಿಯಿರುವುದೋ ಅಂತಹ ಮಹಾತ್ಮನಿಗೆ ಹೇಳಲ್ಪಟ್ಟ ಈ ಅರ್ಥಗಳು ಪ್ರಕಾಶವಾಗುತ್ತವೆ. (ಸ್ವಾನುಭವಕ್ಕೆ ವಿಷಯಗಳಾಗುತ್ತವೆ.)

**ನ ಚಾಶುಶ್ರೂಷವೇ ವಾಚ್ಯಂ** = ಶುಶ್ರೂಷೆಮಾಡದವನಿಗೂ ಇದನ್ನು ಹೇಳಬಾರದು. ಇಲ್ಲಿ ಶುಶ್ರೂಷು ಎಂದರೆ ಕೇಳಲು ಇಚ್ಛೆಯುಳ್ಳವನು ಅಥವಾ ಸೇವೆಮಾಡುವವನು. ಈ ಮಹಾಶಾಸ್ತ್ರವನ್ನು ಕೇಳಬೇಕು ಎಂಬ ಪ್ರಾಮಾಣಿಕವಾದ ಮತ್ತು ಉತ್ಕಟವಾದ ಇಷ್ಟವು ಯಾವನಿಗೆ ಇಲ್ಲವೋ ಅಂತಹವನಿಗೆ ಈ ಅಮೂಲ್ಯವಾದ ಪದಾರ್ಥವನ್ನು ಕೊಡಬೇಡ. 'ಶ್ರೇಷ್ಠವಾದ ಶಾಸ್ತ್ರ ಎಂದು ನನ್ನ ಮನಸ್ಸಿಗೆ ಬಂದಿದೆ' ಎನ್ನುವ ಕಾರಣದಿಂದ ಇತರರಿಗೆ ಅದನ್ನು ಕೇಳುವ ಇಷ್ಟವಿರಲಿ ; ಇಲ್ಲದಿರಲಿ ; ಅಂತಹವರಿಗೂ ಇದನ್ನು ಹೇಳುವ ಅಸ್ಥಾನ ಸ್ನೇಹಕಾರುಣ್ಯ ಅಥವಾ ಚಾಪಲ್ಯವು ಉಂಟಾಗಬಹುದು. ಅದೂ ಕೂಡದು. ಶುಶ್ರೂಷೆ ಎಂದರೆ ಸೇವೆಯೂ ಆಗುತ್ತದೆ. ಗುರುಸೇವೆ ಮುಂತಾದುವುಗಳನ್ನು ಯಾವನು ಮಾಡಿಲ್ಲವೋ ಅಂತಹ ಅವಿನೀತನಿಗೂ ಇದನ್ನು ಉಪದೇಶಿಸಬಾರದು. ಅಂತಹವರು ಅಪಾರ್ಥಮಾಡಿ ಶಾಸ್ತ್ರಕ್ಕೆ ಅವಮಾನವನ್ನೂ ತರುತ್ತಾರೆ.

**ನ ಚ ಮಾಂ ಯೋಽಭ್ಯಸೂಯತಿ** = ನನ್ನನ್ನು ಯಾವನು ನಿಂದಿಸುವನೋ ಅಥವಾ ನನ್ನ ಗುಣಗಳಲ್ಲಿ ದೋಷವನ್ನೇ ಕಾಣುವನೋ ಅವನಿಗೂ ಸಹ ಹೇಳಬಾರದು. ಪ್ರಪಂಚದ ಉದ್ಧಾರಕ್ಕಾಗಿ ನಾನು ಮಾಡಿದ ಅನೇಕ ಕರ್ಮಗಳಲ್ಲಿ ದೋಷವನ್ನು ಎಣಿಸುವವರೂ ಇದ್ದಾರೆ. ನಾನು ಯಾರೆಂಬು

ದನ್ನು ತಿಳಿಯದೇ ನನ್ನನ್ನು ತೆಗಳುವವರೂ ಇದ್ದಾರೆ. ಅಂತಹವರಿಗೂ ಈ ಅಧ್ಯಾತ್ಮಶಾಸ್ತ್ರವನ್ನು ಹೇಳಬಾರದು. ಏಕೆಂದರೆ : ನನ್ನ ಮೇಲೆ ಭಕ್ತಿಯಿಲ್ಲದ ಅವರಿಗೆ ಈ ಶಾಸ್ತ್ರವು ಖಂಡಿತವಾಗಿಯೂ ಸಿದ್ಧಿಸುವುದಿಲ್ಲ.

ಸಂತಜ್ಞಾನೇಶ್ವರರು ಇದನ್ನೇ ರೂಪಕವಾಗಿ ಹೇಳಿದ್ದಾರೆ : ತಪೋರೂಪ ವಾದ ಶಿಲೆಗಳಿಂದ ತಳಹದಿಯನ್ನು ಭದ್ರಪಡಿಸಿ ತಾನು ಸ್ವತಃ ಪೂರ್ಣಗುರು ಭಕ್ತರೂಪವಾದ ಮಂದಿರವಾಗಬೇಕು. ಶ್ರವಣೇಚ್ಛೆಯೆಂಬ ಆ ಮಂದಿರದ ಪ್ರವೇಶದ್ವಾರವನ್ನು ಯಾವಾಗಲೂ ತೆರೆದಿರಬೇಕು ಮತ್ತು ಆ ಮಂದಿರದ ಮೇಲೆ ಅನಿಂದಾರೂಪದ ರತ್ನದ ಕಲಶವನ್ನು ಶೋಭಿಸುವಂತೆ ಇಡಬೇಕು.)

o o o

ನಿನ್ನ ಹಿತಕ್ಕೋಸ್ಕರ ಎಂದರೆ ಸಂಸಾರದ ಬಂಧನವನ್ನು ನಾಶಮಾಡುವು ದಕ್ಕೋಸ್ಕರ ನಿನಗೆ ನಾನು ಹೇಳಿದ ಈ ಶಾಸ್ತ್ರವನ್ನು ತಪೋರಹಿತನಾದವನಿಗೆ ಹೇಳಬಾರದು. ತಪಸ್ವಿಯೇ ಆಗಿದ್ದರೂ ಗುರು-ದೇವರಲ್ಲಿ ಭಕ್ತಿಯಿಲ್ಲದಿದ್ದರೆ ಅವನಿಗೆ ಯಾವ ಅವಸ್ಥೆಯಲ್ಲೂ ಇದನ್ನು ಹೇಳಬಾರದು. ಭಕ್ತನೂ ಮತ್ತು ತಪಸ್ವಿಯೂ ಆಗಿದ್ದರೂ ಯಾವನಿಗೆ ಶುಶ್ರೂಷೆ (ಕೇಳುವ ಇಚ್ಛೆ ) ಇಲ್ಲವೋ ಅವನಿಗೂ ಇದನ್ನು ಹೇಳಬಾರದು. ಮತ್ತು ಯಾವನಿಗೆ ಅಸೂಯೆ ಯಿದೆಯೋ ಎಂದರೆ ಯಾವನು ವಾಸುದೇವನಾದ ನನ್ನನ್ನು ಪ್ರಾಕೃತ ಮನುಷ್ಯನೆಂದು ತಿಳಿದು ನನ್ನಲ್ಲಿ ಆತ್ಮಪ್ರಶಂಸೆಯೇ ಮುಂತಾದ ದೋಷಗಳನ್ನು ಆರೋಪಿಸಿ ನನ್ನ ಈಶ್ವರತ್ವವನ್ನು ಸಹಿಸುವುದಿಲ್ಲವೋ ಅವನೂ ಅಯೋಗ್ಯನು. ಅವನಿಗೂ ಇದನ್ನು ಹೇಳಬಾರದು.

ಭಗವಂತನಲ್ಲಿ ಭಕ್ತಿಯುಳ್ಳವನೂ, ತಪಸ್ವಿಯೂ, ಶುಶ್ರೂಷುವೂ ಅಸೂಯಾರಹಿತನೂ ಆದವನಿಗೆ ಇದನ್ನು ಬೋಧಿಸಬೇಕು ಎಂದು ಸಿದ್ಧ ವಾಗುತ್ತದೆ.

ಇತರ ಸ್ಮೃತಿಗಳಲ್ಲಿ ಮೇಧಾವಿಗೆ ಅಥವಾ ತಪಸ್ವಿಗೆ ಎಂದು ವಿಕಲ್ಪವನ್ನು ಹೇಳಿದೆ. ಶುಶ್ರೂಷೆ-ಭಕ್ತಿಗಳಿಲ್ಲದ ತಪಸ್ವಿಗೇ ಆಗಲೀ, ಮೇಧಾವಿಗೇ ಆಗಲೀ ಹೇಳಬಾರದು. ಭಗವಂತನ ಮೇಲೆ ಅಸೂಯೆಯುಳ್ಳವನು ಸಮಸ್ತಗುಣ

ಸಂಪನ್ನನಾಗಿದ್ದರೂ ಅವನಿಗೆ ಇದನ್ನು ಹೇಳಬಾರದು. ಗುರುಶುಶ್ರೂಷೆ ಮತ್ತು ಭಕ್ತಿಯುಳ್ಳವನಿಗೇ ಹೇಳಬೇಕು. ಈ ರೀತಿ ಇದೇ ಶಾಸ್ತ್ರಸಂಪ್ರದಾಯದ ವಿಧಿ. (ಶಂ. ಭಾ.)

ನಾನು ಹೇಳಿದ ಈ ಪರಮಗುಹ್ಯವಾದ ಶಾಸ್ತ್ರವನ್ನು ತಪಸ್ಸುಮಾಡದವನಿಗೆ ನೀನು ಹೇಳಬಾರದು. ನೀನು ವಕ್ತೃವಾಗಿರುವಾಗ ನನ್ನಲ್ಲಿ ಭಕ್ತಿಯಿಲ್ಲದವನಿಗೆ ಎಂದಿಗೂ ಹೇಳಬಾರದು. ತಪಸ್ಸುಮಾಡಿದ್ದರೂ ಭಕ್ತನಲ್ಲದಿದ್ದರೆ ಅವನಿಗೂ ಹೇಳಬಾರದು ಮತ್ತು ಯಾವನು ನನ್ನಲ್ಲಿ ಅಸೂಯೆ ಪಡುತ್ತಾನೆಯೋ ಎಂದರೆ ನನ್ನ ಸ್ವರೂಪ, ಐಶ್ವರ್ಯ ಮತ್ತು ಗುಣಗಳನ್ನು ಹೇಳಿದಾಗ ಅವುಗಳಲ್ಲಿ ದೋಷವನ್ನು ಕಾಣುತ್ತಾನೆಯೋ ಅವನಿಗೂ ಹೇಳಬಾರದು. ಇವುಗಳಲ್ಲಿ ಒಂದೊಂದೂ ಪರಿಹರಣೀಯ. ಅತ್ಯಂತ ಪರಿಹರಣೀಯ. (ರಾ. ಭಾ.)

ತಪೋರಹಿತರಿಗಿಂತಲೂ ಅಶುಶ್ರೂಷುಗಳು ಅನಧಿಕಾರಿಗಳು. ಅವರಿಗಿಂತಲೂ ಅಭಕ್ತರು ಅನಧಿಕಾರಿಗಳು ಮತ್ತು ಅಭಕ್ತರಿಗಿಂತಲೂ ಅಸೂಯೆಯುಳ್ಳವರು ಅನಧಿಕಾರಿಗಳು. ಇದಕ್ಕೆ ವಿರುದ್ಧರಾದವರು ಅಧಿಕಾರಿಗಳು ಎಂದು ಗ್ರಹಿಸಬೇಕು. (ಮ. ಟೀಕಾ)

**ಓಂ ಯ ಇಮಂ ಪರಮಂ ಗುಹ್ಯಂ ಮದ್ಭಕ್ತೇಷ್ವಭಿಧಾಸ್ಯತಿ ।**
**ಭಕ್ತಿಂ ಮಯಿ ಪರಾಂ ಕೃತ್ವಾ ಮಾಮೇವೈಷ್ಯತ್ಯಸಂಶಯಃ ॥೬೮॥**

ಯಾವನು ಈ ಪರಮರಹಸ್ಯವನ್ನು, ನನ್ನಲ್ಲಿ ಪರಮಭಕ್ತಿಯನ್ನು ಮಾಡಿ ನನ್ನ ಭಕ್ತರಲ್ಲಿ ಹೇಳುವನೋ ಅವನು ನನ್ನನ್ನೇ ಹೊಂದುತ್ತಾನೆ. ಇದರಲ್ಲಿ ಸಂಶಯವಿಲ್ಲ.

* * *

(ಹಿಂದಿನ ಶ್ಲೋಕದಲ್ಲಿ ಗುಹ್ಯತಮವಾದ ಈ ಅಧ್ಯಾತ್ಮಶಾಸ್ತ್ರವನ್ನು ಯಾರಿಗೆ ಹೇಳಬೇಕೆಂಬುದರ ಬಗೆಗೆ ನಿಯಮನಮಾಡಿ ಈ ಶ್ಲೋಕದಲ್ಲಿ ಹಾಗೆ ಅರ್ಹರಾದವರಲ್ಲಿ ಈ ಗೀತಾಶಾಸ್ತ್ರವನ್ನು ವಿತರಣೆಮಾಡುವುದರಿಂದ ಪ್ರಾಪ್ತವಾಗಬಹುದಾದ ಫಲವನ್ನು ಹೇಳುತ್ತಾನೆ.

**ಭಕ್ತಿಂ ಮಯಿ ಪರಾಂ ಕೃತ್ವಾ** = ಉಪದೇಶಕನು ಮೊದಲು ಪರಮಭಕ್ತನಾಗಿರಬೇಕು. ಪರಾಭಕ್ತಿಯನ್ನಿಡಬೇಕು ಎಂದರೆ ನನ್ನ ಭಕ್ತನಾಗ ಬೇಕು. ಏಕೆಂದರೆ : ಪರಮಭಕ್ತನಾದವನಿಗೆ ಮಾತ್ರವೇ ಪರಮಾತ್ಮನ ನಿಜಸ್ವರೂಪವನ್ನು ಅನುಭವದೊಡನೆ ತಿಳಿದುಕೊಳ್ಳಲು ಸಾಧ್ಯವಾಗುತ್ತದೆ. ಪರಮಭಕ್ತನಿಗೆ ಅಥವಾ ಜ್ಞಾನಿಭಕ್ತನಿಗೆ ಮಾತ್ರವೇ ಗೀತೆಯ ರಹಸ್ಯವು ಚೆನ್ನಾಗಿ ತಿಳಿಯಲು ಸಾಧ್ಯವಾಗುತ್ತದೆ. ಹಾಗೆ ರಹಸ್ಯವನ್ನು ತಿಳಿದುಕೊಂಡವನು ಮಾತ್ರವೇ ಇತರರಿಗೆ ಇದನ್ನು ಬೋಧಿಸಲು ಅರ್ಹನಾಗುತ್ತಾನೆ. ಆದುದರಿಂದಲೇ ಶ್ರೀಕೃಷ್ಣನು **ಭಕ್ತಿಂ ಮಯಿ ಪರಾಂ ಕೃತ್ವಾ**–ಎಂಬುದಾಗಿ ಹೇಳಿದ್ದಾನೆ. ಯಾವನು ನನ್ನ ಪರಮಭಕ್ತನಾಗಿ, ಜ್ಞಾನಿಭಕ್ತನಾಗಿ **ಇಮಂ ಪರಮಂ ಗುಹ್ಯಂ** = ಈ ಶ್ರೇಷ್ಠವಾದ ರಹಸ್ಯವನ್ನು ಗುಟ್ಟಿಗಿಂತಲೂ ಗುಟ್ಟಿನದನ್ನು. **ಮದ್ಭಕ್ತೇಷ್ವಭಿಧಾಸ್ಯತಿ** = ನನ್ನ ಭಕ್ತರಿಗೆ ಹೇಳುತ್ತಾನೆಯೋ, ಉಪದೇಶಿಸುತ್ತಾನೆಯೋ–ಅವನು ನನ್ನನ್ನೇ ಹೊಂದುತ್ತಾನೆ. ಇದರಲ್ಲಿ ಸಂಶಯವಿಲ್ಲ. ತನ್ನ ಪರಾಭಕ್ತಿಯ ಅನುಭವದಲ್ಲಿ ಕಂಡುಕೊಂಡ ಶಾಸ್ತ್ರಾರ್ಥ ವನ್ನು ಅಧಿಕಾರಿಗಳಾದ ಭಕ್ತರಿಗೆ ಹೇಳುವುದರಿಂದ ಪರಾಭಕ್ತಿಯು ಮತ್ತೂ ಸ್ಥಿರಪಟ್ಟು ನಿಃಸಂಶಯವಾಗಿಯೂ ಅವನು ಭಗವಂತನನ್ನೇ ಹೊಂದುವುದಕ್ಕೆ ಸಹಾಯಮಾಡುತ್ತದೆ.

ಭಕ್ತರಿಗೆ ಈ ಶಾಸ್ತ್ರವನ್ನು ಹೇಳಿದವನು ನನ್ನಲ್ಲಿ ಪರಾಭಕ್ತಿಯನ್ನು ಹೊಂದಿ ಅದರ ಫಲವಾಗಿ ನನ್ನನ್ನು ಹೊಂದುತ್ತಾನೆ ಎಂಬುದಾಗಿಯೂ ನಯನಮಾಡಬಹುದು.)

o o o

ಈ ಶಾಸ್ತ್ರಪರಂಪರೆಯನ್ನು ಮುಂದುವರಿಸುವುದರಿಂದ ಉಂಟಾಗುವ ಫಲವನ್ನು ಇಲ್ಲಿ ಹೇಳಿದೆ. ಪರಮಕಲ್ಯಾಣವನ್ನೇ ಫಲವಾಗಿ ಉಳ್ಳ ಈ ಮೇಲೆ ಹೇಳಿದ ಕೃಷ್ಣಾರ್ಜುನರ ಸಂವಾದರೂಪವಾದ ಅತ್ಯಂತಗೋಪ್ಯವಾದ ಗೀತಾಗ್ರಂಥವನ್ನು ನಾನು ನಿನಗೆ ಹೇಳಿದಂತೆ ನನ್ನ ಭಕ್ತರಿಗೆ ಗ್ರಂಥರೂಪದಲ್ಲಿ ಮತ್ತು ಅರ್ಥರೂಪದಲ್ಲಿ ಯಾವನು ಸ್ಥಾಪಿಸುತ್ತಾನೆಯೋ ಅವನು ನನ್ನಲ್ಲಿ ಪರಾಭಕ್ತಿಯನ್ನು ಮಾಡಿ ಎಂದರೆ–'ಪರಮಗುರುವಾದ ಭಗವಂತನ ಸೇವೆ ಯನ್ನೇ ನಾನು ಮಾಡುತ್ತೇನೆ'–ಎಂದು ತಿಳಿದು ಇದನ್ನು ಉಪದೇಶಿಸುವವ

ನಾಗಿ ಅದರ ಫಲವಾಗಿ ನನ್ನನ್ನೇ ಹೊಂದುತ್ತಾನೆ. ಮುಕ್ತನಾಗಿಯೇ ಆಗುತ್ತಾನೆ. ಇದರಲ್ಲಿ ಸಂಶಯಪಡಬಾರದು. (ಶಂ. ಭಾ.)

ಈ ಪರಮರಹಸ್ಯವನ್ನು ನನ್ನ ಭಕ್ತರಿಗೆ ಯಾವನು ವ್ಯಾಖ್ಯಾನಮಾಡುತ್ತಾನೆಯೋ ಅವನು ನನ್ನಲ್ಲಿ ಪರಾಭಕ್ತಿಯನ್ನು ಪಡೆದು ನನ್ನನ್ನೇ ಹೊಂದುತ್ತಾನೆ. ಇದರಲ್ಲಿ ಸಂಶಯವಿಲ್ಲ. (ರಾ. ಭಾ.)

ಯೋಗ್ಯರಿಗೆ ಇದನ್ನು ವ್ಯಾಖ್ಯಾನಮಾಡುವುದೂ ಕೂಡ ಕರ್ಮಯೋಗಾದಿಗಳಲ್ಲಿ ಸೇರುತ್ತದೆ ಅಥವಾ ಭಕ್ತಿಯೋಗಕ್ಕೆ ಅಂಕುರವಾಗಿ ಸೇರಿ ಪರಾಭಕ್ತಿಯನ್ನು ಉಂಟುಮಾಡುತ್ತದೆ.

**ಮಾಮೇವ ಏಷ್ಯತಿ** = ನನ್ನನ್ನೇ ಹೊಂದುತ್ತಾನೆ. ನನ್ನ ಗೀತೆಯನ್ನು ವ್ಯಾಖ್ಯಾನಮಾಡಿದವರಿಗೆ ನಾನು ಕ್ಷುದ್ರಫಲಗಳಲ್ಲಿ ಆಸಕ್ತಿಯನ್ನು ಉಂಟುಮಾಡುವುದೇ ಇಲ್ಲ. (ವೇದಾಂತದೇಶಿಕರು.)

**ಓಂ ನ ಚ ತಸ್ಮಾನ್ಮನುಷ್ಯೇಷು ಕಶ್ಚಿನ್ಮೇ ಪ್ರಿಯಕೃತ್ತಮಃ ।**
**ಭವಿತಾ ನ ಚ ಮೇ ತಸ್ಮಾದನ್ಯಃ ಪ್ರಿಯತರೋ ಭುವಿ ॥೬೯॥**

ಮನುಷ್ಯರಲ್ಲಿ ಅವನಿಗಿಂತಲೂ ನನಗೆ ಅತ್ಯಂತಪ್ರಿಯವನ್ನು ಮಾಡುವವನು ಮತ್ತೆ ಯಾವನೂ ಇಲ್ಲ ; ಅವನಿಗಿಂತಲೂ ನನಗೆ ಪ್ರಿಯತರನಾದವನು ಭೂಮಿಯ ಮೇಲೆ ಯಾವನೂ ಮುಂದೆ ಹುಟ್ಟುವುದೂ ಇಲ್ಲ.

* * *

(ಸತ್ಪಾತ್ರರಲ್ಲಿ ಈ ಗೀತಾಜ್ಞಾನವನ್ನು ಇಡುವುದು ನನಗೆ ಅತ್ಯಂತ ಪ್ರಿಯವಾದ ಕಾರ್ಯ. ಈ ಕಾರ್ಯವನ್ನು ಮಾಡುವ ಪರಮಭಕ್ತನಿಗಿಂತಲೂ ನನಗೆ ಅಧಿಕಪ್ರಿಯನಾದವನು ಬೇರೆ ಯಾವನೂ ಇಲ್ಲ. ಅಂತಹ ಪರಮಭಕ್ತಿಯುಳ್ಳವನಿಗಿಂತಲೂ ಹೆಚ್ಚು ಪ್ರಿಯನಾದ ಮನುಷ್ಯನು ಮುಂದೂ ಇರುವುದಿಲ್ಲ. ಅಧಿಕಾರಿಯಾದವನು ಈ ಗೀತಾಜ್ಞಾನವನ್ನು ಅಧಿಕಾರಿಯಾದ ಭಕ್ತನಿಗೆ ಬೋಧಿಸುವುದು ನನಗೆ ಎಲ್ಲ ಕಾಲಗಳಲ್ಲಿಯೂ ಅತ್ಯಂತಪ್ರಿಯವಾದ ಕಾರ್ಯ. ಅದರಿಂದ ನನ್ನ ಜ್ಞಾನಧರ್ಮವನ್ನೇ ಬೆಳೆಸಿದಂತಾಗುತ್ತದೆ. ನನ್ನ ಸತ್ಯಸಂಕಲ್ಪದ ವಿಸ್ತಾರವೇ ಆ ಕಾರ್ಯ. ಅದನ್ನು ಮಾಡುವ ಜ್ಞಾನಿಯಾದ ಭಕ್ತನು ಧ್ಯಾನಸಮಾಧಿಯಲ್ಲಿಯೇ ಇದ್ದರೂ ನನಗೆ ಅತ್ಯಂತಪ್ರಿಯನು.

ಇನ್ನು ಸಮಾಧಿಯಿಂದ ಜಾಗ್ರದವಸ್ಥೆಗೆ ಬಂದಾಗಲೂ ಆ ಜ್ಞಾನಪರಂಪರೆಯನ್ನೇ ಅವನು ಮುಂದುವರಿಸುವಂತಾದರೆ ಅವನು ನನಗೆ ಅತ್ಯಂತಪ್ರಿಯತಮ ಎಂಬುದನ್ನು ಹೇಳಲೇಬೇಕಾಗಿಲ್ಲ.)

O O O

ಮನುಷ್ಯರಲ್ಲಿ ಈ ಶಾಸ್ತ್ರಸಂಪ್ರದಾಯವನ್ನು ಯಾವನು ನಡೆಸುತ್ತಾನೆಯೋ ಅಂತಹ ಭಕ್ತನಿಗಿಂತಲೂ ನನಗೆ ಹೆಚ್ಚು ಪ್ರಿಯವಾದ ಕಾರ್ಯಗಳನ್ನು ಮಾಡುವವನು ಈಗ ಇರುವ ಮನುಷ್ಯರಲ್ಲಿ ಬೇರೆ ಯಾವನೂ ಇಲ್ಲ. ಭವಿಷ್ಯತ್ಕಾಲದಲ್ಲಿಯೂ ಅವನಿಗಿಂತಲೂ ಪ್ರಿಯನಾದವನು ಬೇರೆ ಯಾವನೂ ಇರಲಾರನು. (ಶಂ. ಭಾ.)

ಎಲ್ಲ ಮನುಷ್ಯರಲ್ಲಿಯೂ ಅವನಿಗಿಂತಲೂ ನನಗೆ ಅತ್ಯಂತಪ್ರಿಯ ಕಾರ್ಯವನ್ನು ಮಾಡುವವನು ಬೇರೆ ಯಾವನೂ ಹಿಂದೆಯೂ ಇರಲಿಲ್ಲ. ಮುಂದೆಯೂ ಇರುವುದಿಲ್ಲ. ಗೀತೆಯನ್ನು ಕೇಳುವುದಕ್ಕೆ ಯಾರು ಅಯೋಗ್ಯರು ಎಂಬುದನ್ನೇ ಮೊದಲು ಹೇಳಲು ಕಾರಣವೇನೆಂದರೆ : ಅದನ್ನು ಯೋಗ್ಯರಿಗೆ ಹೇಳದೇ ಇರುವುದಕ್ಕಿಂತಲೂ ಅಯೋಗ್ಯರಿಗೆ ಹೇಳುವುದು ಅತ್ಯಂತಾನಿಷ್ಟವಾದುದು ಎಂದು ಸೂಚಿಸಲು. (ರಾ. ಭಾ.)

**ಓಂ ಅಧ್ಯೇಷ್ಯತೇ ಚ ಯ ಇಮಂ ಧರ್ಮ್ಯಂ ಸಂವಾದಮಾವಯೋಃ ।**
**ಜ್ಞಾನಯಜ್ಞೇನ ತೇನಾಹಮಿಷ್ಟಃ ಸ್ಯಾಮಿತಿ ಮೇ ಮತಿಃ ॥೭೦॥**

ಧರ್ಮಯುಕ್ತವಾದ ಈ ಸಂವಾದವನ್ನು ಯಾವನು ಅಧ್ಯಯನಮಾಡುತ್ತಾನೆಯೋ ಅವನು ಜ್ಞಾನಯಜ್ಞದಿಂದ ನನ್ನನ್ನು ಪೂಜಿಸಿದಂತಾಗುವುದು– ಎಂಬುದು ನನ್ನ ನಿಶ್ಚಯವು.

* * *

**(ಯಃ ಆವಯೋಃ ಇಮಂ ಧರ್ಮ್ಯಂ ಸಂವಾದಂ ಅಧ್ಯೇಷ್ಯತೇ** = ಯಾವನು **ಧರ್ಮ್ಯಂ** ಎಂದರೆ ಧರ್ಮದ ಚೌಕಟ್ಟಿನಲ್ಲಿಯೇ ಇರುವ, ಧರ್ಮಕ್ಕೆ ವಿರುದ್ಧವಾದ ವಿಷಯವೇ ಇಲ್ಲದ, **ಆವಯೋಃ ಇಮಂ ಸಂವಾದಂ** ನಮ್ಮಿಬ್ಬರ ಈ ಸಂವಾದವನ್ನು ; ಸಂವಾದರೂಪವಾದ ಗೀತಾ ಶಾಸ್ತ್ರವನ್ನು ಆಮೂಲಾಗ್ರವಾಗಿ **ಅಧ್ಯೇಷ್ಯತೇ** = ಅಧ್ಯಯನಮಾಡುತ್ತಾನೆಯೋ.

**ಯಃ ಅಧ್ಯೇಷ್ಯತೇ** = ಯಾವನು ಪಠಿಸುತ್ತಾನೆಯೋ ಅವನು. ಹಾಗೆ ಪಠಿಸುವವನಿಗೂ ಮಹಾಫಲವುಂಟು. ಆದರೆ ಆ ಪಾಠವನ್ನು ಭಗವಂತನು ಜ್ಞಾನಯಜ್ಞದ ಆಚರಣೆಗೆ ಸಮಾನವೆಂದು ಹೇಳುತ್ತಾನೆ. ಜ್ಞಾನಯಜ್ಞವು ಯಜ್ಞಗಳಲ್ಲಿ ಅತ್ಯಂತಶ್ರೇಷ್ಠವಾದುದು. **ಶ್ರೇಯಾನ್ದ್ರವ್ಯಮಯಾದ್ಯ ಜ್ಞಾಜ್ಞಾನಯಜ್ಞಃ ಪರಂತಪ ।** ೪-೩೩ ಇಲ್ಲಿ ಗೀತಾಧ್ಯಯನವನ್ನು ಅಂತಹ ಶ್ರೇಷ್ಠತರವಾದ ಯಜ್ಞಕ್ಕೆ ಸಮವೆಂದು ಹೇಳಿರುವುದರಿಂದ ಇದು ಅರ್ಥಾನು ಸಂಧಾನವಿಲ್ಲದ ಕೇವಲ ಗ್ರಂಥಪಾಠ ಎನ್ನುವುದಕ್ಕಿಂತಲೂ ಸರಿಯಾದ ಅರ್ಥಾನುಸಂಧಾನಸಹಿತವಾದ ಅಧ್ಯಯನ ಎಂಬ ಅರ್ಥವನ್ನು ಇಟ್ಟುಕೊಳ್ಳು ವುದು ಹೆಚ್ಚು ಸೂಕ್ತ. ಏಕೆಂದರೆ : ಅಂತಹ ಅರ್ಥಾನುಸಂಧಾನವು ಭಗವಂತನ ಸ್ವರೂಪವನ್ನು ಪರಿಚಯಮಾಡಿಕೊಡುವುದರಿಂದ ಜ್ಞಾನಯೋಗದ ಸಾಧನೆಯೇ ಆಗುತ್ತದೆ. ಶ್ರದ್ಧಾವಂತರು ಅರ್ಥಾನುಸಂಧಾನವಿಲ್ಲದೇ ಪ್ರೇಮ ದಿಂದ ಪಠನಮಾಡಿದರೂ ಅದರಿಂದ ಪುಣ್ಯಫಲವುಂಟು. ಪಾಪಪರಿಹಾರ ವುಂಟು. ಮುಂದಿನ ಶ್ಲೋಕದಲ್ಲಿ ಶ್ರದ್ಧಾವಂತನಾಗಿ ಕೇಳುವವನಿಗೂ ಶುಭ ಲೋಕಗಳು ಉಂಟಾಗುತ್ತವೆ–ಎಂದು ಭಗವಂತನೇ ಹೇಳುತ್ತಾನೆ. ಶ್ರದ್ಧಾ ಯುಕ್ತವಾದ ಗೀತಾಗ್ರಂಥಪರಾಯಣವೇ ಉತ್ತಮಫಲವನ್ನು ಕೊಡುವಾಗ ಅರ್ಥಾನುಸಂಧಾನಸಹಿತವಾಗಿ ಅದನ್ನು ಮಾಡಿದರೆ ಅದು ಜ್ಞಾನಯಜ್ಞಕ್ಕೇ ಸಮಾನ. ಹಾಗೆ ಮಾಡುವುದು ಭಗವಂತನನ್ನು ಜ್ಞಾನದಿಂದ ಪೂಜಿಸಿದಂತೆ– ಎಂಬುದು ಸಹಜವಾಗಿ ಸಿದ್ಧವಾಗುತ್ತದೆ.)

o o o

ಯಾವನು ಧರ್ಮಯುಕ್ತವಾದ ನಮ್ಮ ಈ ಸಂವಾದರೂಪವಾದ ಗ್ರಂಥವನ್ನು ಅಧ್ಯಯನಮಾಡುತ್ತಾನೆಯೋ ಅವನಿಂದ ನಾನು ಜ್ಞಾನಯಜ್ಞ ದಿಂದ ಪೂಜಿತನಾಗುತ್ತೇನೆ. ವಿಧಿಯಜ್ಞ, ಜಪಯಜ್ಞ, ಉಪಾಂಶುಯಜ್ಞ ಮತ್ತು ಜ್ಞಾನಯಜ್ಞ–ಈ ನಾಲ್ಕರಲ್ಲಿ ಜ್ಞಾನಯಜ್ಞವು ಮಾನಸವಾದುದರಿಂದ ಶ್ರೇಷ್ಠತಮವಾದುದು. ಆದುದರಿಂದ ಆ ಜ್ಞಾನಯಜ್ಞಕ್ಕೆ ಸಮವೆಂದು ಗೀತಾಶಾಸ್ತ್ರದ ಅಧ್ಯಯನವನ್ನು ಸ್ತೋತ್ರಮಾಡಿದೆ. ಅಥವಾ ಇದನ್ನು

ಫಲವಿಧಿ ಎಂದು ತಿಳಿಯಬೇಕು. ಇದರ ಫಲವು ದೇವತಾದಿ ವಿಷಯಕವಾದ ಜ್ಞಾನಯಜ್ಞದ ಫಲಕ್ಕೆ ಸಮನಾದುದು ಎಂದು ತಿಳಿಯಬಹುದು.

(ಶಂ. ಭಾ.)

ಧರ್ಮ್ಯವಾದ ನಮ್ಮ ಈ ಸಂವಾದವನ್ನು ಯಾವನು ಅಧ್ಯಯನ ಮಾಡುತ್ತಾನೆಯೋ ಅವನಿಂದ ನಾನು ಜ್ಞಾನಯಜ್ಞದಿಂದ ಪೂಜಿತನಾಗುತ್ತೇನೆ ಎಂಬುದು ನನ್ನ ನಿಶ್ಚಯ. ಇದರ ಅಧ್ಯಯನಮಾತ್ರದಿಂದಲೇ ಇದರಲ್ಲಿ ಯಾವ ಜ್ಞಾನಯಜ್ಞವು ಹೇಳಲ್ಪಟ್ಟಿದೆಯೋ ಅದರಿಂದ ನಾನು ಪೂಜಿತನಾಗುತ್ತೇನೆ.

(ರಾ. ಭಾ.)

ಇಷ್ಟಃ = ಪೂಜಿತಃ (ಮ. ಟೀಕಾ)

**ಓಂ ಶ್ರದ್ಧಾವಾನನಸೂಯಶ್ಚ ಶೃಣುಯಾದಪಿ ಯೋ ನರಃ ।**
**ಸೋಽಪಿ ಮುಕ್ತಃ ಶುಭಾಂಲ್ಲೋಕಾನ್ಪ್ರಾಪ್ನುಯಾತ್ಪುಣ್ಯ**
**ಕರ್ಮಣಾಮ್ ॥೭೧॥**

ಶ್ರದ್ಧಾವಂತನೂ ಅಸೂಯೆಯಿಲ್ಲದವನೂ ಆಗಿ ಯಾವ ಮನುಷ್ಯನು ಕೇಳುವನೋ–ಅವನೂ ಸಹ ಮುಕ್ತನಾಗಿ ಪುಣ್ಯಕರ್ಮಿಗಳು ಹೊಂದುವ ಶುಭವಾದ ಲೋಕಗಳನ್ನು ಪಡೆಯುವನು.

* * *

(ಭಕ್ತರಲ್ಲಿ ಈ ರಹಸ್ಯವನ್ನು ಇಡುವವನು ; ಗೀತಾಶಾಸ್ತ್ರವನ್ನು ಆಮೂಲಾಗ್ರವಾಗಿ ಅಧ್ಯಯನಮಾಡಿ ಅನುಸಂಧಾನಮಾಡಿ ಜ್ಞಾನಯಜ್ಞ ಮಾಡುವವನು–ಇವರ ವಿಷಯವನ್ನು ಹೇಳಿಯಾಯಿತು. ಈಗ ಗೀತೆಯನ್ನು ಕೇವಲ ಶ್ರವಣಮಾಡುವವನ ವಿಷಯವನ್ನೂ ಶ್ರೀಕೃಷ್ಣನು ಹೇಳುತ್ತಾನೆ. ಯಾವನಿಗೇ ಆದರೂ ಗ್ರಂಥವನ್ನು ಓದಬೇಕಾದರೆ, ಓದಿ ಅದರ ಅರ್ಥವನ್ನು ತಿಳಿದುಕೊಳ್ಳಬೇಕಾದರೆ, ತಿಳಿದುಕೊಂಡುದನ್ನು ಅನುಸಂಧಾನಮಾಡಿ ಅನುಭವಕ್ಕೆ ತೆಗೆದುಕೊಳ್ಳಬೇಕಾದರೆ, ತನಗೆ ತಿಳಿದುದನ್ನು ಯಥಾವತ್ತಾಗಿ ಮತ್ತೊಬ್ಬರಿಗೆ ತಿಳಿಸಬೇಕಾದರೆ ಬಹಳ ಕಷ್ಟ. ಆದರೆ ಒಬ್ಬರು ಹೇಳಿದುದನ್ನು ಕೇಳುವುದು ಬಹಳ ಸುಲಭ. ಕೇಳುವುದರಲ್ಲಿಯೂ ಎರಡು ನಿಯಮ ಗಳನ್ನು ಶ್ರೀಕೃಷ್ಣನು ಜೋಡಿಸಿದ್ದಾನೆ. ಶ್ರದ್ಧಾವಾನ್ ಅನಸೂಯಶ್ಚ-ಶ್ರದ್ಧಾ

ವಂತನಾಗಿ ಕೇಳಬೇಕು ಮತ್ತು ಗುಣಗಳಲ್ಲಿ ದೋಷವೆಣಿಸದವನಾಗಿರಬೇಕು. ಶ್ರದ್ಧೆ ಎಂದರೆ ವಿಶ್ವಾಸ ಮತ್ತು ಪರಮಾಸಕ್ತಿ. ಶಾಸ್ತ್ರದಲ್ಲಿ ಹೇಳಿರುವ ಅವನ ಗುಣಗಳನ್ನು ದೋಷವನ್ನಾಗಿ ಎಣಿಸಬಾರದು. ಹಾಗೆಯೇ ಶಾಸ್ತ್ರವಿಷಯ ದಲ್ಲಿಯೂ ಭಗವಂತನ ವಿಷಯದಲ್ಲಿಯೂ ಅಸೂಯೆಯಿರಬಾರದು. ಈ ಎರಡು ಗುಣಗಳಿದ್ದರೆ ಸಾಕು. ನರಃ–ಎಂಬ ಶಬ್ದದಿಂದ ಮನುಷ್ಯಮಾತ್ರ ದವನು ಎಂಬ ಅರ್ಥ. ಜಾತಿಭೇದವೂ ಇಲ್ಲ, ಲಿಂಗಭೇದವೂ ಇಲ್ಲ. ಪ್ರಪಂಚದಲ್ಲಿ ಹುಟ್ಟಿರುವ ಯಾವ ಮನುಷ್ಯನಾದರೂ ಸರಿಯೇ. ಹೆಚ್ಚಿನ ಆಸಕ್ತಿಯಿಂದಲೂ ಗುಣಗಳ ಬಗೆಗೆ ದೋಷದರ್ಶನಮಾಡುವ ದುರ್ಗುಣ ದಿಂದ ರಹಿತನಾಗಿಯೂ ಇದ್ದು ಈ ಶ್ರೀಕೃಷ್ಣಾರ್ಜುನರ ಸಂವಾದರೂಪವಾದ ಸುಮಧುರಗೀತಾಶ್ಲೋಕಗಳನ್ನು ಕೇಳಿದರೆ ಸಾಕು. ಅರ್ಥವಾಗುವುದೂ ಬೇಡ, ಅರ್ಥಾನುಸಂಧಾನವೂ ಬೇಡ. ಕೇವಲ ಕೇಳುವುದರಿಂದಲೇ ಆ ನರನು ಪಾಪಗಳಿಂದಲೂ ವಿಮುಕ್ತನಾಗುತ್ತಾನೆ. ಪುಣ್ಯಕರ್ಮಿಗಳಿಗೆ ಪ್ರಾಪ್ತ ವಾಗುವ ಉತ್ತಮೋತ್ತಮ ಪುಣ್ಯಲೋಕಗಳನ್ನೂ ಪಡೆದುಕೊಳ್ಳುತ್ತಾನೆ. ಅಲ್ಲಿ ಸಾಧನೆಯು ಪರಿಪಕ್ವವಾಗಿ ಪರಾಭಕ್ತಿಯಿಂದ ಮೋಕ್ಷವನ್ನು ಹೊಂದುತ್ತಾನೆ. ಏಕೆಂದರೆ ಇಲ್ಲಿ ಹೇಳಿರುವುದು ಒಂಬತ್ತು ಬಗೆಯ ಭಕ್ತಿಗಳಲ್ಲಿ ಮೊದಲನೆಯ ದಾದ ಶ್ರವಣಭಕ್ತಿ. ಇದು ಪರಾಭಕ್ತಿಯಲ್ಲಿ ಪರ್ಯವಸಾನಗೊಂಡು ಪರಮ ಪದವನ್ನು ಕೊಡಲು ಕಾರಣವಾಗುತ್ತದೆ.

**ಶ್ರವಣಂ ಕೀರ್ತನಂ ವಿಷ್ಣೋಃ ಸ್ಮರಣಂ ಪಾದಸೇವನಮ್ ।**
**ಅರ್ಚನಂ ವನ್ದನಂ ದಾಸ್ಯಂ ಸಖ್ಯಮಾತ್ಮನಿವೇದನಮ್ ॥**

ಎಂದು ಶ್ರೀಮದ್ಭಾಗವತದಲ್ಲಿ ಪ್ರಹ್ಲಾದನು ಹೇಳುತ್ತಾನೆ. ಶುಕ ಬ್ರಹ್ಮರ್ಷಿಯಿಂದ ಶ್ರೀಮದ್ಭಾಗವತವನ್ನು ಶ್ರದ್ಧೆ ಮತ್ತು ಅನಸೂಯೆಗಳಿಂದ ಸಪ್ತಾಹಶ್ರವಣಮಾಡಿ ಮೋಕ್ಷವನ್ನು ಪಡೆದವನು ಪರಮಭಾಗವತೋತ್ತಮ ವಿಷ್ಣುರಾತ (ಪರೀಕ್ಷಿದ್ರಾಜ.)

ಸಂತಜ್ಞಾನೇಶ್ವರರ ನುಡಿಯಲ್ಲಿ: ಕಾಡುಬೇಗೆಯು (ಕಾಡುಕಿಚ್ಚು) ಹಬ್ಬಲು ವನ್ಯಪ್ರಾಣಿಗಳೆಲ್ಲವೂ ಓಡಿಹೋಗುವುವು. ಉದಯಗಿರಿಯ ಮೇಲೆ ಸೂರ್ಯನು ಬಂದೊಡನೆಯೇ ಕತ್ತಲೆಯು ಆಕಾಶದಲ್ಲಿಯೇ ಇಲ್ಲವಾಗು

ವುದು. ಅದರಂತೆ ಮಾನವನ ಕರ್ಣರೂಪಮಹಾದ್ವಾರದಲ್ಲಿ ಗೀತೆಯ ಘೋಷವು ನಡೆಯಲು ಆತನ ಸಂಚಿತಪಾಪಗಳೆಲ್ಲವೂ ನಷ್ಟವಾಗಿ ಹೋಗುವುವು.)

0 0 0

ಶ್ರವಣಮಾಡುವವನಿಗೆ ಉಂಟಾಗುವ ಫಲ : ಶ್ರದ್ಧಾವಂತನಾಗಿ, ಅಸೂಯಾರಹಿತನಾಗಿ ಯಾವ ಮನುಷ್ಯನು ಈ ಗ್ರಂಥವನ್ನು ಕೇಳುವನೋ ಅವನೂ ಕೂಡ (ಇನ್ನು ಅರ್ಥಜ್ಞಾನವನ್ನೇ ಉಳ್ಳವನ ಬಗೆಗೆ ಹೇಳತಕ್ಕದ್ದೇನು?) ಪಾಪದಿಂದ ಬಿಡುಗಡೆಹೊಂದಿ ಅಗ್ನಿಹೋತ್ರಾದಿ ಶ್ರೇಷ್ಠಕರ್ಮಗಳನ್ನು ಮಾಡುವವರು ಹೊಂದುವ ಪ್ರಶಸ್ತವಾದ ಲೋಕಗಳನ್ನು ಪಡೆಯುತ್ತಾನೆ. (ಶಂ. ಭಾ.)

ಶ್ರದ್ಧಾವಂತನಾಗಿ ಅಸೂಯಾರಹಿತನಾಗಿ, ಯಾವನು ಕೇಳುತ್ತಾನೆಯೋ ಅವನೂ ಕೂಡ ಶ್ರವಣಮಾತ್ರದಿಂದಲೇ ಭಕ್ತಿವಿರೋಧಿಗಳಾದ ಪಾಪಗಳಿಂದ ಬಿಡುಗಡೆಹೊಂದಿ ಸುಕೃತಿಗಳಾದ ನನ್ನ ಶುಭಾವಹಗಳಾದ ಭಕ್ತರ ಲೋಕಗಳನ್ನು ಹೊಂದುತ್ತಾನೆ. (ಪ್ರವಚನ ಮತ್ತು ಪಠನಗಳಿಗೆ ಮೋಕ್ಷವನ್ನು ಫಲವನ್ನಾಗಿ ಹಿಂದೆ ಹೇಳಿದೆ. ಅದರ ಜೊತೆಯಲ್ಲಿ ಬರುವ ಶ್ರವಣಕ್ಕೂ ಅದೇ ವಿಧವಾದ ಫಲವನ್ನು ಹೇಳುವುದು ಭಗವಂತನಿಗೆ ಸಮ್ಮತವೆಂದು ತಿಳಿಯಬೇಕು.) (ರಾ. ಭಾ.)

ಇದರಿಂದ ಶ್ರೋತಾ, ಅಧ್ಯಯನಮಾಡುವವನು ಮತ್ತು ವ್ಯಾಖ್ಯಾತಾ ಇವರಿಗೆ ಕ್ರಮವಾಗಿ ಸುಖದ ಆಧಿಕ್ಯ ಎಂದು ಸೂಚಿತವಾಗುತ್ತದೆ.

(ಮ. ಟೀಕಾ)

**ಓಂ ಕಚ್ಚಿದೇತಚ್ಛ್ರುತಂ ಪಾರ್ಥ ತ್ವಯೈಕಾಗ್ರೇಣ ಚೇತಸಾ ।**
**ಕಚ್ಚಿದಜ್ಞಾನಸಮ್ಮೋಹಃ ಪ್ರಣಷ್ಟಸ್ತೇ ಧನಂಜಯ ॥೭೨॥**

ಪಾರ್ಥ! ನೀನು ಇದನ್ನು ಏಕಾಗ್ರವಾದ ಮನಸ್ಸಿನಿಂದ ಕೇಳಿದೆಯಾ? ಧನಂಜಯ! ನಿನಗೆ ಅಜ್ಞಾನದಿಂದುಂಟಾದ ಮೋಹವು ಹೊರಟುಹೋಯಿತೇ?

* * *

(ಶ್ರೀಕೃಷ್ಣನು ಈ ಗೀತೆಯನ್ನು ಉಪದೇಶಿಸಿರುವುದು ಅರ್ಜುನನಿಗಾಗಿ.

ಅವನು ಗೀತೆಯನ್ನು ಅರ್ಥಮಾಡಿಕೊಂಡಿರಬೇಕಲ್ಲವೇ? ಹಿಂದೆಯೇ ಒಮ್ಮೆ ಅರ್ಜುನನು ೧೧-೧ನೆಯ ಶ್ಲೋಕದಲ್ಲಿ **'ಮೋಹೋಽಯಂ ವಿಗತೋ ಮಮ'** ಎಂದು ಹೇಳಿಯೇ ಇದ್ದಾನೆ. ಆದರೂ ಸಹ ಪುನಃ ವಿಷಯವನ್ನು ಖಚಿತಪಡಿಸಿಕೊಳ್ಳಲು ಶ್ರೀಕೃಷ್ಣನು ಅರ್ಜುನನನ್ನು ಪ್ರಶ್ನಿಸುತ್ತಾನೆ.

**ಪಾರ್ಥ! ಏಕಾಗ್ರೇಣ ಚೇತಸಾ ಏತತ್ ತ್ವಯಾ ಶ್ರುತಂ ಕಚ್ಚಿತ್** = ಅರ್ಜುನ! ನಾನು ಇದುವರೆಗೂ ಹೇಳಿದುದನ್ನು ಕೇಳಿದೆಯಾ? **ಏಕಾಗ್ರೇಣ ಚೇತಸಾ** = ಏಕಾಗ್ರತೆಯಿಂದ ಕೇಳಿದೆಯಾ?—ಎನ್ನುತ್ತಾನೆ ಶ್ರೀಕೃಷ್ಣ. ಏಕಾಗ್ರತೆಯಿಲ್ಲದಿದ್ದರೆ ವಿಷಯಗ್ರಹಣವು ಸಾಧ್ಯವೇ ಆಗುವುದಿಲ್ಲ. ಏಕಾಗ್ರತೆಯೆಂದರೆ ಮನಗೊಟ್ಟು ಕೇಳುವುದು. ವಿಷಯವನ್ನು ಮನಸ್ಸಿನಿಂದ ಗ್ರಹಣಮಾಡುವುದು. ಮನಸ್ಸು ಕಿವಿಗಳೊಡನೆ ಸೇರಿರದಿದ್ದರೆ ಕಿವಿಗಳ ಕಾರ್ಯವು ವ್ಯರ್ಥವೇ ಆಗುತ್ತದೆ. ಆದುದರಿಂದ ಯಾವುದನ್ನೇ ಆಗಲೀ 'ಮನಸ್ಸಿಟ್ಟು ಕೇಳು ಎನ್ನುತ್ತಾರೆ.' ಮನಸ್ಸೂ ಸಹ ಏಕಾಗ್ರವಾಗಿರಬೇಕು. ನಾನಾಕಡೆಗಳಿಗೆ ಹರಿಯುತ್ತಿರಬಾರದು. ಆಗಲೇ ಅದರ ಗ್ರಹಣಶಕ್ತಿಯೂ ಹೆಚ್ಚಾಗಿರುತ್ತದೆ. ಆದುದರಿಂದಲೇ ಶ್ರೀಕೃಷ್ಣನು ಏಕಾಗ್ರಚಿತ್ತನಾಗಿ ಕೇಳಿದೆಯಾ? ಎನ್ನುತ್ತಾನೆ. ಒಂದು ವೇಳೆ ನೀನು ಏಕಾಗ್ರಚಿತ್ತನಾಗಿಯೇ ಕೇಳಿದ್ದುದಾದರೆ—ಕೇಳಿದುದರಿಂದ ನಿಶ್ಚಿತವಾದ ಪ್ರಯೋಜನವಾಗಲೇಬೇಕು. ಏಕೆಂದರೆ : ಗೀತೆಯನ್ನು ಯಾರೇ ಓದಲೀ ಏಕಾಗ್ರಚಿತ್ತರಾಗಿ ಓದಿದ್ದೇ ಆದರೆ (ಕೇವಲ ಶ್ಲೋಕಗಳನ್ನಲ್ಲ ; ಅರ್ಥಸಮೇತವಾಗಿ) ಅವರ ಮನಸ್ಸಿನ ಮೇಲೆ ಒಂದು ವಿಧವಾದ ಪರಿಣಾಮವಂತೂ ಆಗುವುದು ನಿಜ. ಅದು ತಾತ್ಕಾಲಿಕವೇ ಆಗಿರಬಹುದು ; ಪರಿಣಾಮವಂತೂ ಆಗದೇ ಇರುವುದಿಲ್ಲ. ಹಾಗೆಯೇ ಶ್ರೀಕೃಷ್ಣನೂ ಸಹ ತನ್ನ ದಿವ್ಯಪ್ರವಚನದಿಂದ ಅರ್ಜುನನ ಮನಸ್ಸಿನ ಮೇಲೆ ಪರಿಣಾಮವಾಗುವುದೆಂಬುದನ್ನು ಆಶಿಸಿದ್ದನು. ಆದುದರಿಂದಲೇ ಅವನನ್ನು ಪ್ರಶ್ನಿಸುತ್ತಾನೆ. **ಕಚ್ಚಿತ್ ತೇ ಅಜ್ಞಾನಸಂಮೋಹಃ ಪ್ರಣಷ್ಟಃ?** ಅಜ್ಞಾನದಿಂದ ಹುಟ್ಟಿದ್ದ ಸಮ್ಮೋಹವು (ಭ್ರಾಂತಿಯು) ಹೊರಟುಹೋಯಿತೇ? ಅರ್ಜುನನೇ ಹೇಳಿಕೊಂಡಿದ್ದನಲ್ಲವೇ? **ಕಾರ್ಪಣ್ಯದೋಷೋಪಹತಸ್ವಭಾವಃ ಪೃಚ್ಛಾಮಿ ತ್ವಾಂ ಧರ್ಮಸಂಮೂಢ ಚೇತಾಃ ॥** ೨-೭ ಎಂದು.

ಯುದ್ಧಮಾಡುವುದೇ ಮಹಾಪಾಪಕಾರ್ಯ. ಅದರಲ್ಲಿ ಕುಲಕ್ಷಯ ದೋಷವಿದೆ. ಮಿತ್ರದ್ರೋಹದ ಪಾತಕವಿದೆ. ಕುಲಕ್ಷಯವಾದರೆ ಕುಲಧರ್ಮಗಳೆಲ್ಲವೂ ಹಾಳಾಗುತ್ತದೆ. ಕುಲಸ್ತ್ರೀಯರು ಹಾಳಾಗುತ್ತಾರೆ. ಆದರಿಂದ ವರ್ಣಸಂಕರವಾಗುತ್ತದೆ. ಯುದ್ಧವೆಂಬ ವ್ಯಾಜದಿಂದ ಹಿರಿಯರನ್ನು ಕೊಲ್ಲುವುದಕ್ಕಿಂತಲೂ ಭಿಕ್ಷಾವೃತ್ತಿಯೇ ಲೇಸು–ಮುಂತಾದ ಅಜ್ಞಾನಮೂಲವಾದ ಮಾತುಗಳನ್ನು ಹೇಳಿ 'ನಾನು ಯುದ್ಧಮಾಡುವುದಿಲ್ಲ' ಎಂದು ನಿಶ್ಚಯಿಸಿ ಧನುಸ್ಸನ್ನೇ ಕೆಳಕ್ಕೆ ಇಟ್ಟಿದ್ದನಲ್ಲವೇ ಅರ್ಜುನ? ಈಗಲೂ ಸಹ ಅವನಿಗೆ ಅದೇ ಅಭಿಪ್ರಾಯವಿದೆಯೇ? ಮೊದಲಲ್ಲಿಯೇ ಶ್ರೀಕೃಷ್ಣನು ಅರ್ಜುನನ ಈ ಅಭಿಪ್ರಾಯವನ್ನು ಅನಾರ್ಯರಿಂದ ಅನುಸರಿಸಲ್ಪಡತಕ್ಕದ್ದೆಂದೂ, ಅಸ್ವರ್ಗ್ಯವೆಂದೂ, ಕಲ್ಮಷಯುಕ್ತವಾದುದೆಂದೂ ಖಂಡಿಸಿದ್ದನು. ಆದರೂ ಆ ಒಂದೆರಡು ಮಾತುಗಳಿಂದ ಅರ್ಜುನನು ಶ್ರೀಕೃಷ್ಣನ ಸಲಹೆಗೆ ಒಪ್ಪಿರಲಿಲ್ಲ. ಕಡೆಗೆ ಈ ಅದ್ಭುತವಾದ ಅಧ್ಯಾತ್ಮಶಾಸ್ತ್ರವನ್ನೇ ಅವನ ಮನಸ್ಸನ್ನು ಬದಲಾಯಿಸುವ ಸಲುವಾಗಿ ಹೇಳಬೇಕಾಯಿತು. ಇಷ್ಟು ಹೇಳಿದನಂತರವಾದರೂ ಅರ್ಜುನನಿಗೆ ಅಜ್ಞಾನವು ತೊಲಗಿದೆಯೇ?–ಎಂಬುದನ್ನು ತಿಳಿದುಕೊಳ್ಳುವ ಸಲುವಾಗಿಯೇ ಅಜ್ಞಾನದಿಂದುಂಟಾದ ಭ್ರಾಂತಿಯು ನಷ್ಟವಾಯಿತೇ? ಎಂದು ಪ್ರಶ್ನಿಸಿದನು.)

O O O

ಶಿಷ್ಯನು ಶಾಸ್ತ್ರಾರ್ಥವನ್ನು ಗ್ರಹಿಸಿದ್ದಾನೆಯೇ ಅಥವಾ ಇಲ್ಲವೇ–ಎಂಬುದನ್ನು ವಿವೇಚನೆಯಿಂದ ತಿಳಿಯುವುದಕ್ಕೋಸ್ಕರ ಭಗವಂತನು ಹೀಗೆ ಪ್ರಶ್ನಿಸುತ್ತಾನೆ. ಒಂದು ಪಕ್ಷ ಅರ್ಜುನನು ಅದನ್ನು ಗ್ರಹಿಸಿಲ್ಲ ಎಂದು ತಿಳಿದುಬಂದರೆ ಬೇರೆ ಉಪಾಯದಿಂದ ಅವನು ಅದನ್ನು ಗ್ರಹಿಸುವಂತೆ ಮಾಡುತ್ತೇನೆ–ಎನ್ನುವುದು ಪ್ರಶ್ನೆಮಾಡುವವನ ಅಭಿಪ್ರಾಯ. ಬೇರೆ ಪ್ರಯತ್ನವನ್ನಾದರೂ ಮಾಡಿ ಶಿಷ್ಯನನ್ನು ಕೃತಾರ್ಥನನ್ನಾಗಿ ಮಾಡಬೇಕು ಎಂಬ ಆಚಾರ್ಯನ ಕರ್ತವ್ಯವನ್ನು ಇಲ್ಲಿ ತೋರಿಸಿದೆ.

ಓ ಪಾರ್ಥ! ನಾನು ಹೇಳಿದ ಈ ಶಾಸ್ತ್ರವನ್ನು ನೀನು ಏಕಾಗ್ರವಾದ ಚಿತ್ತದಿಂದ ಕೇಳಿದೆಯಾ? ಅಥವಾ ಅಸಾವಧಾನವಾಗಿ ಕೇಳಿದೆಯಾ? ಅಜ್ಞಾನದಿಂದ ಉಂಟಾದ ನಿನ್ನ ಸಮ್ಮೋಹವು–ಚಿತ್ತದ ಮೌಢ್ಯವು–ಅವಿವೇಕವು

ಪೂರ್ಣವಾಗಿ ತೊಲಗಿತೇ? ಯಾವ ಪ್ರಯೋಜನಕ್ಕೋಸ್ಕರ ನೀನು ಈ ಶಾಸ್ತ್ರವನ್ನು ಕೇಳುವ ಆಯಾಸವನ್ನೂ, ನಾನು ಶಾಸ್ತ್ರವನ್ನು ಉಪದೇಶಿಸುವ ಆಯಾಸವನ್ನೂ ಕೈಗೊಂಡೆವೋ–ಅದರ ಪ್ರಯೋಜನವು ಆಯಿತೇ?

(ಶಂ. ಭಾ.)

ಓ ಪಾರ್ಥ! ಸಾವಧಾನವಾದ ಮನಸ್ಸಿನಿಂದ ನಾನು ಹೇಳಿದ ಇದನ್ನು ನೀನು ಕೇಳಿದೆಯಾ? ಯಾವ ಅಜ್ಞಾನದಿಂದ ಮೂಢನಾಗಿ ನೀನು ಯುದ್ಧ ಮಾಡುವುದಿಲ್ಲ ಎಂದು ಹೇಳಿದ್ದೆಯೋ ಆ ಅಜ್ಞಾನದ ಸಮ್ಮೋಹವು ಪೂರ್ಣ ವಾಗಿ ತೊಲಗಿತೇ? (ರಾ. ಭಾ.)

**ಕಚ್ಚಿತ್** ಎಂಬುದು 'ಕಿಂ' ಎಂಬ ಅರ್ಥದ ಪ್ರಶ್ನಾರ್ಥಕವಾದ ಅವ್ಯಯ.

(ಮ. ಟೀಕಾ)

**ಅರ್ಜುನ ಉವಾಚ :**

**ಓಂ ನಷ್ಟೋ ಮೋಹಃ ಸ್ಮೃತಿರ್ಲಬ್ಧಾ ತ್ವತ್ಪ್ರಸಾದಾನ್ಮಯಾಚ್ಯುತ ।**
**ಸ್ಥಿತೋಽಸ್ಮಿ ಗತಸಂದೇಹಃ ಕರಿಷ್ಯೇ ವಚನಂ ತವ ॥೭೩॥**

ಅರ್ಜುನನು ಉತ್ತರಿಸುತ್ತಾನೆ :

ಅಚ್ಯುತನೇ! ನಿನ್ನ ಅನುಗ್ರಹದಿಂದಾಗಿ ನನಗೆ ಮೋಹವು ತೊಲಗಿತು. ಸ್ಮೃತಿಯೂ ದೊರಕಿತು. ಸಂಶಯವೇ ಇಲ್ಲದವನಾಗಿದ್ದೇನೆ. ನಿನ್ನ ಮಾತಿನಂತೆ ನಡೆಯುವೆನು.

* * *

(**ನಷ್ಟೋ ಮೋಹಃ** = ಅಚ್ಯುತ! ದಯಾಮಯ! ನಿನ್ನ ಉಪದೇಶ ದಿಂದ ನೀನು ದಯಪಾಲಿಸಿದ ಯೋಗದೃಷ್ಟಿಯ ದರ್ಶನವೆಂಬ ರೂಪದ ಅನುಗ್ರಹದಿಂದ ಮೋಹವು ಹೊರಟುಹೋಯಿತು. ಮೋಹ ಎಂದರೆ ಸಂಸಾರದ ಮೇಲಿನ ವ್ಯಾಮೋಹ. ನಾನು, ನನ್ನವರು–ಎಂಬ ಪ್ರೀತಿ. ನಾನು ಕೊಲ್ಲುತ್ತೇನೆ, ಅವರು ನನ್ನಿಂದ ಕೊಲ್ಲಲ್ಪಡುತ್ತಾರೆ–ಎಂಬ ಭಾವನೆ. ನಾನು ಯುದ್ಧಮಾಡಿದರೇ ಗೆಲುವು, ಇಲ್ಲದಿದ್ದರೆ ಯುದ್ಧವೇ ನಡೆಯುವುದಿಲ್ಲ– ಎಂಬ ಅಹಂಕಾರ. ಈ ಭಾವನೆಗಳೆಲ್ಲಾ ಮೋಹದ ನಾನಾರೂಪಗಳು. ಮೋಹ ಎಂದರೆ ಭ್ರಾಂತಿ ; ಅಜ್ಞಾನ. ನಿನ್ನ ಅನುಗ್ರಹದಿಂದಾಗಿ ಅಜ್ಞಾ

ನವು ಹೊರಟುಹೋಯಿತು. ಅಜ್ಞಾನವು ಹೊರಟುಹೋಯಿತೆಂದರೆ ಅದರ ಸ್ಥಳಕ್ಕೆ ಜ್ಞಾನವೆಂಬುದು ಬರಲೇ ಬೇಕಲ್ಲವೇ? ಸ್ಮೃತಿರ್ಲಬ್ಧಾ ಎನ್ನುತ್ತಾನೆ ಅರ್ಜುನ. ಸ್ಮೃತಿ ಎಂದರೆ ನೆನಪು. ನೆನಪನ್ನು ಪಡೆದುಕೊಂಡೆನು ಎಂದರೆ ನಾನಾರೆಂಬುದರ ನೆನಪು ಪಡೆದುಕೊಂಡೆನು. ಸ್ವಸ್ವರೂಪದ ನೆನಪುಮಾಡಿ ಕೊಂಡೆನು. ಆತ್ಮಜ್ಞಾನವಾಯಿತು ಎಂದರ್ಥ. ತಾನಾರೆಂಬ ಅರಿವುಂಟಾ ಯಿತು. ತನ್ನ ಗುಣ, ಪ್ರಭಾವ, ಐಶ್ವರ್ಯ ಮತ್ತು ಸ್ವರೂಪಗಳ ಯಥಾರ್ಥ ದರ್ಶನವಾಯಿತು. ಆತ್ಮಜ್ಞಾನಿಯಾದವನಿಗೆ ಮಾತ್ರವೇ ಶೋಕ-ಮೋಹ ಗಳಿಲ್ಲದಿರಲು ಸಾಧ್ಯ.

**ಯಸ್ಮಿನ್ಸರ್ವಾಣಿ ಭೂತಾನ್ಯಾತ್ಮೈವಾಭೂದ್ವಿಜಾನತಃ ।**
**ತತ್ರ ಕೋ ಮೋಹಃ ಕಃ ಶೋಕ ಏಕತ್ವಮನುಪಶ್ಯತಃ ॥**

ಈಶಾವಾಸ್ಯ-೭

ಯಾವಾಗ ತಿಳಿದವನಿಗೆ ಎಲ್ಲ ಪ್ರಾಣಿಗಳೂ ತನ್ನ ಆತ್ಮವೇ ಆಗಿದೆಯೋ ಅಲ್ಲಿ ಏಕತ್ವವನ್ನು ನೋಡುತ್ತಿರುವವನಿಗೆ ಮೋಹವೆಲ್ಲಿ? ಶೋಕವೆಲ್ಲಿ?

**ಸ್ಥಿತೋಽಸ್ಮಿ ಗತಸಂದೇಹಃ** = ಈಗ ನನಗೆ ಯಾವ ಸಂಶಯವೂ ಇಲ್ಲ. ಧರ್ಮಾಧರ್ಮಗಳ ವಿಷಯವಾಗಿಯೇ ಆಗಲೀ–ಕರ್ತವ್ಯಾಕರ್ತವ್ಯಗಳ ವಿಷಯವಾಗಿಯೇ ಆಗಲೀ ನನಗೆ ಎಳ್ಳಷ್ಟೂ ಸಂದೇಹವು ಉಳಿದಿಲ್ಲ. ನನ್ನ ಎಲ್ಲ ಸಂಶಯಗಳೂ ನಿವಾರಣೆಯಾಗಿರುವುದರಿಂದಲೇ ನನ್ನ ಅಂತಃಕರಣವು ಸ್ಥಿರವಾಗಿದೆ. ಈಗ ನಾನು ಸ್ಥಿರಮನಸ್ಕನಾಗಿದ್ದೇನೆ. ಈಗ ನಿನ್ನ ಮಾತನ್ನು ನಾನು ನಡೆಸಿಕೊಡುತ್ತೇನೆ. ನೀನು ಹೇಳಿದಂತೆ ಮಾಡುತ್ತೇನೆ–ಎನ್ನುತ್ತಾನೆ, ಅರ್ಜುನ.)

o o o

ನಿನ್ನ ಅನುಗ್ರಹವನ್ನು ಆಶ್ರಯಿಸಿದ ನನಗೆ ಸಮಸ್ತಸಂಸಾರವೆಂಬ ಅನರ್ಥಕ್ಕೆ ಕಾರಣವಾಗಿ ಸಾಗರದಂತೆ ದುಸ್ತರವಾಗಿದ್ದ ನನ್ನ ಅಜ್ಞಾನಜನ್ಯ ವಾದ ಮೋಹವು ತೊಲಗಿತು. ಆತ್ಮತತ್ತ್ವವಿಷಯವಾದ ಸ್ಮೃತಿಯು ಉಂಟಾ ಯಿತು. ಯಾವ ಸ್ಮೃತಿಯು ದೊರಕಿದ್ದರಿಂದ ಎಲ್ಲ ಗಂಟುಗಳೂ ಬಿಚ್ಚಿ ಹೋಗುತ್ತವೆಯೋ–ಆ ಸ್ಮೃತಿಯು ದೊರಕಿತು. ಮೋಹನಾಶದ ಬಗೆಗೆ ಇಲ್ಲಿ ಬಂದಿರುವ ಪ್ರಶ್ನೋತ್ತರಗಳಿಂದ ಎಲ್ಲ ಶಾಸ್ತ್ರಾರ್ಥಜ್ಞಾನದ ಫಲವೂ

ಅಜ್ಞಾನದಿಂದ ಉಂಟಾದ ಮೋಹದ ನಾಶ ಮತ್ತು ಆತ್ಮಸ್ಮೃತಿಯ ಲಾಭ–ಇಷ್ಟೇ ಎಂದು ನಿಶ್ಚಿತವಾಗಿ ಇಲ್ಲಿ ತೋರಿಸಲ್ಪಟ್ಟಿದೆ.

**ಅನಾತ್ಮವಿತ್ ಶೋಚಾಮಿ** ಛಾಂದೋಗ್ಯ ೭-೧-೩

ಎಂದು ಹೇಳಿ ಆತ್ಮಜ್ಞಾನವು ಬಂದೊಡನೆಯೇ ಎಲ್ಲ ಗಂಟುಗಳೂ ಬಿಚ್ಚಿಹೋಗುವುದೇ ಅದರ ಫಲ ಎಂದು ಶ್ರುತಿಯೂ ಇದೇ ಅಭಿಪ್ರಾಯವನ್ನೇ ಹೇಳುತ್ತದೆ.

**ಭಿದ್ಯತೇ ಹೃದಯಗ್ರಂಥಿಃ ಮು. ೨-೨೮ ತತ್ರ ಕೋ ಮೋಹಃ ಕಃ ಶೋಕ ಏಕತ್ವಮನುಪಶ್ಯತಃ** ಈಶಾವಾಸ್ಯ-೭

ನಿನ್ನ ಆಜ್ಞೆಗೆ ಅಧೀನನಾಗಿದ್ದೇನೆ. ನೀನು ಹೇಳಿದಂತೆ ಮಾಡುತ್ತೇನೆ. ನಾನು ನಿನ್ನ ಕರುಣೆಯಿಂದ ಕೃತಾರ್ಥನಾಗಿಬಿಟ್ಟೆನು. ನನಗೆ ಈಗ ಯಾವ ಕರ್ತವ್ಯವೂ ಇಲ್ಲ–ಎಂಬ ಅಭಿಪ್ರಾಯ. (ಶಂ. ಭಾ.)

ಮೋಹ ಎಂದರೆ ವಿಪರೀತಜ್ಞಾನ. ಅಚ್ಯುತ! ನಿನ್ನ ಅನುಗ್ರಹದಿಂದ ನನ್ನ ಮೋಹವು (ವಿಪರೀತಜ್ಞಾನವು) ಪೂರ್ತಿ ನಾಶಹೊಂದಿತು. ನಿನ್ನ ಅನುಗ್ರಹದಿಂದಲೇ ಸ್ಮೃತಿಯೂ (ಯಥಾವಸ್ಥಿತವಾದ ತತ್ತ್ವಜ್ಞಾನವೂ) ಉಂಟಾಯಿತು. ಅನಾತ್ಮವಾದ ಪ್ರಕೃತಿಯಲ್ಲಿ ಆತ್ಮಾಭಿಮಾನರೂಪವಾದ ಮೋಹ, ಪರಮಪುರುಷನ ಶರೀರನಾಗಿ ಭಗವದಾತ್ಮಕವಾಗಿರುವ ಇಡೀ ಚಿದಚಿದ್ವಸ್ತುಗಳನ್ನು ಭಗವದಾತ್ಮಕವಲ್ಲ ಎಂದು ಅಭಿಮಾನಿಸುವ ರೂಪವಾದ ಮೋಹ, ಪರಮಪುರುಷನ ಆರಾಧನೆಯಾಗಿರುವುದರಿಂದ ಅವನ ಪ್ರಾಪ್ತಿಗೆ ಉಪಾಯವಾಗಿರುವ ನಿತ್ಯ-ನೈಮಿತ್ತಿಕರೂಪವಾದ ಕರ್ಮವು ಬಂಧಕವಾದುದು ಎಂದು ತಿಳಿಯುವ ರೂಪವಾದ ಮೋಹ–ಎಲ್ಲವೂ ಸಂಪೂರ್ಣವಾಗಿ ತೊಲಗಿತು. ಆತ್ಮವು ಪ್ರಕೃತಿಯಿಂದ ವಿಲಕ್ಷಣವಾದುದು ; ಪ್ರಕೃತಿಸ್ವಭಾವವಿಲ್ಲದ್ದು. ಕೇವಲ ಜ್ಞಾನಸ್ವಭಾವವುಳ್ಳದ್ದು ಮತ್ತು ಪರಮಪುರುಷನಿಗೆ ಶೇಷವಾಗಿ ಅವನಿಂದ ನಿಯಮನಹೊಂದುವುದನ್ನೇ ಸ್ವರೂಪವಾಗಿ ಉಳ್ಳದ್ದು–ಎಂಬ ಜ್ಞಾನ ; ನಿಖಿಲಜಗತ್ತುಗಳ ಸೃಷ್ಟಿ-ಸ್ಥಿತಿ-ಲಯಗಳ ಲೀಲೆಯುಳ್ಳವನಾಗಿ,

ಅನಂತಕಲ್ಯಾಣಗುಣಸಾಗರನಾಗಿ, ಪರಬ್ರಹ್ಮ ಎಂಬ ಶಬ್ದದಿಂದ ಹೇಳಲ್ಪಡುವ ಪರಮಪುರುಷನ ಯಾಥಾತ್ಮ್ಯಜ್ಞಾನ ; ಇಂತಹ ಪರಾವರತತ್ತ್ವಗಳ ಯಥಾರ್ಥತೆಯಲ್ಲಿ ಜ್ಞಾನ ಮತ್ತು ಅವುಗಳ ಅಭ್ಯಾಸಪೂರ್ವಕವಾಗಿ ಪ್ರತಿ ದಿನವೂ ಪರಮಪುರುಷನ ಪ್ರೀತಿಗೋಸ್ಕರವೇ ಆಚರಿಸಲ್ಪಡುವ ನಿತ್ಯ-ನೈಮಿತ್ತಿಕಕರ್ಮಗಳ ಆಚರಣೆ ; ನಿಷಿದ್ಧಕರ್ಮಗಳ ತ್ಯಾಗ ; ಶಮ-ದಮ ಮುಂತಾದ ಆತ್ಮಗುಣಗಳಿಂದುಂಟಾಗುವ ಭಕ್ತಿರೂಪವನ್ನು ತಳೆದ ಪರಮ ಪುರುಷನ ಉಪಾಸನೆಯಿಂದಲೇ ದೊರೆಯುವ ವೇದಾಂತವೇದ್ಯನಾದ ಪರಮಪುರುಷನಾದ ವಾಸುದೇವನೇ ನೀನು ಎಂಬ ಜ್ಞಾನವು ದೊರೆಯಿತು. ಅದರಿಂದ ಬಂಧುಸ್ನೇಹದ ಕರುಣೆಯಿಂದ ಬೆಳೆದ ವಿಪರೀತಜ್ಞಾನಮೂಲಕ ವಾದ ಎಲ್ಲ ವಿಷಾದಗಳನ್ನೂ ಕಳೆದುಕೊಂಡು ಸಂದೇಹರಹಿತನಾಗಿ ಸ್ವಸ್ಥನಾಗಿ ದ್ದೇನೆ. ಯುದ್ಧವೇ ಮುಂತಾದ ಕರ್ತವ್ಯವಿಷಯಕವಾದ ನಿನ್ನ ಮಾತಿನಂತೆ ಈಗಲೇ ನಡೆಯುತ್ತೇನೆ. ನೀನು ಹೇಳಿದಂತೆ ಯುದ್ಧ ಮುಂತಾದುವುಗಳನ್ನು ಮಾಡುತ್ತೇನೆ' ಎಂದರ್ಥ. (ರಾ. ಭಾ.)

'ಕರಿಷ್ಯೇ ವಚನಂ ತವ' = ಯಥೇಚ್ಛಸಿ ತಥಾ ಕುರು–ಎಂಬಲ್ಲಿ ಉಂಟಾಗಿದ್ದ ಆಕ್ಷೇಪವನ್ನು ಪರಿಹರಿಸಲು ಭಗವಂತನ ಮಾತನ್ನು ಅನುಸರಿಸುತ್ತಾನೆ. (ಮ. ಟೀಕಾ)

**ಸಂಜಯ ಉವಾಚ :**

**ಓಂ ಇತ್ಯಹಂ ವಾಸುದೇವಸ್ಯ ಪಾರ್ಥಸ್ಯ ಚ ಮಹಾತ್ಮನಃ ।**
**ಸಂವಾದಮಿಮಮಶ್ರೌಷಮದ್ಭುತಂ ರೋಮಹರ್ಷಣಮ್ ॥೭೪॥**

ಸಂಜಯನು ಹೇಳುತ್ತಾನೆ :

ಹೀಗೆ ನಾನು ವಾಸುದೇವನ ಮತ್ತು ಮಹಾತ್ಮನಾದ ಪಾರ್ಥನ ಅದ್ಭುತವೂ ರೋಮಾಂಚಕಾರಿಯೂ ಆದ ಈ ಸಂವಾದವನ್ನು ಕೇಳಿದೆನು.

* * *

(ಸಂಜಯನು ಧೃತರಾಷ್ಟ್ರನನ್ನು ಕುರಿತು ಹೇಳುತ್ತಾನೆ : 'ಈ ರೀತಿ ಯಾಗಿ ನಾನು ವಾಸುದೇವನ ಮತ್ತು ಮಹಾತ್ಮನಾದ ಪಾರ್ಥನ ಅದ್ಭುತ

ವಾದ ರೋಮಾಂಚಕರವಾದ ಸಂವಾದವನ್ನು ಕೇಳಿದೆನು.' ಸಂಜಯನು ಅರ್ಜುನನನ್ನು ಮಹಾತ್ಮನಾದ ಪಾರ್ಥ ಎನ್ನುತ್ತಾನೆ. ನಿಶ್ಚಯವಾಗಿಯೂ ಜೀವಕೋಟಿಗೇ ಅರ್ಜುನನು ಮಹಾತ್ಮನು. ಏಕೆಂದರೆ : ಅಮೃತಧಾರೆಗೆ ಸಮಾನವಾದ ಈ ಗೀತಾಸುಧೆಯು ನಮಗೆ ಲಭ್ಯವಾಗಲು ಅವನೇ ಕಾರಣ. ಅದ್ಭುತ ಮತ್ತು ರೋಮಾಂಚಕಾರಿಯಾದುದು ಎನ್ನುತ್ತಾನೆ. ಇದು ಪರಮಾತ್ಮನ ಮುಖಾರವಿಂದದಿಂದಲೇ ಹೊರಟುಬಂದಿದ್ದಾದುದರಿಂದ ಅದ್ಭುತವಾದುದು, ಅತಿಮಹತ್ತ್ವದ್ದು ಮತ್ತು ಅತ್ಯಂತಗಹನವಾದುದು. ಸಖ್ಯಭಕ್ತಿಯಿಂದ ಭಗವಂತ ನನ್ನು ಒಲಿಸಿಕೊಂಡು ಮಹಾಯೋಗಿಗಳಿಗೂ ಸುದುರ್ದರ್ಶವಾದ ವಿಶ್ವರೂಪ ದರ್ಶನವನ್ನೂ, ಅಧ್ಯಾತ್ಮಜ್ಞಾನ-ವಿಜ್ಞಾನಗಳನ್ನೂ ಪಡೆದ ಮಹಾತ್ಮ.)

o o o

ಶಾಸ್ತ್ರದ ವಸ್ತುವು ಅದ್ಭುತ ; ಅದನ್ನು ಹೇಳಿದವನು, ಕೇಳಿದವನು, ಅದು ಅವತಾರ ಮಾಡಿದ ಪ್ರಸಂಗ, ಅದರ ಗ್ರಂಥಕರ್ತಾ, ಅದರ ರೀತಿ-ರಸ, ಅವುಗಳಿಂದ ಉಂಟಾಗುವ ಪರಿಣಾಮ–ಎಲ್ಲವೂ ಅದ್ಭುತವಾದುದೇ. ಆದುದರಿಂದಲೇ ಈ ಸಂವಾದವು ರೋಮಾಂಚಕಾರಿಯೂ ಆಗಿದ್ದಿತು. ಇಂತಹ ವಾಸುದೇವ-ಪಾರ್ಥರ ಸಂವಾದವನ್ನು ನಾನು ಕೇಳಿದೆನು. **ಮಹಾತ್ಮನಃ** ಎಂಬ ಪದವನ್ನು ಪರಮಪುರುಷನಾದ ವಾಸುದೇವನಾದ ನಾರಾಯಣನಿಗೂ ಅವನ ಸಖನಾದ ನರನಾದ ಅರ್ಜುನನಿಗೂ ಇಬ್ಬರಿಗೂ ಅನ್ವಯಿಸಬಹುದು.

ಶಾಸ್ತ್ರಾರ್ಥವು ಮುಗಿಯಿತು. ಈಗ ಕಥಾಸಂಬಂಧವನ್ನು ತೋರಿಸು ವುದಕ್ಕೋಸ್ಕರ ಸಂಜಯನು ಇದನ್ನು ಹೇಳುತ್ತಾನೆ. ಹೀಗೆ ನಾನು ಮೇಲೆ ಹೇಳಿದ ಅದ್ಭುತವೂ, ಅತ್ಯಂತಾಶ್ಚರ್ಯಕರವೂ, ರೋಮಾಂಚಕಾರಿಯೂ ಆದ, ವಾಸುದೇವನ ಮತ್ತು ಮಹಾತ್ಮನಾದ ಅರ್ಜುನನ ಸಂವಾದವನ್ನು ಕೇಳಿದೆನು. (ಶಂ. ಭಾ.)

ಮೇಲೆ ಹೇಳಿದಂತೆ ನಾನು ವಸುದೇವಪುತ್ರನ ಮತ್ತು ಅವನ ಸೋದರತ್ತೆಯ ಮಗನಾಗಿ ಅವನ ಪಾದಾರವಿಂದಗಳನ್ನಾಶ್ರಯಿಸಿದ ಮಹಾತ್ಮ ನಾದ (ಮಹಾಬುದ್ಧಿಯಾದ) ಪಾರ್ಥನ ರೋಮಾಂಚಕಾರಿಯೂ ಅದ್ಭುತವೂ ಆದ ಈ ಸಂವಾದವನ್ನು ಕೇಳಿದೆನು. (ರಾ. ಭಾ.)

**ಮಹಾತ್ಮನಃ**=ಮಹತ್ತಾದ ಮನಸ್ಸುಳ್ಳ. **ಮಹಾನ್ + ಆತ್ಮಾ = ಮನಃ ಯಸ್ಯ ಸಃ = ಮಹಾತ್ಮಾ, ತಸ್ಯ.** (ಮ. ಟೀಕಾ.)

**ಓಂ ವ್ಯಾಸಪ್ರಸಾದಾಚ್ಛ್ರುತವಾನೇತದ್ಗುಹ್ಯಮಹಂ ಪರಮ್ ।**
**ಯೋಗಂ ಯೋಗೇಶ್ವರಾತ್ಕೃಷ್ಣಾತ್ಸಾಕ್ಷಾತ್ಕಥಯತಃ ಸ್ವಯಮ್ ॥**

ಈ ಗುಹ್ಯತಮವಾದ ಶ್ರೇಷ್ಠವಾದ ಯೋಗವನ್ನು ಯೋಗೇಶ್ವರನಾದ ಶ್ರೀಕೃಷ್ಣನು ಸಾಕ್ಷಾತ್ತಾಗಿ ತಾನೇ ಹೇಳಿದುದನ್ನು ವ್ಯಾಸರ ಅನುಗ್ರಹದಿಂದ ಕೇಳಿದೆನು.

* * *

(ತಾನು, ಇಂತಹ ಪರಮಾದ್ಭುತವಾದ ರೋಮಾಂಚಕರವಾದ ವಿಶ್ವ ರೂಪದರ್ಶನವನ್ನು ಕಾಣಲು ಮತ್ತು ಅತ್ಯಂತಾತ್ಯಂತರಹಸ್ಯವಾದ ಆತ್ಮವಿದ್ಯೆ ಯನ್ನು ಯಥಾವತ್ತಾಗಿ ಕೇಳಲು ಕಾರಣರಾದ ಭಗವಾನ್ ವೇದವ್ಯಾಸರನ್ನೂ ಸಹ ಸಂಜಯನು ಕೃತಜ್ಞತೆಯಿಂದ ನೆನೆಸಿಕೊಳ್ಳುತ್ತಾನೆ.

ಮಹಾರಾಜ! **ಏತತ್ ಗುಹ್ಯಂ** = ಈ ಅತ್ಯಂತರಹಸ್ಯವಾದ. **ಪರಂ ಯೋಗಂ** =ಶ್ರೇಷ್ಠವಾದ ಯೋಗವನ್ನು ಯೋಗಶಾಸ್ತ್ರವನ್ನು. ಯೋಗ ಎಂದರೆ ಜೀವಾತ್ಮ-ಪರಮಾತ್ಮರ ಸಂಯೋಗ, ಸಮಾಧಿ. ಇವುಗಳನ್ನು ಹೇಳುವ ಶಾಸ್ತ್ರವು ಯೋಗ. ಯೋಗಕ್ಕೇ ಈಶ್ವರನಾದ ಶ್ರೀಕೃಷ್ಣನಿಂದ ಸಾಕ್ಷಾತ್ತಾಗಿ ಅವನೇ ಹೇಳುತ್ತಿರುವಾಗ ಕೇಳಿದೆನು ಎನ್ನುತ್ತಾನೆ ಸಂಜಯ.

ಯೋಗವನ್ನು ಯೋಗೇಶ್ವರನಿಂದಲೇ ಕೇಳಿದರೆ ಅದೆಂತಹ ಸಂತೋಷ! ಹಣವನ್ನು ಕುಬೇರನಿಂದಲೇ ಪಡೆದುಕೊಂಡಂತೆ. ಯೋಗೇಶ್ವರನು ಯೋಗದ ವಿಷಯವಾಗಿ ಹೇಳುವಂತೆ ಮತ್ತಾರೂ ಹೇಳಲಾರರು. ಯೋಗದಲ್ಲಿನ ಎಲ್ಲ ವಿಷಯಗಳನ್ನೂ ಸಂಪೂರ್ಣವಾಗಿ ತಿಳಿದಿರತಕ್ಕ ಸರ್ವಜ್ಞನವನು. ಅವನಿಂದಲೇ ಯೋಗಮಾರ್ಗವನ್ನು ತಿಳಿದುಕೊಂಡರೆ ಯಾವ ವಿಧವಾದ ಸಂಶಯಕ್ಕೂ ಅವಕಾಶವೇ ಇಲ್ಲ, ಅಲ್ಲವೇ? 'ಸಾಕ್ಷಾತ್ತಾಗಿ ಅವನಿಂದಲೇ ಕೇಳಿದೆನು' ಎಂದು ಹೇಳಿದ ಸಂಜಯನ ಆನಂದವನ್ನು ನಾವು ಖಂಡಿತವಾಗಿಯೂ ಅಳೆಯಲಾರೆವು.)

o o o

ಪರಮಗುಹ್ಯವಾದ ಈ ಸಂವಾದವನ್ನು ಮತ್ತು ಯೋಗವನ್ನು ವ್ಯಾಸರು ಕೃಪೆಯಿಂದ ದಯಪಾಲಿಸಿದ ದಿವ್ಯಚಕ್ಷುಸ್ಸಿನಿಂದ ಯೋಗೇಶ್ವರನಾದ ಕೃಷ್ಣನೇ ಸಾಕ್ಷಾತ್ತಾಗಿ ತಾನೇ (ಪರಂಪರೆಯಿಂದಲ್ಲ) ಹೇಳುತ್ತಿರುವುದನ್ನು– ವ್ಯಾಸರ ಅನುಗ್ರಹದಿಂದ ಕೇಳಿದೆನು. (ಶಂ. ಭಾ.)

ಪರಮಯೋಗವೆಂಬ ಈ ಮಹಾರಹಸ್ಯವನ್ನು ನಾನು ಯೋಗೇಶ್ವರನಾದ ಜ್ಞಾನ-ಬಲೈಶ್ವರ್ಯ-ವೀರ್ಯ-ಶಕ್ತಿ-ತೇಜಸ್ಸುಗಳಿಗೆ ನಿಧಿಯಾದ ಭಗವಾನ್ ಶ್ರೀಕೃಷ್ಣನೇ ತಾನಾಗಿಯೇ ಸಾಕ್ಷಾತ್ತಾಗಿ ಹೇಳಿದುದನ್ನು ವ್ಯಾಸರು ಅನುಗ್ರಹಿಸಿದ ದಿವ್ಯದೃಷ್ಟಿ ಮತ್ತು ದಿವ್ಯಶ್ರೋತ್ರಗಳಿಂದ ಪಡೆದೆನು. (ರಾ. ಭಾ.)

**ಸಾಕ್ಷಾತ್** ಎಂಬುದಕ್ಕೆ **ಶ್ರುತವಾನ್** ಎಂಬಲ್ಲಿ ಅನ್ಯವ್ಯವಧಾನವಿಲ್ಲದೇ ಪ್ರತ್ಯಕ್ಷವಾಗಿ ಕೇಳಿದೆನು ಎಂಬ ಅಭಿಪ್ರಾಯ. (ಮ. ಟೀಕಾ)

**ಓಂ ರಾಜನ್ಸಂಸ್ಮೃತ್ಯ ಸಂಸ್ಮೃತ್ಯ ಸಂವಾದಮಿಮಮದ್ಭುತಮ್ ।**
**ಕೇಶವಾರ್ಜುನಯೋಃ ಪುಣ್ಯಂ ಹೃಷ್ಯಾಮಿ ಚ**
**ಮುಹುರ್ಮುಹುಃ ॥೭೬॥**

ಮಹಾರಾಜ! ಕೇಶವಾರ್ಜುನರ ಈ ಅದ್ಭುತವಾದ ಪುಣ್ಯಪ್ರಾಪಕವಾದ ಸಂವಾದವನ್ನು ನೆನೆ-ನೆನೆದು ಮತ್ತೆ ಮತ್ತೆ ಹರ್ಷಗೊಳ್ಳುತ್ತಿದ್ದೇನೆ.

* * *

(ಕೇಶವಾರ್ಜುನರ ಅದ್ಭುತವಾದ ಮತ್ತು ಪುಣ್ಯಕರವಾದ ಸಂಭಾಷಣೆಯನ್ನು ಕೇಳಿ ಪುನಃ-ಪುನಃ ಪರಮಾನಂದವನ್ನು ಅನುಭವಿಸುತ್ತಿದ್ದೇನೆ ಎನ್ನುತ್ತಾನೆ ಸಂಜಯ ಧೃತರಾಷ್ಟ್ರನೊಡನೆ.

ಕೇಳಿದುದರಿಂದಲೇ ಪುಣ್ಯಂ ಎಂದರೆ ಅತ್ಯಂತಪಾವನವಾದುದು, ಶ್ರವಣಮಾಡಿದರೂ ಪಾಪವನ್ನು ಪರಿಹರಿಸತಕ್ಕದ್ದು. ಪಾಪಗಳನ್ನು ಪರಿಹರಿಸಿ ಪುಣ್ಯವನ್ನು ಕೊಟ್ಟು ಉತ್ತಮವಾದ ಲೋಕಗಳಿಗೆ ಅವಸಾನಾನಂತರದಲ್ಲಿ ಹೋಗಲು ಹಾದಿಮಾಡಿಕೊಡತಕ್ಕದ್ದು. ಇದನ್ನು ಈ ಹಿಂದೆ ಶ್ರೀಕೃಷ್ಣನೇ ಹೇಳಿದ್ದಾನೆ. ಇದು ಅದ್ಭುತವಾದುದು. ವಿಷಯವೂ ಅದ್ಭುತ, ಅದನ್ನು

ಹೇಳಿದವನು, ಕೇಳಿದವನು, ಗ್ರಂಥರಚಿಸಿದವನು, ನಿರೂಪಣೆಯ ರೀತಿ-ನೀತಿ ಎಲ್ಲವೂ ಅದ್ಭುತ-ಪರಮಾಶ್ಚರ್ಯಕರ. ಮತ್ತೆ ಮತ್ತೆ ನೆನಪಿಗೆ ಬರುತ್ತಿರುವ ಅದ್ಭುತವನ್ನು ಕೇಳಿದಾಗ ಮಾತ್ರವಲ್ಲದೇ ನೆನಪಿಗೆ ಬಂದಾಗಲೂ ಪರಮಾನಂದವನ್ನು ಉಂಟುಮಾಡುವ ಅದ್ಭುತ.

ಬ್ರಹ್ಮವಿದ್ಯೆಯು ಅದ್ಭುತವಾದುದು. (ಎಷ್ಟು ಪ್ರಕಾರದಿಂದ ಎಷ್ಟು ಸುಲಭವಾಗಿ) ಅದನ್ನು ಸಾಮಾನ್ಯಮನುಷ್ಯನಿಗೂ ಅರ್ಥವಾಗುವ ರೀತಿಯಲ್ಲಿ ಹೇಳಿದನು–ಎಂದು ಸಂಜಯನು ಹೇಳಿದುದಕ್ಕೆ ಕಾರಣ : ಒಂದೇ ವಿಷಯವನ್ನು ಅನೇಕಮುಖವಾಗಿ ಹೇಳಿ ಅರ್ಜುನನಿಗೆ ಶ್ರೀಕೃಷ್ಣನು ಬ್ರಹ್ಮವಿದ್ಯೆಯನ್ನು ಮನದಟ್ಟುಮಾಡಿಕೊಡುತ್ತಾನೆ. ಓದುಗರಿಗೂ ಇದೇ ಅನುಭವವಾಗುತ್ತದೆ. ವಿಷಯವನ್ನು ಒಮ್ಮೆ ದೃಷ್ಟಾಂತದಿಂದ, ಒಮ್ಮೆ ಉಪಮೆಯಿಂದ, ಒಮ್ಮೆ ರೂಪಕದಿಂದ, ಮತ್ತೊಮ್ಮೆ ಪುನರುಕ್ತಿಯಿಂದ–ಇತ್ಯಾದಿ ನಾನಾಪ್ರಕಾರಗಳಿಂದ ಕೇಳುವವನ ಮನಸ್ಸಿನಲ್ಲಿ ಎಳ್ಳಷ್ಟಾದರೂ ಸಂಶಯವೇ ಉಳಿಯದಂತೆ ಶ್ರೀಕೃಷ್ಣನು ಪ್ರತಿಪಾದಿಸುವ ಶೈಲಿಯು ಅಷ್ಟು ಅದ್ಭುತವಾದುದು.

ಆದುದರಿಂದ ಕೇಶವಾರ್ಜುನರ ಸಂವಾದವು ಸಂಜಯನು ಹೇಳಿದಂತೆ ಅದ್ಭುತವಾದುದೆಂಬುದರಲ್ಲಿ ಸಂಶಯವೇ ಇಲ್ಲ.)

**ಓಂ ತಚ್ಚ ಸಂಸ್ಮೃತ್ಯ ಸಂಸ್ಮೃತ್ಯ ರೂಪಮತ್ಯದ್ಭುತಂ ಹರೇಃ ।**
**ವಿಸ್ಮಯೋ ಮೇ ಮಹಾನ್ರಾಜನ್ಹೃಷ್ಯಾಮಿ ಚ ಪುನಃ ಪುನಃ ॥೭೭॥**

ಮತ್ತು ಆ ಹರಿಯ ಅದ್ಭುತವಾದ ರೂಪವನ್ನು ನೆನೆ-ನೆನೆದು ನನಗೆ ಮಹಾವಿಸ್ಮಯವಾಗುತ್ತಿದೆ. ಮತ್ತೆ ಮತ್ತೆ ಹರ್ಷಪಡುತ್ತಿದ್ದೇನೆ.

* * *

(ಕೇಶವಾರ್ಜುನರ ಅದ್ಭುತವಾದ ಸಂವಾದವನ್ನು ಸಾಕ್ಷಾತ್ತಾಗಿ ಕೇಳಿದ್ದಲ್ಲದೇ ಆ ಅದ್ಭುತವಾದ ವಿದ್ಯೆಯನ್ನು ಉಪದೇಶಿಸಿದ ಪರಮಾತ್ಮನ ಅದ್ಭುತವಾದ ರೂಪವನ್ನು ಸಾಕ್ಷಾತ್ತಾಗಿ ಸಂದರ್ಶಿಸುವ ಭಾಗ್ಯವನ್ನೂ ವ್ಯಾಸರ ಅನುಗ್ರಹದಿಂದ ಸಂಜಯನು ಪಡೆದಿದ್ದನು. ಆ ದಿವ್ಯರೂಪದ

ಸ್ಮರಣೆಯಿಂದ ಉಂಟಾದ ಅನುಭವವನ್ನು ನೇರವಾದ ಭಾಷೆಯಲ್ಲಿ ಸಂಜಯನು ಇಲ್ಲಿ ನಿರೂಪಿಸುತ್ತಾನೆ.

ಶ್ರೀಕೃಷ್ಣನು ಅರ್ಜುನನಿಗೆ ತೋರಿಸಿದ ವಿಶ್ವರೂಪವನ್ನು ವ್ಯಾಸರ ಅನುಗ್ರಹದಿಂದ ಸಂಜಯನಿಗೂ ಸಹ ನೋಡಲು ಸಾಧ್ಯವಾಯಿತು. ಸಂಜಯನಿಗೆ ರಹಸ್ಯದಲ್ಲಿ ನಡೆಯುವುದನ್ನೂ ನೋಡುವ ಮತ್ತು ವಿಷಯಗಳನ್ನು ಕೇಳಿ ಸಂಗ್ರಹಿಸುವ ಅದ್ಭುತಶಕ್ತಿಯನ್ನು ವ್ಯಾಸರು ದಯಪಾಲಿಸಿದ್ದರು. ಅದ್ಭುತವಾದ ಪರಮಾತ್ಮನ ವಿಶ್ವರೂಪವನ್ನು ಪ್ರತ್ಯಕ್ಷವಾಗಿಯೇ ನೋಡಿದ ಸಂಜಯನು ಅದನ್ನು ಪುನಃ ಪುನಃ ಸ್ಮರಿಸಿದ್ದರಲ್ಲಿ ಆಶ್ಚರ್ಯವೇನಿಲ್ಲ. ಆ ರೂಪವೇ ಅಂತಹ ಪರಮಾದ್ಭುತವಾದುದು. ರೋಮಾಂಚನವನ್ನುಂಟುಮಾಡತಕ್ಕದ್ದು. ಕೇವಲ ಆ ಪ್ರಕರಣವನ್ನು ಓದುತ್ತಿದ್ದರೇ ರೋಮಾಂಚನವಾಗುವುದಾದರೆ ಪ್ರತ್ಯಕ್ಷವಾಗಿ ನೋಡಿದವನ ವಿಷಯದಲ್ಲಿ ಹೇಳುವುದೇನಿದೆ? ಆದುದರಿಂದಲೇ ಸಂಜಯನು ಹೇಳುತ್ತಾನೆ. **ಹರೇಃ ಅದ್ಭುತಂ ರೂಪಂ ಸಂಸ್ಮೃತ್ಯ ಪುನಃ ಪುನಃ ಹೃಷ್ಯಾಮಿ** = ಹರಿಯ ಅದ್ಭುತರೂಪವನ್ನು ಜ್ಞಾಪಿಸಿಕೊಂಡಂತೆಲ್ಲಾ ನನಗೆ ರೋಮಾಂಚವಾಗುತ್ತಲೇ ಇರುತ್ತದೆ. ನನ್ನ ಶರೀರದಲ್ಲಿರುವ ರೋಮಕೋಟಿಯು ನಿಮಿರಿನಿಲ್ಲುತ್ತದೆ ಮಹಾರಾಜ! ಎನ್ನುತ್ತಾನೆ ಸಂಜಯ.)

O O O

**ಪುಣ್ಯಂ** = ಶ್ರವಣಮಾಡಿದರೂ ಪಾಪವನ್ನು ಪರಿಹಾರಮಾಡುವ. **ಮುಹುರ್ಮುಹುಃ**=ಪ್ರತಿಕ್ಷಣವೂ. (ಶಂ. ಭಾ.)

**ಸಂವಾದಂ** = ನಾನು ಸಾಕ್ಷಾತ್ತಾಗಿ ಕೇಳಿದ ಸಂವಾದವನ್ನು.

(ರಾ. ಭಾ.)

**ಪುಣ್ಯಂ** = ಪರಲೋಕದಲ್ಲಿ ಸುಖವನ್ನುಂಟುಮಾಡಲು ಕಾರಣವಾದ ಅದೃಷ್ಟವನ್ನುಂಟುಮಾಡುವ. (ಮ. ಟೀಕಾ.)

**ಓಂ ಯತ್ರ ಯೋಗೇಶ್ವರಃ ಕೃಷ್ಣೋ ಯತ್ರ ಪಾರ್ಥೋ ಧನುರ್ಧರಃ ।**
**ತತ್ರ ಶ್ರೀರ್ವಿಜಯೋ ಭೂತಿರ್ಧ್ರುವಾ ನೀತಿರ್ಮತಿರ್ಮಮ ॥೭೮॥**

ಎಲ್ಲಿ ಯೋಗೇಶ್ವರನಾದ ಶ್ರೀಕೃಷ್ಣನೋ ಮತ್ತು ಎಲ್ಲಿ ಧನುರ್ಧಾರಿ

ಯಾದ ಅರ್ಜುನನೋ–ಅಲ್ಲಿ ಶ್ರೀ, ವಿಜಯ, ಐಶ್ವರ್ಯ, ಧ್ರುವವಾದ ನೀತಿ= ಇವುಗಳು ಇರುವುವೆಂದು ನನ್ನ ಮತವು.

* * *

(ಯೋಗೇಶ್ವರನಾದ ಶ್ರೀಕೃಷ್ಣನೆಲ್ಲಿರುತ್ತಾನೆಯೋ, ಧನುರ್ಧರನಾದ ಪಾರ್ಥನು ಎಲ್ಲಿರುತ್ತಾನೆಯೋ–ಅಲ್ಲಿ ಸಂಪತ್ತು, ವಿಜಯ, ಐಶ್ವರ್ಯ, ಶಾಶ್ವತವಾದ ನೀತಿ ಎಂದರೆ ಶಾಶ್ವತವಾದ ಸನಾತನಧರ್ಮಗಳು ಇರುತ್ತವೆ ಎಂಬುದು ನನ್ನ ಅಭಿಮತ–ಎಂದು ಸಂಜಯನು ಹೇಳುತ್ತಾನೆ.

ಮಹಾಯೋಗೇಶ್ವರನಾದ, ನಾರಾಯಣಸ್ವರೂಪಿಯಾದ ಶ್ರೀಕೃಷ್ಣ ಮತ್ತು ಆತನ ಸಖನಾಗಿ ಆತನ ಆಶಯವನ್ನು ಅನುಷ್ಠಾನಕ್ಕೆ ತರುವ ನರ ರೂಪಿಯಾದ ಅದ್ಭುತ ಬಿಲ್ಗಾರ ಅರ್ಜುನ–ಇವರಿಬ್ಬರೂ ಸೇರಿದಾಗ ಸಮಸ್ತ ವಾದ ಶ್ರೇಷ್ಠಸಿದ್ಧಿಗಳೂ ಒದಗುತ್ತವೆ ಎಂಬುದರಲ್ಲಿ ಸಂಶಯವಿಲ್ಲ. ಶ್ರೀಕೃಷ್ಣ ಮತ್ತು ಅರ್ಜುನರು 'ಶ್ರೇಷ್ಠತಮಜ್ಞಾನ ಮತ್ತು ಅದನ್ನು ಪ್ರಕೃತಿಯಲ್ಲಿ ಮುಂದುವರಿಸುವ ಕ್ರಿಯಾಯೋಗ'–ಎಂಬ ಆಧ್ಯಾತ್ಮಿಕದ ಧ್ವನಿಯನ್ನೂ ಇಲ್ಲಿ ಕಾಣುತ್ತೇವೆ. ಬೇರೆ ಬೇರೆ ಅದ್ಭುತವಾದ ಯೋಗಸಿದ್ಧಿಗಳನ್ನು ಪಡೆದ ಸಿದ್ಧ ಪುರುಷರೂ ದೇವಯೋನಿಗಳೂ ಉಂಟು. ಆದರೆ ಆ ಎಲ್ಲ ಯೋಗಗಳಿಗೂ ಏಕೈಕಪ್ರಭುವಾದವನು ಮತ್ತು ಯೋಗಿಗಳಿಗೆ ಅದನ್ನು ದಯಪಾಲಿಸುವವನು ಸರ್ವೇಶ್ವರೇಶ್ವರನಾದ ಶ್ರೀಕೃಷ್ಣನೇ. ಸಖ್ಯಭಕ್ತಿಯಿಂದ ಅವನಲ್ಲಿ ಒಂದಾಗಿ ಕಲೆತು ಅವನ ನೆರಳಿನಂತೆ ಇರುವವನು ಧನುರ್ಧಾರಿಯಾದ ಅರ್ಜುನ. ಆತನು, ಹೊರಗಡೆ ಬಿಲ್ಗಾರಿಕೆ ಮಾತ್ರವಲ್ಲ ; ಯೋಗೇಶ್ವರನ ಆದೇಶದಂತೆ ಪ್ರಣವವೆಂಬ ಧನುಸ್ಸಿನಲ್ಲಿ ಆತ್ಮವೆಂಬ ಶರವನ್ನು ಹೂಡಿ ಬ್ರಹ್ಮರೂಪವಾದ ಲಕ್ಷ್ಯವನ್ನು ಸಾಧಿಸುವ ಅಗ್ಗಳಿಕೆಯ ಬಿಲ್ಗಾರನೂ ಹೌದು. ಹೊರಗಿನ ಯುದ್ಧದಲ್ಲಿ ಎಣೆಯಿಲ್ಲದ ಬಿಲ್ಗಾರನೆಂದು ಖ್ಯಾತಿಪಡೆದ ಮಹಾಪುರುಷನು ಅರ್ಜುನ. ಇವರ ಸಂಯೋಗದಲ್ಲಿ ದೊರೆತವು ಸಿದ್ಧಿಗಳಾದ ಶ್ರೀಃ, ವಿಜಯ, ಭೂತಿ ಮತ್ತು ಧ್ರುವವಾದ ನೀತಿ. ಇವು ಅಧ್ಯಾತ್ಮಭೂಮಿಗೂ ಅನ್ವಯಿಸುತ್ತವೆ. ವ್ಯಾವಹಾರಿಕಕ್ಷೇತ್ರದಲ್ಲೂ ಅನ್ವಯಿಸುತ್ತವೆ. ಜಯ-ವಿಜಯ ಇಬ್ಬರೂ ವಿಷ್ಣುವಿನ ದ್ವಾರಪಾಲಕರು. ವಿಜಯ ಎಂಬುದು ಅರ್ಜುನನ ಅನ್ವರ್ಥವಾದ ಒಂದು ನಾಮಧೇಯವೂ ಆಗಿದೆ ಎಂಬುದನ್ನು ಸ್ಮರಿಸಬಹುದು.

ಶ್ರೀಕೃಷ್ಣ ಮತ್ತು ಅರ್ಜುನರ ಸಹಯೋಗವು ಬ್ರಹ್ಮತೇಜಸ್ಸು ಮತ್ತು ಕ್ಷಾತ್ರತೇಜಸ್ಸುಗಳ–ಯೋಗದಂತೆ ಪವನಾಗ್ನಿಗಳ ಯೋಗದಂತೆ–ಅಪ್ರಧೃಷ್ಯವಾದುದು. ಎಲ್ಲ ವಿಘ್ನಗಳನ್ನೂ ಭಸ್ಮಮಾಡುವ ಸಾಮರ್ಥ್ಯವುಳ್ಳ ಮಹಾ ತೇಜೋರೂಪವಾದುದು.

**ಪವನಾಗ್ನಿಸಮಾಗಮೋ ಹ್ಯಯಂ ಸಹಿತಂ ಬ್ರಹ್ಮ ಯದಸ್ತ್ರತೇಜಸಾ ।**
**ವಸಿಷ್ಠಸ್ಯ ಗುರೋರ್ಮನ್ತ್ರಾಃ ಸಾಯಕಾಸ್ತಸ್ಯ ಧನ್ವಿನಃ ।**
**ಕಿಂ ತತ್ಸಾಧ್ಯಂ ಯದುಭಯೇ ಸಾಧಯೇಯುರ್ನ ಸಙ್ಗತಾಃ ॥**

ಶ್ರೀಕೃಷ್ಣಪರಮಾತ್ಮನು ಆಧ್ಯಾತ್ಮಿಕವಾದ ಅಂತರ್ಯೋಗ-ಬಹಿರ್ಯೋಗಗಳಿಗೆ ಈಶ್ವರನಾಗಿರುವುದಲ್ಲದೇ ವ್ಯವಹಾರಕ್ಕೆ ಸಂಬಂಧಪಟ್ಟ ಯೋಗಯುಕ್ತಿ-ಉಪಾಯಗಳಲ್ಲಿಯೂ ಅದ್ವಿತೀಯನಾಗಿ ಪಾಂಡವರಿಗೆ ಹೆಜ್ಜೆ-ಹೆಜ್ಜೆಯಲ್ಲಿಯೂ ಮಾರ್ಗದರ್ಶನನೀಡಿ ಅವರಿಗೆ ಅಭ್ಯುದಯವುಂಟಾಗುವುದಕ್ಕೆ ಕಾರಣನಾಗುತ್ತಾನೆ.

**ಅನ್ಧಂ ಬಲಂ ಜಡಂ ಪ್ರಾಹುಃ ಪ್ರಣೇತವ್ಯಂ ವಿಚಕ್ಷಣೈಃ ।**

ಸಭಾ-೨೦-೧೬

ಬಲವು ಅಂಧವೂ ಜಡವೂ ಆಗಿರುವುದರಿಂದ ಬುದ್ಧಿವಂತರು ಅದಕ್ಕೆ ಹಾದಿಯನ್ನು ತೋರಿಸಿಕೊಡಬೇಕು–ಎಂದು ಯುಧಿಷ್ಠಿರನೇ ಒಮ್ಮೆ ಶ್ರೀಕೃಷ್ಣನಿಗೆ ಹೇಳುತ್ತಾನೆ.

ಅದಕ್ಕೆ ಉತ್ತರವಾಗಿ ಶ್ರೀಕೃಷ್ಣನೂ ಸಹ **ಮಯಿ ನೀತಿಃ ಬಲಂ ಭೀಮೇ**–ಎಂದು ಹೇಳಿ ಜರಾಸಂಧನ ವಧೆಗೆ ಅವನನ್ನು ಕರೆದುಕೊಂಡು ಹೋಗಿ ಯುಕ್ತಿಯಿಂದಲೇ ಜರಾಸಂಧನ ವಧೆಯನ್ನು ಭೀಮಸೇನನಿಂದ ಮಾಡಿಸುತ್ತಾನೆ. ಆದುದರಿಂದ ಯುಕ್ತಿಗಳಿಗೆ ಈಶ್ವರ ಶ್ರೀಕೃಷ್ಣ–ಎಂಬುದೂ ಲೋಕಪ್ರಸಿದ್ಧವಾಗಿದೆ. ಕೃಷ್ಣನ ಯುಕ್ತಿಯೇ ಪಾಂಡವರ ಗೆಲುವಿಗೆ ಮೂಲ ಎಂಬುದನ್ನು ನಾವು ಮುಂದೆ ಯುದ್ಧಸಮಯದಲ್ಲಿ ಕಾಣಬಹುದಾಗಿದೆ.

ಭೀಮನಲ್ಲಿ ಬಲವಿರುವಂತೆ ಬಿಲ್ಗಾರಿಕೆಯ ಕೌಶಲದಲ್ಲಿ ಅರ್ಜುನನದು ಎತ್ತಿದ ಕೈ. ಅಂತಹ ನೀತಿಕೌಶಲಪ್ರಭುವೂ ಆದ ಕೃಷ್ಣನೂ, ಬಿಲ್ಗಾರಿಕೆಯಲ್ಲಿ ಕುಶಲತಮನಾದ ಅರ್ಜುನನೂ ಸೇರಿದಾಗ ಧರ್ಮಕ್ಕೆ ಬೇಕಾದ

ಸಂಪತ್ತು , ಧರ್ಮದ ವಿಜಯ, ಅದಕ್ಕೆ ಬೇಕಾದ ಇತರ ಸಂಪದ್ವಿಶೇಷಗಳು ಮತ್ತು ಅವುಗಳಿಗೆ ಮೂಲಭೂತವಾದ ನಿಶ್ಚಲವಾದ ನೀತಿ–ಇವುಗಳ ಯೋಗ ಮತ್ತು ಸಿದ್ಧಿಗಳು ಅವಶ್ಯವಾಗಿ ದೊರೆಯುತ್ತವೆ.)

O O O

ಈ ಕಾರಣಗಳಿಂದ ಪಾಂಡವರ ಪಕ್ಷಕ್ಕೆ ಜಯವೂ ಎಲ್ಲ ಬಗೆಯ ಅಭ್ಯುದಯಗಳೂ ಉಂಟಾಗುತ್ತವೆಯೆಂದು ಸಂಜಯನ ಸುನಿಶ್ಚಿತವಾದ ಅಭಿಪ್ರಾಯ.

ಹೆಚ್ಚು ಹೇಳುವುದೇಕೆ? ಯಾವ ಪಕ್ಷದಲ್ಲಿ ಯೋಗೇಶ್ವರನಾದ ಎಂದರೆ ಎಲ್ಲ ಯೋಗಗಳಿಗೂ ಈಶ್ವರನಾದ (ಎಲ್ಲ ಯೋಗಗಳ ಬೀಜವೂ ಅವ ನಿಂದಲೇ ಉಂಟಾಗುವುದು.) ಶ್ರೀಕೃಷ್ಣನು ಇದ್ದಾನೆಯೋ, ಗಾಂಡೀವಧನುರ್ಧಾರಿಯಾದ ಅರ್ಜುನನು ಎಲ್ಲಿದ್ದಾನೆಯೋ ಆ ಪಕ್ಷಕ್ಕೇ (ಪಾಂಡವರ ಪಕ್ಷಕ್ಕೆ) ವಿಜಯವೂ ಅಲ್ಲಿಯೇ ಸಂಪತ್ತಿನ ವಿಶೇಷವಾದ ಭೂತಿಯೂ ಮತ್ತು ಅವ್ಯಭಿಚಾರಿಣಿಯಾದ ನೀತಿಯೂ ಇರುತ್ತದೆಯೆಂದು ನನ್ನ ಅಭಿಪ್ರಾಯ.

(ಶಂ. ಭಾ.)

ಹೆಚ್ಚಿಗೆ ಹೇಳುವುದೇಕೆ? ಯೋಗಗಳಿಗೆಲ್ಲಾ ಈಶ್ವರನು ಎಂದರೆ ಎಲ್ಲ ಚೇತನಾಚೇತನವಸ್ತುಗಳ ಯಾವ ಯಾವ ಸ್ವಭಾವ–ಯೋಗಗಳುಂಟೋ ಅವುಗಳಿಗೆಲ್ಲಾ ಈಶ್ವರನೂ ತನ್ನಿಂದ ಬೇರೆಯಾದ ಸಮಸ್ತವಸ್ತುಗಳ ಸ್ವರೂಪ-ಸ್ಥಿತಿ-ಪ್ರವೃತ್ತಿ-ಭೇದಗಳನ್ನು ತನ್ನ ಸಂಕಲ್ಪಕ್ಕೆ ಅಧೀನವಾಗಿ ಹೊಂದಿರುವ ವಸುದೇವಪುತ್ರನಾದ ಶ್ರೀಕೃಷ್ಣನೂ ಮತ್ತು ಅವನ ಅಡಿದಾವರೆಗಳನ್ನೇ ಆಶ್ರಯಿಸಿರುವ ಸೋದರತ್ತೆಯ ಮಗನಾದ ಧನುರ್ಧಾರಿಯಾದ ಅರ್ಜುನನೂ ಎಲ್ಲಿ ಇರುವರೋ ಅಲ್ಲಿ ಶ್ರೀ, ವಿಜಯ, ಭೂತಿ ಮತ್ತು ನೀತಿಗಳು ನಿಶ್ಚಲವಾಗಿರುತ್ತವೆ–ಎಂಬುದು ನನ್ನ ಮತಿ. (ರಾ. ಭಾ.)

ಮತಿಃ = ನಿಶ್ಚಯವು. (ಮ. ಟೀಕಾ.)

ಈ ಶ್ಲೋಕಕ್ಕೆ ಸಂತಜ್ಞಾನೇಶ್ವರರ ವ್ಯಾಖ್ಯಾನ ಮತ್ತು ಉಪಸಂಹಾರಗಳು ಹೃದಯಂಗಮವಾಗಿವೆ :

ರಾಜನ ಭಾಷಣವನ್ನು ಕೇಳಿ ಸಂಜಯನು–ಮಹಾರಾಜ! ಬಲಿಷ್ಠರಾರು? ಯಾರ ಸೈನ್ಯವು ಹೆಚ್ಚು ಎಂಬುದನ್ನೇನೂ ನಾನರಿಯೆನು. (ನನಗೆ ತಿಳಿಯುವುದೆಂದರೆ ಒಂದೇ) ಅದೆಂದರೆ ಆಯುಷ್ಯದ ದಾರವು ಗಟ್ಟಿಯಾಗಿದ್ದ

ವನೇ ಜೀವಿಸುವನು. ಚಂದ್ರನಿರುವಲ್ಲಿ ಬೆಳದಿಂಗಳು. ಶಂಕರನಿರುವಲ್ಲಿ ಪಾರ್ವತಿಯು, ಸಂತರಿದ್ದಲ್ಲಿ ಸದ್ವಿಚಾರ–ಇಂತು ಇದ್ದೇ ಇರುವುವು. ರಾಜನಿದ್ದಲ್ಲಿ ಸೈನ್ಯವು, ಪ್ರೇಮವಿರುವಲ್ಲಿ ಸಂಬಂಧವು, ಅಗ್ನಿ ಇರುವಲ್ಲಿ ದಾಹಕತ್ವವು ಇರತಕ್ಕುವುಗಳೇ. ದಯೆಯಿದ್ದಲ್ಲಿ ಧರ್ಮವು, ಧರ್ಮವಿದ್ದಲ್ಲಿ ಸುಖಪ್ರಾಪ್ತಿಯು, ಸುಖಪ್ರಾಪ್ತಿಯಲ್ಲಿಯೇ ಪುರುಷೋತ್ತಮನು ಇರುವನು. ಇನ್ನೂ ಹೇಳುವುದಾದರೆ : ವಸಂತದಲ್ಲಿ ವನಸಿರಿಯು, ವನಸಿರಿಯಲ್ಲಿ ಪುಷ್ಪವು, ಪುಷ್ಪದಲ್ಲಿ ಭ್ರಮರಗಳು ಇರುವುವು. ಸದ್ಗುರುವಿನಲ್ಲಿ ಜ್ಞಾನವು, ಜ್ಞಾನದಲ್ಲಿ ಆತ್ಮದರ್ಶನವು. ಇದೊಂದು ನಿಯಮವು. ಸಿರಿವಂತಿಕೆಯಲ್ಲಿ ಸುಖಭೋಗವು, ಸುಖಭೋಗದಲ್ಲಿ ಉಲ್ಲಾಸವು, ಸೂರ್ಯನಿರುವಲ್ಲಿ ಪ್ರಕಾಶವು ಸಹಜವೇ ಆಗಿದೆ. ಅದರಂತೆ ಶ್ರೀಕೃಷ್ಣನಿರುವಲ್ಲಿ ಲಕ್ಷ್ಮಿಯಾದರೂ ಇರತಕ್ಕವಳೇ! ಆ ಜಗನ್ಮಾತೆ ಲಕ್ಷ್ಮೀದೇವಿಯು ತನ್ನ ಪತಿಯೊಂದಿಗೆ ವಾಸಿಸುವಲ್ಲಿ, ಅಣಿಮಾದಿ ಅಷ್ಟಸಿದ್ಧಿಗಳೂ ದಾಸಿಯರಾಗಿ ಇರಲಾರವೇ? ಶ್ರೀಕೃಷ್ಣನೆಂದರೆ ಮೂರ್ತಿಮಂತ ವಿಜಯನು. ಆತನು ಇರುವ ಪಕ್ಷವೇ ನಿಶ್ಚಯವಾಗಿ ಜಯಶಾಲಿಯಾಗುವುದು. ಅರ್ಜುನನು ಸ್ವತಃ 'ವಿಜಯ'ನೆಂಬ ಹೆಸರಿ ನಿಂದಲೇ ಪ್ರಸಿದ್ಧನಿರುವನು. ವಿಜಯಸ್ವರೂಪನಾದ ಭಗವಾನ್ ಶ್ರೀಕೃಷ್ಣನು ಆತನ ಪಕ್ಷಕ್ಕಿರುವನು. ಭಗವಂತನಿರುವಲ್ಲಿ ವಿಜಯಶ್ರೀಯು ಇದ್ದದ್ದೇ. ಮತ್ತು ವಿಜಯಶ್ರೀಯು ಇರುವಲ್ಲಿ ಯಶಸ್ಸು ಕಟ್ಟಿಟ್ಟಿದ್ದೇ. ಆದುದರಿಂದ ಲಕ್ಷ್ಮೀವಲ್ಲಭನು ವಹಿಸಿರುವ ಪಕ್ಷದಲ್ಲಿಯೇ ಸಕಲಸಿದ್ಧಿಗಳೂ ಸಹಜವಾಗಿಯೇ ಇರುವುವೆಂಬುದನ್ನು ನಾನು ತಿಳಿಯುವೆನು. ಎರಡನೆಯ ಮೂರನೆಯದೇನನ್ನೂ ನಾನು ಅರಿಯೆನು. ಮೋಡವು ಸಮುದ್ರದಿಂದ ಹುಟ್ಟುವುದು. ಆದರೆ ಅದು ಸಮುದ್ರಕ್ಕಿಂತಲೂ ಹೆಚ್ಚು ಉಪಯುಕ್ತವೆನಿಸುವುದು. ಅದರಂತೆ ಇಂದು ಆ ಅರ್ಜುನನ ಮಹಿಮೆಯೇ ಹೆಚ್ಚೆನಿಸುವುದು. ಪರಿಸಗಲ್ಲು ಲೋಹವನ್ನು ಬಂಗಾರವನ್ನಾಗಿ ಮಾಡುವುದೆಂಬಲ್ಲಿ ವಾದವಿಲ್ಲ. ಆದರೆ ಜಗತ್ತಿನ ವ್ಯವಹಾರಕ್ಕೆ ಬಂಗಾರವು ಪೋಷಕವಾಗುವಂತೆ ಪರಿಸಗಲ್ಲು ಆಗದು. ಈ ದೃಷ್ಟಾಂತಗಳಿಂದ ಮೊದ-ಮೊದಲು ಗುರುವಿನ ಮಹತ್ತ್ವವನ್ನು ಕೆಲವರು ಕಡಿಮೆಯಾಗಿ ಭಾವಿಸಬಹುದು. ಆದರೆ ಹಾಗೇನೂ ಇಲ್ಲ. ಏಕೆಂದರೆ : ದೀಪದ ಮುಖಾಂತರವಾಗಿ ಅಗ್ನಿಯೇ ದೊಡ್ಡ ಪ್ರಕಾಶವನ್ನು ಕೊಡುವುದು. (ಆಗ ಜನರು ದೀಪವು

ಪ್ರಕಾಶವೆಂದರೆ ಅಗ್ನಿಗೆ ಹೀನತ್ವವೇನು? ದೀಪದ ಮಹಿಮೆಯು ಅಗ್ನಿಯ ಪ್ರಸಾದ. ಅದರಂತೆ ದೇವನ ಶಕ್ತಿಯ ಪ್ರಸಾದದಿಂದಲೇ ಅರ್ಜುನನು ದೇವನಿಗಿಂತಲೂ ದೊಡ್ಡವನೆನಿಸುವನು. ಅದರಂತೆ ಭಕ್ತರ ಸ್ತುತಿಯಾದರೂ ವಸ್ತುತಃ ದೇವನ ಗೌರವವೇ ಆಗಿದೆ. ಎಲ್ಲ ಗುಣಗಳಲ್ಲಿಯೂ ಮಗನು ತನಗಿಂತಲೂ ಮೇಲುಗೈಯಾಗಿರಬೇಕೆಂಬುದು ತಂದೆಯ ಉತ್ಕಟವಾದ ಬಯಕೆಯಾಗಿರುವುದು. ಅದರಂತೆ ಶಿಷ್ಯನ ಉತ್ಕರ್ಷದಿಂದ ಸದ್ಗುರು ಶ್ರೀಕೃಷ್ಣನನ್ನು ನೋಡುವ ಭಾಗ್ಯವು ಲಭಿಸಿತು. ಮಹಾರಾಜ! ಬಹಳ ಹೇಳುವುದೇನು? ಶ್ರೀಕೃಷ್ಣನ ಕೃಪೆ ಪಡೆದ ಅರ್ಜುನನು ಅಭಿಮಾನವಹಿಸಿದ ಪಕ್ಷವೇ ವಿಜಯಸ್ಥಾನವಾಗಿದೆ. ಇದರಲ್ಲಿ ಸಂದೇಹವಿಲ್ಲ. ಆದುದರಿಂದ ಸಿರಿಯಿರುವಲ್ಲಿ ಸಿರಿವಂತ ಶ್ರೀಪತಿಯು ; ಪಾಂಡುಪುತ್ರನಿರುವಲ್ಲಿಯೇ ಎಲ್ಲ ಜಯವು ಮತ್ತು ಉತ್ಕರ್ಷವಾದರೂ ಅಲ್ಲಿಯೇ. ಶ್ರೀವಲ್ಲಭನಿರುವಲ್ಲಿ ಭಕ್ತಶ್ರೇಷ್ಠ ಅರ್ಜುನನು. ಅಲ್ಲಿಯೇ ಸರ್ವಮಂಗಲಗಳೂ ಸುಖವೂ ಲಾಭವೂ ಇದ್ದೇ ಇರುವುವು. ಹೀಗೆ ಸಂಜಯನು ಕೈಯೆತ್ತಿ ಘೋಷಿಸಿದನು.

ಹೀಗೆ ಅವನು ಭಾರತಕಥೆಯ ಎಲ್ಲ ಸಾರವನ್ನೂ ಒಂದೇ ಶ್ಲೋಕದಲ್ಲಿ ಕ್ರೋಡೀಕರಿಸಿ ಧೃತರಾಷ್ಟ್ರನಿಗೆ ಹೇಳಿದನು. ಅಗ್ನಿಸ್ವರೂಪವು ಎಷ್ಟೆಂಬುದನ್ನು ಹೇಳಲು ಬಾರದಿದ್ದರೂ (ತಿಳಿಯದಿದ್ದರೂ) ಅದು ದೀಪದ ಬತ್ತಿಯ ತುದಿಯಲ್ಲಿ ಸ್ಥಾಪಿತವಾಯಿತೆಂದರೆ, ಸೂರ್ಯಾಸ್ತದಿಂದಾಗುವ ತೊಂದರೆಯನ್ನು ದೂರಮಾಡುವುದು. ಶಬ್ದಬ್ರಹ್ಮವೆಂದೆನಿಸುವ ವೇದಗಳು ಅನಂತವಾಗಿವೆ. ಅವುಗಳ ಸಾರರೂಪವಾಗಿ ಒಂದೂಕಾಲು ಲಕ್ಷಶ್ಲೋಕಗಳು ಭಾರತದಲ್ಲಿ ತರಲ್ಪಟ್ಟಿವೆ ಮತ್ತು ಅವೆಲ್ಲವುಗಳ ಸಾರವು ಈ ಗೀತೆಯ ಏಳುನೂರು ಶ್ಲೋಕಗಳಲ್ಲಿ ಬಂದಿದೆ. ಈ ಏಳುನೂರು ಶ್ಲೋಕಗಳ ಸಾರಭೂತವಾಗಿ ಈ ಕೊನೆಯ ಒಂದೇ ಶ್ಲೋಕವಿದೆ. ಇದು ಸಂಜಯನ ನಿಶ್ಚಿತವಾದ ಉದ್ಗಾರರೂಪವಾಗಿದೆ. ಈ ಒಂದೇ ಶ್ಲೋಕಕ್ಕೆ ಅಂಟಿಕೊಂಡು ಅದನ್ನು ಮನನಮಾಡುವವನು ಎಲ್ಲ ಅವಿದ್ಯಾಜಾತಗಳನ್ನೂ ಜಯಿಸುವನು. ಅದರಂತೆ ಗೀತೆಯೊಳಗಿನ ಪದಗಳು ಏಳುನೂರು ಶ್ಲೋಕಗಳನ್ನು ಧಾರಣಮಾಡಿವೆ. (ಹೊತ್ತುಕೊಂಡಿವೆ.) ಈ ಪದಗಳಿಗೆ ಪದಗಳೆನ್ನಬೇಕೋ ಅಥವಾ ಗೀತಾರೂಪವಾದ ಆಕಾಶದೊಳಗಿನ ಅಮೃತವೃಷ್ಟಿಯೆನ್ನಬೇಕೋ–ತಿಳಿಯದಾಗಿದೆ. ಮಹಾರಾಜ! ಇವು ಆತ್ಮ

ರಾಜನ ಗೀತಾರೂಪದ ಸಭಾಮಂಟಪದ ಏಳುನೂರು ಕಂಬಗಳೆಂದರೂ ಸಲ್ಲುವುದು. ಅಥವಾ ಶ್ಲೋಕರೂಪದ ಏಳುನೂರು ಮಂತ್ರಗಳಿಂದ ಪ್ರತಿ ಪಾದಿಸಿದ ಗೀತೆಯು ದೇವೀ ಭಗವತಿಯೇ ಎನ್ನಬಹುದು ಮತ್ತು ಅವಳು ಮೋಹವೆಂಬ ಮಹಿಷಾಸುರನನ್ನು ವಧಿಸಿ ಆನಂದದಲ್ಲಿರುವಳು. ಆದುದ ರಿಂದ ತ್ರಿಕರಣಪೂರ್ವಕವಾಗಿ ಅವಳ ಸೇವಕನಾದವನನ್ನು ಅವಳು ಸ್ವಾನಂದ ಸಾಮ್ರಾಜ್ಯದ ಚಕ್ರವರ್ತಿಯನ್ನಾಗಿ ಮಾಡುವಳು ಅಥವಾ ಅವಿದ್ಯಾರೂಪದ ಅಂಧಕಾರವನ್ನು ನಾಶಗೊಳಿಸುವಳು. ಗೀತೆಯ ಒಂದೊಂದೇ ಶ್ಲೋಕ ವಾದರೂ ಸೂರ್ಯನೊಡನೆ ಸ್ಪರ್ಧಿಸುವುದು. ಇಂತಹ ಏಳುನೂರು ಶ್ಲೋಕಗಳನ್ನು ದೇವನು ಗೀತೆಯ ನಿಮಿತ್ತದಿಂದ ಪ್ರಕಾಶಗೊಳಿಸಿದನು. ಸಂಸಾರಮಾರ್ಗವನ್ನು ಆಕ್ರಮಿಸುವ ಜೀವಿಗಳು ದಣಿದು ವಿಶ್ರಾಂತಿಯನ್ನು ಬಯಸುವುವು. ಅವುಗಳಿಗೆ ಗೀತೆಯು ಶ್ಲೋಕಾಕ್ಷರಗಳೆಂಬ ದ್ರಾಕ್ಷಿಯ ಬಳ್ಳಿಯ ಮಂಟಪವೇ ಆಗಿದೆ. ಭಾಗ್ಯವಂತರಾದ ಸಾಧು-ಸತ್ಪುರುಷರೆಂಬ ಭ್ರಮರಗಳು ಈ ಗೀತೆಯ ಶ್ಲೋಕರೂಪಕಮಲಗಳ ಮಕರಂದವನ್ನು ಸೂರೆ ಗೊಂಡಿವೆ. ಅಥವಾ ಇವು ಗೀತೆಯ ಅಖಂಡಮಹಿಮೆಯನ್ನು ವರ್ಣಿಸುವ ಭಟ್ಟಂಗಿಗಳಾಗಿವೆ. ಎಲ್ಲ ವೇದ-ಶಾಸ್ತ್ರಗಳೂ ತಮ್ಮ ರಕ್ಷಣೆಗಾಗಿ ಏಳುನೂರು ಶ್ಲೋಕಗಳಿಂದ ಕೋಟೆಯನ್ನು ಕಟ್ಟಿ, ಈ ಗೀತಾನಗರದಲ್ಲಿ ವಾಸಮಾಡಲು ಬಂದಿರುವುವು. ಆತ್ಮನೆಂಬ ಕಾಂತನಿಗೆ ಗೀತೆಯು ಕಾಂತಾರೂಪಳಾಗಿರು ವಳು. ಅವಳು ಒಳ್ಳೆಯ ಪ್ರೇಮದಿಂದ ಕಾಂತನನ್ನು ಆಲಿಂಗಿಸಲು ಈ ಏಳು ನೂರು ಶ್ಲೋಕರೂಪದ ಕೈಗಳನ್ನು ಚಾಚಿಕೊಂಡು ಬಂದಿರುವಳು ಅಥವಾ ಶ್ರೀಹರಿಯ ಗೀತೆಯೆಂಬ ರಥಕ್ಕೆ ಈ ಶ್ಲೋಕಗಳು ಕುದುರೆಗಳಾಗಿವೆ ಯೆಂದೂ ಕಲ್ಪಿಸಬಹುದು. ಅಥವಾ ಇವು ಶ್ಲೋಕಪಙ್ಕ್ತೀಗಳಾಗಿರದೇ– ಚಿತ್ತಕ್ಕೆ ಅಚಿಂತ್ಯವಸ್ತುವನ್ನು ದೊರಕಿಸಿಕೊಡುವ ಚಿಂತಾಮಣಿಗಳೇ ಆಗಿರು ವುವು. ಇಲ್ಲವೇ ನಿರ್ವಿಕಲ್ಪಬ್ರಹ್ಮಪ್ರಾಪ್ತಿಯನ್ನು ಮಾಡಿಕೊಡುವ ಕಲ್ಪತರು ಗಳೇ ಆಗಿವೆ. ಹೀಗೆ ಒಂದರಿಂದಿನ್ನೊಂದು ಹೆಚ್ಚು ಮನೋಹರವಾದ ಏಳುನೂರು ಶ್ಲೋಕಗಳು ಈ ಗೀತೆಯಲ್ಲಿವೆ. ಇವುಗಳಲ್ಲಿ ಯಾವ ಶ್ಲೋಕ ವನ್ನೂ ಮುಂದೆಮಾಡಿ ಬಣ್ಣಿಸಲು ಶಕ್ಯವಿಲ್ಲ. ಕಾಮಧೇನುವೆಂದು ಹೇಳಿದ ಮೇಲೆ ಅದು ಹಿಂಡುವುದೋ–ಬರಡೋ ಎಂಬ ದೃಷ್ಟಿಯನ್ನಿಟ್ಟು ಯಾರೂ ಅದರ ಬಗೆಗೆ ಮಾತಾಡಲರಿಯರು. ದೀಪವು ಮೊದಲಿನದಾವುದು?

ಅನಂತರದ್ದು ಯಾವುದು? ಸೂರ್ಯನು ಕಿರಿಯನೋ? ಹಿರಿಯನೋ? ಅಮೃತಸಮುದ್ರವು ಆಳವಾಗಿದೆಯೋ ಇಲ್ಲವೋ–ಎಂಬ ಚಿಂತನೆಯಿಂದ ಪ್ರಯೋಜನವೇನು? ಅದರಂತೆ ಇದು ಮೊದಲಿನದು (ಉತ್ತಮವು), ಇದು ಕೊನೆಯದು (ಸಾಮಾನ್ಯವು) ಎಂದು ಗೀತೆಯ ಶ್ಲೋಕಗಳಲ್ಲಿ ಶ್ರೇಷ್ಠಾ ಶ್ರೇಷ್ಠತೆಯನ್ನು ಅಳೆಯುವುದು ಶಕ್ಯವಿಲ್ಲ. ಸ್ವರ್ಗತರುಪಾರಿಜಾತದ ಹೂವು ಗಳಲ್ಲಿ ಹೊಸ-ಹಳೆಯದೆಂಬ ಭೇದವುಂಟೇ? ಗೀತೆಯ ಶ್ಲೋಕಗಳಲ್ಲಿ ನ್ಯೂನಾಧಿಕಭಾವವಿಲ್ಲವೆಂಬುದನ್ನು ಸಿದ್ಧಮಾಡಬೇಕೇ? ಅಲ್ಲದೇ ಅವು ಗಳಲ್ಲಿ ವಾಚ್ಯ-ವಾಚಕಗಳೆಂಬ ಭೇದಭಾವವನ್ನು ಹೇಳುವುದಕ್ಕೂ ಅವಸರ ವಿಲ್ಲ. ಏಕೆಂದರೆ : ಈ ಶಾಸ್ತ್ರದಲ್ಲಿ ಶ್ರೀಕೃಷ್ಣನೇ ವಾಚ್ಯನು ಮತ್ತು ಅವನೇ ವಾಚಕನು ಎಂಬುದನ್ನು ಸಾಮಾನ್ಯರೂ ಸಹ ಅರಿಯುವರು. ಗೀತೆಯ ಅರ್ಥದಿಂದ ಉಂಟಾಗುವ ಫಲವೇ ಅದರ ಪಾಠದಿಂದ ದೊರಕುವುದು. ಈ ಫಲದ ಒಂದೇ ಅಳತೆಯಿಂದಾದರೂ ವಾಚ್ಯ-ವಾಚಕಗಳ ಐಕ್ಯವನ್ನು ಗೀತಾಶಾಸ್ತ್ರವೇ ಸಿದ್ಧಮಾಡಿದೆ. ಆದುದರಿಂದ ಈಗ ನಾನು ಸಿದ್ಧಮಾಡುವ ಕಾರಣವಿಲ್ಲ. ಈ ಗೀತೆಯೆಂದರೆ ಎರಡನೆಯದೇನೂ ಆಗಿರದೇ ಪ್ರಭುವಿನ ವಾಙ್ಮಯಮೂರ್ತಿಯೆಂದು ನಿಶ್ಚಿತವಾಗಿ ತಿಳಿ. ಯಾವುದೇ ಶಾಸ್ತ್ರವಾಗಲೀ ಮೊದಲು ವಾಚ್ಯಪದ, ಅನಂತರ ಅದರ ಅರ್ಥ. ಈ ಗೀತಾಶಾಸ್ತ್ರವು ಹಾಗಲ್ಲ. ಇದು ಎಲ್ಲವೂ ಪರಬ್ರಹ್ಮಸ್ವರೂಪವೇ ಆಗಿದೆ. ಪ್ರಭುವಿನ ವಿಶ್ವದಯಾಳುತ್ವವನ್ನು ಏನು ಹೇಳುವುದು? ಅರ್ಜುನನ ನಿಮಿತ್ತದಿಂದ ಜನರಿಗೆ ಮಹಾನಂದ (ಬ್ರಹ್ಮಾನಂದ) ವು ಸಹಜವಾಗಿ ದೊರಕಬೇಕೆಂದು ಆ ನಿರ್ಗುಣನನ್ನು ಗೀತೆಯ ರೂಪದಿಂದ ಹೊರಕ್ಕೆ ತಂದಿದೆ. ಪೂರ್ಣಕಲಾಯುಕ್ತನಾದ ಚಂದ್ರನು ಚಕೋರದ ನಿಮಿತ್ತದಿಂದ ಸಂತಪ್ತಗೊಂಡ ಮೂರು ಲೋಕಗಳನ್ನೂ ಶಾಂತಗೊಳಿಸುವನು. ಶಂಕರನು ಭಗೀರಥನ ನಿಮಿತ್ತದಿಂದ ಕಲಿಕಾಲದೋಷಜ್ವರಯುಕ್ತಜೀವಿಗಳ ಉದ್ಧಾರಾರ್ಥವಾಗಿ ತನ್ನ ಜಡೆಯಿಂದ ಗಂಗೆಯನ್ನು ಮರ್ತ್ಯಲೋಕಕ್ಕೆ ಬಿಟ್ಟನು. ಅದರಂತೆ ಶ್ರೀಕೃಷ್ಣನೆಂಬ ಆಕಳು ತನ್ನ ಕರುವಾದ ಅರ್ಜುನನಿ ಗಾಗಿ ಜಗತ್ತಿಗೆ ಸಾಕಾಗಿ ಉಳಿಯುವಂತೆ ಈ ಗೀತಾರೂಪದ ಹಾಲಿನ ಧಾರೆಯನ್ನು ಬಿಟ್ಟಿತು. ನರನೇ! ಈ ಗ್ರಂಥದಲ್ಲಿ ಜೀವಭಾವದಿಂದ ಮಗ್ನನಾದರೆ ತದ್ರೂಪನೇ ಆಗುವೆ. ಇಲ್ಲವೇ ಪಠನದ ನಿಮಿತ್ತದಿಂದ ಬರೀ

ನಾಲಿಗೆಗೆ ದಣಿವನ್ನುಂಟುಮಾಡಿದರೂ ಚಿಂತೆಯಿಲ್ಲ. ಕಬ್ಬಿಣವು ಒಂದು ಬದಿಯಿಂದ ಪರಿಸಗಲ್ಲಿಗೆ ತಗುಲಲು ಅದು ಸರ್ವಾಂಗದಿಂದ ಸುವರ್ಣವೇ ಆಗುವುದು. ಅದರಂತೆ ಶ್ಲೋಕಗಳ ಪಠನವೆಂಬ ಬಟ್ಟಲನ್ನು ತುಟಿಗೆ ಹಚ್ಚು ವಷ್ಟರಲ್ಲಿಯೇ ಅಂಗಕ್ಕೆ ಬ್ರಹ್ಮತೆಯ ಪುಷ್ಟಿಯುಂಟಾಗುವುದು. ಇಲ್ಲವೇ ಪಠನಮಾಡಬಾರದೆಂಬ ಉದ್ದೇಶದಿಂದ ಬಾಯನ್ನು ಗಟ್ಟಿಯಾಗಿ ಮುಚ್ಚಿ ಕೊಂಡು ಮಗ್ಗುಲಾಗಿ ಬಿದ್ದುಕೊಂಡರೂ ಕೂಡ ಗೀತೆಯ ಅಕ್ಷರಗಳು ಕಿವಿಗೆ ಅಪ್ಪಳಿಸಲು ಅಷ್ಟರಿಂದಲೇ ಪಠನದ ಫಲವು ದೊರೆಯುವುದು. ಸಮರ್ಥ ನಾದ ದಾನಶೂರನು ತನ್ನನ್ನು ಬೇಡಬಂದವರನ್ನು ಎಂದೂ ಬರಿಗೈಯಿಂದ ಕಳಿಸಲಾರನು. ಅದರಂತೆ ಗೀತೆಯ ಶ್ರವಣವು ಒದಗಲಿ, ಪಠನವು ಒದಗಲಿ, ಅಥವಾ ಅರ್ಥವ್ಯುತ್ಪತ್ತಿಯಾಗಲಿ–ಇವೆಲ್ಲವೂ ಮೋಕ್ಷಕ್ಕಿಂತಲೂ ಕಡಿಮೆ ಫಲ ವನ್ನು ಕೊಡುವುದು ಗೀತೆಗೆ ಗೊತ್ತೇ ಇಲ್ಲ. ಆದುದರಿಂದ ತಿಳಿದವರಾಗಲೀ, ತಿಳಿಯದವರಾಗಲೀ-ಎಲ್ಲರೂ ಗೀತೆಯ ಸೇವೆಯನ್ನು ಮಾಡಬೇಕು. ಉಳಿದ ಶಾಸ್ತ್ರಗಳನ್ನು ತೆಗೆದುಕೊಂಡು ಮಾಡುವುದೇನು? ಕೃಷ್ಣಾರ್ಜುನರು ಬಿಚ್ಚು ಮನದಿಂದ ಸ್ವೈರಸಂಗತಿಗಳನ್ನು ಸಂವಾದಿಸಿದರು. ಅವನ್ನು ಕರತಲಗತ ವಾಗುವ ಹಾಗೆ ವ್ಯಾಸಮಹರ್ಷಿಗಳು ಸುಲಭಗೊಳಿಸಿರುವರು. ತಾಯಿಯು ಪ್ರೇಮದಿಂದ ಮಗನಿಗೆ ಉಣಬಡಿಸುವಾಗ ಅವನಿಗೆ ತಕ್ಕಂತಹ ತುತ್ತುಗಳನ್ನೇ ಮಾಡುವಳು. ಅದರಂತೆ ವಿಸ್ತೃತ ಮತ್ತು ಬಿಡಿಶಬ್ದಗಳಿಂದ ಬೋಧೆಯಾಗು ವುದು ಕಠಿನವು. ಅಂತಹುದನ್ನು ಸ್ತ್ರೀ-ಶೂದ್ರಾದಿಗಳ ಬುದ್ಧಿಯಲ್ಲಿ ನೆಡುವ ಹಾಗೆ ಶ್ರೀ ವ್ಯಾಸರು ಬಿಡಿ-ಬಿಡಿಯಾದ ಅನುಷ್ಟುಪ್ ಛಂದದಲ್ಲಿ ಈ ಗೀತೆಯ ಶಬ್ದಗಳನ್ನು ರಚಿಸಿರುವರು. ಸ್ವಾತೀಮಳೆಯ ಹನಿಯು ಒಂದು ವೇಳೆ ಮುತ್ತಿನ ಆಕಾರಕ್ಕೆ ಬಾರದಿದ್ದರೆ–ಅದಕ್ಕೆ ಸುಂದರಸ್ತ್ರೀಯರ ಅಂಗಕಾಂತಿಯ ಶೋಭೆಯು ಹೇಗೆ ದೊರಕುತ್ತಿತ್ತು? ಧ್ವನಿ (ನಾದವು) ಯು ವಾದ್ಯಗಳನ್ನು ಆಶ್ರಯಿಸದೇ ಹೋಗಿದ್ದರೆ–ಶ್ರವಣಪ್ರತ್ಯಕ್ಷತೆಯು ಅದಕ್ಕೆ ಹೇಗೆ ಬರು ತ್ತಿತ್ತು? ಆಮೋದ (ಸುಗಂಧ) ವು ಹೂವಿನ ರೂಪವನ್ನು ಧರಿಸದೇ ಇದ್ದಿದ್ದರೆ–ಅದರ ವ್ಯಕ್ತಿಗತಭೋಗವು ಹೇಗೆ ಒದಗುವುದು? ಸಿಹಿಯು ಪಕ್ವಾನ್ನದ ರೂಪದಿಂದ ಅವತರಿಸದಿದ್ದರೆ–ನಾಲಿಗೆಗೆ ಅದರ ಭೋಗವು ಅದೆಂತು ಪ್ರಾಪ್ತವಾಗುತ್ತಿತ್ತು? ಅಥವಾ ಕನ್ನಡಿಯ ಹೊರತು ನಮ್ಮ ಕಣ್ಣಿಗೆ

ಕಣ್ಣುಗಳು ಅದೆಂತು ಕಾಣುತ್ತಿದ್ದುವು? ಬ್ರಹ್ಮವು (ದ್ರಷ್ಟಾ) ಶ್ರೀಗುರು ಸ್ವರೂಪದಿಂದ ಆಕಾರಕ್ಕೆ ಬಾರದೇ ಇದ್ದಿದ್ದರೆ–ಆತನ ಉಪಾಸನೆಯನ್ನು ಹೇಗೆ ಮಾಡಬಹುದಾಗಿತ್ತು? ಅದರಂತೆ ಅಗಣಿತವಾದ ಬ್ರಹ್ಮವಸ್ತುವು ಏಳು ನೂರು ಶ್ಲೋಕರೂಪ (ಗೀತಾರೂಪ) ದಿಂದ ಪ್ರಕಟವಾಗದಿದ್ದರೆ–ಜಗತ್ತಿನ ಜನರಿಗೆ ಅದರ ಪ್ರಾಪ್ತಿಯು ಎಂತಾಗುತ್ತಿತ್ತು? ಮೋಡದ ನೀರು ಸಮುದ್ರದ್ದೇ ಆಗಿದೆ. ಆದರೆ ಜಗತ್ತಿನ ದೃಷ್ಟಿಯು (ಆಶೆಯು) ಮೋಡದ ಕಡೆಗೇ ಇರುವುದು. ಏಕೆಂದರೆ : ಅಮರ್ಯಾದಿತವಾದುದು (ಸಮುದ್ರ ಸ್ವರೂಪವು) ಯಾರಿಗೂ ವ್ಯವಹಾರೋಪಯೋಗಿಯಾಗಿರುವುದಿಲ್ಲ. ಬ್ರಹ್ಮವಸ್ತುವು ವಾಣಿಗೆ ನಿಲುಕದ್ದು. ಅದು ಈ ಶ್ಲೋಕರೂಪವನ್ನು ತಾಳದಿದ್ದಲ್ಲಿ ಶ್ರವಣ-ವಾಣಿಗಳಿಗೆ ಅದರ ಭೋಗವು ಅದೆಂತು ದೊರಕುತ್ತಿತ್ತು?– ಆದುದರಿಂದ ಕೃಷ್ಣಾರ್ಜುನಸಂವಾದಕ್ಕೆ ಗೀತಾಗ್ರಂಥದ ರೂಪವನ್ನು ಕೊಟ್ಟು, ವ್ಯಾಸರು ಜಗತ್ತಿಗೆ ದೊಡ್ಡ ಉಪಕಾರವನ್ನು ಮಾಡಿರುವರು.

ಇತಿ ಶ್ರೀಮನ್ಮಹಾಭಾರತೇ ಭೀಷ್ಮಪರ್ವಣಿ ಶ್ರೀಮದ್ಭಗವದ್ಗೀತಾ
ಪರ್ವಣಿ ಶ್ರೀಮದ್ಭಗವದ್ಗೀತಾಸೂಪನಿಷತ್ಸು ಬ್ರಹ್ಮವಿದ್ಯಾಯಾಂ
ಯೋಗಶಾಸ್ತ್ರೇ ಶ್ರೀಕೃಷ್ಣಾರ್ಜುನಸಂವಾದೇ ಮೋಕ್ಷಸಂನ್ಯಾಸ
ಯೋಗೋ ನಾಮ ಅಷ್ಟಾದಶೋಽಧ್ಯಾಯಃ

ಭಗವದ್ಗೀತೆಯಲ್ಲಿ ೧೮ನೆಯ ಅಧ್ಯಾಯವು ಮುಗಿಯಿತು.

ಭೀಷ್ಮಪರ್ವದಲ್ಲಿ ೪೨ನೆಯ ಅಧ್ಯಾಯವು ಮುಗಿಯಿತು.



೪೩ನೆಯ ಅಧ್ಯಾಯ ಭೀಷ್ಮವಧಪರ್ವ (ಮುಂದುವರಿದಿದೆ.)

## ಗೀತೆಯ ಮಹಿಮೆ : ಯುಧಿಷ್ಠಿರನು ಭೀಷ್ಮ, ದ್ರೋಣ, ಕೃಪ ಮತ್ತು ಶಲ್ಯರ ಅನುಮತಿಯನ್ನು ಪಡೆದು ಯುದ್ಧಕ್ಕೆ ಸಿದ್ಧನಾದುದು

ವೈಶಂಪಾಯನರು ಜನಮೇಜಯನಿಗೆ ಹೇಳುತ್ತಾರೆ :

ಜನಮೇಜಯ! ಭಗವಂತನ ದಿವ್ಯವಾಣಿಯನ್ನು ಯಥಾವತ್ತಾಗಿ ಕೇಳಿದೆಯಲ್ಲವೇ? ನಿಶ್ಚಯವಾಗಿಯೂ ಗೀತೆಯ ಮಾಹಾತ್ಮ್ಯವು ಅಪಾರ ವಾದುದು. ನನ್ನ ಅಭಿಪ್ರಾಯದಲ್ಲಿ :

**ಗೀತಾ ಸುಗೀತಾ ಕರ್ತವ್ಯಾ ಕಿಮನ್ಯೈಃ ಶಾಸ್ತ್ರಸಂಗ್ರಹೈಃ ।**
**ಯಾ ಸ್ವಯಂ ಪದ್ಮನಾಭಸ್ಯ ಮುಖಪದ್ಮಾದ್ವಿನಿಃಸೃತಾ ॥೧॥**

ಗೀತೆಯನ್ನು ಸುಗೀತವನ್ನಾಗಿ ಮಾಡಬೇಕು. ಸುಗೀತವೆಂದರೆ ಅದನ್ನು ಕೇಳಬೇಕು. ಪಠನಮಾಡಬೇಕು. ಅದನ್ನು ಸುಮನೋಹರವಾಗಿ ಹಾಡ ಬೇಕು. ಅದರ ಅರ್ಥವನ್ನು ಮನನಮಾಡಬೇಕು ಮತ್ತು ಅದರಲ್ಲಿ ಹೇಳಿರು ವಂತೆ ನಡೆಯಬೇಕು. ಆಗ ಗೀತೆಯನ್ನು ಸುಗೀತವನ್ನಾಗಿ ಮಾಡಿದಂತಾಗು ತ್ತದೆ. ಜೀವನದಲ್ಲಿ ಗೀತೆಯೊಂದನ್ನೇ ಈ ರೀತಿಯಲ್ಲಿ ಪಠನ-ಪಾಠನ, ಮನನ, ಧಾರಣ ಇವುಗಳನ್ನು ಮಾಡತೊಡಗಿದರೆ ಇತರಶಾಸ್ತ್ರಗಳನ್ನು ಸಂಗ್ರಹಿಸಿಟ್ಟುಕೊಳ್ಳಬೇಕಾಗಿಯೇ ಇಲ್ಲ. ಇತರ ಅನೇಕ ಶಾಸ್ತ್ರಗಳಿಂದ ಯಾವ ಪ್ರಯೋಜನವಾಗುವುದೋ ಆ ಪ್ರಯೋಜನವು ಗೀತೆಯೊಂದರಿಂದಲೇ ಆಗುತ್ತದೆ. ಇದರ ಮತ್ತೊಂದು ಮಹತ್ತ್ವವೇನೆಂದರೆ : ಪದ್ಮವನ್ನೇ ನಾಭಿಯಲ್ಲಿ ಹೊಂದಿರುವ ಶ್ರೀಮನ್ನಾರಾಯಣನ ಮುಖಪದ್ಮದಿಂದಲೇ ಇದು ಹೊರಟಿದೆ. (ಅವನ ಪಾದಕಮಲದಿಂದ ಹೊರಟ ಗಂಗೆಯು ಮೂರು ಲೋಕಗಳನ್ನೂ ಪಾವನಮಾಡುವ ಸಾಮರ್ಥ್ಯವನ್ನು ಹೊಂದಿರುವಾಗ ಅವನ ಮುಖಪದ್ಮದಿಂದಲೇ ಹೊರಟಿರುವ ಈ ಗೀತಾನದಿಯು ವಿಶ್ವವನ್ನೇ ಪಾವನವನ್ನಾಗಿ ಮಾಡುವುದೆಂಬುದರಲ್ಲಿ ಸಂಶಯವೇ ಇಲ್ಲ.) ಬೇರೆ ಶಾಸ್ತ್ರ ಗಳು ಬೇಕಿಲ್ಲವೆಂದು ನಾನು ಏಕೆ ಹೇಳಿದೆನೆಂದರೆ :

**ಸರ್ವಶಾಸ್ತ್ರಮಯೀ ಗೀತಾ ಸರ್ವದೇವಮಯೋ ಹರಿಃ ।**
**ಸರ್ವತೀರ್ಥಮಯೀ ಗಙ್ಗಾ ಸರ್ವವೇದಮಯೋ ಮನುಃ ॥೨॥**

ಹರಿಯು ಸರ್ವದೇವತೆಗಳ ಏಕಸ್ವರೂಪನಾಗಿರುವಂತೆ–ಗಂಗಾ ನದಿಯು ಸರ್ವತೀರ್ಥಗಳ ಏಕರೂಪಳಾಗಿರುವಂತೆ–ಗಾಯತ್ರೀ ಮಂತ್ರವು ಸರ್ವವೇದಗಳ ಏಕಸ್ವರೂಪವಾಗಿರುವಂತೆ–ಗೀತೆಯು ಸರ್ವಶಾಸ್ತ್ರಗಳ ಏಕ ಸ್ವರೂಪವಾಗಿದೆ.

**ಗೀತಾ ಗಙ್ಗಾ ಚ ಗಾಯತ್ರೀ ಗೋವಿನ್ದೇತಿ ಹೃದಿ ಸ್ಥಿತೇ ।**
**ಚತುರ್ಗಕಾರಸಂಯುಕ್ತೇ ಪುನರ್ಜನ್ಮ ನ ವಿದ್ಯತೇ ॥೩॥**

ಗೀತಾ, ಗಂಗಾ, ಗಾಯತ್ರೀ ಮತ್ತು ಗೋವಿಂದ ಎಂಬ ಗಕಾರಪೂರ್ವವಾದ ಈ ನಾಲ್ಕು ಪವಿತ್ರನಾಮಗಳು ಹೃದಯದಲ್ಲಿ ನೆಲೆಸಿದ್ದೇ ಆದರೆ ಈ ನಾಲ್ಕು ಪವಿತ್ರನಾಮಗಳು ಸದಾಕಾಲದಲ್ಲಿಯೂ ಸ್ಮರಣೆಯಲ್ಲಿರುವುದೇ ಆದರೆ–ಅಂತಹವನಿಗೆ ಪುನರ್ಜನ್ಮವಿರುವುದಿಲ್ಲ. ಅವನು ಮುಕ್ತನಾಗಿ ಬಿಡುತ್ತಾನೆ.

**ಷಟ್‌ಶತಾನಿ ಸವಿಂಶಾನಿ ಶ್ಲೋಕಾನಾಂ ಪ್ರಾಹ ಕೇಶವಃ ।**
**ಅರ್ಜುನಃ ಸಪ್ತಪಞ್ಚಾಶತ್ಸಪ್ತಷಷ್ಟಿಂ ತು ಸಂಜಯಃ ॥೪॥**
**ಧೃತರಾಷ್ಟ್ರಃ ಶ್ಲೋಕಮೇಕಂ ಗೀತಾಯಾ ಮಾನಮುಚ್ಯತೇ ।**

ಭಗವದ್ಗೀತಾಪರ್ವದ ಕಡೆಯ ಹದಿನೆಂಟು ಅಧ್ಯಾಯಗಳ ಸಮುಚ್ಚಯಕ್ಕೆ 'ಭಗವದ್ಗೀತೆ' ಎಂದು ಹೆಸರು. ಈ ಭಗವದ್ಗೀತೆಯಲ್ಲಿ ಶ್ರೀಕೃಷ್ಣನು ೬೨೦ ಶ್ಲೋಕಗಳನ್ನು ಹೇಳಿರುತ್ತಾನೆ. ಅರ್ಜುನನು ೫೭ ಶ್ಲೋಕಗಳನ್ನೂ, ಸಂಜಯನು ೬೭ ಶ್ಲೋಕಗಳನ್ನೂ, ಧೃತರಾಷ್ಟ್ರನು ಒಂದು ಶ್ಲೋಕವನ್ನೂ ಹೀಗೆ ಒಟ್ಟು ೭೪೫ ಶ್ಲೋಕಗಳನ್ನು ಈ ನಾಲ್ವರೂ ಹೇಳಿದ್ದಾರೆ. ಇದು ಗೀತೆಯ ಸಂಖ್ಯಾಪರಿಮಾಣವಾಗಿದೆ. (ಆದರೆ ಈ ಅಧ್ಯಾಯಗಳಲ್ಲಿರುವ ಶ್ಲೋಕಗಳ ಒಟ್ಟು ಸಂಖ್ಯೆ ೭೦೦ ಮಾತ್ರ. ಧೃತರಾಷ್ಟ್ರ ೧, ಸಂಜಯ ೪೧, ಅರ್ಜುನ ೮೪ ಮತ್ತು ಶ್ರೀಕೃಷ್ಣ ೫೭೪-ಒಟ್ಟು ೭೦೦ ಶ್ಲೋಕಗಳು. ಎಲ್ಲ ಆಚಾರ್ಯರೂ ಸಹ ವ್ಯಾಖ್ಯಾನಮಾಡಿರುವುದು ಈ ೭೦೦ ಶ್ಲೋಕಗಳಿಗೆ ಮಾತ್ರ. ಆದರೆ ಇತ್ತೀಚೆಗೆ ೭೪೫ ಶ್ಲೋಕಗಳಿರುವ ಪುಸ್ತಕಗಳೂ ಉಪಲಬ್ಧವಾಗಿವೆ. ಆದರೆ ಅವುಗಳು ಅಧಿಕೃತವಾದುವುಗಳೇ, ಅನಧಿಕೃತವಾದುವುಗಳೇ

ಎಂಬ ಬಗೆಗೆ ಅನೇಕರಿಗೆ ಸಂದೇಹವಿದೆ. ಆ ಶ್ಲೋಕಗಳ ವಿಷಯವಾಗಿ ಪರಿಶಿಷ್ಟದಲ್ಲಿ ಪ್ರಸ್ತಾಪಿಸಲಾಗಿದೆ.)

ವೈಶಂಪಾಯನರು ಮುಂದುವರಿದು ಹೇಳುತ್ತಾರೆ :

**ಭಾರತಾಮೃತಸರ್ವಸ್ವಗೀತಾಯಾ ಮಥಿತಸ್ಯ ಚ ।**
**ಸಾರಮುದ್ಧೃತ್ಯ ಕೃಷ್ಣೇನ ಅರ್ಜುನಸ್ಯ ಮುಖೇ ಹುತಮ್ ॥೫॥**

ಭಾರತವೆಂಬುದೇ ಗೀತಾಮೃತಸರ್ವಸ್ವ. ಅದನ್ನು ಕಡೆದು ಅದರ ಸಾರರೂಪವಾದ ಬೆಣ್ಣೆಯನ್ನು ತೆಗೆದು ಶ್ರೀಕೃಷ್ಣನು ಅರ್ಜುನನ ಮುಖದಲ್ಲಿಟ್ಟನು. (ಬಾಯಿಗಿಟ್ಟನು.)

ಜನಮೇಜಯ! ಅನಂತರ ಸಂಜಯನು ಧೃತರಾಷ್ಟ್ರನಿಗೆ ಯುದ್ಧದ ವರದಿಯನ್ನೊಪ್ಪಿಸತೊಡಗಿದನು : "ಮಹಾರಾಜ! ಗಾಂಡೀವಧನುಸ್ಸನ್ನೂ, ಬಾಣಗಳನ್ನೂ ಮತ್ತೆ ಧರಿಸಿದ ಧನಂಜಯನನ್ನು ನೋಡಿ ಮಹಾರಥರು ಪುನಃ ಗಟ್ಟಿಯಾಗಿ ರಣಘೋಷಣೆಗಳನ್ನು ಮಾಡಿದರು. ಪಾಂಡವರು, ಸೋಮಕರು ಮತ್ತು ಶೂರರಾದ ಅವರ ಅನುಯಾಯಿಗಳೂ ಎಲ್ಲರೂ ಅರ್ಜುನನನ್ನು ನೋಡಿ ಸಂತೋಷಭರಿತರಾಗಿ ಸಮುದ್ರಸಂಭವಗಳಾದ ಶಂಖಗಳನ್ನು ಗಟ್ಟಿಯಾಗಿ ಊದಿದರು.

ಅನಂತರ ಭೇರಿಗಳನ್ನೂ, ಪೇಶಿಗಳನ್ನೂ, ಕ್ರಕಚಗಳನ್ನೂ, ಕೊಂಬುಗಳನ್ನೂ (ಕೊಂಬು-ಕಹಳೆ-ತಮಟೆ ಮುಂತಾದುವುಗಳನ್ನು) ಒಡನೆಯೇ ಬಾರಿಸಿದರು. ಅದರಿಂದ ದೊಡ್ಡದೊಂದು ಶಬ್ದವೇ ಆಯಿತು.

ಮಹಾರಾಜ! ಗಂಧರ್ವರೊಡನೆ ದೇವತೆಗಳೂ, ಪಿತೃದೇವತೆಗಳೂ, ಸಿದ್ಧ-ಚಾರಣಸಂಘಗಳೂ ಆ ಮಹಾಯುದ್ಧವನ್ನು ನೋಡುವ ಸಲುವಾಗಿ ಅಲ್ಲಿಗೆ ಆಗಮಿಸಿದರು. ಮಹಾಭಾಗರಾದ ಋಷಿಗಳು ದೇವೇಂದ್ರನನ್ನು ಮುಂದಿಟ್ಟುಕೊಂಡು ಆ ಘೋರವಾದ ಯುದ್ಧವನ್ನು ನೋಡುವ ಸಲುವಾಗಿ ಅಲ್ಲಿಗೆ ಬಂದು ಸೇರಿದರು.

ಮಹಾರಾಜ! ಆ ಸಮಯದಲ್ಲಿ ಒಂದು ವಿಚಿತ್ರವು ನಡೆಯಿತು.

ಸಮುದ್ರದಂತೆ ಕಾಣುತ್ತಿದ್ದ ಯುದ್ಧಸನ್ನದ್ಧವಾಗಿದ್ದ ಕೌರವ-ಪಾಂಡವರ ಆ ಎರಡು ಸೈನ್ಯಗಳೂ ಯುದ್ಧವನ್ನಾರಂಭಿಸಲು ವೇಗವಾಗಿ ಮುಂದೆ ಹೋಗುತ್ತಿರುವುದನ್ನು ಪಾಂಡವಾಗ್ರಜನಾದ ಯುಧಿಷ್ಠಿರನು ನೋಡಿದನು. ಮರುಕ್ಷಣದಲ್ಲಿಯೇ ಯುದ್ಧಕ್ಕಾಗಿಯೇ ಧರಿಸಿದ್ದ ಕವಚವನ್ನು ಬಿಚ್ಚಿಬಿಟ್ಟನು. ಧರಿಸಿದ್ದ ಧನುಸ್ಸೇ ಮೊದಲಾದ ವರಾಯುಧಗಳನ್ನೂ ಸಹ ತೆಗೆದು ಅವುಗಳನ್ನು ರಥದ ಮೇಲೆಯೇ ಇರಿಸಿ ರಥದಿಂದಿಳಿದು ಬದ್ಧಾಂಜಲಿಯಾಗಿ ಕಾಲ್ನಡಿಗೆಯಲ್ಲಿಯೇ ಪಿತಾಮಹನಾದ ಭೀಷ್ಮನನ್ನೇ ಅಭಿಲಕ್ಷಿಸಿ ಹೋಗುತ್ತಿದ್ದನು. ಧರ್ಮಾತ್ಮನಾದ ಯುಧಿಷ್ಠಿರನು ಮೌನಿಯಾಗಿ ಪೂರ್ವಾಭಿಮುಖವಾಗಿ



ಭೀಷ್ಮಪುರಸ್ಸರವಾಗಿದ್ದ ಶತ್ರುಸೇನೆಯ ಕಡೆಗೆ ಹೊರಟನು. ತಮ್ಮಣ್ಣನು ಕಾಲ್ನಡಿಗೆಯಲ್ಲಿಯೇ ಭೀಷ್ಮನ ಕಡೆಗೆ ಹೋಗುತ್ತಿರುವುದನ್ನು ಕಂಡು, ಕುಂತೀಪುತ್ರನಾದ ಅರ್ಜುನನು ಒಡನೆಯೇ ರಥದಿಂದಿಳಿದು ತನ್ನ ಸಹೋದರರಿಂದೊಡಗೂಡಿ ಯುಧಿಷ್ಠಿರನನ್ನೇ ಅನುಸರಿಸಿ ಹೊರಟನು. ಅರ್ಜುನನು ರಥದಿಂದಿಳಿಯುತ್ತಲೇ ಸಾರಥಿಯ ಸ್ಥಾನದಲ್ಲಿ ಕುಳಿತಿದ್ದ ಮಹಾನುಭಾವನಾದ ಭಗವಾನ್ ವಾಸುದೇವನೂ ಸಹ ರಥದಿಂದಿಳಿದು ಅರ್ಜುನನ ಹಿಂದೆಯೇ ಹೋದನು. ಅದೇ ರೀತಿಯಲ್ಲಿ ಯುಧಿಷ್ಠಿರನ ಚಿತ್ತಾನುವರ್ತಿಗಳಾಗಿದ್ದ, ಮುಖ್ಯ-ಮುಖ್ಯರಾದ ರಾಜರೂ ಸಹ ಉತ್ಸುಕರಾಗಿ ಅರ್ಜುನನನ್ನು

ಹಿಂಬಾಲಿಸಿ ನಡೆದರು. ರಥದಿಂದ ಇಳಿದೊಡನೆಯೇ ಅರ್ಜುನನು ಯುಧಿಷ್ಠಿರನನ್ನು ಸಮೀಪಿಸಿ ಪ್ರಶ್ನಿಸಿದನು :

"ಮಹಾರಾಜ! ಏನನ್ನು ಯೋಚಿಸಿ ಹೊರಟಿರುವೆ? ನಮ್ಮನ್ನು ಬಿಟ್ಟೇ ಹೊರಟಿರುವೆಯಲ್ಲಾ! ಪೂರ್ವಾಭಿಮುಖವಾಗಿ ಶತ್ರುಸೇನೆಯ ಸಮೀಪಕ್ಕೆ ಕಾಲ್ನಡಿಗೆಯಲ್ಲಿಯೇ ಹೋಗುತ್ತಿರುವೆಯಲ್ಲಾ! ಹೀಗೆ ಹೋಗಲು ಕಾರಣವಾದರೂ ಏನು?" ಅರ್ಜುನನ ಮಾತು ಮುಗಿಯುತ್ತಲೇ ಭೀಮನು ಯುಧಿಷ್ಠಿರನನ್ನು ಪ್ರಶ್ನಿಸಿದನು :

"ರಾಜೇಂದ್ರ! ಕವಚವನ್ನೂ, ಆಯುಧಗಳನ್ನೂ ರಥದಲ್ಲಿರಿಸಿ ನಿನ್ನ ಅನುಜರಾದ ನಮ್ಮನ್ನೂ ಸಹ ಬಿಟ್ಟು ನಮಗೆ ಯಾವ ವಿಷಯವನ್ನೂ ತಿಳಿಸದೇ, ಕವಚಗಳನ್ನು ತೊಟ್ಟು ಶತ್ರುಸೈನ್ಯವು ಸಜ್ಜಾಗಿರಲಾಗಿ ಎಲ್ಲಿಗೆ ಹೋಗುತ್ತಿರುವೆ?"

ಭೀಮನ ಮಾತಿಗೂ ಯುಧಿಷ್ಠಿರನು ಉತ್ತರಿಸದೇ ಬದ್ಧಾಂಜಲಿಯಾಗಿ ಮುಂದೆ ಹೋಗುತ್ತಿರಲು ನಕುಲನು ಯುಧಿಷ್ಠಿರನನ್ನು ಭೀತ-ಭೀತನಾಗಿಯೇ ಪ್ರಶ್ನಿಸಿದನು :

"ಭರತಸತ್ತಮ! ನೀನು ನಮ್ಮೆಲ್ಲರಿಗೂ ಹಿರಿಯಣ್ಣನಾಗಿರುವೆ. ಹಿರಿಯಣ್ಣನೂ ಮತ್ತು ನಮ್ಮೆಲ್ಲರಿಗೂ ರಾಜನೂ ಆಗಿರುವ ನೀನೇ ಆಯುಧ ಗಳನ್ನೂ, ಕವಚವನ್ನೂ ಬದಿಗಿರಿಸಿ ಶತ್ರುಸೈನ್ಯದ ಕಡೆಗೆ ಹೊರಟುಹೋಗು ತ್ತಿರಲಾಗಿ ಇದರಿಂದ ಉಂಟಾಗಿರುವ ಭಯವು ನನ್ನ ಹೃದಯವನ್ನು ಕಂಪನ ಗೊಳಿಸುತ್ತಿದೆ. ನೀನೆಲ್ಲಿಗೆ ಹೋಗುತ್ತಿರುವೆಯೆಂಬುದನ್ನಾದರೂ ಹೇಳು." ನಕುಲನ ಮಾತಿಗೂ ಯುಧಿಷ್ಠಿರನಿಂದ ಯಾವ ಉತ್ತರವೂ ಬರಲಿಲ್ಲ. ಮಹಾಮೇಧಾವಿಯಾದ ಸಹದೇವನು ಅಣ್ಣನನ್ನು ಪ್ರಶ್ನಿಸಿದನು :

"ಮಹಾರಾಜ! ಈ ರಣಕ್ಷೇತ್ರದಲ್ಲಿ ಶತ್ರುಗಳ ಸೇನಾಸಮೂಹವು ಯುದ್ಧಸನ್ನದ್ಧವಾಗಿ ನಿಂತಿದೆ. ಮಹಾಭಯವು ಉಪಸ್ಥಿತವಾಗಿದೆ. ಇಂತಹ ಸಂದಿಗ್ಧಪರಿಸ್ಥಿತಿಯಲ್ಲಿ ನೀನು ನಮ್ಮೆಲ್ಲರನ್ನೂ ಬಿಟ್ಟು ಶತ್ರುಗಳಿಗೆ ಅಭಿ ಮುಖವಾಗಿ ಹೋಗುತ್ತಿರುವುದೇಕೆ? ಎಲ್ಲಿಗೆ ಹೋಗಲು ಇಚ್ಛಿಸಿರುವೆ?"

ಮಹಾರಾಜ! ಹೀಗೆ ಯುಧಿಷ್ಠಿರನ ತಮ್ಮಂದಿರೆಲ್ಲರೂ ಒಬ್ಬೊಬ್ಬರಾಗಿ ಪ್ರಶ್ನಿಸುತ್ತಾ ಅವನ ಹಿಂದೆಯೇ ಹೋಗುತ್ತಿದ್ದರೂ ಸಹ ವಾಕ್ಸಂಯಮ

ಮಾಡಿದ್ದ ಯುಧಿಷ್ಠಿರನು ಏನೊಂದನ್ನೂ ಹೇಳದೆ ಮುಂದೆ ಮುಂದೆ ಹೋಗುತ್ತಲೇ ಇದ್ದನು. ಆಗ ಮಹಾಪ್ರಾಜ್ಞನಾದ, ಮನಸ್ವಿಯಾದ ಭಗವಾನ್ ವಾಸುದೇವನು ನಗು-ನಗುತ್ತಾ–'ಈ ಯುಧಿಷ್ಠಿರನ ಅಭಿಪ್ರಾಯವು ನನಗೆ ತಿಳಿದುಹೋಯಿತು'–ಎಂದು ಭೀಮಾದಿಗಳೊಡನೆ ಹೇಳಿದನು.

"ಈ ನಿಮ್ಮ ಅಣ್ಣನು ಭೀಷ್ಮ-ದ್ರೋಣ-ಕೃಪ-ಶಲ್ಯರ ಮತ್ತು ಇಲ್ಲಿರುವ ಸಮಸ್ತಗುರುಜನರ ಅನುಮತಿಯನ್ನೂ ಪಡೆದು ಶತ್ರುಗಳೊಡನೆ ಯುದ್ಧ ಮಾಡುತ್ತಾನೆ. ಇದಕ್ಕೆ ಕಾರಣವಿಷ್ಟೆ. ಹಿಂದಿನ ಕಾಲದಲ್ಲಿ ಹೀಗೆ ಹೇಳುತ್ತಿದ್ದರು: ಗುರುಗಳ ಅನುಮತಿಯನ್ನು ಪಡೆದುಕೊಳ್ಳದೇ ಯಾವನು ಮಾನ್ಯರಾದ ಶತ್ರುಗಳೊಡನೆ ಯುದ್ಧಮಾಡುತ್ತಾನೆಯೋ ಅವನು ಮಾನನೀಯರ ಕೋಪಕ್ಕೂ ಶಾಪಕ್ಕೂ ಗುರಿಯಾಗುತ್ತಾನೆ. ಆದುದರಿಂದ ಗುರುಜನರ ಅನುಮತಿಯನ್ನು ಪಡೆದು ಯುದ್ಧಮಾಡುವುದು ಒಳ್ಳೆಯ ಸಂಪ್ರದಾಯವೆಂದು ಹಿಂದಿನವರು ಭಾವಿಸಿದ್ದರು. ನನ್ನ ಅಭಿಪ್ರಾಯವೂ ಅದೇ ಆಗಿದೆ.

**ಅನುಮಾನ್ಯ ಯಥಾಶಾಸ್ತ್ರಂ ಯಸ್ತು ಯುಧ್ಯೇನ್ಮಹತ್ತರೈಃ ।**
**ಧ್ರುವಸ್ತಸ್ಯ ಜಯೋ ಯುದ್ಧೇ ಭವೇದಿತಿ ಮತಿರ್ಮಮ ॥೨೪॥**

ಶಾಸ್ತ್ರಾನುಸಾರವಾಗಿ ಯಾವನು ಮಾನನೀಯಪುರುಷರಿಂದ ಅನುಮತಿಯನ್ನು ಪಡೆದುಕೊಂಡು ಅವರೊಡನೆ ಯುದ್ಧಮಾಡುತ್ತಾನೆಯೋ–ಅವನಿಗೆ ಯುದ್ಧದಲ್ಲಿ ಜಯವು ನಿಶ್ಚಯ."

ಮಹಾರಾಜ! ಇತ್ತಕಡೆ ಭೀಮಾದಿಗಳನ್ನು ಕುರಿತು ಶ್ರೀಕೃಷ್ಣನು ಹೇಳುತ್ತಿರುವಾಗ, ಅತ್ತಕಡೆ ಧಾರ್ತರಾಷ್ಟ್ರನ ಸೇನೆಯ ಕಡೆಗೆ ಹೋಗುತ್ತಿದ್ದ ಯುಧಿಷ್ಠಿರನನ್ನು ಎಲ್ಲರೂ ಎವೆಯಿಕ್ಕದೇ ನೋಡುತ್ತಿದ್ದರು. ಸೇನೆಗಳ ನಡುವೆ ಒಂದು ಕಡೆಯಲ್ಲಿ ಹಾಹಾಕಾರ ಶಬ್ದವೆದ್ದಿತು. ಇತರರು ಯಾವ ಶಬ್ದವನ್ನೂ ಮಾಡದೆ ಮೌನಿಗಳಾಗಿದ್ದು ನಿಂತಿದ್ದರು. ಯುಧಿಷ್ಠಿರನು ತಮ್ಮ ಕಡೆಗೇ ಬರುತ್ತಿರುವುದನ್ನು ದೂರದಿಂದಲೇ ನೋಡಿದ ಧಾರ್ತರಾಷ್ಟ್ರನ ಸೈನಿಕರು, ತಮ್ಮ ತಮ್ಮಲ್ಲಿಯೇ ರಹಸ್ಯವಾಗಿ ಮಾತನಾಡಿಕೊಂಡರು : "ನಿಶ್ಚಯವಾಗಿಯೂ ಈ ಯುಧಿಷ್ಠಿರನು ಕುರುಕುಲಕಳಂಕನೇ ಸರಿ. ಇವನು ಈ ಸಮಯದಲ್ಲಿ ನಮ್ಮ ಕಡೆಗೆ ಬರುತ್ತಿರುವುದರಿಂದಲೇ ಇದು ಸ್ಪಷ್ಟವಾಗಿದೆ.

ಯುದ್ಧಮಾಡಲು ಭಯಪಟ್ಟಿರುವಂತೆ ಕಾಣುತ್ತಿರುವ ಈ ಯುಧಿಷ್ಠಿರ ರಾಜನು ಅನುಜರೊಡನೆ ಶರಣಾರ್ಥಿಯಾಗಿ ಭೀಷ್ಮನ ಸಮೀಪಕ್ಕೆ ಬರುತ್ತಿದ್ದಾನೆ.”

ಅವರಲ್ಲಿಯೇ ಮತ್ತೊಬ್ಬನು ಹೇಳಿದನು. “ಇದಂತೂ ಅತ್ಯಾಶ್ಚರ್ಯವಾಗಿ ಕಾಣುತ್ತಿದೆ. ಮಹಾಶೂರನಾದ ಧನಂಜಯ, ಭೀಮ, ನಕುಲ, ಸಹದೇವ ಮುಂತಾದವರು ಸಹಾಯಕರಾಗಿರಲಾಗಿ ಭಯವೆಂಬುದು ಯುಧಿಷ್ಠಿರನ ಮನಸ್ಸನ್ನಾದರೂ ಹೇಗೆ ಆವರಿಸಿತು?”

ಮತ್ತೊಬ್ಬನು ಯುಧಿಷ್ಠಿರನ ಹುಟ್ಟಿನ ಬಗೆಗೆ ತೀರ್ಮಾನವನ್ನೇ ಕೊಟ್ಟುಬಿಟ್ಟನು.

“ಸುಪ್ರಸಿದ್ಧನಾದ ಕ್ಷತ್ರಿಯರ ಕುಲದಲ್ಲಿ ಇವನು ಹುಟ್ಟಿಲ್ಲವೆಂಬುದಂತೂ ಇದರಿಂದ ನಿಶ್ಚಯವಾಗಿ ಹೋಯಿತು. ಯುದ್ಧಸಮಯದಲ್ಲಿ ಅಲ್ಪಸತ್ತ್ವನಾದ ಇವನ ಹೃದಯವು ಭಯಪಟ್ಟಿರುವುದರಿಂದಲೇ ಇವನು ಸುಪ್ರಸಿದ್ಧವಾದ ಕ್ಷತ್ರಿಯರ ವಂಶದಲ್ಲಿ ಹುಟ್ಟಿಲ್ಲವೆಂಬುದನ್ನು ಸಮರ್ಥಿಸುತ್ತದೆ. ಸದ್ವಂಶದಲ್ಲಿ ಹುಟ್ಟಿದ ಯಾವ ಕ್ಷತ್ರಿಯನಾದರೂ ಯುದ್ಧವು ಪ್ರಾರಂಭವಾಗುವ ಸಮಯದಲ್ಲಿ ಶತ್ರುವಿನ ಬಳಿಗೆ ಶರಣಾರ್ಥಿಯಾಗಿ ಬರಲಾರನು.”

ಹೀಗೆಂದು ಪರಸ್ಪರವಾಗಿ ಮಾತನಾಡಿಕೊಂಡ ದುರ್ಯೋಧನನ ಸೈನಿಕರು ಯುದ್ಧಮಾಡದೆಯೇ ತಮ್ಮ ರಾಜನು ಜಯಗಳಿಸಿದ್ದಕ್ಕಾಗಿ ಅವನನ್ನು ಮುಕ್ತಕಂಠದಿಂದ ಪ್ರಶಂಸೆಮಾಡಿದರು. ಪ್ರಸನ್ನಚಿತ್ತರೂ, ಹೃಷ್ಟರೂ ಆದ ಅವರು ಸಂತೋಷಾಧಿಕ್ಯದಿಂದ ಸಂತೋಷಸೂಚಕವಾಗಿ ತಮ್ಮ ತಮ್ಮ ಅಂಗವಸ್ತ್ರಗಳನ್ನೇ ಜಯಕಾರಮಾಡುತ್ತಾ ಹಾರುಬಿಟ್ಟರು. ಮಹಾರಾಜ! ಆ ನಿನ್ನ ಎಲ್ಲ ಸೈನಿಕರೂ ಈ ರೀತಿಯಲ್ಲಿ ತಮ್ಮ ರಾಜನಾದ ದುರ್ಯೋಧನನನ್ನು ಪ್ರಶಂಸೆಮಾಡುತ್ತಿದ್ದುದು ಮಾತ್ರವಲ್ಲದೇ–ಸೋದರರೊಡನೆಯೂ ಮತ್ತು ಕೇಶವನೊಡನೆಯೂ ಇದ್ದ ಯುಧಿಷ್ಠಿರನನ್ನು ಬಹುವಾಗಿ ನಿಂದಿಸಿದರು. ಆ ಸಮಯದಲ್ಲಿ ಎಲ್ಲ ಕೌರವಸೈನ್ಯವೂ ಯುಧಿಷ್ಠಿರನನ್ನು ಸಂಪೂರ್ಣವಾಗಿ ಧಿಕ್ಕರಿಸಿತು. ‘ಯುಧಿಷ್ಠಿರನಿಗೆ ಧಿಕ್ಕಾರ’ ಎಂಬ ಶಬ್ದಗಳೂ ಮೊಳಗಿದುವು. ಶತ್ರುಹಂತಕನೇ! ಮರುಕ್ಷಣದಲ್ಲಿಯೇ ದುರ್ಯೋಧನನ ಸೈನ್ಯದಲ್ಲಿ ಶಬ್ದ ಅಡಗಿ ಸರ್ವತ್ರ ನಿಃಶಬ್ದವುಂಟಾಯಿತು. ಆದರೂ ಸಹ ಅವರಲ್ಲಿ ಪಿಸುಮಾತು ನಿಲ್ಲಲಿಲ್ಲ.

"ಧರ್ಮಾತ್ಮನೆಂದೂ ರಾಜನೀತಿಜ್ಞನೆಂದೂ ಪ್ರಸಿದ್ಧನಾಗಿರುವ ಈ ಯುಧಿಷ್ಠಿರನು ಭೀಷ್ಮನ ಬಳಿಗೆ ಹೋಗಿ ಏನೆಂದು ಹೇಳುತ್ತಾನೆ? ಭೀಷ್ಮನು ಏನೆಂದು ತಾನೇ ಉತ್ತರಿಸುತ್ತಾನೆ? ಯುದ್ಧವನ್ನೇ ಶ್ಲಾಘಿಸುವ ಈ ಭೀಮನು ಭೀಷ್ಮನ ಮುಂದೆ ನಿಂತು ಏನು ಹೇಳುತ್ತಾನೆ? ಕೃಷ್ಣಾರ್ಜುನರಾದರೂ ಈ ಸಮಯದಲ್ಲಿ ಏನು ಹೇಳಿಯಾರು?"



ಧೃತರಾಷ್ಟ್ರಮಹಾರಾಜ! ಆ ಸಮಯದಲ್ಲಿ ಎರಡು ಪಕ್ಷಗಳ ಸೈನ್ಯಗಳಲ್ಲಿಯೂ ಯುಧಿಷ್ಠಿರನ ವಿಷಯವಾಗಿ ಒಂದು ದೊಡ್ಡ ಸಮಸ್ಯೆಯೇ ಹುಟ್ಟಿಕೊಂಡಿತು. ಭೀಷ್ಮನೊಡನೆ ಧರ್ಮಜನ ಮಾತು ಯಾವುದಿರಬಹುದೆಂಬ ವಿಷಯದಲ್ಲಿ ದೊಡ್ಡ ಸಂಶಯವೇ ಹುಟ್ಟಿಕೊಂಡಿತು.

ಯಾವುದಕ್ಕೂ ಗಮನವನ್ನೇ ಕೊಡದೆ ಬಾಣಗಳಿಂದಲೂ, ಶಕ್ತ್ಯಾಯುಧಗಳಿಂದಲೂ ಸಮಾಕುಲವಾಗಿದ್ದ ಶತ್ರುವಿನ ಸೈನ್ಯದೊಳಗೆ ನುಗ್ಗಿ ಯುಧಿಷ್ಠಿರನು ತನ್ನ ತಮ್ಮಂದಿರಿಂದಲೂ, ಶ್ರೀಕೃಷ್ಣನಿಂದಲೂ ಪರಿವೃತನಾಗಿ ಭೀಷ್ಮನ ಬಳಿಗೇ ನೇರವಾಗಿ ಹೋದನು. ಭೀಷ್ಮನನ್ನು ಸಂಧಿಸಿದನಂತರ ಯುಧಿಷ್ಠಿರನು ಅವನ ಎರಡು ಕಾಲುಗಳನ್ನೂ ತನ್ನೆರಡು ಕೈಗಳಿಂದ ಮುಟ್ಟಿ ನಮಸ್ಕಾರಮಾಡಿ, ಯುದ್ಧಕ್ಕೆ ಸಜ್ಜಾಗಿ ನಿಂತಿದ್ದ ಶಾಂತನುವಿನ ಮಗನಾದ ಭೀಷ್ಮನನ್ನು ಕುರಿತು ಹೇಳಿದನು :

**ಆಮನ್ತ್ರಯೇ ತ್ವಾಂ ದುರ್ಧರ್ಷ ತ್ವಯಾ ಯೋತ್ಸ್ಯಾಮಹೇ ಸಹ ।**
**ಅನುಜಾನೀಹಿ ಮಾಂ ತಾತ ಆಶಿಷಶ್ಚ ಪ್ರಯೋಜಯ ॥೩೭॥**

"ದುರ್ಧರ್ಷನೇ! ನಾನು ನಿನ್ನ ಅನುಮತಿಯನ್ನು ಪ್ರಾರ್ಥಿಸುತ್ತೇನೆ. ನಿನ್ನೊಡನೆ ನಾವು ಯುದ್ಧಮಾಡುತ್ತೇವೆ. ಇದಕ್ಕೆ ನೀನು ಅನುಮತಿಯನ್ನು ದಯಪಾಲಿಸು. ತಾತ! ನಾವು ನಿನ್ನೊಡನೆ ಮಾಡುವ ಯುದ್ಧದಲ್ಲಿ ವಿಜಯಿಗಳಾಗುವಂತೆ ಆಶೀರ್ವಾದವನ್ನು ಮಾಡುವವನಾಗು."

ಯುಧಿಷ್ಠಿರನ ವಿನಯಯುಕ್ತವಾದ ಮಾತುಗಳನ್ನು ಕೇಳಿ ಆನಂದ ಭರಿತನಾದ ಭೀಷ್ಮನು ಹೇಳಿದನು :

**ಯದ್ಯೇವಂ ನಾಭಿಗಚ್ಛೇಥಾ ಯುಧಿ ಮಾಂ ಪೃಥಿವೀಪತೇ ।**
**ಶಪೇಯಂ ತ್ವಾಂ ಮಹಾರಾಜ ಪರಾಭಾವಾಯ ಭಾರತ ॥೩೮॥**

"ಪೃಥಿವೀಪತೇ! ಭರತಕುಲನಂದನ! ನೀನೇನಾದರೂ ಈ ರೀತಿಯಲ್ಲಿ ನನ್ನ ಬಳಿಗೆ ಯುದ್ಧಮಾಡಲು ಅನುಮತಿಯನ್ನು ಕೇಳಲು ಬಾರದೆಯೇ ಹೋಗಿದ್ದರೆ ನಿನಗೆ ಪರಾಭವವಾಗುವಂತೆ ನಾನು ನಿನ್ನನ್ನು ಶಪಿಸಿಬಿಡುತ್ತಿದ್ದೆನು.

**ಪ್ರೀತೋಽಹಂ ಪುತ್ರ ಯುಧ್ಯಸ್ವ ಜಯಮಾಪ್ನುಹಿ ಪಾಣ್ಡವ ।**
**ಯತ್ತೇಽಭಿಲಷಿತಂ ಚಾನ್ಯತ್ತದವಾಪ್ನುಹಿ ಸಂಯುಗೇ ॥೩೯॥**

ಮಗು! ಪಾಂಡವ! ನಿನ್ನ ವಿಷಯದಲ್ಲಿ ನಾನು ಸುಪ್ರೀತನಾಗಿದ್ದೇನೆ. ನನ್ನೊಡನೆ ಯುದ್ಧಮಾಡು. ವಿಜಯವನ್ನು ಪಡೆ. ಇಷ್ಟುಮಾತ್ರವಲ್ಲ. ಇನ್ನೂ ಯಾವುದಾದರೂ ಆಶಯವು ನಿನ್ನ ಹೃದಯದಲ್ಲಿದ್ದರೂ ಸಹ ಅದನ್ನು ನೀನು ಯುದ್ಧದಲ್ಲಿ ಪಡೆದುಕೊ.

**ವ್ರಿಯತಾಂ ಚ ವರಃ ಪಾರ್ಥ ಕಿಮಸ್ಮತ್ತೋಽಭಿಕಾಂಕ್ಷಸಿ ।**
**ಏವಂಗತೇ ಮಹಾರಾಜ ನ ತವಾಸ್ತಿ ಪರಾಜಯಃ ॥೪೦॥**

ನಮ್ಮಿಂದ ಯಾವ ವರವನ್ನು ಪಡೆದುಕೊಳ್ಳಲು ಅಭಿಲಾಷಿಸಿರುವೆಯೋ ಆ ವರವನ್ನೂ ಕೇಳು. ಈ ಸ್ಥಿತಿಯಲ್ಲಿ ನಿನಗೆ ಪರಾಜಯವೆಂಬುದೇ ಇಲ್ಲ. ಮಹಾರಾಜ!

**ಅರ್ಥಸ್ಯ ಪುರುಷೋ ದಾಸೋ ದಾಸಸ್ತ್ವರ್ಥೋ ನ ಕಸ್ಯಚಿತ್ ।**
**ಇತಿ ಸತ್ಯಂ ಮಹಾರಾಜ ಬದ್ಧೋಽಸ್ಮ್ಯರ್ಥೇನ ಕೌರವೈಃ ॥೪೧॥**

'ಪ್ರತಿಯೊಬ್ಬ ಮನುಷ್ಯನೂ ಹಣಕ್ಕೆ ದಾಸನಾಗಿರುತ್ತಾನೆ. ಹಣವು ದಾಸಭಾವದಿಂದ ಯಾವನೊಬ್ಬನ ಬಳಿಯಲ್ಲಿಯೂ ಇರುವುದಿಲ್ಲ.' ಈ ಮಾತು ಸತ್ಯವಾದುದು. ಯುಧಿಷ್ಠಿರ! ನಾನಾದರೋ ಈ ಅರ್ಥದಿಂದಲೇ ಕೌರವರಿಂದ ಬಂಧಿಸಲ್ಪಟ್ಟಿದ್ದೇನೆ. ಅರ್ಥದಾನದ ಮೂಲಕವಾಗಿ ಕೌರವರು ನನ್ನನ್ನು ತಮ್ಮ ಕಡೆಯಲ್ಲಿ ಬಂಧಿಸಿಟ್ಟುಕೊಂಡಿದ್ದಾರೆ.

**ಅತಸ್ತ್ವಾಂ ಕ್ಲೀಬವದ್ವಾಕ್ಯಂ ಬ್ರವೀಮಿ ಕುರುನನ್ದನ ।**
**ಭೃತೋಽಸ್ಮ್ಯರ್ಥೇನ ಕೌರವ್ಯ ಯುದ್ಧಾದನ್ಯತ್ಕಿಮಿಚ್ಛಸಿ ॥೪೨॥**

ಈ ಕಾರಣದಿಂದಲೇ ನಾನಿಂದು ನಿನ್ನೊಡನೆ ನಪುಂಸಕನಂತೆ ಮಾತನಾಡುತ್ತಿದ್ದೇನೆ. ನೀನು ಧರ್ಮಿಷ್ಠನೆಂದು ತಿಳಿದಿದ್ದರೂ ನಿನ್ನ ಕಡೆಗೆ ಬರುವ ಸ್ವಾತಂತ್ರ್ಯವನ್ನು ಕಳೆದುಕೊಂಡುಬಿಟ್ಟಿದ್ದೇನೆ. ಈ ಅರ್ಥದ ಮೂಲಕವಾಗಿ ಧೃತರಾಷ್ಟ್ರನ ಮಕ್ಕಳು ನನ್ನ ಭರಣ-ಪೋಷಣಗಳನ್ನು ನಡೆಸುತ್ತಿದ್ದಾರೆ. ಅವರು ಕೊಡುತ್ತಿರುವ ಭೃತಿಗೆ ನನ್ನನ್ನು ಅವರಿಗೆ ಮಾರಿಕೊಂಡುಬಿಟ್ಟಿದ್ದೇನೆ. ಆದುದರಿಂದಲೇ ನಾನು ನಪುಂಸಕಪ್ರಾಯನಾಗಿದ್ದೇನೆ. ಆದುದರಿಂದ ನೀನು ನನ್ನನ್ನು ನಿನ್ನ ಕಡೆಗೆ ಬಂದು ಯುದ್ಧಮಾಡುವಂತೆ ಮಾತ್ರ ಹೇಳಬೇಡ. ನಿನ್ನ ಪಕ್ಷವಹಿಸಿ ಯುದ್ಧವನ್ನು ಮಾತ್ರ ಮಾಡಲಾರೆನು. ಭರಣ-ಪೋಷಣೆಗಳನ್ನು ಕೌರವರಿಂದ ಪಡೆಯುತ್ತಿರುವ ನಾನು ಅವರಿಗಾಗಿ ಯುದ್ಧಮಾಡಬೇಕಾದುದು ಅನಿವಾರ್ಯವಾಗಿದೆ. ಆದುದರಿಂದ ಯುದ್ಧವೊಂದನ್ನು ಬಿಟ್ಟು ಬೇರೆ ಯಾವುದನ್ನು ನನ್ನಿಂದ ಅಪೇಕ್ಷಿಸುವೆ?"

"ಮಹಾಬಾಹೋ! ನೀನು ನನಗೆ ಸರ್ವದಾ ಹಿತೈಷಿಯಾಗಿದ್ದು

ಕೊಂಡಿರು. ನನ್ನ ಹಿತಾರ್ಥವಾಗಿ ಸಲಹೆಯನ್ನೂ ನೀಡುತ್ತಿರು. ನಿನ್ನ ಅಭಿಪ್ರಾಯದಂತೆ ದುರ್ಯೋಧನನ ಪಕ್ಷದಲ್ಲಿಯೇ ಇದ್ದು ಯುದ್ಧಮಾಡು. ನಾನು ಈ ವರವನ್ನೇ ಸದಾಕಾಲದಲ್ಲಿಯೂ ನಿನ್ನಿಂದ ಆಶಿಸುತ್ತೇನೆ."

"ಕುರುನಂದನ! ನಾನು ನಿನಗೆ ಯಾವ ಬಗೆಯಲ್ಲಿ ಸಹಾಯ ಮಾಡಲಿ? ಹೇಳು. ನಿನ್ನ ಶತ್ರುವಿನ ಸಲುವಾಗಿ ಅವನ ಪಕ್ಷದಲ್ಲಿಯೇ ಇದ್ದು ಸ್ವೇಚ್ಛೆಯಿಂದ ಯುದ್ಧವನ್ನಂತೂ ಮಾಡುತ್ತೇನೆ. ಆದರೆ ನಿನಗೆ ಯಾವ ರೀತಿಯಲ್ಲಿ ಉಪಕರಿಸಲಿ? ನೀನು ಆ ವಿಷಯವಾಗಿ ಏನು ಹೇಳಲು ಇಚ್ಛಿಸಿರುವೆ? ಅದನ್ನು ಹೇಳು."

ಈ ಹಿಂದೆಯೇ ಯುಧಿಷ್ಠಿರನು ಭೀಷ್ಮನನ್ನು–'ಹಿತೈಷಿಯಾಗಿರು. ನನ್ನ ಹಿತಾರ್ಥವಾಗಿ ಸಲಹೆಯನ್ನು ನೀಡುತ್ತಿರು' ಎಂದು ಪ್ರಾರ್ಥಿಸಿದ್ದನು. ಭೀಷ್ಮನ ಪ್ರಶ್ನೆಯಂತೆ ತನ್ನ ಹಿತದ ವಿಷಯವನ್ನು ಸ್ಪಷ್ಟವಾಗಿಯೇ ಈಗ ಭೀಷ್ಮನ ಮುಂದಿಡಬೇಕಾಯಿತು. ಅಂತೆಯೇ ಭೀಷ್ಮನೊಡನೆ ಹೇಳಿದನು :

**ಕಥಂ ಜಯೇಯಂ ಸಂಗ್ರಾಮೇ ಭವನ್ತಮಪರಾಜಿತಮ್ ।**
**ಏತನ್ಮೇ ಮನ್ತ್ರಯ ಹಿತಂ ಯದಿ ಶ್ರೇಯಃ ಪ್ರಪಶ್ಯಸಿ ॥೪೫॥**

"ಪಿತಾಮಹ! ನೀನು ಅಪರಾಜಿತನಾಗಿರುವೆ. ನೀನು ಯಾರಿಂದಲೂ ಇದುವರೆಗೂ ಪರಾಜಿತನಾಗಿರುವುದಿಲ್ಲ. ಯುದ್ಧದಲ್ಲಿ ಗೆಲ್ಲಬೇಕಾದರೆ ನಿನ್ನನ್ನು ಜಯಿಸಬೇಕಾದುದೂ ಸಹ ಅನಿವಾರ್ಯವೇ ಆಗಿದೆ. ಆದುದರಿಂದ ನಿನ್ನನ್ನು ಯಾವ ರೀತಿಯಲ್ಲಿ ನಾನು ಪರಾಜಯಗೊಳಿಸಲಿ? ನನ್ನ ಶ್ರೇಯಸ್ಸನ್ನೇ ನೀನು ಕಾಣಲು ಇಚ್ಛೆಯುಳ್ಳವನಾಗಿರುವುದಾದರೆ ಈ ನನ್ನ ಹಿತದ ವಿಷಯವಾಗಿ ಸಲಹೆ ನೀಡು."

"ನೀನು ಹೇಳಿದುದು ನಿಜ, ಯುಧಿಷ್ಠಿರ! ರಣರಂಗದಲ್ಲಿ ಯುದ್ಧ ಮಾಡುತ್ತಿರುವಾಗ ನನ್ನನ್ನು ಪರಾಜಯಗೊಳಿಸಲು ಸಮರ್ಥನಾದ ಯಾವ ನೊಬ್ಬ ವೀರನನ್ನೂ ಸಹ ನಾನು ಕಂಡಿಲ್ಲ. ಕೇವಲ ಮನುಷ್ಯನೇನು! ಶತಕ್ರತುವೇ (ಇಂದ್ರನೇ) ಸಾಕ್ಷಾತ್ತಾಗಿ ಯುದ್ಧಕ್ಕೆ ಬಂದರೂ ಸಹ ಅವನೂ ನನ್ನನ್ನು ಜಯಿಸಲಾರನು."

"ಪಿತಾಮಹ! ನಿನಗೆ ನಮಸ್ಕಾರಮಾಡುತ್ತೇನೆ. ನೀನು ಹೇಳಿದ ಈ ಕಾರಣದಿಂದಲೇ ನಾನು ನಿನ್ನನ್ನು ಪ್ರಶ್ನಿಸುತ್ತಿದ್ದೇನೆ ಮತ್ತು ಅದಕ್ಕಾಗಿಯೇ ಪ್ರಾರ್ಥಿಸುತ್ತಿದ್ದೇನೆ. ಯುದ್ಧದಲ್ಲಿ ಶತ್ರುಗಳಿಂದ ನೀನು ಹೇಗೆ ವಧ್ಯನಾಗುವೆ ಯೆಂಬ ಉಪಾಯವನ್ನು ತಿಳಿಸು. ನಿನ್ನನ್ನು ಯಾವ ರೀತಿಯಲ್ಲಿ ವಧೆಮಾಡ ಬೇಕೆಂಬ ರಹಸ್ಯವನ್ನು ನೀನೇ ನಮಗೆ ಹೇಳಿಕೊಡಬೇಕಾಗಿದೆ."

"ಯುದ್ಧದಲ್ಲಿ ನನ್ನನ್ನು ಯಾರು ಜಯಿಸಬಲ್ಲವರೆಂಬುದನ್ನು ನಾನು ಇದುವರೆಗೂ ಕಂಡುಕೊಂಡಿಲ್ಲ. ಮೇಲಾಗಿ ನನ್ನ ಮರಣಕಾಲವೂ ಸಹ ಇನ್ನೂ ಸನ್ನಿಹಿತವಾಗಿಲ್ಲ. ನನ್ನ ಮರಣರಹಸ್ಯವನ್ನು ತಿಳಿಯುವ ಸಲುವಾಗಿ ಮತ್ತೊಮ್ಮೆ ನನ್ನ ಬಳಿಗೆ ಬಾ ಯುಧಿಷ್ಠಿರ!"

ಸಂಜಯನು ಧೃತರಾಷ್ಟ್ರನನ್ನು ಕುರಿತು ಹೇಳುತ್ತಾನೆ :-

"ಮಹಾರಾಜ! ಭೀಷ್ಮನ ಮಾತನ್ನು ಯುಧಿಷ್ಠಿರನು ಶಿರಸಾ ಪ್ರತಿಗ್ರಹಿಸಿ, ಪುನಃ ಕಾಲುಮುಟ್ಟಿ ನಮಸ್ಕಾರಮಾಡಿ, ಎಲ್ಲ ಸೈನಿಕರೂ ನೋಡುತ್ತಿದ್ದಂತೆಯೇ ಸೈನಿಕರ ಮಧ್ಯದಲ್ಲಿಯೇ ತನ್ನ ತಮ್ಮಂದಿರಿಂದೊಡಗೂಡಿ ಆಚಾರ್ಯರಾದ ದ್ರೋಣರ ರಥವಿದ್ದ ಕಡೆಗೆ ಹೊರಟನು. ದ್ರೋಣರ ಸಮೀಪಕ್ಕೆ ಯುಧಿಷ್ಠಿರನು ತನ್ನ ತಮ್ಮಂದಿರೊಡನೆ ಹೋಗಿ ಅವರಿಗೆ ಅಭಿವಾದನವನ್ನೂ, ಪ್ರದಕ್ಷಿಣ-ನಮಸ್ಕಾರಗಳನ್ನೂ ಮಾಡಿ ದುರ್ಧರ್ಷರಾದ ಆಚಾರ್ಯರನ್ನು ಕುರಿತು ತನ್ನ ಶ್ರೇಯಸ್ಸಿಗೆ ಕಾರಣವಾಗುವ ಈ ಮಾತುಗಳನ್ನು ಹೇಳಿದನು :

**ಆಮನ್ತ್ರಯೇ ತ್ವಾಂ ಭಗವನ್ ಯೋತ್ಸ್ಯೇ ವಿಗತಕಲ್ಮಷಃ ।**
**ಕಥಂ ಜಯೇ ರಿಪೂನ್ಸರ್ವಾನನುಜ್ಞಾತಸ್ತ್ವಯಾ ದ್ವಿಜ ॥೫೨॥**

"ಭಗವನ್! ವಿಗತಕಲ್ಮಷನಾಗಿ ನಿಮ್ಮ ಮೇಲೆ ಯಾವ ವಿಧವಾದ ದ್ವೇಷಭಾವವೂ ಇಲ್ಲದೇ ಅನಿವಾರ್ಯಕಾರಣದಿಂದಾಗಿ ನಾನು ನಿಮ್ಮೊಡನೆ ಯುದ್ಧಮಾಡುತ್ತೇನೆ. ಇದಕ್ಕಾಗಿ ನಿಮ್ಮ ಅನುಜ್ಞೆಯನ್ನು ದಯಪಾಲಿಸು ವವರಾಗಿರಿ. ನಿಮ್ಮಿಂದ ಅನುಜ್ಞೆಯನ್ನು ಪಡೆದ ನಾನು ಯುದ್ಧದಲ್ಲಿ ಶತ್ರುಗಳನ್ನು ಯಾವ ರೀತಿಯಲ್ಲಿ ಜಯಿಸುವೆನೆಂಬುದನ್ನೂ ಹೇಳಿರಿ."

ಭೀಷ್ಮನು ಹೇಳಿದಂತೆಯೇ ದ್ರೋಣರೂ ಸಹ-ಧರ್ಮಜನು ಅನುಮತಿಯನ್ನು ಕೇಳಲು ಬಾರದಿದ್ದರೆ ಆಗಬಹುದಾಗಿದ್ದ ಪರಿಣಾಮವನ್ನು–ಹೇಳಿದರು :



**ಯದಿ ಮಾಂ ನಾಭಿಗಚ್ಛೇಥಾ ಯುದ್ಧಾಯ ಕೃತನಿಶ್ಚಯಃ ।**
**ಶಪೇಯಂ ತ್ವಾಂ ಮಹಾರಾಜ ಪರಾಭಾವಾಯ ಸರ್ವಶಃ ॥೫೩॥**

"ಶತ್ರುಗಳೊಡನೆ ಯುದ್ಧವನ್ನು ಮಾಡಿಯೇ ತೀರಬೇಕೆಂದು ನಿಶ್ಚಯಿಸಿರುವ ನೀನು, ಅನುಜ್ಞೆಯನ್ನು ಪಡೆದುಕೊಳ್ಳಲು ನನ್ನ ಬಳಿಗೆ ಬಾರದಿದ್ದರೆ ಸರ್ವಥಾ ನಿನ್ನ ಪರಾಜಯಕ್ಕಾಗಿ ಶಾಪವನ್ನೇ ನಾನು ಕೊಡುತ್ತಿದ್ದೆನು. ಯುಧಿಷ್ಠಿರ! ಆದರೆ ಈಗ ನಿನ್ನ ಆಗಮನದಿಂದಾಗಿ ನಾನು ತುಷ್ಟನಾಗಿದ್ದೇನೆ.

ನನ್ನೊಡನೆ ಯುದ್ಧಮಾಡಲು ಅನುಮತಿಯನ್ನು ಕೇಳಲು ಬಂದು ನೀನು ನನ್ನನ್ನು ವಿಶೇಷವಾಗಿ ಗೌರವಿಸಿರುವೆ. ನಾನು ನಿನಗೆ ಅನುಜ್ಞೆಯನ್ನು ಕೊಡುತ್ತೇನೆ. ನೀನು ನನ್ನೊಡನೆ ಯುದ್ಧಮಾಡಬಹುದು. ಈ ಯುದ್ಧದಲ್ಲಿ ನೀನು ವಿಜಯವನ್ನೂ ಪಡೆಯುವೆ.

ನಿನ್ನ ಕಾಮನೆಯನ್ನೂ ಸಹ ಪೂರ್ಣಮಾಡಿಕೊಡುತ್ತೇನೆ. ನೀನು ನನ್ನಿಂದ ಮತ್ತೇನನ್ನು ಅಪೇಕ್ಷಿಸಿರುವೆ? ಈಗಿನ ಪರಿಸ್ಥಿತಿಯಲ್ಲಿ ನಿನ್ನ ಪಕ್ಷಕ್ಕೆ ಬಂದು ನಿನ್ನ ಶತ್ರುಗಳೊಡನೆ ಯುದ್ಧಮಾಡುವುದೊಂದನ್ನು ಬಿಟ್ಟು ನನ್ನಿಂದ ನೀನು ಮತ್ತೇನನ್ನು ಅಪೇಕ್ಷಿಸುವೆ?

**ಅರ್ಥಸ್ಯ ಪುರುಷೋ ದಾಸೋ ದಾಸಸ್ತ್ವರ್ಥೋ ನ ಕಸ್ಯಚಿತ್ ।**
**ಇತಿ ಸತ್ಯಂ ಮಹಾರಾಜ ಬದ್ಧೋಽಸ್ಮ್ಯರ್ಥೇನ ಕೌರವೈಃ ॥೫೬॥**

ಮಹಾರಾಜ! 'ಯಾವಾಗಲೂ ಹಣಕ್ಕೆ ಮನುಷ್ಯನು ದಾಸನಾಗಿರುತ್ತಾನೆ. ಆದರೆ ಹಣವು ಮಾತ್ರ ಯಾವನೊಬ್ಬನಿಗೂ ದಾಸನಾಗಿರುವುದಿಲ್ಲ.' ಹೀಗೆಂಬ ಮಾತು ಸತ್ಯವಾದುದು. ಈ ಹಣದ ಮೂಲಕವಾಗಿಯೇ ನಾನು ಕೌರವರಿಂದ ಕಟ್ಟಿಹಾಕಲ್ಪಟ್ಟಿದ್ದೇನೆ. ಹಣದಿಂದಲೇ ಕೌರವರು ನನ್ನನ್ನು ಕೊಂಡುಕೊಂಡುಬಿಟ್ಟಿದ್ದಾರೆ. ಈ ಕಾರಣದಿಂದಲೇ :

**ಬ್ರವೀಮ್ಯೇತತ್ಕ್ಲೀಬವತ್ತ್ವಾಂ ಯುದ್ಧಾದನ್ಯತ್ಕಿಮಿಚ್ಛಸಿ ।**
**ಯೋತ್ಸ್ಯೇಹಂ ಕೌರವಸ್ಯಾರ್ಥೇ ತವಾಶಾಸ್ಯೋ ಜಯೋ ಮಯಾ ॥**

ಈ ವಿಷಯವನ್ನು ನಾನು ನಪುಂಸಕನಂತೆ ಹೇಳುತ್ತಿದ್ದೇನೆ. ನಿನ್ನ ಜೊತೆಗೂಡಿ ಯುದ್ಧಮಾಡುವ ನೈತಿಕಧೈರ್ಯವು ನನಗಿಲ್ಲ. ಆದುದರಿಂದ ಯುದ್ಧಮಾಡಲು ನಿನ್ನ ಕಡೆಗೆ ಬರುವಂತೆ ಮಾತ್ರ ಕೇಳಬೇಡ. ನಿನ್ನ ಕಡೆಗೆ ಸೇರಿ ಯುದ್ಧಮಾಡುವುದೊಂದನ್ನು ಬಿಟ್ಟು ನನ್ನಿಂದ ನಿನಗೆ ಮತ್ತೇನಾಗಬೇಕಾಗಿದೆ? ಹೇಳು. ಕೌರವರ ಸಲುವಾಗಿ ಅವರ ಪಕ್ಷದಲ್ಲಿಯೇ ಇದ್ದು ನಾನು ನಿಮ್ಮೊಡನೆ ಯುದ್ಧಮಾಡುತ್ತೇನೆ. ಆದರೆ ವಿಜಯವು ಮಾತ್ರ ನಿನಗೇ ಲಭಿಸಲೆಂದು ನಾನು ಆಶಿಸುತ್ತೇನೆ."

"ಬ್ರಾಹ್ಮಣೋತ್ತಮರೇ! ನನಗೆ ಜಯವುಂಟಾಗಲೆಂದು ಆಶಾಸನೆ ಮಾಡಿರಿ. (ಆಶೀರ್ವಾದ ಮಾಡಿರಿ.) ನನ್ನ ಹಿತಕ್ಕಾಗಿ ಸಲಹೆ ನೀಡಿರಿ. (ನನಗೆ ಹಿತವನ್ನು ಕೋರಿರಿ.)

ಕೌರವರ ಸಲುವಾಗಿ ಯುದ್ಧಮಾಡಿರಿ. ಈ ವರವನ್ನೇ ನಾನು ಕೇಳುತ್ತಿರುವುದು."

"ಮಹಾರಾಜ! ಯಾವನಿಗೆ ಸ್ವಯಂ ಹರಿಯೇ ಮಂತ್ರಿಯಾಗಿರುತ್ತಾನೆಯೋ ಅಂತಹವನಿಗೆ ಅಪಜಯವೆಂಬುದೇ ಇಲ್ಲ. ಆದುದರಿಂದ ಜಯವು ನಿನಗೆ ನಿಶ್ಚಿತವಾಗಿ ಕಟ್ಟಿಟ್ಟದ್ದು. ನಾನು ನಿನಗೆ ನನ್ನೊಡನೆ ಯುದ್ಧ ಮಾಡಲು ಅನುಜ್ಞೆನೀಡುತ್ತೇನೆ. ನೀನು ನನ್ನೊಡನೆ ಯುದ್ಧಮಾಡಬಹುದು. ನೀನು ಯುದ್ಧದಲ್ಲಿ ಶತ್ರುಗಳನ್ನು ಪ್ರಾಣಗಳಿಂದ ವಿಮೋಚನಗೊಳಿಸುವೆ. (ಸಂಹರಿಸುವೆ.) ಶತ್ರುಗಳನ್ನು ಗೆದ್ದು ಕಷ್ಟದಿಂದ ಬಿಡುಗಡೆಹೊಂದುವೆ.

**ಯತೋ ಧರ್ಮಸ್ತತಃ ಕೃಷ್ಣೋ ಯತಃ ಕೃಷ್ಣಸ್ತತೋ ಜಯಃ ।**
**ಯುಧ್ಯಸ್ವ ಗಚ್ಛ ಕೌನ್ತೇಯ ಪೃಚ್ಛ ಮಾಂ ಕಿಂ ಬ್ರವೀಮಿ ತೇ ॥**

ಯುಧಿಷ್ಠಿರ! ಧರ್ಮವೆಲ್ಲಿರುವುದೋ ಅಲ್ಲಿ ಶ್ರೀಕೃಷ್ಣನಿರುತ್ತಾನೆ. ಕೃಷ್ಣ ಮತ್ತು ಧರ್ಮಗಳು ಒಂದನ್ನೊಂದು ಬಿಟ್ಟಿರಲಾರವು. ಧರ್ಮವಿದ್ದರೆ ಅಲ್ಲಿ ಶ್ರೀಕೃಷ್ಣನ ಸಾನ್ನಿಧ್ಯವಿರುವುದೆಂದೇ ಹೇಳಬಹುದು. ಅಥವಾ ಶ್ರೀಕೃಷ್ಣನಿರುವ ಸ್ಥಳವು ಧರ್ಮಾವೃತವಾಗಿರುವುದೆಂದೂ ಹೇಳಬಹುದು. ವಿಜಯವೂ ಅಂತೆಯೇ. ಶ್ರೀಕೃಷ್ಣನಿರುವ ಪಕ್ಷಕ್ಕೇ ವಿಜಯವು ನಿಶ್ಚಿತ. ಅಪಜಯಕ್ಕೆ ಅಲ್ಲಿ ಎಡೆಯೇ ಇರುವುದಿಲ್ಲ. ಆದುದರಿಂದ ನಿಶ್ಚಿಂತನಾಗಿ ಹೋಗು ಧರ್ಮಜ! ಯುದ್ಧಮಾಡು. ಅವಶ್ಯವಿದ್ದರೆ ಪುನಃ ಪ್ರಶ್ನಿಸು. ನಾನು ಮತ್ತಾವ ವಿಷಯವಾಗಿ ನಿನ್ನೊಡನೆ ಮಾತನಾಡಬೇಕಾಗಿದೆ? ನಿನ್ನ ಪ್ರಶ್ನೆಗೆ ಯುಕ್ತವಾದ ಉತ್ತರವನ್ನು ಹೇಳುವೆನು."

"ಬ್ರಾಹ್ಮಣಶ್ರೇಷ್ಠರೇ! ನನ್ನ ಮನಸ್ಸಿನ ಆಕಾಂಕ್ಷೆಯಿಂದ ಹುಟ್ಟಿರುವ ಪ್ರಶ್ನೆಯೊಂದನ್ನು ಕೇಳುತ್ತೇನೆ ; ದಯಮಾಡಿ ಉತ್ತರಿಸಿರಿ. ನೀವು ಯುದ್ಧದಲ್ಲಿ ಅಪರಾಜಿತರಾಗಿರುವಿರಿ. ತಾವು ಇದುವರೆಗೂ ಅಪಜಯವೆಂಬುದನ್ನು ಕಂಡವರೇ ಅಲ್ಲ. ಸನ್ನಿಹಿತವಾಗಿರುವ ಈ ಯುದ್ಧದಲ್ಲಿ ತಮ್ಮನ್ನು ಹೇಗೆ ಪರಾಜಯಗೊಳಿಸಲಿ? ಈ ರಹಸ್ಯವನ್ನು ತಾವು ದಯಮಾಡಿ ನನಗೆ ಹೇಳಬೇಕು."

"ನೀನು ಹೇಳುವುದೇನೋ ನಿಜ. ಯುಧಿಷ್ಠಿರ! ನಾನು ಎಂದಿನವರೆಗೆ

ರಣರಂಗದಲ್ಲಿ ಯುದ್ಧಮಾಡುತ್ತಿರುವೆನೋ ಅಂದಿನವರೆಗೂ ನಿನಗೆ ವಿಜಯವು ಲಭಿಸದು. ಆದುದರಿಂದ ನಿನ್ನ ಅನುಜರೊಡನೆ ಸೇರಿಕೊಂಡು ನನ್ನ ಶೀಘ್ರನಿಧನಕ್ಕಾಗಿ ಪ್ರಯತ್ನಿಸು."

"ಹಂತ! ಆಚಾರ್ಯರೇ! ನಮ್ಮ ಪ್ರಯತ್ನದಿಂದ ಆಗುವ ಕೆಲಸವಲ್ಲ ಅದು. ಈ ಕಾರಣದಿಂದಲೇ ತಮ್ಮ ವಧೋಪಾಯವನ್ನು ತಾವೇ ದಯಮಾಡಿ ಹೇಳಬೇಕಾಗಿದೆ. ತಮಗೆ ನಮಸ್ಕಾರಮಾಡುತ್ತೇನೆ. ತಮ್ಮ ಪಾದಗಳಿಗೆರಗಿ ಈ ರಹಸ್ಯವನ್ನು ಪ್ರಶ್ನಿಸುತ್ತಿದ್ದೇನೆ."

"ನಿಜ ಯುಧಿಷ್ಠಿರ! ರಥದಲ್ಲಿ ಕುಳಿತು ಕುಪಿತನಾಗಿ ಬಾಣಗಳ ಸಮೂಹವನ್ನೇ ಅನವರತವಾಗಿ ಮಳೆಯಂತೆ ಶತ್ರುವಿನ ಮೇಲೆ ಸುರಿಸುತ್ತಾ ಯುದ್ಧಮಾಡುತ್ತಿರುವ ನನ್ನನ್ನು ಯಾವನು ಸಂಹಾರಮಾಡಬಲ್ಲನೋ ಅಂತಹ ಶತ್ರುವನ್ನು ನಾನು ಇದುವರೆಗೂ ಕಂಡಿಲ್ಲ. (ಯಾವ ಶೂರರೂ ನನ್ನನ್ನು ಸಂಹಾರಮಾಡಲು ಸಮರ್ಥರಲ್ಲ.) ಆದರೆ ನನ್ನನ್ನು ಸಂಹರಿಸಲು ಸಾಧ್ಯವಾಗುವ ಸಮಯವು ಒಂದಿದೆ. ನಾನು ಆಮರಣಾಂತವಾಗಿ ಪ್ರಾಯೋಪವೇಶವ್ರತಸ್ಥನಾಗಿ ಕುಳಿತಿರಬೇಕು. ಶಸ್ತ್ರಾಸ್ತ್ರಗಳನ್ನು ಕೆಳಗಿಟ್ಟಿರಬೇಕು ಮತ್ತು ಅಚೇತನನಾಗಿರಬೇಕು ಎಂದರೆ ಚೇತನವನ್ನು ಪರಮಾತ್ಮನಲ್ಲಿ ಲೀನ ಗೊಳಿಸಿರಬೇಕು. (ಸಮಾಧಿಸ್ಥನಾಗಿರಬೇಕು.) ಆ ಸಮಯದಲ್ಲಿ ಮಾತ್ರವೇ ನನ್ನನ್ನು ಕೊಲ್ಲಲು ಸಾಧ್ಯವಾಗುತ್ತದೆ. ಇದು ಸತ್ಯ. ಈ ಸತ್ಯವನ್ನೇ ನಾನು ನಿನಗೆ ಹೇಳುತ್ತಿದ್ದೇನೆ.

ಆದರೆ–'ನೀವು ಶಸ್ತ್ರಸಂನ್ಯಾಸಮಾಡುವುದು ಯಾವಾಗ?'–ಎಂದೂ ನೀನು ಪ್ರಶ್ನಿಸಬಹುದು.

**ಶಸ್ತ್ರಂ ಚಾಹಂ ರಣೇ ಜಹ್ಯಾಂ ಶ್ರುತ್ವಾ ತು ಮಹದಪ್ರಿಯಮ್ ।**
**ಶ್ರದ್ಧೇಯವಾಕ್ಯಾತ್ಪುರುಷಾದೇತತ್ಸತ್ಯಂ ಬ್ರವೀಮಿ ತೇ ॥೬೬॥**

ವಿಶ್ವಸನೀಯನಾದ ಪುರುಷನೊಬ್ಬನಿಂದ ನಾನು ಯುದ್ಧಸಮಯದಲ್ಲಿ ಅತ್ಯಂತಾಪ್ರಿಯವಾದ ಮಾತನ್ನು ಕೇಳಿಬಿಟ್ಟರೆ ಒಡನೆಯೇ ನಾನು ಶಸ್ತ್ರಾಸ್ತ್ರ ಗಳನ್ನು ಕೆಳಕ್ಕೆ ಇಟ್ಟುಬಿಡುತ್ತೇನೆ. ಇದು ಸತ್ಯ. ಈ ಸತ್ಯಸಂಗತಿಯನ್ನೂ ನಿನಗೆ ಹೇಳಿದ್ದೇನೆ.

ಸಂಜಯನು ಧೃತರಾಷ್ಟ್ರನಿಗೆ ಹೇಳುತ್ತಾನೆ :

“ಧೀಮಂತರಾದ ಭಾರದ್ವಾಜರ ಆ ಮಾತನ್ನು ಕೇಳಿ ಯುಧಿಷ್ಠಿರನು ಆಚಾರ್ಯರನ್ನು ಸಮ್ಮಾನಿಸಿ ಅವರ ಅನುಮತಿಯನ್ನು ಪಡೆದು, ಅಲ್ಲಿಂದ ಮುಂದೆ ಅನುಜರೊಡನೆ ಕೃಪಾಚಾರ್ಯರ ಬಳಿಗೆ ಹೋದನು. ಕೃಪರಿಗೂ



ಅಭಿವಾದನವನ್ನೂ, ಪ್ರದಕ್ಷಿಣನಮಸ್ಕಾರಗಳನ್ನೂ ಮಾಡಿ ದುರ್ಧರ್ಷತಮರಾದ (ಎದುರಿಸಲು ಅತ್ಯಂತಾಸಾಧ್ಯರಾದ) ಕೃಪರನ್ನು ಕುರಿತು ವಕ್ತಾರರಲ್ಲಿ ಶ್ರೇಷ್ಠನಾದ ಯುಧಿಷ್ಠಿರನು ಹೇಳಿದನು :

“ಗುರುದೇವ! ತಮ್ಮ ಮೇಲೆ ಯಾವ ವಿಧವಾದ ದ್ವೇಷಭಾವವೂ

ಇಲ್ಲದೆ ಕಲ್ಮಷರಹಿತನಾಗಿ ಅನಿವಾರ್ಯಕಾರಣದಿಂದ ನಿಮ್ಮೊಡನೆ ನಾನು ಯುದ್ಧಮಾಡುತ್ತೇನೆ. ಇದಕ್ಕಾಗಿ ತಮ್ಮ ಅನುಮತಿಯನ್ನು ಪ್ರಾರ್ಥಿಸಲು ಬಂದಿರುತ್ತೇನೆ. ಪಾಪರಹಿತರೇ! ತಮ್ಮಿಂದ ಅನುಜ್ಞಾತನಾದ ನಾನು ಶತ್ರುಗಳನ್ನು ಜಯಿಸಬಲ್ಲೆನು."

ಭೀಷ್ಮ-ದ್ರೋಣರು ಹೇಳಿದುದನ್ನೇ ಕೃಪರೂ ಹೇಳಿದರು. "ಶತ್ರು ಗಳೊಡನೆ ಯುದ್ಧಮಾಡಲು ನಿಶ್ಚಯಿಸಿರುವ ನೀನು ಯುದ್ಧಮಾಡಲು ಅನುಜ್ಞೆಯನ್ನು ಪಡೆದುಕೊಳ್ಳುವುದಕ್ಕೋಸುಗ ನನ್ನ ಸಮೀಪಕ್ಕೆ ಬಾರದಿದ್ದರೆ ಸರ್ವಥಾ ನಿನ್ನ ಪರಾಭವಕ್ಕಾಗಿ ನಾನು ಶಾಪಕೊಡುತ್ತಿದ್ದೆನು. 'ಮನುಷ್ಯನು ಯಾವಾಗಲೂ ಹಣಕ್ಕೆ ದಾಸನಾಗಿಬಿಡುತ್ತಾನೆ. ಆದರೆ ಹಣವು ಮಾತ್ರ ಯಾವೊಬ್ಬನಿಗೂ ದಾಸನಾಗಿರುವುದಿಲ್ಲ'–ಹೀಗೆ ಹೇಳುವ ಹಿರಿಯರ ಮಾತು ಸತ್ಯವಾದುದು. ಈ ಅರ್ಥದಿಂದಲೇ ನಾನು ಕೌರವರಿಂದ ಬಂಧಿತನಾಗಿರು ತ್ತೇನೆ. ಹಣದಿಂದವರು ನನ್ನನ್ನು ಕಟ್ಟಿಹಾಕಿಬಿಟ್ಟಿದ್ದಾರೆ. ಆದುದರಿಂದ ನಾನು ಅವರ ಸಲುವಾಗಿ ಯುದ್ಧಮಾಡುವುದು ಕರ್ತವ್ಯ. ಇದು ನನ್ನ ನಿಶ್ಚಯವಾಗಿದೆ. ಈ ಕಾರಣದಿಂದಲೇ ನಾನು ಧೈರ್ಯ-ಸ್ಥೈರ್ಯಗಳೇ ಇಲ್ಲದ ನಪುಂಸಕನಂತೆ ನಿನ್ನೊಡನೆ ಮಾತನಾಡುತ್ತಿದ್ದೇನೆ. ಈ ಸಮಯದಲ್ಲಿ ನಿನ್ನೊಡನೆ ಕೂಡಿಕೊಂಡು ಯುದ್ಧಮಾಡುವುದಂತೂ ಸಾಧ್ಯವಾಗುವುದಿಲ್ಲ. ಆದುದರಿಂದ ಯುದ್ಧಮೂಲಕವಾದ ಸಹಾಯವೊಂದನ್ನು ಬಿಟ್ಟು ಮತ್ತೇನನ್ನಾದರೂ ಕೇಳು. ನೀನು ನನ್ನಿಂದ ಏನನ್ನು ಅಪೇಕ್ಷಿಸಿರುವೆ?"

"ಹಂತ! ಈ ಕಾರಣದಿಂದಲೇ ನಾನು ತಮ್ಮನ್ನು ಪ್ರಶ್ನಿಸುವವನಿದ್ದೇನೆ. ನನ್ನ ಮಾತನ್ನು ದಯಮಾಡಿ ಕೇಳಿರಿ."

ಹೀಗೆಂಬುದಾಗಿ ಕೃಪರೊಡನೆ ಹೇಳಿದ ಯುಧಿಷ್ಠಿರನು ಬಹುವ್ಯಥಿತ ನಾಗಿ ಸ್ಥೈರ್ಯವನ್ನು ಕಳೆದುಕೊಂಡವನಾಗಿ ಯಾವ ಒಂದು ಮಾತನ್ನೂ ಆಡದೆಯೇ ನಿಂತುಬಿಟ್ಟನು.

ಯಾವ ಮಾತನ್ನೂ ಆಡದೇ ಮೌನಧರಿಸಿ ನಿಂತಿದ್ದ ಯುಧಿಷ್ಠಿರನ ಮುಖಲಕ್ಷಣದಿಂದಲೇ ಅವನು ಏನು ಹೇಳಬೇಕೆಂದಿದ್ದಾನೆಂಬುದನ್ನು ಕೃಪರು ಗ್ರಹಿಸಿ ಯುಧಿಷ್ಠಿರನಿಗೆ ಹೇಳಿದರು : "ಮಹೀಪಾಲ! ನಾನು ಯುದ್ಧ

ದಲ್ಲಿ ಅವಧ್ಯನು. ನನ್ನನ್ನು ಯಾರೂ ಸಂಹಾರಮಾಡಲಾರರು. ಆದರೆ ಇದ ರಿಂದ ನೀನು ಧೃತಿಗೆಡಬೇಕಾಗಿಲ್ಲ. ನೀನು ಯುದ್ಧಮಾಡು. ಜಯಗಳಿಸು.

ನನ್ನೊಡನೆ ಯುದ್ಧಮಾಡಲು ಅನುಮತಿಯನ್ನು ಪ್ರಾರ್ಥಿಸಲು ನೀನು ಬಂದೆಯಾದ ಕಾರಣ ನಾನು ನಿನ್ನ ವಿಷಯದಲ್ಲಿ ಸುಪ್ರೀತನಾಗಿದ್ದೇನೆ. ಪ್ರತಿ ನಿತ್ಯವೂ ಪ್ರಾತಃಕಾಲದಲ್ಲಿ ಎದ್ದೊಡನೆಯೇ ನಿನ್ನ ವಿಜಯವನ್ನೇ ಕೋರುತ್ತೇನೆ. ಈ ಸತ್ಯವಚನವನ್ನು ನಾನು ನಿನ್ನೊಡನೆ ಹೇಳುತ್ತಿದ್ದೇನೆ."

ಧೃತರಾಷ್ಟ್ರಮಹಾರಾಜ! ಕೃಪರು ಹೇಳಿದ ಮಾತನ್ನು ಕೇಳಿ ಅವರನ್ನು ಯಥೋಚಿತವಾಗಿ ಗೌರವಿಸಿ ಮತ್ತು ಅವರಿಂದ ಅನುಮತಿಯನ್ನು ಪಡೆದುಕೊಂಡ ಯುಧಿಷ್ಠಿರನು ತನ್ನ ಅನುಜರೊಡನೆ ಮದ್ರರಾಜನಾದ ಶಲ್ಯನ ಬಳಿಗೆ ಧಾವಿಸಿದನು. ಶಲ್ಯನನ್ನು ಸಂಧಿಸಿ ಅವನಿಗೆ ಅಭಿವಾದನಮಾಡಿ ಅನಂತರ ಪ್ರದಕ್ಷಿಣೆಯನ್ನೂ ಮಾಡಿ ದುರ್ಧರ್ಷನಾದ ಶಲ್ಯನನ್ನು ಕುರಿತು ತನಗೆ ಶ್ರೇಯಸ್ಸನ್ನುಂಟುಮಾಡತಕ್ಕ ಈ ಮಾತನ್ನು ಧರ್ಮಜನು ಹೇಳಿದನು :

"ದುರ್ಧರ್ಷನೇ! ನಿನ್ನ ಮೇಲೆ ಯಾವ ವಿಧವಾದ ಕ್ರೋಧವೂ ಇಲ್ಲದೇ ವಿಗತಕಲ್ಮಷನಾಗಿ ನಾನು ಅನಿವಾರ್ಯಕಾರಣದಿಂದ ನಿನ್ನೊಡನೆ ಯುದ್ಧಮಾಡುತ್ತೇನೆ. ಇದಕ್ಕಾಗಿ ನಿನ್ನ ಅನುಮತಿಯನ್ನು ಪ್ರಾರ್ಥಿಸುತ್ತೇನೆ. ನಿನ್ನಿಂದ ಅನುಮತಿಯನ್ನು ಪಡೆದ ನಾನು ಯುದ್ಧದಲ್ಲಿ ಶತ್ರುಗಳನ್ನು ಪರಾ ಜಯಗೊಳಿಸುವೆನು."

"ಮಹಾರಾಜ! ಯುದ್ಧಮಾಡಬೇಕೆಂದು ನಿಶ್ಚಯಿಸಿದ ನೀನು ನನ್ನೊ ಡನೆ ಯುದ್ಧಮಾಡಲು ಅನುಮತಿಯನ್ನು ಪಡೆದುಕೊಳ್ಳಲು ನನ್ನ ಬಳಿಗೆ ಬಾರದಿದ್ದರೆ ಯುದ್ಧದಲ್ಲಿ ನಿನಗೆ ಸೋಲುಂಟಾಗಲೆಂದು ನಿನ್ನನ್ನು ಶಪಿಸಿಬಿಡು ತ್ತಿದ್ದೆನು. ನೀನು ಈ ಸಮಯದಲ್ಲಿ ಬಂದಿದ್ದರಿಂದ ನಾನು ಸಂತುಷ್ಟನಾಗಿ ದ್ದೇನೆ. ನಿನ್ನಿಂದ ನಾನು ಸಮ್ಮಾನಿತನೂ ಆಗಿದ್ದೇನೆ. ನಿನ್ನ ಮನಸ್ಸಿನಲ್ಲಿ ಯಾವ ಆಶಯವಿದೆಯೋ ಅದು ನಿನಗೆ ಲಭ್ಯವಾಗಲಿ. ನನ್ನೊಡನೆ ಯುದ್ಧ ಮಾಡಲು ನಿನಗೆ ಅನುಮತಿಯನ್ನು ನೀಡಿದ್ದೇನೆ. ಯುದ್ಧಮಾಡು. ವಿಜಯವನ್ನು ಹೊಂದುವೆ. ವೀರ ಯುಧಿಷ್ಠಿರ! ಇನ್ನೂ ಏನಾದರೂ ಕೇಳು.

ನಿನ್ನ ಮನೋರಥವು ಯಾವುದರಿಂದ ಪೂರ್ಣವಾಗುತ್ತದೆಯೆಂಬುದನ್ನು ಹೇಳು. ನಾನು ನಿನಗೇನು ಕೊಡಲಿ? ಈ ಪರಿಸ್ಥಿತಿಯಲ್ಲಿ ನಾನು ನಿನ್ನೊಡನೆ ಸೇರಿಕೊಂಡು ನಿನ್ನ ಶತ್ರುಗಳೊಡನೆ ಯುದ್ಧಮಾಡಲಾರೆನು. ಆದುದರಿಂದ ನಿನ್ನ ಪಕ್ಷಕ್ಕೆ ಬಂದು ಯುದ್ಧಮಾಡುವುದೊಂದನ್ನು ಬಿಟ್ಟು ಮತ್ತೇನನ್ನು ಅಪೇಕ್ಷಿಸುವೆಯೆಂಬುದನ್ನು ಹೇಳು.



ನಾನು ನಿನ್ನ ಪಕ್ಷಕ್ಕೆ ಬರಲಾಗದ ಕಾರಣವಿಷ್ಟೆ. ಯಾವ ಮನುಷ್ಯನಾದರೂ ಹಣಕ್ಕೆ ದಾಸನಾಗಿರುತ್ತಾನೆ. ಅರ್ಥವು ಯಾವೊಬ್ಬನಿಗೂ ದಾಸಭಾವದಿಂದಿರುವುದಿಲ್ಲ. ಈ ಮಾತು ಸತ್ಯವಾದುದು. ನಾನು ಈ ಅರ್ಥದ ಕಾರಣದಿಂದಲೇ ಕೌರವರಿಂದ ಬಂಧಿತನಾಗಿದ್ದೇನೆ. ಅವರು ಕೊಟ್ಟ ಹಣವನ್ನು

ಪರಿಗ್ರಹಿಸುತ್ತಿರುವುದರಿಂದಲೇ ನಾನು ಅವರ ದಾಕ್ಷಿಣ್ಯಕ್ಕೆ ಒಳಗಾಗಿದ್ದೇನೆ. ಇಂತಹ ಸಂದಿಗ್ಧಸಮಯದಲ್ಲಂತೂ ಏನನ್ನೂ ಮಾಡುವಂತೆಯೇ ಇಲ್ಲ.

ಆದರೂ ಸಹ ನೀನು ನನ್ನ ತಂಗಿಯ (ಮಾದ್ರಿಯ) ಮಗನಾಗಿರುವುದರಿಂದ ನಿನ್ನ ಮನೋರಥವನ್ನು ನಾನು ಈಡೇರಿಸಿಕೊಡುತ್ತೇನೆ. ಹಣದ ದಾಕ್ಷಿಣ್ಯಕ್ಕೆ ನಾನು ಸಿಕ್ಕಿಬಿದ್ದಿರುವುದರಿಂದಲೇ ವೀರ್ಯ-ಸಾಹಸ-ಸ್ವಾತಂತ್ರ್ಯಗಳೇ ಇಲ್ಲದ ನಪುಂಸಕನಂತೆ ನಾನು ನಿನ್ನೊಡನೆ ಮಾತನಾಡುತ್ತಿದ್ದೇನೆ. ನಾನು ಈ ಹಿಂದೆಯೇ ಹೇಳಿದಂತೆ ನಿನ್ನ ಪಕ್ಷಕ್ಕೆ ಸೇರಿಕೊಂಡು ಯುದ್ಧ ಮಾಡುವುದೊಂದನ್ನು ಬಿಟ್ಟು ಬೇರೆ ಯಾವುದನ್ನು ಇಚ್ಛಿಸುವೆಯೆಂಬುದನ್ನು ಹೇಳು."

"ಮಹಾರಾಜ! ನೀನು ಪ್ರತಿನಿತ್ಯವೂ ನನ್ನ ಉತ್ತಮಹಿತದ ಸಾಧನೆಗಾಗಿ ಆಲೋಚಿಸುತ್ತಿರು. ನಿನ್ನ ಇಚ್ಛೆಯಂತೆ ನೀನು ನನ್ನ ಶತ್ರುಗಳ ಸಲುವಾಗಿಯೇ ಅವರ ಪಕ್ಷದಲ್ಲಿಯೇ ಇದ್ದು ನಮ್ಮೊಡನೆ ಯುದ್ಧಮಾಡು. ಈ ವರವನ್ನು ಮಾತ್ರವೇ ನಾನು ನಿನ್ನಿಂದ ಪಡೆದುಕೊಳ್ಳಲು ಇಚ್ಛಿಸಿರುವೆನು."

"ನೃಪಸತ್ತಮ! ಈ ಸಮಯದಲ್ಲಿ ಕೇವಲ ಸಲಹೆನೀಡುವುದರಿಂದ ಪ್ರಯೋಜನವಾಗುವುದೆಂದು ನಾನು ಭಾವಿಸುವುದಿಲ್ಲ. ನಿನಗೆ ನಾನು ಮತ್ತಾವ ರೀತಿಯಲ್ಲಿ–ಅದೂ ಈ ಸಂದಿಗ್ಧಸಮಯದಲ್ಲಿ–ಸಹಾಯಮಾಡಲಿ ಎಂಬುದನ್ನು ಹೇಳು. ನಾನು ಕೌರವರಿಂದ ಹಣವನ್ನು ಯಥೇಚ್ಛವಾಗಿ ಪಡೆದು ಅವರ ದಾಕ್ಷಿಣ್ಯಕ್ಕೆ ಕಟ್ಟುಬಿದ್ದಿರುವುದರಿಂದ ನಿಶ್ಚಯವಾಗಿಯೂ ನಾನು ನಿನ್ನ ಶತ್ರುಪಕ್ಷದಲ್ಲಿಯೇ ಇದ್ದು ನಿಮ್ಮ ಮೇಲೆ ಯುದ್ಧಮಾಡಲೇ ಬೇಕಾಗಿದೆ."

ಶಲ್ಯನು ಒತ್ತಾಯಮಾಡಲಾಗಿ ಯುಧಿಷ್ಠಿರನು ಹಿಂದಿನ ಪ್ರಕರಣವನ್ನು ಜ್ಞಾಪಿಸಿಕೊಂಡು ಹೇಳಿದನು :

**ಸ ಏವ ಮೇ ವರಃ ಶಲ್ಯ ಉದ್ಯೋಗೇ ಯಸ್ತ್ವಯಾ ಕೃತಃ ।**
**ಸೂತಪುತ್ರಸ್ಯ ಸಂಗ್ರಾಮೇ ಕಾರ್ಯಸ್ತೇಜೋವಧಸ್ತ್ವಯಾ ॥೮೬॥**

"ಯುದ್ಧದ ಉದ್ಯೋಗವು (ಸಿದ್ಧತೆಯು) ನಡೆಯುತ್ತಿದ್ದಾಗ ನೀನು

ನನಗೆ ಯಾವ ವರವನ್ನು ದಯಪಾಲಿಸಿದ್ದೆಯೋ ಆ ವರವನ್ನೇ ನೀನೀಗ ಕಾರ್ಯಗತಮಾಡು. ಆ ವರದ ಪ್ರಕಾರವಾಗಿ ಯುದ್ಧದಲ್ಲಿ ನೀನು ಸೂತ ಪುತ್ರನಾದ ಕರ್ಣನ ತೇಜೋವಧೆಯನ್ನು ಮಾಡಬೇಕು."

"ಕುಂತೀನಂದನ! ನಿನ್ನ ಈ ಮನೋರಥವು ನೀನು ಇಚ್ಛಿಸಿರುವಂತೆಯೇ ಅವಶ್ಯವಾಗಿ ಪೂರ್ಣವಾಗುತ್ತದೆ. ಹೋಗು ; ನಿಶ್ಚಿಂತನಾಗಿ ಯುದ್ಧಮಾಡು. ನಿನ್ನ ಮಾತನ್ನು ನಡೆಸಿಕೊಡುತ್ತೇನೆಂದು ಪ್ರತಿಜ್ಞೆಮಾಡಿ ಹೇಳುತ್ತೇನೆ."

ಸಂಜಯನು ಧೃತರಾಷ್ಟ್ರನಿಗೆ ಹೇಳುತ್ತಾನೆ :

"ಅನಂತರ ಕುಂತಿಯ ಪುತ್ರನಾದ ಯುಧಿಷ್ಠಿರನು ತನ್ನ ಸೋದರ ಮಾವನಾದ ಮದ್ರೇಶ್ವರನಾದ ಶಲ್ಯನನ್ನು ಯಥಾಯೋಗ್ಯವಾಗಿ ಗೌರವಿಸಿ ಅವನಿಂದ ಅನುಮತಿಯನ್ನು ಪಡೆದವನಾಗಿ ತಮ್ಮಂದಿರಿಂದ ಪರಿವೃತನಾಗಿ ಶತ್ರುಸೈನ್ಯದಿಂದ ಹೊರಬಿದ್ದನು.

ಮಹಾರಾಜ! ಆದರೆ ವಾಸುದೇವನೊಬ್ಬನು ಮಾತ್ರ ಅದೇ ಯುದ್ಧ ಭೂಮಿಯಲ್ಲಿದ್ದ ಕರ್ಣನ ಬಳಿಗೆ ಹೋದನು. ಶ್ರೀಕೃಷ್ಣನು ಪಾಂಡವರ ಹಿತಾರ್ಥವಾಗಿ ಕರ್ಣನನ್ನು ಕುರಿತು ಹೇಳಿದನು :

**ಶ್ರುತಂ ಮೇ ಕರ್ಣ ಭೀಷ್ಮಸ್ಯ ದ್ವೇಷಾತ್ಕಿಲ ನ ಯೋತ್ಸ್ಯಸೇ ।**
**ಅಸ್ಮಾನ್ವರಯ ರಾಧೇಯ ಯಾವದ್ಭೀಷ್ಮೋ ನ ಹನ್ಯತೇ ॥೯೦॥**

"ಕರ್ಣ! ಭೀಷ್ಮನ ಮೇಲಿನ ದ್ವೇಷದಿಂದಾಗಿ ಭೀಷ್ಮನ ಅವಸಾನ ಪರ್ಯಂತವಾಗಿ ನೀನು ಯುದ್ಧಮಾಡುವುದಿಲ್ಲವೆಂಬ ವಿಷಯವನ್ನು ನಾನು ಕೇಳಿದೆನು. ಭೀಷ್ಮನ ಸಂಹಾರವಾಗುವವರೆಗೂ ನೀನು ನಮ್ಮ ಪಕ್ಷವನ್ನಾದರೂ ಗ್ರಹಣಮಾಡಬಹುದಲ್ಲವೇ? (ನಮ್ಮ ಪಕ್ಷಕ್ಕಾದರೂ ಸೇರಬಹುದಲ್ಲವೇ? )

**ಹತೇ ತು ಭೀಷ್ಮೇ ರಾಧೇಯ ಪುನರೇಷ್ಯಸಿ ಸಂಯುಗಮ್ ।**
**ಧಾರ್ತರಾಷ್ಟ್ರಸ್ಯ ಸಾಹಾಯ್ಯಂ ಯದಿ ಪಶ್ಯಸಿ ಚೇತ್ಸಮಮ್ ॥೯೧॥**

ರಾಧೇಯ! ನಿನ್ನನ್ನು ದ್ವೇಷಿಸುವ ಭೀಷ್ಮನ ಸಂಹಾರವಾದನಂತರ

ದುರ್ಯೋಧನನಿಗೆ ಸಹಾಯವನ್ನು ಮಾಡುವುದು ಉಚಿತವೆಂದು ಭಾವಿಸುವ ಪಕ್ಷದಲ್ಲಿ ಯುದ್ಧಮಾಡಲು ಪುನಃ ನೀನು ದುರ್ಯೋಧನನ ಪಕ್ಷಕ್ಕೇ ಬಂದುಬಿಡಬಹುದು."

**ನ ವಿಪ್ರಿಯಂ ಕರಿಷ್ಯಾಮಿ ಧಾರ್ತರಾಷ್ಟ್ರಸ್ಯ ಕೇಶವ ।**
**ತ್ಯಕ್ತಪ್ರಾಣಂ ಹಿ ಮಾಂ ವಿದ್ಧಿ ದುರ್ಯೋಧನಹಿತೈಷಿಣಮ್ ॥೯೨॥**

"ಕೇಶವ! ನಾನು ದುರ್ಯೋಧನನ ಹಿತೈಷಿಯೆಂಬುದನ್ನು ಚೆನ್ನಾಗಿ ತಿಳಿ. ಅವನಿಗಾಗಿಯೇ ನಾನು ನನ್ನ ಪ್ರಾಣಗಳನ್ನೂ ಸಹ ಮುಡುಪಾಗಿಟ್ಟು ಕುಳಿತಿದ್ದೇನೆ. ದುರ್ಯೋಧನನಿಗೆ ಯಾವುದೇ ಕಾರಣದಿಂದಲೂ ಅಪ್ರಿಯ ವಾಗುವ ಕಾರ್ಯವನ್ನು ನಾನು ಮಾಡುವುದಿಲ್ಲ."

ಧೃತರಾಷ್ಟ್ರಮಹಾರಾಜ! ಶ್ರೀಕೃಷ್ಣನು ಕರ್ಣನ ಮಾತನ್ನು ಕೇಳಿ ಮುಂದೆ ಅವನೊಡನೆ ಹೆಚ್ಚು ಮಾತನಾಡದೇ ಯುಧಿಷ್ಠಿರಪ್ರಮುಖರಾದ ಪಾಂಡವರೊಡನೆ ತಾನೂ ಸೇರಿಕೊಂಡು ಹಿಂದಿರುಗಿದನು. ಅನಂತರ ಯುಧಿಷ್ಠಿರನು ತನ್ನ ಸೈನ್ಯದ ಮಧ್ಯದಲ್ಲಿ ನಿಂತು ಹೀಗೆಂದು ಉದ್ಘೋಷಿಸಿದನು:

**ಯೋಽಸ್ಮಾನ್ವೃಣೋತಿ ತಮಹಂ ವರಯೇ ಸಾಹ್ಯಕಾರಣಾತ್ ॥೯೪॥**

"ಯಾವನಾದರೂ ವೀರನು ಶತ್ರುಪಕ್ಷವನ್ನು ತ್ಯಜಿಸಿ ನಮ್ಮ ಪಕ್ಷಕ್ಕೆ ಸೇರಲು ಇಚ್ಛಿಸುವುದೇ ಆದರೆ ಅಂತಹವನನ್ನು ನಾನೂ ಸಹ ಆದರದಿಂದ ಸ್ವೀಕರಿಸುತ್ತೇನೆ. ಅಥವಾ ಸ್ವಾಗತಿಸುತ್ತೇನೆ."

ಧರ್ಮಜನ ಆ ಘೋಷಣೆಯನ್ನು ಕೇಳಿದೊಡನೆಯೇ ನಿನ್ನ ಮಗನಾದ ಯುಯುತ್ಸುವು ಪಾಂಡವರ ಕಡೆಗೆ ನೋಡುತ್ತಾ ಪ್ರಸನ್ನಚಿತ್ತನಾಗಿ ಕುಂತೀ ಪುತ್ರನಾದ ಯುಧಿಷ್ಠಿರನನ್ನು ಕುರಿತು ಹೇಳಿದನು :

**ಅಹಂ ಯೋತ್ಸ್ಯಾಮಿ ಭವತಃ ಸಂಯುಗೇ ಧೃತರಾಷ್ಟ್ರಜಾನ್ ।**
**ಯುಷ್ಮದರ್ಥಂ ಮಹಾರಾಜ ಯದಿ ಮಾಂ ವೃಣುಷೇಽನಘ ॥೯೬॥**

"ನಿಷ್ಪಾಪನೇ! ನೀನೇನಾದರೂ ನನ್ನನ್ನು ನಿನ್ನ ಪಕ್ಷಕ್ಕೆ ಸೇರಿಸಿಕೊಳ್ಳುವುದೇ ಆದರೆ ಈ ಯುದ್ಧದಲ್ಲಿ ನಾನು ನಿಮ್ಮ ಸಲುವಾಗಿ ಧೃತರಾಷ್ಟ್ರನ ಮಕ್ಕಳೊಡನೆ ಯುದ್ಧಮಾಡುತ್ತೇನೆ."

"ಯುಯುತ್ಸುವೇ! ನಿನ್ನನ್ನು ನಾನು ಪರಿಗ್ರಹಿಸುತ್ತೇನೆ. ಈಗಲೇ ನಮ್ಮ ಪಕ್ಷಕ್ಕೆ ಬಂದುಬಿಡು. ನಾವೆಲ್ಲರೂ ಸೇರಿ ಮೂರ್ಖರಾದ ನಿನ್ನ ಸೋದರರೊಡನೆ ಯುದ್ಧಮಾಡೋಣ. ಈ ಮಾತನ್ನು ನಾವು ಸರ್ವತ್ರ ಹೇಳೋಣ. ನಮ್ಮ ನಾಯಕನಾದ ವಾಸುದೇವನೂ ಸಹ ಇದೇ ಮಾತನ್ನೇ ಹೇಳುತ್ತಿದ್ದಾನೆ. ಮಹಾಬಾಹುವೇ! ನಿನ್ನನ್ನು ನಾನು ಆದರದಿಂದ ಬರಮಾಡಿ ಕೊಳ್ಳುತ್ತೇನೆ. ನಮಗಾಗಿ ನೀನು ಯುದ್ಧಮಾಡು. ನೀನೊಬ್ಬನು ನಮ್ಮ ಪಕ್ಷಕ್ಕೆ ಬರಲು ಇಚ್ಛಿಸಿರುವುದನ್ನು ನೋಡಿದರೆ ಧೃತರಾಷ್ಟ್ರನ ವಂಶವು ನಿನ್ನೊಬ್ಬ ನಿಂದಲೇ ಬೆಳೆಯುವುದೆಂದೂ ಮತ್ತು ಧೃತರಾಷ್ಟ್ರನಿಗೆ ಪಿಂಡೋದಕಕ್ರಿಯೆ ಗಳನ್ನು ಮಾಡುವವನು ನೀನೇ ಎಂದೂ ಕಾಣುತ್ತದೆ. (ನಮ್ಮನ್ನೆದುರಿಸಿ ನಿಂತಿ ರುವ ಧೃತರಾಷ್ಟ್ರನ ಉಳಿದ ಮಕ್ಕಳೆಲ್ಲರೂ ವಿನಾಶಹೊಂದುವುದು ನಿಶ್ಚಯ.) ಮಹಾದ್ಯುತಿಮಂತನೇ! ನಿನ್ನನ್ನು ಆದರಪೂರ್ವಕವಾಗಿ ಸ್ವಾಗತಿಸುತ್ತಿರುವ ನಮ್ಮನ್ನು ನೀನೂ ಸಹ ಆದರಪೂರ್ವಕವಾಗಿ ಬಂದು ಸೇರುವವನಾಗು. ಮಹಾಕೋಪಿಷ್ಠನಾದ ದುರ್ಬುದ್ಧಿಯವನಾದ ದುರ್ಯೋಧನನು ಖಂಡಿತ ವಾಗಿಯೂ ಜೀವಂತನಾಗಿ ಉಳಿಯಲಾರನು."

ಧೃತರಾಷ್ಟ್ರಮಹಾರಾಜ! ನಿನ್ನ ಮಗನಾದ ಯುಯುತ್ಸುವು ಯುಧಿಷ್ಠಿರನಾಡಿದ ಆದರದ ಮಾತನ್ನು ಕೇಳಿ ನಿನ್ನ ಎಲ್ಲ ಮಕ್ಕಳನ್ನೂ ಪರಿತ್ಯಜಿಸಿ, ದುಂದುಭಿಯ ಶಬ್ದವು ಮೊಳಗುತ್ತಿರಲಾಗಿ ಪಾಂಡುಪುತ್ರನಾದ ಯುಧಿಷ್ಠಿರನ ಸೈನ್ಯಕ್ಕೆ ಹೋಗಿ ಸೇರಿಕೊಂಡನು. ಅನಂತರ ಸಾನುಜನಾದ ಯುಧಿಷ್ಠಿರನು ಪರಮಹೃಷ್ಟನಾಗಿ ಪ್ರಕಾಶಮಾನವಾದ, ಚಿನ್ನದಂತೆ ಥಳಥಳಿ ಸುತ್ತಿದ್ದ ಕವಚವನ್ನು ಪುನಃ ತೊಟ್ಟುಕೊಂಡನು. ಪುರುಷರ್ಷಭರಾದ ಆ ಎಲ್ಲ ಪಾಂಡವವೀರರೂ ಸಹ ತಮ್ಮ ತಮ್ಮ ರಥಗಳಲ್ಲಿ ಹತ್ತಿಕುಳಿತರು. ಅನಂತರ ಶತ್ರುಪಕ್ಷದ ವ್ಯೂಹಕ್ಕೆ ಪ್ರತಿವ್ಯೂಹವನ್ನು ಹಿಂದಿನಂತೆಯೇ ಪುನಃ ಅವರು ರಚಿಸಿದರು. ಆ ಸಮಯದಲ್ಲಿ ಯೋಧರು ನೂರಾರು ದುಂದುಭಿಗಳನ್ನೂ ಮತ್ತು ನಗಾರಿಗಳನ್ನೂ ಬಾರಿಸಿದುದಲ್ಲದೇ ವಿಧ-ವಿಧವಾಗಿ ಸಿಂಹನಾದಗಳನ್ನೂ ಮಾಡಿದರು. ಧೃಷ್ಟದ್ಯುಮ್ನಾದಿ ಎಲ್ಲ ರಾಜರೂ, ಪುರುಷವ್ಯಾಘ್ರರಾದ ಪಾಂಡವರು ಪುನಃ ರಥದಲ್ಲಿ ಕುಳಿತುದನ್ನು ನೋಡಿ ಸಂತೋಷಭರಿತರಾದರು. ಮಾನನೀಯಪುರುಷರನ್ನು ಸಮ್ಮಾನಿಸುವ

ಸ್ವಭಾವವುಳ್ಳ ಪಾಂಡವರಿಗೆ ಲಭಿಸಿದ ಗೌರವವನ್ನು ಕಂಡು ಅಲ್ಲಿ ನೆರೆದಿದ್ದ ಉಭಯಪಕ್ಷಗಳ ಭೂಪಾಲರೆಲ್ಲರೂ ಪಾಂಡವರನ್ನು ಪ್ರಶಂಸಿಸತೊಡಗಿದರು. ಮಹಾತ್ಮರಾದ ಪಾಂಡವರ ಸೌಹಾರ್ದ, ಕರುಣೆ, ಕಾಲ-ಕಾಲಕ್ಕೆ ಮಾಡಬೇಕಾದ ಕರ್ತವ್ಯದಲ್ಲಿ ಅನ್ಯೂನತೆ, ಜ್ಞಾತಿಗಳ ಮೇಲೆ ದಯಾಭಾವ–ಇವುಗಳನ್ನು ಕುರಿತು ಪರಸ್ಪರವಾಗಿ ಹೇಳಿಕೊಳ್ಳುತ್ತಿದ್ದರು. 'ಸಾಧು' 'ಸಾಧು' ಎಂಬ ಪ್ರಶಂಸೆಯ ಘೋಷಗಳು ನಾಲ್ಕು ದಿಕ್ಕುಗಳಲ್ಲಿಯೂ ಮೊಳಗಿದುವು. ಕೀರ್ತಿಮಂತರಾದ ಪಾಂಡವರಿಗೆ ಸಂಬಂಧಿಸಿದ ಪುಣ್ಯತಮವಾದ, ಸ್ತುತಿಪೂರ್ಣವಾದ ಮಾತುಗಳು ಕೇಳುವವರ ಮನಸ್ಸನ್ನೂ ಮತ್ತು ಹೃದಯವನ್ನೂ ಹರ್ಷಗೊಳಿಸುತ್ತಿದ್ದುವು. ಅಲ್ಲಿಗೆ ಆಗಮಿಸಿದ್ದ ಮ್ಲೇಚ್ಛರೂ ಮತ್ತು ಆರ್ಯರೂ ಧರ್ಮಾತ್ಮರಾದ ಪಾಂಡವರ ಸದ್ವೃತ್ತವನ್ನು ಕಣ್ಣಾರೆ ನೋಡಿದರು ಮತ್ತು ಅವರ ಸಚ್ಚರಿತಗಳನ್ನೂ ಕೇಳಿದರು. ಅಂತಹ ಮಹಾತ್ಮರ ದರ್ಶನವಾದುದಕ್ಕಾಗಿ ಅವರು ಆನಂದತುಂದಿಲರಾಗಿ ಗದ್ಗದಕಂಠರಾಗಿ ಅತ್ತುಬಿಟ್ಟರು. ಅನಂತರ ಪರಮಹೃಷ್ಟರಾದ, ಮನನಶೀಲರಾದ ನೂರಾರು ಯೋಧರು ದೊಡ್ಡ ದೊಡ್ಡ ಭೇರಿಗಳನ್ನು ಬಾರಿಸಿದರು. ಹಸುವಿನ ಹಾಲಿನ ಬಣ್ಣದಿಂದ ಪ್ರಕಾಶಿಸುತ್ತಿದ್ದ ಸಾವಿರಾರು ಶಂಖಗಳನ್ನೂದಿದರು."

ಳ೩ನೆಯ ಅಧ್ಯಾಯವು ಮುಗಿಯಿತು.

೪೪ನೆಯ ಅಧ್ಯಾಯ ಭೀಷ್ಮವಧಪರ್ವ (ಮುಂದುವರಿದಿದೆ.)

## ಕೌರವ-ಪಾಂಡವರಿಗೆ ಮೊದಲನೆಯ ದಿವಸದ ಯುದ್ಧಾರಂಭ

ಧೃತರಾಷ್ಟ್ರನು ಸಂಜಯನನ್ನು ಪ್ರಶ್ನಿಸುತ್ತಾನೆ :

"ಸಂಜಯ! ಈ ಪ್ರಕಾರವಾಗಿ ನನ್ನ ಮಕ್ಕಳ ಮತ್ತು ಪಾಂಡವರ ಸೈನ್ಯಗಳು ವ್ಯೂಹ-ಪ್ರತಿವ್ಯೂಹಕ್ರಮದಲ್ಲಿ ಯುದ್ಧಕ್ಕೆ ಸಜ್ಜಾಗಿರಲಾಗಿ ಯಾರ ಪಕ್ಷದವರು ಮೊದಲು ಶಸ್ತ್ರಪ್ರಯೋಗಮಾಡಿದರು? ಮೊದಲು ಬಾಣವನ್ನು ಕೌರವರು ಬಿಟ್ಟರೋ? ಪಾಂಡವರು ಬಿಟ್ಟರೋ?–ಅದನ್ನು ಹೇಳು."

"ಮಹಾರಾಜ! ನಿನ್ನ ಮಗನಾದ ದುರ್ಯೋಧನನು ತನ್ನ ಅನುಜ

ರೊಡನೆ ಸೇನಾಪತಿಯಾದ ಭೀಷ್ಮನನ್ನು ಮುಂದೆಮಾಡಿಕೊಂಡು ಸೇನೆಯೊಡನೆ ಹೊರಟನು.

ಅದೇ ರೀತಿಯಲ್ಲಿ ಭೀಮಸೇನಪುರಃಸರರಾದ ಎಲ್ಲ ಪಾಂಡವರೂ ಹೃಷ್ಟವಾದ ಮನಸ್ಸಿನಿಂದ ಕೂಡಿದವರಾಗಿ ಕೌರವಸೇನಾಪತಿಯಾದ ಭೀಷ್ಮನೊಡನೆ ಯುದ್ಧಮಾಡುವ ಆಶಯದಿಂದ ಮುಂದೆ ಹೊರಟರು. ಎರಡು ಸೇನೆಗಳೂ ಪರಸ್ಪರ ಸಂಧಿಸುತ್ತಿರಲಾಗಿ, ಎರಡು ಸೇನೆಯಲ್ಲಿಯೂ ಸಿಂಹನಾದಗಳೂ, ಕಿಲ-ಕಿಲಶಬ್ದವೂ, ಕ್ರಕಚಧ್ವನಿಯೂ, ಕೊಂಬುಗಳ ಧ್ವನಿಯೂ, ಭೇರೀ-ಮೃದಂಗ ಮುಂತಾದುವುಗಳ ಶಬ್ದವೂ, ಆ ವಾದ್ಯಘೋಷಗಳ ಜೊತೆಗೆ ಕುದುರೆಗಳ ಹೇಷಾರವವೂ, ಆನೆಗಳ ಘೀಂಕಾರಶಬ್ದವೂ ಕೇಳಿಬರುತ್ತಿದ್ದಿತು. ಅನಂತರ ಪಾಂಡವರು ನಮ್ಮ ಮೇಲೆ ಬೀಳಲು ಬಂದರು. ನಾವೂ ಸಹ ಘೋರವಾಗಿ ಗರ್ಜನೆಮಾಡುತ್ತಾ ಅವರ ಮೇಲೆ ನುಗ್ಗಿದೆವು. ಆ ಎರಡು ಪಕ್ಷಗಳ ಸೈನ್ಯಗಳೂ ಬಿರುಗಾಳಿಯಿಂದ ಪ್ರಕಂಪಿತವಾದ ಅರಣ್ಯಗಳಂತೆ– ಶಂಖ-ಮೃದಂಗಾದಿಗಳ ಶಬ್ದಗಳಿಂದ ಪ್ರಕಂಪಿಸಿದುವು. ಸುಂಟರಗಾಳಿಯಿಂದ ಅರಣ್ಯಗಳು (ಅರಣ್ಯದ ವೃಕ್ಷಗಳು) ಜೋರಾಗಿ ಅಳ್ಳಾಡುವಂತೆ ಶಂಖ-ಮೃದಂಗ ಶಬ್ದಗಳಿಂದ ಆ ಮಹಾಸೇನೆಯು ಪ್ರಕಂಪಿಸಿತು. ರಾಜರಿಂದಲೂ, ಆನೆಗಳಿಂದಲೂ, ಕುದುರೆಗಳಿಂದಲೂ, ರಥಗಳಿಂದಲೂ, ಸಮೃದ್ಧವಾಗಿದ್ದ ಎರಡು ಪಕ್ಷದ ಸೈನ್ಯಗಳು ಅಮಂಗಲಮುಹೂರ್ತದಲ್ಲಿ ಪರಸ್ಪರ ಬಂದು ಸೇರಲಾಗಿ ಗಾಳಿಯಿಂದ ಎಬ್ಬಿಸಲ್ಪಟ್ಟ ದೊಡ್ಡ-ದೊಡ್ಡ ಅಲೆಗಳುಳ್ಳ ಸಮುದ್ರಗಳ ಘೋಷದಂತೆ ಸೈನ್ಯಗಳ ಕೋಲಾಹಲಶಬ್ದವಾಯಿತು. ರೋಮಾಂಚಕಾರಿಯಾದ ಆ ಕೋಲಾಹಲಶಬ್ದವು ಸರ್ವತ್ರ ಹುಟ್ಟಿಕೊಳ್ಳಲಾಗಿ ಮಹಾಬಾಹುವಾದ ಭೀಮಸೇನನು ಗೂಳಿಯಂತೆಯೇ ಗುಟುರುಹಾಕಿದನು. ಭೀಮಸೇನನ ಈ ಗರ್ಜನೆಯು ಶಂಖ-ದುಂದುಭಿಗಳ ಘೋಷವನ್ನೂ, ಆನೆಗಳ ಘೀಂಕಾರವನ್ನೂ, ಸೈನಿಕರ ಸಿಂಹನಾದವನ್ನೂ ಕಡೆಗಾಣಿಸಿ (ಆ ಎಲ್ಲ ಶಬ್ದಗಳನ್ನೂ ಮೀರಿಸಿ) ಸರ್ವತ್ರ ಕೇಳಿಬಂದಿತು. ಆ ಎಲ್ಲ ಶಬ್ದಗಳೂ ಭೀಮನ ಗರ್ಜನೆಯಿಂದ ಮುಚ್ಚಿಯೇ ಹೋದುವು. ಎರಡೂ ಸೈನ್ಯಗಳಲ್ಲಿದ್ದ ಸಾವಿರಾರು ಕುದುರೆಗಳು ಗಟ್ಟಿಯಾಗಿ ಕೆನೆಯುತ್ತಿದ್ದುವು. ಆದರೆ ಈ ಎಲ್ಲ ಶಬ್ದಗಳನ್ನೂ ಸಹ, ಗೂಳಿಯಂತೆ ಗರ್ಜನೆಮಾಡುತ್ತಿದ್ದ ಭೀಮನ ಘೋರ

ನಿನಾದವು ಕೇಳದಂತೆ ಮಾಡಿಬಿಟ್ಟಿತು. ಸೈನ್ಯದಲ್ಲಾಗುತ್ತಿದ್ದ ಕೋಲಾಹಲಶಬ್ದ ವಾಗಲೀ, ಭೇರೀ-ಮೃದಂಗಾದಿಗಳ ಶಬ್ದವಾಗಲೀ, ಆನೆಗಳ ಘೀಂಕಾರ ವಾಗಲೀ, ಕುದುರೆಗಳ ಹೇಷಾರವವಾಗಲೀ ಕೇಳಿಸದೇ ಭೀಮನ ಗರ್ಜನೆಯು ಮಾತ್ರವೇ ಎಲ್ಲರಿಗೂ ಸ್ಪಷ್ಟವಾಗಿ ಕೇಳಿಸುತ್ತಿದ್ದಿತು. ಮೇಘದೋಪಾದಿಯಲ್ಲಿ ಗರ್ಜನೆಮಾಡುತ್ತಿದ್ದ ಆ ಭೀಮನ, ಇಂದ್ರನ ವಜ್ರಾಯುಧಕ್ಕೆ ಸಮಾನವಾದ (ಸಿಡಿಲಿಗೆ ಸಮಾನವಾದ) ಗರ್ಜನೆಯನ್ನು ಕೇಳಿ ನಿನ್ನ ಸೈನಿಕರು ನಡುಗಿಹೋದರು. ಸಿಂಹದ ಗರ್ಜನೆಯನ್ನು ಕೇಳುತ್ತಲೇ ಯಾವ ರೀತಿಯಲ್ಲಿ ಇತರ ಮೃಗಗಳು ಭಯಗೊಳ್ಳುವುವೋ, ಅದೇ ರೀತಿಯಲ್ಲಿ ವೀರನಾದ



ಭೀಮನ ವೀರಗರ್ಜನೆಯಿಂದಾಗಿ ಎಲ್ಲ ವಾಹನಗಳೂ (ಕುದುರೆ-ಆನೆ ಮುಂತಾದುವು) ಭಯಗೊಂಡು ಮಲ-ಮೂತ್ರಗಳನ್ನು ವಿಸರ್ಜನೆಮಾಡಿ ದುವು. ತನ್ನ ಭಯಂಕರವಾದ ರೂಪವನ್ನು ತೋರಿಸುತ್ತಾ, ದೊಡ್ಡದಾದ ಮೇಘವು ಗುಡುಗುವಂತೆ ಗುಡುಗುತ್ತಾ, ನಿನ್ನ ಮಕ್ಕಳನ್ನು ಭಯಪಡಿಸುತ್ತಾ ಭೀಮಸೇನನು ನಮ್ಮ ಸೇನೆಯ ಬಳಿಗೆ ಬಂದನು.

ದುರ್ಯೋಧನನ ಅನುಜರು ಈ ರೀತಿಯಲ್ಲಿ ನಮ್ಮ ಸೈನ್ಯಕ್ಕೆ ಎದು ರಾಗಿ ಬಂದ ಮಹಾಧನುರ್ಧರನಾದ ಭೀಮಸೇನನನ್ನು ಬಾಣಗಳ ಸಮೂಹ ದಿಂದ ಆಚ್ಛಾದಿಸುತ್ತಾ–ಮೇಘಗಳು ಸೂರ್ಯನನ್ನು ಆವರಿಸುವಂತೆ–ಭೀಮ

ನನ್ನು ಸುತ್ತುಗಟ್ಟಿದರು. ನಿನ್ನ ಹಿರಿಯಮಗನಾದ ದುರ್ಯೋಧನ, ದುರ್ಮುಖ, ದುಃಶಲ, ಶಲ, ಅತಿರಥನಾದ ದುಃಶಾಸನ, ದುರ್ಮರ್ಷಣ, ವಿವಿಂಶತಿ, ಚಿತ್ರಸೇನ, ಮಹಾರಥನಾದ ವಿಕರ್ಣ, ಪುರುಮಿತ್ರ, ಜಯ, ಭೋಜ, ಪರಾಕ್ರಮಿಯಾದ ಸೋಮದತ್ತನ ಮಗನಾದ ಭೂರಿಶ್ರವಸ್ಸು–ಈ ಎಲ್ಲ ವೀರರೂ ತಮ್ಮ ತಮ್ಮ ದೊಡ್ಡ-ದೊಡ್ಡ ಧನುಸ್ಸುಗಳನ್ನು ಅಳ್ಳಾಡಿಸುತ್ತಾ, ಪೊರೆಯನ್ನು ತೊರೆದ ವಿಷಸರ್ಪಗಳಂತಿದ್ದ ಬಾಣಗಳನ್ನು ಹಿಡಿದುಕೊಂಡು ಮಿಂಚಿನಿಂದ ಕೂಡಿದ ಮೇಘಗಳಂತೆ ಕಾಣುತ್ತಿದ್ದರು. ಅನಂತರ ದ್ರೌಪದಿಯ ಐವರು ಮಕ್ಕಳು, ಮಹಾರಥನಾದ ಅಭಿಮನ್ಯು, ನಕುಲ, ಸಹದೇವ, ದ್ರುಪದನ ಮಗನಾದ ಧೃಷ್ಟದ್ಯುಮ್ನ–ಇವರುಗಳು ಕೌರವರ ಮೇಲೆ ಬೀಳಲು ಹೋದರು. ಈ ರೀತಿಯಲ್ಲಿ ಉಭಯಪಕ್ಷಗಳ ಸಂಘರ್ಷಣೆಯಾಗಲಿದ್ದ ಆ ಸಮಯದಲ್ಲಿ ಗಲಿಬಿಲಿಯಾಯಿತು. ಅತ್ಯಂತ ದ್ವೇಷಪೂರಿತರಾಗಿದ್ದ ಪಾಂಡವರು–ಇಂದ್ರನು ವಜ್ರಾಯುಧದಿಂದ ಪರ್ವತಗಳ ಶಿಖರಗಳನ್ನು ಪ್ರಹರಿಸುವಂತೆ–ನಿಶಿತವಾದ ಮಹಾವೇಗಯುಕ್ತವಾದ ಬಾಣಗಳಿಂದ ನಿನ್ನ ಮಕ್ಕಳನ್ನು ಪೀಡಿಸುತ್ತಾ ಅವರನ್ನು ಎದುರಿಸಿ ನಿಂತರು. ಭಯಂಕರ ವಾದ ಧನುಸ್ಸಿನ ಜ್ಯಾಘೋಷದಿಂದ (ಟಂಕಾರಶಬ್ದದಿಂದ) ತುಂಬಿಹೋಗಿದ್ದ ಮೊದಲ ದಿವಸದ ಯುದ್ಧದಲ್ಲಿ ನಿನ್ನ ಕಡೆಯವರಾಗಲೀ–ಶತ್ರುಪಕ್ಷದವ ರಾಗಲೀ ಯಾರೂ ಪರಾಙ್ಮುಖರಾಗಲಿಲ್ಲ.

ಭರತರ್ಷಭನೇ! ನಾನು ಆ ಪ್ರಥಮದಿನದ ಯುದ್ಧದಲ್ಲಿಯೇ ದ್ರೋಣಾಚಾರ್ಯರ ಶಿಷ್ಯರ ಕೈಚಳಕವೆಷ್ಟೆಂಬುದನ್ನು ಕಂಡುಕೊಂಡೆನು. ಲಕ್ಷ್ಯಕ್ಕೆ ಗುರಿತಪ್ಪದೇ ಹೊಡೆಯುವುದನ್ನೂ, ಒಂದಾದಮೇಲೆ ಮತ್ತೊಂದರಂತೆ ಅನವರತವಾಗಿ ಮತ್ತು ಶೀಘ್ರಾತಿಶೀಘ್ರವಾಗಿ ಬಾಣಗಳನ್ನು ಬಿಡುತ್ತಿರುವುದನ್ನೂ ನಾನು ಅಲ್ಲಿ ಕಂಡೆನು.

ಟಂಕಾರಮಾಡುತ್ತಿದ್ದ ಧನುಸ್ಸುಗಳ ಶಬ್ದವು ಶಾಂತವಾಗುತ್ತಲೇ ಇರಲಿಲ್ಲ. ಆ ಟಂಕಾರಶಬ್ದಕ್ಕೆ ವಿರಾಮವೆಂಬುದೇ ಇರಲಿಲ್ಲ. ಆಕಾಶದಿಂದ ನಕ್ಷತ್ರಗಳು ಸತತವಾಗಿ ಉದುರುವಂತೆ ಧನುಸ್ಸುಗಳಿಂದ ಪ್ರದೀಪ್ತವಾದ ಬಾಣಗಳು ಅನವರತವಾಗಿ ಹೊರಹೊಮ್ಮುತ್ತಲೇ ಇದ್ದುವು. ಜ್ಞಾತಿಗಳ (ಕೌರವ-ಪಾಂಡವರ) ಭಯಂಕರ ಹೋರಾಟವನ್ನು ಇತರ ಎಲ್ಲ ರಾಜರೂ

ಕೇವಲ ಪ್ರೇಕ್ಷಕರಂತೆ ನೋಡುತ್ತಾ ನಿಂತಿದ್ದರು. ಆದರೆ ಹಾಗೆ ಅವರಿಗೆ ಹೆಚ್ಚು ಹೊತ್ತು ನೋಡುತ್ತಲೇ ನಿಲ್ಲಲು ಸಾಧ್ಯವಾಗಲಿಲ್ಲ. ಆ ಮಹಾರಥರು ಹಿಂದೆ ವಿರೋಧಿಗಳಿಂದ ತಮಗೆ ಸಂಭವಿಸಿದ್ದ ಕಿರುಕುಳಗಳನ್ನು ಜ್ಞಾಪಕಕ್ಕೆ ತಂದುಕೊಂಡು ಕೋಪಾವಿಷ್ಟರಾದರು. 'ತಾವು ಜಯಿಸಬೇಕು, ಹಿಂದಿನ ಸೇಡನ್ನು ತೀರಿಸಿಕೊಳ್ಳಬೇಕು'–ಎಂದು ಪರಸ್ಪರವಾಗಿ ಸ್ಪರ್ಧಿಸುತ್ತಾ ಆ ಮಹಾರಥರು ತಮ್ಮ ಆಶಯವನ್ನು ಪೂರೈಸಿಕೊಳ್ಳಲು ಬಹುವಾಗಿ ಶ್ರಮಿಸುತ್ತಿದ್ದರು. ಆನೆ, ಕುದುರೆ, ರಥ ಇವುಗಳಿಂದ ಸಮಾಕುಲವಾಗಿದ್ದ, ಕುರು-ಪಾಂಡವರ ಆ ಸೇನೆಗಳು ಯುದ್ಧವಾಗುತ್ತಿದ್ದ ಸಮಯದಲ್ಲಿ ಬಟ್ಟೆಯ ಮೇಲೆ ಚಿತ್ರಿಸಿರುವ ಸೇನೆಗಳೋಪಾದಿಯಲ್ಲಿ ಬಹುವಾಗಿ ಶೋಭಿಸಿದುವು. ಅನಂತರ ನಿನ್ನ ಮಗನಾದ ದುರ್ಯೋಧನನ ಆಜ್ಞಾನುಸಾರವಾಗಿ ಧನುಷ್ಪಾಣಿಗಳಾಗಿದ್ದ ಆ ಎಲ್ಲ ಪಾರ್ಥಿವರೂ ತಮ್ಮ ತಮ್ಮ ಸೈನ್ಯಗಳೊಡನೆ ಶತ್ರುಸೈನ್ಯದ ಮೇಲೆ ದಾಳಿನಡೆಸಿದರು. ಯುಧಿಷ್ಠಿರನಿಂದ ಆಜ್ಞಪ್ತರಾದ ಸಾವಿರಾರು ರಾಜರು ಗರ್ಜನೆಮಾಡುತ್ತಾ ತಮ್ಮ ತಮ್ಮ ಸೈನ್ಯಗಳೊಡನೆ ನಿನ್ನ ಮಗನ ಸೈನ್ಯದ ಮೇಲೆ ಬಿದ್ದರು. ಆ ಎರಡು ಮಹಾಸೇನೆಗಳ ಸಂಘರ್ಷವು ಅತ್ಯಂತತೀವ್ರವಾಗಿದ್ದಿತು. ಆ ಸೈನಿಕರ ಘರ್ಷಣೆಯು ಎಷ್ಟರಮಟ್ಟಿನದಾಗಿ ತ್ತೆಂದರೆ ಅವರು ಒಬ್ಬರನ್ನೊಬ್ಬರು ಪ್ರಹರಿಸಲು ಓಡಾಡುವಾಗ ಕಾಲುಗಳ ಆಘಾತದಿಂದ ಹುಟ್ಟಿದ ಧೂಳಿಯು ಅಂತರಿಕ್ಷಕ್ಕೂ ಹೋಗಿ ಸೂರ್ಯನನ್ನೇ ಆವರಿಸಿಬಿಟ್ಟಿತು. ಇದರಿಂದಾಗಿ ಸೂರ್ಯನೇ ಅದೃಶ್ಯನಾಗಿದ್ದನು. ಆ ಸೈನ್ಯ ಸಮೂಹದಲ್ಲಿ ಹಲವಾರು ಯೋಧರು ಯುದ್ಧಮಾಡುತ್ತಲೇ ಇದ್ದರು. ಮತ್ತೆ ಕೆಲವರು ಪೆಟ್ಟು ತಿಂದು ಓಡುತ್ತಿದ್ದರು. ಮತ್ತೆ ಕೆಲವರು ಪುನಃ ಸಜ್ಜಾಗಿ ಯುದ್ಧಕ್ಕೆ ಹಿಂದಿರುಗುತ್ತಿದ್ದರು. ಹೀಗೆ ಮಾಡುತ್ತಿದ್ದವರಲ್ಲಿ ನಿನ್ನ ಸೈನ್ಯದವರೂ ಇದ್ದರು. ಶತ್ರುಸೈನ್ಯದವರೂ ಇದ್ದರು. ಈ ವಿಷಯದಲ್ಲಿ ಎರಡು ಸೈನ್ಯಗಳಲ್ಲಿಯೂ ವಿಶೇಷವಾದ ವ್ಯತ್ಯಾಸವೇನೂ ಕಾಣುತ್ತಿರಲಿಲ್ಲ. ಮಹಾಭಯಂಕರವಾಗಿ ಕಾಣುತ್ತಿದ್ದ ಖಡಾಖಡಿಯಾದ ಯುದ್ಧವು ನಡೆಯುತ್ತಿರಲಾಗಿ ಎಲ್ಲ ಸೈನ್ಯಗಳನ್ನೂ ಅತಿಕ್ರಮಿಸಿ ನಿನ್ನ ತಂದೆಯಾದ ಭೀಷ್ಮನು ಅವರ ಮಧ್ಯದಲ್ಲಿ ತನ್ನ ತೇಜೋವಿಶೇಷದಿಂದ ಪ್ರಕಾಶಿಸಿದನು."

ಳಳನೆಯ ಅಧ್ಯಾಯವು ಮುಗಿಯಿತು.

## ಎರಡೂ ಪಕ್ಷಗಳ ಸೈನ್ಯಗಳ ದ್ವಂದ್ವಯುದ್ಧ

ಸಂಜಯನು ಧೃತರಾಷ್ಟ್ರನಿಗೆ ಮೊದಲನೆಯ ದಿನದ ಯುದ್ಧದ ವರದಿಯನ್ನು ಮುಂದುವರಿಸುತ್ತಾನೆ :

“ಮಹಾರಾಜ! ಆ ದಿನದ ಪೂರ್ವಾಹ್ಣದ ಯುದ್ಧವು ಭಯಂಕರವಾದ ಸಾವಿರಾರು ರಾಜರ ಶರೀರಗಳನ್ನು ಕತ್ತರಿಸುವ ಮಹಾಘೋರವಾದ ಯುದ್ಧವಾಗಿ ಪರಿಣಮಿಸಿ ನಡೆಯಿತು. ಪರಸ್ಪರವಾಗಿ ವಿಜಯಿಗಳಾಗಲು ಸ್ಪರ್ಧಿಸುತ್ತಿದ್ದ ಕುರುಗಳು ಮತ್ತು ಸೃಂಜಯರು ಸಿಂಹಗಳಂತೆಯೇ ಸಿಂಹನಾದಗಳನ್ನು ಮಾಡುತ್ತಿದ್ದರು. ಅವರ ಆ ಗರ್ಜನೆಯು ಭೂಮಿಯಲ್ಲಿಯೂ ಮತ್ತು ಆಕಾಶದಲ್ಲಿಯೂ ಪ್ರತಿಧ್ವನಿತವಾಯಿತು. ಯುದ್ಧದ ಮಧ್ಯೆ ವೀರಯೋಧರು ಮಾಡುತ್ತಿದ್ದ ಶಂಖಧ್ವನಿಗಳ ಮಧ್ಯದಲ್ಲಿ ಸೈನಿಕರ ಕಿಲ ಕಿಲ ಶಬ್ದವೂ ಕೇಳಿ ಬರುತ್ತಿದ್ದಿತು. ಗರ್ಜನೆಮಾಡುತ್ತಿದ್ದ ಎದುರಾಳಿಗಳಾದ ಸೈನಿಕರಿಗೆ ಪ್ರತಿಯಾಗಿ ವೀರಗರ್ಜನೆಗಳನ್ನು ಮಾಡುತ್ತಿದ್ದ ಶೂರಯೋಧರ ಸಿಂಹನಾದಗಳೂ ಸಹ ಅನವರತವಾಗಿ ಕೇಳಿಬರುತ್ತಿದ್ದುವು. ತಲತ್ರಗಳ ಆಘಾತದಿಂದ ಉಂಟಾದ ಶಬ್ದಗಳು, ಮೌರ್ವಿಯ ಶಬ್ದಗಳು, ಕಾಲಾಳುಗಳ ಕಾಲಿನ ಸಪ್ಪಳಗಳು, ಕುದುರೆಗಳ ಹೇಷಾರವಗಳು, ತಿವಿಗೋಲುಗಳ ಮತ್ತು ಅಂಕುಶಗಳ ಪ್ರಹಾರ ಶಬ್ದಗಳು, ಆಯುಧಗಳ ನಿಪಾತಶಬ್ದಗಳು, ಪರಸ್ಪರವಾಗಿ ಕಾದಾಡಲು ಸೊಂಡಿಲುಗಳನ್ನೆತ್ತಿಕೊಂಡು ಬರುತ್ತಿದ್ದ ಆನೆಗಳ ಕತ್ತುಗಳಲ್ಲಿದ್ದ ಗಂಟೆಯ ಶಬ್ದಗಳು–ಈ ಎಲ್ಲ ಶಬ್ದಗಳೂ ಒಟ್ಟುಗೂಡಿ ರೋಮಾಂಚಕಾರಿಯಾದ ಗದ್ದಲವಾಗುತ್ತಿರಲಾಗಿ ಮೇಘಗಳ ಗರ್ಜನೆಗೆ ಸಮಾನವಾಗಿದ್ದ ರಥಗಳ ನಿರ್ಘೋಷವು ಕೇಳಿಬರುತ್ತಿದ್ದಿತು. ನಮ್ಮ ಕಡೆಯ ಸೈನಿಕರು ಮನಸ್ಸನ್ನು ಕಠಿನವನ್ನಾಗಿ ಮಾಡಿಕೊಂಡು ತಮ್ಮ ಪ್ರಾಣಗಳನ್ನೇ ಮುಡುಪಾಗಿಟ್ಟು ತಮ್ಮ ತಮ್ಮ ಧ್ವಜಗಳನ್ನು ಹಾರಿಸಿಕೊಂಡು ಪಾಂಡವರ ಮೇಲೆ ದಾಳಿಮಾಡಲು ಉಪಕ್ರಮಿಸಿದರು.

ಅನಂತರ ಶಾಂತನುವಿನ ಮಗನಾದ ಭೀಷ್ಮನು ಕಾಲದಂಡಸದೃಶ

ವಾಗಿದ್ದ, ಸುಘೋರವಾಗಿದ್ದ ಧನುಸ್ಸನ್ನು ಹಿಡಿದುಕೊಂಡು ಆ ಯುದ್ಧ ಭೂಮಿಯಲ್ಲಿ ಅರ್ಜುನನಿದ್ದ ಕಡೆಗೆ ಧಾವಿಸಿದನು. ಗಾಂಗೇಯನು ತನ್ನೆದು ರಾಗಿ ಬರುತ್ತಿರುವುದನ್ನು ಕಂಡು ತೇಜಸ್ವಿಯಾದ ಅರ್ಜುನನೂ ಸಹ ಲೋಕವಿಖ್ಯಾತವಾದ ಗಾಂಡೀವಧನುಸ್ಸನ್ನೆತ್ತಿಕೊಂಡು ರಣಭೂಮಿಯಲ್ಲಿ ಗಾಂಗೇಯನಿಗೆದುರಾಗಿ ಹೋದನು. ಕುರುಶಾರ್ದೂಲರಿಬ್ಬರೂ ಒಬ್ಬರು ಮತ್ತೊಬ್ಬರನ್ನು ಸಂಹಾರ ಮಾಡುವ ಆಶಯವುಳ್ಳವರೇ ಆಗಿದ್ದರು. ಯದ್ಯಪಿ ಗಾಂಗೇಯನು ಅರ್ಜುನನನ್ನು ತನ್ನ ಬಾಣಗಳಿಂದ ಬಲವಾಗಿಯೇ ಪ್ರಹರಿಸಿ ದರೂ ಸಹ ಅವನನ್ನು ವಿಚಲಿತನನ್ನಾಗಿ ಮಾಡಲು ಬಲಿಷ್ಠನಾದ ಭೀಷ್ಮನಿಗೆ ಸಾಧ್ಯವಾಗಲೇ ಇಲ್ಲ.

ಅದೇ ರೀತಿಯಲ್ಲಿ ಅರ್ಜುನನೂ ಸಹ ಎಷ್ಟೇ ಪ್ರಯತ್ನಿಸಿದರೂ ಸಾವಿರಾರು ಬಾಣಗಳನ್ನು ಏಕಕಾಲದಲ್ಲಿ ಭೀಷ್ಮನ ಮೇಲೆ ಅನವರತವಾಗಿ ಸುರಿಸಿದರೂ ಅವನನ್ನು ವಿಚಲಿತನನ್ನಾಗಿ ಮಾಡಲು ಅರ್ಜುನನಿಗೆ ಸಾಧ್ಯ ವಾಗಲಿಲ್ಲ. ರಣಾಂಗಣದ ಮತ್ತೊಂದು ವಿಭಾಗದಲ್ಲಿ ಮಹಾಧನುಷ್ಮಂತನಾದ ಸಾತ್ಯಕಿಯು ಕೃತವರ್ಮನ ಮೇಲೆ ಎರಗಿಬಿದ್ದನು. ಅವರಿಬ್ಬರಲ್ಲಿ ಭಯಂಕರವೂ, ರೋಮಾಂಚಕಾರಿಯೂ ಆದ ಘೋರಯುದ್ಧವಾಯಿತು. ಸಾತ್ಯಕಿಯು ಕೃತವರ್ಮನನ್ನೂ–ಕೃತವರ್ಮನು ಸಾತ್ಯಕಿಯನ್ನೂ ಬಾಣಗಳ ಸಮೂಹದಿಂದ ಪರಸ್ಪರವಾಗಿ ಪ್ರಹರಿಸಿ ಪೀಡೆಯನ್ನುಂಟುಮಾಡುತ್ತಿದ್ದರು. ಎಲ್ಲ ಅಂಗಗಳಲ್ಲಿಯೂ ಶರಗಳ ಪ್ರಹಾರಗಳಿಂದ ಪೀಡಿತರಾಗಿದ್ದ ಆ ಇಬ್ಬರು ಮಹಾಬಲರಾದ ಸಾತ್ಯಕಿ-ಕೃತವರ್ಮರು–ಪುಷ್ಪಗಳಿಂದ ವಿಚಿತ್ರವಾಗಿ ಕಾಣುವ ವಸಂತಮಾಸದಲ್ಲಿ ಪುಷ್ಪಯುಕ್ತವಾಗಿರುವ ಮುತ್ತುಗದ ಮರಗಳಂತೆ– ಪ್ರಕಾಶಿಸಿದರು. (ಬಾಣಗಳ ಆಘಾತದಿಂದ ಇಬ್ಬರ ಶರೀರಗಳೂ ರಕ್ತಮಯ ವಾಗಿದ್ದಿತು. ಮುತ್ತುಗದ ಹೂ ಕೆಂಪಗಿರುವುದು ಮಾತ್ರವಲ್ಲದೇ ವಸಂತಕಾಲ ದಲ್ಲಿ ಮುತ್ತುಗದ ಮರದಲ್ಲಿ ಕೆಂಪಾದ ಹೂಗಳು ಮಾತ್ರ ಕಾಣುತ್ತವೆಯೇ ಹೊರತು ಎಲೆಗಳೊಂದೂ ಇರುವುದಿಲ್ಲ. ರಕ್ತದಿಂದ ದೇಹಗಳು ಪೂರ್ತಿ ಯಾಗಿ ತೊಯ್ದಿದ್ದ ಸಾತ್ಯಕಿ-ಕೃತವರ್ಮರು ವಸಂತಕಾಲದ ಮುತ್ತುಗದ ಮರಗಳಂತೆಯೇ ಕಾಣುತ್ತಿದ್ದರು.)

ಸುಭದ್ರೆಯ ಮಗನಾದ ಅಭಿಮನ್ಯುವು ಮಹಾಧನುರ್ಧರನಾದ

ಬೃಹದ್ಬಲನೊಡನೆ ಯುದ್ಧಕ್ಕೆ ಹೋದನು. ಕೋಸಲರಾಜನಾದ ಬೃಹದ್ಬಲನು ಯುದ್ಧದಲ್ಲಿ ಅಭಿಮನ್ಯುವಿನ ರಥದ ಧ್ವಜವನ್ನು ಕತ್ತರಿಸಿದುದಲ್ಲದೇ ಅವನ ಸಾರಥಿಯನ್ನೂ ಸಹ ಹೊಡೆದುರುಳಿಸಿದನು. ತನ್ನ ರಥದ ಸಾರಥಿಯನ್ನು ಬೃಹದ್ಬಲನು ಕೆಳಗುರುಳಿಸಲಾಗಿ ಪರಮಕ್ರುದ್ಧನಾದ ಅಭಿಮನ್ಯುವು ಬೃಹದ್ಬಲನನ್ನು ಒಂಬತ್ತು ಬಾಣಗಳಿಂದ ಪ್ರಹರಿಸಿದನು. ಅನಂತರ ಅರಿಮರ್ದನವಾದ ಸುತೀಕ್ಷ್ಣವಾದ ಮತ್ತೆರಡು ಭಲ್ಲಗಳೆಂಬ ಬಾಣಗಳನ್ನು ಪ್ರಯೋಗಿಸಿ ಒಂದು ಬಾಣದಿಂದ ಬೃಹದ್ಬಲನ ರಥದ ಧ್ವಜವನ್ನು ಕತ್ತರಿಸಿದನು. ಮತ್ತೊಂದು ಬಾಣದಿಂದ ರಥದ ಹಿಂಬದಿಯಲ್ಲಿ ರಕ್ಷಕನಾಗಿದ್ದ ಸಾರಥಿಯನ್ನು ಸಂಹರಿಸಿದನು. ಅನಂತರ ಕ್ರುದ್ಧರಾಗಿದ್ದ ಇಬ್ಬರೂ ಪರಸ್ಪರವಾಗಿ ಬಾಣಗಳಿಂದ ಒಬ್ಬರು ಮತ್ತೊಬ್ಬರನ್ನು ಬಹುಪ್ರಕಾರವಾಗಿ ಗಾಯಗೊಳಿಸಿದರು.

ರಣಾಂಗಣದ ಮತ್ತೊಂದು ಕಡೆಯಲ್ಲಿ ಮಾನಿಯಾದ, ಯುದ್ಧಮಾಡುವುದರಲ್ಲಿ ತನಗೆ ಸಮಾನರಿಲ್ಲವೆಂಬ ಅಭಿಮಾನವನ್ನು ತಾಳಿದ್ದ, ಮೊದಲಿನಿಂದಲೂ ಬಹುವಾಗಿ ವೈರವನ್ನು ಸಾಧಿಸುತ್ತಲೇ ಇದ್ದ ಮಹಾರಥನಾದ ನಿನ್ನ ಮಗ ದುರ್ಯೋಧನನನ್ನು ಭೀಮಸೇನನು ಆಕ್ರಮಿಸಿ ಯುದ್ಧಮಾಡಿದನು. ಅವರಿಬ್ಬರೂ ನರಪುಂಗವರು. ಕುರುಮುಖ್ಯರು. ಮಹಾಬಲರು. ಒಬ್ಬರಿಗೆ ಮತ್ತೊಬ್ಬರು ಯಾವುದರಲ್ಲಿಯೂ ಕಡಿಮೆ ಇರಲಿಲ್ಲ. ಪರಸ್ಪರವಾಗಿ ಒಬ್ಬರ ಮೇಲೆ ಮತ್ತೊಬ್ಬರು ಬಾಣಗಳ ಮಳೆಯನ್ನೇ ಕರೆದರು. ಅಸ್ತ್ರವಿದ್ಯೆಯಲ್ಲಿ ನಿಪುಣರಾದ, ಚಿತ್ರಯೋಧಿಗಳಾದ, ಮಹಾತ್ಮರಾದ ಸುಯೋಧನ-ವೃಕೋದರರ ಯುದ್ಧವನ್ನು ಕಂಡು ಎಲ್ಲ ಪ್ರಾಣಿಗಳೂ ವಿಸ್ಮಯಗೊಂಡುವು. ದುಃಶಾಸನನು ಮುಂದೆ ಬಂದು ಮಹಾಬಲನಾದ ನಕುಲನನ್ನು ಎದುರಿಸಿ ನಿಂತು, ಹೆಚ್ಚು ಮೊನಚಾಗಿದ್ದ, ಮರ್ಮಸ್ಥಳಗಳನ್ನೂ ಭೇದಿಸುವ ಸಾಮರ್ಥ್ಯವನ್ನು ಹೊಂದಿದ್ದ ಅನೇಕಬಾಣಗಳಿಂದ ನಕುಲನನ್ನು ಪ್ರಹರಿಸಿದನು. ಮಾದ್ರಿಯ ಮಗನಾದ ನಕುಲನೂ ನಗು-ನಗುತ್ತಲೇ ದುಃಶಾಸನನ ರಥದ ಧ್ವಜವನ್ನೂ, ಬಾಣದಿಂದ ಕೂಡಿದ್ದ ಧನುಸ್ಸನ್ನೂ ನಿಶಿತವಾದ ಬಾಣಗಳಿಂದ ಕತ್ತರಿಸಿಬಿಟ್ಟನು. ಅನಂತರ ದುಃಶಾಸನನನ್ನು ನಕುಲನು 'ಕ್ಷುದ್ರಕ ' ಎಂಬ ಹೆಸರಿನ ಇಪ್ಪತ್ತೈದು ಬಾಣಗಳಿಂದ ಗಾಯಗೊಳಿಸಿದನು.

ಒಡನೆಯೇ ದುರ್ಧರ್ಷನಾದ ನಿನ್ನ ಮಗ ದುಃಶಾಸನನು ಆ ಮಹಾ ಯುದ್ಧದಲ್ಲಿ ಬಾಣಗಳಿಂದ ನಕುಲನ ರಥದ ಕುದುರೆಗಳನ್ನು ಸಂಹರಿಸಿದನು ಮತ್ತು ಅವನ ರಥದ ಧ್ವಜವನ್ನೂ ಸಹ ಕತ್ತರಿಸಿ ಕೆಳಕ್ಕೆ ಕೆಡವಿದನು.

ವಿಜಯಕ್ಕಾಗಿ ಸರ್ವಪ್ರಯತ್ನಮಾಡುತ್ತಿದ್ದ ಮಹಾಬಲನಾದ ಸಹದೇವನನ್ನು ನಿನ್ನ ಮಗನಾದ ದುರ್ಮುಖನು ಎದುರಿಸಿ ನಿಂತು ಬಾಣಗಳ ಮಳೆಗರೆಯುವಿಕೆಯಿಂದ ಅವನನ್ನು ಗಾಯಗೊಳಿಸಿದನು. ಅನಂತರ ಆ ಮಹಾಯುದ್ಧದಲ್ಲಿ ವೀರನಾದ ಮತ್ತು ಕ್ರುದ್ಧನಾದ ಸಹದೇವನು ಅತ್ಯಂತ ತೀಕ್ಷ್ಣವಾದ ಬಾಣದಿಂದ ದುರ್ಮುಖನ ಸಾರಥಿಯನ್ನು ಕೆಳಗುರುಳಿಸಿದನು. ಯುದ್ಧದುರ್ಮದರಾದ ಸಹದೇವ-ದುರ್ಮುಖರು ಪರಸ್ಪರವಾಗಿ ಪ್ರತಿಮಾಡಬೇಕೆಂಬ ಇಚ್ಛೆಯುಳ್ಳವರಾಗಿ ಎದುರು-ಬದುರಾಗಿ ನಿಂತು ಘೋರವಾದ ಬಾಣಗಳಿಂದ ಒಬ್ಬರು ಮತ್ತೊಬ್ಬರನ್ನು ಭೀತರನ್ನಾಗಿ ಮಾಡುತ್ತಿದ್ದರು. ಮಾರಿಷ! ಯುಧಿಷ್ಠಿರರಾಜನು ಸ್ವತಃ ಮದ್ರರಾಜನಾದ ಶಲ್ಯನ ಮೇಲೆ ಯುದ್ಧಕ್ಕೆ ಬಂದನು. ಆದರೆ ಕ್ಷಣಮಾತ್ರದಲ್ಲಿ ಶಲ್ಯನು ಧರ್ಮಜನ ಬಿಲ್ಲನ್ನೇ ಎರಡಾಗಿ ಕತ್ತರಿಸಿದನು. ಕುಂತಿಯ ಮಗನಾದ ಯುಧಿಷ್ಠಿರನು ಕ್ರುದ್ಧನಾಗಿ ಶಲ್ಯನು ಕತ್ತರಿಸಿದ ಧನುಸ್ಸನ್ನು ಎಸೆದು ಬಲಿಷ್ಠವಾದ ಮತ್ತು ವೇಗದಿಂದ ಕೂಡಿದ್ದ ಮತ್ತೊಂದು ಧನುಸ್ಸನ್ನು ತೆಗೆದುಕೊಂಡು ಬಗ್ಗಿದ ಗಿಣ್ಣುಗಳುಳ್ಳ ಬಾಣಗಳಿಂದ ಶಲ್ಯನನ್ನು ಮುಚ್ಚಿ 'ನಿಲ್ಲು' 'ನಿಲ್ಲು' ಎಂದು ಗಟ್ಟಿಯಾಗಿ ಕೂಗಿದನು.

ರಣರಂಗದ ಮತ್ತೊಂದು ವಿಭಾಗದಲ್ಲಿ ಧೃಷ್ಟದ್ಯುಮ್ನನು ದ್ರೋಣಾಚಾರ್ಯರನ್ನು ಎದುರಿಸಿದನು. ಅದರಿಂದ ಪರಮಕ್ರುದ್ಧರಾದ ದ್ರೋಣರು ಯುದ್ಧದಲ್ಲಿ ಶತ್ರುಗಳ ಪ್ರಾಣಗಳನ್ನು ಅಪಹರಿಸಲು ಬಹುಸಮರ್ಥವಾಗಿದ್ದ ಮತ್ತು ಸುದೃಢವಾಗಿದ್ದ ಧೃಷ್ಟದ್ಯುಮ್ನನ ಧನುಸ್ಸನ್ನು ಮೂರು ಚೂರುಗಳಾಗಿ ಕತ್ತರಿಸಿಬಿಟ್ಟರು. ಧೃಷ್ಟದ್ಯುಮ್ನನ ಬಿಲ್ಲನ್ನು ಕತ್ತರಿಸಿದನಂತರ ದ್ರೋಣರು ಕಾಲದಂಡೋಪಮವಾಗಿದ್ದ, ಮಹಾಘೋರವಾಗಿದ್ದ ಒಂದು ಬಾಣವನ್ನು ಧೃಷ್ಟದ್ಯುಮ್ನನ ಮೇಲೆ ಪ್ರಯೋಗಿಸಿದರು. ಅದು ವೇಗವಾಗಿ

ಹೋಗಿ ಅವನ ಶರೀರದೊಳಗೆ ನೆಟ್ಟುಕೊಂಡಿತು. ಅನಂತರ ಧೃಷ್ಟದ್ಯುಮ್ನನು ಪರಮಕ್ರುದ್ಧನಾಗಿ ಮತ್ತೊಂದು ಧನುಸ್ಸನ್ನೆತ್ತಿಕೊಂಡು ಹದಿನಾಲ್ಕು ಬಾಣಗಳನ್ನು ಏಕಕಾಲದಲ್ಲಿ ಧನುಸ್ಸಿಗೆ ಯೋಜಿಸಿ ದ್ರೋಣರ ಮೇಲೆ ಪ್ರಯೋಗಿಸಿದನು. ಬಹುವಾಗಿ ಕೋಪಗೊಂಡಿದ್ದ ದ್ರೋಣ-ಧೃಷ್ಟದ್ಯುಮ್ನರು ಪರಸ್ಪರವಾಗಿ ಬಹುಘೋರವಾದ ಯುದ್ಧವನ್ನು ಮಾಡಿದರು. ವೇಗಶಾಲಿಯಾದ ಶಂಖನು ಆ ಮಹಾಯುದ್ಧದಲ್ಲಿ ವೇಗವಂತನಾದ ಮತ್ತು ಮಹಾವೀರನಾದ ಭೂರಿಶ್ರವನನ್ನು ಎದುರಿಸಿದನು ಮತ್ತು 'ನಿಲ್ಲು-ನಿಲ್ಲೆಂದು' ಗರ್ಜಿಸುತ್ತಾ ವೀರನಾದ ಶಂಖನು ಭೂರಿಶ್ರವನ ಬಲಭುಜವನ್ನು ಗಾಯಗೊಳಿಸಿದನು. ಅದರಿಂದ ಕ್ರುದ್ಧನಾದ ಭೂರಿಶ್ರವನು ಒಡನೆಯೇ ತೀಕ್ಷ್ಣವಾದ ಬಾಣದಿಂದ ಶಂಖನ ಕಂಠಪ್ರದೇಶವನ್ನು ಗಾಯಗೊಳಿಸಿದನು. ಮಹಾರಾಜ! ದೃಪ್ತರಾಗಿದ್ದ ಶಂಖ-ಭೂರಿಶ್ರವರ ಯುದ್ಧವು ಹಿಂದೆ ವೃತ್ರ-ವಾಸವರ ನಡುವೆ ನಡೆದಿದ್ದ ಘೋರವಾದ ಯುದ್ಧದಂತೆಯೇ ಬಹಳ ಘೋರವಾಗಿ ನಡೆಯಿತು. ಮಹಾತ್ಮನಾದ, ಮಹಾರಥನಾದ, ಕ್ರುದ್ಧನಾದ ಬಾಹ್ಲೀಕನನ್ನು ಧೃಷ್ಟಕೇತುವು ಎದುರಿಸಿದನು.

ಅಸಹನಶೀಲನಾದ ಬಾಹ್ಲೀಕನಾದರೋ ಧೃಷ್ಟಕೇತುವನ್ನು ಅನೇಕಾನೇಕ ಬಾಣಗಳಿಂದ ಗಾಯಗೊಳಿಸಿದನು ಮತ್ತು ಸಿಂಹದಂತೆ ಗರ್ಜನೆಯನ್ನು ಮಾಡುತ್ತಿದ್ದನು. ಅದರಿಂದ ಸಂಕ್ರುದ್ಧನಾದ ಚೇದಿರಾಜನಾದ ಧೃಷ್ಟಕೇತುವು ಬಾಹ್ಲೀಕನನ್ನು ಒಂಬತ್ತು ಬಾಣಗಳಿಂದ–ಮದಿಸಿದ ಆನೆಯು ಮತ್ತೊಂದು ಮದಿಸಿದ ಆನೆಯನ್ನು ಸೊಂಡಿಲಿನಿಂದ ಪ್ರಹರಿಸುವಂತೆ–ಪ್ರಹರಿಸಿದನು. ಧೃಷ್ಟಕೇತು–ಬಾಹ್ಲೀಕರಿಬ್ಬರೂ ಪರಮಕ್ರುದ್ಧರಾಗಿ, ಬಾರಿಬಾರಿಗೂ ಗರ್ಜನೆ ಮಾಡುತ್ತಾ–ಸಂಕ್ರುದ್ಧರಾದ ಅಂಗಾರಕ-ಬುಧರಂತೆಯೇ ಪರಸ್ಪರವಾಗಿ ಯುದ್ಧಮಾಡುತ್ತಿದ್ದರು. (ಕುಜನಿಗೆ ಬುಧನು ಶತ್ರುವೆಂದೂ ಬುಧನಿಗೆ ಕುಜನು ಸಮನೆಂದೂ ಜ್ಯೋತಿಷಶಾಸ್ತ್ರವು ಹೇಳುತ್ತದೆ.)

ಕ್ರೂರಕರ್ಮನಾದ ಘಟೋತ್ಕಚನು ರಾಕ್ಷಸನಾದ, ಕ್ರೂರಕರ್ಮನಾದ ಅಲಂಬುಷನನ್ನು–ಇಂದ್ರನು ಬಲನನ್ನು ಎದುರಿಸಿದಂತೆ ಎದುರಿಸಿ ಅವನ ಮೇಲೆ ಯುದ್ಧಕ್ಕೆ ಬಂದನು. ಪರಮಕ್ರುದ್ಧನಾಗಿದ್ದ ಘಟೋತ್ಕಚನು ಮಹಾಬಲಿಷ್ಠನಾಗಿದ್ದ ಅಲಂಬುಷನನ್ನು ಬಹುತೀಕ್ಷ್ಣವಾಗಿದ್ದ ತೊಂಬತ್ತು ಬಾಣ

ಗಳಿಂದ ಗಾಯಗೊಳಿಸಿದನು. ಹಾಗೆಯೇ ಅಲಂಬುಷನೂ ಘಟೋತ್ಕಚನನ್ನು ಅನೇಕ ಬಾಣಗಳಿಂದ ಗಾಯಗೊಳಿಸಿದನು. ಪರಸ್ಪರವಾಗಿ ಬಾಣಗಳಿಂದ ಗಾಯಗೊಳಿಸಲ್ಪಟ್ಟ ಇಬ್ಬರು ರಾಕ್ಷಸರೂ ದೇವಾಸುರಯುದ್ಧದಲ್ಲಿ ಮಹಾ ಬಲರಾದ ಬಲ-ಶಕ್ರರು ಪ್ರಕಾಶಿಸುತ್ತಿದ್ದಂತೆಯೇ ಮಹಾಭಾರತಯುದ್ಧದಲ್ಲಿ ಪ್ರಕಾಶಿಸಿದರು.



ಬಲಿಷ್ಠನಾದ ಶಿಖಂಡಿಯು ಆ ಯುದ್ಧದಲ್ಲಿ ದ್ರೋಣಪುತ್ರನಾದ ಅಶ್ವತ್ಥಾಮನನ್ನು ಎದುರಿಸಿದನು. ಅಶ್ವತ್ಥಾಮನೂ ಕೂಡ ಪರಮಕ್ರುದ್ಧನಾಗಿ ಸುತೀಕ್ಷ್ಣವಾದ ಬಾಣದಿಂದ ಶಿಖಂಡಿಯನ್ನು ಪ್ರಹರಿಸಿ ಅವನನ್ನು ನಡುಗಿಸಿ ಬಿಟ್ಟನು. ಅನಂತರ ಶಿಖಂಡಿಯೂ ಸಹ ಹಳದಿಬಣ್ಣವಾಗಿಯೂ ತೀಕ್ಷ್ಣ ವಾಗಿಯೂ ಮತ್ತು ಚೂಪಾಗಿಯೂ ಇದ್ದ ಬಾಣದಿಂದ ಅಶ್ವತ್ಥಾಮನನ್ನು

ಪ್ರಹರಿಸಿದನು. ಬಳಿಕ ಆ ಮಹಾಯುದ್ಧದಲ್ಲಿ ಇಬ್ಬರೂ ಪರಸ್ಪರವಾಗಿ ಅನೇಕ ಬಾಣಗಳಿಂದ ಕಾದಾಡಿದರು. ಮತ್ತೊಂದು ಕಡೆಯಲ್ಲಿ ವಾಹಿನೀಪತಿಯಾದ ವಿರಾಟನು ಶೂರನಾದ ಭಗದತ್ತನ ಮೇಲೆ ಬಹುಶೀಘ್ರವಾಗಿ ಯುದ್ಧಕ್ಕೆ ಬಂದನು. ಅನಂತರ ಅವರಿಬ್ಬರಿಗೂ ಘೋರವಾದ ಯುದ್ಧವು ನಡೆಯಿತು. ಮೇಘವು ಮಳೆಯಿಂದ ಪರ್ವತವನ್ನು ಮುಚ್ಚಿಬಿಡುವಂತೆ ವಿರಾಟನು ಭಗದತ್ತನನ್ನು ಸಾವಿರಾರು ಬಾಣಗಳ ವರ್ಷದಿಂದ ಮುಚ್ಚಿಬಿಟ್ಟನು. ಒಡನೆಯೇ ಭಗದತ್ತನು–ಆಗ ತಾನೇ ಹುಟ್ಟಿದ ಸೂರ್ಯನನ್ನು ಮೋಡಗಳು ಮುಚ್ಚಿಬಿಡುವಂತೆ–ಪೃಥಿವೀಪತಿಯಾದ ವಿರಾಟನನ್ನು ಏಕಕಾಲದಲ್ಲಿ ಸಾವಿರಾರು ಬಾಣಗಳನ್ನು ಬಿಟ್ಟು ಮುಚ್ಚಿಬಿಟ್ಟನು. ಕೇಕಯರಾಜನಾದ ಬೃಹತ್ಕ್ಷತ್ರನನ್ನು ಶರದ್ವಂತನ ಮಗನಾದ ಕೃಪನು ಎದುರಿಸಿದನು. ಕೃಪನು ಬಾಣಗಳ ವೃಷ್ಟಿಯಿಂದ ಬೃಹತ್ಕ್ಷತ್ರನನ್ನು ಮುಚ್ಚಿದನು. ಅನಂತರ ಬೃಹತ್ಕ್ಷತ್ರನೂ ಸಹ ಗೌತಮನನ್ನು ಬಾಣಗಳ ಮಳೆಗರೆಯುವಿಕೆಯಿಂದ ಮುಚ್ಚಿಬಿಟ್ಟನು.

ಬೃಹತ್ಕ್ಷತ್ರ-ಗೌತಮರು ಪರಸ್ಪರವಾಗಿ ಎರಡೂ ರಥಗಳಿಗೆ ಕಟ್ಟಿದ್ದ ಕುದುರೆಗಳನ್ನು ಸಂಹಾರಮಾಡಿ ಧನುಸ್ಸುಗಳನ್ನೂ ಕತ್ತರಿಸಿದರು. ಇಬ್ಬರಿಗೂ ರಥವಾಗಲೀ, ಧನುಸ್ಸಾಗಲೀ ಇಲ್ಲವಾಯಿತು. ಆ ಸಮಯದಲ್ಲಿ ಬಹು ಕ್ರುದ್ಧರಾಗಿದ್ದ ಇಬ್ಬರು ವೀರರೂ ಕತ್ತಿಗಳಿಂದಲೇ ಯುದ್ಧವನ್ನು ಮಾಡಲು ಪ್ರಾರಂಭಿಸಿದರು. ಅವರ ಆ ಕತ್ತಿಯ ಯುದ್ಧವು ಘೋರವಾಗಿಯೂ, ಸುದಾರುಣವಾಗಿಯೂ ಇದ್ದಿತು.

ಶತ್ರುಗಳಿಗೆ ತಾಪವನ್ನುಂಟುಮಾಡಲು ಸಮರ್ಥನಾದ, ಹೃಷ್ಟನಾದ ದ್ರುಪದನು, ಹೃಷ್ಟನಾದ ಸಿಂಧುರಾಜನಾದ ಜಯದ್ರಥನ ಮೇಲೆ ಯುದ್ಧಕ್ಕೆ ಹೋದನು. ಸೈಂಧವರಾಜನು ದ್ರುಪದನನ್ನು ಮೂರು ಬಾಣಗಳಿಂದ ಪ್ರಹರಿಸಿದನು. ಅದಕ್ಕೆ ಪ್ರತಿಯಾಗಿ ದ್ರುಪದನೂ ಸಹ ಸೈಂಧವನ ಮೇಲೆ ಬಾಣಪ್ರಯೋಗಮಾಡಿದನು. ಅವರಿಬ್ಬರಿಗೂ ಘೋರವಾದ ಸುದಾರುಣವಾದ ಯುದ್ಧವು ನಡೆಯಿತು. ಶುಕ್ರನಿಗೂ ಮತ್ತು ಅಂಗಾರಕನಿಗೂ ನಡೆದ ಯುದ್ಧದಂತೆ ಈ ಇಬ್ಬರ ಯುದ್ಧವೂ ದೃಷ್ಟಿಗೆ ಪ್ರೀತಿಯನ್ನುಂಟುಮಾಡುವುದಾಗಿದ್ದಿತು. (ಶುಕ್ರ-ಕುಜರು ಪರಸ್ಪರ ಸಮರೆಂದು ಜ್ಯೋತಿಷ

ಶಾಸ್ತ್ರವು ಹೇಳುತ್ತದೆ.) ನಿನ್ನ ಮಗನಾದ ವಿಕರ್ಣನು ಶೀಘ್ರವಾಗಿ ಹೋಗುವ ಕುದುರೆಗಳನ್ನು ಕಟ್ಟಿದ್ದ ರಥದಲ್ಲಿ ಕುಳಿತು ಮಹಾಬಲಿಷ್ಠನಾದ ಸುತಸೋಮನನ್ನು ಆಕ್ರಮಿಸಿದನು. ಅನಂತರ ಅವರಿಬ್ಬರ ನಡುವೆ ಘೋರ ವಾದ ಯುದ್ಧವು ಪ್ರಾರಂಭವಾಯಿತು. ವಿಕರ್ಣನು ಸುತಸೋಮನನ್ನು ಅನೇಕಾನೇಕ ಬಾಣಗಳಿಂದ ಪ್ರಹರಿಸಿದರೂ ಅವನನ್ನು ವಿಚಲಿತನನ್ನಾಗಿ ಮಾಡಲು ಸಾಧ್ಯವಾಗಲೇ ಇಲ್ಲ. ಹಾಗೆಯೇ ಸುತಸೋಮನೂ ವಿಕರ್ಣನ ಮೇಲೆ ಬಾಣಗಳ ಮಳೆಯನ್ನೇ ಕರೆದರೂ ಅವನನ್ನು ವಿಚಲಿತನನ್ನಾಗಿ ಮಾಡಲು ಸಮರ್ಥನಾಗಲೇ ಇಲ್ಲ. ಇದು ಪ್ರೇಕ್ಷಕರೆಲ್ಲರಿಗೂ ಪರಮಾದ್ಭುತ ವಾಗಿ ಕಂಡಿತು.

ನರಪುಂಗವನಾದ, ಮಹಾರಥನಾದ, ಪರಾಕ್ರಮಿಯಾದ ಚೇಕಿತಾನನು ಮಹಾಕೋಪದಿಂದ ಪಾಂಡವರ ಸಲುವಾಗಿ ಸುಶರ್ಮನನ್ನು ಆಕ್ರಮಿಸಿದನು. ಸುಶರ್ಮನಾದರೋ ಮಹಾರಥನಾದ ಚೇಕಿತಾನನನ್ನು ಅಪಾರವಾದ ಬಾಣಗಳ ಪ್ರಹಾರದಿಂದ ತಡೆದು ನಿಲ್ಲಿಸಿದನು (ಮುಚ್ಚಿದನು.) ಚೇಕಿತಾನನೂ ಸಹ ಕೋಪಗೊಂಡವನಾಗಿ ಸುಶರ್ಮನನ್ನು–ಪರ್ವತವನ್ನು ಮೋಡಗಳು ಮುಚ್ಚಿಬಿಡುವಂತೆ–ಅಪಾರವಾದ ಬಾಣಗಳಿಂದ ಮುಚ್ಚಿಬಿಟ್ಟನು. ಮದಿಸಿದ ಸಿಂಹವು ಆನೆಯನ್ನು ಆಕ್ರಮಿಸುವಂತೆ–ಪರಾಕ್ರಮಿಯಾದ ಶಕುನಿಯು ಪರಾಕ್ರಮಸಂಪನ್ನನಾದ ಪ್ರತಿವಿಂಧ್ಯನ ಮೇಲೆ ಯುದ್ಧಮಾಡಿದನು. ಹಿಂದೆ ರಾಕ್ಷಸೇಶ್ವರನನ್ನು ಇಂದ್ರನು ಪೀಡಿಸಿದಂತೆ–ಕೋಪಗೊಂಡ ಯೌಧಿಷ್ಠಿರಿಯು ಸೌಬಲನನ್ನು ಚೂಪಾಗಿದ್ದ ಬಾಣಗಳಿಂದ ಗಾಯಪಡಿಸಿದನು. ಯುದ್ಧದಲ್ಲಿ ತನ್ನನ್ನು ಬಹುವಾಗಿ ಗಾಯಗೊಳಿಸಿದ ಪ್ರತಿವಿಂಧ್ಯನನ್ನು ಮಹಾಪ್ರಾಜ್ಞನಾದ ಶಕುನಿಯು ಬಗ್ಗಿದ ಗಿಣ್ಣುಗಳಿಂದ ಕೂಡಿದ್ದ ಬಾಣಗಳಿಂದ ದೇಹಾದ್ಯಂತವಾಗಿ ಗಾಯಗೊಳಿಸಿದನು.

ಕಾಂಬೋಜರಿಗೆ ರಾಜನಾದ, ಮಹಾರಥನಾದ ಸುದಕ್ಷಿಣನನ್ನು ಶ್ರುತಕರ್ಮನು ಎದುರಿಸಿದನು. ಸುದಕ್ಷಿಣನಾದರೋ ಆ ಮಹಾಯುದ್ಧದಲ್ಲಿ ಮಹಾರಥನಾದ ಸಹದೇವನ ಮಗನಾದ ಶ್ರುತಕರ್ಮನನ್ನು ಅನೇಕಾನೇಕ ಬಾಣಗಳಿಂದ ಪ್ರಹರಿಸಿದರೂ ಸಹ ಅವನನ್ನು ಯುದ್ಧದಲ್ಲಿ ವಿಚಲಿತನನ್ನಾಗಿ ಮಾಡಲು ಸಾಧ್ಯವಾಗಲಿಲ್ಲ. ಮೈನಾಕಪರ್ವತದಂತೆ ಶ್ರುತಕರ್ಮನು ಸ್ಥಿರ

ನಾಗಿಯೇ ಇದ್ದು ಸುದಕ್ಷಿಣನನ್ನು ಎದುರಿಸುತ್ತಿದ್ದನು. ಸುದಕ್ಷಿಣನ ಬಾಣಗಳ ಸತತಪ್ರಹಾರದಿಂದ ಅತಿಕ್ರುದ್ಧನಾದ ಶ್ರುತಕರ್ಮನು ಕಾಂಬೋಜದೇಶದ ಅರಸನಾದ, ಮಹಾರಥನಾದ ಸುದಕ್ಷಿಣನನ್ನು ಶರೀರಾದ್ಯಂತವಾಗಿ ಕತ್ತರಿ ಸಲು ನಿಶ್ಚಯಿಸಿರುವನೋ ಎಂಬಂತೆ ಅನೇಕ ಬಾಣಗಳಿಂದ ಗಾಯಗೊಳಿ ಸಿದನು.

ಶತ್ರುಗಳಿಗೆ ತಾಪವನ್ನುಂಟುಮಾಡುವ ಸಾಮರ್ಥ್ಯದಿಂದ ಕೂಡಿದ್ದ, ಪರಮಕ್ರುದ್ಧನಾಗಿದ್ದ, ಪ್ರಯತ್ನಶೀಲನಾದ ಇರಾವಂತನು ಅರಿಂದಮನಾದ, ಪ್ರಯತ್ನವೇ ಮೂರ್ತಿಮತ್ತಾಗಿರುವಂತೆ ಕಾಣುತ್ತಿದ್ದ ಶ್ರುತಾಯುಷನನ್ನು ಎದುರಿಸಿದನು. ಅರ್ಜುನನ ಮಗನಾದ ಮಹಾರಥನಾದ ಇರಾವಂತನು ಯುದ್ಧದಲ್ಲಿ ಶ್ರುತಾಯುಷನ ರಥದ ಕುದುರೆಗಳನ್ನು ಸಂಹರಿಸಿ ಗಟ್ಟಿಯಾಗಿ ಗರ್ಜಿಸಿದನು ಮತ್ತು ಅವನ ಸೈನ್ಯವನ್ನು ಬಾಣಗಳಿಂದ ಮುಚ್ಚಿ ತನ್ನ ಸಿಂಹನಾದದಿಂದ ಆ ಸೈನ್ಯವನ್ನು ತುಂಬಿಬಿಟ್ಟನು. ಶ್ರುತಾಯುಷನಾದರೋ ಆರ್ಜುನಿಯ ಕ್ರೂರಕರ್ಮದಿಂದ ಪರಮಕ್ರುದ್ಧನಾಗಿ ಗದೆಯ ಅಗ್ರಭಾಗದಿಂದ ಇರಾವಂತನ ರಥದ ಕುದುರೆಗಳನ್ನು ಧ್ವಂಸಮಾಡಿದನು. ಆದರೂ ಸಹ ಯುದ್ಧವು ಹಾಗೆಯೇ ಮುಂದುವರಿಯಿತು. ಅವಂತೀದೇಶದ ರಾಜ ಕುಮಾರರಾದ ವಿಂದಾನುವಿಂದರು ಸಸೈನ್ಯನಾದ ಮತ್ತು ಸಪುತ್ರನಾದ, ವೀರ ನಾದ, ಮಹಾರಥನಾದ ಕುಂತಿಭೋಜನೊಡನೆ ಯುದ್ಧವನ್ನು ಆರಂಭಿಸಿ ದರು. ನಾವು ಆ ಸಮಯದಲ್ಲಿ ಅವರ ಅದ್ಭುತವಾದ ಮತ್ತು ಘೋರವಾದ ಪರಾಕ್ರಮವನ್ನು ಪ್ರತ್ಯಕ್ಷವಾಗಿಯೇ ಕಂಡೆವು. ದೊಡ್ಡದಾಗಿದ್ದ ಸೇನೆಯೊಡನೆ ಆ ಇಬ್ಬರೂ ಅಚಲರಾಗಿ ನಿಂತು ಯುದ್ಧಮಾಡುತ್ತಿದ್ದರು. ಅನುವಿಂದನು ಕುಂತಿಭೋಜನನ್ನು ಗದೆಯಿಂದ ಪ್ರಹರಿಸಿದನು. ಕುಂತಿಭೋಜನಾದರೋ ಅನುವಿಂದನನ್ನು ಒಡನೆಯೇ ಅನೇಕಾನೇಕ ಬಾಣಗಳಿಂದ ಮುಚ್ಚಿಬಿಟ್ಟನು. ಕುಂತಿಭೋಜನ ಮಗನು ವಿಂದನನ್ನು ಅನೇಕವಾದ ಬಾಣಗಳಿಂದ ಪ್ರಹರಿಸಿದನು. ಮರುಕ್ಷಣದಲ್ಲಿಯೇ ಕುಂತಿಭೋಜನ ಮಗನನ್ನು ವಿಂದನು ಅನೇಕ ಬಾಣಗಳಿಂದ ಗಾಯಗೊಳಿಸಿದನು. ಅವನ ಕೈಚಳಕವು ಅದ್ಭುತ ವಾಗಿ ಕಂಡಿತು. ಸಸೈನ್ಯರಾದ ಕೇಕಯದೇಶದ ಐವರು ಸಹೋದರರು, ಸಸೈನ್ಯರಾದ ಗಾಂಧಾರದೇಶದ ಐವರು ಸಹೋದರರನ್ನು ಆಕ್ರಮಿಸಿ ಯುದ್ಧ ವನ್ನು ಆರಂಭಿಸಿದರು. ನಿನ್ನ ಮಗನಾದ ವೀರಬಾಹುವು ಶ್ರೇಷ್ಠರಥಿಕನಾದ,

ವಿರಾಟನ ಮಗನಾದ ಉತ್ತರನೊಡನೆ ಹೋರಾಡಿದನು ಮತ್ತು ನಿಶಿತವಾದ ಬಾಣಗಳಿಂದ ಅವನನ್ನು ಪ್ರಹರಿಸಿದನು. ಅದಕ್ಕೆ ಪ್ರತಿಯಾಗಿ ಉತ್ತರನೂ ಸಹ ನಿನ್ನ ಮಗನ ಮೇಲೆ ಬಾಣಗಳ ಪ್ರಯೋಗಮಾಡಿ ಅವನನ್ನು ಗಾಯ ಗೊಳಿಸಿದನು.

ಚೇದಿರಾಜನು ಆ ಮಹಾಯುದ್ಧದಲ್ಲಿ ಉಲೂಕನನ್ನು ಆಕ್ರಮಿಸಿ, ಬಾಣಗಳ ವರ್ಷದಿಂದ ಉಲೂಕನನ್ನು ಪ್ರಹರಿಸಿದನು. ಅದಕ್ಕೆ ಪ್ರತಿಯಾಗಿ ಉಲೂಕನೂ ಸಹ ಪಂಖಯುಕ್ತವಾದ ( ಗರಿಗಳಿಂದ ಕೂಡಿದ ), ಚೂಪಾದ ಬಾಣಗಳಿಂದ ಚೇದಿರಾಜನನ್ನು ಗಾಯಗೊಳಿಸಿದನು. ಮಹಾರಾಜ! ಅವರು ಮಾಡುತ್ತಿದ್ದ ಆ ಯುದ್ಧವು ಘೋರಯುದ್ಧವಾಗಿ ಪರಿಣಮಿಸಿತು. ಸುಸಂಕ್ರುದ್ಧರಾಗಿದ್ದ, ಅಪರಾಜಿತರಾಗಿದ್ದ ಆ ಇಬ್ಬರು ಯೋಧರೂ ಪರಸ್ಪರ ವಾಗಿ ಒಬ್ಬರನ್ನು–ಮತ್ತೊಬ್ಬರು ನಿಶಿತವಾದ ಬಾಣಗಳಿಂದ ಗಾಯ ಗೊಳಿಸಿದರು. ಈ ರೀತಿಯಾಗಿ ನಿನ್ನ ಮತ್ತು ಪಾಂಡವರ ರಥ, ಆನೆ, ಕುದುರೆ ಮತ್ತು ಪದಾತಿಗಳ ಸಾವಿರಾರು ದ್ವಂದ್ವಗಳು ಯುದ್ಧದಲ್ಲಿ ನಿರತವಾಗಿದ್ದುವು. ಒಂದು ಮುಹೂರ್ತಕಾಲ ಮಾತ್ರ ಮಹಾಯುದ್ಧವು ಮಧುರ ದರ್ಶನವಾಗಿದ್ದಿತು. ಅನಂತರ ಎರಡು ಪಕ್ಷಗಳ ಯೋಧರೂ ಉನ್ಮತ್ತ ರಾದವರಂತೆ ಯುದ್ಧದಲ್ಲಿ ತೊಡಗಿದರು. ಆ ಸಮಯದಲ್ಲಿ ಯಾರಿಗೂ ಏನೊಂದೂ ತಿಳಿಯುತ್ತಿರಲಿಲ್ಲ. ಗಜಸೈನಿಕನು–ಗಜಸೈನಿಕನನ್ನೇ ಎದುರಿಸಿ ಯುದ್ಧಮಾಡುತ್ತಿದ್ದನು. ರಥಿಕನು ರಥಿಕನೊಡನೆಯೇ ಯುದ್ಧ ಮಾಡುತ್ತಿದ್ದನು. ಅಶ್ವಸೈನಿಕನು-ಅಶ್ವಸೈನಿಕನನ್ನೇ ಎದುರಿಸಿ ಯುದ್ಧಮಾಡುತ್ತಿ ದ್ದನು. ಕಾಲಾಳು-ಕಾಲಾಳಿನೊಡನೆಯೇ ಯುದ್ಧಮಾಡುತ್ತಿದ್ದನು. ಸ್ವಲ್ಪ ಹೊತ್ತಿನನಂತರ ಶೂರರೇ ಸೇರಿದ್ದ ಆ ಸಮರಾಂಗಣದಲ್ಲಿ ಶೂರ- ವೀರರಾದ ಸೈನಿಕರು ತಮಗೆ ಸಾಟಿಯಾದವರೊಡನೆ ರೋಷಾವೇಶದಿಂದ ಕಾದಾಡುತ್ತಿದ್ದಾಗ ಯುದ್ಧವು ಅತ್ಯಂತ ದುರ್ಧರ್ಷವಾಗಿಯೂ, ವ್ಯಾಕುಲಮಯವಾಗಿಯೂ ಪರಿಣಮಿಸಿತು. ದೇವಾಸುರರ ಯುದ್ಧಕ್ಕೆ ಸಮಾನವಾಗಿದ್ದ ಪಾಂಡವ-ಕೌರವರ ಘೋರರೂಪವಾದ ಯುದ್ಧವನ್ನು ನೋಡುವುದಕ್ಕಾಗಿಯೇ ಬಂದಿದ್ದ ದೇವರ್ಷಿಗಳೂ, ಸಿದ್ಧರೂ, ಚಾರಣರೂ ಅದನ್ನು ಕಣ್ತುಂಬ ನೋಡಿದರು. ಅನಂತರ ಗಜಸೈನಿಕನು ಗಜಸೈನಿಕ ನನ್ನೇ ಎದುರಿಸಬೇಕೆಂದಿದ್ದ ದ್ವಂದ್ವಯುದ್ಧಕ್ರಮವು ಅಸ್ತವ್ಯಸ್ತವಾಯಿತು.

ಸಾವಿರಾರು ಆನೆಗಳ ಸೈನಿಕರೂ, ಸಾವಿರಾರು ರಥಿಕರೂ, ಸಾವಿರಾರು ಕುದುರೆ ಸವಾರರೂ, ಅಸಂಖ್ಯಾತರಾದ ಪದಾತಿಗಳೂ ಯುದ್ಧಕ್ಕೆ ಧುಮ್ಮಿಕ್ಕಿ ಸಿಕ್ಕಿ-ಸಿಕ್ಕಿದವರನ್ನು ಪ್ರಹರಿಸಲು ಪ್ರಾರಂಭಿಸಿದರು. ಆನೆಯ ಸೈನಿಕನು ಪದಾತಿಯನ್ನು ಹೊಡೆದಪ್ಪಳಿಸುತ್ತಿದ್ದನು. ಕುದುರೆಸವಾರನು ರಥಿಕನ ಮೇಲೆ ಬಾಣಪ್ರಯೋಗಮಾಡುತ್ತಿದ್ದನು. ಯಾರು ಯಾರ ಮೇಲೆ ಯುದ್ಧಮಾಡಬೇಕೆಂಬ ನಿಯಮವೇ ಹೊರಟುಹೋಯಿತು. ಎಲ್ಲೆಲ್ಲಿ ನೋಡಿದರೂ ರಥ-ಗಜಾಶ್ವ-ಪದಾತಿಗಳು ಸ್ವೇಚ್ಛೆಯಿಂದ ಯುದ್ಧಮಾಡುತ್ತಿದ್ದುದು ಕಾಣುತ್ತಿದ್ದಿತು. ಒಮ್ಮೆ ತಮ್ಮ ಶತ್ರುವಿನ ಪೆಟ್ಟನ್ನು ತಾಳಲಾರದೇ ಚದುರಿ ಹೋಗುತ್ತಿದ್ದರು. ಮತ್ತೊಮ್ಮೆ ಸಂಘಟಿತರಾಗಿ ಶತ್ರುವಿನ ಮೇಲೆ ಬೀಳುತ್ತಿದ್ದರು. ಈ ರೀತಿಯಲ್ಲಿ ಬಾರಿ-ಬಾರಿಗೂ ಗುಂಪುಗುಂಪಾಗಿ ಸೇರಿಕೊಂಡು ಚತುರಂಗ ಬಲವು ಯುದ್ಧಮಾಡುತ್ತಿರುವುದು ಕಂಡುಬರುತ್ತಿದ್ದಿತು.

ಳ೫ನೆಯ ಅಧ್ಯಾಯವು ಮುಗಿಯಿತು.

ಳ೬ನೆಯ ಅಧ್ಯಾಯ ಭೀಷ್ಮವಧಪರ್ವ (ಮುಂದುವರಿದಿದೆ.)

## ಕೌರವ-ಪಾಂಡವರ ಘೋರಯುದ್ಧ

ಮಹಾರಾಜ! ಆ ಸಮಯದಲ್ಲಿ ಪದಾತಿಸೈನಿಕರ ಅನಿಯಮಿತವಾದ ಅಥವಾ ಮರ್ಯಾದೆಮೀರಿದ ಯುದ್ಧವು ನಡೆಯಿತು. ಅದನ್ನು ನಿನಗೆ ವಿವರಿಸಿ ಹೇಳುತ್ತೇನೆ :

**ನ ಪುತ್ರಃ ಪಿತರಂ ಜಜ್ಞೇ ಪಿತಾ ವಾ ಪುತ್ರಮೌರಸಮ್ ।**
**ನ ಭ್ರಾತಾ ಭ್ರಾತರಂ ತತ್ರ ಸ್ವಸ್ರೀಯಂ ನ ಚ ಮಾತುಲಃ ॥೨॥**

ಮಗನು ತಂದೆಯನ್ನು ತಿಳಿಯಲಾಗುತ್ತಿರಲಿಲ್ಲ. ತಂದೆಯಾದವನಿಗೆ ತನ್ನ ಔರಸಪುತ್ರನಾರೆಂಬುದನ್ನು ತಿಳಿಯಲಾಗುತ್ತಿರಲಿಲ್ಲ. ಅಣ್ಣನಾದವನಿಗೆ–ತಮ್ಮನಾರೆಂಬುದನ್ನು ತಿಳಿಯಲಾಗುತ್ತಿರಲಿಲ್ಲ. ತಮ್ಮನಿಗೆ–ಅಣ್ಣನಾರೆಂಬು ದನ್ನು ತಿಳಿಯಲಾಗುತ್ತಿರಲಿಲ್ಲ. ಸೋದರಮಾವನಿಗೆ ತನ್ನ ಸೋದರಿಯ ಮಗನಾರೆಂಬುದನ್ನು ತಿಳಿಯಲಾಗುತ್ತಿರಲಿಲ್ಲ. (ತಂದೆ-ಮಗ-ಅಳಿಯ-ಮಾವ ಮುಂತಾದ ಯಾವ ಸಂಬಂಧವನ್ನೂ ಲೆಕ್ಕಿಸದೆ ಪರಸ್ಪರವಾಗಿ ಯುದ್ಧಮಾಡುತ್ತಿದ್ದರು.)

**ನ ಮಾತುಲಂ ಚ ಸ್ವಸ್ರೀಯೋ ನ ಸಖಾಯಂ ಸಖಾ ತಥಾ ।**
**ಆವಿಷ್ಟಾ ಇವ ಯುಧ್ಯನ್ತೇ ಪಾಣ್ಡವಾಃ ಕುರುಭಿಃ ಸಹ ॥೩॥**

ಸೋದರಳಿಯನಿಗೆ ತನ್ನ ಸೋದರಮಾವನಾರೆಂಬುದನ್ನು ತಿಳಿಯಲಾಗುತ್ತಿರಲಿಲ್ಲ. ಮಿತ್ರನಿಗೆ ತನ್ನ ಮಿತ್ರನಾರೆಂಬುದನ್ನು ತಿಳಿಯಲಾಗುತ್ತಿರಲಿಲ್ಲ. ಈ ರೀತಿಯಲ್ಲಿ ಆವೇಶಗೊಂಡ ಪಾಂಡವ-ಕೌರವಸೈನಿಕರು ಯುದ್ಧ ಮಾಡುತ್ತಿದ್ದರು. ಕೆಲವು ನರಪುಂಗವರು ತಮ್ಮ ರಥಗಳಿಂದಲೇ ಶತ್ರುಪಕ್ಷದ ರಥಸೈನ್ಯದ ಮೇಲೆ ದಾಳಿ ನಡೆಸುತ್ತಿದ್ದರು. ಮತ್ತೆ ಕೆಲವರು ರಥಗಳ ನೊಗಗಳಿಂದಲೇ ಶತ್ರುಪಕ್ಷದ ರಥಗಳ ನೊಗಗಳನ್ನು ಮುರಿದುಹಾಕುತ್ತಿದ್ದರು. ಒಬ್ಬರು ಮತ್ತೊಬ್ಬರನ್ನು ಧ್ವಂಸಮಾಡಬೇಕೆನ್ನುವ ಇಚ್ಛೆಯಿಂದ ಆ ಯೋಧರು ತಮ್ಮ ರಥಗಳ ಮೂಕೀಮರವನ್ನು ಎದುರಾಳಿಯ ರಥದ ಮೂಕೀಮರಕ್ಕೆ ಅಪ್ಪಳಿಸುತ್ತಿದ್ದರು. ಮತ್ತೆ ಕೆಲವರು ತಮ್ಮ ರಥಗಳಿಂದ ಎದುರುಪಕ್ಷದ ರಥಗಳನ್ನು ಅಪ್ಪಳಿಸುತ್ತಿದ್ದರು. ಹೀಗೆ ಎರಡು ರಥಗಳೂ ಒಂದಕ್ಕೊಂದು ಸೇರಿಕೊಂಡನಂತರ ಅವರು ಹಿಂದೆ-ಮುಂದೆ ಚಲಿಸಲೂ ಸಾಧ್ಯವಾಗುತ್ತಿರಲಿಲ್ಲ. ಗಂಡಸ್ಥಳದಲ್ಲಿ ಮದೋದಕವನ್ನು ಸುರಿಸುತ್ತಿದ್ದ ದೊಡ್ಡ ಶರೀರದಿಂದ ಕೂಡಿದ್ದ ಕೋಪಗೊಂಡ ಆನೆಗಳು ಅದೇ ರೀತಿಯಲ್ಲಿ ಮದಿಸಿದ ಆನೆಗಳಿಂದ ಎದುರಿಸಲ್ಪಟ್ಟುವುಗಳಾಗಿ ತಮ್ಮ-ತಮ್ಮ ದಂತಗಳಿಂದ ಎದುರಾಳಿಗಳಾದ ಆನೆಗಳನ್ನು ಶರೀರಾದ್ಯಂತವಾಗಿ ಸೀಳಿಬಿಡುತ್ತಿದ್ದುವು. ತೋರಣ-ಪತಾಕೆಗಳಿಂದ ಕೂಡಿದ್ದ ಆನೆಗಳು ಶ್ರೇಷ್ಠವಾದ ವೇಗಶಾಲಿಗಳಾಗಿದ್ದ ಮಹಾಗಜಗಳಿಂದ ಎದುರಿಸಲ್ಪಟ್ಟು ಆ ಆನೆಗಳ ದಂತಗಳ ಆಘಾತದಿಂದ ಪೀಡಿತವಾಗಿ ಚೀತ್ಕಾರಮಾಡುತ್ತಿದ್ದುವು. ಅನೇಕಪ್ರಕಾರವಾದ ಶಿಕ್ಷಣಗಳಿಂದ ಯುದ್ಧಕ್ಕೆ ಸಜ್ಜುಗೊಳಿಸಲ್ಪಟ್ಟಿದ್ದು ಮದಿಸದೇ ಇದ್ದ ಆನೆಗಳನ್ನು ಚಾವಟಿ ಮತ್ತು ಅಂಕುಶಗಳಿಂದ ತಿವಿದು-ತಿವಿದು ಮದಿಸಿದ್ದ ಆನೆಗಳಿಗೆ ಎದುರಾಗಿ ಯುದ್ಧಕ್ಕೆ ನಿಲ್ಲಿಸುತ್ತಿದ್ದರು. ಕೆಲವು ಮಹಾಗಜಗಳು ಮದಿಸಿದ ಗಜಗಳೊಡನೆ ಕಾದಾಡಿ ಪೆಟ್ಟುತಿಂದು ಕ್ರೌಂಚಪಕ್ಷಿಗಳು ಕೂಗುವ ರೀತಿಯಲ್ಲಿ ಕಿರುಚಿಕೊಳ್ಳುತ್ತಾ ದಿಕ್ಕಾಪಾಲಾಗಿ ಓಡಿಹೋಗುತ್ತಿದ್ದುವು. ಸುಶಿಕ್ಷಿತವಾಗಿದ್ದ ಅನೇಕ ಆನೆಗಳೂ ಮತ್ತು ಗಂಡಸ್ಥಳದಿಂದ ಮದೋದಕವನ್ನು ಸುರಿಸುತ್ತಿದ್ದ ಶ್ರೇಷ್ಠವಾದ ಆನೆಗಳೂ ಋಷ್ಟಿ, ತೋಮರ ಮತ್ತು ಬಾಣಗಳಿಂದ ಅಂಗೋಪಾಂಗಗಳಲ್ಲಿಯೂ ಪೆಟ್ಟುತಿಂದು ಕತ್ತರಿಸಲ್ಪಟ್ಟ ಮರ್ಮ

ಸ್ಥಳವುಳ್ಳವುಗಳಾಗಿ ಗಟ್ಟಿಯಾಗಿ ಅರಚಿಕೊಳ್ಳುತ್ತಿದ್ದುವು, ಮತ್ತೆ ಕೆಲವು ಅಸುವನ್ನು ತೊರೆದು ಕೆಳಗೆ ಬೀಳುತ್ತಿದ್ದುವು, ಮತ್ತೆ ಕೆಲವು ಭಯಂಕರವಾಗಿ ಶಬ್ದಮಾಡುತ್ತಾ ದಿಕ್ಕಾಪಾಲಾಗಿ ಓಡುತ್ತಿದ್ದುವು. ಮಹಾರಾಜ! ಆನೆಗಳ ಪಾದರಕ್ಷಕರಾಗಿದ್ದ ವಿಶಾಲವಕ್ಷರಾಗಿದ್ದ ಪ್ರಹಾರಿಗಳು (ಯೋಧರು) ಬಹಳ ಕೋಪಗೊಂಡವರಾಗಿ ತಮ್ಮ ಕೈಗಳಲ್ಲಿದ್ದ ಋಷ್ಟಿಗಳಿಂದಲೂ, ಧನುಸ್ಸುಗಳಿಂದಲೂ, ಹರಿತವಾದ ಗಂಡುಗೊಡಲಿಗಳಿಂದಲೂ, ಗದೆಗಳಿಂದಲೂ, ಒನಕೆಗಳಿಂದಲೂ, ಭಿಂದಿಪಾಲಗಳಿಂದಲೂ, ತೋಮರಗಳಿಂದಲೂ, ಲೋಹಮಯವಾದ ಪರಿಘಾಯುಧಗಳಿಂದಲೂ, ಚೂಪಾಗಿಯೂ, ಸ್ವಚ್ಛವಾಗಿಯೂ ಇದ್ದ ನಿಸ್ತ್ರಿಂಶ (ಖಡ್ಗ) ಗಳಿಂದಲೂ ಒಬ್ಬರು ಮತ್ತೊಬ್ಬರನ್ನು ಸಂಹಾರಮಾಡುವ ಆಶಯದಿಂದ ಇಲ್ಲಿಂದಲ್ಲಿಗೆ–ಅಲ್ಲಿಂದಿಲ್ಲಿಗೆ ರಭಸದಿಂದ ಓಡಾಡುತ್ತಿರುವುದು ಕಂಡುಬರುತ್ತಿದ್ದಿತು. ಪರಸ್ಪರವಾಗಿ ಕಾದಾಡಲು ಮುನ್ನುಗ್ಗುತ್ತಿದ್ದ ಯೋಧರ ನರರಕ್ತಸಿಕ್ತವಾದ ಕತ್ತಿಗಳು ಪ್ರಕಾಶಮಾನವಾಗಿ ತೋರುತ್ತಿದ್ದುವು. ವೀರರ ಬಾಹುಗಳಿಂದ ತಿರುಗಿಸಿ-ತಿರುಗಿಸಿ (ವರಸೆಯ ಮೂಲಕವಾಗಿ) ಪ್ರಯೋಗಿಸಲ್ಪಡುತ್ತಿದ್ದ ಕತ್ತಿಗಳು ಶತ್ರುಗಳ ಮರ್ಮಸ್ಥಳಗಳಲ್ಲಿ ಬಿದ್ದೊಡನೆಯೇ ಭಯಂಕರವಾದ ದಾರುಣಶಬ್ದವು ಕೇಳಿಬರುತ್ತಿದ್ದಿತು. ಗದೆ ಮತ್ತು ಮುಸಲಾಯುಧಗಳಿಂದ ಅನೇಕರಿಗೆ ಗಾಯಗಳಾಗಿದ್ದುವು. ಶ್ರೇಷ್ಠವಾದ ಕತ್ತಿಗಳಿಂದ ಅನೇಕರ ಅಂಗಾಂಗಗಳು ಕತ್ತರಿಸಲ್ಪಟ್ಟಿದ್ದುವು. ಆನೆಗಳ ಕೋರೆದಾಡೆಗಳ ಪ್ರಹಾರದಿಂದ ಅನೇಕರು ಮೂಳೆಗಳನ್ನು ಮುರಿದುಕೊಂಡಿದ್ದರು. ಅನೇಕ ಸೈನಿಕರು ಆನೆಗಳ ಕಾಲಿಗೆ ಸಿಕ್ಕಿ ಜಜ್ಜಿಹೋಗಿದ್ದರು. ಈ ರೀತಿಯಾಗಿ ಸೈನಿಕರು ಅನೇಕ ರೀತಿಯಲ್ಲಿ ಪೆಟ್ಟುತಿಂದು ಪರಸ್ಪರವಾಗಿ ಕಿರುಚಿಕೊಳ್ಳುತ್ತಿದ್ದ ರೋದನಶಬ್ದವು ಹೃದಯವಿದ್ರಾವಕವಾಗಿ ಕೇಳಿಬರುತ್ತಿದ್ದಿತು. ಅದನ್ನು ನೋಡಿದರೇ ಪ್ರೇತಗಳೇ ಏನಾದರೂ ಕಿರುಚಿಕೊಳ್ಳುತ್ತಿವೆಯೋ ಎಂಬಂತೆ ಕಾಣುತ್ತಿದ್ದಿತು. ಚಾಮರವನ್ನೇ ತಲೆಯಲ್ಲಿ ಆಭರಣವನ್ನಾಗಿ ಧರಿಸಿರುವ, ಹಂಸಗಳಂತೆ ಬಿಳುಪಾಗಿಯೂ ವೇಗಯುಕ್ತವಾಗಿಯೂ ಇದ್ದ ಕುದುರೆಗಳಿಂದ ಕೂಡಿದ್ದ ಉಭಯಪಕ್ಷಗಳ ಕುದುರೆಸವಾರರು ಪರಸ್ಪರವಾಗಿ ಆಕ್ರಮಣ ನಡೆಸಿದರು. ಕುದುರೆಸವಾರರಿಂದ ಪ್ರಯೋಗಿಸಲ್ಪಟ್ಟ, ಚಿನ್ನದಿಂದ ವಿಭೂಷಿತಗಳಾಗಿದ್ದ, ಬಹುಶೀಘ್ರಗಾಮಿಗಳಾಗಿದ್ದ, ಶುಭ್ರವಾಗಿಯೂ ತೀಕ್ಷ್ಣವಾಗಿಯೂ

ಇದ್ದ ದೊಡ್ಡ ಪ್ರಾಸಗಳು (ಭಲ್ಲೆಗಳು) ಸರ್ಪಗಳೋಪಾದಿಯಲ್ಲಿ ಯೋಧರ ಮೇಲೆ ಬಿದ್ದುವು. ವೀರರಾದ ಕೆಲವು ಅಶ್ವಸೈನಿಕರು ಅತಿಶೀಘ್ರವಾಗಿ ಓಡುತ್ತಿದ್ದ ಕುದುರೆಗಳ ಮೇಲೆ ಕುಳಿತು ಎದುರಾಗಿ ಸಿಕ್ಕುತ್ತಿದ್ದ ಶತ್ರುಗಳ ರಥಗಳ ಮೇಲೆಯೇ ಕುದುರೆಗಳನ್ನು ಹಾರಿಸಿಕೊಂಡು–ಹಾಗೆ ಹಾರಿಸುವಾಗ–ರಥಗಳಲ್ಲಿದ್ದ ರಥಿಕರ ಶಿರಸ್ಸುಗಳನ್ನೂ ಸಹ ಕತ್ತರಿಸಿ ತರುತ್ತಿದ್ದರು. ಆ ಸಮಯದಲ್ಲಿ ರಥಿಗಳೂ ಸುಮ್ಮನಿರುತ್ತಿರಲಿಲ್ಲ. ಬಗ್ಗಿದ ಗಿಣ್ಣುಗಳಿಂದ ಕೂಡಿದ್ದ, ಭಲ್ಲ ಎಂಬ ಬಾಣವಿಶೇಷಗಳಿಂದ ರಥದ ಹತ್ತಿರ ವೇಗವಾಗಿ ಬರುತ್ತಿದ್ದ ಬಾಣಗಳ ಹೊಡೆತಕ್ಕೆ ಸಿಕ್ಕುವಷ್ಟು ದೂರದಲ್ಲಿದ್ದ ಅನೇಕ ಅಶ್ವಸೈನಿಕರನ್ನು ಹೊಡೆದುರುಳಿಸುತ್ತಿದ್ದರು. ಹೊಸದಾದ ಮೇಘಗಳಂತೆ ಕಾಣುತ್ತಿದ್ದ, ಸುವರ್ಣದ ಹೌದಾ (ಅಂಬಾರಿ)ಗಳಿಂದ ಅಲಂಕೃತವಾಗಿದ್ದ ಮದಿಸಿದ ಆನೆಗಳು ತಮ್ಮೆದುರಾಗಿ ಸಿಕ್ಕಿದ ಅಶ್ವಸೈನಿಕರನ್ನು ಸೊಂಡಿಲುಗಳಿಂದ ಸೆಳೆದು ಕೆಳಕ್ಕೆ ಕೆಡವಿ ಕಾಲುಗಳಿಂದ ತುಳಿದು ಮರ್ದನಮಾಡಿಬಿಡುತ್ತಿದ್ದುವು.

ಪಾರ್ಶ್ವಗಳಲ್ಲಿಯೂ, ಕುಂಭಸ್ಥಳಗಳಲ್ಲಿಯೂ ಪ್ರಾಸಾಯುಧಗಳಿಂದ ಪ್ರಹರಿಸಲ್ಪಟ್ಟ ಕೆಲವು ಆನೆಗಳು ಗಾಯಗೊಳಿಸಲ್ಪಟ್ಟುವುಗಳಾಗಿ ಕಿರುಚಿಕೊಳ್ಳುತ್ತಿದ್ದುವು. ಕೆಲವು ದೊಡ್ಡ-ದೊಡ್ಡ ಮದಿಸಿದ ಆನೆಗಳು ಸವಾರರಿಂದ ಕೂಡಿದ ಕುದುರೆಗಳನ್ನೇ ಕೆಳಕ್ಕೆ ಕೆಡವಿ ತುಳಿದು ಭಗ್ನಮಾಡಿ ಪುನಃ ಭಯಂಕರವಾಗಿ ಕಾಣುತ್ತಿದ್ದ ಆ ರಣರಂಗದಲ್ಲಿ ತಮ್ಮ ಸೊಂಡಿಲುಗಳಿಂದಲೇ ಎತ್ತಿ ಎಸೆಯುತ್ತಿದ್ದುವು. ಮತ್ತೆ ಕೆಲವು ಮದಗಜಗಳು ಸವಾರರಿಂದ ಕೂಡಿದ್ದ ಕುದುರೆಗಳನ್ನು ತಮ್ಮ ಕೋರೆದಾಡೆಗಳಿಂದ ತಿವಿದು ಮೇಲೆತ್ತಿ ಹಾಕಿ ಧ್ವಂಸ ಮಾಡಿ, ಬಾವುಟಗಳಿಂದ ಕೂಡಿದ್ದ ಆ ರಥಗಳನ್ನೂ ಸಹ ಧ್ವಂಸಮಾಡುತ್ತಾ ರಣಾಂಗಣದಲ್ಲಿ ಸ್ವೇಚ್ಛೆಯಿಂದ ಸಂಚರಿಸುತ್ತಿದ್ದುವು. ಪುಂಸ್ತ್ವದಿಂದಲೂ ಮತ್ತು ಮದಯುಕ್ತವಾಗಿದ್ದುದರಿಂದಲೂ ಅಲ್ಲಿದ್ದ ಕೆಲವು ದೊಡ್ಡ-ದೊಡ್ಡ ಆನೆಗಳು ಸವಾರರಿಂದ ಕೂಡಿದ್ದ ಕುದುರೆಗಳನ್ನು ಮೊದಲು ಸೊಂಡಿಲಿನಿಂದ ಕೆಳಕ್ಕೆ ಕೆಡವಿ ಅನಂತರ ಕಾಲಿನಲ್ಲಿ ಮೆಟ್ಟಿಕೊಂಡು ಕುದುರೆಯನ್ನೂ ಸವಾರನನ್ನೂ ಒಟ್ಟಿಗೇ ಸೀಳಿಹಾಕುತ್ತಿದ್ದುವು. (ಸೊಂಡಿಲುಗಳಿಂದಲೂ ಕಾಲುಗಳಿಂದಲೂ ಕೊಲ್ಲುತ್ತಿದ್ದುವು) ಆ ಮಹಾಯುದ್ಧದಲ್ಲಿ ಅಶ್ವಾರೋಹಿಗಳಿಂದಲೂ, ಗಜಾರೋಹಿಗಳಿಂದಲೂ ಬಿಡಲ್ಪಟ್ಟ, ವೇಗವಾಗಿ ಹೋಗುವ ಸ್ವಚ್ಛವಾದ, ತೀಕ್ಷ್ಣ

ವಾದ, ಸರ್ಪಸದೃಶವಾಗಿದ್ದ ಭಯಂಕರವಾದ ಬಾಣಗಳು ಆನೆಗಳ ನೆತ್ತಿಗಳ ಮೇಲೂ, ಅಂಗಾಂಗಗಳಲ್ಲಿಯೂ ಮತ್ತು ಪಾರ್ಶ್ವಗಳಲ್ಲಿಯೂ ಬಿದ್ದು ಗಾಯ ಗೊಳಿಸಿದುವು. ಬಲಿಷ್ಠವಾದ ಬಾಹುಗಳುಳ್ಳವರಿಂದ ಅಶ್ವಸೈನಿಕರ ಮೇಲೆ ಎಸೆಯಲ್ಪಡುತ್ತಿದ್ದ ವಿಮಲವಾದ ಶಕ್ತ್ಯಾಯುಧಗಳು ಕುದುರೆಗಳ ಮೇಲಿದ್ದ ಮತ್ತು ಸವಾರರ ಮೈಮೇಲಿದ್ದ ಲೋಹಮಯಕವಚಗಳನ್ನೂ, ಕುದುರೆಗಳ ಮತ್ತು ಸವಾರರ ದೇಹಗಳನ್ನೂ ಭೇದಿಸಿಕೊಂಡು ಹೊರಬಂದು ಘೋರ ವಾದ ದೊಡ್ಡ-ದೊಡ್ಡ ಉಲ್ಕೆಗಳಂತೆ ಭೂಮಿಯ ಮೇಲೆ ಬೀಳುತ್ತಿದ್ದುವು. ಚಿರತೆಯ ಚರ್ಮದಿಂದಲೂ ಮತ್ತು ಹುಲಿಯ ಚರ್ಮದಿಂದಲೂ ಮಾಡಿದ್ದ, ಒರೆಯಿಂದ ಹೊರತೆಗೆದ, ಧೂಳಿನಿಂದ ರಹಿತವಾಗಿದ್ದ ಖಡ್ಗ ಗಳಿಂದ ವೀರಪುರುಷರು ಪರಸ್ಪರವಾಗಿ ಆ ಮಹಾಯುದ್ಧದಲ್ಲಿ ಕಾದಾಡಿ ದರು. ಅನೇಕ ಸೈನಿಕರು ತಮ್ಮ ಶರೀರದ ಒಂದು ಭಾಗವೇ ಕತ್ತರಿಸಲ್ಪಟ್ಟಿ ದ್ದರೂ ಸಹ ಧೈರ್ಯಗುಂದದವರಾಗಿ ಮುನ್ನುಗ್ಗುತ್ತಿದ್ದರು. ಪರಮಕ್ರುದ್ಧರಾಗಿ ಹಲ್ಲುಗಳನ್ನು ಕಟ-ಕಟಾಯಿಸುತ್ತಿದ್ದರು. ತಮ್ಮ ಪರಾಕ್ರಮವನ್ನು ಪ್ರದರ್ಶಿ ಸುತ್ತಾ ಕತ್ತಿ-ಗುರಾಣಿಗಳಿಂದಲೂ ಕೊಡಲಿಗಳಿಂದಲೂ ಕೂಡಿದವರಾಗಿ ಶತ್ರುವಿನ ಮೇಲೆ ಬೀಳುತ್ತಿದ್ದರು. ತಮ್ಮ ಸುತ್ತಲೂ ಆಗುತ್ತಿದ್ದ ಘೋರಶಬ್ದ ಗಳಿಂದ ರೊಚ್ಚಿಗೆದ್ದ ಕೆಲವು ಆನೆಗಳು ಕುದುರೆಗಳಿಂದ ಯುಕ್ತವಾಗಿದ್ದ ರಥಗಳನ್ನೇ ಸೊಂಡಿಲುಗಳಿಂದ ಎಳೆಯುತ್ತಾ ರಣಾಂಗಣದಲ್ಲಿ ಸಂಚರಿಸುತ್ತಿ ದ್ದುವು. ಆ ರಣಾಂಗಣದಲ್ಲಿ ಕೆಲವು ಸೈನಿಕರು ಚೂಪಾದ ಮೊನೆಯುಳ್ಳ ಶಸ್ತ್ರ ಗಳಿಂದ ಚುಚ್ಚಲ್ಪಟ್ಟವರಾಗಿ ಬಿದ್ದಿದ್ದರು. ಮತ್ತೆ ಕೆಲವರು ಗಂಡುಗೊಡಲಿ ಗಳಿಂದ ಛಿನ್ನ-ಭಿನ್ನವಾಗಿ ಮಾಡಲ್ಪಟ್ಟು ಬಿದ್ದಿದ್ದರು. ಕೆಲವರು ಆನೆಗಳಿಂದ ತುಳಿಯಲ್ಪಟ್ಟಿದ್ದರು. ಮತ್ತೆ ಕೆಲವರು ಕುದುರೆಗಳಿಂದ ಕೆಳಕ್ಕೆ ಎಸೆಯಲ್ಪಟ್ಟಿ ದ್ದರು. ಕೆಲವರು ರಥದ ಚಕ್ರಗಳಿಗೆ ಸಿಕ್ಕಿಬಿದ್ದಿದ್ದರು. ಮತ್ತೆ ಕೆಲವರು ಪರಶ್ವಧ ಗಳಿಂದ ತುಂಡಾಗಿ ಮಾಡಲ್ಪಟ್ಟಿದ್ದರು. ಹೀಗೆ ಅರ್ಧಪ್ರಾಣರಾಗಿ ಬಿದ್ದಿದ್ದ ಸೈನಿ ಕರು ತಮ್ಮ ತಮ್ಮ ಬಂಧುಗಳ ಮತ್ತು ಸ್ನೇಹಿತರ ಹೆಸರುಗಳನ್ನು ಹೇಳುತ್ತಾ ಕೂಗಿಕೊಳ್ಳುತ್ತಿದ್ದರು. ಕೆಲವರು ಮಕ್ಕಳ ಹೆಸರುಗಳನ್ನೂ, ಕೆಲವರು ತಂದೆ-ತಾಯಿಯರ ಹೆಸರುಗಳನ್ನೂ, ಕೆಲವರು ಅಣ್ಣ-ತಮ್ಮಂದಿರ ಹೆಸರು ಗಳನ್ನೂ ಹೇಳುತ್ತಾ ಕೂಗಿಕೊಳ್ಳುತ್ತಿದ್ದರು. ಮತ್ತೆ ಕೆಲವರು ಬಂಧುಗಳನ್ನೂ,

ಸೋದರಮಾವನನ್ನೂ, ಸೋದರಳಿಯನನ್ನೂ ಮತ್ತು ಇತರರನ್ನೂ ಅವರ ವರ ಹೆಸರುಗಳಿಂದ ಕರೆಯುತ್ತಾ ರೋದನಮಾಡುತ್ತಿದ್ದರು.

ಅನೇಕಯೋಧರ ಕರುಳುಗಳೇ ಹೊರಕ್ಕೆ ಬಂದುಬಿಟ್ಟಿದ್ದುವು. ಹಲ ವಾರು ಮಂದಿಗೆ ತೊಡೆಗಳು ಮುರಿದುಹೋಗಿದ್ದುವು. ಮತ್ತೆ ಕೆಲವರಿಗೆ ತೋಳುಗಳೇ ಕತ್ತರಿಸಲ್ಪಟ್ಟಿದ್ದುವು. ಮತ್ತೆ ಕೆಲವರಿಗೆ ಒಂದು ಪಾರ್ಶ್ವವೇ ಕತ್ತರಿಸಿಹೋಗಿದ್ದಿತು. ಅವರೆಲ್ಲರೂ ಬಾಯಾರಿಕೆಯಿಂದ ಪೀಡಿತರಾಗಿ ಇನ್ನೂ ಜೀವದಿಂದುಳಿದುಕೊಳ್ಳಬೇಕೆಂಬ ಆಸೆಯಿಂದ ಕೂಗಿಕೊಳ್ಳುತ್ತಿದ್ದರು. ಆ ಸಮರಾಂಗಣದಲ್ಲಿ ಶಸ್ತ್ರಗಳ ಆಘಾತದಿಂದ ಭೂಮಿಯ ಮೇಲೆ ಬಿದ್ದಿದ್ದ ಅಲ್ಪಬಲರಾದ ಕೆಲವರು ಬಾಯಾರಿಕೆಯಿಂದ ಪೀಡಿತರಾಗಿ ನೀರಿಗಾಗಿ ಹಾತೊರೆಯುತ್ತಿದ್ದರು. ರಕ್ತದ ಪ್ರವಾಹದಿಂದ ತೋಯ್ದುಹೋಗಿದ್ದ ಮತ್ತು ನೋವಿನಿಂದ ಬಹುವಾಗಿ ಸಂಕಟಪಡುತ್ತಿದ್ದ ಹಲವಾರು ಯೋಧರು (ನಿನ್ನ ಪಕ್ಷಕ್ಕೆ ಸೇರಿದುದಕ್ಕಾಗಿ) ತಮ್ಮನ್ನು ತಾವೇ ನಿಂದಿಸಿಕೊಳ್ಳುತ್ತಿದ್ದರು ಮತ್ತು ರಣರಂಗದಲ್ಲಿಯೇ ಇದ್ದ ನಿನ್ನ ಮಕ್ಕಳನ್ನೂ ಬಹುವಾಗಿ ನಿಂದಿಸುತ್ತಿದ್ದರು. ಇತರ ಕ್ಷತ್ರಿಯವೀರರು ಪರಸ್ಪರವಾಗಿ ವೈರವನ್ನೇ ಸಾಧಿಸುತ್ತಿದ್ದು ಯದ್ಯಪಿ ಭೂಮಿಯ ಮೇಲೆ ಗಾಯಗೊಂಡು ಬಿದ್ದಿದ್ದರೂ ಸಹ ಶಸ್ತ್ರಗಳನ್ನು ಕೈಯಿಂದ ಬಿಟ್ಟಿರಲಿಲ್ಲ; ಅಳುತ್ತಲೂ ಇರಲಿಲ್ಲ. ಯುದ್ಧಮಾಡುವುದರಲ್ಲಿಯೇ ಸಂತೋಷಪಡುತ್ತಿದ್ದ ಕೆಲವು ವೀರಯೋಧರು ತಾವು ಮಾಡಿದ ಯುದ್ಧ ದಿಂದ ಸಂತೃಪ್ತರಾಗಿ ಪರಸ್ಪರವಾಗಿ ಭಯಪಡಿಸುತ್ತಿದ್ದರು. ಹಲ್ಲುಗಳನ್ನು ಕಟ-ಕಟಾಯಿಸುತ್ತಿದ್ದರು. ಕೋಪದಿಂದ ಅವುಡುಕಚ್ಚುತ್ತಿದ್ದರು. ಗಂಟಿಕ್ಕಿದ ಹುಬ್ಬುಗಳುಳ್ಳ ಮುಖಗಳಿಂದ ಒಬ್ಬರು ಮತ್ತೊಬ್ಬರನ್ನು ಕ್ರೂರದೃಷ್ಟಿಯಿಂದ ನೋಡುತ್ತಿದ್ದರು. ಇಷ್ಟನ್ನೆಲ್ಲಾ ರಣಾಂಗಣದಲ್ಲಿ ಗಾಯಗೊಂಡು ಬಿದ್ದಿರು ವಾಗಲೇ ಮಾಡುತ್ತಿದ್ದರು. ಮತ್ತೆ ಕೆಲವು ಮಹಾಸತ್ತ್ವರಾದ, ಮಹಾಪರಾ ಕ್ರಮಿಗಳಾದ ವೀರಯೋಧರು ಬಾಣಗಳ ಪ್ರಹಾರದಿಂದ ಗಾಯಗೊಂಡವ ರಾಗಿ ಬಹುಪೀಡಿತರಾಗಿದ್ದರೂ, ಕ್ಲೇಶವನ್ನು ಅನುಭವಿಸುತ್ತಿದ್ದರೂ ಸಹ ಆ ನೋವನ್ನು ಹಾಗೆಯೇ ನುಂಗಿಕೊಂಡು ಹೊರಕ್ಕೆ ತೋರಿಸದೇ ಮೌನಿಗಳಾ ಗಿದ್ದುಬಿಡುತ್ತಿದ್ದರು. ಮತ್ತೆ ಕೆಲವು ಯೋಧರ ರಥಗಳು ಭಗ್ನವಾಗಿ ಹೋಗಿ ದ್ದುವು. ಅವರು ಬೇರೆಯವರ ರಥದಲ್ಲಿ ಕುಳಿತುಕೊಳ್ಳಲು ಕೆಳಗೆ ನಿಂತು

ರಥಿಕರನ್ನು ಪ್ರಾರ್ಥಿಸಿಕೊಳ್ಳುವ ಸಮಯಕ್ಕೆ ಸರಿಯಾಗಿ ರಭಸದಿಂದ ಬರುತ್ತಿದ್ದ ಮದಿಸಿದ ಆನೆಗಳಿಂದ ಕೆಳಗೆ ಬೀಳಿಸಲ್ಪಟ್ಟು ಆನೆಗಳ ಕಾಲಿಗೆ ಸಿಕ್ಕಿ ಮರ್ದನವಾಗಿಬಿಡುತ್ತಿದ್ದರು. ಅವರ ಅಂಗಾಂಗಗಳಿಂದ ರಕ್ತವು ಝುಲ್ ಎಂದು ಹೊರಹೊಮ್ಮುತ್ತಿದ್ದಿತು. ಆ ಸಮಯದಲ್ಲಿ ಅವರು–ಹೂಗಳಿಂದ ಕೂಡಿ ಕತ್ತರಿಸಿ ಬಿದ್ದಿರುವ ಮುತ್ತುಗದ ಮರಗಳಂತೆಯೇ–ಕಾಣುತ್ತಿದ್ದರು. ವೀರಶ್ರೇಷ್ಠರನ್ನು ನಿರ್ನಾಮಗೊಳಿಸುವ ಬಹುಭಯಂಕರವಾದ ಆ ಯುದ್ಧವು ನಡೆಯುತ್ತಿರಲಾಗಿ ಸೈನ್ಯಗಳ ಮಧ್ಯದಲ್ಲಿ ಅನೇಕವಿಧವಾದ ಭಯಂಕರಶಬ್ದಗಳು ಕೇಳಿಬರುತ್ತಿದ್ದುವು. ಆ ಮಹಾಯುದ್ಧದಲ್ಲಿ ತಂದೆಯು ಮಗನನ್ನೇ ಕೊಂದನು. ಮಕ್ಕಳು-ತಮ್ಮ ಪಿತೃಗಳನ್ನೇ ಕೊಂದರು. ಸೋದರಳಿಯನು–ಸೋದರಮಾವನನ್ನೇ, ಸೋದರಮಾವನು–ಸೋದರಳಿಯನನ್ನೇ ಕೊಂದರು. ಸ್ನೇಹಿತನು ಸ್ನೇಹಿತನನ್ನೇ ಕೊಂದನು. ಬಂಧುಗಳಾದವರು ತಮ್ಮ ಬಾಂಧವರನ್ನೇ ಕೊಂದುಹಾಕಿದರು. ಈ ರೀತಿಯಾಗಿ ಯಾವ ವಿಧವಾದ ದಯಾ-ದಾಕ್ಷಿಣ್ಯಗಳೂ ಇಲ್ಲದೆ ಆ ರಣರಂಗದಲ್ಲಿ ಕೌರವರು ಪಾಂಡವರೊಡನೆ ಯುದ್ಧಮಾಡುತ್ತಿದ್ದರು. ಮರ್ಯಾದೆ ಮೀರಿದ, ಅಸ್ತವ್ಯಸ್ತವಾಗಿ ನಡೆಯುತ್ತಿದ್ದ ಭಯಾನಕವಾದ ಯುದ್ಧವು ಈ ರೀತಿಯಲ್ಲಿ ನಡೆಯುತ್ತಿರಲಾಗಿ ಪಾಂಡವರ ಸೈನ್ಯವು ಭೀಷ್ಮನ ಬಳಿಗೆ ಬರುತ್ತಲೇ ಭಯದಿಂದ ನಡುಗಿಬಿಟ್ಟಿತು.

ಮಹಾಬಾಹುವಾದ ಭೀಷ್ಮನು ಎತ್ತರವಾಗಿದ್ದ, ಬೆಳ್ಳಿಯ ದಂಡದಿಂದ ಕೂಡಿದ್ದ ಮತ್ತು ಐದು ನಕ್ಷತ್ರಗಳನ್ನೂ–ತಾಲವೃಕ್ಷವನ್ನೂ ಚಿಹ್ನೆಯಾಗಿ ಹೊಂದಿದ್ದ ಧ್ವಜಪಟದಿಂದ ಕೂಡಿದವನಾಗಿ ಮಹಾರಥದಲ್ಲಿ ಕುಳಿತು ಮೇರುಪರ್ವತದ ತಪ್ಪಲುಪ್ರದೇಶದಲ್ಲಿ ಕಾಣುವ ಚಂದ್ರನಂತೆಯೇ ಪ್ರಕಾಶಿಸಿದನು.

೪೬ನೆಯ ಅಧ್ಯಾಯವು ಮುಗಿಯಿತು.

೪೭ನೆಯ ಅಧ್ಯಾಯ ಭೀಷ್ಮವಧಪರ್ವ (ಮುಂದುವರಿದಿದೆ.)

# ಭೀಷ್ಮನೊಡನೆ ಅಭಿಮನ್ಯುವಿನ ಭಯಂಕರಯುದ್ಧ: ಶಲ್ಯನಿಂದ ಉತ್ತರಕುಮಾರನ ವಧೆ ಮತ್ತು ಶ್ವೇತನ ಪರಾಕ್ರಮ

ಮಹಾರಾಜ! ಅತ್ಯಂತಭಯಂಕರವಾದ ಆ ದಿನದ ಪೂರ್ವಾಹ್ಣದ ಬಹುಭಾಗವು ಕಳೆದುಹೋಗಲಾಗಿ, ಮಹಾವೀರರ ವಿನಾಶಕರವಾದ ಭಯಾನಕವಾದ ಮಹಾಯುದ್ಧವು ನಡೆಯುತ್ತಿರಲಾಗಿ, ನಿನ್ನ ಮಗನಾದ ದುರ್ಯೋಧನನ ಆಜ್ಞೆಯಂತೆ ದುರ್ಮುಖ, ಕೃತವರ್ಮಾ, ಕೃಪಾಚಾರ್ಯ, ಶಲ್ಯ ಮತ್ತು ವಿವಿಂಶತಿಗಳು ಭೀಷ್ಮನ ರಕ್ಷಣೆಗಾಗಿ ನಿಂತರು. ಆ ಐವರು ಮಹಾರಥರಿಂದ ಸಂರಕ್ಷಿತನಾದ ಭರತರ್ಷಭನಾದ ಮಹಾರಥನಾದ ಭೀಷ್ಮನು ಪಾಂಡವರ ಸೈನ್ಯಗಳೊಳಗೆ ನುಗ್ಗಿದನು. ಚೇದಿ, ಕಾಶಿ, ಕರೂಷ ಮತ್ತು ಪಾಂಚಾಲರ ಸೈನ್ಯಗಳಲ್ಲಿ ಭೀಷ್ಮನ ತಾಲಚಿಹ್ನೆಯಿಂದ ಭೂಷಿತವಾಗಿದ್ದ ಚಂಚಲಪತಾಕೆಯಿಂದ ಕೂಡಿದ್ದ ರಥವು ಶೀಘ್ರವಾಗಿ ಚಲಿಸುತ್ತಿದ್ದು ಭೀಷ್ಮನು ಅನೇಕರಥಗಳಲ್ಲಿ ಕುಳಿತು ಒಂದೊಂದು ಸೈನ್ಯದೊಡನೆಯೂ ಪ್ರತ್ಯೇಕ-ಪ್ರತ್ಯೇಕವಾಗಿಯೇ ಯುದ್ಧಮಾಡುತ್ತಿರುವನೋ ಎಂಬಂತೆ ಕಾಣು ತ್ತಿದ್ದಿತು. ಮಹಾಪರಾಕ್ರಮಿಯಾದ ಭೀಷ್ಮನು ಯುದ್ಧದಲ್ಲಿ ಶತ್ರುಗಳ ಶಿರಸ್ಸು ಗಳನ್ನೂ ಮತ್ತು ನೊಗಗಳಿಂದಲೂ ಧ್ವಜಗಳಿಂದಲೂ ಕೂಡಿದ್ದ ರಥಗಳನ್ನೂ, ಮಹಾವೇಗಯುಕ್ತವಾದ ಬಗ್ಗಿದ ಗಿಣ್ಣುಗಳುಳ್ಳ ಭಲ್ಲಗಳೆಂಬ ಬಾಣಗಳಿಂದ ಕತ್ತರಿಸಿಹಾಕಿದನು. ರಥಮಾರ್ಗದಲ್ಲಿ ಭೀಷ್ಮನು ಬರುತ್ತಿರುವಾಗ ರಥದಲ್ಲವನು ನೃತ್ಯಮಾಡುತ್ತಿರುವಂತೆಯೇ ಕಾಣುತ್ತಿದ್ದನು. ಅವನು ಬಿಡುತ್ತಿದ್ದ ಬಾಣಗಳಿಂದ ಮರ್ಮಸ್ಥಳದಲ್ಲಿ ಗಾಯಗೊಂಡ ಆನೆಗಳು ಬಹಳ ಗಟ್ಟಿಯಾಗಿ ಆರ್ತನಾದಮಾಡುತ್ತಿದ್ದುವು. ಅರ್ಜುನನ ಮಗನಾದ ಅಭಿಮನ್ಯುವು ಭೀಷ್ಮನ ಸಂಹಾರಕ್ರಿಯೆಯನ್ನು ನೋಡಿ ಪರಮಕ್ರುದ್ಧನಾಗಿ, ಕಂದುಬಣ್ಣದ ಉತ್ತಮೋತ್ತಮವಾದ ಕುದುರೆಗಳಿಂದ ಯುಕ್ತವಾಗಿದ್ದ ರಥದಲ್ಲಿ ಕುಳಿತು ಭೀಷ್ಮನ ರಥದ ಬಳಿಗೆ ಧಾವಿಸಿದನು. ಅಭಿಮನ್ಯುವಿನ ರಥಧ್ವಜವು ಕರ್ಣಿಕಾರ (ಬೆಟ್ಟದ ಕಣಿಗಿಲೇ ಹೂವು) ಚಿಹ್ನೆಯಿಂದ ಕೂಡಿದ್ದು ಸುವರ್ಣ ಮಯವಾಗಿಯೂ ಚಿತ್ರ-ವಿಚಿತ್ರವಾಗಿಯೂ ಇದ್ದಿತು. ಅವನು ಭೀಷ್ಮನನ್ನೂ

ಮತ್ತು ಅವನ ರಕ್ಷಕರಾಗಿದ್ದ ಐವರು ಮಹಾರಥರನ್ನೂ ಎದುರಿಸಿದನು. ಕ್ಷಣಮಾತ್ರದಲ್ಲಿ ಅಭಿಮನ್ಯುವು ತಾಲಕೇತುವಾದ ಭೀಷ್ಮನ ತಾಲಧ್ವಜವನ್ನೇ ಬಾಣದಿಂದ ಕತ್ತರಿಸಿ ಭೀಷ್ಮನನ್ನು ಅನುಸರಿಸಿ ಬಂದ ರಥಿಕರೊಡನೆಯೂ, ಭೀಷ್ಮನೊಡನೆಯೂ ಯುದ್ಧವನ್ನು ಪ್ರಾರಂಭಿಸಿದನು. ಭೀಷ್ಮನ ಅಂಗರಕ್ಷಕನಾಗಿದ್ದ ಕೃತವರ್ಮನನ್ನು ಒಂದು ಬಾಣದಿಂದಲೂ, ಶಲ್ಯನನ್ನು ಐದು ಬಾಣಗಳಿಂದಲೂ ಪ್ರಹರಿಸಿ, ಬಹುಚೂಪಾದ ಅಗ್ರಭಾಗಗಳಿಂದ ಕೂಡಿದ್ದ ಒಂಬತ್ತು ಬಾಣಗಳಿಂದ ಪ್ರಪಿತಾಮಹನಾದ ಭೀಷ್ಮನನ್ನೂ ಪ್ರಹರಿಸಿದನು. ಧನುಸ್ಸನ್ನು ಆಕರ್ಣಾಂತವಾಗಿ ಸೆಳೆದು ಗುರಿಯಿಟ್ಟು ಹೊಡೆದ ಒಂದೇ ಬಾಣದಿಂದ ಸುವರ್ಣಭೂಷಿತವಾಗಿದ್ದ ಭೀಷ್ಮನ ಧ್ವಜದಂಡವನ್ನೂ ಕತ್ತರಿಸಿದನು. ಅನಂತರ ಎಲ್ಲ ಆವರಣಗಳನ್ನೂ ಭೇದಿಸುವ ಸಾಮರ್ಥ್ಯವನ್ನು ಹೊಂದಿದ್ದ ಬಗ್ಗಿದ ಗಿಣ್ಣುಗಳಿಂದ ಕೂಡಿದ್ದ ಭಲ್ಲವೆಂಬ ಒಂದೇ ಬಾಣದಿಂದ ಭೀಷ್ಮನ ಮತ್ತೊಬ್ಬ ಅಂಗರಕ್ಷಕನಾದ ದುರ್ಮುಖನ ಸಾರಥಿಯ ಶರೀರದಿಂದ ಶಿರಸ್ಸನ್ನು ಹಾರಿಸಿಬಿಟ್ಟನು.

ಭೀಷ್ಮನ ಮತ್ತೊಬ್ಬ ಅಂಗರಕ್ಷಕರಾದ ಕೃಪಾಚಾರ್ಯರ ಸುವರ್ಣಭೂಷಿತವಾಗಿದ್ದ ಧನುಸ್ಸನ್ನು ಅಭಿಮನ್ಯುವು ನಿಶಿತವಾದ ಅಗ್ರಭಾಗದಿಂದ ಕೂಡಿದ್ದ ಮತ್ತೊಂದು ಭಲ್ಲವೆಂಬ ಬಾಣದಿಂದ ಕತ್ತರಿಸಿದನು. ಪರಮಕ್ರುದ್ಧನಾಗಿದ್ದ ಮಹಾರಥನಾದ ಅಭಿಮನ್ಯುವು ನರ್ತಿಸುತ್ತಿರುವನೋ ಎಂಬಂತೆ ತೀಕ್ಷ್ಣವಾದ ಅಗ್ರಭಾಗಗಳಿಂದ ಕೂಡಿದ್ದ ಅನೇಕ ಬಾಣಗಳಿಂದ ಭೀಷ್ಮನ ಅಂಗರಕ್ಷಕರಾಗಿದ್ದ ಆ ಐವರು ಮಹಾರಥರನ್ನೂ ಪ್ರಹರಿಸಿದನು. ಅಭಿಮನ್ಯುವಿನ ಆ ಕೈಚಳಕವನ್ನು ಕಂಡು ದೇವತೆಗಳೂ ಕೂಡ ಸಂತೋಷಪಟ್ಟರು. ಅಭಿಮನ್ಯುವಿನಲ್ಲಿ ಇಂತಹ ಲಕ್ಷ್ಯವೇಧಿತ್ವದ ಅಮೋಘಸಿದ್ಧಿಯನ್ನು ಕಂಡು ಭೀಷ್ಮಪ್ರಮುಖರಾದ ಎಲ್ಲ ರಥಿಗಳೂ ಅಭಿಮನ್ಯುವನ್ನು ಸತ್ವದಲ್ಲಿ ಸಾಕ್ಷಾತ್ ಧನಂಜಯನೆಂದೇ ಭಾವಿಸಿದರು. ಧನಂಜಯನಲ್ಲಿರುವ ಸತ್ವವೇ ಅವನ ಪುತ್ರನಾದ ಅಭಿಮನ್ಯುವಿನಲ್ಲಿಯೂ ಇರುವುದೆಂದು ನಿಶ್ಚಯಿಸಿದರು. ಅಭಿಮನ್ಯುವಿನ ಕೈಯಿನ ಲಾಘವವನ್ನು ಪ್ರಕಾಶಪಡಿಸುವ ಧನುಸ್ಸು ಗಾಂಡೀವದಂತೆಯೇ ಧ್ವನಿಮಾಡುತ್ತಿದ್ದಿತು. ಆಕರ್ಣಾಂತವಾಗಿ ಸೆಳೆದಾಗ ಮಂಡಲಾಕಾರವಾಗಿ ಕಾಣುತ್ತಿದ್ದ ಅಭಿಮನ್ಯುವಿನ ಆ ಧನುಸ್ಸು

ಕೊಳ್ಳಿಯ ಗಾಲಿಯಂತೆಯೇ ಕಾಣುತ್ತಿದ್ದಿತು. ಅಭಿಮನ್ಯುವಿನ ಧನುಸ್ಸು ಎಲ್ಲ ದಿಕ್ಕುಗಳಲ್ಲಿಯೂ ವಿಜೃಂಭಿಸುತ್ತಿದ್ದಿತು. ಶತ್ರುಪಕ್ಷದ ವೀರರನ್ನು ಸಂಹರಿಸಲು ಸಮರ್ಥನಾದ ಭೀಷ್ಮನು ಆ ಘೋರಯುದ್ಧದಲ್ಲಿ ಅಭಿಮನ್ಯುವಿನ ಸಮೀಪಕ್ಕೆ ಬಂದು ಅವನಿಗೆದುರಾಗಿ ನಿಂತು ಮಹಾವೇಗಯುಕ್ತವಾದ ಒಂಬತ್ತು ಬಾಣಗಳಿಂದ ಆರ್ಜುನಿಯನ್ನು ಬಹುಶೀಘ್ರವಾಗಿ ಪ್ರಹರಿಸಿದನು. ನಿಯಮಪೂರ್ವಕವಾಗಿ ಬ್ರಹ್ಮಚರ್ಯವ್ರತಾನುಷ್ಠಾನಮಾಡುತ್ತಿದ್ದ, ಮಹಾ ತೇಜಸ್ವಿಯಾದ ಭೀಷ್ಮನು ಅಭಿಮನ್ಯುವಿನ ಧ್ವಜವನ್ನು ಮೂರು ಬಾಣಗಳಿಂದ ಕತ್ತರಿಸಿದನು. ಮರುಕ್ಷಣದಲ್ಲಿಯೇ ಅಭಿಮನ್ಯುವಿನ ಸಾರಥಿಯ ಮೇಲೂ ಮೂರು ಬಾಣಗಳನ್ನು ಬಿಟ್ಟು ಅವನನ್ನು ಪ್ರಹರಿಸಿದನು. ಭೀಷ್ಮನು ಈ ರೀತಿಯಲ್ಲಿ ಸತತವಾಗಿ ಅಭಿಮನ್ಯುವಿನ ಮೇಲೆ ಬಾಣಗಳನ್ನು ಬಿಡುತ್ತಿರು ವಾಗಲೇ ಭೀಷ್ಮನ ಅಂಗರಕ್ಷಕರಾದ ಕೃತವರ್ಮ-ಕೃಪ-ಶಲ್ಯರೂ ಸಹ ಅಭಿಮನ್ಯುವನ್ನು ಬಾಣಗಳಿಂದ ಪ್ರಹರಿಸಿದರು. ಅವರೆಲ್ಲರೂ ಏಕಕಾಲದಲ್ಲಿ ಅಭಿಮನ್ಯುವಿನ ಮೇಲೆ ಬಾಣಪ್ರಯೋಗಮಾಡಿದರೂ ಕಾರ್ಷ್ಣಿಯನ್ನು ಅವರು ವಿಚಲಿತನನ್ನಾಗಿ ಮಾಡಲು ಸಮರ್ಥರಾಗಲಿಲ್ಲ. ಅವನು ವಿಚಲಿತನಾಗದೇ ಮೈನಾಕಪರ್ವತದಂತೆಯೇ ಸುಸ್ಥಿರನಾಗಿ ರಥದಲ್ಲಿ ಕುಳಿತಿದ್ದನು. ಧೃತರಾಷ್ಟ್ರನ ಕಡೆಯ ಐವರು ಮಹಾರಥರಿಂದ ಅಭಿಮನ್ಯುವು ಪರಿವೃತನಾಗಿದ್ದರೂ ಶೂರನಾದ ಅವನು ಭೀಷ್ಮನ ಅಂಗರಕ್ಷಕರಾಗಿದ್ದ ಆ ಐವರು ರಥಿಕರ ಮೇಲೂ ಬಾಣಗಳ ಮಳೆಯನ್ನೇ ಸುರಿಸಿದನು. ಇಷ್ಟು ಮಾತ್ರವಲ್ಲ ; ಅವರೈವರೂ ಬಿಡುತ್ತಿದ್ದ ಮಹಾಸ್ತ್ರಗಳನ್ನೂ ಸಹ ಬಾಣಗಳ ಮಳೆಯಿಂದ ನಿವಾರಣೆಮಾಡಿಕೊಂಡು ಮಹಾಬಲಿಷ್ಠನಾದ ಅಭಿಮನ್ಯುವು ಭೀಷ್ಮನ ಮೇಲೂ ಬಾಣಗಳನ್ನು ಬಿಟ್ಟು ಸಿಂಹನಾದಮಾಡಿದನು.

ಆ ಮಹಾಯುದ್ಧದಲ್ಲಿ ವಿಜಯಗಳಿಸಲು ಸತತವಾಗಿ ಪ್ರಯತ್ನಿಸುತ್ತಿದ್ದು ಬಾಣಗಳಿಂದ ಭೀಷ್ಮನನ್ನು ಪೀಡಿಸುತ್ತಿದ್ದ ಅಭಿಮನ್ಯುವಿನ ಬಾಹುಗಳ ಅಪರಿಮಿತವಾದ ಬಲವು ಎಲ್ಲರಿಗೂ ಗೋಚರಿಸಿತು. ಮಹಾಪರಾಕ್ರಮ ಸಂಪನ್ನನಾದ ಅಭಿಮನ್ಯುವಿನ ಮೇಲೆ ಭೀಷ್ಮನೂ ಸಹ ಅನೇಕಾನೇಕ ಬಾಣ

ಗಳನ್ನು ಬಿಟ್ಟನು. ಭೀಷ್ಮನ ಬಿಲ್ಲಿನಿಂದ ಚ್ಯುತವಾದ ಆ ಬಾಣಗಳೆಲ್ಲವನ್ನೂ ಆ ಮಹಾಯುದ್ಧದಲ್ಲಿ ಅಭಿಮನ್ಯುವು ಕತ್ತರಿಸಿಹಾಕಿದನು. ಅನಂತರ ಅಮೋಘವಾದ ಬಾಣಗಳನ್ನು ಹೊಂದಿದ್ದ ವೀರನಾದ ಅಭಿಮನ್ಯುವು ಒಂಬತ್ತು ಬಾಣಗಳಿಂದ ಭೀಷ್ಮನ ಪತಾಕೆಯನ್ನು ಕತ್ತರಿಸಿಬಿಟ್ಟನು. ಅಭಿಮನ್ಯುವಿನ ಅದ್ಭುತವಾದ ಕೈಚಳಕವನ್ನು ಕಂಡ ಜನರು ಗಟ್ಟಿಯಾಗಿ ಜಯಕಾರಮಾಡಿದರು. ರಜತಮಯವಾಗಿದ್ದ, ಉದ್ದವಾಗಿದ್ದ, ಸುವರ್ಣಾಭರಣಗಳಿಂದ ವಿಭೂಷಿತವಾಗಿದ್ದ, ತಾಲಚಿಹ್ನೆಯನ್ನು ಹೊಂದಿದ್ದ ಭೀಷ್ಮನ ಧ್ವಜವು ಸುಭದ್ರೆಯ ಮಗನಾದ ಅಭಿಮನ್ಯುವಿನಿಂದ ಕತ್ತರಿಸಲ್ಪಟ್ಟು ಭೂಮಿಯಲ್ಲಿ ಬಿದ್ದಿತು. ಭೀಷ್ಮನ ತಾಲಧ್ವಜವು ಸೌಭದ್ರನ ಬಾಣಗಳಿಂದ ಕೆಳಕ್ಕೆ ಬಿದ್ದುದನ್ನು ಕಂಡು ಭೀಮಸೇನನು ಸುಭದ್ರಾಪುತ್ರನಿಗೆ ಹರ್ಷವನ್ನುಂಟುಮಾಡುವ ಸಲುವಾಗಿ 'ಭಲೆ-ಭಲೆ' ಎಂದೆನ್ನುತ್ತಾ ಗಟ್ಟಿಯಾಗಿ ಗರ್ಜಿಸಿದನು. ಅನಂತರ ಮಹಾಭಯಂಕರವಾದ ಆ ಯುದ್ಧದಲ್ಲಿ ಮಹಾಬಲನಾದ ಭೀಷ್ಮನು ದಿವ್ಯವಾದ ಅನೇಕಾನೇಕ ಮಹಾಸ್ತ್ರಗಳನ್ನು ಪ್ರಕಟಪಡಿಸಿದನು. ಪಿತಾಮಹನಾದ, ಮಹಾತ್ಮನಾದ ಭೀಷ್ಮನು ಸೌಭದ್ರನನ್ನು ಒಂದು ಸಾವಿರ ಬಾಣಗಳಿಂದ ಮುಚ್ಚಿಬಿಟ್ಟನು. ಅದು ಪ್ರೇಕ್ಷಕರಿಗೆ ಪರಮಾದ್ಭುತವಾಗಿ ಕಂಡಿತು. ಭೀಷ್ಮನ ಆ ಪರಮಾದ್ಭುತವಾದ ಬಾಣಪ್ರಯೋಗವನ್ನು ವೀಕ್ಷಿಸಿ, ಮಹಾಧನುಸ್ಸುಗಳನ್ನು ಧರಿಸಿದ್ದ, ಪಾಂಡವರ ಕಡೆಯ ಹತ್ತುಮಂದಿ ಮಹಾರಥರು ಸೌಭದ್ರನನ್ನು ರಕ್ಷಿಸಲು ಬಹುವೇಗವಾಗಿ ರಥಗಳಲ್ಲಿ ಕುಳಿತು ಅಭಿಮನ್ಯುವಿನ ಸಮೀಪಕ್ಕೆ ಧಾವಿಸಿಬಂದರು. ವಿರಾಟ, ಅವನ ಮಗ, ದ್ರುಪದನ ಮಗನಾದ ಧೃಷ್ಟದ್ಯುಮ್ನ, ಭೀಮಸೇನ, ಐವರು ಕೇಕಯರಾಜರು ಮತ್ತು ಸಾತ್ಯಕಿ-ಈ ಹತ್ತು ಮಂದಿ ಮಹಾವೀರರು ಅಭಿಮನ್ಯುವಿನ ಸಹಾಯಕ್ಕಾಗಿ ಬಂದರು. ಶಾಂತನುವಿನ ಮಗನಾದ ಭೀಷ್ಮನು ಬಹಳ ವೇಗದಿಂದ ಅಭಿಮನ್ಯುವಿನ ರಕ್ಷಣೆಗಾಗಿ ಬಂದ ಧೃಷ್ಟದ್ಯುಮ್ನನನ್ನು ಮೂರು ಬಾಣಗಳಿಂದಲೂ, ಸಾತ್ಯಕಿಯನ್ನು ಒಂಬತ್ತು ಬಾಣಗಳಿಂದಲೂ ಪ್ರಹರಿಸಿದನು. ಧನುಸ್ಸನ್ನು ಆಕರ್ಣಾಂತವಾಗಿ ಸೆಳೆದು ರೆಕ್ಕೆಗಳನ್ನು ಹೊಂದಿದ್ದ ನಿಶಿತವಾದ ಒಂದೇ ಒಂದು ಕ್ಷುರವೆಂಬ ಬಾಣದಿಂದ ಭೀಮಸೇನನ ರಥದ ಧ್ವಜವನ್ನೂ ಭೀಷ್ಮನು ಕತ್ತರಿಸಿದನು. ಸುವರ್ಣಮಯ

ವಾಗಿದ್ದ, ಕಾಂತಿಯುಕ್ತವಾಗಿದ್ದ, ಸಿಂಹದ ಚಿಹ್ನೆಯಿಂದ ಕೂಡಿದ್ದ ಭೀಮಸೇನನ ಧ್ವಜವು ಭೀಷ್ಮನಿಂದ ಕತ್ತರಿಸಲ್ಪಟ್ಟು ರಥದಿಂದ ಕೆಳಕ್ಕೆ ಬಿದ್ದಿತು. ಒಡನೆಯೇ ಭೀಮನು ಕುಪಿತನಾಗಿ ಮೂರು ಬಾಣಗಳಿಂದ ಭೀಷ್ಮನನ್ನು ಪ್ರಹರಿಸಿ, ಕೃಪಾಚಾರ್ಯರನ್ನು ಒಂದು ಬಾಣದಿಂದಲೂ–ಕೃತವರ್ಮನನ್ನು ಎಂಟು ಬಾಣಗಳಿಂದಲೂ ಪ್ರಹರಿಸಿದನು. ಅದೇ ಸಮಯದಲ್ಲಿ ರಣರಂಗದ ಮತ್ತೊಂದು ಕಡೆಯಲ್ಲಿ ಸೊಂಡಿಲಿನ ಅಗ್ರಭಾಗವನ್ನು ಮೇಲೆತ್ತಿ ಸೊಂಡಿಲನ್ನು ಮಂಡಲಾಕಾರವಾಗಿ ಮಾಡಿಕೊಂಡಿದ್ದ ಆನೆಯ ಮೇಲೆ ಕುಳಿತು ವಿರಾಟನ ಮಗನಾದ ಉತ್ತರಕುಮಾರನು ಮದ್ರಾಧಿಪತಿಯಾದ ಶಲ್ಯನ ಕಡೆಗೆ



ಧಾವಿಸಿದನು. ಉತ್ತರಕುಮಾರನು ಕುಳಿತಿದ್ದ ಗಜರಾಜನು ವೇಗವಾಗಿ ಶಲ್ಯನ ರಥದ ಸಮೀಪಕ್ಕೆ ಬರುತ್ತಿರಲಾಗಿ, ಶಲ್ಯನು ಬಾಣಗಳ ಪ್ರಯೋಗದಿಂದ ಗಜರಾಜನ ಅಪ್ರತಿಮವಾದ ವೇಗವನ್ನು ತಡೆದನು. ಅದರಿಂದ ಬಹುಕ್ರುದ್ಧವಾದ ಸಲಗವು ತನ್ನ ಒಂದು ಕಾಲನ್ನು ಶಲ್ಯನ ರಥದ ನೊಗದ ಮೇಲಿಟ್ಟು ರಥವನ್ನು ಎಳೆಯುತ್ತಿದ್ದ ನಾಲ್ಕು ದೊಡ್ಡ ಕುದುರೆಗಳನ್ನೂ ಏಕಕಾಲದಲ್ಲಿ ಸಂಹರಿಸಿತು. ಶಲ್ಯನಾದರೋ ಸತ್ತುಹೋಗಿದ್ದ ಕುದುರೆಗಳಿದ್ದ ಅದೇ ರಥದಲ್ಲಿಯೇ ನಿಂತುಕೊಂಡು ಉತ್ತರನ ಮೃತ್ಯುರೂಪವಾದ, ಸರ್ಪ

ದಂತೆಯೇ ಇದ್ದ, ಲೋಹಮಯವಾದ ಶಕ್ತ್ಯಾಯುಧವನ್ನು ಉತ್ತರಕುಮಾರನ ಮೇಲೆ ರಭಸದಿಂದ ಪ್ರಯೋಗಿಸಿದನು. ಶಕ್ತ್ಯಾಯುಧಪ್ರಯೋಗದಿಂದ ಕತ್ತರಿಸಲ್ಪಟ್ಟ ಕವಚವುಳ್ಳವನಾಗಿ ಉತ್ತರಕುಮಾರನು ಗಾಢವಾದ ಕತ್ತಲೆಯನ್ನು ಪ್ರವೇಶಿಸಿ (ಗತಪ್ರಾಣನಾಗಿ) ಅಂಕುಶವನ್ನೂ, ತೋಮರವನ್ನೂ ಕೆಳಕ್ಕೆ ಜಾರಿಬಿಟ್ಟು ಆನೆಯ ಮೇಲಿನಿಂದ ಕೆಳಕ್ಕೆ ಬಿದ್ದುಬಿಟ್ಟನು. ಉತ್ತರಕುಮಾರನು ಆನೆಯಿಂದ ಕೆಳಕ್ಕೆ ಬಿದ್ದೊಡನೆಯೇ ಶಲ್ಯನು ಕತ್ತಿಯನ್ನು ತೆಗೆದುಕೊಂಡು ತಾನು ಕುಳಿತಿದ್ದ ಶ್ರೇಷ್ಠರಥದಿಂದ ಕೆಳಗೆ ಧುಮ್ಮಿಕ್ಕಿ ಗಜರಾಜನ ದೊಡ್ಡದಾದ ಸೊಂಡಿಲನ್ನು ಕತ್ತರಿಸಿಬಿಟ್ಟನು. ನೂರಾರು ಬಾಣಗಳ ಪ್ರಹಾರಗಳಿಂದ ಆ ಗಜರಾಜನ ಮರ್ಮಸ್ಥಳಕ್ಕೆ ಪೆಟ್ಟುಬಿದ್ದಿದ್ದಿತು. ಅದರಿಂದಾಗಿ ಆ ಮಹಾಗಜವು ಭಯಂಕರವಾಗಿ ಆರ್ತನಾದಮಾಡುತ್ತಾ ಕೆಳಕ್ಕೆ ಬಿದ್ದು ಪ್ರಾಣವನ್ನು ತೊರೆಯಿತು. ಈ ರೀತಿಯಾಗಿ ಶಲ್ಯನು ಉತ್ತರಕುಮಾರನನ್ನೂ ಮತ್ತು ಅವನ ಆನೆಯನ್ನೂ ಸಂಹರಿಸಿ ಒಡನೆಯೇ ಪ್ರಕಾಶಮಾನವಾಗಿದ್ದ ಕೃತವರ್ಮನ ರಥವನ್ನು ಹತ್ತಿ ಕುಳಿತನು.

ವಿರಾಟನ ಮತ್ತೊಬ್ಬ ಮಗನಾದ ಶ್ವೇತನು ತನ್ನ ಸೋದರನು ಶಲ್ಯನಿಂದ ಮರಣಹೊಂದಿದುದನ್ನು ಕಂಡನು. ಆ ಸಮಯದಲ್ಲಿ ಶಲ್ಯನು ಕೃತವರ್ಮನ ಜೊತೆಯಲ್ಲಿ ರಥದಲ್ಲಿ ಕುಳಿತಿರುವುದನ್ನೂ ನೋಡಿದನು. ಒಡನೆಯೇ ಅವನು ಹವಿಸ್ಸಿನಿಂದ ಯಜ್ಞೇಶ್ವರನು ಜಾಜ್ವಲ್ಯಮಾನನಾಗುವಂತೆ– ಕೋಪದಿಂದ ಪ್ರಜ್ವಲಿಸಿದನು. ಬಲಿಷ್ಠನಾದ ಶ್ವೇತನು ಇಂದ್ರಧನುಸ್ಸಿಗೆ ಸಮಾನವಾಗಿದ್ದ ತನ್ನ ಧನುಸ್ಸನ್ನು ಕೈಯಲ್ಲಿ ಹಿಡಿದು ಶಿಂಜಿನಿಯನ್ನು ಆಕರ್ಣಾಂತವಾಗಿ ಸೆಳೆದು ಮದ್ರಾಧಿಪನಾದ ಶಲ್ಯನನ್ನು ಸಂಹಾರಮಾಡುವ ಇಚ್ಛೆಯಿಂದ ಕೃತವರ್ಮನ ರಥದ ಸಮೀಪಕ್ಕೆ ಧಾವಿಸಿದನು. ಸುತ್ತಲೂ ದೊಡ್ಡದಾದ ರಥಸೈನ್ಯದಿಂದ ಪರಿವೃತನಾಗಿ, ಶ್ವೇತನು ಬಾಣರೂಪವಾದ ಮಳೆಯನ್ನೇ ಸುರಿಸುತ್ತಾ ಶಲ್ಯನ ರಥದ ಸಮೀಪಕ್ಕೆ ಹೋದನು. ಮದಿಸಿದ ಆನೆಗೆ ಸಮಾನವಾದ ಪರಾಕ್ರಮವನ್ನು ಹೊಂದಿದ್ದ ಶ್ವೇತನು ಶಲ್ಯನ ಮೇಲೆ ಬೀಳುತ್ತಿರುವುದನ್ನು ನೋಡಿ, ಮೃತ್ಯುವಿನ ದವಡೆಯೊಳಗೆ ಹೋಗುವುದರಲ್ಲಿದ್ದ ಶಲ್ಯನನ್ನು ಬಿಡಿಸುವ ಸಲುವಾಗಿ, ನಿನ್ನ ಕಡೆಯ ಏಳು ಮಂದಿ ರಥಿಕರು ಶಲ್ಯನನ್ನು ಸುತ್ತುವರಿದು ನಿಂತರು. ಕೋಸಲಾಧಿಪತಿಯಾದ ಬೃಹದ್ಬಲ,

ಮಗಧದೇಶೀಯನಾದ ಜಯತ್ಸೇನ, ಶಲ್ಯನ ಮಗನಾದ ಪ್ರತಾಪಶಾಲಿಯಾದ ರುಕ್ಮರಥ, ಅವಂತಿಯ ರಾಜಕುಮಾರರಾದ ವಿಂದ ಮತ್ತು ಅನುವಿಂದರು, ಕಾಂಭೋಜರಾಜನಾದ ಸುದಕ್ಷಿಣ, ಬೃಹತ್ಕ್ಷತ್ರನ ಮಗನಾದ ಸಿಂಧುರಾಜ ಜಯದ್ರಥ–ಈ ಏಳು ಮಂದಿ ಮಹಾವೀರರು ಶಲ್ಯನ ರಥವನ್ನು ಸುತ್ತು ವರಿದು ನಿಂತರು. ಆಕರ್ಣಾಂತವಾಗಿ ಸೆಳೆಯಲ್ಪಟ್ಟಿದ್ದ ಆ ಏಳು ಮಂದಿ ಮಹಾತ್ಮರ ಧನುಸ್ಸುಗಳು ನಾನಾವರ್ಣಗಳಿಂದ ಕೂಡಿದ್ದು ಚಿತ್ರ-ವಿಚಿತ್ರವೂ ಆಗಿದ್ದು, ಮೋಡಗಳಲ್ಲಿನ ಮಿಂಚುಗಳಂತೆ ಕಾಣುತ್ತಿದ್ದುವು. ಗ್ರೀಷ್ಮರ್ತುವಿನ ಕಡೆಯಲ್ಲಿ ಗಾಳಿಯಿಂದ ಚದುರಿಸಲ್ಪಟ್ಟ ಮೋಡಗಳು ಪರ್ವತದ ಮೇಲೆ ಮಳೆ ಸುರಿಸುವಂತೆ–ಆ ಏಳು ಮಂದಿ ಯೋಧರೂ ಬಾಣಮಯವಾದ ವರ್ಷವನ್ನು ಶ್ವೇತನ ತಲೆಯ ಮೇಲೆ ಸುರಿಸಿದರು. ಮರುಕ್ಷಣದಲ್ಲಿಯೇ ಪರಮಕ್ರುದ್ಧನಾಗಿದ್ದ, ದೊಡ್ಡದಾದ ಧನುಸ್ಸನ್ನು ಧರಿಸಿದ್ದ, ಸೈನ್ಯಾಧಿಪತಿ ಯಾದ ಶ್ವೇತನು ತೀಕ್ಷ್ಣವಾಗಿ ಹರಿತಮಾಡಲ್ಪಟ್ಟಿದ್ದ ಭಲ್ಲಗಳೆಂಬ ಏಳು ಬಾಣಗಳಿಂದ ಆ ಏಳು ಮಂದಿ ಯೋಧರ ಧನುಸ್ಸುಗಳನ್ನೂ ಏಕಕಾಲದಲ್ಲಿ ಕತ್ತರಿಸಿ ಅನಂತರ ಅವರನ್ನು ಅನೇಕಬಾಣಗಳಿಂದ ಘಾಸಿಗೊಳಿಸಿದನು. ಆದರೆ ಆ ಏಳು ಮಂದಿ ಯೋಧರಿಗೂ ತಮ್ಮ ಧನುಸ್ಸುಗಳು ಕತ್ತರಿಸಿ ಹೋಗಿರುವುದೆಂಬ ಅರಿವೇ ಕ್ಷಣಕಾಲ ಉಂಟಾಗಲಿಲ್ಲ. ಅವ್ಯಾಹತವಾಗಿ ಶ್ವೇತನ ಕಡೆಯಿಂದ ಬರುತ್ತಿದ್ದ ಬಾಣಗಳನ್ನು ತಮ್ಮ ಬಾಣಗಳಿಂದ ತಡೆ ಯುವುದಕ್ಕೆ ಆಗದಿದ್ದಾಗಲೇ ಆ ಯೋಧರು ತಮ್ಮ ಧನುಸ್ಸುಗಳು ಭಗ್ನ ವಾಗಿವೆಯೆಂಬುದನ್ನು ಕಂಡುಕೊಂಡರು. ನಿಮಿಷಾರ್ಧದಲ್ಲಿ ಪುನಃ ಏಳು ಮಂದಿಯೂ ಹೊಸ ಧನುಸ್ಸುಗಳನ್ನು ಪಡೆದುಕೊಂಡು, ಅನೇಕಾನೇಕ ಬಾಣಗಳನ್ನು ಶ್ವೇತನ ಮೇಲೆ ಏಕಕಾಲದಲ್ಲಿ ಸುರಿಸಿದರು. ಅನಂತರ ಮಹಾತ್ಮನಾದ, ಮಹಾಬಾಹುವಾದ ಶ್ವೇತನು ಶೀಘ್ರವಾಗಿ ಹೋಗುವ ಭಲ್ಲಗಳೆಂಬ ಏಳು ಬಾಣಗಳಿಂದ ಆ ಏಳು ಮಂದಿ ಧನುಷ್ಮಂತರ ಧನುಸ್ಸು ಗಳನ್ನೂ ಪುನಃ ಕತ್ತರಿಸಿದನು. ಭಗ್ನಚಾಪರಾದ ಏಳುಮಂದಿ ಮಹಾರಥರೂ ಒಂದೊಂದು ರಥಶಕ್ತಿಯನ್ನು ಅವಸರದಿಂದ ಕೈಗೆತ್ತಿಕೊಂಡು ಭಯಂಕರ ವಾದ ಸ್ವರದಿಂದ ಗರ್ಜನೆಮಾಡಿದರು. ಆ ಏಳು ಶಕ್ತ್ಯಾಯುಧಗಳನ್ನೂ ಅವರು ಶ್ವೇತನ ರಥಕ್ಕೆ ಗುರಿಯಿಟ್ಟು ಹೊಡೆದರು. ಮಹೇಂದ್ರನ ವಜ್ರಾಯುಧಕ್ಕೆ ಸಮಾನವಾದ ಧ್ವನಿಯಿಂದ ಕೂಡಿದ್ದ ಬೃಹದ್ಬಲಾದಿ ಏಳು

ಮಂದಿ ಮಹಾರಥರು ಪ್ರಯೋಗಿಸಿದ ಶಕ್ತ್ಯಾಯುಧಗಳು ಪ್ರಜ್ವಲಿಸುತ್ತಾ ರಭಸದಿಂದ ಶ್ವೇತನ ರಥದ ಕಡೆಗೆ ಬರುತ್ತಿದ್ದುವು. ಆದರೆ ಅವುಗಳು ಶ್ವೇತನ ರಥದ ಬಳಿಗೆ ಬರುವುದರೊಳಗಾಗಿ ಪರಮಾಸ್ತ್ರವಿದನಾದ ಶ್ವೇತನು ಭಲ್ಲಗಳೆಂಬ ಏಳು ಬಾಣಗಳಿಂದ ಆ ಶಕ್ತ್ಯಾಯುಧಗಳನ್ನು ಕತ್ತರಿಸಿದನು. ಅನಂತರ ಶ್ವೇತನು ಸರ್ವರ ಶರೀರಗಳನ್ನೂ ಕತ್ತರಿಸಲು ಸಮರ್ಥವಾದ ಬಾಣವೊಂದನ್ನು ಬತ್ತಳಿಕೆಯಿಂದ ಹೊರತೆಗೆದು ಶಲ್ಯನ ಮಗನಾದ ರುಕ್ಮರಥನ ಕಡೆಗೆ ಗುರಿಯಿಟ್ಟು ಪ್ರಯೋಗಿಸಿದನು. ವಜ್ರಾಯುಧಕ್ಕಿಂತಲೂ ಹೆಚ್ಚಿನ ಪ್ರಭಾವಶಾಲಿಯಾಗಿದ್ದ ಶ್ವೇತನು ಬಿಟ್ಟ ಮಹಾಬಾಣವು ರುಕ್ಮರಥನ ದೇಹಕ್ಕೆ ಚುಚ್ಚಿಕೊಂಡಿತು. ಬಾಣದಿಂದ ದೃಢವಾಗಿ ಪ್ರಹತನಾದ ರುಕ್ಮರಥನು ರಥದಲ್ಲಿಯೇ ಕುಳಿತನು. ಆದರೆ ಅಲ್ಲಿಯೂ ಸಹ ಅವನಿಗೆ ಕುಳಿತುಕೊಳ್ಳಲು ಸಾಧ್ಯವಾಗದೇ ಅಧಿಕಯಾತನೆಯಿಂದಾಗಿ ಮೂರ್ಛಿತನಾದನು.

ತನ್ನ ಸ್ವಾಮಿಯು ಮೂರ್ಛಿತನಾಗಿರುವುದನ್ನು ಕಂಡ ಸಾರಥಿಯು ಭ್ರಾಂತನಾಗದೇ ರುಕ್ಮರಥನಿದ್ದ ರಥವನ್ನು ಎಲ್ಲರೂ ನೋಡುತ್ತಿದ್ದಂತೆಯೇ ರಣಾಂಗಣದಿಂದ ಹೊರಕ್ಕೆ ಶೀಘ್ರವಾಗಿ ಒಯ್ದನು. ಏಳು ಮಂದಿ ಯೋಧರಲ್ಲಿ ಶಲ್ಯನ ಮಗನಾದ ರುಕ್ಮರಥನು ಹೊರಟುಹೋದನಂತರ ಮಹಾಬಾಹುವಾದ ಶ್ವೇತನು ಸ್ವರ್ಣವಿಭೂಷಿತಗಳಾಗಿದ್ದ ಆರು ಬಾಣ ಗಳನ್ನು ಬತ್ತಳಿಕೆಯಿಂದ ಹೊರತೆಗೆದು ಆ ಬಾಣಗಳ ಪ್ರಯೋಗದಿಂದ ಆ ಆರುಮಂದಿ ಯೋಧರ ರಥಗಳ ಧ್ವಜಗಳನ್ನು ಕೆಳಕ್ಕೆ ಉರುಳಿಸಿದನು. ಅಷ್ಟು ಮಾತ್ರದಿಂದಲೇ ತೃಪ್ತನಾಗದೇ ಆ ಆರು ಮಂದಿ ಯೋಧರ ರಥಗಳ ಕುದುರೆಗಳನ್ನೂ ಮತ್ತು ಸಾರಥಿಗಳನ್ನೂ ಸಹ ಧ್ವಂಸಮಾಡಿ ಅನಂತಬಾಣಗಳಿಂದ ಆ ಆರು ಮಂದಿ ಯೋಧರನ್ನೂ ಸಂಪೂರ್ಣ ವಾಗಿ ಗಾಯಗೊಳಿಸಿ ಅನಂತರ ತನ್ನ ಸೋದರನನ್ನು ಕೊಂದ ಶಲ್ಯನ ರಥದ ಕಡೆಗೆ ಧಾವಿಸಿದನು. ಏಳು ಮಂದಿ ಮಹಾರಥರನ್ನೂ ತನ್ನ ಅತುಲಪರಾಕ್ರಮದಿಂದ ದೂರಸರಿಸಿ, ಸೇನಾಪತಿಯಾದ ಶ್ವೇತನು ಶೀಘ್ರಾತಿ ಶೀಘ್ರವಾಗಿ ಶಲ್ಯನ ರಥದ ಸಮೀಪಕ್ಕೆ ಬರುತ್ತಿರುವುದನ್ನು ಕಂಡು ನಿನ್ನ ಸೈನ್ಯದಲ್ಲಿ ಹಾಹಾಕಾರವುಂಟಾಯಿತು. ಒಡನೆಯೇ ನಿನ್ನ ಮಗ ದುರ್ಯೋ ಧನನು ಭೀಷ್ಮನನ್ನು ಮುಂದೆಮಾಡಿಕೊಂಡು ಸರ್ವಸೈನ್ಯದಿಂದಲೂ ಪರಿವೃತ ನಾಗಿ ಶ್ವೇತನ ರಥದ ಕಡೆಗೆ ಹೋದನು. ಹೀಗೆ ಮಾಡಿ ಮೃತ್ಯುವಿನ

ದವಡೆಗೆ ಸಿಕ್ಕಿಬೀಳಲಿದ್ದ ಶಲ್ಯನನ್ನು ನಿನ್ನ ಮಗನು ವಿಮೋಚನೆಗೊಳಿಸಿದನು. ಅನಂತರ ನಿನ್ನ ಕಡೆಯವರಿಗೂ–ಪಾಂಡವರಿಗೂ ರೋಮಾಂಚಕರವಾದ ಸಂಕುಲಮಯವಾದ ಯುದ್ಧವು ಪ್ರಾರಂಭವಾಯಿತು. ರಥಸೈನ್ಯ, ಗಜಸೈನ್ಯ, ಅಶ್ವಸೈನ್ಯ ಮತ್ತು ಪದಾತಿಗಳು ಒಂದಕ್ಕೊಂದು ಬೆಂಬಲಕೊಟ್ಟುಕೊಂಡು ಯುದ್ಧಮಾಡತೊಡಗಿದುವು. ಪಾಂಡವರ ಪಕ್ಷದಲ್ಲಿ ಸುಭದ್ರೆಯ ಮಗನಾದ ಅಭಿಮನ್ಯು, ಭೀಮಸೇನ, ಮಹಾರಥನಾದ ಸಾತ್ಯಕಿ, ಐವರು ಕೇಕಯ ರಾಜಕುಮಾರರು, ವಿರಾಟ, ಧೃಷ್ಟದ್ಯುಮ್ನ, ದ್ರುಪದ, ಚೇದಿ ಮತ್ತು ಮತ್ಸ್ಯದೇಶಾಧಿಪತಿಗಳು–ಇವರೇ ಮೊದಲಾದ ನರಸಿಂಹರು ಯುದ್ಧ ಮಾಡಲು ಸಿದ್ಧರಾಗಿರಲಾಗಿ ಕುರುವೃದ್ಧನಾದ, ಪಿತಾಮಹನಾದ ಭೀಷ್ಮನು ಬಾಣಗಳ ಮಳೆಯನ್ನೇ ಸುರಿಸಿದನು."

೪೭ನೆಯ ಅಧ್ಯಾಯವು ಮುಗಿಯಿತು.

೪೮ನೆಯ ಅಧ್ಯಾಯ ಭೀಷ್ಮವಧಪರ್ವ (ಮುಂದುವರಿದಿದೆ.)

## ಶ್ವೇತನ ಭಯಂಕರಪರಾಕ್ರಮ ಮತ್ತು ಭೀಷ್ಮನಿಂದ ಶ್ವೇತನ ವಧೆ

ಧೃತರಾಷ್ಟ್ರನು ಪ್ರಶ್ನಿಸುತ್ತಾನೆ :

**ಏವಂ ಶ್ವೇತೇ ಮಹೇಷ್ವಾಸೇ ಪ್ರಾಪ್ತೇ ಶಲ್ಯರಥಂ ಪ್ರತಿ ।**
**ಕುರವಃ ಪಾಣ್ಡವೇಯಾಶ್ಚ ಕಿಮಕುರ್ವತ ಸಂಜಯ ।**
**ಭೀಷ್ಮಃ ಶಾನ್ತನವಃ ಕಿಂ ವಾ ತನ್ಮಮಾಚಕ್ಷ್ವ ಪೃಚ್ಛತಃ ॥೧॥**

"ಸಂಜಯ! ಮಹಾಧನುಷ್ಮಂತನಾದ ಶ್ವೇತನು ಶಲ್ಯನ ರಥವನ್ನು ಸಮೀಪಿಸಲಾಗಿ ಕುರುಗಳು ಮತ್ತು ಪಾಂಡವರು ಏನು ಮಾಡಿದರು? ಶಾಂತನುವಿನ ಮಗನಾದ ಭೀಷ್ಮನೇನು ಮಾಡಿದನು? ಕೇಳಲು ಕುತೂಹಲಿಯಾಗಿರುವ ನನಗೆ ಈ ವಿಷಯವನ್ನು ಯಥಾವತ್ತಾಗಿ ಹೇಳು."

"ಮಹಾರಾಜ! ಅನಂತರ ಲಕ್ಷಸಂಖ್ಯೆಯಲ್ಲಿ ಮಹಾರಥರಾದ ಕ್ಷತ್ರಿಯ ಪುಂಗವರು ಶೂರನಾದ, ಸೇನಾಪತಿಯಾದ ಶ್ವೇತನನ್ನು ಮುಂದೆಮಾಡಿಕೊಂಡು ನಿನ್ನ ಮಗನಿಗೆ ಧರ್ಮರಾಜನ ಬಲವೆಷ್ಟೆಂಬುದನ್ನು ತೋರಿಸುತ್ತಾ ಹೋಗುತ್ತಿದ್ದರು.

ಭೀಷ್ಮನನ್ನು ಕೊಲ್ಲಲು ಅಪೇಕ್ಷಿಸಿದ್ದ ಮತ್ತು ಯೋಧರಲ್ಲಿ ಶ್ರೇಷ್ಠನಾದ ಶಿಖಂಡಿಯನ್ನು ಮುಂದೆಮಾಡಿಕೊಂಡು ಶ್ವೇತನನ್ನು ಕಾಪಾಡಬೇಕೆಂದು ಪಾಂಡವರ ಕಡೆಯ ಮಹಾರಥರು ಇಚ್ಛಿಸಿದ್ದರು. ಅದೇ ರೀತಿಯಲ್ಲಿ ಅವರು ಶ್ವೇತನನ್ನೂ ಮತ್ತು ಶಿಖಂಡಿಯನ್ನೂ ಮುಂದೆಮಾಡಿಕೊಂಡು ಸುವರ್ಣ ಭೂಷಿತವಾದ ಭೀಷ್ಮನ ರಥವನ್ನು ಮುತ್ತಿದರು. ಒಡನೆಯೇ ಭಯಂಕರವಾದ ಯುದ್ಧವು ಪ್ರಾರಂಭವಾಯಿತು. ನಿನ್ನ ಕಡೆಯವರಿಗೂ ಮತ್ತು ಪಾಂಡವರ ಕಡೆಯವರಿಗೂ ಯಾವ ರೀತಿಯಲ್ಲಿ ಯುದ್ಧವು ನಡೆಯಿತೆಂಬುದನ್ನೂ ಮತ್ತು ಆ ಯುದ್ಧದ ಕಾರಣದಿಂದಾಗಿ ಆದ ಅದ್ಭುತವಾದ ಸಂಹಾರಕ್ರಿಯೆಯನ್ನೂ ನಿನಗೆ ವಿಸ್ತಾರವಾಗಿ ಹೇಳುತ್ತೇನೆ ; ಕೇಳು ಮಹಾರಾಜ!

ಆ ಯುದ್ಧದಲ್ಲಿ ಶಾಂತನುವಿನ ಮಗನಾದ ಭೀಷ್ಮನು ರಥಿಕರೆಲ್ಲರನ್ನೂ ಸಂಹಾರಮಾಡಿ ಅನೇಕರಥಗಳನ್ನು ಶೂನ್ಯರಥಗಳನ್ನಾಗಿ ಮಾಡಿಬಿಟ್ಟನು. ರಥಿಗಳಲ್ಲಿ ಶ್ರೇಷ್ಠರೆನಿಸಿಕೊಂಡಿದ್ದವರನ್ನೂ ಸಹ ಬಾಣಗಳಿಂದ ಬಹುವಾಗಿ ಪೀಡಿಸಿದನು. ಭೀಷ್ಮನು ರಣಾಂಗಣದಲ್ಲಿ ಅದಕ್ಕಿಂತಲೂ ಅದ್ಭುತವಾದ ಕಾರ್ಯವನ್ನೇ ಮಾಡಿದನು. ಅದೇನೆಂದರೆ : ಸೂರ್ಯನಿಗೆ ಸಮಾನವಾದ ಪರಾಕ್ರಮವಿದ್ದ ಭೀಷ್ಮನು ಸೂರ್ಯನನ್ನೇ ತನ್ನ ಅಮೋಘವಾದ ಬಾಣ ಗಳಿಂದ ಮುಚ್ಚಿಬಿಟ್ಟನು. ಅದು ನಿಶ್ಚಯವಾಗಿಯೂ ಪರಮಾದ್ಭುತವಾಗಿ ಕಂಡಿತು. ಸೂರ್ಯನು ಉದಯಿಸುತ್ತಲೇ ಯಾವ ರೀತಿಯಲ್ಲಿ ಕತ್ತಲೆ ಯನ್ನೆಲ್ಲಾ ಹೋಗಲಾಡಿಸಿಬಿಡುತ್ತಾನೆಯೋ–ಅದೇ ರೀತಿಯಲ್ಲಿ ಸೂರ್ಯ ಸಮಾನಪರಾಕ್ರಮನಾದ ಭೀಷ್ಮನು ರಣರಂಗವೆಂಬ ಆಕಾಶದಲ್ಲಿ ಉದಯಿಸಿ ಲಕ್ಷೋಪಲಕ್ಷಸಂಖ್ಯೆಯಲ್ಲಿ ಶತ್ರುಪಕ್ಷದ ಸೈನಿಕರನ್ನು ಯಮಾಲಯಕ್ಕೆ ಕಳುಹಿಸಿದನು. ಭೀಷ್ಮನ ಧನುಸ್ಸಿನಿಂದ ಸೂರ್ಯನ ಕಿರಣಗಳೋಪಾದಿಯಲ್ಲಿ ಚ್ಯುತವಾಗುತ್ತಿದ್ದ ಮಹಾವೇಗಯುಕ್ತವಾಗಿದ್ದ, ಮಹಾಬಲಯುಕ್ತವಾಗಿದ್ದ, ಕ್ಷತ್ರಿಯರಿಗೆ ವಿನಾಶವನ್ನುಂಟುಮಾಡುವ ಬಾಣಗಳು ನೂರಾರು ವೀರರುಗಳ ಶಿರಸ್ಸುಗಳನ್ನು ಕೆಳಗುರುಳಿಸಿದುವು.

ಆ ಬಾಣಗಳು ಕೇವಲ ವೀರಸೈನಿಕರನ್ನು ಮಾತ್ರವೇ ಕತ್ತರಿಸಲಿಲ್ಲ ; ವಜ್ರಾಯುಧದಿಂದ ಕತ್ತರಿಸಲ್ಪಟ್ಟ ಪರ್ವತಗಳೋಪಾದಿಯಲ್ಲಿ–ಭೀಷ್ಮನ

ಬಾಣಗಳಿಂದ ಕತ್ತರಿಸಲ್ಪಟ್ಟಿದ್ದ ಮುಳ್ಳಿನ ಕವಚವನ್ನು ಹೊಂದಿದ್ದ ಅನೇಕ ಆನೆಗಳೂ ಸಹ ಆ ರಣಾಂಗಣದಲ್ಲಿ ಸತ್ತುಬಿದ್ದಿರುವುದು ಕಾಣುತ್ತಿದ್ದಿತು. ರಥಿಕರು, ಸಾರಥಿಗಳು ಮತ್ತು ಕುದುರೆಗಳು ಎಲ್ಲರೂ ಸಂಹೃತರಾಗಿ ಶೂನ್ಯ ವಾಗಿದ್ದ ಆ ರಥಗಳೆಲ್ಲವೂ ಇತರ ಅನೇಕ ಶೂನ್ಯರಥಗಳೊಡನೆ ಸೇರಿಕೊಂಡು ರಣಭೂಮಿಯಲ್ಲಿ ನಿಂತಿದ್ದುದು ಕಾಣುತ್ತಿದ್ದಿತು. ಕೆಲವು ರಥಗಳಲ್ಲಿ ರಥಿಕರು ಮತ್ತು ಸಾರಥಿಗಳು ಅಸುನೀಗಿದ್ದರೂ ಕುದುರೆಗಳು ಹಾಗೆಯೇ ಉಳಿದಿರುತ್ತಿದ್ದುವು. ನಿಯಂತ್ರಕರೇ ಇಲ್ಲದ ಕುದುರೆಗಳು, ಧನುಸ್ಸನ್ನು ಹಾಗೆಯೇ ಕೈಯಲ್ಲಿ ಹಿಡಿದು ಬಾಣಾಘಾತದಿಂದ ಸತ್ತುಹೋಗಿ ಜೋಲಾಡು ತ್ತಿದ್ದ ಯುವಕರ ಸಮೇತವಾಗಿ ರಥವನ್ನು ಬಹಳ ದೂರದವರೆಗೂ ಸೆಳೆದು ಕೊಂಡು ಹೋಗುತ್ತಿದ್ದುದು ಆ ರಣರಂಗದಲ್ಲಿ ಕಾಣುತ್ತಿದ್ದಿತು. ಉದ್ರೇಕ ಗೊಂಡ ಆ ಕುದುರೆಗಳು ಇಲ್ಲಿಂದಲ್ಲಿಗೆ ಅಲ್ಲಿಂದಿಲ್ಲಿಗೆ ರಥವನ್ನು ಸೆಳೆದು ಕೊಂಡು ತಿರುಗಾಡುತ್ತಿದ್ದುವು.

ಭೂಮಿಯ ಮೇಲೆ ಬಿದ್ದ ನೂರಾರು ವೀರರು ಕತ್ತಿಗಳನ್ನೂ ಮತ್ತು ಬತ್ತಳಿಕೆಗಳನ್ನೂ ಬಿಗಿದುಕೊಂಡೇ ಇದ್ದರು. ಅವರ ತಲೆಗಳು ನುಚ್ಚುನೂರಾ ಗಿದ್ದುವು. ಈ ರೀತಿಯಲ್ಲಿ ಪ್ರಾಣತೊರೆದ ವೀರರಿಗೆ ಭೂಮಿಯೇ ವೀರ ಶಯ್ಯೆಯಾಗಿದ್ದಿತು. ವೀರರಾದವರಿಗೆ ಮಲಗಲು ಯೋಗ್ಯವಾದ ಪವಿತ್ರವಾದ ಯುದ್ಧಭೂಮಿಯಲ್ಲಿಯೇ ಅವರು ಮಲಗಿದ್ದರು. ಒಬ್ಬರು ಮತ್ತೊಬ್ಬರನ್ನು ಅಟ್ಟಿಸಿಕೊಂಡು ಹೋಗಿ ಅವರೊಡನೆ ಯುದ್ಧಮಾಡುತ್ತಿದ್ದರು. ಅವರ ಲ್ಲೊಬ್ಬರು ಕೆಳಗೆ ಬೀಳುತ್ತಿದ್ದರು. ಆದರೆ ಯುದ್ಧವು ಅಷ್ಟಕ್ಕೇ ನಿಲ್ಲುತ್ತಿರಲಿಲ್ಲ. ಕ್ಷಣಮಾತ್ರದಲ್ಲಿ ಪುನಃ ಎಚ್ಚೆತ್ತುಕೊಳ್ಳುತ್ತಿದ್ದರು. ತಮ್ಮನ್ನು ಕೆಳಕ್ಕೆ ಕೆಡವಿ ದವನನ್ನು ಅಟ್ಟಿಸಿಕೊಂಡು ಹೋಗುವರು. ಪುನಃ ಅವರಿಬ್ಬರಿಗೂ ದ್ವಂದ್ವ ಯುದ್ಧವಾಗುತ್ತಿದ್ದಿತು. ದ್ವಂದ್ವಯುದ್ಧದಲ್ಲಿ ಪರಸ್ಪರವಾಗಿ ಪೀಡೆಯನ್ನುಂಟು ಮಾಡಿಕೊಳ್ಳುತ್ತಿದ್ದರು. ಇವನು ಅವನಿಗೆ ಗುದ್ದುವುದು ; ಅವನು ಇವನಿಗೆ ಗುದ್ದುವುದು. ಈ ರೀತಿಯಲ್ಲಿ ಇಬ್ಬರಲ್ಲಿಯೂ ಕಿಂಚಿತ್ ಸತ್ತ್ವವು ಉಳಿದಿರುವ ವರೆಗೂ ಹೀಗೆಯೇ ಕಾದಾಡುತ್ತಿದ್ದರು. ಇಬ್ಬರಲ್ಲಿಯೂ ಸತ್ತ್ವವು ಉಡುಗಿ ಹೋದನಂತರ ಕೆಳಗೆ ಬಿದ್ದು ಪುನಃ ಏಳಲೂ ಕೂಡ ಚೈತನ್ಯವಿಲ್ಲದವರಾಗಿ ದ್ವಂದ್ವಯುದ್ಧದಿಂದುಂಟಾದ ಗಾಯದ ನೋವನ್ನು ಸಹಿಸಲಾರದವರಾಗಿ

ರಣಾಂಗಣದಲ್ಲಿ ಹೊರಳಾಡುತ್ತಿದ್ದರು. ಇಂತಹ ದಾರುಣದೃಶ್ಯಗಳು ಅನೇಕ ವಿದ್ದುವು.

ಮಹಾರಾಜ! ಕುದುರೆಗಳು ಸೆಳೆದೊಯ್ಯುತ್ತಿದ್ದ ಆ ರಥಗಳು ಧನುಸ್ಸು ಗಳಿಂದ ಕೂಡಿದ್ದುವು ; ಬತ್ತಳಿಕೆಗಳಿಂದ ಕೂಡಿದ್ದುವು ; ಸುವರ್ಣಾಭರಣ ಗಳಿಂದ ಅಲಂಕೃತವಾಗಿದ್ದುವು. ಶತ್ರುಪಕ್ಷದವರ ಪೀಡನೆಗೆ ನೂರಾರು ಬಾರಿ ಒಳಗಾಗಿದ್ದುವು. ನಿರ್ಭಯದಿಂದ ಕಡೆಯವರೆಗೂ ಕಾದಾಡಿ ಪ್ರಾಣತೊರೆದ ವೀರಯೋಧರಿಂದ ಕೂಡಿದ್ದುವು. ಇಂತಹ ವೀರಯೋಧರೊಡನೆ ಆ ರಥ ಗಳು ಧಾವಿಸುತ್ತಿದ್ದುವು. ಮಧ್ಯದಲ್ಲಿ ಆ ಯೋಧರನ್ನು ವಿಸರ್ಜಿಸಿಯೂ ಮುಂದೆ ನಡೆಯುತ್ತಿದ್ದುವು. (ಜೋಲಾಡುತ್ತಿದ್ದ ಅವರು ರಥವು ಸ್ವಲ್ಪದೂರ ಹೋಗುವುದರೊಳಗಾಗಿ ಕೆಳಕ್ಕೆ ಬಿದ್ದುಹೋಗುತ್ತಿದ್ದರು.) ಅತ್ತಲಿತ್ತ ಅನಿಯಂತ್ರಿತವಾಗಿ ಸಾಗುತ್ತಿದ್ದ ಸವಾರನಿಲ್ಲದ ಕುದುರೆಗಳನ್ನು ಮದಿಸಿದ ಆನೆಯು ಕೊನೆಗೊಳಿಸುತ್ತಿದ್ದಿತು. ರಥಿಗಳು ತಮ್ಮ-ತಮ್ಮ ರಥಗಳೊಡನೆ ರಣರಂಗದ ಸುತ್ತಲೂ ಶತ್ರುಗಳನ್ನು ಕೊಲ್ಲುತ್ತಾ ಸುತ್ತಾಡುತ್ತಿದ್ದರು. ಎದು ರಾಳಿಯ ಬಾಣಗಳಿಂದ ಪ್ರಹತನಾದ ಸಾರಥಿಯೊಬ್ಬನು ರಥದಿಂದ ಕೆಳಗೆ ಬೀಳುತ್ತಿದ್ದನು. ಹೀಗೆ ಕೆಳಗೆ ಬಿದ್ದು ಸತ್ತುಹೋದ ಸಾರಥಿಯ ರಥವು ಮರದ ಕೊರಡಿನಂತೆ ಮೇಲಿನಿಂದ ಕೆಳಕ್ಕೆ ಬೀಳುತ್ತಿದ್ದಿತು.

ಯುದ್ಧವಾಗುತ್ತಿದ್ದ ಆ ಸಂಗ್ರಾಮಭೂಮಿಯಲ್ಲಿ ಅತ್ಯಗಾಧವಾಗಿ ಧೂಳೆದ್ದಿತು. ಯಾರನ್ನೂ ಯಾರೂ ನೋಡುವಂತೆಯೂ ಇರಲಿಲ್ಲ ; ಗುರುತಿಸುವಂತೆಯೂ ಇರಲಿಲ್ಲ. ಧನುಷ್ಟೇಂಕಾರವಾಗುತ್ತಿದ್ದುದರಿಂದ ಮಾತ್ರವೇ ಯೋಧರು ಧನುಸ್ಸನ್ನು ಹಿಡಿದು ನಿಂತಿರುವುದು ತಿಳಿದುಬರುತ್ತಿದ್ದಿತು. ಆದರೆ ಯೋಧರು ನಮ್ಮ ಕಡೆಯವರೇ ಅಥವಾ ಶತ್ರುಗಳ ಕಡೆಯವರೇ ಎಂಬುದನ್ನು ತಿಳಿಯಬೇಕಾದರೆ ಅವರ ಶರೀರ ವನ್ನು ಸ್ಪರ್ಶಮಾಡುವುದರಿಂದ ಮಾತ್ರವೇ ಶತ್ರು-ಮಿತ್ರರೆಂಬುದನ್ನು ತಿಳಿಯಲು ಸಾಧ್ಯವಾಗುತ್ತಿದ್ದಿತು. ಯಾರು ಯುದ್ಧಮಾಡುತ್ತಿದ್ದಾ ನೆಂಬುದನ್ನು ಕೇವಲ ಶಿಂಜಿನಿಯ ಶಬ್ದದಿಂದಲೂ (ಪ್ರಸಿದ್ಧನಾದ ಯೋಧನು ಮಾಡುತ್ತಿದ್ದ ಧನುಷ್ಟೇಂಕಾರದಿಂದಲೂ) ಮತ್ತು ಅವನ ಕಡೆಯ ಸೈನ್ಯಗಳು ಮಾಡುತ್ತಿದ್ದ ಕೋಲಾಹಲ ಶಬ್ದಗಳಿಂದಲೂ ತಿಳಿಯಬಹುದಾಗಿ

ದ್ದಿತು. ಆದರೆ ಸೈನಿಕರು ಪರಸ್ಪರವಾಗಿ ಮಾಡುತ್ತಿದ್ದ ವೀರಶಬ್ದಗಳು ಮಾತ್ರ ಸ್ವಲ್ಪವೂ ಕೇಳಿಸುತ್ತಲೇ ಇರಲಿಲ್ಲ. ಆ ರಣರಂಗದಲ್ಲಿ ಭೋರ್ಗರೆಯುವ ಶಬ್ದವೊಂದು ಮಾತ್ರ ಕೇಳುತ್ತಿದ್ದಿತೇ ಹೊರತು ಮತ್ತೇನೂ ಕೇಳಿಸುತ್ತಿರಲಿಲ್ಲ. ಮೇಲಾಗಿ ಕಿವಿಯನ್ನೇ ಕಿವುಡು ಮಾಡತಕ್ಕ ಢಕ್ಕೆಗಳ (ಭೇರಿ) ಶಬ್ದವೂ ಸೇರಿ ಬಿಟ್ಟಿದ್ದಿತು. ಯುದ್ಧಮಾಡುವವನು ತನ್ನ ಪೌರುಷದ ವಿಷಯವಾಗಿ ಪ್ರಶಂಸೆ ಮಾಡಿಕೊಳ್ಳುತ್ತಿದ್ದುದು ಯಾರಿಗೂ ಕೇಳಿಸುತ್ತಿರಲಿಲ್ಲ. ಅವರು ಪರಸ್ಪರವಾಗಿ ತಮ್ಮ ಹೆಸರು ಮತ್ತು ಗೋತ್ರಗಳನ್ನು ಹೇಳಿಕೊಳ್ಳುತ್ತಿದ್ದರೂ ಸಹ ಯಾರಿಗೂ ಕೇಳಿಸುತ್ತಿರಲಿಲ್ಲ. ಭೀಷ್ಮನು ತನ್ನ ಧನುಸ್ಸಿನಿಂದ ಚ್ಯುತವಾದ ಬಾಣಗಳಿಂದ ಪೀಡಿತರಾಗಿ ತನ್ನೊಡನೆ ಯುದ್ಧಮಾಡುತ್ತಿದ್ದ ಯೋಧರ ಮತ್ತು ಆ ಯುದ್ಧವನ್ನು ಪರಸ್ಪರವಾಗಿ ನಿಂತು ನೋಡುತ್ತಿದ್ದ ವೀರರ ಹೃದಯಗಳನ್ನೂ ಸಹ ನಡುಗಿಸಿಬಿಟ್ಟನು ಅಥವಾ ಅವನ ಧನುಸ್ಸಿನಿಂದ ಹೊರಬರುತ್ತಿದ್ದ ಬಾಣಗಳಿಂದ ಪೀಡಿತರಾದ ಯೋಧರ ಮನಸ್ಸುಗಳು ನಡುಗಿದುವು. ಆ ಯುದ್ಧವು ಅತ್ಯಂತ ಭಯಂಕರವಾಗಿಯೂ, ಸರ್ವರಿಗೂ ವ್ಯಾಕುಲವನ್ನುಂಟುಮಾಡುವುದಾಗಿಯೂ ಇದ್ದಿತು. ಆ ಯುದ್ಧದಲ್ಲಿ ತಂದೆ ಯಾದವನಿಗೆ ತನ್ನ ಮಗನಾರೆಂಬುದನ್ನು ತಿಳಿಯಲು ಸಹ ಸಾಧ್ಯ ವಾಗುತ್ತಿರಲಿಲ್ಲ.

ಒಬ್ಬೊಬ್ಬ ವೀರಯೋಧನ ರಥದ ಚಕ್ರಗಳೂ ಭೀಷ್ಮನ ಅನವರತವಾದ ಬಾಣಪ್ರಯೋಗದಿಂದ ಭಗ್ನವಾಗಿ ಹೋಗಿ, ಕುದುರೆಗಳನ್ನು ಕಟ್ಟಿದ್ದ ನೊಗವೂ ಸಹ ತುಂಡು-ತುಂಡಾಗಿ ಹೋಗಲಾಗಿ, ನೊಗದ ಒಂದು ಭಾಗದಲ್ಲಿದ್ದ ಕುದುರೆಯೂ ಸತ್ತುಹೋಗಿ, ಸಾರಥಿಯೊಡನೆ ಆ ರಥದಲ್ಲಿ ಕುಳಿತಿದ್ದ ವೀರಯೋಧನೂ ಸಹ ಭೀಷ್ಮನ ಬಾಣಗಳ ಪ್ರಹಾರದಿಂದ ರಥದಿಂದ ಕೆಳಕ್ಕೆ ಬೀಳುತ್ತಿದ್ದನು. ಈ ರೀತಿಯಾಗಿ ಆ ಯುದ್ಧದಲ್ಲಿ ಸಾಮಾನ್ಯವಾಗಿ ಎಲ್ಲ ಶತ್ರುಪಕ್ಷದ ವೀರರೂ ರಥಹೀನರಾಗಲಾಗಿ, ಅವರೆಲ್ಲರೂ ಸಹ ಭಿನ್ನ- ಭಿನ್ನ ಮಾರ್ಗಗಳಿಂದ ರಣಾಂಗಣದ ಸುತ್ತಲೂ ಓಡಿಹೋಗುತ್ತಿದ್ದುದು ಕಾಣಿಸುತ್ತಿದ್ದಿತು.

ನೂರಾರು ಆನೆಗಳೂ ಸತ್ತುಹೋದುವು. ಒಬ್ಬನ ಶಿರಸ್ಸೇ ಕತ್ತರಿ ಸಲ್ಪಟ್ಟಿತು. ಮಗದೊಬ್ಬನ ಮರ್ಮಸ್ಥಳಕ್ಕೇ ಏಟುಬಿದ್ದಿತು. ರಥಕ್ಕೆ ಕಟ್ಟಿದ್ದ

ಕುದುರೆಗಳೂ ಸತ್ತುಹೋದುವು. ಈ ರೀತಿಯಾಗಿ ಶತ್ರುಪಕ್ಷದವರಲ್ಲಿ ಒಬ್ಬೊಬ್ಬರದೂ ಒಂದೊಂದು ಸ್ಥಿತಿಯಾಗಿದ್ದಿತು. ಭೀಷ್ಮನು ಯುದ್ಧಮಾಡುತ್ತಿದ್ದ ಆ ಕಾಲದಲ್ಲಿ ಪೆಟ್ಟುತಿನ್ನದವನೇ ಯಾವನೊಬ್ಬನೂ ಇರಲಿಲ್ಲ.

ಇದೇ ರೀತಿ ಆ ಮಹಾಯುದ್ಧದಲ್ಲಿ ಶ್ವೇತನೂ ಸಹ ಕುರುಗಳ ಸೈನ್ಯವನ್ನು ಕ್ಷಣ-ಕ್ಷಣಕ್ಕೂ ಕಡಿಮೆಮಾಡುತ್ತಿದ್ದನು. ಅವನು ನೂರಾರು ಸಂಖ್ಯೆಯಲ್ಲಿ ಶ್ರೇಷ್ಠರಾದ, ರಥಿಗಳಾದ ರಾಜಕುಮಾರರನ್ನು ಗುಂಪು-ಗುಂಪಾಗಿಯೇ ಸಂಹರಿಸುತ್ತಿದ್ದನು. ಸಾವಿರಾರು ಸಂಖ್ಯೆಯಲ್ಲಿ ರಥಿಗಳ ಕತ್ತುಗಳನ್ನು ಬಾಣಗಳಿಂದ ಕತ್ತರಿಸುತ್ತಿದ್ದನು. ಎಲ್ಲ ಕಡೆಗಳಿಗೂ ಏಕಕಾಲದಲ್ಲಿ ಬಾಣಪ್ರಯೋಗ ಮಾಡುತ್ತಾ ಕನಕಾಂಗದಯುಕ್ತವಾದ ತೋಳುಗಳನ್ನೂ, ಧನುಸ್ಸುಗಳನ್ನೂ, ರಥದ ಈಷಾದಂಡವನ್ನೂ, ರಥಚಕ್ರಗಳನ್ನೂ, ಬತ್ತಳಿಕೆಗಳನ್ನೂ, ರಥದ ಯುಗಗಳನ್ನೂ ಚೂರು-ಚೂರುಗಳಾಗಿ ಕತ್ತರಿಸುತ್ತಿದ್ದನು. ರಾಜಕುಮಾರರ ತಲೆಯ ಮೇಲಿದ್ದ ಛತ್ರಗಳನ್ನೂ, ಬಹುಮೂಲ್ಯವಾದ ಪತಾಕೆಗಳನ್ನೂ ಕ್ಷಣಮಾತ್ರದಲ್ಲಿ ಕತ್ತರಿಸುತ್ತಿದ್ದನು. ಕುದುರೆಗಳ ಸಮೂಹಗಳು, ರಥಗಳ ಸಮೂಹಗಳು, ಪದಾತಿಸಮೂಹಗಳು, ಆನೆಗಳು, ನೂರಾರು-ಸಾವಿರಾರು ಸಂಖ್ಯೆಯಲ್ಲಿ ಶ್ವೇತನಿಂದ ಹತವಾದುವು. ಮಹಾರಾಜ! ನಾವೂ ಸಹ ಶ್ವೇತನ ಭಯದಿಂದಾಗಿ ರಥಸತ್ತಮನಾದ ಭೀಷ್ಮನನ್ನು ಬಿಟ್ಟು ಓಡಿದೆವು. ಹಾಗೆ ಓಡಿದ ಕಾರಣದಿಂದಲೇ ನಾನು ಇಂದು ಬದುಕಿ ಮಹಾರಾಜರನ್ನು ಕಾಣಲು ನನಗೆ ಸಾಧ್ಯವಾಯಿತು. ಶ್ವೇತನ ಬಾಣಗಳು ಎಷ್ಟು ದೂರದವರೆಗೆ ಬೀಳುತ್ತಿದ್ದುವೋ ಅದನ್ನೂ ಮೀರಿ (ಅದರಾಚೆಗೆ ನಿಂತು) ಕುರುಗಳಾದ ನಾವು ಯುದ್ಧದಲ್ಲಿ ತೊಡಗಿದ್ದ ಶಾಂತನುವಿನ ಮಗನಾದ ಭೀಷ್ಮನನ್ನು ನೋಡುತ್ತಿದ್ದೆವು. ನಾವು ಮಾಡುತ್ತಿದ್ದ ಆ ಮಹಾಯುದ್ಧದಲ್ಲಿ ನಾವೆಲ್ಲರೂ ಶ್ವೇತನ ಅತುಲಪರಾಕ್ರಮವನ್ನು ಕಂಡು ಕಾತರರಾಗಿರಲಾಗಿ ದೀನತೆಯಿಲ್ಲದೇ ಧೀರನಾಗಿದ್ದವನು ಭೀಷ್ಮನೊಬ್ಬನೇ. ನರವ್ಯಾಘ್ರನಾದ ಭೀಷ್ಮನೊಬ್ಬನೇ ಅಚಲವಾದ ಮೇರುಪರ್ವತದಂತೆ ಸುಸ್ಥಿರನಾಗಿ ನಿಂತಿದ್ದನು. ಸೂರ್ಯನು ಶಿಶಿರರ್ತುವಿನಲ್ಲಿ ಭೂಮಿಯ ಮೇಲೆ ಬಿದ್ದಿರುವ ಹಿಮಮಣಿಗಳನ್ನು ಹೀರಿಕೊಳ್ಳುವಂತೆ–ಭೀಷ್ಮನು ತನ್ನೆದುರಾಗಿ ಬಂದ ಸೈನಿಕರ ಪ್ರಾಣಗಳನ್ನು ಹೀರಿಬಿಡುತ್ತಿದ್ದನು. ಸೂರ್ಯನು ಕಿರಣ

ಗಳನ್ನು ಹೊಂದಿರುವಂತೆಯೇ ಭೀಷ್ಮನು ಶರಗಳೆಂಬ ಕಿರಣಗಳನ್ನು ಹೊಂದಿ ಆ ರಣಾಂಗಣದಲ್ಲಿ ನಿಂತಿದ್ದನು. ಮಹಾಧನುಷ್ಮಂತನಾದ ಭೀಷ್ಮನು ಅನೇಕ ಬಾರಿ ಬಾಣಗಳ ಸಮೂಹವನ್ನೇ ಶತ್ರುಗಳ ಮೇಲೆ ಪ್ರಯೋಗಿಸುತ್ತಾ–ವಜ್ರ ಪಾಣಿಯಾದ ಇಂದ್ರನು ಅಸುರರನ್ನು ನಿರ್ಮೂಲಮಾಡಿದಂತೆ–ಆ ಯುದ್ಧ ದಲ್ಲಿ ಶತ್ರುಸೈನ್ಯಗಳನ್ನು ನಿರ್ಮೂಲಮಾಡುತ್ತಿದ್ದನು.

ದಾರುಣವಾದ ಕಾಡುಗಿಚ್ಚು ಉದ್ಭವಿಸಿದ ಸಮಯದಲ್ಲಿ ಗುಂಪು-ಗುಂಪಾಗಿರುವ ಆನೆಗಳು ಚದುರಿಹೋಗುವಂತೆ–ಭೀಷ್ಮನಿಂದ ಪ್ರಹತರಾಗು ತ್ತಿದ್ದ ಶತ್ರುಪಕ್ಷದ ಯೋಧರು ಮಹಾಬಲನಾದ ಶ್ವೇತನನ್ನು ಬಿಟ್ಟು ಹೊರಟು ಹೋಗುತ್ತಿದ್ದರು. (**ಯೂಥಾನ್ಮುಕ್ತಂ ಭೂಮಿಷು ದಾರುಣಮ್** ಎಂಬ ಪಾಠಕ್ಕೆ ಬದಲಾಗಿ **ಯೋಧಾ ಮುಕ್ತ್ವಾಗ್ನಿಮಿವ ದಾರುಣಮ್** ಎಂಬ ಪಾಠವನ್ನಿಟ್ಟುಕೊಂಡು ಭಾಷಾಂತರಿಸಲಾಗಿದೆ.)

ಶ್ವೇತನೊಬ್ಬನನ್ನೇ ಲಕ್ಷ್ಯವಾಗಿ ಇಟ್ಟುಕೊಂಡು ಯುದ್ಧಮಾಡುತ್ತಿದ್ದವ ನೆಂದರೆ ದುರ್ಯೋಧನನಿಗೆ ಪ್ರಿಯವನ್ನುಂಟುಮಾಡುವುದರಲ್ಲಿಯೇ ಆಸಕ್ತ ನಾಗಿದ್ದ, ಪಾಂಡವರನ್ನೂ ಮತ್ತು ಅವರ ಪಕ್ಷದ ಯೋಧರನ್ನೂ ಬಾಣಗಳೆಂಬ ತೀಕ್ಷ್ಣವಾದ ಕಿರಣಗಳಿಂದ ಶೋಷಿಸಿಬಿಡುತ್ತಿದ್ದ, ಬಿಡಲು ಬಹಳ ಕಷ್ಟವೆನಿಸುವ ಜೀವವನ್ನೂ ಸಹ ಮುಡುಪಾಗಿಟ್ಟು ಯುದ್ಧಮಾಡುತ್ತಿದ್ದ ಭಯರಹಿತನಾದ ಭೀಷ್ಮನೊಬ್ಬನೇ.

ಮಹಾರಾಜ! ನಿನ್ನ ತಂದೆಯಾದ, ದೇವವ್ರತನಾಮಕನಾದ ಭೀಷ್ಮನು ಪಾಂಡವರ ಸಾವಿರಾರು ಸೈನಿಕರನ್ನು ವಿನಾಶಗೊಳಿಸಿದನು. ತನ್ನ ಕಡೆಯ ಸೈನಿಕರನ್ನು ತೀಕ್ಷ್ಣವಾದ ಬಾಣಗಳಿಂದ ಪ್ರಹರಿಸುತ್ತಿದ್ದ ಸೇನಾಪತಿಯಾದ ಶ್ವೇತನನ್ನು ನೋಡಿದೊಡನೆಯೇ ಭೀಷ್ಮನು ಅವನ ಹತ್ತಿರಕ್ಕೆ ಧಾವಿಸಿ ಅವನಿ ಗೆದುರಾಗಿ ತನ್ನ ರಥವನ್ನು ನಿಲ್ಲಿಸಿದನು. ಭೀಷ್ಮನು ತನ್ನೆದುರಾಗಿ ಬಂದೊಡ ನೆಯೇ ಶ್ವೇತನು ದೊಡ್ಡದಾದ ಬಾಣಗಳ ಬಲೆಯಿಂದ ಭೀಷ್ಮನನ್ನು ಮುಚ್ಚಿ ಬಿಟ್ಟನು. ಭೀಷ್ಮನೂ ಸಹ ಕ್ಷಣಮಾತ್ರದಲ್ಲಿ ಅವನು ಬಿಟ್ಟ ಬಾಣಗಳನ್ನು ಕತ್ತರಿಸಿ ಶ್ವೇತನನ್ನೇ ಶರಗಳ ಸಮೂಹದಿಂದ ಮುಚ್ಚಿಬಿಟ್ಟನು. ಆ ಇಬ್ಬರು ಮಹಾವೀರರೂ ಗೂಳಿಗಳಂತೆ ಗರ್ಜನೆಮಾಡುತ್ತಿದ್ದರು. ಮದಿಸಿದ ಎರಡು

ದೊಡ್ಡದಾದ ಆನೆಗಳಂತೆಯೇ ಇದ್ದರು. ಕೋಪಗೊಂಡ ಎರಡು ಸಿಂಹಗಳಂತೆ ಅವರಿಬ್ಬರೂ ಪರಸ್ಪರವಾಗಿ ಕಾದಾಡುತ್ತಿದ್ದರು. ಇಬ್ಬರು ಪುರುಷಶ್ರೇಷ್ಠರೂ ಪ್ರತ್ಯಸ್ತ್ರಗಳಿಂದ ತಮ್ಮ ಕಡೆಗೆ ಬರುತ್ತಿದ್ದ ಅಸ್ತ್ರಗಳನ್ನು ನಿರಸನಗೊಳಿಸುತ್ತಾ ಒಬ್ಬರು ಮತ್ತೊಬ್ಬರನ್ನು ವಧೆಮಾಡುವ ಏಕೈಕೇಚ್ಛೆಯಿಂದ ಯುದ್ಧಮಾಡುತ್ತಿದ್ದರು. ಮಹಾರಾಜ! ಶ್ವೇತನೇನಾದರೂ ಆ ಸಮಯದಲ್ಲಿ ಪಾಂಡವರ ಸೇನೆಯನ್ನು ರಕ್ಷಿಸದೆಯೇ ಇದ್ದಿದ್ದರೆ ಪರಮಕ್ರುದ್ಧನಾದ ಭೀಷ್ಮನು ಅಗ್ನಿಗೆ ಸಮಾನವಾಗಿದ್ದ ತನ್ನ ಶರಜಾಲದಿಂದ ಒಂದೇ ಒಂದು ದಿವಸದಲ್ಲಿ ಪಾಂಡವರ ಅಖಂಡಸೇನೆಯನ್ನೂ ಸುಟ್ಟುಬಿಡುತ್ತಿದ್ದನು. ಶ್ವೇತನ ಬಾಣಗಳ ಪ್ರಹಾರವನ್ನು ಭೀಷ್ಮನು ಹೆಚ್ಚುಹೊತ್ತು ಸಹಿಸಲಾಗಲಿಲ್ಲ. ಭೀಷ್ಮನು ಮಹಾಶೂರನಾಗಿದ್ದರೂ ಸಹ ಸ್ವಲ್ಪಹೊತ್ತು ಹಿಮ್ಮೆಟ್ಟಲೇಬೇಕಾಯಿತು. ಪಿತಾಮಹನನ್ನು ಶ್ವೇತನು ಯುದ್ಧದಿಂದ ವಿಮುಖನನ್ನಾಗಿ ಮಾಡಿದುದನ್ನು ನೋಡಿ ಪಾಂಡವರು ಬಹಳ ಸಂತಸಗೊಂಡರು. ನಿನ್ನ ಮಗನಾದರೋ ವಿಮನಸ್ಕನಾದನು. ನಿನ್ನ ಮಗನ ಮನಸ್ಸು ಕುಸಿದುಹೋಯಿತು. ಉತ್ಸಾಹಹೀನನಾದನು. ಪಿತಾಮಹನೂ ಸಹ ವಿಮುಖನಾದುದನ್ನು ಕಂಡು ಪರಮಕ್ರುದ್ಧನಾದ ದುರ್ಯೋಧನನು ಕ್ಷತ್ರಿಯರಾಜರಿಂದ ಪರಿವೃತನಾಗಿ ಸಸೈನ್ಯನಾಗಿ ಪಾಂಡವರ ಸೈನ್ಯವನ್ನು ಆಕ್ರಮಿಸಿದನು. ನಿನ್ನ ಮಗನ ಆಜ್ಞೆಯಂತೆ ದುರ್ಮುಖ, ಕೃತವರ್ಮ, ಕೃಪ, ಶಲ್ಯ ಇವರುಗಳು ಭೀಷ್ಮನನ್ನು ರಕ್ಷಿಸುತ್ತಿದ್ದರು.

ದುರ್ಯೋಧನಪುರಃಸರರಾದ ರಾಜರಿಂದ ಪಾಂಡವರ ಸೈನ್ಯಗಳು ಹತವಾಗುತ್ತಿರುವುದನ್ನು ನೋಡಿ ಶ್ವೇತನು ಗಾಂಗೇಯನನ್ನು ಅಲ್ಲಿಯೇ ಬಿಟ್ಟು, ಬಿರುಗಾಳಿಯು ವೃಕ್ಷವನ್ನು ಮೂಲೋತ್ಪಾಟನಮಾಡುವಂತೆ–ಸ್ವಲ್ಪ ಸಮಯದೊಳಗಾಗಿ ನಿನ್ನ ಮಗನ ಸೈನ್ಯವನ್ನು ನಾಶಮಾಡಿಬಿಟ್ಟನು. ಕ್ರೋಧಮೂರ್ಛಿತನಾದ, ವಿರಾಟನ ಮಗನಾದ ಶ್ವೇತನು ನಿನ್ನ ಮಗನ ಸೈನ್ಯವನ್ನು ನಾಶಮಾಡಿ ಅಳಿದುಳಿದವರನ್ನು ಓಡಿಹೋಗುವಂತೆ ಮಾಡಿ ಮತ್ತೆ ಭೀಷ್ಮನಿದ್ದೆಡೆಗೆ ಬಂದು ಅವನನ್ನು ಆಕ್ರಮಿಸಿದನು. ಪುನಃ ಒಂದೆಡೆಯಲ್ಲಿ ಸೇರಿದ ಮಹಾಬಲರಾದ, ಪರಸ್ಪರ ವಧೈಷಿಗಳಾದ ಬಾಣಗಳಿಂದ ಉತ್ತೇಜಿತರಾದ, ಮಹಾತ್ಮರಾದ ಭೀಷ್ಮ-ಶ್ವೇತರು ಪರಸ್ಪರವಾಗಿ ವೃತ್ರ-ವಾಸವರಂತೆಯೇ

ಯುದ್ಧಮಾಡಿದರು. ಶ್ವೇತನು ಧನುಸ್ಸನ್ನು ಆಕರ್ಣಾಂತವಾಗಿ ಸೆಳೆದು ಏಳು ಬಾಣಗಳಿಂದ ಭೀಷ್ಮನನ್ನು ಪ್ರಹರಿಸಿದನು. ಮರುಕ್ಷಣದಲ್ಲಿಯೇ ಶ್ವೇತನ ಪರಾಕ್ರಮವನ್ನು ನೋಡಿ ಉಗ್ರಗಾಮಿಯಾದ ಭೀಷ್ಮನು ತನ್ನ ಪರಾಕ್ರಮವನ್ನು ಪ್ರಕಟಿಸುತ್ತಾ–ಮದಿಸಿದ ಆನೆಯು ತನ್ನೆದುರಾಗಿ ಬರುವ ಮತ್ತೊಂದು ಮದಿಸಿದ ಆನೆಯನ್ನು ತಡೆಯುವಂತೆ– ಶ್ವೇತನು ಬಿಟ್ಟ ಏಳು ಬಾಣಗಳನ್ನು ಮಧ್ಯದಲ್ಲಿಯೇ ತಡೆದುಬಿಟ್ಟನು. ಶ್ವೇತನು ಪುನಃ ಬಗ್ಗಿದ ಗಿಣ್ಣುಗಳಿದ್ದ ಇಪ್ಪತ್ತೈದು ಬಾಣಗಳಿಂದ ಶಾಂತನವನನ್ನು ಪ್ರಹರಿಸಿದನು. ಶ್ವೇತನ ಆ ಕ್ರಿಯೆಯು ಪರಮಾದ್ಭುತವಾಗಿ ಕಂಡಿತು. ಭೀಷ್ಮನು ಅವುಗಳನ್ನೂ ಸಹ ಕತ್ತರಿಸಿ ಹತ್ತು ಬಾಣಗಳಿಂದ ಶ್ವೇತನನ್ನು ಪ್ರಹರಿಸಿದನು. ಹತ್ತು ಬಾಣಗಳಿಂದ ಪ್ರಹತನಾದರೂ ಸಹ ಶ್ವೇತನು ಸ್ವಲ್ಪವಾದರೂ ವಿಚಲಿತನಾಗಲಿಲ್ಲ. ಪರ್ವತದಂತೆಯೇ ಸುಸ್ಥಿರನಾಗಿದ್ದನು. ಮರುಕ್ಷಣದಲ್ಲಿಯೇ ಕ್ಷತ್ರಿಯನಂದನನಾದ ವೈರಾಟಿಯು ಪರಮಕ್ರುದ್ಧನಾಗಿ ಧನುಸ್ಸನ್ನು ಆಕರ್ಣಾಂತವಾಗಿ ಸೆಳೆದು ಅನೇಕಾನೇಕ ಬಾಣಗಳಿಂದ ಭೀಷ್ಮನನ್ನು ಪ್ರಹರಿಸಿದನು. ಶ್ವೇತನು ಗಹಗಹಿಸಿ ನಗುತ್ತಾ ಕಟವಾಯಿಗಳನ್ನು ನಾಲಿಗೆಯಿಂದ ನೆಕ್ಕುತ್ತಾ ಒಂಬತ್ತು ಬಾಣಗಳನ್ನು ಪ್ರಯೋಗಿಸಿ ಭೀಷ್ಮನ ಧನುಸ್ಸನ್ನು ಹತ್ತು ಚೂರುಗಳನ್ನಾಗಿ ಕತ್ತರಿಸಿದನು. ಪುನಃ ಶಿಖಾಶೂನ್ಯವಾಗಿದ್ದ, ಗರಿಗಳಿಂದ ಕೂಡಿದ್ದ ಬಾಣವನ್ನು ಧನುಸ್ಸಿಗೇರಿಸಿ ಧನುಸ್ಸನ್ನು ಆಕರ್ಣಾಂತವಾಗಿ ಸೆಳೆದು ಪ್ರಯೋಗಿಸಿ ಮಹಾತ್ಮನಾದ ಭೀಷ್ಮನ ರಥದಲ್ಲಿದ್ದ ತಾಲಧ್ವಜದ ಶಿರೋಭಾಗವನ್ನು ಕೆಡವಿದನು. ತಾಲಧ್ವಜವು ಕೆಳಗೆ ಬಿದ್ದುದನ್ನು ಕಂಡ ನಿನ್ನ ಮಗನು, ಶ್ವೇತನ ಕೈಗೆ ಸಿಕ್ಕಿ ಭೀಷ್ಮನು ಸತ್ತುಹೋದನೆಂದೇ ಭಾವಿಸಿಬಿಟ್ಟನು. ಮಹಾತ್ಮನಾದ ಭೀಷ್ಮನ ತಾಲಧ್ವಜವು ಕೆಳಕ್ಕೆ ಬಿದ್ದುದನ್ನು ಕಂಡು ಪಾಂಡವರೂ ಸಹ ಪರಮಹೃಷ್ಟರಾಗಿ ಒಟ್ಟಾಗಿ ಸೇರಿ ಸಂತೋಷದಿಂದ ಶಂಖಗಳನ್ನೂದಿದರು. ಅನಂತರ ದುರ್ಯೋಧನನು ಪರಮಕ್ರುದ್ಧನಾಗಿ ತನ್ನ ಸೈನ್ಯಕ್ಕೆ ಆದೇಶವಿತ್ತನು : 'ಸಾವಧಾನರಾಗಿದ್ದುಕೊಂಡು ಭೀಷ್ಮನನ್ನು ಸುತ್ತುವರಿದುನಿಂತು ಎಲ್ಲ ಕಡೆಗಳಿಂದಲೂ ಅವನನ್ನು ರಕ್ಷಣೆಮಾಡಿರಿ. ನಾವೆಲ್ಲರೂ ನೋಡುತ್ತಿದ್ದಂತೆಯೇ ಶ್ವೇತನಿಂದ ನಮ್ಮ ಪಿತಾಮಹನಿಗೆ ಮೃತ್ಯುವು ಒದಗಬಾರದು. ಆ ರೀತಿಯಲ್ಲಿ ನಾವೆಲ್ಲರೂ ಭೀಷ್ಮನನ್ನು

ಸಂರಕ್ಷಿಸಬೇಕು. ಆದರೆ ನಾನು ಸತ್ಯವಾಗಿ ಹೇಳುತ್ತೇನೆ. ಶಾಂತನುವಿನ ಮಗನಾದ ಭೀಷ್ಮನು ಮಹಾಶೂರನು. (ಸ್ವರಕ್ಷಣೆಯನ್ನು ಮಾಡಿಕೊಳ್ಳಲು ಸಮರ್ಥನೇ ಆದರೂ ನಮ್ಮ ಕರ್ತವ್ಯವನ್ನು ನಾವು ಮಾಡಬೇಕಾಗಿದೆ.)'

ದುರ್ಯೋಧನರಾಜನ ಈ ಮಾತನ್ನು ಕೇಳಿದ ಮಹಾರಥರು ಬಹಳ ಶೀಘ್ರವಾಗಿ ಚತುರಂಗಬಲದಿಂದ ಕೂಡಿಕೊಂಡು ಗಾಂಗೇಯನ ರಕ್ಷಣೆಯಲ್ಲಿ ನಿರತರಾದರು. ಬಾಹ್ಲೀಕ, ಕೃತವರ್ಮ, ಶಲ್ಯ, ಜಲಸಂಧ, ವಿಕರ್ಣ, ಚಿತ್ರಸೇನ–ಮುಂತಾದವರು ತಮ್ಮ-ತಮ್ಮ ಸೈನ್ಯಗಳೊಡನೆ ಅವಸರದಿಂದ ಬಹುಶೀಘ್ರವಾಗಿಯೇ ಭೀಷ್ಮನನ್ನು ಎಲ್ಲ ಕಡೆಗಳಿಂದಲೂ ಆವರಿಸಿಕೊಂಡವ ರಾಗಿ ಶ್ವೇತನ ಮೇಲೆ ಭಯಂಕರವಾದ ಶರವೃಷ್ಟಿಯನ್ನೇ ಕರೆದರು. ಕ್ರುದ್ಧ ನಾದ, ಮಹಾರಥನಾದ, ಅಮೇಯಾತ್ಮನಾದ ಶ್ವೇತನು ಶೀಘ್ರಾತಿಶೀಘ್ರವಾಗಿ ತನ್ನ ಕೈಚಳಕವನ್ನು ತೋರಿಸುತ್ತಾ ನಿಶಿತವಾದ ಬಾಣಗಳಿಂದ ತನ್ನೆದುರಾಗಿ ಬರುತ್ತಿದ್ದ ಸಾವಿರಾರು ಬಾಣಗಳನ್ನೂ ತಡೆದುಬಿಟ್ಟನು. ಸಿಂಹವು ಆನೆಗಳನ್ನು ಬೆದರಿಸಿ ಓಡಿಸಿಬಿಡುವಂತೆ–ಭೀಷ್ಮನ ಅಂಗರಕ್ಷಕರಾಗಿದ್ದ ರಾಜರೆಲ್ಲರನ್ನೂ ಶರಪ್ರಹಾರಗಳಿಂದ ದೂರೀಕರಿಸಿ ದೊಡ್ಡದಾದ ಬಾಣಗಳ ವೃಷ್ಟಿಯಿಂದ ಭೀಷ್ಮನ ಧನುಸ್ಸನ್ನು ಶ್ವೇತನು ಪುನಃ ಕತ್ತರಿಸಿದನು. ಅನಂತರ ಶಾಂತನುವಿನ ಮಗನಾದ ಭೀಷ್ಮನು ಮತ್ತೊಂದು ಧನುಸ್ಸನ್ನು ತೆಗೆದುಕೊಂಡು, ರಣಹದ್ದಿನ ರೆಕ್ಕೆಗಳನ್ನು ಹೊಂದಿದ್ದ, ಚೂಪಾಗಿದ್ದ ಬಾಣಗಳಿಂದ ಶ್ವೇತನನ್ನು ಪ್ರಹರಿಸಿದನು. ಒಡನೆಯೇ ಪರಮಕ್ರುದ್ಧನಾದ ಶ್ವೇತನು ಲೋಹಮಯ ವಾದ ಅನೇಕಾನೇಕ ಬಾಣಗಳಿಂದ ಎಲ್ಲರೂ ನೋಡುತ್ತಿದ್ದಂತೆಯೇ ಭೀಷ್ಮನನ್ನು ಪ್ರಹರಿಸಿದನು. ಆ ಸಮಯದಲ್ಲಿ ಸರ್ವಲೋಕದವರಿಂದಲೂ ಶ್ರೇಷ್ಠನಾದ ವೀರನೆಂದು ಖ್ಯಾತಿಯನ್ನು ಗಳಿಸಿದ ಭೀಷ್ಮನು ಶ್ವೇತನಿಂದ ಯುದ್ಧದಲ್ಲಿ ಪುನಃ ನಿರಸ್ತನಾದುದಕ್ಕಾಗಿ ನಿನ್ನ ಮಗನಾದ ದುರ್ಯೋಧನನು ವ್ಯಥಿತನಾದನು. ನಿನ್ನ ಸೈನ್ಯದವರಿಗೂ ಸಹ ಮಹತ್ತರವಾದ ಭಯವೂ ಕಳವಳವೂ ಉಂಟಾಯಿತು. ವೀರನಾದ ಭೀಷ್ಮನು ಶ್ವೇತನಿಂದ ನಿರಸ್ತ ನಾದುದನ್ನೂ ಮತ್ತು ಶ್ವೇತನ ಬಾಣಗಳಿಂದ ಬಹುವಾಗಿ ಗಾಯ ಗೊಂಡಿದ್ದನ್ನೂ ನೋಡಿ ಎಲ್ಲರೂ–"ಮಹಾವೀರನಾದ ಶ್ವೇತನ ಕೈಗೆ ಸಿಕ್ಕಿದ ಭೀಷ್ಮನು ಶ್ವೇತನಿಂದ ಹತನಾಗಿಬಿಟ್ಟನು"–ಎಂದೇ–ಎಲ್ಲರೂ ಭಾವಿಸಿದರು.

ಅನಂತರ ತನ್ನ ಧ್ವಜವು ಶ್ವೇತನಿಂದ ಕತ್ತರಿಸಲ್ಪಟ್ಟು ಕೆಳಕ್ಕೆ ಬಿದ್ದುದನ್ನೂ ಮತ್ತು ತನ್ನ ಕಡೆಯ ಸೈನಿಕರು ಶ್ವೇತನಿಂದ ಪರಾಭವಗೊಂಡುದನ್ನೂ ನೋಡಿ ನಿನ್ನ ತಂದೆಯಾದ ದೇವವ್ರತನು ಕ್ರೋಧಕ್ಕೆ ವಶನಾಗಿ ಶ್ವೇತನ ಮೇಲೆ ಬಹುಸಂಖ್ಯಾತವಾದ ಬಾಣಗಳನ್ನು ಸುರಿಸಿದನು. ರಥಿಗಳಲ್ಲಿ ಶ್ರೇಷ್ಠ ನಾದ ಶ್ವೇತನಾದರೋ ಭೀಷ್ಮನು ಬಿಟ್ಟ ಎಲ್ಲ ಬಾಣಗಳನ್ನೂ ಕತ್ತರಿಸಿ, ಭಲ್ಲ ವೆಂಬ ಬಾಣದಿಂದ ನಿನ್ನ ತಂದೆಯಾದ ಭೀಷ್ಮನ ಧನುಸ್ಸನ್ನು ಪುನಃ ಕತ್ತರಿಸಿ ದನು. ಕ್ರೋಧಮೂರ್ಛಿತನಾದ ಗಾಂಗೇಯನು ಶ್ವೇತನು ಕತ್ತರಿಸಿದ ಧನುಸ್ಸನ್ನು ಬಿಸುಟು ಹೆಚ್ಚು ಬಲಿಷ್ಠವಾಗಿದ್ದ ಮತ್ತೊಂದು ಧನುಸ್ಸನ್ನು ತೆಗೆದು ಕೊಂಡು ಉಜ್ಜುಶಿಲೆಯಿಂದ ಚೂಪಾಗಿ ಮಾಡಲ್ಪಟ್ಟಿದ್ದ ಮತ್ತು ವಿಶಾಲ ವಾಗಿದ್ದ ಭಲ್ಲಗಳೆಂಬ ಏಳು ಬಾಣಗಳನ್ನು ಏಕಕಾಲದಲ್ಲಿ ಧನುಸ್ಸಿನ ಹೆದೆಗೇರಿಸಿ ನಾಲ್ಕು ಬಾಣಗಳಿಂದ ಸೇನಾಪತಿಯಾದ ಶ್ವೇತನ ಕುದುರೆಗಳನ್ನು ಸಂಹರಿಸಿ, ಎರಡು ಬಾಣಗಳಿಂದ ಧ್ವಜವನ್ನು ಕತ್ತರಿಸಿ, ಕಡೆಯದಾದ ಮತ್ತೊಂದು ಬಾಣದಿಂದ ಸಾರಥಿಯ ತಲೆಯನ್ನೇ ಕತ್ತರಿಸಿಬಿಟ್ಟನು. ತನ್ನ ರಥದ ಕುದುರೆಗಳೂ ಮತ್ತು ಸಾರಥಿಯೂ ಸತ್ತುಹೋಗಲಾಗಿ ಮಹಾಬಲ ನಾದ ಶ್ವೇತನು ರಥದಿಂದ ಕೆಳಕ್ಕೆ ಧುಮ್ಮಿಕ್ಕಿದನು. ಕೋಪಕ್ಕೆ ವಶನಾಗಿ ಹೋಗಿದ್ದ ಶ್ವೇತನು ಹೆಚ್ಚು ವ್ಯಾಕುಲಗೊಂಡನು. ರಥಿಗಳಲ್ಲಿ ಶ್ರೇಷ್ಠನಾಗಿದ್ದ ಶ್ವೇತನು ರಥವಿಲ್ಲದೇ ಭೂಮಿಯ ಮೇಲೆ ನಿಂತಿರುವುದನ್ನು ಕಂಡು ಪಿತಾಮಹನು ನಿಶಿತವಾದ ಬಾಣಗಳ ಸಮೂಹದಿಂದ ಎಲ್ಲ ಕಡೆಗಳಿಂದಲೂ ಪ್ರಹರಿಸತೊಡಗಿದನು.

ರಣಭೂಮಿಯಲ್ಲಿ ಭೀಷ್ಮನ ಧನುಸ್ಸಿನಿಂದ ಚ್ಯುತವಾದ ಬಾಣಗಳಿಂದ ಶ್ವೇತನು ಪ್ರಹೃತನಾಗುತ್ತಿರಲಾಗಿ ಅವನು ಧನುಸ್ಸನ್ನು ಬಿಟ್ಟು ತನ್ನ ರಥ ದಲ್ಲಿದ್ದ ಸ್ವರ್ಣಮಯವಾದ ಶಕ್ತ್ಯಾಯುಧವನ್ನು ಕೈಗೆ ತೆಗೆದುಕೊಂಡನು. ಉಗ್ರವಾದ, ಮಹಾಭಯಂಕರವಾದ, ಕಾಲದಂಡೋಪಮವಾಗಿದ್ದ, ಘೋರ ವಾಗಿದ್ದ, ಮೃತ್ಯುವಿನ ನಾಲಿಗೆಯಂತೆಯೇ ಕಾಣುತ್ತಿದ್ದ ಶಕ್ತ್ಯಾಯುಧವನ್ನು

ಹಿಡಿದೆತ್ತಿಕೊಂಡು ವೇಗವಾಗಿ ನಿಟ್ಟುಸಿರುಬಿಡುತ್ತಾ ಶಾಂತನುವಿನ ಮಗನಾದ ಭೀಷ್ಮನನ್ನು ಕುರಿತು :

**ತಿಷ್ಠೇದಾನೀಂ ಸುಸಂರಬ್ಧಃ ಪಶ್ಯ ಮಾಂ ಪುರುಷೋ ಭವ ।**

"ಈಗ ನೀನು ಸಾಹಸಪೂರ್ಣನಾಗಿ ನಿಲ್ಲು. ನನ್ನನ್ನೊಮ್ಮೆ ನೋಡು. ಪೌರುಷವಂತನಾಗು." ಎಂಬುದಾಗಿ ಹೇಳಿ ಮಹಾಧನುಷ್ಮಂತನಾದ, ಅಮಿತ ವಿಕ್ರಮನಾದ, ಅತುಲಪರಾಕ್ರಮವನ್ನು ಪ್ರದರ್ಶಿಸುತ್ತಿದ್ದ, ಅಮೇಯಾತ್ಮ ನಾದ ಶ್ವೇತನು ಪಾಂಡವರಿಗೆ ಹಿತವನ್ನುಂಟುಮಾಡುವ ಸಲುವಾಗಿಯೂ ಮತ್ತು ನಿನ್ನ ಕಡೆಯವರಿಗೆ ಅನರ್ಥವನ್ನುಂಟುಮಾಡುವುದಕ್ಕಾಗಿಯೂ ಸರ್ಪೋಪಮವಾಗಿದ್ದ ಶಕ್ತ್ಯಾಯುಧವನ್ನು ಭೀಷ್ಮನ ಮೇಲೆ ಪ್ರಯೋಗಿಸಿ ದನು. ಮಹಾಘೋರವಾಗಿದ್ದ, ಮೃತ್ಯುದಂಡಕ್ಕೆ ಸಮಾನವಾದ ಪ್ರಭೆಯನ್ನು ಹೊಂದಿದ್ದ, ಪೊರೆಯನ್ನು ಬಿಟ್ಟ ಹಾವಿನಂತೆಯೇ ಇದ್ದ, ಶ್ವೇತನ ಕೈಯಿಂದ ಚ್ಯುತವಾದ ಶಕ್ತ್ಯಾಯುಧದ ಶಕ್ತಿಯನ್ನು ಕಂಡು ನಿನ್ನ ಪುತ್ರರ ಮಧ್ಯದಲ್ಲಿ ದೊಡ್ಡದಾದ ಹಾಹಾಕಾರವೆದ್ದಿತು. ಶ್ವೇತನು ಬಿಟ್ಟ ಶಕ್ತ್ಯಾಯುಧವು ದೊಡ್ಡ ಉಲ್ಕೆಯಂತೆಯೇ ಆಕಾಶದ ಕಡೆಯಿಂದ ಬಹುವೇಗವಾಗಿ ಬರುತ್ತಿದ್ದಿತು. ಜ್ವಾಲೆಗಳಿಂದ ಆವೃತವಾಗಿರುವುದೋ ಎಂಬಂತೆ–ಆ ಶಕ್ತ್ಯಾಯುಧವು ಅಂತರಿಕ್ಷದಲ್ಲಿ ಪ್ರಜ್ವಲಿಸುತ್ತಿದ್ದಿತು. ರಭಸವಾಗಿ ತನ್ನ ಕಡೆಗೆ ಬರುತ್ತಿದ್ದ ಶಕ್ತ್ಯಾಯುಧವನ್ನು ಕಂಡು ನಿನ್ನ ತಂದೆಯಾದ ಭೀಷ್ಮನು ಸ್ವಲ್ಪವಾದರೂ ಭ್ರಾಂತನಾಗದೇ ಹದಿನೇಳು ಬಾಣಗಳಿಂದ ಆ ಶಕ್ತ್ಯಾಯುಧವನ್ನು ಕತ್ತರಿಸಿ ಬಿಟ್ಟನು. ಉತ್ಕೃಷ್ಟವಾದ ಚಿನ್ನದಿಂದ ಅಲಂಕರಿಸಲ್ಪಟ್ಟಿದ್ದ ಶ್ವೇತನಿಂದ ಬಿಡ ಲ್ಪಟ್ಟ ಶಕ್ತ್ಯಾಯುಧವನ್ನು ಭೀಷ್ಮನು ನಿಶಿತವಾದ ಹದಿನೇಳು ಬಾಣಗಳಿಂದ ಕತ್ತರಿಸಿದುದನ್ನು ಕಂಡು ನಿನ್ನ ಕಡೆಯವರೆಲ್ಲರೂ ಸಂತೋಷಾಧಿಕ್ಯದಿಂದ 'ಭಲೆ' 'ಭಲೆ' ಎಂದು ಗಟ್ಟಿಯಾಗಿ ಕೂಗಿಕೊಂಡರು. ತಾನು ಬಿಟ್ಟ ಅಪಾರಶಕ್ತಿಯುತವಾಗಿದ್ದ ಶಕ್ತ್ಯಾಯುಧವೂ ನಿರಸ್ತವಾದುದನ್ನು ಕಂಡು ವೈರಾಟಿಯು ಕ್ರೋಧಮೂರ್ಛಿತನಾದನು. ಕಾಲವೇ ಅವನ ವಿವೇಕಶಕ್ತಿ ಯನ್ನು ಅಪಹರಿಸಿಬಿಟ್ಟಿತು. ಮುಂದಿನ ಕರ್ತವ್ಯವೇನೆಂಬುದೇ ತಿಳಿಯಲಿಲ್ಲ. ಆದರೂ ಅವನು ಸುಮ್ಮನಿರಲಿಲ್ಲ. ಕೋಪಾವಿಷ್ಟನಾಗಿದ್ದ ಶ್ವೇತನು ಗಹಗಹಿ

ಸುತ್ತಾ ಭೀಷ್ಮನನ್ನು ಸಂಹರಿಸುವುದಕ್ಕೋಸ್ಕರ ಗದೆಯನ್ನು ಎತ್ತಿಕೊಂಡನು. ಕೋಪದಿಂದ ಕೆಂಪಾದ ಕಣ್ಣುಗಳುಳ್ಳವನಾಗಿ, ದಂಡಪಾಣಿಯಾದ ಯಮ ಧರ್ಮನೋಪಾದಿಯಲ್ಲಿ ಶ್ವೇತನು ಗದಾಪಾಣಿಯಾಗಿ, ಜಲಪ್ರವಾಹವು ಪರ್ವತದ ಕಡೆಗೆ ರಭಸದಿಂದ ಹರಿದು ಬರುವಂತೆ–ಭೀಷ್ಮನೆಡೆಗೆ ರಭಸದಿಂದ ಧಾವಿಸಿದನು. ಶ್ವೇತನ ವೇಗವು ತಡೆಯಲು ಸಾಧ್ಯವಲ್ಲದುದೆಂದು ತಿಳಿದ



ಪ್ರತಾಪವಂತನಾದ ಭೀಷ್ಮನು ಗದಾಪ್ರಹಾರವನ್ನು ತಪ್ಪಿಸಿಕೊಳ್ಳುವ ಸಲುವಾಗಿ ಒಡನೆಯೇ ರಥದಿಂದಿಳಿದುಬಿಟ್ಟನು. ಕ್ರೋಧಸಮಾವಿಷ್ಟನಾಗಿದ್ದ ಶ್ವೇತನಿಗೆ 'ಭೀಷ್ಮನು ರಥದಲ್ಲಿರುವನೇ ಇಲ್ಲವೇ?' ಎಂಬ ವಿಷಯವೇ ಕ್ಷಣಕಾಲ ತಿಳಿಯಲಿಲ್ಲ. ಯಮದಂಡೋಪಮವಾಗಿದ್ದ ಆ ಗದೆಯನ್ನು ಗರಗರನೆ ತಿರುಗಿ

ಸುತ್ತಾ ಧನದನಾದ ಕುಬೇರನು ಸಮಯಗಳಲ್ಲಿ ಶತ್ರುಗಳ ಮೇಲೆ ಗದಾ ಪ್ರಹಾರಮಾಡುವಂತೆ–ಭೀಷ್ಮನ ರಥಕ್ಕೆ ಗುರಿಯಿಟ್ಟು ಪ್ರಹರಿಸಿದನು.

ಭೀಷ್ಮನನ್ನು ಸಂಹರಿಸುವ ಸಲುವಾಗಿ ಪ್ರಯೋಗಿಸಿದ ಆ ಮಹಾ ಗದೆಯು ಸೂತನಿಂದಲೂ, ಕುದುರೆಗಳಿಂದಲೂ, ಧ್ವಜದಿಂದಲೂ, ಮೂಕಿ ಯಿಂದಲೂ ಕೂಡಿದ್ದ ಭೀಷ್ಮನ ರಥವನ್ನು ಕ್ಷಣಮಾತ್ರದಲ್ಲಿ ಧ್ವಂಸಮಾಡಿ ಬಿಟ್ಟಿತು. ರಥಿಗಳಲ್ಲೇ ಶ್ರೇಷ್ಠನಾದ ಭೀಷ್ಮನು ರಥರಹಿತನಾದುದನ್ನು ಕಂಡು ಶಲ್ಯಪ್ರಭೃತಿಗಳಾದ ರಥೋತ್ತಮರು ಒಗ್ಗೂಡಿ ಭೀಷ್ಮನ ಕಡೆಗೆ ಧಾವಿಸಿದರು. ಅನಂತರ ಕುಗ್ಗಿದ ಮನಸ್ಸಿನಿಂದ ಕೂಡಿದ್ದ ಭೀಷ್ಮನು ಮತ್ತೊಂದು ರಥದಲ್ಲಿ ಕುಳಿತು ಧನುಷ್ಟಂಕಾರಮಾಡುತ್ತಾ, ನಗುತ್ತಿರುವ ಮುಖಭಾವದಿಂದಲೇ ಮೆಲ್ಲ-ಮೆಲ್ಲನೆ ಶ್ವೇತನ ಕಡೆಗೆ ಧಾವಿಸಿದನು. ಆ ಮಧ್ಯದಲ್ಲಿ ಭೀಷ್ಮನು ತನ್ನ ಹಿತಕ್ಕೆ ಸಂಬಂಧಿಸಿದ, ಆಕಾಶದ ಕಡೆಯಿಂದ ಕೇಳಿಬರುತ್ತಿದ್ದ ದಿವ್ಯವಾದ, ಗಂಭೀರವಾದ ಮಾತೊಂದನ್ನು ಕೇಳಿದನು :

ಭೀಷ್ಮ ಭೀಷ್ಮ ಮಹಾಬಾಹೋ ಶೀಘ್ರಂ ಯತ್ನಂ ಕುರುಷ್ವ ವೈ ।
ಏಷ ಹ್ಯಸ್ಯ ಜಯೇ ಕಾಲೋ ನಿರ್ದಿಷ್ಟೋ ವಿಶ್ವಯೋನಿನಾ ॥೯೭॥

“ಮಹಾಬಾಹುವೇ! ಭೀಷ್ಮ! ಶೀಘ್ರವಾಗಿ ಪ್ರಯತ್ನಿಸು. ಶ್ವೇತನನ್ನು ಜಯಿಸುವ ಕಾಲವು ಇದೀಗ ಸನ್ನಿಹಿತವಾಗಿದೆ. ವಿಶ್ವಯೋನಿಯಾದ ಪರಮೇಶ್ವರನು ಇವನನ್ನು ಜಯಿಸಲು ಇದೇ ಕಾಲವನ್ನೇ ನಿರ್ದಿಷ್ಟಮಾಡಿರು ತ್ತಾನೆ.”

ದೇವದೂತರು ಹೇಳಿದ ಆ ಮಾತನ್ನು ಕೇಳಿ ಭೀಷ್ಮನು ಪ್ರಸನ್ನಮನಸ್ಕ ನಾಗಿ ಶ್ವೇತನ ವಧೆಯನ್ನು ಮಾಡಿಯೇ ತೀರಬೇಕೆಂದು ನಿಶ್ಚಯಿಸಿದನು. ರಥಿಗಳಲ್ಲಿ ಶ್ರೇಷ್ಠನಾದ ಶ್ವೇತನು ರಥರಹಿತನಾಗಿ ಕೇವಲ ಪದಾತಿ ಯಾಗಿರುವುದನ್ನು ಕಂಡು ಅವನನ್ನು ಸಂರಕ್ಷಿಸುವ ಸಲುವಾಗಿ ಮಹಾರಥ ರೆಲ್ಲರೂ ಒಗ್ಗೂಡಿ ಶ್ವೇತನ ಬಳಿಗೆ ಧಾವಿಸಿದರು. ಸಾತ್ಯಕಿ, ಭೀಮಸೇನ, ದ್ರುಪದಪುತ್ರನಾದ ಧೃಷ್ಟದ್ಯುಮ್ನ, ಕೇಕಯರಾಜಕುಮಾರನಾದ ಧೃಷ್ಟ

ಕೇತು, ಪರಾಕ್ರಮಿಯಾದ ಅಭಿಮನ್ಯು–ಇವರೆಲ್ಲರೂ ಶ್ವೇತನ ರಕ್ಷಣೆಗಾಗಿ ಧಾವಿಸಿದರು. ಶ್ವೇತನ ಸಹಾಯಕ್ಕೆ ಬರುತ್ತಿದ್ದ ಎಲ್ಲ ಮಹಾರಥರನ್ನೂ ಅಮೇಯಾತ್ಮನಾದ ಭೀಷ್ಮನು ದ್ರೋಣ-ಶಲ್ಯ-ಕೃಪರೊಡನೆ ನೀರಿನ ವೇಗ ವನ್ನು ಪರ್ವತವು ತಡೆದುಬಿಡುವಂತೆ–ತಡೆದುಬಿಟ್ಟನು. ಮಹಾತ್ಮರಾದ ಪಾಂಡವಪ್ರಮುಖರು ತನ್ನ ಸಹಾಯಕ್ಕೆ ಬರುತ್ತಿರುವುದನ್ನೂ ಭೀಷ್ಮನು ನಿರೋಧಿಸಿದುದನ್ನೂ ಕಂಡು, ಶ್ವೇತನು ಕತ್ತಿಯನ್ನು ಒರೆಯಿಂದ ಸೆಳೆದು ಕ್ಷಣಮಾತ್ರದಲ್ಲಿ ಭೀಷ್ಮನ ಧನುಸ್ಸನ್ನು ಕತ್ತರಿಸಿಬಿಟ್ಟನು. ಪಿತಾಮಹನಾದ ಭೀಷ್ಮನು ಶ್ವೇತನು ಕತ್ತರಿಸಿದ ಧನುಸ್ಸನ್ನು ಬಿಸುಟು ದೇವದೂತನ ಮಾತನ್ನು ಸ್ಮರಿಸಿ ಶ್ವೇತನನ್ನು ಸಂಹರಿಸಲು ನಿಶ್ಚಯಿಸಿದನು. ಅನಂತರ ನಿನ್ನ ತಂದೆಯಾದ ಮಹಾರಥನಾದ ದೇವವ್ರತನು ಬೇಗನೆ ಬೇರೊಂದು ಧನುಸ್ಸನ್ನೆತ್ತಿಕೊಂಡು ಶ್ವೇತನ ಸಂಹಾರದ ವಿಷಯವನ್ನೇ ಮನಸ್ಸಿನಲ್ಲಿ ಯೋಚಿಸುತ್ತಾ ಇಂದ್ರಧನುಸ್ಸಿಗೆ ಸಮಾನವಾಗಿದ್ದ ಆ ಧನುಸ್ಸಿಗೆ ಶಿಂಜಿನಿಯನ್ನು ಬಿಗಿದು ಸಿದ್ಧಗೊಳಿಸಿದನು. ಆ ವೇಳೆಗೆ ಪಾಂಡವರ ಕಡೆಯ ಮಹಾರಥರು ಶ್ವೇತನನ್ನು ಸುತ್ತುವರಿದು ನಿಂತಿದ್ದರು. ಮಹಾರಾಜ! ಮನುಜವ್ಯಾಘ್ರರಾದ, ಭೀಮಸೇನಪ್ರಮುಖರಾದ ಮಹಾರಥರಿಂದ ಶ್ವೇತನು ಪರಿವೃತನಾಗಿರುವುದನ್ನು ತಿಳಿದು ನಿನ್ನ ತಂದೆಯು ಸೇನಾಪತಿಯಾದ ಶ್ವೇತನ ಕಡೆಗೆ ಶೀಘ್ರವಾಗಿ ಧಾವಿಸಿದನು.

ತನ್ನೆದುರಾಗಿ ಬರುತ್ತಿದ್ದ ಸೇನಾನಾಯಕನಾದ, ಮಹಾರಥನಾದ ಭೀಮಸೇನನನ್ನು ಪ್ರತಾಪವಂತನಾದ ಭೀಷ್ಮನು ಅರುವತ್ತು ಬಾಣಗಳಿಂದ ಗಾಯಗೊಳಿಸಿದನು. ಆ ಯುದ್ಧದಲ್ಲಿ ನಿನ್ನ ತಂದೆಯಾದ, ಭರತಶ್ರೇಷ್ಠನಾದ ದೇವವ್ರತನು ಅಭಿಮನ್ಯುವನ್ನೂ ಸಹ ಬಗ್ಗಿದ ಗಿಣ್ಣುಗಳನ್ನು ಹೊಂದಿದ್ದ ಮೂರು ಬಾಣಗಳಿಂದ ಪ್ರಹರಿಸಿದನು. ಭಾರತರ ಪಿತಾಮಹನಾದ ಭೀಷ್ಮನು ಸಾತ್ಯಕಿಯನ್ನು ನೂರು ಬಾಣಗಳಿಂದಲೂ, ಧೃಷ್ಟದ್ಯುಮ್ನನನ್ನು ಇಪ್ಪತ್ತು ಬಾಣಗಳಿಂದಲೂ, ಕೇಕಯರಾಜಕುಮಾರನನ್ನು ಐದುಬಾಣಗಳಿಂದಲೂ ಪ್ರಹರಿಸಿ, ಮಹಾಧನುಷ್ಮಂತರಾದ ಅವರೆಲ್ಲರನ್ನೂ ಘೋರವಾದ ಬಾಣಗಳಿಂದ ದೂರಕ್ಕೆ ಸರಿಸಿ ಶ್ವೇತನನ್ನೇ ಆಕ್ರಮಿಸಿದನು. ಶ್ವೇತನನ್ನು ಆಕ್ರಮಿಸಿ ನಿಂತ ಭೀಷ್ಮನು ಮೃತ್ಯುಸಮವಾದ, ದೊಡ್ಡ ಲಕ್ಷ್ಯವನ್ನು ಭೇದಿ

ಸಲು ಸಮರ್ಥವಾದ ಅಥವಾ ಉತ್ತಮವಾದ ಭಾರವೇ ಲಕ್ಷ್ಯಭೇದನೆಗೆ ಸಾಧನವಾಗಿ ಉಳ್ಳ (ಹೆಚ್ಚು ಭಾರವಾಗಿದ್ದ ), ಎದುರಿಸಲಸಾಧ್ಯವಾದ, ರೆಕ್ಕೆಗಳಿಂದ ಕೂಡಿದ್ದ ಬಾಣವನ್ನು ಧನುಸ್ಸಿನಲ್ಲಿ ಯೋಜಿಸಿ ಆಕರ್ಣಾಂತವಾಗಿ ಸೆಳೆದು ಅಭಿಮಂತ್ರಣದ ಮೂಲಕವಾಗಿ ಅದನ್ನು ಬ್ರಹ್ಮಾಸ್ತ್ರವನ್ನಾಗಿ ಪರಿವರ್ತಿಸಿ ಶ್ವೇತನ ಮೇಲೆ ಪ್ರಯೋಗಿಸಿದನು. ಆ ಅದ್ಭುತದೃಶ್ಯವನ್ನು ದೇವತೆಗಳೂ, ಗಂಧರ್ವರೂ, ಪಿಶಾಚರೂ, ಉರಗ-ರಾಕ್ಷಸರೂ ನೋಡಿ ದರು. ಭೀಷ್ಮನ ಧನುಸ್ಸಿನಿಂದ ಚ್ಯುತವಾದ ಆ ಬ್ರಹ್ಮಾಸ್ತ್ರವು ಅಮಿತೌಜಸ್ಕನಾದ ಶ್ವೇತನ ಕವಚವನ್ನೂ ಮತ್ತು ಹೃದಯವನ್ನೂ ಭೇದಿಸಿಕೊಂಡು ದೊಡ್ಡದಾದ ವಜ್ರಾಯುಧಕ್ಕೆ ಸಮಾನವಾಗಿ ಪ್ರಕಾಶಿಸುತ್ತಾ ಭೂಮಿಯನ್ನು ಹೊಕ್ಕಿತು.

**ಅಸ್ತಂ ಗಚ್ಛನ್ಯಥಾದಿತ್ಯಃ ಪ್ರಭಾಮಾದಾಯ ಸತ್ವರಃ ।**
**ಏವಂ ಜೀವಿತಮಾದಾಯ ಶ್ವೇತದೇಹಾಜ್ಜಗಾಮ ಹ ॥೧೧೪॥**

ಅಸ್ತಂಗತನಾಗುವ ಸೂರ್ಯನು ಯಾವ ರೀತಿಯಲ್ಲಿ ತನ್ನ ಪ್ರಭೆಯನ್ನೂ ಜೊತೆಯಲ್ಲಿಯೇ ತೆಗೆದುಕೊಂಡು ಶೀಘ್ರವಾಗಿ ಹೋಗಿಬಿಡುತ್ತಾನೆಯೋ–ಅದೇ ರೀತಿಯಲ್ಲಿ ಭೀಷ್ಮನು ಬಿಟ್ಟ ಬ್ರಹ್ಮಾಸ್ತ್ರವೂ ಶ್ವೇತನ ದೇಹದಿಂದ ಅವನ ಪ್ರಾಣವನ್ನೂ ತೆಗೆದುಕೊಂಡು ಹೊರಟುಹೋಯಿತು. ಯುದ್ಧದಲ್ಲಿ ಭೀಷ್ಮನಿಂದ ಈ ರೀತಿಯಾಗಿ ಕೊಲ್ಲಲ್ಪಟ್ಟ ನರವ್ಯಾಘ್ರನಾದ ಶ್ವೇತನನ್ನು ನಾವು ನೋಡಿದೆವು. ಪರ್ವತದ ಶಿಖರವು ಕೆಳಗೆ ಬೀಳುವಂತೆ ಶ್ವೇತನು ಆ ಸಮಯದಲ್ಲಿ ಅಸುವನ್ನು ತೊರೆದು ಕೆಳಗೆ ಬಿದ್ದನು. ಅವನು ಹತನಾದುದನ್ನು ಕಂಡು ಮಹಾರಥರಾದ ಪಾಂಡವರೂ ಮತ್ತು ಪಾಂಡವರ ಕಡೆಯ ಕ್ಷತ್ರಿಯರೂ ದುಃಖಿಸಿದರು. ಇತ್ತಕಡೆಯಲ್ಲಿ ನಿನ್ನ ಪುತ್ರರೂ ಮತ್ತು ಎಲ್ಲ ಕುರುಗಳೂ ಸಹ ಸಂತಸಗೊಂಡರು. ಅನಂತರ ನಿನ್ನ ಮಗನಾದ ದುಃಶಾಸನನು ಶ್ವೇತನು ಸಂಹೃತನಾಗಿ ಕೆಳಕ್ಕೆ ಬಿದ್ದಿರುವುದನ್ನು ನೋಡಿ ಢಕ್ಕೆ, ತಮಟೆ–ಮುಂತಾದ ವಾದ್ಯವಿಶೇಷಗಳಿಂದುಂಟಾದ ಘೋರಶಬ್ದಗಳೊಡನೆ ರಣಾಂಗಣದ ಸುತ್ತಲೂ ಕುಣಿಯುತ್ತಿದ್ದನು.

ರಣರಂಗಕ್ಕೆ ಶೋಭಾಯಮಾನನಾಗಿ ಕಾಣುತ್ತಿದ್ದ ಭೀಷ್ಮನಿಂದ ಮಹಾಧನುಷ್ಮಂತನಾದ ಶ್ವೇತನು ಕೊಲ್ಲಲ್ಪಡಲಾಗಿ, ಮಹಾಧನುಷ್ಮಂತರಾದ ಶಿಖಂಡಿಪ್ರಮುಖರಾದ ರಥಿಗಳು ಭಯದಿಂದ ನಡುಗಿಹೋದರು.

ಸೇನಾಪತಿಯಾದ ಶ್ವೇತನು ಮರಣಹೊಂದಲಾಗಿ ಕೃಷ್ಣಾರ್ಜುನರು ಮಂದ-ಮಂದವಾಗಿ ತಮ್ಮ ಸೈನ್ಯಗಳನ್ನು ಎಲ್ಲ ಕಡೆಗಳಿಂದಲೂ ಹಿಮ್ಮೆಟ್ಟಿಸಿದರು. ಅನಂತರ ನಿನ್ನ ಸೈನ್ಯವೂ ಯುದ್ಧದಿಂದ ಹಿಮ್ಮೆಟ್ಟಿತು. ಈ ರೀತಿಯಲ್ಲಿ ಎರಡು ಸೈನ್ಯಗಳೂ ಸ್ವಲ್ಪ ಹೊತ್ತಿನವರೆಗೆ ಯುದ್ಧದಿಂದ ವಿರಮಿಸಿದ್ದುವು. ನಿನ್ನ ಸೈನಿಕರೂ ಮತ್ತು ಪಾಂಡವರ ಸೈನಿಕರೂ ಬಾರಿಬಾರಿಗೂ ಗರ್ಜನೆಮಾಡುತ್ತಲೇ ಇದ್ದರು. ದ್ವೈರಥಯುದ್ಧದಲ್ಲಿ ತಮ್ಮ ಕಡೆಯ ಸೈನಿಕರ ಮತ್ತು ಸೇನಾನಾಯಕನಾದ ಶ್ವೇತನ ಘೋರವಾದ ಕೊಲೆಯನ್ನು ಚಿಂತಿಸುತ್ತಾ ವ್ಯಾಕುಲಮನಸ್ಕರಾಗಿ ಮಹಾರಥರಾದ ಪಾಂಡವರು ತಮ್ಮ ಶಿಬಿರಗಳಿಗೆ ಹಿಂದಿರುಗಿದರು."

೪೮ನೆಯ ಅಧ್ಯಾಯವು ಮುಗಿಯಿತು.

೪೯ನೆಯ ಅಧ್ಯಾಯ ಭೀಷ್ಮವಧಪರ್ವ (ಮುಂದುವರಿದಿದೆ.)

## ಶಂಖನ ಯುದ್ಧ: ಭೀಷ್ಮನ ಪ್ರಚಂಡಪರಾಕ್ರಮ : ಮೊದಲನೆಯ ದಿವಸದ ಯುದ್ಧಸಮಾಪ್ತಿ

ಧೃತರಾಷ್ಟ್ರನು ಸಂಜಯನನ್ನು ಪ್ರಶ್ನಿಸುತ್ತಾನೆ :

**ಶ್ವೇತೇ ಸೇನಾಪತೌ ತಾತ ಸಂಗ್ರಾಮೇ ನಿಹತೇ ಪರೈಃ ।**
**ಕಿಮಕುರ್ವನ್ಮಹೇಷ್ವಾಸಾಃ ಪಞ್ಚಾಲಾಃ ಪಾಣ್ಡವೈಃ ಸಹ ॥೧॥**

"ಸಂಜಯ! ಸೇನಾಪತಿಯಾದ ಶ್ವೇತನು ಯುದ್ಧದಲ್ಲಿ ಶತ್ರುಗಳಾದ ನಮ್ಮಿಂದ ಹತನಾಗಲಾಗಿ, ಮಹಾಧನುಷ್ಮಂತರಾದ ಪಾಂಚಾಲರು ಪಾಂಡವರೊಡನೆ ಕೂಡಿಕೊಂಡು ಮುಂದೇನು ಮಾಡಿದರು?

ಸೇನಾಪತಿಯಾದ ಶ್ವೇತನು ಯುದ್ಧದಲ್ಲಿ ಹತನಾದುದನ್ನೂ, ಅವನನ್ನು ರಕ್ಷಿಸಲು ಪ್ರಯತ್ನಿಸಿದ ಶತ್ರುಪಕ್ಷದವರ ಪಲಾಯನವನ್ನೂ, ಅದರಿಂದಾಗಿ ನಮಗೆ ಲಭಿಸಿದ ವಿಜಯವನ್ನೂ ಕೇಳಿ ನನ್ನ ಮನಸ್ಸು ಬಹಳ ಪ್ರಸನ್ನವಾಗಿದೆ. ಶತ್ರುಪಕ್ಷದವರಿಗೆ ಪ್ರತೀಕಾರಮಾಡಲು ಉಪಾಯವನ್ನು

ಯೋಚಿಸುವಾಗ ನಮ್ಮ ಪಕ್ಷದವರು ಅನುಸರಿಸುವ ಅನೀತಿಯನ್ನು ಸ್ಮರಿಸಿದರೂ ಸಹ ನನಗೆ ಅದರಿಂದ ನಾಚಿಕೆಯೇನೂ ಆಗುವುದಿಲ್ಲ. (ನೀತಿಯೋ-ಅನೀತಿಯೋ ವಿಜಯಗಳಿಸುವುದೇ ಮುಖ್ಯವಾದ ಗುರಿ.) ಶ್ವೇತ ನೊಡನೆ ಭೀಷ್ಮನು ಮಾಡಿದ ಯುದ್ಧವನ್ನು ಸ್ಮರಿಸಿದರೆ ನಿಶ್ಚಯವಾಗಿಯೂ ವೀರನಾದ, ವೃದ್ಧನಾದ ಕುರುಪತಿಯು ನಮ್ಮ ವಿಷಯದಲ್ಲಿ ಅನುರಕ್ತ ನಾಗಿಯೇ ಇರುವನೆಂಬುದು ಸ್ಪಷ್ಟವಾಗುತ್ತದೆ. ಧೀಮಂತನಾದ ವಿರಾಟನ ಮಗನಾದ ಶ್ವೇತನು ತನ್ನ ತಂದೆಯೊಡನೆ ವೈರವನ್ನು ಕಟ್ಟಿಕೊಂಡಿದ್ದನು. ವಿರಾಟನು ಉದ್ವೇಗಗೊಳ್ಳುವನೆಂಬ ಭಯದಿಂದ ಪಾಂಡವರನ್ನು ಆಶ್ರಯಿ ಸಿದ್ದನು. ಅನೇಕಕಾಲದವರೆಗೆ ತನ್ನ ಸೇನೆಯನ್ನೆಲ್ಲಾ ಪರಿತ್ಯಜಿಸಿ ದುರ್ಗವನ್ನೇ ಆಶ್ರಯಿಸಿಕೊಂಡು ಇದ್ದುಬಿಟ್ಟನು. ಪಾಂಡವರ ಪ್ರತಾಪದಿಂದಾಗಿ ಶ್ವೇತನು ಅದೇ ದುರ್ಗಪ್ರದೇಶದಲ್ಲಿಯೇ ಇರುತ್ತಿದ್ದು ಶತ್ರುಗಳನ್ನು ಸತತವಾಗಿ ಬಾಧೆ ಪಡಿಸುತ್ತಾ ಸದ್ವೃತ್ತಿಯನ್ನೇ ಅನುಸರಿಸುತ್ತಾ ಇದ್ದನು. ಸಂಜಯ! ಪೂರ್ವ ಕಾಲದಲ್ಲಿ ತನ್ನನ್ನು ವಿರೋಧಿಸಿದ ರಾಜರ ವಿಷಯದಲ್ಲಿಯೂ ಅವನಿಗೆ ಬಹಳ ನಿಹೀನವಾದ ಭಾವನೆಯೇ ಇದ್ದಿತು. ಅವನ ಸ್ವಭಾವವು ಹೀಗಿದ್ದರೂ ಸಹ ಅವನು ಯುಧಿಷ್ಠಿರನ ಭಕ್ತನಾದುದು ಹೇಗೆ? ಇದು ನನಗೆ ಅತ್ಯಂತ ಆಶ್ಚರ್ಯವೆನಿಸಿದೆ. ಎರಡನೆಯ ಆಶ್ಚರ್ಯವೆಂದರೆ : ಅವನು ಯುಧಿಷ್ಠಿರನ ಭಕ್ತನಾಗಿದ್ದೂ ಹೇಗೆ ಸತ್ತನು?

ನನ್ನ ಮಗ ದುರ್ಯೋಧನನು ಕ್ಷುದ್ರಸ್ವಭಾವದವನು. ಎಲ್ಲರಿಂದಲೂ ತೊರೆಯಲ್ಪಟ್ಟವನು. ನೀಚಸಮ್ಮತನು. ಪುರುಷಾಧಮನು. ಭೀಷ್ಮರಾಗಲೀ, ಆಚಾರ್ಯರಾಗಲೀ, ಕೃಪರಾಗಲೀ, ಗಾಂಧಾರಿಯೇ ಆಗಲೀ, ನಾನೇ ಆಗಲೀ– ಈ ಯುದ್ಧವನ್ನು ಇಚ್ಛಿಸಿರಲಿಲ್ಲ. ವೃಷ್ಣಿವಂಶದ ಭಗವಾನ್ ವಾಸುದೇವ ನಾಗಲೀ, ಪಾಂಡುಪುತ್ರನಾದ ಧರ್ಮರಾಜನಾಗಲೀ, ಭೀಮಸೇನನಾಗಲೀ, ಅರ್ಜುನನಾಗಲೀ, ಪುರುಷರ್ಷಭರಾದ ನಕುಲ-ಸಹದೇವರಾಗಲೀ ಯುದ್ಧ ವನ್ನು ಇಚ್ಛಿಸಿರಲಿಲ್ಲ. ನಾನು, ಗಾಂಧಾರಿ, ವಿದುರ, ಜಮದಗ್ನಿಯ ಮಗನಾದ ಪರಶುರಾಮ, ಮಹಾತ್ಮರಾದ ವ್ಯಾಸರು–ಎಲ್ಲರೂ ಯುದ್ಧವು ಬೇಡವೆಂದೇ ಹೇಳುತ್ತಿದ್ದೆವು. ಆದರೆ ಪಾಪಿಷ್ಠನಾದ ದುರ್ಯೋಧನನು ಕರ್ಣ-ದುಃಶಾಸನ-ಸೌಬಲರ ಅಭಿಮತದಂತೆ ಪಾಂಡವರೊಡನೆ ಯುದ್ಧಮಾಡ

ಬೇಕೆಂದೇ ನಿಶ್ಚಯಿಸಿದನು. ಪಾಂಡವರ ವಿಷಯವಾಗಿ ಮತ್ತು ಅವರ ಪರಾಕ್ರಮದ ವಿಷಯವಾಗಿ ಯೋಚಿಸುತ್ತಲೇ ಇರಲಿಲ್ಲ. ಶ್ವೇತನ ವಿನಾಶ ದಿಂದಲೂ ಭೀಷ್ಮನ ವಿಜಯದಿಂದಲೂ ದುರ್ಯೋಧನನಿಗೆ ಮಹತ್ತಾದ ವ್ಯಸನವೇ ಪ್ರಾಪ್ತವಾಗುವುದೆಂದು ನಾನು ತರ್ಕಿಸುತ್ತೇನೆ. ಸಂಕ್ರುದ್ಧನಾದ ಶ್ರೀಕೃಷ್ಣಸಹಿತನಾದ ಅರ್ಜುನನು ಯುದ್ಧದಲ್ಲಿ ಯಾವುದನ್ನು ತಾನೇ ಸಾಧಿಸ ಲಾರನು? ಅರ್ಜುನನಿಂದಲೇ ನನಗೆ ಹೆಚ್ಚು ಭಯ, ಸಂಜಯ! ಎಷ್ಟು ಯೋಚಿಸಿದರೂ ನನಗೆ ಆ ಭಯದ ಉಪಶಮನವಾಗುವುದೇ ಇಲ್ಲ. ಧನಂಜಯನು ಮಹಾಶೂರ. ಕಾರ್ಯಗಳನ್ನು ಬಹುಶೀಘ್ರವಾಗಿ ಮಾಡಿ ಮುಗಿಸುವ ಸಾಮರ್ಥ್ಯವಿರುವವನು. ನಿಶ್ಚಯವಾಗಿಯೂ ಅವನು ತನ್ನ ಬಾಣಗಳಿಂದ ಶತ್ರುಗಳ ಶರೀರಗಳನ್ನು ಮಥನಮಾಡಿಬಿಡುತ್ತಾನೆ. ಇಂದ್ರನ ಪುತ್ರನಾದ ಅರ್ಜುನನು ಪರಾಕ್ರಮದಲ್ಲಿ ಇಂದ್ರಾವರಜನಾದ ವಿಷ್ಣುವಿಗೆ ಸಮಾನನು. ಬಲದಲ್ಲಿ ಮಹೇಂದ್ರನಿಗೆ ಸಮನಾದವನು. ಅವನ ಕೋಪ ಮತ್ತು ಸಂಕಲ್ಪಗಳು ಯಾವ ಕಾರಣದಿಂದಲೂ ವ್ಯರ್ಥವಾಗತಕ್ಕುವುಗಳಲ್ಲ. ಇಂತಹವನನ್ನು ನೋಡಿದೊಡನೆಯೇ ನಮ್ಮ ಮನಸ್ಸಿನಲ್ಲಿ ಯಾವ ವಿಧವಾದ ಭಾವನೆಯುಂಟಾದೀತು? ಭಯವುಂಟಾಗುವುದರಲ್ಲಿ ಆಶ್ಚರ್ಯವೇನಿದೆ? ಸಂಜಯ! ಅರ್ಜುನನು ಪರಾಕ್ರಮಿಯೂ, ಬಲಿಷ್ಠನೂ ಆಗಿರುವಂತೆ ವೇದವಿದನೂ, ಶೂರನೂ ಆಗಿದ್ದಾನೆ. ಪ್ರಜ್ವಲಿಸುತ್ತಿರುವ ಸೂರ್ಯನಿಗೆ ಸಮಾನವಾದ ಕಾಂತಿಯುಳ್ಳವನಾಗಿದ್ದಾನೆ. ಐಂದ್ರಾಸ್ತ್ರವನ್ನು ತಿಳಿದಿರುವ ಮಹಾತ್ಮನವನು. ಶೀಘ್ರಾತಿಶೀಘ್ರವಾಗಿ ಶತ್ರುಗಳನ್ನು ಆಕ್ರಮಿಸುವ ಸಾಮರ್ಥ್ಯವಿರುವವನು ಮತ್ತು ಯಾವುದೇ ಯುದ್ಧದಲ್ಲಾದರೂ ವಿಜಯ ವನ್ನೇ ಸಾಧಿಸತಕ್ಕವನು. ವಜ್ರಾಯುಧದಷ್ಟು ಕಠೋರವಾದ ಸಂಸ್ಪರ್ಶದ ಅನುಭವವನ್ನು ಕೊಡತಕ್ಕ ಅನೇಕಾನೇಕ ಮಹಾಸ್ತ್ರಗಳನ್ನು ಪ್ರಯೋಗಿಸ ತಕ್ಕವನು. ಮಹಾರಥನಾದ ಅರ್ಜುನನು ಯಾವಾಗಲೂ ಒರೆಯಿಂದ ಕತ್ತಿಯನ್ನು ತೆಗೆದೇ ಇರುತ್ತಾನೆ. ಕತ್ತಿಯಿಂದ ಶತ್ರುಗಳನ್ನು ಪ್ರಹರಿಸುವಾಗ ಘೋರವಾಗಿ ಗರ್ಜನೆಮಾಡುತ್ತಾನೆ. ಮತ್ತೊಂದು ವಿಷಯವನ್ನೂ ಕೇಳಬೇಕೆಂದಿರುತ್ತೇನೆ. ಸೇನಾಪತಿಯಾದ ಶ್ವೇತನು ಮರಣಹೊಂದಿದ ನಂತರ ಮಹಾಪ್ರಾಜ್ಞನಾದ ದ್ರುಪದನ ಪುತ್ರನಾದ ಬಲಿಷ್ಠನಾದ ಧೃಷ್ಟ

ದ್ಯುಮ್ನನೇನು ಮಾಡಿದನು? ಹಿಂದೆಯೂ ಸಹ ಕೌರವರಿಂದ ಪಾಂಡವರಿಗೆ ಅನೇಕವಿಧಗಳಲ್ಲಿ ಅನ್ಯಾಯಗಳಾಗಿವೆ. ಕೌರವರು ಪಾಂಡವರಿಗೆ ಅನೇಕ ವಿಷಯಗಳಲ್ಲಿ ಅಪರಾಧವನ್ನೆಸಗಿದ್ದಾರೆ. ಅದರಿಂದಲೂ ಮತ್ತು ಈಗ ಆಗಿರುವ ತಮ್ಮ ಸೇನಾಪತಿಯ ವಧೆಯಿಂದಲೂ ಮಹಾತ್ಮರಾದ ಪಾಂಡವರ ಮನಸ್ಸು ಬೆಂಕಿಯಂತೆ ಉರಿಯುತ್ತಿರುವುದೆಂದು ನಾನು ಭಾವಿಸುತ್ತೇನೆ. ದುರ್ಯೋಧನನ ಕುತ್ಸಿತವಾದ ಕಾರ್ಯಗಳಿಂದಾಗಿ ಪಾಂಡವರಲ್ಲಿ ಉದ್ಭೂತವಾಗಿರುವ ಕ್ರೋಧವನ್ನು ಹಗಲಿನಲ್ಲಿಯೂ-ರಾತ್ರಿಯಲ್ಲಿಯೂ ಚಿಂತಿಸುತ್ತಿರುವ ನನಗೆ ಶಾಂತಿಯೆಂಬುದೇ ಇಲ್ಲವಾಗಿದೆ. ಮಹಾಯುದ್ಧವು ಮುಂದೆ ಹೇಗೆ ನಡೆಯಿತು?–ಎಂಬುದನ್ನು ಸವಿಸ್ತರವಾಗಿ ಹೇಳು, ಸಂಜಯ! ಯಾವುದೊಂದನ್ನೂ ಬಿಡದೇ ಎಲ್ಲವನ್ನೂ ಹೇಳಬೇಕು! ತಿಳಿಯಿತೇ?"

"ಮಹಾರಾಜ! ಕೇಳು. ಮನಸ್ಸನ್ನು ಗಟ್ಟಿಮಾಡಿಕೊಂಡು ಕೇಳು. ಈ ಯುದ್ಧವು ನಡೆಯಲು ಮೊದಲನೆಯ ಕಾರಣನು ನೀನು. ನಿನ್ನ ಕೆಟ್ಟ ನೀತಿಯೇ ಇದಕ್ಕೆ ಕಾರಣ. ನೀನೇ ಎಲ್ಲರಿಗಿಂತಲೂ ಹೆಚ್ಚಿನ ಅಪರಾಧವನ್ನೆಸಗಿರುವೆ. ಎಲ್ಲ ದೋಷವನ್ನೂ ದುರ್ಯೋಧನನ ಮೇಲೆ ಹೊರಿಸುವುದು ನಿನಗೆ ಯುಕ್ತವಲ್ಲ.

**ಗತೋದಕೇ ಸೇತುಬನ್ಧೋ ಯಾದೃಕ್ತಾದೃಙ್ಮತಿಸ್ತವ ।**
**ಸಂದೀಪ್ತೇ ಭವನೇ ಯದ್ವತ್ಕೂಪಸ್ಯ ಖನನಂ ತಥಾ ॥೨೩॥**

ಮಹಾರಾಜ! ನಿನ್ನದು ಎಂತಹ ಬುದ್ಧಿಯೆಂದರೆ : ನೀರೆಲ್ಲಾ ಹೊರಟುಹೋದಮೇಲೆ ಸೇತುವೆಕಟ್ಟುವ ಬುದ್ಧಿ. ಮನೆಯು ಹತ್ತಿ ಉರಿಯುತ್ತಿರುವಾಗ ಬಾವಿಯನ್ನು ತೋಡುವ ಬುದ್ಧಿ. ಕಡೆಯವರೆಗೂ ಪಾಂಡವರಿಗೆ ಮಾಡಿದ ಅನ್ಯಾಯಗಳಿಗೆಲ್ಲಾ ಪ್ರೋತ್ಸಾಹವನ್ನೇ ನೀಡುತ್ತಾ ಬಂದು ಈಗ ಎರಡು ಕಡೆಯವರೂ ಕ್ರೋಧದಿಂದ ಉರಿಯುತ್ತಿರುವಾಗ 'ಮನಸ್ಸಿಗೆ ಶಾಂತಿಯಿಲ್ಲ' ಎಂದು ಹೇಳಿಕೊಂಡರೆ ಪ್ರಯೋಜನವೇನಿದೆ? ಮುಂದಿನ ಯುದ್ಧದ ವಿವರಣೆಯನ್ನು ಹೇಳುವೆನು ಕೇಳು, ಮಹಾರಾಜ!

ಆ ಭಯಂಕರದಿವಸದ ಪೂರ್ವಭಾಗದ ಅಧಿಕಾಂಶವು ಕಳೆದುಹೋಗ

ಲಾಗಿ, ನಿನ್ನ ಕಡೆಯವರಿಗೂ ಮತ್ತು ಪಾಂಡವರಿಗೂ ಯುದ್ಧವು ಪುನಃ ಪ್ರಾರಂಭವಾಯಿತು. ವಿರಾಟನ ಸೇನಾಪತಿಯಾದ ಶ್ವೇತನು ಸತ್ತುಹೋದುದನ್ನೂ ಮತ್ತು ಉತ್ತರಕುಮಾರನನ್ನು ಸಂಹಾರಮಾಡಿದ ಶಲ್ಯನು ಕೃತವರ್ಮನೊಡನೆ ಇರುವುದನ್ನೂ ನೋಡಿ–ಹವಿಸ್ಸಿನಿಂದ ಯಜ್ಞೇಶ್ವರನು ಪ್ರಜ್ವಲಿಸುವಂತೆ–ವಿರಾಟನ ಮತ್ತೊಬ್ಬ ಮಗನಾದ ಶಂಖನು ಕೋಪದಿಂದ ಪ್ರಜ್ವಲಿಸಿದನು. ಬಲಿಷ್ಠನಾದ ಶಂಖನು ಇಂದ್ರನ ಧನುಸ್ಸಿಗೆ ಸಮಾನವಾಗಿದ್ದ ದೊಡ್ಡ ಧನುಸ್ಸನ್ನು ಕಿವಿಯವರೆಗೂ ಸೆಳೆದು ಮದ್ರಾಧಿಪನಾದ ಶಲ್ಯನನ್ನು ಸಂಹಾರಮಾಡುವ ಇಚ್ಛೆಯಿಂದ ಅವನನ್ನು ಆಕ್ರಮಿಸಿದನು. ರಥಗಳ ಸಮೂಹವೇ ಶಂಖನ ಸುತ್ತಲೂ ನಿಂತಿದ್ದು ಅವನನ್ನು ರಕ್ಷಣೆಮಾಡುತ್ತಿದ್ದಿತು. ಬಾಣಮಯವಾದ ಮಳೆಯನ್ನೇ ಸೃಷ್ಟಿಸಿರುವನೋ ಎಂಬಂತೆ ಬಾಣವೃಷ್ಟಿಯನ್ನು ಸುರಿಸುತ್ತಾ ಶಲ್ಯನ ರಥದ ಸಮೀಪಕ್ಕೆ ಶಂಖನು ಹೋದನು. ಮದಿಸಿದ ಆನೆಯ ಮಹಾಶಕ್ತಿಯನ್ನೇ ಹೊಂದಿದ್ದ ಶಂಖನು ಶಲ್ಯನನ್ನು ಆಕ್ರಮಿಸುತ್ತಿರುವುದನ್ನು ಕಂಡು, ಮೃತ್ಯುವಿನ ದವಡೆಯೊಳಗೆ ಸಿಕ್ಕಿಹಾಕಿಕೊಂಡಿದ್ದ ಶಲ್ಯನನ್ನು ರಕ್ಷಿಸುವ ಸಲುವಾಗಿ ನಿನ್ನ ಕಡೆಯ ಏಳು ಮಂದಿ ರಥಿಗಳು ಶಲ್ಯರಾಜನನ್ನು ಸುತ್ತುವರಿದು ನಿಂತರು. ಕೋಸಲದೇಶದ ಅರಸನಾದ ಬೃಹದ್ಬಲ, ಮಗಧದೇಶೀಯನಾದ ಜಯತ್ಸೇನ, ಮಹಾಮಾನಿಯಾದ ಶಲ್ಯನ ಮಗ ರುಕ್ಮರಥ, ಅವಂತೀದೇಶದ ವಿಂದಾನುವಿಂದರು, ಕಾಂಭೋಜದೇಶದ ಸುದಕ್ಷಿಣ, ಬೃಹತ್ಕ್ಷತ್ರನ ಮಗನಾದ ಸಿಂಧುದೇಶದ ರಾಜನಾದ ಜಯದ್ರಥ–ಈ ಏಳುಮಂದಿ ರಥಿಕರು ಶಲ್ಯನನ್ನು ರಕ್ಷಣೆಗಾಗಿ ಸುತ್ತುವರಿದು ನಿಂತಿದ್ದರು. ಆಕರ್ಣಾಂತವಾಗಿ ಸೆಳೆಯಲ್ಪಟ್ಟ ಆ ಮಹಾತ್ಮರ ಬಣ್ಣ-ಬಣ್ಣದ ಧನುಸ್ಸುಗಳು ಮೋಡಗಳಲ್ಲಿರುವ ಮಿಂಚುಗಳಂತೆ ಕಾಣುತ್ತಿದ್ದುವು. ಗ್ರೀಷ್ಮರ್ತುವಿನ ಕಡೆಯಲ್ಲಿ ಹುಟ್ಟಿದ ಗಾಳಿಯಿಂದ ಉದ್ಧೂತವಾದ ಮೇಘಗಳು ಪರ್ವತದ ಮೇಲೆ ಮಳೆಗರೆಯುವಂತೆ–ಶಲ್ಯನ ಅಂಗರಕ್ಷಕರು ಬಾಣಮಯವಾದ ವೃಷ್ಟಿಯನ್ನು ಶಂಖನ ತಲೆಯ ಮೇಲೆ ಸುರಿಸಿದರು. ಅದರಿಂದ ಪರಮಕ್ರುದ್ಧನಾದ ಶಂಖನು ಹರಿತವಾಗಿ ಮಾಡಲ್ಪಟ್ಟಿದ್ದ ಭಲ್ಲಗಳೆಂಬ ಏಳು ಬಾಣಗಳಿಂದ ಆ ಏಳುಮಂದಿ ರಥಿಗಳ ಧನುಸ್ಸುಗಳನ್ನೂ ಕತ್ತರಿಸಿ ಗರ್ಜನೆಮಾಡಿದನು.

ಅನಂತರ ಮಹಾಬಾಹುವಾದ ಭೀಷ್ಮನು ಮೇಘದಂತೆಯೇ ಗರ್ಜಿಸುತ್ತಾ ನಾಲ್ಕು ಮೊಳಗಳಷ್ಟು ಉದ್ದದ ಧನುಸ್ಸನ್ನು ಹಿಡಿದು ಶಂಖನ ಕಡೆಗೆ ಧಾವಿಸಿದನು. ಮಹಾಧನುಷ್ಮಂತನಾದ, ಮಹಾಬಲನಾದ ಭೀಷ್ಮನು ಶಂಖನ ಮೇಲೆ ಯುದ್ಧಮಾಡಲು ಬರುತ್ತಿರುವುದನ್ನು ಕಂಡು–ಬಿರುಗಾಳಿಯ ಹೊಡೆತದಿಂದ ನೌಕೆಯೊಂದು ಹಿಂದಕ್ಕೂ-ಮುಂದಕ್ಕೂ ಓಲಾಡುವ ರೀತಿಯಲ್ಲಿ ಅಥವಾ ನೌಕೆಯಲ್ಲಿರುವವರು ಭಯಗೊಳ್ಳುವ ರೀತಿಯಲ್ಲಿ–ಪಾಂಡವರ ಸೇನೆಯು ಭಯಗೊಂಡಿತು. ಶಂಖನನ್ನು ಭೀಷ್ಮನಿಂದ ಸಂರಕ್ಷಿಸಬೇಕೆಂದು ಅರ್ಜುನನು ನಿಶ್ಚಯಿಸಿ ಅತ್ಯವಸರದಿಂದ ಶಂಖನ ಮುಂಭಾಗದಲ್ಲಿ ಧನುಷ್ಪಾಣಿಯಾಗಿ ಬಂದುನಿಂತನು. ಅನಂತರ ಘೋರಯುದ್ಧವು ಪ್ರಾರಂಭವಾಯಿತು. ಆ ಸಮಯದಲ್ಲಿ ಅಲ್ಲಿ ಯುದ್ಧಮಾಡುತ್ತಿದ್ದ ಯೋಧರುಗಳಲ್ಲಿಯೇ ದೊಡ್ಡ ಹಾಹಾಕಾರವೆದ್ದಿತು. ಭೀಷ್ಮಾರ್ಜುನರು ಯುದ್ಧಕ್ಕೆ ಸಿದ್ಧರಾಗಿ ನಿಂತಿರುವುದನ್ನು ನೋಡಿ 'ತೇಜಸ್ಸು–ತೇಜಸ್ಸಿನೊಡನೆಯೇ ಸೇರಿದಂತಿದೆ – '**ತೇಜಸ್ತೇಜಸಿ ಸಮ್ಪೃಕ್ತಂ**'–ಎಂಬುದಾಗಿ ಹೇಳುತ್ತಾ ಅವರೆಲ್ಲರೂ ವಿಸ್ಮಯಗೊಂಡರು.

ಅನಂತರ ಶಲ್ಯನು ಗದಾಪಾಣಿಯಾಗಿ ತಾನು ಕುಳಿತಿದ್ದ ಮಹಾರಥದಿಂದಿಳಿದು ಶಂಖನ ರಥದ ಬಳಿಗೆ ಧಾವಿಸಿ, ಗದೆಯ ಪ್ರಹಾರದಿಂದ ರಥದ ನಾಲ್ಕು ಕುದುರೆಗಳನ್ನೂ ಸಂಹರಿಸಿಬಿಟ್ಟನು. ಒಡನೆಯೇ ಶಂಖನು ಖಡ್ಗಪಾಣಿಯಾಗಿ ಕುದುರೆಗಳಿಂದ ವಿಹೀನವಾಗಿದ್ದ ಆ ರಥದಿಂದಿಳಿದು ಶೀಘ್ರವಾಗಿ ಅರ್ಜುನನ ರಥದ ಬಳಿಗೆ ಹೋಗಿ ಅದರಲ್ಲಿ ಹತ್ತಿಕುಳಿತು ಮನಸ್ಸಿಗೆ ಸಮಾಧಾನಹೊಂದಿದನು. ಅನಂತರ ಭೀಷ್ಮನ ರಥದ ಕಡೆಯಿಂದ ಶೀಘ್ರಾತಿಶೀಘ್ರವಾಗಿ ಬಾಣಗಳು ಪಾಂಡವರ ಯೋಧರ ರಥಗಳ ಬಳಿಗೆ ಬಂದು ಬೀಳುತ್ತಿದ್ದುವು. ಭೀಷ್ಮನು ಬಿಡುತ್ತಿದ್ದ ಬಾಣಗಳು ಭೂಮ್ಯಂತರಿಕ್ಷಗಳನ್ನೂ ಮುಚ್ಚಿಬಿಟ್ಟಿದ್ದುವು. ಯೋಧರಲ್ಲಿ ಶ್ರೇಷ್ಠನಾದ ಭೀಷ್ಮನು ಪಾಂಚಾಲಯೋಧರನ್ನೂ, ಮತ್ಸ್ಯಯೋಧರನ್ನೂ, ಕೇಕಯಯೋಧರನ್ನೂ, ಪ್ರಭದ್ರಕಯೋಧರನ್ನೂ ತನ್ನ ಬಾಣಗಳಿಂದ ಸಂಹರಿಸಿದನು. ಅನಂತರ ಭೀಷ್ಮನು ಪಾಂಡುಪುತ್ರನಾದ ಸವ್ಯಸಾಚಿಯನ್ನು ಬಿಟ್ಟು ತನ್ನ ಸೇನೆಯೊಡನೆ ಸೆಣೆಸುತ್ತಿದ್ದ ಪಾಂಚಾಲದೇಶದ ಅರಸನಾದ ದ್ರುಪದನನ್ನು ಆಕ್ರಮಿಸಿದನು.

ತನಗೆ ಪ್ರಿಯನೂ ಸಂಬಂಧಿಯೂ ಆದ ದ್ರುಪದನ ಮೇಲೆ ಭೀಷ್ಮನು ಬಾಣಗಳ ಮಳೆಯನ್ನೇ ಸುರಿಸಿದನು. ಶಿಶಿರರ್ತುವಿನ ಅನಂತರದಲ್ಲಿ (ಬೇಸಿಗೆಯಲ್ಲಿ) ಹುಟ್ಟಿದ ಕಾಡುಗಿಚ್ಚಿನಿಂದ ಅರಣ್ಯವೆಲ್ಲವೂ ಭಸ್ಮವಾಗಿ ಹೋಗುವಂತೆ–ದ್ರುಪದನ ಸೈನ್ಯವೆಲ್ಲವೂ ಭೀಷ್ಮನ ಬಾಣಗಳಿಂದ ದಗ್ಧವಾದಂತೆಯೇ ಕಾಣುತ್ತಿದ್ದಿತು. ಆ ರಣರಂಗದಲ್ಲಿ ಭೀಷ್ಮನು ಹೊಗೆಯೇ ಇಲ್ಲದ ಯಜ್ಞೇಶ್ವರನಂತೆಯೇ ಪ್ರಜ್ವಲಿಸುತ್ತಿದ್ದನು. ಮಧ್ಯಾಹ್ನದ ಸಮಯದಲ್ಲಿ ಉಗ್ರತೇಜಸ್ಸಿನಿಂದ ಪರಿತಪಿಸುತ್ತಿರುವ ಸೂರ್ಯನನ್ನು ಕಣ್ಣುಗಳಿಂದ ನೋಡಲು ಸಾಧ್ಯವಾಗದಂತೆ–ಧೂಮರಹಿತನಾದ ಯಜ್ಞೇಶ್ವರನಂತೆಯೇ ಪ್ರಜ್ವಲಿಸುತ್ತಿದ್ದ ಭೀಷ್ಮನನ್ನು ರಣರಂಗದಲ್ಲಿ ಕಣ್ತೆರೆದು ನೋಡಲು ಪಾಂಡವರಿಗೆ ಶಕ್ಯವಾಗಲಿಲ್ಲ.

ಭಯಪೀಡಿತರಾದ ಪಾಂಡವರು ಸುತ್ತಲೂ ಕಣ್ಣುಹಾಯಿಸಿದರು. ಹಿಮದ ಶೈತ್ಯಕ್ಕೆ ಸಿಕ್ಕಿ ಬಾಧೆಪಡುವ ಹಸುವಿಗೆ ರಕ್ಷಕರಾರೂ ಸಿಕ್ಕದೇ ಇರುವಂತೆ, ನಡುಗುತ್ತಿದ್ದ ಪಾಂಡವರಿಗೆ ಆ ಸಮಯದಲ್ಲಿ ರಕ್ಷಕರಾರೂ ಕಾಣದಾದರು. ಮಹಾರಾಜ! ಸಿಂಹದಿಂದ ಪೀಡಿತವಾದ ಬಿಳಿಯ ಹಸುವಿನಂತೆ–ಗಾಂಗೇಯನ ಬಾಣಗಳಿಂದ ಪೀಡಿತವಾದ ಮಹಾತ್ಮನಾದ ಯುಧಿಷ್ಠಿರನ ಸೇನೆಯು ಬಹುವಾಗಿ ಭಯಗೊಂಡಿತು. ಪಾಂಡವರ ಸೈನ್ಯಸಮೂಹದಲ್ಲಿ ಹಲವಾರು ಸೈನ್ಯಗಳು ಭೀಷ್ಮನ ಬಾಣಗಳಿಂದ ಪ್ರಾಣತೊರೆದುವು ; ಮತ್ತೆ ಕೆಲವು ಸೈನ್ಯಗಳು ಓಡಿಹೋದುವು ; ಮತ್ತೆ ಕೆಲವು ಬಲವಾಗಿ ಪೆಟ್ಟುತಿಂದು ಆರ್ತರೋದನಮಾಡುತ್ತಾ ರಣರಂಗದಲ್ಲಿಯೇ ಬಿದ್ದಿದ್ದುವು. ಅಳಿದುಳಿದಿದ್ದ ಕೆಲವರಿಗಂತೂ ಯುದ್ಧಮಾಡುವ ಉತ್ಸಾಹವೇ ಇರಲಿಲ್ಲ. ಹೀಗಾಗಿ ಪಾಂಡವರ ಸೈನ್ಯದಲ್ಲಿ ದೊಡ್ಡ ಹಾಹಾಕಾರವೇ ಹುಟ್ಟಿಕೊಂಡಿತು. ಆಗಲೂ ಭೀಷ್ಮನು ಬಾಣಗಳ ಪ್ರಯೋಗವನ್ನು ನಿಲ್ಲಿಸಲೇ ಇಲ್ಲ. ಅವನ ಧನುಸ್ಸು ಯಾವಾಗಲೂ (ಸದಾ ಆಕರ್ಣಾಂತವಾಗಿ ಸೆಳೆಯುತ್ತಲೇ ಇದ್ದುದರಿಂದ) ಮಂಡಲಾಕಾರವಾಗಿಯೇ ಇದ್ದುಬಿಟ್ಟಿತು. ಪ್ರದೀಪ್ತವಾದ ಅಗ್ರಭಾಗಗಳಿಂದ ಕೂಡಿದ್ದ, ವಿಷದಿಂದ ಕೂಡಿದ್ದ, ಸರ್ಪಗಳಂತೆಯೇ ಭಯಂಕರಗಳಾಗಿದ್ದ ಬಾಣಗಳನ್ನು ಪಾಂಡವರ ಸೈನ್ಯದ ಮೇಲೆ ಸತತವಾಗಿ ಪ್ರಯೋಗಿಸುತ್ತಲೇ ಇದ್ದನು. ನಿಯಮಪೂರ್ವಕವಾಗಿ ವ್ರತಗಳನ್ನು ಆಚರಿಸುತ್ತಿದ್ದ ಭೀಷ್ಮನು ತಾನು ಬಿಡು

ತ್ತಿದ್ದ ಬಾಣಗಳಿಂದ ಎಲ್ಲ ದಿಕ್ಕುಗಳನ್ನೂ ಒಂದೇ ಮಾರ್ಗವಾಗಿ ಮಾಡುತ್ತಾ (ಬಾಣಗಳಿಂದಲೇ ನಾಲ್ಕು ದಿಕ್ಕುಗಳನ್ನೂ ತುಂಬುತ್ತಾ) ಪಾಂಡವರಥಿಕರನ್ನು ಅವರವರ ಹೆಸರುಗಳಿಂದಲೇ ಕರೆಯುತ್ತಾ ಪ್ರಹರಿಸುತ್ತಿದ್ದನು. ಅನಂತರ ಭೀಷ್ಮನಿಂದ ಮಥಿಸಲ್ಪಟ್ಟ ಪಾಂಡವರ ಸೈನ್ಯಗಳು ಎಲ್ಲ ರಂಗಗಳಲ್ಲಿಯೂ ಭಗ್ನವಾಗಿ ಹೋಗಲಾಗಿ, ಆ ಸಮಯಕ್ಕೆ ಸೂರ್ಯನೂ ಸಹ ಅಸ್ತಂಗತನಾಗ ಲಾಗಿ–ಅಲ್ಲಿ ಏನೊಂದೂ ಕಾಣುತ್ತಲೇ ಇರಲಿಲ್ಲ. ಆದರೂ ಸಹ ಭೀಷ್ಮನು ತನ್ನ ಪ್ರಹಾರವೇಗವನ್ನು ಕಡಿಮೆ ಮಾಡಲೇ ಇಲ್ಲ. ಅವನ ವೇಗವು ಅಧಿಕ ಗೊಳ್ಳುತ್ತಲೇ ಇದ್ದಿತು. ಅದನ್ನು ಕಂಡು ಪಾಂಡವರು ತಮ್ಮ ಸೈನ್ಯಗಳನ್ನು ಯುದ್ಧಭೂಮಿಯಿಂದ ಹಿಂತೆಗೆದುಕೊಂಡರು."

೪೯ನೆಯ ಅಧ್ಯಾಯವು ಮುಗಿಯಿತು.

*   *   *

## ಮೊದಲನೆಯ ದಿವಸದ ಯುದ್ಧದ ಒಂದು ಸಮೀಕ್ಷೆ

ಭೀಷ್ಮಪರ್ವದ ೪೪ನೆಯ ಅಧ್ಯಾಯದಿಂದ ಮೊದಲನೆಯ ದಿವಸದ ಯುದ್ಧದ ವಿವರಣೆಯು ಪ್ರಾರಂಭವಾಗುತ್ತದೆ. ಯದ್ಯಪಿ ಧೃಷ್ಟದ್ಯುಮ್ನನು ಪಾಂಡವರ ಪಕ್ಷದ ದಂಡನಾಯಕನಾಗಿದ್ದರೂ 'ಪಾಂಡವರ ಸೈನ್ಯವು ಭೀಮ ಪುರಸ್ಸರವಾಗಿತ್ತು' ಎಂಬ ಉಲ್ಲೇಖವೇ ಹೆಚ್ಚು. **ತಥೈವ ಪಾಣ್ಡವಾಃ ಸರ್ವೇ ಭೀಮಸೇನಪುರೋಗಮಾಃ** ೪೪-೩. ದುರ್ಯೋಧನನು ಭೀಷ್ಮನಿಗೆ ಸೇನೆಯನ್ನು ಪರಿಚಯಮಾಡಿಕೊಡುವಾಗಲೂ ಪಾಂಡವರ ಸೇನೆಯನ್ನು **ಬಲಂ ಭೀಮಾಭಿರಕ್ಷಿತಮ್** ಭೀಷ್ಮ-೨೫-೧೦ ಎಂದೇ ಹೇಳುತ್ತಾನೆ.

೪೫ನೆಯ ಅಧ್ಯಾಯದಲ್ಲಿ ದ್ವಂದ್ವಯುದ್ಧದ ವರ್ಣನೆಯಿದೆ.

ಭೀಷ್ಮನು–ಅರ್ಜುನನನ್ನೂ, ಸಾತ್ಯಕಿಯು–ಕೃತವರ್ಮನನ್ನೂ, ಅಭಿಮನ್ಯುವು–ಬೃಹದ್ಬಲನನ್ನೂ, ಭೀಮಸೇನನು–ದುರ್ಯೋಧನನನ್ನೂ, ದುಃಶಾಸನನು–ನಕುಲನನ್ನೂ, ದುರ್ಮುಖನು–ಸಹದೇವನನ್ನೂ, ಯುಧಿಷ್ಠಿರನು–ಶಲ್ಯನನ್ನೂ, ಧೃಷ್ಟದ್ಯುಮ್ನನು–ದ್ರೋಣರನ್ನೂ, ವಿರಾಟನ ಮಗನಾದ ಶಂಖನು–ಭೂರಿಶ್ರವಸನನ್ನೂ, ಧೃಷ್ಟಕೇತುವು–ಬಾಹ್ಲೀಕನನ್ನೂ, ಅಲಂಬು

ಷನು–ಘಟೋತ್ಕಚನನ್ನೂ, ಶಿಖಂಡಿಯು–ಅಶ್ವತ್ಥಾಮನನ್ನೂ, ವಿರಾಟನು–ಭಗದತ್ತನನ್ನೂ, ಬೃಹತ್ಕ್ಷತ್ರನು–ಶಾರದ್ವತನನ್ನೂ, ದ್ರುಪದನು–ಜಯದ್ರಥನನ್ನೂ, ಸುತಸೋಮನು–ವಿಕರ್ಣನನ್ನೂ, ಚೇಕಿತಾನನು–ಸುಶರ್ಮನನ್ನೂ, ಪ್ರತಿವಿಂಧ್ಯನು–ಶಕುನಿಯನ್ನೂ, ಶ್ರುತಕರ್ಮನು–ಸುದಕ್ಷಿಣನನ್ನೂ, ಕುಂತೀಭೋಜನು–ವಿಂದಾನುವಿಂದರನ್ನೂ, ಐವರು ಕೇಕಯಸಹೋದರರು–ಐವರು ಗಾಂಧಾರಸಹೋದರರನ್ನೂ, ಉತ್ತರನು–ವೀರಬಾಹುವನ್ನೂ, ಉಲೂಕನು–ಚೇದಿರಾಜನನ್ನೂ ಎದುರಿಸಿ ಯುದ್ಧಮಾಡಿದರು. ಇದು ೪೫ನೆಯ ಅಧ್ಯಾಯದ ವಿಷಯ. ಒಬ್ಬೊಬ್ಬ ಯೋಧರೂ ಸಹ ತಮಗೆ ಅನುರೂಪರಾದವರನ್ನೇ ಆರಿಸಿಕೊಂಡು ಯುದ್ಧಮಾಡುವುದನ್ನು ನಾವು ಇಲ್ಲಿ ಕಾಣಬಹುದು. ೪೬ನೆಯ ಅಧ್ಯಾಯದಲ್ಲಿ ಚತುರಂಗಬಲವೂ ಹೇಗೆ ಯುದ್ಧಮಾಡುತ್ತಿತ್ತೆಂಬ ವರ್ಣನೆಯಿದೆ. ಯುದ್ಧವು ದ್ವಂದ್ವಯುದ್ಧಮರ್ಯಾದೆಯನ್ನು ಮೀರಿ ನಡೆಯಿತೆಂಬ ಸೂಚನೆಯು ಈ ಅಧ್ಯಾಯದಲ್ಲಿದೆ. **ವರ್ತಮಾನೇ ತಥಾ ತಸ್ಮಿನ್ನಿರ್ಮರ್ಯಾದೇ ಭಯಾನಕೇ ೪೬-೪೯.** ೪೭ನೆಯ ಅಧ್ಯಾಯದಲ್ಲಿಯೂ ದ್ವಂದ್ವಯುದ್ಧವು ನಡೆಯುತ್ತದೆ. ಆದರೆ ಸಮ-ಅಸಮರ ವಿವೇಚನೆಯಿಲ್ಲದ ದ್ವಂದ್ವಯುದ್ಧವು ನಡೆಯುತ್ತದೆ. ಅಭಿಮನ್ಯುವು ಭೀಷ್ಮನನ್ನು ಎದುರಿಸಿ ಯುದ್ಧಮಾಡುತ್ತಾನೆ. ಅಭಿಮನ್ಯುವು ಭೀಷ್ಮನೊಡನೆ ಮಾತ್ರವಲ್ಲ ; ಕೃತವರ್ಮ, ಶಲ್ಯ, ದುರ್ಮುಖ, ಕೃಪ–ಇವರೊಡನೆಯೂ ಏಕಕಾಲದಲ್ಲಿ ಯುದ್ಧಮಾಡುತ್ತಾನೆ. ಭೀಷ್ಮನದು ಸ್ವಲ್ಪ ಮೇಲುಗೈ ಆಗಲಾಗಿ ಅಭಿಮನ್ಯುವಿನ ಸಹಾಯಕ್ಕೆ ಪುತ್ರಸಹಿತನಾದ ವಿರಾಟ, (ಇಲ್ಲಿ ವಿರಾಟಪುತ್ರ ಎಂದರೆ ಉತ್ತರ ಎಂದೇ ಇಟ್ಟುಕೊಳ್ಳಬೇಕು.) ಧೃಷ್ಟದ್ಯುಮ್ನ, ಭೀಮ, ಕೇಕಯರು ಮತ್ತು ಸಾತ್ಯಕಿ–ಇವರು ಬರುತ್ತಾರೆ. ಆ ಸಮಯದಲ್ಲಿ ಭೀಷ್ಮನ ಕಡೆಯಲ್ಲಿ ದುರ್ಮುಖ, ಕೃತವರ್ಮ, ಕೃಪ, ಶಲ್ಯ, ವಿವಿಂಶತಿ–ಇವರುಗಳೂ ಅಭಿಮನ್ಯುವಿನ ಕಡೆಯಲ್ಲಿ ಭೀಮಸೇನ, ವಿರಾಟ, ಉತ್ತರ, ಧೃಷ್ಟದ್ಯುಮ್ನ, ಕೇಕಯರು ಮತ್ತು ಸಾತ್ಯಕಿ ಇವರುಗಳೂ ಇದ್ದು ಯುದ್ಧಮಾಡುತ್ತಿರುತ್ತಾರೆ. ಆ ವೇಳೆಗೆ ಸರಿಯಾಗಿ ಉತ್ತರನು ಆನೆಯ ಮೇಲೆ ಕುಳಿತು ಶಲ್ಯನ ಮೇಲೆ ಯುದ್ಧಕ್ಕೆ ಹೋಗುತ್ತಾನೆ. ಶಲ್ಯನು ಮೊದಲು ಉತ್ತರನನ್ನೂ ಅನಂತರ ಆನೆಯನ್ನೂ ಸಂಹರಿಸುತ್ತಾನೆ. ಭಾರತಮಹಾಯುದ್ಧದಲ್ಲಿ ಹೆಸರಾಂತ ವೀರ

ರಲ್ಲಿ ಮೊಟ್ಟಮೊದಲನೆಯದಾಗಿ ಪ್ರಾಣಾರ್ಪಣೆಮಾಡಿದ ಕೀರ್ತಿ ಉತ್ತರ ಕುಮಾರನಿಗೇ ಸಲ್ಲುತ್ತದೆ.

ಉತ್ತರನ ವಧೆಯಾದನಂತರ ಉತ್ತರನ ಅಣ್ಣನು ಶಲ್ಯನ ಮೇಲೆ ಯುದ್ಧಕ್ಕೆ ಹೋಗುತ್ತಾನೆಂಬ ವಾಕ್ಯವಿದೆ. **ಉತ್ತರಂ ವೈ ಹತಂ ದೃಷ್ಟ್ವಾ ವೈರಾಟಿರ್ಭ್ರಾತರಂ ತದಾ**-೪೩. ಇಲ್ಲಿ ವೈರಾಟಿ ಎಂದರೆ ಯಾರು ಎಂಬ ಪ್ರಶ್ನೆ? ನೀಲಕಂಠೀಯವ್ಯಾಖ್ಯಾನದಲ್ಲಿ 'ಶಂಖ' ಎಂದೇ ಅರ್ಥಮಾಡಿರು ತ್ತಾರೆ. ೪೫ನೇ ಅಧ್ಯಾಯದ ದ್ವಂದ್ವಯುದ್ಧಪ್ರಕರಣದಲ್ಲಿಯೂ ಸಹ ಶಂಖನ ಉಲ್ಲೇಖವಿದೆ. ಆದರೆ ಅಲ್ಲಿಂದ ಮುಂದೆ ೪೮ನೆಯ ಅಧ್ಯಾಯ ಪೂರ್ತಿ ಯಾಗಿ ೪೯ನೆಯ ಅಧ್ಯಾಯದ ೨೫ನೆಯ ಶ್ಲೋಕದವರೆಗೆ 'ಶ್ವೇತ' ಎಂಬು ವನ ಉಲ್ಲೇಖವಿದೆ. ಶ್ವೇತನನ್ನೇ ಸೇನಾಪತಿಯೆಂದೂ ಕರೆಯಲಾಗಿದೆ. ಆದರೆ ಈ ಹಿಂದೆ ಅತಿರಥ-ಮಹಾರಥರಲ್ಲಿ ಇವನ ಉಲ್ಲೇಖವಿಲ್ಲ. ಶ್ವೇತನೆಂಬು ವನು ಪಾಂಡವರ ಕಡೆಗೆ ಯುದ್ಧಕ್ಕೆ ಬಂದನೆಂಬ ಉಲ್ಲೇಖವೂ ಇಲ್ಲ. ಆದರೆ ಹಿಂದಿನ ಆದಿಪರ್ವ-೧-೨೩೩ **ವಿಜಯೋ ವೀತಿಹೋತ್ರೋಽಙ್ಗೋ ಭವಃ ಶ್ವೇತೋ ಬೃಹದ್ಗುರುಃ ।** ಸಭಾಪರ್ವ-೧೪ (ದಾಕ್ಷಿಣಾತ್ಯಪಾಠಃ) **ಏಕಲವ್ಯಂ ದೃಢಶ್ವೇತಂ ಶೈಬ್ಯಂ ಶಕುನಿಮೇವ ಚ ।** ಎಂಬ ಕಡೆಗಳಲ್ಲಿ ಶ್ವೇತನ ಹೆಸರಿದ್ದರೂ—ಇದು ವಿರಾಟನ ಮಗನ ಹೆಸರಲ್ಲ. ಸಭಾಪರ್ವ- ೪೪-೨೦ **ಶ್ವೇತಮಥೋತ್ತರಮ್ । ಶಙ್ಖಂ ಚ ಸುಮಹಾಭಾಗಂ** ಎಂಬ ಕಡೆಯಲ್ಲಿ ಉತ್ತರ-ಶಂಖರೊಡನೆ ಶ್ವೇತನನ್ನು ಹೇಳಿರುವುದರಿಂದ ಸಂಬಂಧವಿರುವಂತೆ ಕಾಣುತ್ತದೆ. ಆದರೆ ಇಲ್ಲಿಯೂ ಶ್ವೇತನು ವಿರಾಟನ ಮಗನೆಂಬುದು ಸ್ಪಷ್ಟವಾಗಿಲ್ಲ. ವಿರಾಟಪರ್ವದಲ್ಲಿ ೧೬ನೆಯ ಅಧ್ಯಾಯದಲ್ಲಿ ೫೧ನೆಯ ಶ್ಲೋಕಾನಂತರ ಬರುವ ದಾಕ್ಷಿಣಾತ್ಯಪಾಠದ ಶ್ಲೋಕದಲ್ಲಿ ಶ್ವೇತನಾರೆಂಬುದರ ಉಲ್ಲೇಖವಿದೆ. (ದಾಕ್ಷಿಣಾತ್ಯಪಾಠವು ಸರ್ವಸಮ್ಮತವಾಗಿಲ್ಲದೇ ಇರುವುದರಿಂದ ನಾವೂ ಸಹ ಅನುವಾದಕ್ಕೆ ಅದನ್ನು ತೆಗೆದುಕೊಂಡಿರುವು ದಿಲ್ಲ.) '**ಸುರಥಾಯಾಂ ಮೃತಾಯಾಂ ತು ಕೌಸಲ್ಯಾಂ ಶ್ವೇತಮಾತರಿ** ಶ್ವೇತನ ತಾಯಿಯಾದ ಸುರಥೆಯು ಸತ್ತುಹೋದನಂತರ ಸುದೇಷ್ಣೆ ಯೊಡನೆ ವಿರಾಟನ ವಿವಾಹವಾಯಿತು.' ಹಿಂದಿನ ಪರ್ವಗಳಲ್ಲಿ ಶ್ವೇತನ ವಿಷಯವಾಗಿ ನಮಗೆ ಇಷ್ಟುಮಾತ್ರವೇ ಸಿಕ್ಕುತ್ತದೆ. ೪೮ನೆಯ ಅಧ್ಯಾಯದಲ್ಲಿ

ವರ್ಣಿಸಿರುವಂತೆ ಶ್ವೇತನು ಭೀಷ್ಮನನ್ನೂ ನಡುಗಿಸುವಂತಹ ಮಹಾ ಪರಾಕ್ರಮಿಯೇ ಆಗಿದ್ದರೆ ಅವನ ಉಲ್ಲೇಖವು ಅತಿರಥ-ಮಹಾರಥರ ಪಟ್ಟಿಯಲ್ಲಾದರೂ ಇರಬೇಕಾಗಿತ್ತೆನ್ನಿಸುತ್ತದೆ. ದೇವಪುರುಷನ ಆದೇಶದಂತೆ ಭೀಷ್ಮನು ತನ್ನ ಸತ್ತ್ವವನ್ನೆಲ್ಲಾ ಕೇಂದ್ರೀಕರಿಸಿ ಶ್ವೇತನನ್ನು ಸಂಹರಿಸಬೇಕಾಯಿತು. ಶ್ವೇತನು ಭೀಷ್ಮನ ಧನುಸ್ಸು ಮತ್ತು ಧ್ವಜಗಳನ್ನು ಲೆಕ್ಕವಿಲ್ಲದಷ್ಟು ಬಾರಿ ಕತ್ತರಿಸಿದನೆಂದೂ ಇಲ್ಲಿ ವರ್ಣಿಸಲಾಗಿದೆ. ೪೯ನೆಯ ಅಧ್ಯಾಯದಲ್ಲಿ ಧೃತರಾಷ್ಟ್ರನ ಬಾಯಿಂದ ಶ್ವೇತನ ವಿಷಯವನ್ನೂ ಹೇಳಿಸಿದ್ದಾರೆ. ತಂದೆಯ ಮೇಲೆಯೇ ದ್ವೇಷಮಾಡಿಕೊಂಡು ಹೋಗಿಬಿಟ್ಟಿದ್ದನೆಂದೂ, ಅನಂತರ ಯುಧಿಷ್ಠಿರನಿಗೆ ಭಕ್ತನಾಗಿ ಬಂದನೆಂದೂ ಧೃತರಾಷ್ಟ್ರನು ಹೇಳುತ್ತಾನೆ. ವಿರಾಟನ ಹಿರಿಯ ಹೆಂಡತಿಯ ಮಗನಾಗಿದ್ದುದೇ ಈ ದ್ವೇಷಕ್ಕೆ ಕಾರಣವಿರಬಹುದೆಂದು ಊಹಿಸಬಹುದು. ಆದರೆ ಈ ಕಥೆಯು ಮೇಲೆ ಹೇಳಿದ ಪ್ರಕರಣಗಳಲ್ಲಿ ಇರುವುದೇ ಹೊರತು ಪುರಾಣಾಂತರಗಳಲ್ಲಿ ಎಲ್ಲೂ ಕಂಡುಬರುವುದಿಲ್ಲ. ತಂದೆ-ಮಕ್ಕಳಿಗೆ ದ್ವೇಷವಿತ್ತೆಂಬುದು ಧೃತರಾಷ್ಟ್ರನ ಮಾತಿನಿಂದ ತಿಳಿದುಬರುವುದೇ ಹೊರತು ಮತ್ತೆಲ್ಲಿಯೂ ಇದರ ಉಲ್ಲೇಖವಿಲ್ಲ.

'ಶ್ವೇತನು ವಿರಾಟನ ಸೇನಾನಾಯಕ' '**ವಿರಾಟಸ್ಯ ಚಮೂಪತಿಮ್**'–೪೯-೨೫ ಎಂದೂ ಉಲ್ಲೇಖವಿರುವುದರಿಂದ ತಂದೆ-ಮಕ್ಕಳಿಗೆ ದ್ವೇಷವಿತ್ತೆಂಬ ಸಂಗತಿಯೂ ಅಷ್ಟಾಗಿ ಹೊಂದಿಕೊಳ್ಳುವುದಿಲ್ಲ.

ಈ ಪ್ರಕರಣದಲ್ಲಿ ಮತ್ತೊಂದು ಸಂಗತಿಯನ್ನೂ ನಾವು ಗಮನಿಸಬಹುದಾಗಿದೆ. ೪೭ನೆಯ ಅಧ್ಯಾಯದಲ್ಲಿ ಭೀಷ್ಮನಿಗೂ–ಅಭಿಮನ್ಯುವಿಗೂ ಯುದ್ಧವಾಗುವ ಮೊದಲು ಆಗಿನ ವೇಳೆಯನ್ನು **ಗತ ಪೂರ್ವಾಹ್ಣಭೂಯಿಷ್ಠೇ**–ಪೂರ್ವಾಹ್ಣದ ಹೆಚ್ಚುಭಾಗವು ಕಳೆದುಹೋಗಿರಲಾಗಿ ೪೭-೧ ಎಂದು ಸಂಜಯನು ಹೇಳುತ್ತಾನೆ. ಅದಾದನಂತರ ಶ್ವೇತನೊಡನೆ ಮಹಾಯುದ್ಧವಾಗಿ ೪೮-೧೨೧ನೇ ಶ್ಲೋಕದಲ್ಲಿ ಹೇಳಿರುವಂತೆ ಪಾಂಡವರು ತಮ್ಮ-ತಮ್ಮ ಶಿಬಿರಗಳಿಗೆ ಹಿಂದಿರುಗಿದನಂತರ ಪುನಃ ಯುದ್ಧವು ಪ್ರಾರಂಭವಾದ ಕಾಲವನ್ನು ಸಂಜಯನು ಹೇಳುತ್ತಾ ೪೯-೨೪ರಲ್ಲಿ ಗತ ಪೂರ್ವಾಹ್ಣಭೂಯಿಷ್ಠೇ

ಎಂದೇ ಹೇಳುತ್ತಾನೆ. ಈ ಮಧ್ಯದಲ್ಲಿ ಶ್ವೇತನೊಡನೆ ಯುದ್ಧವು ನಡೆದುದು ಯಾವಾಗ?

ಕಡೆಯದಾಗಿ ೪೭-೪೩ರಲ್ಲಿ **ಉತ್ತರಂ ತು ಹತಂ ದೃಷ್ಟ್ವಾ ವೈರಾಟಿರ್ಭ್ರಾತರಂ ತದಾ । ಕೃತವರ್ಮಣಾ ಚ ಸಹಿತಂ ದೃಷ್ಟ್ವಾ ಶಲ್ಯಮವಸ್ಥಿತಂ ॥ ಶ್ವೇತಃ ಕ್ರೋಧಾತ್ಪ್ರಜಜ್ವಾಲ ।** ಶ್ವೇತನು ತನ್ನ ತಮ್ಮನಾದ ಉತ್ತರನು ಸತ್ತುದನ್ನು ಕಂಡು ಅವನ ಹಂತಕನಾದ ಶಲ್ಯನೂ ಸಹ ಕೃತವರ್ಮನೊಡನೆ ಇರುವುದನ್ನು ಕಂಡು ಕೋಪದಿಂದ ಪ್ರಜ್ವಲಿಸಿದನು ಎಂದು ವಿವರಣೆ ಇದೆ.

ಭೀಷ್ಮನಿಂದ ಶ್ವೇತನ ಸಂಹಾರವಾದ ಮೇಲೆ ೪೮-೨೫ರಲ್ಲಿ **ಶ್ವೇತಂ ತು ನಿಹತಂ ದೃಷ್ಟ್ವಾ ವಿರಾಟಸ್ಯ ಚಮೂಪತಿಮ್ । ಕೃತವರ್ಮಣಾ ಚ ಸಹಿತಂ ದೃಷ್ಟ್ವಾ ಶಲ್ಯಮವಸ್ಥಿತಮ್ ॥ ಶಙ್ಖಃ ಕ್ರೋಧಾತ್ಪ್ರಜಜ್ವಾಲ ।** ವಿರಾಟನ ಸೇನಾನಾಯಕನಾದ ಶ್ವೇತನು ಭೀಷ್ಮನಿಂದ ಸಂಹೃತನಾದುದನ್ನು ಕಂಡು ಕೃತವರ್ಮನೊಡನೆ ಉತ್ತರನ ಹಂತಕನಾದ (ಇದನ್ನು ಅನುವಾದದಲ್ಲಿ ನಾವು ಸೇರಿಸಿದ್ದೇವೆ.) ಶಲ್ಯನೂ ಇರುವುದನ್ನು ಕಂಡು ಶಂಖನು ಕ್ರೋಧದಿಂದ ಪ್ರಜ್ವಲಿಸಿದನು.

ಶ್ವೇತನನ್ನು ಸಂಹರಿಸಿದವನು ಭೀಷ್ಮ. ಶಂಖನಿಗೆ ನಿಜವಾಗಿ ಭೀಷ್ಮನ ಮೇಲೆ ಕೋಪವಿರಬೇಕಾಗಿತ್ತು. ಆದರೆ ಅವನು ಪುನಃ ಶಲ್ಯನ ಮೇಲೆ ಏಕೆ ಕೋಪಗೊಂಡನೆಂಬುದನ್ನು ಊಹಿಸಲು ಸಾಧ್ಯವಾಗುವುದಿಲ್ಲ. ಮೇಲಾಗಿ ಇಷ್ಟು ಪ್ರಕರಣವು ಮುಗಿದ ನಂತರವೂ ಶಲ್ಯ-ಕೃತವರ್ಮರು ಒಂದು ಕಡೆಯಲ್ಲಿಯೇ ನಿಂತಿದ್ದರೆಂಬುದೂ, ಅವರನ್ನು ಶಂಖನು ನೋಡಿ ಕೋಪಗೊಂಡುದೂ ಅವಾಸ್ತವಿಕವಾಗಿ ಕಾಣುತ್ತದೆ. ಆದುದರಿಂದ ೪೭ನೆಯ ಅಧ್ಯಾಯದ ೪೩ನೆಯ ಶ್ಲೋಕದಿಂದ ಮುಂದಕ್ಕೆ ೪೮ನೇ ಅಧ್ಯಾಯದಲ್ಲಿ ೨೫ನೆಯ ಶ್ಲೋಕದವರೆಗಿನ ಕಥಾಭಾಗವನ್ನು ಬಿಟ್ಟು ಓದಿದರೆ ಕಥೆಯಲ್ಲಿ ಯಾವ ವಿಧವಾದ ಅಸಂಗತವೂ ಕಾಣುವುದಿಲ್ಲ. ಪಾಂಡವ-ಕೌರವರು ಎರಡು ಬಾರಿ ಶಿಬಿರಕ್ಕೆ ಹೋಗದೆ, ದಿನವು ಮುಗಿದ ನಂತರ ಒಂದೇ ಬಾರಿ ಶಿಬಿರಕ್ಕೆ ಹಿಂದಿರುಗಿದಂತಾಗಿ ಕಥೆಯು ಸುಸಂಗತವಾಗುತ್ತದೆ.

ಈ ಪ್ರಕರಣವು ಇಷ್ಟು ಅಸಂಗತವಾಗಿದ್ದರೂ ನಾವೂ ಏಕೆ ಇದನ್ನು ಅನುವಾದಿಸಿದ್ದೇವೆಂದರೆ : ಈ ಪ್ರಕರಣವನ್ನು ಪ್ರಕ್ಷಿಪ್ತವೆಂದು ಎಲ್ಲರೂ ಊಹಿಸಿದ್ದಾರೆಯೇ ಹೊರತು ಯಾರೂ ಬಿಟ್ಟಿರುವುದಿಲ್ಲ. ಕುಂಭಕೋಣದ ಶ್ರೀಕೃಷ್ಣಾಚಾರ್ಯರ ಪ್ರತಿಯಲ್ಲಿಯೂ, ಗೋರಖಪುರದ ಗೀತಾಪ್ರೆಸ್ಸಿನವರ ಪ್ರತಿಯಲ್ಲಿಯೂ, ಮುಂಬೈ ಮತ್ತು ಕಲ್ಕತ್ತಾಗಳ ಪ್ರತಿಗಳಲ್ಲಿಯೂ ಈ ಪ್ರಕರಣವು ಯಥಾವತ್ತಾಗಿರುತ್ತದೆ. ಭಂಡಾರ್‌ಕರ್ ರಿಸರ್ಚ್ ಇನ್‌ಸ್ಟಿಟ್ಯೂಟಿನವರ ಮಹಾಭಾರತದಲ್ಲಿ ಈ ಪ್ರಕರಣವಿಲ್ಲ. —ಸಂ.

* * *

೫೦ನೆಯ ಅಧ್ಯಾಯ ಭೀಷ್ಮವಧಪರ್ವ (ಮುಂದುವರಿದಿದೆ.)

## ಯುಧಿಷ್ಠಿರನ ಚಿಂತೆ : ಶ್ರೀಕೃಷ್ಣನಿಂದ ಆಶ್ವಾಸನೆ : ಧೃಷ್ಟದ್ಯುಮ್ನನ ಉತ್ಸಾಹ : ಎರಡನೆಯ ದಿವಸದ ಯುದ್ಧಕ್ಕಾಗಿ ಕ್ರೌಂಚಾರುಣವ್ಯೂಹದ ನಿರ್ಮಾಣ

ಸಂಜಯನು ಧೃತರಾಷ್ಟ್ರನಿಗೆ ಹೇಳುತ್ತಾನೆ :

"ಮಹಾರಾಜ! ಮೊದಲನೆಯ ದಿವಸ ಪಾಂಡವರ ಸೈನ್ಯವು ಹಿಮ್ಮೆಟ್ಟಿ ಲಾಗಿ, ಭೀಷ್ಮನಿಗೆ ಯುದ್ಧೋತ್ಸಾಹವು ಹೆಚ್ಚುತ್ತಿರಲಾಗಿ, ದುರ್ಯೋಧನನು ಮೊದಲನೆಯ ದಿವಸದಲ್ಲಾದ ವಿಜಯದಿಂದ ಹೃಷ್ಟನಾಗಿರಲಾಗಿ, ಅತ್ತ ಧರ್ಮರಾಜನು ತನ್ನ ತಮ್ಮಂದಿರಿಂದಲೂ ಮತ್ತು ಎಲ್ಲ ರಾಜರಿಂದಲೂ ಕೂಡಿಕೊಂಡು ಜನಾರ್ದನನ ಬಳಿಗೆ ಹೋದನು. ಅತ್ಯಂತ ಶೋಕಸಂತಪ್ತನಾಗಿದ್ದ ಯುಧಿಷ್ಠಿರನು ಮೊದಲನೆಯ ದಿವಸ ತಮ್ಮ ಪಕ್ಷಕ್ಕಾದ ಪರಾಜಯವನ್ನೇ ಚಿಂತಿಸುತ್ತಾ, ಭೀಷ್ಮನ ಅತುಲಪರಾಕ್ರಮವನ್ನೂ ನೆನೆಯುತ್ತಾ ವಾರ್ಷ್ಣೇಯನನ್ನು ಕುರಿತು ಹೇಳಿದನು :

"ಕೃಷ್ಣ! ಮಹಾಧನುಷ್ಮಂತನಾದ ಭೀಷ್ಮನ ಭಯಂಕರಪರಾಕ್ರಮವನ್ನು ನೋಡಿದೆಯಾ? ಗ್ರೀಷ್ಮರ್ತುವಿನಲ್ಲಿ ಬೆಂಕಿಯು ಒಣಹುಲ್ಲನ್ನು ನಿರಾಯಾಸವಾಗಿ ಸುಟ್ಟು ಭಸ್ಮಮಾಡುವಂತೆ—ನನ್ನ ಸೈನ್ಯವನ್ನು ತನ್ನ ಬಾಣರೂಪವಾದ ಅಗ್ನಿಯಿಂದ ಭೀಷ್ಮನು ಸುಟ್ಟುಹಾಕಿರುವನು. ಯಾವ ರೀತಿ

ಯಲ್ಲಿ ಅಗ್ನಿದೇವನು ಪ್ರಜ್ವಲಿಸುತ್ತಾ ತನ್ನಲ್ಲಿ ಹಾಕುವ ಹವಿಸ್ಸೆಲ್ಲವನ್ನೂ ಗ್ರಹಣಮಾಡಿಬಿಡುವನೋ–ಅದೇ ರೀತಿಯಲ್ಲಿ ನನ್ನ ಸೈನ್ಯಗಳೆಂಬ ಹವಿಸ್ಸನ್ನು ಬಾಣರೂಪವಾದ ನಾಲಿಗೆಗಳಿಂದ ಚಪ್ಪರಿಸುವ ಮಹಾತ್ಮನಾದ ಭೀಷ್ಮನನ್ನು ನೋಡಲು ತಾನೇ ನಾವು ಹೇಗೆ ಸಮರ್ಥರಾದೇವು?

ಧನುಷ್ಮಂತನಾದ, ಮಹಾಬಲನಾದ, ಪುರುಷವ್ಯಾಘ್ರನಾದ ಭೀಷ್ಮನನ್ನು ನೋಡಿ ಮತ್ತು ಅವನು ಬಿಟ್ಟ ಬಾಣಗಳ ಪ್ರಹಾರವನ್ನು ತಡೆಯಲಾರದೇ ನನ್ನ ಸೈನ್ಯವು ಯುದ್ಧದಲ್ಲಿ ಪಲಾಯನಮಾಡಿಬಿಟ್ಟಿತು. ಕೃಷ್ಣ! ನಾವು ಒಂದು ವೇಳೆ ಯುದ್ಧದಲ್ಲಿ ಕೋಪಗೊಂಡಿರುವ ಯಮನನ್ನಾದರೂ ಜಯಿಸಬಹುದು ; ವಜ್ರಪಾಣಿಯಾದ ಇಂದ್ರನನ್ನಾದರೂ ಜಯಿಸಬಹುದು ; ಪಾಶಹಸ್ತನಾದ ವರುಣನನ್ನಾದರೂ ಜಯಿಸಬಹುದು ; ಗದಾಧರನಾದ ಕುಬೇರನನ್ನಾದರೂ ಜಯಿಸಬಹುದು–ಆದರೆ ಮಹಾಬಲನಾದ, ಮಹಾತೇಜಸ್ವಿಯಾದ ಭೀಷ್ಮನನ್ನು ಜಯಿಸಲು ಖಂಡಿತವಾಗಿಯೂ ಸಾಧ್ಯವಾಗುವುದಿಲ್ಲ. ಇಂತಹ ದುರ್ಬಲಸ್ಥಿತಿಯಲ್ಲಿರುವ ನಾನು ನನ್ನ ಬುದ್ಧಿಯ ದೌರ್ಬಲ್ಯದಿಂದ ಭೀಷ್ಮನನ್ನು ಆಕ್ರಮಿಸಲು ಹೋಗಿ ಭೀಷ್ಮನೆಂಬ ಅಗಾಧವಾದ ಸಮುದ್ರವನ್ನು ದಾಟಲು ಯಾವ ನೌಕೆಯ ಆಶ್ರಯವೂ ಇಲ್ಲದವನಾಗಿ ಮುಳುಗಿ ಹೋಗುವುದರಲ್ಲಿದ್ದೇನೆ.

**ವನಂ ಯಾಸ್ಯಾಮಿ ವಾರ್ಷ್ಣೇಯ ಶ್ರೇಯೋ ಮೇ ತತ್ರ ಜೀವಿತುಮ್ ।**
**ನ ತ್ವೇತಾನ್ಪೃಥಿವೀಪಾಲಾನ್ದಾತುಂ ಭೀಷ್ಮಾಯ ಮೃತ್ಯವೇ ॥೯॥**

ಕೃಷ್ಣ! ನಾನು ಅರಣ್ಯಕ್ಕೆ ಹೋಗಿಬಿಡುತ್ತೇನೆ. ನನಗೆ ಅಲ್ಲಿ ಜೀವಿಸಿರುವುದೇ ಶ್ರೇಯಸ್ಕರವಾಗಿ ಕಾಣುತ್ತದೆ. ಏಕೆಂದರೆ : ನಿಷ್ಕಾರಣವಾಗಿ ಈ ರಾಜರುಗಳನ್ನು ಭೀಷ್ಮನೆಂಬ ಮೃತ್ಯುದೇವತೆಗೆ ನಾನು ಖಂಡಿತವಾಗಿಯೂ ಒಪ್ಪಿಸಲಾರೆನು. ಇದು ನನಗೆ ಉಚಿತವೆನಿಸುವುದಿಲ್ಲ. ನಾನು ನಿಶ್ಚಯವಾಗಿ ಹೇಳುತ್ತೇನೆ. ವಾಸುದೇವ! ಮಹಾಸ್ತ್ರವಿದನಾದ ಭೀಷ್ಮನು ನನ್ನ ಸೈನ್ಯವೆಲ್ಲವನ್ನೂ ಧ್ವಂಸಮಾಡಿಬಿಡುತ್ತಾನೆ.

**ಯಥಾನಲಂ ಪ್ರಜ್ವಲಿತಂ ಪತಙ್ಗಾಃ ಸಮಭಿದ್ರುತಾಃ ।**
**ವಿನಾಶಾಯೋಪಗಚ್ಛನ್ತಿ ತಥಾ ಮೇ ಸೈನಿಕೋ ಜನಃ ॥೧೧॥**

ಯಾವ ರೀತಿಯಲ್ಲಿ ಆತ್ಮನಾಶಕ್ಕೋಸ್ಕರವೇ ಪತಂಗದ ಹುಳುಗಳು ಪ್ರಜ್ವಲಿಸುತ್ತಿರುವ ಅಗ್ನಿಯ ಬಳಿಗೆ ಹೋಗಿ ಆತುರದಿಂದ ಬೀಳುತ್ತವೆಯೋ– ಅದೇ ರೀತಿಯಲ್ಲಿ ನನ್ನ ಸೈನ್ಯದ ಜನರೂ ಸಹ ಸ್ವವಿನಾಶಕ್ಕೋಸ್ಕರವೇ ಯುದ್ಧ ವೆಂಬ ವ್ಯಾಜದಿಂದ ಭೀಷ್ಮನೆಂಬ ಪ್ರಜ್ವಲಿಸುವ ಅಗ್ನಿಯಲ್ಲಿ ಬೀಳುತ್ತಾರೆ. ರಾಜ್ಯದ ಕಾರಣದಿಂದ ಅಥವಾ ರಾಜ್ಯವನ್ನು ಪಡೆದುಕೊಳ್ಳಬೇಕೆಂಬ ಲೋಭ ದಿಂದ ಪರಾಕ್ರಮವನ್ನು ತೋರಿಸಲಿಚ್ಛಿಸಿರುವ ನಾನು ಸರ್ವಪ್ರಕಾರದಿಂದಲೂ ಕೃಶನಾಗಿಬಿಟ್ಟಿದ್ದೇನೆ. ನನ್ನ ಸೈನ್ಯವೂ ಒಂದೇ ದಿವಸಕ್ಕೆ ಕೃಶವಾಗಿಬಿಟ್ಟಿದೆ. ಭೀಷ್ಮನ ಬಾಣಗಳಿಂದ ಪೀಡಿತರಾಗಿ ವೀರರಾದ ನನ್ನ ತಮ್ಮಂದಿರೂ ಸಹ ಅತ್ಯಂತಕೃಶರಾಗಿದ್ದಾರೆ. ಮಹತ್ತರವಾದ ವೇದನೆಯನ್ನು ಅನುಭವಿಸುತ್ತಿದ್ದಾರೆ.

ಕೃಷ್ಣ! ನನ್ನ ಸಲುವಾಗಿ ಈ ನನ್ನ ತಮ್ಮಂದಿರು ರಾಜ್ಯದಿಂದಲೂ ಭ್ರಷ್ಟರಾದರು. ಸುಖದಿಂದಲೂ ವಂಚಿತರಾದರು. ಅನೇಕವಾದ ಕಷ್ಟಗಳನ್ನೇ ಅನುಭವಿಸಿದರು. ಹೀಗಿದ್ದರೂ ನಾವು ಇನ್ನೂ ಬದುಕಿದ್ದೇವೆ. ಇದಕ್ಕೆ ಕಾರಣ : ಜೀವಿತವನ್ನು ನಾನು ಬಹುವಾಗಿ ಭಾವಿಸುತ್ತೇನೆ. (ಮುಖ್ಯವೆಂದು ತಿಳಿಯು ತ್ತೇನೆ.) ಆದರೆ ಇಂದಿನ ಸಂದರ್ಭವು ಹೇಗಿದೆಯೆಂದರೆ ನಮ್ಮೆಲ್ಲರ ಜೀವಿತಕ್ಕೇ ತೊಂದರೆ ಬಂದಿರುವಂತೆ ಕಾಣುತ್ತದೆ. ಅವರು ಮತ್ತು ನಾನು ಮುಂದೆ ಜೀವ ವನ್ನುಳಿಸಿಕೊಂಡಿರುವುದೇ ಕಷ್ಟಸಾಧ್ಯವಾಗಿ ಕಾಣುತ್ತಿದೆ. ಆದುದರಿಂದ ಸರ್ವ ಪ್ರಾಣಾಪಹಾರಕವಾದ ಈ ಯುದ್ಧದಿಂದ ವಿರಮಿಸುವುದೇ ನನಗೆ ಯುಕ್ತವಾಗಿ ಕಾಣುತ್ತದೆ. ಉಳಿದಿರುವ ನನ್ನ ಜೀವಮಾನವನ್ನು ಬಹಳ ಕಷ್ಟಸಾಧ್ಯವಾದ ತಪಸ್ಸುಗಳನ್ನು ಮಾಡುತ್ತಾ ಕಳೆದುಬಿಡುತ್ತೇನೆ. ರಾಜ್ಯದ ಸಲುವಾಗಿ ನಾನು ಇಲ್ಲಿಯೇ ಇದ್ದು, ಮೃತ್ಯುಸಮಾನವಾದ ಈ ಯುದ್ಧವು ಮುಂದುವರಿ ಯುವಂತೆ ಮಾಡಿ, ಈ ನನ್ನ ಅಪಾರಮಿತ್ರರನ್ನು ಕೊಲೆಗೀಡುಮಾಡಲಾರೆನು. ಪ್ರಹಾರಕುಶಲರಾದ ನನ್ನ ಕಡೆಯ ಯೋಧರ ಅನೇಕಸಾವಿರ ರಥಗಳನ್ನೂ ಸಹ ಮಹಾಬಲನಾದ ಭೀಷ್ಮನು ದಿವ್ಯವಾದ ಅಸ್ತ್ರಗಳಿಂದ ಸತತವಾಗಿ ಪ್ರಹರಿಸುತ್ತಾ ವಿನಾಶಗೊಳಿಸುತ್ತಲೇ ಇರುತ್ತಾನೆ. ಮಾಧವ! ಬೇಗ ಹೇಳು. ನಿಧಾನಮಾಡಬೇಡ. ಈಗ ನಾನೇನು ಮಾಡಲಿ? ಯಾವ ಕಾರ್ಯವನ್ನು ಮಾಡುವುದರಿಂದ ನನಗೆ ಹಿತವಾಗುವುದೆಂಬುದನ್ನು ಮರೆಮಾಚದೇ ಹೇಳು.

ಈಗ ನಡೆಯುತ್ತಿರುವ ಯುದ್ಧದಲ್ಲಿ ಸವ್ಯಸಾಚಿಯು ಮಧ್ಯಮಮಾರ್ಗವನ್ನು ವಹಿಸಿರುವಂತಿದೆ. ತಟಸ್ಥನಾಗಿರುವಂತಿದೆ. ಅವನು ಉತ್ಸಾಹಿಯಾಗಿಯೂ ಕಾಣುತ್ತಿಲ್ಲ. ನಿರುತ್ಸಾಹಿಯಾಗಿಯೂ ಕಾಣುತ್ತಿಲ್ಲ. ಒಬ್ಬನೇ ಒಬ್ಬ ಮಹಾ ಭುಜನಾದ ಭೀಮನು ಮಾತ್ರ ಈ ಯುದ್ಧದಲ್ಲಿ ಸಕ್ರಿಯವಾಗಿ ಪಾತ್ರವಹಿಸಿದ್ದಾನೆ. ಕ್ಷಾತ್ರಧರ್ಮವನ್ನು ಸ್ಮರಿಸುತ್ತಾ ಕೇವಲ ಬಾಹುಬಲದ ಅವಲಂಬನೆಯಿಂದಲೇ ತನ್ನ ಶಕ್ತಿಯೆಲ್ಲವನ್ನೂ ಕೇಂದ್ರೀಕರಿಸಿ ಯುದ್ಧದಲ್ಲಿ ತೊಡಗಿರುತ್ತಾನೆ. ವಿಶಾಲಮನಸ್ಕನಾದ ಭೀಮಸೇನನು, ಅಮಿತವಾದ ಉತ್ಸಾಹದಿಂದ, ವೀರರನ್ನು ಘಾಸಿಪಡಿಸುವ ಸಾಮರ್ಥ್ಯದಿಂದ ಕೂಡಿರುವ ಗದೆಯ ಮೂಲಕವಾಗಿ, ರಥಸೈನ್ಯ-ಅಶ್ವಸೈನ್ಯ-ಗಜಸೈನ್ಯ-ಪದಾತಿಸೈನ್ಯಗಳಲ್ಲಿ ಎಲ್ಲರನ್ನೂ ತಂಡ-ತಂಡವಾಗಿ ಭಗ್ನಗೊಳಿಸುತ್ತಾ ಕಷ್ಟಸಾಧ್ಯವಾದ ಕರ್ಮವನ್ನು ಮಾಡುತ್ತಾನೆ. ಸಾಮಾನ್ಯರಿಂದ ಮಾಡಲು ಕಷ್ಟಸಾಧ್ಯವಾದ ವಿಧ್ವಂಸನ ಕ್ರಿಯೆಯನ್ನು ಮಾಡಿ ತನ್ನ ಪರಾಕ್ರಮವನ್ನು ತೋರಿಸುತ್ತಾನೆ. ಆದರೆ ಭೀಮನು ತನ್ನ ಬಲವನ್ನೇ ಆಶ್ರಯಿಸಿ ಋಜುಮಾರ್ಗದಿಂದಲೇ ಯುದ್ಧಮಾಡುತ್ತಿದ್ದರೆ ಶತ್ರುಸೈನ್ಯವನ್ನು ಸಂಪೂರ್ಣವಾಗಿ ವಿನಾಶಗೊಳಿಸಲು ಅನೇಕ ನೂರು ವರ್ಷಗಳ ಕಾಲಾವಧಿಯಲ್ಲಿಯೂ ಸಾಧ್ಯವಾಗಲಾರದು.

**ಏಕೋಽಸ್ತ್ರವಿತ್ಸಖಾ ತೇಽಯಂ ಸೋಽಪ್ಯಸ್ಮಾನ್ಸಮುಪೇಕ್ಷತೇ ।**
**ನಿರ್ದಹ್ಯಮಾನಾನ್ಭೀಷ್ಮೇಣ ದ್ರೋಣೇನ ಚ ಮಹಾತ್ಮನಾ ॥೨೦॥**

ಈ ನಿನ್ನ ಸ್ನೇಹಿತನೊಬ್ಬನು (ಅರ್ಜುನನು) ಮಾತ್ರ ನಮ್ಮ ಪಕ್ಷದಲ್ಲಿ ಎಲ್ಲ ಮಹಾಸ್ತ್ರಗಳನ್ನೂ ತಿಳಿದವನಾಗಿದ್ದಾನೆ. ಆದರೆ ಭೀಷ್ಮನಿಂದಲೂ ಮತ್ತು ಮಹಾತ್ಮರಾದ ದ್ರೋಣರಿಂದಲೂ ನಮ್ಮ ಸೈನಿಕರು ಶಸ್ತ್ರಗಳೆಂಬ ಅಗ್ನಿಯಿಂದ ದಹಿಸಲ್ಪಡುತ್ತಿದ್ದರೂ ಸಹ ಈ ನಿನ್ನ ಸಖನು ನಮ್ಮ ಕಡೆಯವರನ್ನು ಉಪೇಕ್ಷಿಸುತ್ತಲೇ ಇದ್ದಾನೆ.

ಭೀಷ್ಮನಿಂದ ಮತ್ತು ಮಹಾತ್ಮರಾದ ದ್ರೋಣರಿಂದ ಪುನಃ-ಪುನಃ ಬಿಡಲ್ಪಡುವ ದಿವ್ಯಾಸ್ತ್ರಗಳು ಎಲ್ಲ ಕ್ಷತ್ರಿಯರನ್ನೂ ಭಸ್ಮಮಾಡಿಬಿಡುತ್ತವೆ.

ವಾಸುದೇವ! ಎಲ್ಲ ರಾಜರಿಂದಲೂ ಕೂಡಿದ ಕ್ರುದ್ಧನಾದ ಭೀಷ್ಮನು ನಮ್ಮನ್ನು ನಿಶ್ಚಯವಾಗಿಯೂ ಬಹಳ ಬೇಗ ವಿನಾಶಗೊಳಿಸುತ್ತಾನೆ. ಅವನ ಪರಾಕ್ರಮವೇ ಅಂತಹುದಾಗಿದೆ. ಮಹಾಭಾಗ! ಯೋಗೇಶ್ವರ! ನಿನ್ನಲ್ಲಿ ಉಪಾಯವೂ ಇದೆ ; ಯೋಗಶಕ್ತಿಯೂ ಇದೆ. ನಿನಗೆ ತಿಳಿಯದಿರುವ ವಿಷ ಯವೇ ಇಲ್ಲ. ಅಂತಹ ನೀನೇ ನೋಡಿ ಹೇಳು. ಕೃಷ್ಣ! ಮೋಡವು ಅಖಂಡ ವಾಗಿ ಮಳೆಗರೆಯುವಿಕೆಯಿಂದ ದಾವಾಗ್ನಿಯನ್ನು ನಾಶಗೊಳಿಸುವಂತೆ-ಭೀಷ್ಮ ನೆಂಬ ದಾವಾಗ್ನಿಯನ್ನು ಬಾಣಗಳ ವೃಷ್ಟಿಯಿಂದ ಉಪಶಮನಗೊಳಿಸುವ ಮಹಾರಥರು ನಮ್ಮ ಕಡೆಯಲ್ಲಿ ಯಾರಾದರೂ ಇದ್ದಾರೆಯೇ? ಒಂದು ವೇಳೆ ಇರುವುದಾದರೆ ಅವರು ಯಾರು? ಎಂಬುದನ್ನು ನೀನೇ ಹೇಳು.

**ತವ ಪ್ರಸಾದಾದ್ಗೋವಿನ್ದ ಪಾಣ್ಡವಾ ನಿಹತದ್ವಿಷಃ ।**
**ಸ್ವರಾಜ್ಯಮನುಸಮ್ಪ್ರಾಪ್ತಾ ಮೋದಿಷ್ಯನ್ತೇ ಸಬಾನ್ಧವಾಃ ॥೨೪॥**

ಗೋವಿಂದ! ನಿನ್ನ ಪ್ರಸಾದದಿಂದಲೇ–ಅನುಗ್ರಹದಿಂದಲೇ ಪಾಂಡವರು ಶತ್ರುಗಳನ್ನು ಸದೆಬಡಿದು ತಮ್ಮ ರಾಜ್ಯವನ್ನು ಪಡೆದುಕೊಂಡವರಾಗಿ ಬಂಧು-ಬಾಂಧವಸಹಿತರಾಗಿ ಸಂತೋಷದಿಂದ ಸುಖಿಗಳಾಗುತ್ತಾರೆ." ಹೀಗೆಂಬುದಾಗಿ ಹೇಳಿ ವಿಶಾಲಮನಸ್ಸಿನವನಾದ ಯುಧಿಷ್ಠಿರನು ವ್ಯಾಕುಲ ಚಿತ್ತನಾಗಿ ಬಹಳ ಹೊತ್ತಿನವರೆಗೆ ಮನಸ್ಸನ್ನು ಒಳಸೆಳೆದುಕೊಂಡು ಧ್ಯಾನ ಮಗ್ನನಾಗಿ ಇದ್ದುಬಿಟ್ಟನು.

ಯುಧಿಷ್ಠಿರನು ಶೋಕದಿಂದ ಸಂಕಟಪಡುತ್ತಿದ್ದಾನೆಂಬುದನ್ನೂ, ದುಃಖ ದಿಂದ ವ್ಯಥಿತವಾದ ಮನಸ್ಸುಳ್ಳವನಾಗಿರುವನೆಂಬುದನ್ನೂ ಗೋವಿಂದನು ತಿಳಿದವನಾಗಿ ಎಲ್ಲ ಪಾಂಡವರನ್ನೂ ಹರ್ಷಗೊಳಿಸುತ್ತಾ ಯುಧಿಷ್ಠಿರನನ್ನು ಕುರಿತು ಈ ಮಾತುಗಳನ್ನು ಹೇಳಿದನು :

"ದುಃಖಿಸಬೇಡ ಯುಧಿಷ್ಠಿರ! ನಿನ್ನಂತಹವನು ದುಃಖಿಸಬಾರದು : ಇಲ್ಲಿ ದುಃಖಿಸಬೇಕಾದ ವಿಷಯವೇ ಇಲ್ಲ. ಏಕೆಂದರೆ : ನಿನ್ನ ತಮ್ಮಂದಿ ರೆಲ್ಲರೂ ಮಹಾಶೂರರು. ಸರ್ವಲೋಕಗಳಲ್ಲಿಯೂ ಸುವಿಖ್ಯಾತರಾದ ಧನುಷ್ಮಂತರು. ನಾನಾದರೋ ನಿಮಗೆ ಪ್ರಿಯವನ್ನುಂಟುಮಾಡಬೇಕೆಂದೇ

ಬದ್ಧಕಂಕಣನಾಗಿರುವೆನು. ಮಹಾಯಶೋವಂತನಾದ ಈ ಸಾತ್ಯಕಿ, ಈ ಇಬ್ಬರು ವಿರಾಟ-ದ್ರುಪದರು, ದ್ರುಪದನ ಮಗನಾದ ಧೃಷ್ಟದ್ಯುಮ್ನ, ಸೈನ್ಯ ಸಮೇತರಾದ ಈ ರಾಜರು–ಇವರೆಲ್ಲರೂ ನೀನು ಪ್ರಸನ್ನನಾಗಿರುವುದನ್ನೇ ನಿರೀಕ್ಷಿಸುವವರಾಗಿದ್ದಾರೆ. ನಿನಗೆ ಇವರೆಲ್ಲರೂ ಭಕ್ತರೂ ಆಗಿದ್ದಾರೆ. ಹೀಗಿರುವಾಗ ನೀನು ದುಃಖಿಸಬೇಕಾದ ಕಾರಣವೇನಿದೆ?

ದ್ರುಪದನ ಮಗನಾದ, ಮಹಾಬಲಿಷ್ಠನಾದ ಧೃಷ್ಟದ್ಯುಮ್ನನು ಯಾವಾಗಲೂ ನಿನಗೆ ಹಿತವನ್ನುಂಟುಮಾಡುವುದರಲ್ಲಿಯೇ ನಿರತನಾಗಿರುತ್ತಾನೆ. ಇವನು ನಿನ್ನ ಸೇನೆಯ ದಂಡನಾಯಕತ್ವದ ಭಾರವನ್ನೂ ವಹಿಸಿದ್ದಾನೆ. ಭೀಷ್ಮನ ವಿಷಯವಾಗಿ ನೀನೇಕಿಷ್ಟು ಚಿಂತಿಸುವೆ? ಈ ಶಿಖಂಡಿಯು ಹುಟ್ಟಿರುವುದೇ ಭೀಷ್ಮನನ್ನು ವಧೆಮಾಡುವ ಸಲುವಾಗಿ. ಎಲ್ಲ ರಾಜರೂ ನೋಡುತ್ತಿರುವಂತೆಯೇ ಯುದ್ಧದಲ್ಲಿ ಶಿಖಂಡಿಯು ಭೀಷ್ಮನನ್ನು ವಧಿಸುತ್ತಾನೆ. ಈ ವಿಷಯದಲ್ಲಿ ಸಂದೇಹವೇ ಇಲ್ಲ."

ಶ್ರೀಕೃಷ್ಣನ ಮಾತುಗಳನ್ನು ಕೇಳಿದನಂತರ ಯುಧಿಷ್ಠಿರರಾಜನು ಆ ಮಹಾಸಭೆಯಲ್ಲಿ ಶ್ರೀಕೃಷ್ಣನೂ ಸಹ ಕೇಳುತ್ತಿರುವಂತೆಯೇ ಧೃಷ್ಟದ್ಯುಮ್ನನನ್ನು ಕುರಿತು ಹೇಳಿದನು : "ಆದರಣೀಯನಾದ ಧೃಷ್ಟದ್ಯುಮ್ನನೇ! ನಾನೀಗ ಏನನ್ನು ಹೇಳುತ್ತೇನೆಯೋ ಅದನ್ನು ಮನಸ್ಸಿಟ್ಟು ಕೇಳು. ಈಗ ನಾನು ಹೇಳಲಿರುವ ಮಾತನ್ನು ನೀನು ಖಂಡಿತವಾಗಿಯೂ ಅತಿಕ್ರಮಿಸಬಾರದು. ವಾಸುದೇವನಿಗೆ ಸಮಾನವಾದ ಪರಾಕ್ರಮವಿರುವ ನೀನು ನನಗೆ ಸೇನಾಪತಿಯಾಗಿರುವೆ. ಕಾರ್ತಿಕೇಯನು ಯಾವ ರೀತಿಯಲ್ಲಿ ದೇವತೆಗಳಿಗೆ ಶಾಶ್ವತ ಸೇನಾನಿಯಾಗಿರುವನೋ–ಅದೇ ರೀತಿಯಲ್ಲಿ ನೀನೂ ಸಹ ಪಾಂಡವರಿಗೆ ಮುಖ್ಯದಂಡನಾಯಕನಾಗಿರುವೆ. ಪುರುಷಶಾರ್ದೂಲ! ಅಂತಹ ನೀನು ನಿನ್ನ ಅತುಲಪರಾಕ್ರಮದಿಂದ ಕೌರವರನ್ನು ವಿನಾಶಮಾಡು. ನಾನೂ ನಿನ್ನ ಹಿಂದೆ ಬರುತ್ತೇನೆ. ಭೀಮ, ಅರ್ಜುನ, ಮಾದ್ರಿಯ ಮಕ್ಕಳಾದ ನಕುಲ-ಸಹದೇವರು, ದ್ರೌಪದಿಯ ಐವರು ಮಕ್ಕಳು, ಇವರೇ ಅಲ್ಲದೆ ನಮ್ಮ ಪಕ್ಷದಲ್ಲಿರುವ ಇನ್ನೂ ಅನೇಕ ಪೃಥಿವೀಪಾಲರೆಲ್ಲರೂ ಕವಚಗಳನ್ನು ಧರಿಸಿದವರಾಗಿ ನಿನ್ನ ಹಿಂದೆ ಬರುತ್ತಾರೆ."

ಯುಧಿಷ್ಠಿರನು ಹೀಗೆಂದು ಹೇಳಿದನಂತರ ಧೃಷ್ಟದ್ಯುಮ್ನನು ಎಲ್ಲರನ್ನೂ ಸಂತೋಷಗೊಳಿಸುತ್ತಾ ಹೇಳಿದನು :

**ಅಹಂ ದ್ರೋಣಾನ್ತಕಃ ಪಾರ್ಥ ವಿಹಿತಃ ಶಮ್ಭುನಾ ಪುರಾ ।**
**ರಣೇ ಭೀಷ್ಮಂ ಕೃಪಂ ದ್ರೋಣಂ ತಥಾ ಶಲ್ಯಂ ಜಯದ್ರಥಮ್ ।**
**ಸರ್ವಾನದ್ಯ ರಣೇ ದೃಪ್ತಾನ್ಪ್ರತಿಯೋತ್ಸ್ಯಾಮಿ ಪಾರ್ಥಿವ ॥೩೭॥**

"ಪಾರ್ಥ! ನಾನು ದ್ರೋಣಾಂತಕನಾಗಿದ್ದೇನೆ. ನನ್ನಿಂದಲೇ ದ್ರೋಣನ ಮರಣ. ದ್ರೋಣನ ಸಂಹಾರಕ್ಕೆಂದೇ ನಾನು ಹುಟ್ಟಿದ್ದೇನೆ. ಈ ವಿಷಯವನ್ನು ಸರ್ವೇಶ್ವರನಾದ ಶಂಭುವೇ ನಿಶ್ಚಯಮಾಡಿರುವನು. ಇದು ಅವನ ಇಚ್ಛೆ ಅಥವಾ ಅನುಗ್ರಹವೇ ಆಗಿದೆ. ಬಲದಿಂದ ಕೊಬ್ಬಿರುವ ಭೀಷ್ಮ, ಕೃಪ, ದ್ರೋಣ, ಶಲ್ಯ, ಜಯದ್ರಥ–ಮುಂತಾದವರೆಲ್ಲರನ್ನೂ ಎದುರಿಸಿ ನಿಂತು ನಾನು ಅವರೊಡನೆ ಯುದ್ಧಮಾಡುತ್ತೇನೆ."

ಧೃಷ್ಟದ್ಯುಮ್ನನು ಹೀಗೆ ಹೇಳುತ್ತಲೇ ಯುದ್ಧದುರ್ಮದರಾದ (ಯುದ್ಧಮಾಡಲು ಉನ್ಮತ್ತರಾಗಿದ್ದ) ಮಹಾಧನುಷ್ಮಂತರಾದ ಪಾಂಡವರು ಗಟ್ಟಿಯಾಗಿ ರಣಘೋಷಮಾಡಿದರು. ಪಾರ್ಥಿವೇಂದ್ರನಾದ, ದ್ರುಪದನ ಮಗನಾದ ಧೃಷ್ಟದ್ಯುಮ್ನನು ಈ ರೀತಿಯಲ್ಲಿ ಯುದ್ಧಕ್ಕೆ ಸಿದ್ಧನಾಗಿ ನಿಂತಿರುವಾಗ ದಂಡನಾಯಕನಾದ ಧೃಷ್ಟದ್ಯುಮ್ನನನ್ನು ಕುರಿತು ಯುಧಿಷ್ಠಿರನು ಪುನಃ ಹೇಳಿದನು : "ದೇವಾಸುರರಿಗೆ ನಡೆಯುತ್ತಿದ್ದ ಯುದ್ಧಸಮಯದಲ್ಲಿ ಬೃಹಸ್ಪತಿಯು ಇಂದ್ರನ ಹಿತಾರ್ಥವಾಗಿ ಸರ್ವಶತ್ರುವಿನಾಶಕವಾದ ಕ್ರೌಂಚಾರುಣ ಎಂಬ ಹೆಸರಿನ ವ್ಯೂಹದ ರಚನೆಯನ್ನು ಹೇಳಿಕೊಟ್ಟಿದ್ದನು. ಶತ್ರುಗಳ ಸೈನ್ಯವನ್ನು ವಿನಾಶಗೊಳಿಸುವ ಕ್ರೌಂಚಾರುಣವೆಂಬ ಹೆಸರಿನ ವ್ಯೂಹವನ್ನು ಯಥಾವತ್ತಾಗಿ (ಯಥಾಶಾಸ್ತ್ರವಾಗಿ) ರಚಿಸುವವನಾಗು. ಹಿಂದೆಂದೂ ಯಾರೂ ನೋಡದೆಯೇ ಇರುವ ಆ ವ್ಯೂಹವನ್ನು ಕುರುಗಳೂ ಮತ್ತು ಎಲ್ಲ ರಾಜರೂ ನೋಡಲಿ"–ಎಂಬುದಾಗಿ ಇಂದ್ರನು ವಿಷ್ಣುವಿಗೆ ಹೇಳುವಂತೆ ಯುಧಿಷ್ಠಿರನು ಧೃಷ್ಟದ್ಯುಮ್ನನಿಗೆ ಸಲಹೆಯನ್ನು ಕೊಟ್ಟನು. ಅದೇ ರೀತಿಯಲ್ಲಿ ಧೃಷ್ಟದ್ಯುಮ್ನನೂ ಸಹ ಬಾರ್ಹಸ್ಪತ್ಯವಿಧಿಗೆ ಅನುಸಾರವಾಗಿ ಕ್ರೌಂಚಾರುಣವ್ಯೂಹವನ್ನು ಬೆಳಗಾಗುವುದರೊಳಗೆ ರಚಿಸಿ, ಸರ್ವಸೈನ್ಯಗಳ ಅಗ್ರಭಾಗ

ದಲ್ಲಿ ಅರ್ಜುನನನ್ನು ನಿಲ್ಲಿಸಿದನು. ಅದ್ಭುತವಾಗಿದ್ದ ಮತ್ತು ಮನೋಹರವಾಗಿದ್ದ ಅರ್ಜುನನ ಧ್ವಜವು ಸೂರ್ಯನ ಪಥದಲ್ಲಿ ಎಂದರೆ ಹೆಚ್ಚು ಎತ್ತರದಲ್ಲಿ ಹಾರಾಡುತ್ತಿದ್ದಿತು. ಇಂದ್ರನ ಆದೇಶದಂತೆ ಸಾಕ್ಷಾತ್ ವಿಶ್ವಕರ್ಮನೇ ಅದನ್ನು ನಿರ್ಮಿಸಿದ್ದನು. ಇಂದ್ರಾಯುಧಕ್ಕೆ ಎಂದರೆ ಕಾಮನಬಿಲ್ಲಿಗೆ ಸಮಾನವಾದ ಬಣ್ಣಗಳಿಂದ ಕೂಡಿದ್ದ ಪತಾಕೆಗಳಿಂದ ಆ ಧ್ವಜವು ಅಲಂಕೃತವಾಗಿದ್ದಿತು. ಆಕಾಶದಲ್ಲಿ ಹಾರುವ ಪಕ್ಷಿಯೋಪಾದಿಯಲ್ಲಿ ಆ ಧ್ವಜವು ಯಾವ ತಡೆಯೂ ಇಲ್ಲದೇ ಅಂತರಿಕ್ಷದಲ್ಲಿ ಹಾರಾಡುತ್ತಿದ್ದಿತು. ಆ ಧ್ವಜವು ಆಕಾಶದಲ್ಲಿರುವ ಗಂಧರ್ವನಗರಕ್ಕೆ ಸಮಾನವಾಗಿ ಕಾಣುತ್ತಿದ್ದಿತು. ರಥದ ಮಾರ್ಗದಲ್ಲಿ ಅರ್ಜುನನ ಧ್ವಜವು ನರ್ತನಮಾಡುತ್ತಿದೆಯೋ ಎಂಬಂತೆ ಕಾಣುತ್ತಿದ್ದಿತು. ಮೇರುಪರ್ವತದ ಸಹಯೋಗದಿಂದ ಸೂರ್ಯನೂ, ಸೂರ್ಯನ ಸಹಯೋಗದಿಂದ ಮೇರುಪರ್ವತವೂ ಪ್ರಕಾಶಿಸುವಂತೆ–ಆ ರತ್ನಧ್ವಜದಿಂದ ಪಾರ್ಥನು ಪ್ರಕಾಶಿಸುತ್ತಿದ್ದನು. ಗಾಂಡೀವಧನ್ವನಾದ ಪಾರ್ಥನ ಸಹಯೋಗದಿಂದ ಆ ರತ್ನಧ್ವಜವೂ ಪ್ರಕಾಶಿಸುತ್ತಿದ್ದಿತು. ದೊಡ್ಡದಾದ ಸೈನ್ಯದಿಂದ ಕೂಡಿದ್ದ ದ್ರುಪದನು ಕ್ರೌಂಚಾರುಣವ್ಯೂಹದ ಶಿರಸ್ಸೇ ಆಗಿದ್ದನು. ಜನೇಶ್ವರರಾದ ಕುಂತೀಭೋಜ ಮತ್ತು ಶೈಬ್ಯರು ಆ ವ್ಯೂಹದ ಕಣ್ಣುಗಳ ಸ್ಥಾನದಲ್ಲಿದ್ದರು. ದಾಶಾರ್ಣಕರು, ದಾಶೇರಕ ಸಮೂಹದಿಂದ ಕೂಡಿದ ಪ್ರಭದ್ರಕರು, ಅನೂಪಕರು ಮತ್ತು ಕಿರಾತರು ಆ ವ್ಯೂಹದ ಕುತ್ತಿಗೆಯ ಭಾಗದಲ್ಲಿದ್ದರು. ಪಟಚ್ಚರರು, ಪೌಂಡ್ರರು, ಪೌರವರು ಮತ್ತು ನಿಷಾದರು ಇವರಿಂದೊಡಗೂಡಿದ್ದ ಯುಧಿಷ್ಠಿರರಾಜನು ವ್ಯೂಹದ ಪೃಷ್ಠಭಾಗದಲ್ಲಿದ್ದನು. ಭೀಮಸೇನ-ಧೃಷ್ಟದ್ಯುಮ್ನರು ವ್ಯೂಹದ ಎರಡು ರೆಕ್ಕೆಗಳೇ ಆಗಿದ್ದರು. ದ್ರೌಪದಿಯ ಐವರು ಮಕ್ಕಳು, ಅಭಿಮನ್ಯು ಮತ್ತು ಮಹಾರಥಿಯಾದ ಸಾತ್ಯಕಿ ಇವರುಗಳೂ ಮತ್ತು ಪಿಶಾಚ, ದಾರದ, ಪುಂಡ್ರ, ಕುಂಡೀವಿಷ, ಮಾರುತ, ಧೇನುಕ, ತಂಗಣ, ಪರತಂಗಣ, ಬಾಹ್ಲಿಕ, ತಿತ್ತಿರ, ಚೋಲ ಮತ್ತು ಪಾಂಡ್ಯ–ಈ ದೇಶಗಳ ಸೈನಿಕರೂ ಕ್ರೌಂಚಾರುಣ ವ್ಯೂಹದ ಬಲಭಾಗವನ್ನು ಆಶ್ರಯಿಸಿ ನಿಂತಿದ್ದರು. ಅಗ್ನಿವೇಶ್ಯ , ಹುಂಡ, ಮಾಲವ, ದಾನಭಾರಿ, ಶಬರ, ಉದ್ಭಸ, ವತ್ಸ, ನಾಕುಲ ಈ ದೇಶಗಳ ಸೈನಿಕರೊಡನೆ ನಕುಲ ಮತ್ತು ಸಹದೇವರು ವ್ಯೂಹದ ಎಡಭಾಗವನ್ನು ಆಶ್ರಯಿಸಿ ನಿಂತಿದ್ದರು. ಕ್ರೌಂಚಪಕ್ಷಿಯ (ಪಕ್ಷಿಯಾಕಾರವ್ಯೂಹದ) ಎರಡೂ

ಭಾಗಗಳ ರೆಕ್ಕೆಗಳಲ್ಲಿ ಹತ್ತು-ಹತ್ತುಸಾವಿರ ರಥಗಳೂ, ಶಿರಸ್ಸಿನಲ್ಲಿ ಲಕ್ಷ ರಥಗಳೂ, ಪೃಷ್ಠಭಾಗದಲ್ಲಿ ಹತ್ತುಕೋಟಿ ಇಪ್ಪತ್ತುಸಾವಿರ ರಥಗಳೂ, ಕತ್ತಿನಲ್ಲಿ ಒಂದು ಲಕ್ಷದ ಎಪ್ಪತ್ತುಸಾವಿರ ರಥಗಳೂ ಇದ್ದುವು. ರೆಕ್ಕೆಗಳ ಅಗ್ರಭಾಗಗಳಲ್ಲಿ, ಮತ್ತು ಚಿಕ್ಕ-ಚಿಕ್ಕ ಪುಕ್ಕಗಳ ಪ್ರದೇಶಗಳಲ್ಲಿ ಮತ್ತು ರೆಕ್ಕೆಗಳ ಕೊನೆಯಲ್ಲಿ ಆನೆಗಳು ಗುಂಪು-ಗುಂಪಾಗಿ ಪರ್ವತಗಳೋಪಾದಿಯಲ್ಲಿ ಚಲಿಸುತ್ತಿದ್ದುವು. ಕೇಕಯರಿಂದೊಡಗೂಡಿದ ವಿರಾಟನೂ, ಕಾಶೀರಾಜ ಶೈಬ್ಯರೂ ಮೂವತ್ತುಸಾವಿರ ರಥಸೈನ್ಯಗಳೊಡನೆ ಆ ವ್ಯೂಹದ ಕಟಿಪ್ರದೇಶವನ್ನು ರಕ್ಷಿಸುತ್ತಿದ್ದರು.

ಧೃತರಾಷ್ಟ್ರಮಹಾರಾಜ! ಈ ರೀತಿಯಾಗಿ ಪಾಂಡವರು ದೊಡ್ಡದಾದ ವ್ಯೂಹವನ್ನು ರಚಿಸಿದವರಾಗಿ ಸೂರ್ಯೋದಯವನ್ನೇ ನಿರೀಕ್ಷಿಸುತ್ತಾ ಕವಚಗಳನ್ನು ತೊಟ್ಟುಕೊಂಡು ಯುದ್ಧಸನ್ನದ್ಧರಾಗಿದ್ದರು. ಅವರ ಆನೆಗಳ ಮತ್ತು ರಥಗಳ ಮೇಲೆ ಸೂರ್ಯನಂತೆ ಪ್ರಕಾಶಮಾನವಾಗಿದ್ದ, ನಿರ್ಮಲವಾಗಿದ್ದ ಮತ್ತು ದೊಡ್ಡ-ದೊಡ್ಡದಾಗಿದ್ದ ಶ್ವೇತಛತ್ರಗಳು ಪ್ರಕಾಶಿಸು ತ್ತಿದ್ದುವು.

೫೦ನೆಯ ಅಧ್ಯಾಯವು ಮುಗಿಯಿತು.

೫೧ನೆಯ ಅಧ್ಯಾಯ ಭೀಷ್ಮವಧಪರ್ವ (ಮುಂದುವರಿದಿದೆ.)

## ಕೌರವಸೇನೆಯ ವ್ಯೂಹರಚನೆ : ಎರಡು ಸೇನೆಗಳಲ್ಲಿಯೂ ಶಂಖಧ್ವನಿ ಮತ್ತು ಸಿಂಹಗರ್ಜನೆ

ಸಂಜಯನು ಯುದ್ಧದ ವರದಿಯನ್ನು ಮುಂದುವರಿಸುತ್ತಾನೆ :

“ಮಹಾರಾಜ! ಅಭೇದ್ಯವಾಗಿದ್ದ, ಮಹಾಘೋರವಾಗಿದ್ದ ಮತ್ತು ಮಹಾತೇಜಸ್ವಿಯಾದ ಅರ್ಜುನನಿಂದ ರಕ್ಷಿತವಾಗಿದ್ದ ಕ್ರೌಂಚವ್ಯೂಹವನ್ನು ಪಾಂಡವರು ರಚಿಸಿ ಯುದ್ಧಕ್ಕೆ ಸಜ್ಜಾಗಿರುವುದನ್ನು ದುರ್ಯೋಧನನು ನೋಡಿದನು. ಒಡನೆಯೇ ಆಚಾರ್ಯರಾದ ದ್ರೋಣರ ಬಳಿಗೆ ಹೋಗಿ ಅಲ್ಲಿದ್ದ ಕೃಪ, ಶಲ್ಯ, ಸೌಮದತ್ತಿ , ವಿಕರ್ಣ, ಅಶ್ವತ್ಥಾಮ, ದುಃಶಾಸನನೇ ಮೊದಲಾದ ತನ್ನ ತಮ್ಮಂದಿರು ಮತ್ತು ಯುದ್ಧಕ್ಕೆ ಆಗಮಿಸಿದ್ದ ಶೂರರಾದ

ಇನ್ನೂ ಅನೇಕ ರಾಜರು–ಇವರೆಲ್ಲರನ್ನೂ ಯಥೋಚಿತವಾದ ಹೊಗಳಿಕೆಗಳಿಂದ ಸಂತೋಷಗೊಳಿಸುತ್ತಾ ಹೀಗೆಂದು ಹೇಳಿದನು :

"ರಾಜಸತ್ತಮರೇ! ನೀವು ನಾನಾವಿಧವಾದ ಅಸ್ತ್ರ-ಶಸ್ತ್ರಗಳ ಪ್ರಯೋಗಗಳಲ್ಲಿ ಕುಶಲರಾಗಿರುತ್ತೀರಿ. ಯುದ್ಧವಿಶಾರದರಾಗಿರುತ್ತೀರಿ. ಯುದ್ಧದ ಸಂಪೂರ್ಣಕಲೆಯೂ ನಿಮಗೆ ತಿಳಿದಿರುತ್ತದೆ. ಸಸೈನ್ಯರಾದ ಪಾಂಡುಪುತ್ರರನ್ನು ಸಂಹರಿಸಲು ಮತ್ತು ನಮಗೆ ವಿಜಯವನ್ನು ಗಳಿಸಿಕೊಡಲು ನೀವು ಒಬ್ಬೊಬ್ಬರೂ ಸಮರ್ಥರೇ ಆಗಿರುತ್ತೀರಿ. ಅತಿರಥ-ಮಹಾರಥರಾದ ನಿಮ್ಮಲ್ಲಿ



ಒಬ್ಬೊಬ್ಬರೇ ಹೋಗಿ ಈ ಕಾರ್ಯವನ್ನು ಮಾಡಿ ಮುಗಿಸಬಲ್ಲಿರಿ. ನಿಮ್ಮಂತಹ ಶೂರ-ವೀರರಿಗೆ ಇದೇನೂ ಅಂತಹ ಅಸಾಧ್ಯವಾದ ಕಾರ್ಯವೇನೂ ಅಲ್ಲ. ಹೀಗಿರುವಾಗ ನೀವೆಲ್ಲರೂ ಒಟ್ಟಾಗಿ ಸೇರಿ ನನಗೆ ಜಯಗಳಿಸಿಕೊಡಲು ಪ್ರಯತ್ನಿಸುತ್ತಿರುವಾಗ ಹೇಳಬೇಕಾದುದೇನಿದೆ? ಜಯವೆಂಬುದು ನನಗೆ ಕರತಲಾಮಲಕವೇ ಆಗಿದೆ.

**ಅಪರ್ಯಾಪ್ತಂ ತದಸ್ಮಾಕಂ ಬಲಂ ಭೀಷ್ಮಾಭಿರಕ್ಷಿತಮ್ ।**
**ಪರ್ಯಾಪ್ತಮಿದಮೇತೇಷಾಂ ಬಲಂ ಭೀಮಾಭಿರಕ್ಷಿತಮ್ ॥೬॥**

ಭೀಷ್ಮನಿಂದ ಸಂರಕ್ಷಿತವಾಗಿರುವ ನಮ್ಮ ಬಲವು ಇತಿ-ಮಿತಿಯೇ

ಇಲ್ಲದುದು ; ಎಲ್ಲೆಯಿಲ್ಲದುದು ; ಅಪಾರವಾದುದು ; ಅದ್ಭುತವಾದುದು ; ಅಮೋಘವಾದುದು. ಭೀಮನಿಂದ ರಕ್ಷಿಸಲ್ಪಡುತ್ತಿರುವ ಅವರ ಸೈನ್ಯಕ್ಕಾದರೋ ಒಂದು ಮಿತಿಯಿದೆ. ಅದೊಂದು ಪರಿಮಿತವಾದ ಸಂಖ್ಯೆಯಲ್ಲಿದೆ. ಅಲ್ಪಸಂಖ್ಯಾಕವಾಗಿದೆ. ಸಂಸ್ಥಾನಿಕರು, ಶೂರಸೇನರು, ವೇತ್ರಿಕರು, ಕುಕುರರು, ಆರೋಚಕರು, ತ್ರಿಗರ್ತರು, ಮದ್ರಕರು, ಯವನರು–ಇವರೆಲ್ಲರೂ ಸೈನ್ಯಪುರಃಸ್ಸರರಾಗಿ ಶತ್ರುಂಜಯ, ದುಃಶಾಸನ, ವೀರವಿಕರ್ಣ, ನಂದ, ಉಪನಂದಕರು, ಚಿತ್ರಸೇನ, ಪಾರಿಭದ್ರಕರು–ಇವರೊಡನೆ ಕೂಡಿಕೊಂಡು ಭೀಷ್ಮನನ್ನೇ ರಕ್ಷಿಸುತ್ತಿರಲಿ.”

ಮಹಾರಾಜ! ದುರ್ಯೋಧನನು ತನ್ನ ಕಡೆಯ ರಾಜರನ್ನೂ ಮತ್ತು ದುಃಶಾಸನಾದಿ ತನ್ನ ಅನುಜರನ್ನೂ ಕುರಿತು ಹೀಗೆ ಹೇಳಿದನಂತರ ಭೀಷ್ಮ-ದ್ರೋಣ ಮತ್ತು ನಿನ್ನ ಮಕ್ಕಳು ಎಲ್ಲರೂ ಸೇರಿ ಪಾಂಡವರ ಸೈನ್ಯಕ್ಕೆ ಬಾಧೆಯನ್ನುಂಟುಮಾಡುವ, ಕ್ರೌಂಚಾರುಣವ್ಯೂಹಕ್ಕೆ ಪ್ರತಿಯಾದ ಮಹಾವ್ಯೂಹವೊಂದನ್ನು ಒಡನೆಯೇ ರಚಿಸಿದರು. ದಂಡನಾಯಕನಾದ ಭೀಷ್ಮನು ದೊಡ್ಡದಾದ ಸೈನ್ಯದಿಂದ ಪರಿವೃತನಾಗಿದ್ದನು. ದೇವರಾಜನು ತನ್ನ ಹಿಂದೆ ದೇವಸೈನ್ಯವನ್ನು ಕರೆದುಕೊಂಡು ಹೋಗುತ್ತಿದ್ದಂತೆ–ಭೀಷ್ಮನು ದೊಡ್ಡದಾದ ಸೈನ್ಯವನ್ನು ತನ್ನ ಹಿಂದೆ ಕರೆದುಕೊಂಡು ಮುಂದೆ-ಮುಂದೆ ಹೋಗುತ್ತಿದ್ದನು. ಭೀಷ್ಮನ ಹಿಂದೆ ಪ್ರತಾಪವಂತರಾದ ಧನುರ್ಧರರಾದ ದ್ರೋಣರು ಯುದ್ಧಕ್ಕೆ ಅನುವಾಗಿ ಹೊರಟರು. ಕುಂತಲ, ದಶಾರ್ಣ, ಮಾಗಧ, ವಿದರ್ಭ, ಮೇಕಲ, ಕರ್ಣಪ್ರಾವರಣ–ಇವೇ ಮುಂತಾದ ದೇಶಗಳ ಸೈನ್ಯಗಳೊಡನೆ ಗಾಂಧಾರ, ಸಿಂಧು, ಸೌವೀರ, ಶಿಬಿ ಮತ್ತು ವಸಾತಿದೇಶಗಳ ವೀರಯೋಧರು ಯುದ್ಧದಲ್ಲಿ ಶೋಭಾಯಮಾನನಾಗಿ ಕಾಣುವ ಭೀಷ್ಮನನ್ನು ರಕ್ಷಿಸುತ್ತಿದ್ದರು. ಶಕುನಿಯು ತನ್ನ ಸೈನ್ಯದೊಡನೆ ದ್ರೋಣರನ್ನು ಸಂರಕ್ಷಿಸುತ್ತಿದ್ದನು. ಅತ್ಯಂತ ಹರ್ಷಯುಕ್ತನಾಗಿದ್ದ ದುರ್ಯೋಧನರಾಜನು ತನ್ನ ತಮ್ಮಂದಿರೊಡನೆಯೂ, ಅಶ್ವಾತಕ, ವಿಕರ್ಣ, ಅಂಬಷ್ಠ, ಕೋಸಲ, ದರದ, ಶಕ, ಕ್ಷುದ್ರಕ, ಮಾಲವ ಮುಂತಾದ ದೇಶಗಳ ವೀರಯೋಧರೊಡನೆಯೂ ಸೇರಿಕೊಂಡು ಸಸೈನ್ಯನಾದ ಶಕುನಿಯನ್ನು ಸಂರಕ್ಷಿಸುತ್ತಿದ್ದನು.

ಭೂರಿಶ್ರವ, ಶಲ, ಶಲ್ಯ, ಆದರಣೀಯನಾದ ಭಗದತ್ತ, ಅವಂತೀರಾಜ ಕುಮಾರರಾದ ವಿಂದ ಮತ್ತು ಅನುವಿಂದರು–ಇವರೆಲ್ಲರೂ ಸಸೈನ್ಯರಾಗಿ ಆ ಮಹಾಸೇನೆಯ ಎಡಪಾರ್ಶ್ವವನ್ನು ರಕ್ಷಿಸುತ್ತಿದ್ದರು. ಸೋಮದತ್ತನ ಮಗ ಭೂರಿ, ತ್ರಿಗರ್ತರಾಜನಾದ ಸುಶರ್ಮಾ, ಕಾಂಬೋಜರಾಜನಾದ ಸುದಕ್ಷಿಣ, ಶ್ರುತಾಯು ಮತ್ತು ಅಚ್ಯುತಾಯು–ಇವರು ಸೈನ್ಯಗಳೊಡನೆ ಆ ಮಹಾ ಕುರುಸೈನ್ಯದ ಬಲಭಾಗವನ್ನು ರಕ್ಷಿಸುತ್ತಿದ್ದರು.

ಅಶ್ವತ್ಥಾಮ, ಕೃಪಾಚಾರ್ಯರು ಮತ್ತು ಸಾತ್ವತವಂಶೀಯನಾದ ಕೃತವರ್ಮನೂ ತಮ್ಮ ಅಪಾರವಾದ ಸೇನೆಯೊಡನೆ ಕೌರವಮಹಾಸೇನೆಯ ಮಹಾವ್ಯೂಹದ ಹಿಂಭಾಗದಲ್ಲಿದ್ದರು. ಅವರ ಹಿಂಭಾಗದಲ್ಲಿ ಕೇತುಮಂತ, ವಸುದಾನ, ಕಾಶೀರಾಜನ ಮಗನಾದ ಅಭಿಭೂ ಎಂಬುವನು ಮತ್ತು ಇತರ ಅನೇಕದೇಶಗಳ ರಾಜರೂ ಸಸೈನ್ಯರಾಗಿ ವ್ಯೂಹದ ಹಿಂಭಾಗವನ್ನು ರಕ್ಷಿಸುತ್ತಿದ್ದರು.

ಮಹಾರಾಜ! ಅನಂತರ ನಿನ್ನ ಸೇನೆಯ ಸಮಸ್ತಸೈನಿಕರೂ ಹರ್ಷದಿಂದ ಉಲ್ಲಾಸಗೊಂಡವರಾಗಿ ಶಂಖಗಳನ್ನು ಊದಿದರು. ಸಿಂಹನಾದಗಳನ್ನೂ ಮಾಡಿದರು. (ಜಯಕಾರಮಾಡುತ್ತಾ ಗಟ್ಟಿಯಾಗಿ ಗರ್ಜಿಸಿದರು.)

ಪರಮಹೃಷ್ಟರಾಗಿದ್ದ ತನ್ನ ಸೈನಿಕರು ಮಾಡಿದ ಶಂಖನಾದವನ್ನೂ ಮತ್ತು ಸಿಂಹನಾದಗಳನ್ನೂ ಕೇಳಿ ವೃದ್ಧನಾದ ಕುರುಪಿತಾಮಹನಾದ ಭೀಷ್ಮನೂ ಸಹ ಗಟ್ಟಿಯಾಗಿ ಸಿಂಹನಾದವನ್ನು ಮಾಡಿದನು ಮತ್ತು ಪ್ರತಾಪವಂತನಾದ ಅವನು ಶಂಖವನ್ನೂ ಊದಿದನು. ಸೇನಾನಾಯಕನು ಸಿಂಹನಾದಮಾಡಿ ಶಂಖವನ್ನು ಊದಿದೊಡನೆಯೇ ಶಂಖ, ಭೇರಿ, ಪಣವ, ಢಕ್ಕೆ, ಮೃದಂಗ, ಆನಕ ಮೊದಲಾದ ವಾದ್ಯಘೋಷಗಳು ಮೊಳಗಿದುವು. ಆದರೆ ಆ ಎಲ್ಲ ವಾದ್ಯಘೋಷಗಳ ಸಮ್ಮಿಲನದಿಂದ ಕೇಳಿಬರುತ್ತಿದ್ದ ಶಬ್ದವು ಗದ್ದಲದ ಶಬ್ದದಂತೆಯೇ ಕೇಳಿಬರುತ್ತಿದ್ದಿತು.

ಅನಂತರ ಬಿಳಿಯದಾದ ಕುದುರೆಗಳಿಂದ ಯುಕ್ತವಾಗಿದ್ದ, ಅಗ್ನಿದತ್ತವಾಗಿದ್ದ ಮಹಾರಥದಲ್ಲಿ ಕುಳಿತಿದ್ದ ಭಗವಾನ್ ಶ್ರೀಕೃಷ್ಣ ಮತ್ತು ಅರ್ಜುನರು

ತಮ್ಮ ತಮ್ಮ ಶ್ರೇಷ್ಠವಾದ ಶಂಖಗಳನ್ನು ಊದಿದರು. ಪಾಂಚಜನ್ಯವೆಂಬ ಶಂಖವನ್ನು ಹೃಷೀಕೇಶನೂ, ದೇವದತ್ತವೆಂಬ ಶಂಖವನ್ನು ಧನಂಜಯನೂ ಊದಿದರು. ಅವರನ್ನು ಅನುಸರಿಸಿ ಭಯಂಕರಕರ್ಮನಾದ ವೃಕೋದರನು ಪೌಂಡ್ರವೆಂಬ ಮಹಾಶಂಖವನ್ನೂದಿದನು. ಕುಂತೀಪುತ್ರನಾದ ಯುಧಿಷ್ಠಿರನು ಅನಂತವಿಜಯವೆಂಬ ಶಂಖವನ್ನೂ, ಸುಘೋಷವೆಂಬ ಶಂಖವನ್ನು ನಕುಲನೂ, ಮಣಿಪುಷ್ಪಕವೆಂಬ ಶಂಖವನ್ನು ಸಹದೇವನೂ ಊದಿದರು.

ಕಾಶೀರಾಜ, ಶೈಬ್ಯ, ಮಹಾರಥಿಯಾದ ಶಿಖಂಡಿ, ಧೃಷ್ಟದ್ಯುಮ್ನ, ವಿರಾಟ, ಮಹಾರಥಿಯಾದ ಸಾತ್ಯಕಿ, ಪಾಂಚಾಲವೀರರು, ದ್ರೌಣಿ, ಮಹಾ ಧನುರ್ಧರರಾದ ದ್ರೌಪದಿಯ ಐವರು ಮಕ್ಕಳು–ಇವರೆಲ್ಲರೂ ತಮ್ಮಲ್ಲಿದ್ದ ದೊಡ್ಡ-ದೊಡ್ಡ ಶಂಖಗಳನ್ನು ಊದಿ ಸಿಂಹನಾದಗಳನ್ನೂ ಮಾಡಿದರು. ವೀರರಿಂದ ಮಾಡಲ್ಪಟ್ಟ ಆ ಮಹಾಘೋರವಾದ ಗರ್ಜನೆಯು ಆಕಾಶ ವನ್ನೂ–ಭೂಮಿಯನ್ನೂ ಶಬ್ದಮಯವನ್ನಾಗಿ ಮಾಡಿಬಿಟ್ಟಿತು. ಮಹಾರಾಜ! ಈ ರೀತಿಯಾಗಿ ಪ್ರಹೃಷ್ಟರಾದ ಕುರು-ಪಾಂಡವರು ಪರಸ್ಪರವಾಗಿ ಒಬ್ಬರು ಮತ್ತೊಬ್ಬರಿಗೆ ತಾಪವನ್ನುಂಟುಮಾಡುವ ಸಲುವಾಗಿ ಪುನಃ ಯುದ್ಧಕ್ಕೆ ಸಿದ್ಧರಾದರು.”

ಅನೆಯ ಅಧ್ಯಾಯವು ಮುಗಿಯಿತು.

೫೨ನೆಯ ಅಧ್ಯಾಯ ಭೀಷ್ಮವಧಪರ್ವ (ಮುಂದುವರಿದಿದೆ.)

## ಭೀಷ್ಮಾರ್ಜುನರ ಯುದ್ಧ

ಧೃತರಾಷ್ಟ್ರನು ಪ್ರಶ್ನಿಸುತ್ತಾನೆ :

“ಸಂಜಯ! ಈ ರೀತಿಯಲ್ಲಿ ನನ್ನವರೂ ಮತ್ತು ಪಾಂಡವರೂ ವ್ಯೂಹ-ಪ್ರತಿವ್ಯೂಹಗಳನ್ನು ರಚಿಸಿದನಂತರ ಬಾಣಪ್ರಹಾರದಲ್ಲಿ ನಿಪುಣರಾದ ಅವರು ಯಾವ ರೀತಿಯಲ್ಲಿ ಪರಸ್ಪರವಾಗಿ ಕಾದಾಡಿದರು ಎಂಬುದನ್ನು ಸವಿಸ್ತರವಾಗಿ ಹೇಳು.”

ಸಂಜಯನು ಹೇಳುತ್ತಾನೆ :

"ಮಹಾರಾಜ! ಎರಡು ಕಡೆಗಳಲ್ಲಿಯೂ ಸಮವಾಗಿ ವ್ಯೂಹ-ಪ್ರತಿ ವ್ಯೂಹವನ್ನು ರಚಿಸಿದನಂತರ ರಥಾದಿಗಳ ಮೇಲೆ ಸುಂದರವಾದ ಧ್ವಜಗಳು ಹಾರಾಡುತ್ತಿರಲಾಗಿ ಆ ಸೇನಾಸಮೂಹವು ಅಪಾರವಾದ ಸಮುದ್ರದಂತೆಯೇ ಕಾಣುತ್ತಿದ್ದಿತು. ಆ ಅಪಾರಸೈನ್ಯದ ಮಧ್ಯದಲ್ಲಿ ನಿನ್ನ ಮಗನಾದ ದುರ್ಯೋಧನನು ನಿಂತು ನಿನ್ನ ಕಡೆಯವರೆಲ್ಲರನ್ನೂ ಕುರಿತು–"ಕವಚಧಾರಿಗಳಾದ ಯೋಧರೇ! ಯುದ್ಧವನ್ನು ಆರಂಭಿಸಿರಿ"–ಎಂದು ಆಜ್ಞೆಮಾಡಿದನು.

ಮೇಲಕ್ಕೆ ಹಾರಿಸಲ್ಪಟ್ಟ ಧ್ವಜಗಳಿಂದ ಕೂಡಿದ್ದ ನಿನ್ನ ಕಡೆಯ ಆ ಎಲ್ಲ ಸೈನಿಕರೂ ಮನಸ್ಸನ್ನು ಕಲ್ಲುಮಾಡಿಕೊಂಡು ಅಥವಾ ಕ್ರೂರವಾಗಿ ಪರಿವರ್ತಿಸಿಕೊಂಡು ಪ್ರಾಣದ ಆಸೆಯನ್ನು ಸಂಪೂರ್ಣವಾಗಿ ತೊರೆದು ಪಾಂಡವರ ಮೇಲೆ ದಾಳಿಯನ್ನು ಪ್ರಾರಂಭಿಸಿದರು. ಮಹಾರಾಜ! ಅನಂತರ ಗದ್ದಲಮಯವಾದ, ರೋಮಾಂಚಕಾರಿಯಾದ, ರಥ-ಗಜಾಶ್ವ-ಪದಾತಿಗಳಿಂದ ಸಮ್ಮಿಶ್ರವಾದ ಯುದ್ಧವು ನಿನ್ನ ಕಡೆಯವರಿಗೂ ಮತ್ತು ಪಾಂಡವ ರಿಗೂ ನಡೆಯಿತು.

(ಸಮ್ಮಿಶ್ರಯುದ್ಧವೆಂದರೆ ರಥಿಯು–ರಥಿಯೊಡನೆ, ಪದಾತಿಯು–ಪದಾತಿಯೊಡನೆ, ಅಶ್ವಾರೋಹಿಯು–ಅಶ್ವಾರೋಹಿಯೊಡನೆ ಯುದ್ಧ ಮಾಡಬೇಕೆಂಬ ನಿಯಮವಿಲ್ಲದೇ ಯುದ್ಧಮಾಡುವುದು. ಇದನ್ನೇ ಸಂಜಯನು ವರ್ಣಿಸುತ್ತಾನೆ.)

ರಥಿಕರಿಂದ ಬಿಡಲ್ಪಡುತ್ತಿದ್ದ ಚಿನ್ನದ ರೆಕ್ಕೆಗಳನ್ನು ಹೊಂದಿದ್ದ, ಹೊಳಪಿನಿಂದ ಕೂಡಿದ್ದ, ಹರಿತವಾದ ಅಗ್ರಭಾಗಗಳಿಂದ ಕೂಡಿದ್ದ ಬಾಣ ಗಳು ಗಜಸೈನ್ಯಗಳ ಮೇಲೂ, ಅಶ್ವಸೈನ್ಯಗಳ ಮೇಲೂ ಬೀಳುತ್ತಿದ್ದುವು. ಈ ರೀತಿಯಾಗಿ ಚತುರಂಗಸಮ್ಮಿಶ್ರವಾದ ಯುದ್ಧವು ನಡೆಯುತ್ತಿರಲಾಗಿ, ಭೀಮಪರಾಕ್ರಮನಾದ, ಮಹಾಬಾಹುವಾದ, ವೃದ್ಧನಾದ, ಕುರುಪಿತಾಮಹನಾದ ಭೀಷ್ಮನು ಕವಚವನ್ನು ತೊಟ್ಟು ಧನುಸ್ಸನ್ನೆತ್ತಿಕೊಂಡು ಮುಂದೆ ಬಂದು ಅಭಿಮನ್ಯು, ಭೀಮಸೇನ, ಮಹಾರಥನಾದ ಸಾತ್ಯಕಿ, ಕೇಕಯರಾಜ, ವಿರಾಟ, ದ್ರುಪದನ ಮಗನಾದ ಧೃಷ್ಟದ್ಯುಮ್ನ, ಚೇದಿ ಮತ್ತು ಮತ್ಸ್ಯದೇಶಗಳ

ಯೋಧರ ಮೇಲೆ ಬಾಣಗಳ ಮಳೆಯನ್ನೇ ಸುರಿಸಿದನು. ಈ ರೀತಿಯಲ್ಲಿ ವೀರರ ಸಂಘರ್ಷವಾದೊಡನೆಯೇ ರಚಿಸಿದ್ದ ವ್ಯೂಹವೂ ಅಸ್ತವ್ಯಸ್ತವಾಯಿತು. ಎಲ್ಲ ಸೈನಿಕರೂ ಯುದ್ಧದ ನಿಯಮಗಳನ್ನು ಅತಿಕ್ರಮಿಸಿದರು. ಕುದುರೆಸವಾರರು, ಧ್ವಜವುಳ್ಳವರು ಅಥವಾ ರಥಿಕರು ಸತ್ತುಹೋದರು. ಉತ್ತಮೋತ್ತಮವಾದ ಕುದುರೆಗಳು ಅಪಾರಸಂಖ್ಯೆಯಲ್ಲಿ ಮರಣವನ್ನಪ್ಪಿದುವು. ಪಾಂಡವರ ರಥಸೈನ್ಯವೂ ದಿಕ್ಕಾಪಾಲಾಗಿ ಓಡಿಹೋಯಿತು.

ನರವ್ಯಾಘ್ರನಾದ ಅರ್ಜುನನು ಮಹಾರಥನಾದ ಭೀಷ್ಮನ ಸಾಹಸವನ್ನು ನೋಡಿ ಪರಮಕ್ರುದ್ಧನಾಗಿ–'ಪಿತಾಮಹನಿರುವಲ್ಲಿಗೆ ನಡೆ'–ಎಂದು ಸಾರಥಿಯಾದ ವಾರ್ಷ್ಣೇಯನೊಡನೆ ಹೇಳಿದನು.

"ಕೃಷ್ಣ! ಸುಸಂಕ್ರುದ್ಧನಾದ, ದುರ್ಯೋಧನನಿಗೆ ಹಿತವನ್ನುಂಟುಮಾಡುವುದರಲ್ಲಿಯೇ ನಿರತನಾಗಿರುವ ಈ ಭೀಷ್ಮನು ನಮ್ಮ ಸೈನ್ಯವನ್ನು ನಿರ್ನಾಮಮಾಡಿಬಿಡುತ್ತಾನೆಂಬುದು ಸ್ಪಷ್ಟವಾಗಿ ಕಾಣುತ್ತಿದೆ. ಜನಾರ್ದನ! ದುರ್ಯೋಧನಪುರಃಸರರಾದ ದ್ರೋಣ-ಕೃಪ-ಶಲ್ಯ-ವಿಕರ್ಣರು ಧೃತರಾಷ್ಟ್ರನ ಮಕ್ಕಳೊಡನೆ ಸೇರಿ ದೃಢಧನ್ವನಾದ ಭೀಷ್ಮನಿಂದ ರಕ್ಷಿತರಾಗಿ ಪಾಂಚಾಲರನ್ನು ಸಂಪೂರ್ಣವಾಗಿ ನಾಶಮಾಡಿಬಿಡುತ್ತಾರೆ. ನಮ್ಮ ಸೈನ್ಯದ ರಕ್ಷಣೆಯ ಕಾರಣದಿಂದಾಗಿ ನಾನು ಭೀಷ್ಮನನ್ನು ಸಂಹರಿಸುತ್ತೇನೆ."

ಅರ್ಜುನನ ಮಾತಿಗೆ ಉತ್ತರವಾಗಿ ಶ್ರೀಕೃಷ್ಣನು ಹೇಳಿದನು :

"ಪ್ರಯತ್ನಿಸು, ಧನಂಜಯ! ನಾನು ನಿನ್ನನ್ನೀಗಲೇ ಪಿತಾಮಹನ ರಥದ ಸಮೀಪಕ್ಕೆ ಕರೆದೊಯ್ಯುತ್ತೇನೆ."

ಜನೇಶ್ವರ! ಶೌರಿಯು ಅರ್ಜುನನಿಗೆ ಇಷ್ಟು ಹೇಳಿ ಲೋಕವಿಖ್ಯಾತವಾದ ಅರ್ಜುನನ ರಥವನ್ನು ಭೀಷ್ಮನ ರಥವಿದ್ದೆಡೆಗೆ ದೌಡಾಯಿಸಿದನು.

ಅರ್ಜುನನ ರಥದ ಮೇಲೆ ಅನೇಕಪತಾಕೆಗಳು ಹಾರಾಡುತ್ತಿದ್ದುವು. ಬೆಳ್ಳಕ್ಕಿಯ ಬಣ್ಣದಂತೆ ಅಚ್ಚ ಬಿಳಿಯ ಬಣ್ಣವಿದ್ದ ಕುದುರೆಗಳನ್ನು ಆ ರಥಕ್ಕೆ

ಕಟ್ಟಿದ್ದರು. ಬಹುಭಯಂಕರವಾಗಿ ಗರ್ಜನೆಮಾಡುತ್ತಿದ್ದ ವಾನರನಿರುವ ಧ್ವಜವು ಆ ರಥಕ್ಕಿದ್ದಿತು. ಅಮಿತವಾದ ಪ್ರಕಾಶದಿಂದ ಕೂಡಿದ್ದ ಆ ರಥವು ಬರುತ್ತಿರುವಾಗ ಮೇಘದಂತೆಯೇ ಶಬ್ದಮಾಡುತ್ತಿದ್ದಿತು. ಅಂತಹ ಪರಮಾದ್ಭುತವಾದ ರಥದಲ್ಲಿ ಕುಳಿತು ಸುಹೃದರಿಗೆ ಹರ್ಷವನ್ನುಂಟುಮಾಡುವ, ಶರಣಾಗತರಿಗೆ ರಕ್ಷಣೆಯನ್ನು ನೀಡುವ ಸ್ವಭಾವವುಳ್ಳ ಅರ್ಜುನನು–ಹಾದಿಯಲ್ಲಿ ಸಿಕ್ಕಿದ ಕೌರವಸೇನೆಯನ್ನೂ ಮತ್ತು ಶೂರರನ್ನೂ ಸಂಹಾರಮಾಡುತ್ತಾ ಭೀಷ್ಮನ ರಥದ ಬಳಿಗೆ ಸಾಗಿದನು. ಮದೋದಕವನ್ನು ಸುರಿಸುತ್ತಾ ಮಹಾವೇಗದಿಂದ ಮೇಲೆ ಬೀಳುವ ಆನೆಯಂತೆಯೇ ಕಾಣುತ್ತಿದ್ದ, ನಾನಾಬಗೆಯ ಬಾಣಗಳನ್ನು ಬಿಡುತ್ತಾ ಶೂರರನ್ನು ಭಯಪಡಿಸುತ್ತಲೂ ಮತ್ತು ಮರ್ದನ ಮಾಡುತ್ತಲೂ ಮಹಾವೇಗದಿಂದ ಬರುತ್ತಿದ್ದ ಅರ್ಜುನನನ್ನು, ಸೈಂಧವನೇ ಮೊದಲಾದವರಿಂದಲೂ, ಪೂರ್ವದೇಶೀಯರಾಜರಿಂದಲೂ, ಸೌವೀರ-ಕೇಕಯಯೋಧರಿಂದಲೂ ರಕ್ಷಿತನಾಗಿದ್ದ ಶಾಂತನುವಿನ ಮಗನಾದ ಭೀಷ್ಮನು ಎದುರಿಸಿ ನಿಂತನು.

ಮಹಾರಾಜ! ನಿಶ್ಚಯವಾಗಿ ಹೇಳುವುದಾದರೆ ಕುರುಪಿತಾಮಹನಾದ ಭೀಷ್ಮ, ಆಚಾರ್ಯರಾದ ದ್ರೋಣರು, ಮೂರನೆಯವನಾಗಿ ಸೂತಪುತ್ರನಾದ ಕರ್ಣ–ಇವರನ್ನು ಬಿಟ್ಟು ಬೇರೆ ಯಾರು ತಾನೇ ಗಾಂಡೀವಧನುರ್ಧರನಾದ ಅರ್ಜುನನನ್ನು ತಡೆದು ಎದುರಿಸಬಲ್ಲರು? ಮಹಾರಾಜ! ಅನಂತರ ಸರ್ವಲೋಕಗಳಲ್ಲಿಯೂ ಮಹಾರಥನೆಂದು ವಿಖ್ಯಾತನಾಗಿರುವ ಭೀಷ್ಮನು ಎಪ್ಪತ್ತೇಳು ಬಾಣಗಳಿಂದ ಅರ್ಜುನನನ್ನು ಪ್ರಹರಿಸಿದನು. ದ್ರೋಣರು ಇಪ್ಪತ್ತೈದು ಬಾಣಗಳಿಂದಲೂ, ಕೃಪರು ಐವತ್ತು ಬಾಣಗಳಿಂದಲೂ, ದುರ್ಯೋಧನನು ಅರುವತ್ತುನಾಲ್ಕು ಬಾಣಗಳಿಂದಲೂ, ಶಲ್ಯನು ಒಂಬತ್ತು ಬಾಣಗಳಿಂದಲೂ ಶಕುನಿಯು ಐದು ಬಾಣಗಳಿಂದಲೂ, ವಿಕರ್ಣನು ಹತ್ತು ಭಲ್ಲಗಳಿಂದಲೂ ಅರ್ಜುನನನ್ನು ಏಕಕಾಲದಲ್ಲಿ ಪ್ರಹರಿಸಿದರು. ಮಹಾಧನುಷ್ಮಂತನಾದ ಪಾರ್ಥನು ತನ್ನ ಸುತ್ತಲೂ ಇದ್ದ ವೀರಯೋಧರಿಂದ ಏಕಕಾಲದಲ್ಲಿ ಪ್ರಹತನಾದರೂ ಸ್ವಲ್ಪವಾದರೂ ವ್ಯಥೆಪಡಲಿಲ್ಲ. (ವಿಚಲಿತನಾಗಲಿಲ್ಲ.) ಪರ್ವತಕ್ಕೆ ಬಾಣಗಳನ್ನು ಬಿಟ್ಟರೆ ಯಾವ ಪರಿಣಾಮವಾಗುವುದೋ ಅದೇ

ಪರಿಣಾಮವೇ ಅರ್ಜುನನ ಮೇಲೆ ಬಾಣಗಳನ್ನು ಬಿಟ್ಟದ್ದರಿಂದಲೂ ಆಯಿತು. ಅರ್ಥಾತ್ ಅವರು ಬಿಟ್ಟ ಬಾಣಗಳೆಲ್ಲವೂ ನಿಷ್ಪ್ರಯೋಜಕಗಳಾದುವು.

ನರವ್ಯಾಘ್ರನಾದ, ಅಮೇಯಾತ್ಮನಾದ ಕಿರೀಟಿಯು, ತನ್ನ ಬಳಿಗೆ ಬಂದ ಹಲವಾರು ಮಂದಿಯ ನೂರಾರು ಬಾಣಗಳನ್ನು ತಡೆದು ಭೀಷ್ಮನನ್ನು ಇಪ್ಪತ್ತೈದು ಬಾಣಗಳಿಂದಲೂ, ಕೃಪರನ್ನು ಒಂಬತ್ತು ಬಾಣಗಳಿಂದಲೂ, ದ್ರೋಣರನ್ನು ಆರು ಬಾಣಗಳಿಂದಲೂ, ವಿಕರ್ಣನನ್ನು ಮೂರು ಬಾಣ ಗಳಿಂದಲೂ, ಶಲ್ಯನನ್ನು ಮೂರು ಬಾಣಗಳಿಂದಲೂ ದುರ್ಯೋಧನನನ್ನು ಐದು ಬಾಣಗಳಿಂದಲೂ ಪ್ರಹರಿಸಿದನು. ಆ ವೇಳೆಗೆ ಸಾತ್ಯಕಿ, ವಿರಾಟ, ದ್ರುಪದನ ಮಗ ಧೃಷ್ಟದ್ಯುಮ್ನ, ದ್ರೌಪದಿಯ ಐವರು ಮಕ್ಕಳು ಮತ್ತು ಅಭಿಮನ್ಯು–ಇವರೆಲ್ಲರೂ ಅರ್ಜುನನ ಬಳಿಗೆ ಬಂದು ರಕ್ಷಣೆಗಾಗಿ ಅವನನ್ನು ಸುತ್ತುವರಿದು ನಿಂತರು. ಭೀಷ್ಮನಿಗೆ ಪ್ರಿಯವನ್ನುಂಟುಮಾಡುವುದರಲ್ಲಿಯೇ ನಿರತರಾಗಿದ್ದ, ಭೀಷ್ಮನ ರಕ್ಷಕರಾಗಿದ್ದ, ಮಹಾಧನುಷ್ಮಂತರಾದ ದ್ರೋಣ ರನ್ನು ಧೃಷ್ಟದ್ಯುಮ್ನನು ಸೋಮಕರೊಡನೆ ಸೇರಿ ಎದುರಿಸಿದನು. ರಥಿಕರಲ್ಲಿ ಶ್ರೇಷ್ಠನಾದ ಭೀಷ್ಮನು ಅರ್ಜುನನನ್ನು ಬಹಳ ಚೂಪಾಗಿದ್ದ ಎಂಬತ್ತು ಬಾಣಗಳಿಂದ ಪ್ರಹರಿಸಿದನು. ಅದನ್ನು ಕಂಡೊಡನೆಯೇ ನಿನ್ನ ಕಡೆಯ ಯೋಧರೆಲ್ಲರೂ 'ಭೀಷ್ಮನಿಗೆ ಜಯವಾಗಲಿ' ಎಂದು ಕೂಗಿಕೊಂಡರು. ಆ ಎಲ್ಲ ಕೌರವಯೋಧರೂ ಮಾಡಿದ ಹರ್ಷನಿನಾದವನ್ನು ಕೇಳಿ ಪ್ರತಾಪಿ ಯಾದ, ಪುರುಷಸಿಂಹನಾದ ಅರ್ಜುನನು ಶತ್ರುಪಕ್ಷದ ಸೇನೆಯ ಮಧ್ಯಭಾಗಕ್ಕೆ ಪ್ರವೇಶಿಸಿದನು. ಅಲ್ಲಿದ್ದ ಮಹಾರಥರನ್ನೆಲ್ಲಾ ಲಕ್ಷ್ಯವನ್ನಾಗಿ ಮಾಡಿಕೊಂಡು, ಅವರೆಲ್ಲರನ್ನೂ ನಿಶಿತವಾದ ಬಾಣಗಳಿಂದ ಪೀಡಿಸುತ್ತಾ ತನ್ನ ಧನುಸ್ಸಿನಿಂದ ಆಟವಾಡತೊಡಗಿದನು. ಯುದ್ಧದಲ್ಲಿ ತನ್ನ ಸೈನ್ಯವು ಮತ್ತು ಮಹಾರಥರು ಪಾರ್ಥನಿಂದ ಪೀಡಿತರಾಗುತ್ತಿರುವುದನ್ನು ಕಂಡು ದುರ್ಯೋಧನನು ಭೀಷ್ಮನಿಗೆ ಹೇಳಿದನು :

ಏಷ ಪಾಣ್ಡುಸುತಸ್ತಾತ ಕೃಷ್ಣೇನ ಸಹಿತೋ ಬಲೀ ।
ಯತತಾಂ ಸರ್ವಸೈನ್ಯಾನಾಂ ಮೂಲಂ ನಃ ಪರಿಕೃನ್ತತಿ ।
ತ್ವಯಿ ಜೀವತಿ ಗಾಙ್ಗೇಯೇ ದ್ರೋಣೇ ಚ ರಥಿನಾಂ ವರೇ ॥೩೬॥

"ಮಹಾಬಲಿಷ್ಠನಾದ ಪಾಂಡುವಿನ ಮಗನಾದ ಅರ್ಜುನನು ಕೃಷ್ಣನೊಡಗೂಡಿ–ನಮ್ಮ ಸೈನಿಕರೆಲ್ಲರೂ ಸ್ವರಕ್ಷಣೆಗಾಗಿ ಸತತವಾಗಿ ಪ್ರಯತ್ನ ನಡೆಸುತ್ತಿದ್ದರೂ ಸಹ–ನಮ್ಮ ಸೈನ್ಯದ ಮೂಲೋತ್ಪಾಟನೆಯನ್ನೇ ಮಾಡುತ್ತಿದ್ದಾನೆ. ಗಾಂಗೇಯನಾದ ಅಪ್ರತಿಹತರಥನಾದ ನೀನು ಮತ್ತು ರಥಿಗಳಲ್ಲಿ ಶ್ರೇಷ್ಠರಾದ ದ್ರೋಣರು ಇಬ್ಬರೂ ಜೀವಿಸಿರುವ ಸಮಯದಲ್ಲಿಯೇ ಈ ಪಾರ್ಥನ ಉಪಟಳದಿಂದಾಗಿ ನಮ್ಮ ಸೈನಿಕರಿಗೆ ಉಳಿಗಾಲವೇ ಇಲ್ಲವಾಗಿದೆ.

(ಇಷ್ಟು ಮಾತ್ರ ದುರ್ಯೋಧನನು ಹೇಳಿಕೊಂಡಿದ್ದರೆ ಚೆನ್ನಾಗಿತ್ತು. ಆದರೆ ಅವನ ಸ್ವಭಾವವೇ ಅಂತಹುದಲ್ಲ. ಚುಚ್ಚುಮಾತುಗಳಿಂದ ಹಿರಿಯರನ್ನು ಸಂಕಟಪಡಿಸುವುದೇ ಅವನ ಸ್ವಭಾವ. ಅಂತೆಯೇ ಅವನು ಮುಂದಿನ ಈ ಮಾತನ್ನೂ ಹೇಳಿದನು : )

**ತ್ವತ್ಕೃತೇ ಚೈವ ಕರ್ಣೋಽಪಿ ನ್ಯಸ್ತಶಸ್ತ್ರೋ ವಿಶಾಮ್ಪತೇ ।**
**ನ ಯುಧ್ಯತಿ ರಣೇ ಪಾರ್ಥಂ ಹಿತಕಾಮಃ ಸದಾ ಮಮ ।**
**ಸ ತಥಾ ಕುರು ಗಾಙ್ಗೇಯ ಯಥಾ ಹನ್ಯೇತ ಫಾಲ್ಗುನಃ ॥೩೭॥**

ಪ್ರಜಾನಾಥ! ನಿನಗೇ ತಿಳಿದಿರುವಂತೆ ನಿನ್ನ ಸಲುವಾಗಿಯೇ ಕರ್ಣನು ಶಸ್ತ್ರಾಸ್ತ್ರಗಳನ್ನು ಕೆಳಗಿಟ್ಟುಬಿಟ್ಟನು. ನೀನು ಬದುಕಿರುವವರೆಗೂ ಅವನು ಯುದ್ಧಮಾಡುವಂತೆಯೂ ಇಲ್ಲ. ನಿನ್ನ ಸಲುವಾಗಿಯೇ ಅವನು ಮಾಡಿದ ಪ್ರತಿಜ್ಞೆಯಿದು. ಅವನು ನನ್ನ ಹಿತಕಾಮನು. ನನ್ನ ಹಿತವನ್ನೇ ಯಾವಾಗಲೂ ಬಯಸತಕ್ಕವನು. ನನಗಾಗಿ ಪ್ರಾಣವನ್ನಾದರೂ ಬಿಡತಕ್ಕವನು. ಆದರೂ ಅವನೀಗ ನಿರುಪಾಯನಾಗಿದ್ದಾನೆ. (ಆದುದರಿಂದ ಈಗ ಪಾರ್ಥನೆಂಬ ಅಗ್ನಿಯಿಂದ ನಮ್ಮನ್ನು ಉದ್ಧರಿಸುವ ಭಾರ ನಿನ್ನದೇ ಆಗಿದೆ.) ಅರ್ಜುನನ ಸಂಹಾರವಾಗಿಬಿಡಬೇಕು. ಹಾಗೆ ನೀನು ಪ್ರಯತ್ನಿಸು ಪಿತಾಮಹ!"

(ನಿಶ್ಚಯವಾಗಿಯೂ ದುರ್ಯೋಧನನ ಚುಚ್ಚುವ ಮಾತನ್ನು ಕೇಳಿ ಭೀಷ್ಮನಿಗೆ ಬಹಳ ಬೇಸರವೇ ಆಯಿತು. ಆದರೂ ಮಾಡುವುದೇನು ? )

ಸಂಜಯನು ಧೃತರಾಷ್ಟ್ರನಿಗೆ ಹೇಳುತ್ತಾನೆ :

ಮಹಾರಾಜ! ದುರ್ಯೋಧನನು ಹೀಗೆಂದು ಹೇಳಿದೊಡನೆಯೇ ನಿನ್ನ ತಂದೆಯಾದ ದೇವವ್ರತನು 'ಧಿಕ್ ಕ್ಷಾತ್ರಂ ಧರ್ಮಂ' 'ಕ್ಷಾತ್ರಧರ್ಮಕ್ಕೆ ಧಿಕ್ಕಾರವಿರಲಿ'–ಎಂದು ಹೇಳುತ್ತಾ ಪಾರ್ಥನ ರಥವಿದ್ದೆಡೆಗೆ ಧಾವಿಸಿದನು.

ಪಾರ್ಥ-ಭೀಷ್ಮರಿಬ್ಬರೂ ಶ್ವೇತಹಯರೇ ಆಗಿದ್ದರು. ಇಬ್ಬರ ರಥಗಳಿಗೂ ಬಿಳಿಯ ಕುದುರೆಗಳನ್ನೇ ಕಟ್ಟಿದ್ದರು. ಅಪ್ರತಿಹತರಾದ ಸಾಹಸಿಗಳಿಬ್ಬರೂ ಸಂಘರ್ಷಣೆಗೆ ಸಿದ್ಧರಾಗಿ ನಿಂತಿರುವುದನ್ನು ಕಂಡು ರಾಜರೆಲ್ಲರೂ ಒಡನೆಯೇ ಸಿಂಹನಾದಗಳನ್ನು ಮಾಡಿದರು. ಶಂಖಗಳನ್ನೂ ಊದಿದರು. ಅಶ್ವತ್ಥಾಮ, ದುರ್ಯೋಧನ, ನಿನ್ನ ಮಗನಾದ ವಿಕರ್ಣ–ಇವರೆಲ್ಲರೂ ಭೀಷ್ಮನನ್ನು ಸುತ್ತುಗಟ್ಟಿ ಅವನನ್ನು ರಕ್ಷಿಸುತ್ತಾ ಯುದ್ಧಕ್ಕೆ ಸಿದ್ಧರಾಗಿ ನಿಂತರು. ಅದೇ ರೀತಿಯಲ್ಲಿ ಎಲ್ಲ ಪಾಂಡವರೂ ಧನಂಜಯನನ್ನು ಸುತ್ತುವರಿದು ನಿಂತು ಅವನ ರಕ್ಷಣೆಯಲ್ಲಿ ತೊಡಗಿ ದೊಡ್ಡ ಯುದ್ಧಕ್ಕೆ ಸಿದ್ಧರಾದರು. ಅನಂತರ ಯುದ್ಧವು ಪುನಃ ಪ್ರಾರಂಭವಾಯಿತು.

ಪುನಃ ಪ್ರಾರಂಭವಾದ ಆ ಯುದ್ಧದಲ್ಲಿ ಗಾಂಗೇಯನು ಒಂಬತ್ತು ಬಾಣ ಗಳಿಂದ ಅರ್ಜುನನನ್ನು ಬಾಧೆಪಡಿಸಿದನು. ಅದಕ್ಕೆ ಪ್ರತಿಯಾಗಿ ಅರ್ಜುನನು ಮರ್ಮಭೇದಿಗಳಾದ ಹತ್ತು ಬಾಣಗಳಿಂದ ಭೀಷ್ಮನನ್ನು ಪ್ರಹರಿಸಿದನು. ಬಳಿಕ ಸಮರಶ್ಲಾಘಿಯಾದ ಅರ್ಜುನನು ಸುಪ್ರಯುಕ್ತವಾದ (ಚೆನ್ನಾಗಿ ಗುರಿ ಯಿಟ್ಟು ಹೊಡೆದ) ಸಾವಿರ ಬಾಣಗಳಿಂದ ಭೀಷ್ಮನನ್ನು ನಾಲ್ಕು ದಿಕ್ಕು ಗಳಿಂದಲೂ ಮುಚ್ಚಿಬಿಟ್ಟನು. ಅದಕ್ಕೆ ಪ್ರತಿಯಾಗಿ ಭೀಷ್ಮನೂ ಸಹ ಬಾಣ ಗಳನ್ನು ಬಿಟ್ಟು ಅರ್ಜುನನು ಬಾಣಗಳ ಮೂಲಕವಾಗಿ ನಿರ್ಮಿಸಿದ ಆ ಶರ ಜಾಲವನ್ನು ನಿರಸನಗೊಳಿಸಿದನು. ಆ ಇಬ್ಬರು ಮಹಾರಥರಲ್ಲಿಯೂ ಒಂದು ವಿಶೇಷಗುಣವಿದ್ದಿತು. ಒಬ್ಬರ ಮೇಲೆ ಮತ್ತೊಬ್ಬರು ಕೋಪಗೊಂಡಿರಲಿಲ್ಲ. ಪರಮಹೃಷ್ಟರಾಗಿಯೇ ಇಬ್ಬರೂ ಯುದ್ಧಮಾಡುತ್ತಿದ್ದರು. ಇಬ್ಬರೂ ಸಮರ ಶ್ಲಾಘಿಗಳಾಗಿದ್ದರು. ಒಬ್ಬರ ಬಾಣಪ್ರಯೋಗವನ್ನು ಮತ್ತೊಬ್ಬರು ಪ್ರಶಂಸಿ ಸುತ್ತಿದ್ದರು. ಒಬ್ಬರು ಪ್ರಹರಿಸಿದರೆ ಮತ್ತೊಬ್ಬರು ಪ್ರಹರಿಸದೇ ಇರು ತ್ತಿರಲಿಲ್ಲ. ಈ ರೀತಿಯಾಗಿ ತಾರತಮ್ಯವಿಲ್ಲದ, ದ್ವೇಷಭಾವನೆಗೆ ಅವಕಾಶವೇ ಇಲ್ಲದ ರೀತಿಯಲ್ಲಿ ಇಬ್ಬರೂ ಸರಿಸಮವಾಗಿ ಯುದ್ಧಮಾಡುತ್ತಿದ್ದರು. ಅದ

ರಿಂದಾಗಿ ಅರ್ಜುನನು ಪ್ರಯೋಗಿಸಿದ ಬಾಣಗಳ ಬಲೆಗಳು (ಸಮೂಹಗಳು) ಗಾಂಗೇಯನು ಬಿಟ್ಟ ಬಾಣಗಳಿಂದ ಕತ್ತರಿಸಲ್ಪಟ್ಟು ಭೂಮಿಯ ಮೇಲೆ ಎಲ್ಲ ಕಡೆಗಳಲ್ಲೂ ಬೀಳುತ್ತಿದ್ದುವು. ಪುನಃ ಅರ್ಜುನನು ಇಪ್ಪತ್ತೈದು ಬಾಣಗಳಿಂದ ಭೀಷ್ಮನನ್ನು ಪೀಡಿಸಿದನು. ಅದಕ್ಕೆ ಪ್ರತಿಯಾಗಿ ಭೀಷ್ಮನೂ ಸಹ ಅರ್ಜುನನನ್ನು ನಿಶಿತವಾದ ಬಾಣಗಳಿಂದ ಪ್ರಹರಿಸಿದನು.

ಮಹಾಬಲಿಷ್ಠರಾದ, ಶತ್ರುಗಳನ್ನು ದಮನಮಾಡುವ ಭೀಷ್ಮಾರ್ಜುನರು ಪರಸ್ಪರವಾಗಿ ಕುದುರೆಗಳನ್ನು ಪ್ರಹರಿಸುತ್ತಿದ್ದರು. ಧ್ವಜಗಳನ್ನು ಕತ್ತರಿಸುತ್ತಿದ್ದರು. ರಥದ ಈಷಾದಂಡವನ್ನು ಕತ್ತರಿಸುತ್ತಿದ್ದರು. ರಥ ಚಕ್ರಗಳನ್ನು ಧ್ವಂಸಮಾಡುತ್ತಿದ್ದರು. ಈ ರೀತಿಯಾಗಿ ಇಬ್ಬರೂ ಯುದ್ಧವೆಂಬ ವ್ಯಾಜದಲ್ಲಿ ಕ್ರೀಡಿಸುತ್ತಿದ್ದರು. ಆದರೆ ಅಂತಹ ಸಾಮರಸ್ಯದ ಯುದ್ಧವು ಹೆಚ್ಚುಹೊತ್ತು ನಡೆಯಲಿಲ್ಲ. ಭೀಷ್ಮನಿಗೆ ದುರ್ಯೋಧನನ ಮಾತನ್ನು ನೆನೆದು ಕೋಪವು ಉಲ್ಬಣಿಸಿತು. ಬಾಣಗಳಿಂದ ಶತ್ರುಗಳನ್ನು ಪ್ರಹರಿಸುವವರಲ್ಲಿ ಪರಮಶ್ರೇಷ್ಠನಾದ ಭೀಷ್ಮನು ಪರಮಕ್ರುದ್ಧನಾಗಿ ಅರ್ಜುನನ ಸಾರಥ್ಯಮಾಡುತ್ತಿದ್ದ ವಾಸುದೇವನ ಎದೆಗೆ ಗುರಿಯಿಟ್ಟು ಮೂರು ಬಾಣಗಳಿಂದ ಪ್ರಹರಿಸಿದನು. ಭೀಷ್ಮನ ಧನುಸ್ಸಿನಿಂದ ಚ್ಯುತವಾದ ಆ ಮೂರು ಬಾಣಗಳಿಂದ ಪ್ರಹತನಾದ ಮಧುಸೂದನನು ರಕ್ತಾಚ್ಛನ್ನನಾಗಿ ಹೂಗಳಿಂದ ಕೂಡಿದ ಮುತ್ತುಗದ ಮರದಂತೆಯೇ ಪ್ರಕಾಶಿಸಿದನು. ತನ್ನ ಸ್ವಾಮಿಯಾದ ಮಾಧವನು ಭೀಷ್ಮನ ಬಾಣಗಳಿಂದ ಪೆಟ್ಟುತಿಂದುದನ್ನು ನೋಡಿದ ಅರ್ಜುನನಿಗೆ ಅಪಾರವಾದ ಕೋಪವು ಆವಿರ್ಭವಿಸಿತು. ಒಡನೆಯೇ ಅರ್ಜುನನು ಚೂಪಾದ ಬಾಣಗಳಿಂದ ಕುರುವೃದ್ಧನಾದ ಭೀಷ್ಮನ ಸಾರಥಿಯನ್ನು ಬಹು ವಾಗಿ ಗಾಯಗೊಳಿಸಿದನು.

ಆ ಮಹಾಯುದ್ಧದಲ್ಲಿ ಒಬ್ಬರು ಮತ್ತೊಬ್ಬರನ್ನು ವಧಿಸಬೇಕೆಂದೇ ನಿಶ್ಚಯಿಸಿ ಅದಕ್ಕಾಗಿ ಪೂರ್ಣಪ್ರಯತ್ನವನ್ನೇ ನಡೆಸಿದರು. ಆದರೆ ಅದನ್ನು ಕಾರ್ಯರೂಪಕ್ಕೆ ತರಲು ಯಾರೊಬ್ಬರೂ ಸಮರ್ಥರಾಗಲೇ ಇಲ್ಲ. ಭೀಷ್ಮನನ್ನು ಕೊಲ್ಲಲು ಅರ್ಜುನನಿಗೂ ಸಾಧ್ಯವಾಗಲಿಲ್ಲ ; ಅರ್ಜುನನ್ನು ಕೊಲ್ಲಲು ಭೀಷ್ಮನಿಗೂ ಸಾಧ್ಯವಾಗಲಿಲ್ಲ. ದುರ್ಯೋಧನನ ಆಶಯವು ಕೇವಲ ಆಶಯ

ವಾಗಿಯೇ ಉಳಿಯಿತು. ನಿಶ್ಚಯವಾಗಿಯೂ ಭೀಷ್ಮ-ಪಾರ್ಥರ ಯುದ್ಧವು ಒಂದು ಧನುರ್ವಿದ್ಯಾಪ್ರದರ್ಶನವೇ ಆಗಿದ್ದಿತು. ಆ ಮಹಾರಥರ ಸಾರಥಿಗಳೂ ಸಾಮಾನ್ಯರೇನಲ್ಲ. ಪಾರ್ಥನಿಗಂತೂ ಸಾಕ್ಷಾತ್ ಶ್ರೀಕೃಷ್ಣನೇ ಸಾರಥಿಯಾಗಿದ್ದನು. ಸಾರಥಿಗಳೊಮ್ಮೆ ಚಿತ್ರ-ವಿಚಿತ್ರವಾಗಿ, ಮಂಡಲಾಕಾರವಾಗಿ ರಥಗಳನ್ನು ನಡೆಸುತ್ತಿದ್ದರು ; ಒಮ್ಮೆ ಹಿಂದಕ್ಕೆ ಹೋಗುತ್ತಿದ್ದರು ; ಮತ್ತೊಮ್ಮೆ ಮುಂದಕ್ಕೆ ಬರುತ್ತಿದ್ದರು ; ಕೆಲವೊಮ್ಮೆ ರಭಸದಿಂದ ಹೋಗುವಂತೆ ತೋರ್ಪಡಿಸಿ ಹಠಾತ್ತನೆ ನಿಂತುಬಿಡುತ್ತಿದ್ದರು. ಇದು ಸೂತರ ಸಾಮರ್ಥ್ಯ ಮತ್ತು ಕುದುರೆಗಳನ್ನು ನಡೆಸುವ ಕೌಶಲ. ರಥದ ನಡಿಗೆಗೆ ಅನುಗುಣವಾಗಿಯೇ ಭೀಷ್ಮ-ಪಾರ್ಥರು ಬಾಣಗಳನ್ನು ಬಿಡುತ್ತಿದ್ದರು.

ಮಹಾರಾಜ! ಒಬ್ಬರು ಮತ್ತೊಬ್ಬರನ್ನು ಬಾಣಗಳಿಂದ ಪ್ರಹರಿಸುವಾಗ ಛಿದ್ರಾನ್ವೇಷಣೆಮಾಡುತ್ತಿದ್ದರು. ಅದಕ್ಕಾಗಿಯೇ ಇಬ್ಬರೂ ತರ್ಕಿಸುತ್ತಿದ್ದರು. ಇಬ್ಬರಿಗೂ ಮಹಾಸ್ತ್ರಗಳು ತಿಳಿದಿತ್ತಾದ್ದರಿಂದ ಯಾವ ಮಹಾಸ್ತ್ರವನ್ನು ಪ್ರಯೋಗಿಸಿದರೆ ಎದುರಾಳಿಯು ಸ್ವಲ್ಪ ತತ್ತರಿಸಬಹುದು? ಎದುರಾಳಿಗೆ ತಡೆಯಲು ಸಾಧ್ಯವಾಗದೇ ಇರುವ ಅಸ್ತ್ರವು ಯಾವುದು? ಎದುರಾಳಿಯನ್ನು ಹೇಗೆ ಮೋಸಪಡಿಸಬಹುದು? ಎದುರಾಳಿಗೆ ತನ್ನ ಕೈಚಳಕವನ್ನು ಹೇಗೆ ತೋರಿಸಬೇಕು?–ಈ ವಿಷಯಗಳನ್ನೇ ತರ್ಕಿಸುತ್ತಾ ಅವರಿಬ್ಬರೂ ಬಾಣಪ್ರಯೋಗವನ್ನು ಮಾಡುತ್ತಿದ್ದರು. ಛಿದ್ರಾನ್ವೇಷಣೆಯನ್ನು ಮಾಡದೇ, ಶತ್ರುವಿನ ದೌರ್ಬಲ್ಯವು ಎಲ್ಲಿದೆ–ಎಂಬುದನ್ನು ಅರಿತುಕೊಳ್ಳದೇ ಅಥವಾ ಅವನನ್ನು ಮೋಸಪಡಿಸದೇ ಇಬ್ಬರಲ್ಲಿ ಯಾರೊಬ್ಬರಿಗೂ ಯುದ್ಧದಲ್ಲಿ ಗೆಲ್ಲುವ ಸಾಧ್ಯತೆಯೇ ಇರಲಿಲ್ಲ. ಆದುದರಿಂದ ಪರಸ್ಪರವಿಜಯಕ್ಕಾಗಿ ಅಥವಾ ಪರಸ್ಪರವಧೆಗಾಗಿ ಪ್ರತಿಕ್ಷಣದಲ್ಲಿಯೂ ಛಿದ್ರಾನ್ವೇಷಣೆಯ ಮಾರ್ಗವನ್ನೇ ಹಿಡಿದು ಯುದ್ಧಮಾಡುತ್ತಿದ್ದರು. ಇಬ್ಬರೂ ಸಿಂಹನಾದಮಿಶ್ರವಾದ ಶಂಖಧ್ವನಿಗಳನ್ನು ಮಾಡುತ್ತಿದ್ದರು. ಅದೇ ರೀತಿಯಲ್ಲಿಯೇ ಧನುಷ್ಟೇಂಕಾರವನ್ನೂ ಮಾಡುತ್ತಿದ್ದರು. ಅವರು ಮಾಡಿದ ಶಂಖನಿನಾದದಿಂದಲೂ, ಎರಡೂ ರಥಗಳ ಕರ್ಕಶವಾದ ಶಬ್ದದಿಂದಲೂ ಭೂಮಿಯೇ ಸೀಳಿಬಿಟ್ಟಿತು ; ನಡುಗಿತು. (ಭೂಕಂಪವಾಯಿತು). ಅದರಿಂದ ಘೋರವಾದ ಶಬ್ದವುಂಟಾಯಿತು. ಯುದ್ಧಮಾಡು

ವವರಲ್ಲಿ ಒಬ್ಬರು ಮುದುಕರು, ಮತ್ತೊಬ್ಬನು ಯುವಕನು–ಎಂಬುದೊಂದು ಹೊರತಾಗಿ ಮತ್ತಾವ ವ್ಯತ್ಯಾಸವೂ ಇರಲಿಲ್ಲ. ಯುದ್ಧವನ್ನೇ ವೀಕ್ಷಿಸುತ್ತಿದ್ದವರಿಗೆ ಈ ವ್ಯತ್ಯಾಸವೂ ಕಾಣುತ್ತಿರಲಿಲ್ಲ. ಇಬ್ಬರೂ ಮಹಾಬಲಿಷ್ಠರಾಗಿದ್ದರು. ಯುದ್ಧದಲ್ಲಿ ಇಬ್ಬರೂ ಬೇರೆಯವರಿಗೆ ಎದುರಿಸಲು ಅಸಾಧ್ಯರಾಗಿಯೇ ಇದ್ದರು. ಇಬ್ಬರೂ ಮಹಾಸ್ತ್ರಗಳನ್ನು ತಿಳಿದವರಾಗಿದ್ದರು. ಬಾಣವನ್ನು ಬತ್ತಳಿಕೆಯಿಂದ ತೆಗೆಯುವ, ಧನುಸ್ಸಿಗೆ ಯೋಜಿಸುವ ಮತ್ತು ಆಕರ್ಣಾಂತವಾಗಿ ಸೆಳೆದು ಬಿಡುವ ಕೈಚಳಕದಲ್ಲಿಯೂ ಒಬ್ಬರು ಮತ್ತೊಬ್ಬ ರನ್ನು ಮೀರಿಸುತ್ತಿರುವಂತೆಯೇ ಕಾಣುತ್ತಿದ್ದರು. ಪ್ರೇಕ್ಷಕರು ಯಾವ ಕಡೆಯವರೇ ಆಗಿದ್ದರೂ, ತಟಸ್ಥರೇ ಆಗಿದ್ದರೂ ಇಬ್ಬರ ಅಮಾನುಷವಾದ ಬಾಣಪ್ರಹರಣಕ್ರಿಯೆಗೆ "ಭಲೆ" "ಭಲೆ" ಎಂದು ಹೇಳಲೇಬೇಕಾಗಿದ್ದಿತು. ಆದುದರಿಂದ ಅವರಿಬ್ಬರ ಪರಾಕ್ರಮದಲ್ಲಾಗಲೀ, ಬಾಣಪ್ರಯೋಗದ ಕೌಶಲ ದಲ್ಲಾಗಲೀ ಕಿಂಚಿದ್ವ್ಯತ್ಯಾಸವನ್ನೂ ಕಂಡುಹಿಡಿಯಲು ಯಾರಿಗೂ ಸಾಧ್ಯವೇ ಆಗಲಿಲ್ಲ. ಅವರ ರಥಗಳ ಮೇಲಿದ್ದ ಧ್ವಜಗಳಿಂದ ಮಾತ್ರವೇ ಅವರು ಯಾರೆಂಬುದನ್ನು ಗುರುತಿಸಲು ಸಾಧ್ಯವಾಗುತ್ತಿತ್ತು. ತಾಲಧ್ವಜವಿರುವವನು ಭೀಷ್ಮನೆಂದೂ, ಕಪಿಧ್ವಜವಿರುವವನು ಅರ್ಜುನನೆಂದೂ ಕೌರವ-ಪಾಂಡವರು ತಮ್ಮ-ತಮ್ಮ ಕಡೆಯ ಮಹಾಯೋಧರನ್ನು ಗುರುತಿಸುತ್ತಿದ್ದರು. ಅಂತಹ ಮನುಷ್ಯಶ್ರೇಷ್ಠರ ಅದ್ಭುತವಾದ ಯುದ್ಧಪರಾಕ್ರಮವನ್ನು ಕಂಡು ಎಲ್ಲ ಪ್ರಾಣಿಗಳೂ ಆಶ್ಚರ್ಯಗೊಂಡುವು.

**ನ ತಯೋರ್ವಿವರಂ ಕಶ್ಚಿದ್ರಣೇ ಪಶ್ಯತಿ ಭಾರತ ।**
**ಧರ್ಮೇ ಸ್ಥಿತಸ್ಯ ಹಿ ಯಥಾ ನ ಕಶ್ಚಿದ್ವೃಜಿನಂ ಕ್ವಚಿತ್ ॥೬೧॥**

ಯಾವ ರೀತಿಯಲ್ಲಿ ಧರ್ಮನಿಷ್ಠನಾಗಿರುವ ಪುರುಷನಲ್ಲಿ ಪಾಪಕರ್ಮಾ ಚರಣೆಯನ್ನು ಕಾಣಲು ಯಾರಿಗೂ ಸಾಧ್ಯವಾಗುವುದಿಲ್ಲವೋ–ಅದೇ ರೀತಿ ಯಲ್ಲಿ ಆ ಯುದ್ಧದಲ್ಲಿ ಮಹಾವೀರರಾದ ಭೀಷ್ಮಾರ್ಜುನರಲ್ಲಿ ನ್ಯೂನತೆ ಯನ್ನಾಗಲೀ, ದೋಷವನ್ನೇ ಆಗಲೀ ಕಾಣಲು ಯಾರಿಗೂ ಸಾಧ್ಯವಾಗಲಿಲ್ಲ. (ಇಲ್ಲಿ ಯುದ್ಧದೋಷವೆಂದರೆ ಪಕ್ಷಪಾತ.) ಅರ್ಜುನನ ಮೇಲಿನ ಅಭಿಮಾನದ

ಕಾರಣದಿಂದ ಭೀಷ್ಮನಾಗಲೀ–ಭೀಷ್ಮನು ತನ್ನ ಪಿತಾಮಹನೆಂಬ ಗೌರವದಿಂದ ಅರ್ಜುನನಾಗಲೀ–ಉದಾರಭಾವನೆಯನ್ನು ತೋರಿಸಲಿಲ್ಲ. ಒಬ್ಬರು ಮತ್ತೊಬ್ಬರನ್ನು ಸಂಹರಿಸಬೇಕೆಂಬ ಛಲದಿಂದಲೇ ಯುದ್ಧಮಾಡಿದರು. ವಧೆಯನ್ನೇ ಮುಖ್ಯವಾಗಿಟ್ಟುಕೊಂಡು ಯುದ್ಧನೀತಿಗೆ ವಿರೋಧಮಾರ್ಗವನ್ನು ಅನುಸರಿಸಲೂ ಇಲ್ಲ. ಯಾವ ವಿಧವಾದ ದೋಷವೂ ಇಲ್ಲದ ರೀತಿಯಲ್ಲಿ ವಿಜಯಾಕಾಂಕ್ಷಿಗಳಾದ ಇಬ್ಬರೂ ಧರ್ಮಯುದ್ಧವನ್ನೇ ಮಾಡಿದರು. ಇಬ್ಬರೂ ಬಾಣಗಳೆಂಬ ಬಲೆಗಳಿಂದ ಒಬ್ಬರು ಮತ್ತೊಬ್ಬರನ್ನು ಮುಚ್ಚಿಬಿಡುತ್ತಿದ್ದರು. ಪ್ರೇಕ್ಷಕರಿಗೆ ಅವರು ಸ್ವಲ್ಪಹೊತ್ತು ಕಾಣಿಸುತ್ತಲೇ ಇರಲಿಲ್ಲ. ಮರುಕ್ಷಣದಲ್ಲಿ ಒಬ್ಬರು ನಿರ್ಮಿಸಿದ್ದ ಬಾಣಗಳ ಬಲೆಯನ್ನು ಮತ್ತೊಬ್ಬರು ನಿರಸನಗೊಳಿಸಿ ಎಲ್ಲರಿಗೂ ಕಾಣಿಸಿಕೊಳ್ಳುತ್ತಿದ್ದರು. ಕೌರವ-ಪಾಂಡವರ ಯುದ್ಧವನ್ನು ನೋಡಲೆಂದೇ ಆಗಮಿಸಿದ್ದ ದೇವತೆಗಳು, ಗಂಧರ್ವರು, ಚಾರಣರು ಮತ್ತು ಋಷಿಗಳು ಇಬ್ಬರ ಪರಾಕ್ರಮವನ್ನೂ ಮತ್ತು ಅವರು ಮಾಡುತ್ತಿದ್ದ ಯುದ್ಧದ ವೈಶಿಷ್ಟ್ಯವನ್ನೂ ಕಂಡು ಪರಸ್ಪರವಾಗಿ ಮಾತನಾಡಿಕೊಳ್ಳುತ್ತಿದ್ದರು :

“ದೇವಾಸುರ-ಗಂಧರ್ವಲೋಕದವರೆಲ್ಲರೂ ಒಟ್ಟುಗೂಡಿಯೇ ಬಂದರೂ ಕೂಡ ಕುಪಿತರಾದ ಈ ಮಹಾರಥರನ್ನು ಯುದ್ಧದಲ್ಲಿ ಗೆಲ್ಲಲು ಯಾವುದೇ ಕಾರಣದಿಂದಲೂ ಸಾಧ್ಯವಾಗುವುದಿಲ್ಲ. ಈ ಮಹಾದ್ಭುತವಾದ ಯುದ್ಧವು ಲೋಕದಲ್ಲಿಯೇ ಪರಮಾಶ್ಚರ್ಯಕರವಾದುದು. ಇಂತಹ ಯುದ್ಧಗಳು ಮುಂದೆ ಯಾವಾಗಲೂ ನಡೆಯಲಾರವು. ಧನುಷ್ಮಂತನಾದ, ಅಶ್ವಗಳಿಂದ ಕೂಡಿದ ರಥದಲ್ಲಿ ಕುಳಿತಿರುವ, ಬಾಣಗಳನ್ನು ಬೀಜಗಳನ್ನೋಪಾದಿಯಲ್ಲಿ ಬಿತ್ತುತ್ತಿರುವ (ಇವನು ಬಿಡುವ ಒಂದೊಂದು ಬಾಣವೂ ನೂರಾರು ಬಾಣಗಳಾಗಿ ಪರಿಣಾಮಗೊಳ್ಳುತ್ತವೆ ಎಂದರ್ಥ) ಭೀಷ್ಮನನ್ನು ಗೆಲ್ಲಲು ಧೀಮಂತನಾದ ಪಾರ್ಥನಿಗೆ ಸಾಧ್ಯವಾಗುವುದಿಲ್ಲ. ಅಂತೆಯೇ ದೇವತೆಗಳಿಗೂ ಸಹ ದುರಾಸದನಾದ, ಗಾಂಡೀವ ಧನುರ್ಧರನಾದ, ಪಾಂಡುಪುತ್ರನಾದ ಅರ್ಜುನನನ್ನು ಗೆಲ್ಲಲು ಭೀಷ್ಮನಿಗೂ ಸಾಧ್ಯವಾಗುವುದಿಲ್ಲ. ಈ ಲೋಕಗಳೆಲ್ಲವೂ ವಿನಾಶ ಹೊಂದುವವರೆಗೂ ಇವರು ಯುದ್ಧಮಾಡುತ್ತಿದ್ದರೂ ಸಹ ಯುದ್ಧದಲ್ಲಿ ಯಾರಿಗೂ ವಿಜಯವು ಲಭಿಸುವುದಿಲ್ಲ. ಸಮ-ಸಮವಾಗಿ ಪರ್ಯವ

ಸಾನ ಹೊಂದುವುದೇ ಹೊರತು ಒಬ್ಬರು ಮತ್ತೊಬ್ಬರನ್ನು ಜಯಿಸುವರೆಂಬ ನಿಶ್ಚಯವೇ ಇಲ್ಲ."

ಮಹಾರಾಜ! ಗಾಂಗೇಯ ಮತ್ತು ಅರ್ಜುನರು ಯುದ್ಧಮಾಡುತ್ತಿದ್ದಾಗ ಇಂತಹ ಪ್ರಶಂಸೆಯಿಂದ ಕೂಡಿದ ಮಾತುಗಳು ಎಲ್ಲ ಕಡೆಗಳಿಂದಲೂ ಕೇಳಿಬರುತ್ತಿದ್ದುವು. ಭೀಷ್ಮಾರ್ಜುನರ ಯುದ್ಧವು ಈ ರೀತಿಯಲ್ಲಿ (ಕೊನೆಯನ್ನು ಮುಟ್ಟದೇ ಇರುವ ರೀತಿಯಲ್ಲಿ ) ನಡೆಯುತ್ತಿದ್ದಾಗ ನಿನ್ನ ಕಡೆಯ ಯೋಧರೂ ಮತ್ತು ಪಾಂಡವರ ಕಡೆಯ ಯೋಧರೂ ಯುದ್ಧದಲ್ಲಿ ತೊಡಗಿ ಸಂಹಾರಕಾರ್ಯವನ್ನು ಮುಂದುವರಿಸುತ್ತಲೇ ಇದ್ದರು.

ಹರಿತವಾದ ಅಲುಗುಗಳುಳ್ಳ ಕತ್ತಿಗಳಿಂದಲೂ, ಫಳ-ಫಳಿಸುವ ಗಂಡು ಗೊಡಲಿಗಳಿಂದಲೂ, ಬಾಣಗಳಿಂದಲೂ, ನಾನಾವಿಧವಾದ ಶಸ್ತ್ರಗಳಿಂದಲೂ, ಇನ್ನೂ ಅನೇಕ ಗದೆ-ತೋಮರ-ತ್ರಿಶೂಲಾದಿ ಆಯುಧವಿಶೇಷಗಳಿಂದಲೂ, ಉಭಯಪಕ್ಷಗಳ ಸೈನ್ಯಗಳಲ್ಲಿದ್ದ ಶೂರರು ಪರಸ್ಪರವಾಗಿ ಸಂಹರಿಸುತ್ತಿದ್ದರು.

ಈ ರೀತಿಯಾಗಿ ಸುದಾರುಣವಾದ ಮತ್ತು ಮಹಾಘೋರವಾದ ಯುದ್ಧವು ಆ ವಿಶಾಲವಾದ ರಣಾಂಗಣದಲ್ಲಿ ನಡೆಯುತ್ತಿರಲಾಗಿ, ದ್ರೋಣ ಮತ್ತು ಧೃಷ್ಟದ್ಯುಮ್ನರ ನಡುವೆ ಭಯಂಕರವಾದ ದ್ವಂದ್ವಯುದ್ಧವು ಪ್ರಾರಂಭವಾಯಿತು."

೫೨ನೆಯ ಅಧ್ಯಾಯವು ಮುಗಿಯಿತು.

೫೩ನೆಯ ಅಧ್ಯಾಯ ಭೀಷ್ಮವಧಪರ್ವ (ಮುಂದುವರಿದಿದೆ.)

## ಧೃಷ್ಟದ್ಯುಮ್ನ ಮತ್ತು ದ್ರೋಣಾಚಾರ್ಯರ ಯುದ್ಧ

"ಧೃತರಾಷ್ಟ್ರನು ಪ್ರಶ್ನಿಸುತ್ತಾನೆ :

ಮಹಾಧನುರ್ಧರನಾದ ದ್ರೋಣ ಮತ್ತು ದ್ರುಪದನ ಮಗನಾದ ಧೃಷ್ಟದ್ಯುಮ್ನ ಇವರಿಬ್ಬರೂ ಪ್ರಯತ್ನಪೂರ್ವಕವಾಗಿ ಯಾವ ರೀತಿಯಲ್ಲಿ ಯುದ್ಧಮಾಡಿದರು?–ಎಂಬುದನ್ನು ಹೇಳು ಸಂಜಯ! ಪೌರುಷಕ್ಕಿಂತಲೂ ಅದೃಷ್ಟವೇ ಹೆಚ್ಚಿನದೆಂದು ನಾನು ಭಾವಿಸುತ್ತೇನೆ. ಏಕೆಂದರೆ : ಶಾಂತನು

ವಿನ ಮಗನಾದ, ಮಹಾಪರಾಕ್ರಮಿಯಾದ ಭೀಷ್ಮನಿಗೂ ಸಹ ಈ ಯುದ್ಧದಲ್ಲಿ ಅರ್ಜುನನನ್ನು ದಾಟಲು (ನಿರಸ್ತಗೊಳಿಸಲು) ಸಾಧ್ಯವಾಗಲಿಲ್ಲ. ಕ್ರುದ್ಧನಾದ ಭೀಷ್ಮನು ಯುದ್ಧದಲ್ಲಿ ಚರಾಚರಗಳಿಂದ ಕೂಡಿರುವ ಮೂರುಲೋಕಗಳನ್ನೇ ವಿನಾಶಗೊಳಿಸಲು ಸಮರ್ಥನು. ಹೀಗಿರುವಾಗ ಅವನು ತನ್ನ ಓಜಸ್ಸಿನಿಂದ ಯುದ್ಧದಲ್ಲಿ ಪಾಂಡವನೊಬ್ಬನನ್ನೂ ಏಕೆ ನಿರಸ್ತಗೊಳಿಸಲಿಲ್ಲ?"

ಸಂಜಯನು ಉತ್ತರಿಸುತ್ತಾನೆ : "ಮಹಾರಾಜ! ಭೀಷ್ಮನೊಬ್ಬನು ಪಾರ್ಥನನ್ನು ಜಯಿಸದೇ ಇದ್ದುದಕ್ಕೇಕೆ ಅಚ್ಚರಿಪಡುವೆ? ನಿನಗೆ ನಿಜವನ್ನೇ ಹೇಳಬೇಕಾದರೆ ಇಂದ್ರನೊಡನೆ ಕೂಡಿದ ಸಕಲದೇವತೆಗಳಿಂದಲೂ ಪಾಂಡವರನ್ನು ಜಯಿಸುವ ಸಾಧ್ಯತೆಯಿಲ್ಲ. ಮನಸ್ಸನ್ನು ದೃಢಮಾಡಿಕೋ (ಗಟ್ಟಿಮಾಡಿಕೋ.) ಸುದಾರುಣವಾದ ಈ ಯುದ್ಧವಾರ್ತೆಯನ್ನು ಮುಂದುವರಿಸುತ್ತೇನೆ ; ಕೇಳು. ದ್ರೋಣ-ಧೃಷ್ಟದ್ಯುಮ್ನರ ಯುದ್ಧವಾರ್ತೆಯನ್ನು ನಾನೀಗ ಹೇಳುತ್ತೇನೆ. ದ್ರೋಣ-ಧೃಷ್ಟದ್ಯುಮ್ನರಿಗೆ ಯುದ್ಧವು ಪ್ರಾರಂಭವಾಯಿತೆನ್ನುವುದನ್ನು ನಾನು ಈ ಹಿಂದೆಯೇ ಹೇಳಿದ್ದೆನಲ್ಲವೇ? ದ್ರೋಣರು ನಿಶಿತವಾದ ಬಾಣಗಳಿಂದ ಧೃಷ್ಟದ್ಯುಮ್ನನನ್ನು ಗಾಯಗೊಳಿಸಿದರು. ಇಷ್ಟು ಮಾತ್ರವಲ್ಲ, ಧೃಷ್ಟದ್ಯುಮ್ನನ ಸಾರಥಿಯನ್ನೂ ಸಹ ಭಲ್ಲವೆಂಬ ಒಂದೇ ಒಂದು ಬಾಣದಿಂದ ಸಂಹರಿಸಿ ರಥದಿಂದ ಕೆಳಕ್ಕೆ ಬೀಳುವಂತೆ ಮಾಡಿದರು. ಇಷ್ಟರಿಂದಲೂ ಆಚಾರ್ಯರು ತೃಪ್ತರಾಗಲಿಲ್ಲ. ಸಂಕ್ರುದ್ಧರಾದ ಅವರು ಪುನಃ ನಾಲ್ಕು ಬಾಣಗಳನ್ನು ಬತ್ತಳಿಕೆಯಿಂದ ತೆಗೆದು ಧನುಸ್ಸಿಗೆ ಯೋಜಿಸಿ ಆಕರ್ಣಾಂತವಾಗಿ ಸೆಳೆದು ಧೃಷ್ಟದ್ಯುಮ್ನನ ರಥಕ್ಕೆ ಕಟ್ಟಿದ ನಾಲ್ಕು ಕುದುರೆಗಳಿಗೆ ಗುರಿಯಿಟ್ಟು ಹೊಡೆದರು. ಆ ಪೆಟ್ಟಿನಿಂದಾಗಿ ಕುದುರೆಗಳು ತತ್ತರಿಸಿಹೋದುವು. ಆದರೆ ಧೃಷ್ಟದ್ಯುಮ್ನನು ಆ ವಿಧವಾದ ಆಕ್ರಮಣದಿಂದ ವಿಚಲಿತನಾಗಲಿಲ್ಲ. ನಗು-ನಗುತ್ತಲೇ ಆ ವೀರನು 'ನಿಲ್ಲು ; ನಿಲ್ಲು' ಎಂದು ಹೇಳುತ್ತಾ ಚೂಪಾದ ತೊಂಬತ್ತು ಬಾಣಗಳಿಂದ ದ್ರೋಣರನ್ನು ಪ್ರಹರಿಸಿದನು. ಅನಂತರ ಮಹಾತ್ಮರಾದ, ಪ್ರತಾಪವಂತರಾದ ದ್ರೋಣರು ಕುಪಿತನಾಗಿದ್ದ ಧೃಷ್ಟದ್ಯುಮ್ನನನ್ನು ಬಾಣಗಳೆಂಬ ಬಲೆಯಿಂದ ಮುಚ್ಚಿ ಅವನನ್ನು ಮುಗಿಸಿಯೇ ಬಿಡಬೇಕೆಂಬ ಇಚ್ಛೆಯಿಂದ ಒಂದು ಘೋರವಾದ ಬಾಣವನ್ನು ಬತ್ತಳಿಕೆಯಿಂದ ತೆಗೆದರು. ಅದರ ಸ್ಪರ್ಶದಲ್ಲಿಯೇ ವಜ್ರಾಯುಧದ ಕಾಠಿಣ್ಯವಿದ್ದಿತು.

ಎರಡನೆಯ ಕಾಲದಂಡವೋ ಎಂಬಂತೆ ಅದು ಕಾಣುತ್ತಿದ್ದಿತು. ಅಂತಹ ಬಾಣವೊಂದನ್ನು ತೆಗೆದುಕೊಂಡು ದ್ರೋಣರು ಧನುಸ್ಸಿಗೆ ಯೋಜಿಸಿಯೇ ಬಿಟ್ಟರು. ಘೋರವಾದ ಕಾಲದಂಡೋಪಮವಾದ ಬಾಣವನ್ನು ಅನುಸಂಧಾನ ಮಾಡಿದುದನ್ನು ಕಂಡು ಪಾಂಡವರ ಸಮಗ್ರಸೈನ್ಯದಲ್ಲಿ ಹಾಹಾಕಾರ ವೆದ್ದಿತು. ಆದರೆ ಎದುರಾಗಿ ನಿಂತಿದ್ದ ಧೃಷ್ಟದ್ಯುಮ್ನನು ಮಾತ್ರ ಸ್ವಲ್ಪವೂ ವಿಚಲಿತನಾಗಲೇ ಇಲ್ಲ. ಧೃಷ್ಟದ್ಯುಮ್ನನ ಅದ್ಭುತವಾದ ಪೌರುಷವನ್ನು ನಾವು ಆಗ ನೋಡಿದೆವು. ಯಮದಂಡೋಪಮವಾದ ಬಾಣವನ್ನು ಎದುರಿಸಿ ಒಬ್ಬನೇ ಒಬ್ಬ ವೀರನು ಆ ಯುದ್ಧದಲ್ಲಿ ಪರ್ವತದಂತೆಯೇ ಅಚಲನಾಗಿ ನಿಂತಿದ್ದನು. ಮೃತ್ಯುವು ಬಾಯ್ದೆರೆದುಕೊಂಡು ಬರುವಂತೆಯೇ ಆ ಘೋರ ವಾದ ಬಾಣವೂ ಧೃಷ್ಟದ್ಯುಮ್ನನ ಕಡೆಗೆ ರಭಸದಿಂದ ಬರುತ್ತಿದ್ದಿತು. ಮೃತ್ಯು ರೂಪವಾದ, ಘೋರವಾದ ಬಾಣವು ತನ್ನ ಕಡೆಗೆ ಪ್ರಜ್ವಲಿಸುತ್ತಾ ರಭಸದಿಂದ ಬರುತ್ತಿರುವುದನ್ನು ಕಂಡ ಧೃಷ್ಟದ್ಯುಮ್ನನು ಎವೆಯಿಕ್ಕುವುದರೊಳಗಾಗಿ ಅದನ್ನು ಕತ್ತರಿಸಿಬಿಟ್ಟನು. ಇಷ್ಟು ಮಾತ್ರವಲ್ಲ. ದ್ರೋಣರ ಮೇಲೆ ಬಾಣಗಳ ಮಳೆಯನ್ನೇ ಸುರಿಸಿದನು. ಧೃಷ್ಟದ್ಯುಮ್ನನ ಸುದುಷ್ಕರವಾದ ಆ ಸಾಹಸವನ್ನು ಕಂಡ ಪಾಂಚಾಲರು ಪಾಂಡವರೊಡನೆ ಕಲೆತು–'ಧೃಷ್ಟದ್ಯುಮ್ನನಿಗೆ ಜಯ ವಾಗಲಿ'–ಎಂದು ಗಟ್ಟಿಯಾಗಿ ಕೂಗಿಕೊಂಡರು.

ದ್ರೋಣರ ಸಾವಿನ ಆಕಾಂಕ್ಷೆಯನ್ನೇ ಹೊಂದಿದ್ದ, ಪರಾಕ್ರಮಿಯಾದ ಧೃಷ್ಟದ್ಯುಮ್ನನು ಸ್ವರ್ಣವೈಡೂರ್ಯಗಳಿಂದ ಅಲಂಕೃತವಾಗಿದ್ದ, ಮಹಾವೇಗ ಯುಕ್ತವಾಗಿದ್ದ ಶಕ್ತ್ಯಾಯುಧವನ್ನು ರಭಸದಿಂದ ದ್ರೋಣರ ಮೇಲೆ ಪ್ರಯೋಗಿಸಿದನು. ಆದರೆ ಧೃಷ್ಟದ್ಯುಮ್ನನ ಆಸೆಯು ಅಷ್ಟು ಸುಲಭವಾಗಿ ನೆರವೇರುವುದಾಗಿರಲಿಲ್ಲ. ಸುವರ್ಣಭೂಷಿತವಾದ ಶಕ್ತ್ಯಾಯುಧವು ತಮ್ಮ ಬಳಿಗೆ ರಭಸದಿಂದ ಬರುತ್ತಿರುವುದನ್ನು ಕಂಡ ಭಾರದ್ವಾಜರು ನಸುನಕ್ಕು ಬಾಣಗಳ ಪ್ರಹಾರದಿಂದ ಆ ಶಕ್ತ್ಯಾಯುಧವನ್ನು ಕ್ಷಣಮಾತ್ರದಲ್ಲಿ ಮೂರು ತುಂಡುಗಳಾಗಿ ಕತ್ತರಿಸಿಬಿಟ್ಟರು. ತನ್ನ ಶಕ್ತ್ಯಾಯುಧವು ನಷ್ಟವಾಗಿ ಹೋದುದನ್ನು ಕಂಡ ಧೃಷ್ಟದ್ಯುಮ್ನನು ನಿರುತ್ಸಾಹಗೊಳ್ಳದೇ ದ್ರೋಣರ ಮೇಲೆ ಪುನಃ ಬಾಣಗಳ ಮಳೆಗರೆದನು. ಮಹಾಯಶೋವಂತರಾದ ದ್ರೋಣರು ಬಾಣಗಳ ಆ ಮಳೆಯನ್ನು ಕ್ಷಣಮಾತ್ರದಲ್ಲಿ ನಿವಾರಣೆಮಾಡಿ

ಕೊಂಡು ಮೊನಚಾದ ಮತ್ತೊಂದು ಬಾಣದಿಂದ ಧೃಷ್ಟದ್ಯುಮ್ನನ ಧನುಸ್ಸನ್ನು ಮಧ್ಯಕ್ಕೆ ಸರಿಯಾಗಿ ಕತ್ತರಿಸಿಬಿಟ್ಟರು. ಧನುಸ್ಸನ್ನು ಕಳೆದುಕೊಂಡ ದ್ರೌಪದನು ಸ್ವಲ್ಪವೂ ತಡಮಾಡದೇ ಲೋಹನಿರ್ಮಿತವಾಗಿದ್ದ, ಬಹುಭಾರವಾಗಿದ್ದ ಗದೆಯನ್ನು ತಿರುಗಿಸಿ-ತಿರುಗಿಸಿ ರಭಸದಿಂದ ದ್ರೋಣರ ಮೇಲೆ ಪ್ರಯೋಗಿಸಿದನು. ದ್ರೋಣರನ್ನು ಹನನಮಾಡಿಬಿಡುವ ಆಶಯದಿಂದಲೇ ವೇಗದಿಂದ ಪ್ರಯೋಗಿಸಿದ ಆ ಗದೆಯು ಬಹುವೇಗವಾಗಿ ದ್ರೋಣರನ್ನು ಸಮೀಪಿಸಿತು. ಆದರೆ ಆ ಸಮಯದಲ್ಲಿ ದ್ರೋಣರು ತೋರಿಸಿದ ಪರಾಕ್ರಮ ಮತ್ತು ಯಮದಂಡೋಪಮವಾದ ಗದೆಯನ್ನು ಎದುರಿಸಿನಿಂತ ಅವರ ಸ್ಥೈರ್ಯ ಎರಡೂ ಸಹ ಪರಮಾದ್ಭುತವಾಗಿ ನಮಗೆ ಕಂಡಿತು. ಮಹಾರಾಜ! ರಭಸದಿಂದ ಬರುತ್ತಿದ್ದ ಸುವರ್ಣಭೂಷಿತವಾಗಿದ್ದ ಗದೆಯನ್ನು ಕೈಚಳಕದಿಂದ ದ್ರೋಣರು ಹಿಡಿದು ಅದನ್ನು ವ್ಯರ್ಥಗೊಳಿಸಿಬಿಟ್ಟರು. ಈ ರೀತಿಯಲ್ಲಿ ಲೋಹಮಯವಾದ ಗದೆಯನ್ನು ವ್ಯರ್ಥಗೊಳಿಸಿದನಂತರ ದಾರುಣವಾಗಿದ್ದ, ಹಳದೀಬಣ್ಣದ, ಸುವರ್ಣಮಯವಾದ ರೆಕ್ಕೆಗಳಿಂದ ಕೂಡಿದ್ದ, ಸುನಿಶಿತವಾದ ಭಲ್ಲಗಳೆಂಬ ಬಾಣಗಳನ್ನು ಧೃಷ್ಟದ್ಯುಮ್ನನ ಮೇಲೆ ಪ್ರಯೋಗಿಸಿದರು. ಅವು ಧೃಷ್ಟದ್ಯುಮ್ನನ ಕವಚವನ್ನು ಕತ್ತರಿಸಿ ಶರೀರದ ರಕ್ತವನ್ನು ಪಾನಮಾಡಿದುವು. ಮರುಕ್ಷಣದಲ್ಲಿಯೇ ಮಹಾರಥನಾದ ಧೃಷ್ಟದ್ಯುಮ್ನನು ಮತ್ತೊಂದು ಧನುಸ್ಸನ್ನು ತೆಗೆದುಕೊಂಡು ಐದು ಬಾಣಗಳಿಂದ ಬಲಪೂರ್ವಕವಾಗಿ ದ್ರೋಣರನ್ನು ಪ್ರಹರಿಸಿದನು. ಧೃಷ್ಟದ್ಯುಮ್ನನು ಬಿಟ್ಟ ಆ ಐದು ಬಾಣಗಳೂ ದ್ರೋಣರ ಕವಚವನ್ನು ಭೇದಿಸಿ ಅವರ ರಕ್ತವನ್ನು ಹೀರಿದುವು. (ಅವರ ಶರೀರವನ್ನು ಹೊಕ್ಕುವು.) ರಕ್ತದಿಂದ ತೋಯ್ದುಹೋಗಿದ್ದ ಆ ಇಬ್ಬರು ನರಪುಂಗವರೂ ಆ ಸಮಯದಲ್ಲಿ ವಸಂತಸಮಯದಲ್ಲಿ ಪುಷ್ಪಿತವಾಗಿರುವ ಮುತ್ತುಗದ ಮರಗಳಂತೆಯೇ ಕಾಣುತ್ತಿದ್ದರು. ಸೇನೆಯ ಅಗ್ರಭಾಗದಲ್ಲಿದ್ದ ದ್ರೋಣರು ಧೃಷ್ಟದ್ಯುಮ್ನನ ಪ್ರಹಾರದಿಂದ ಕುಪಿತರಾಗಿ ತಮ್ಮ ಪರಾಕ್ರಮವನ್ನು ಪ್ರಕಟಪಡಿಸುತ್ತಾ ಬಾಣಗಳಿಂದ ಪುನಃ ದ್ರುಪದನ ಮಗನ ಧನುಸ್ಸನ್ನು ಎರಡಾಗಿ ಕತ್ತರಿಸಿದರು.

ಧನುಸ್ಸಿನಿಂದ ವಿಹೀನನಾಗಿದ್ದ ಧೃಷ್ಟದ್ಯುಮ್ನನನ್ನು ದ್ರೋಣರು ಸುಮ್ಮನೆ ಬಿಟ್ಟುಬಿಡಲಿಲ್ಲ. ಬಗ್ಗಿದ ಗಿಣ್ಣುಗಳುಳ್ಳ ಬಾಣಗಳ ವೃಷ್ಟಿಯಿಂದ

ಮೇಘವು ಮಳೆಯಿಂದ ಪರ್ವತವನ್ನು ಮುಚ್ಚಿಬಿಡುವಂತೆ–ಧೃಷ್ಟದ್ಯುಮ್ನನನ್ನು ಮುಚ್ಚಿಬಿಟ್ಟರು. ಭಲ್ಲವೆಂಬ ಒಂದು ಬಾಣದಿಂದ ಧೃಷ್ಟದ್ಯುಮ್ನನ ಸಾರಥಿಯನ್ನು ಹೊಡೆದುರುಳಿಸಿದರು. ಅನಂತರ ಅವನ ರಥಕ್ಕೆ ಕಟ್ಟಿದ್ದ ನಾಲ್ಕು ಕುದುರೆಗಳನ್ನೂ ನಿಶಿತವಾದ ಬಾಣಗಳ ಪ್ರಯೋಗದಿಂದ ಸಂಹರಿಸಿದರು. ತಮ್ಮ ಶತ್ರುವನ್ನು ಸರ್ವಶೂನ್ಯಗೊಳಿಸಿದುದಕ್ಕಾಗಿ ಅವರಿಗೆ ಮಹಾ ನಂದವಾಯಿತು. ಸಿಂಹನಾದವನ್ನು ಮಾಡಿದರು. ಆ ವೇಳೆಗೆ ಧೃಷ್ಟದ್ಯುಮ್ನನು ಮತ್ತೊಂದು ಧನುಸ್ಸನ್ನು ತೆಗೆದುಕೊಂಡನು. ಬಾಣವನ್ನು ಬತ್ತಳಿಕೆಯಿಂದ ತೆಗೆದು ಅನುಸಂಧಾನಮಾಡುವಷ್ಟರಲ್ಲಿಯೇ ದ್ರೋಣರು ಭಲ್ಲವೆಂಬ ಮತ್ತೊಂದು ಬಾಣದಿಂದ ಧೃಷ್ಟದ್ಯುಮ್ನನ ಕೈಯಲ್ಲಿದ್ದ ಆ ಧನುಸ್ಸನ್ನೂ ಕತ್ತರಿಸಿಬಿಟ್ಟರು.

ಆ ಸಮಯದಲ್ಲಿ ಧೃಷ್ಟದ್ಯುಮ್ನನಿಗೆ ಧನುಸ್ಸೂ ಇರಲಿಲ್ಲ ; ಕುದುರೆ ಗಳೂ ಸತ್ತುಹೋಗಿದ್ದುವು ; ಸಾರಥಿಯೂ ಸತ್ತುಹೋಗಿದ್ದನು. ಅದರಿಂದಾಗಿ ರಥವೂ ನಿರುಪಯೋಗಿಯಾಗಿತ್ತು. ಆದರೂ ಸಹ ಅವನು ಧೈರ್ಯಗೆಡಲಿಲ್ಲ. ಮಹತ್ತಾದ ಪೌರುಷವನ್ನು ಪ್ರಕಟಿಸುತ್ತಾ ಗದಾಪಾಣಿಯಾದ ಧೃಷ್ಟದ್ಯುಮ್ನನು ರಥದಿಂದ ಇಳಿಯುತ್ತಿದ್ದನು. ಅವನಿನ್ನೂ ರಥದಿಂದ ಇಳಿಯುತ್ತಿರುವಾಗಲೇ ದ್ರೋಣರು ತಮ್ಮ ನಿಶಿತವಾದ ಬಾಣಗಳಿಂದ ಅವನ ಗದೆಯನ್ನೂ ಕತ್ತರಿಸಿಬಿಟ್ಟರು. ದ್ರೋಣರ ಆ ಕ್ರಿಯೆಯು ಪರಮಾದ್ಭುತವಾಗಿ ಕಂಡಿತು. ಗದೆಯ ನಾಶದಿಂದಲೂ ದ್ರೌಪದನು ಅಧೀರನಾಗಲಿಲ್ಲ. ಸುಂದರವಾದ ಭುಜಗಳನ್ನು ಹೊಂದಿದ್ದ, ಬಲಿಷ್ಠನಾದ ಧೃಷ್ಟದ್ಯುಮ್ನನು ವಿಶಾಲವಾಗಿದ್ದ, ಪ್ರಕಾಶಮಾನವಾಗಿದ್ದ ಮತ್ತು ಚಂದ್ರನ ಹಾಗೆ ದುಂಡಾದ ನೂರು ಚಿಹ್ನೆಗಳನ್ನು ಹೊಂದಿದ್ದ ಗುರಾಣಿಯನ್ನೂ, ಅಗಲವಾಗಿಯೂ ಮತ್ತು ದಿವ್ಯವಾಗಿಯೂ ಇದ್ದ ಖಡ್ಗವನ್ನೂ ಹಿಡಿದುಕೊಂಡು ದ್ರೋಣರನ್ನು ಸಂಹರಿಸುವ ಆಕಾಂಕ್ಷೆಯಿಂದ–ಅರಣ್ಯದಲ್ಲಿ ಸಿಂಹವೊಂದು ಮಾಂಸದ ಆಸೆಯಿಂದ ಆನೆಯ ಮೇಲೆ ಬೀಳಲು ಹೋಗುವಂತೆ–ವೇಗದಿಂದ ದ್ರೋಣರ ರಥದ ಸಮೀಪಕ್ಕೆ ಧಾವಿಸಿದನು.

ಮಹಾರಾಜ! ಆ ಸಮಯದಲ್ಲಿಯೂ ನಾವು ಒಂದು ಅದ್ಭುತವನ್ನು

ಕಂಡೆವು. ದ್ರೋಣರ ಪೌರುಷ, ಕೈಚಳಕ, ಅವರ ಅಸ್ತ್ರದ ವೇಗ, ಅವರ ಬಾಹುಗಳಲ್ಲಿದ್ದ ಬಲ–ಇವೆಲ್ಲವನ್ನೂ ಅವರ ಆಗಿನ ಕ್ರಿಯೆಯಿಂದ ನಾವು ಕಂಡುಕೊಂಡೆವು.

ಕತ್ತಿ ಮತ್ತು ಗುರಾಣಿಗಳನ್ನು ಹಿಡಿದು ಬಹುವೇಗವಾಗಿ ಬರುತ್ತಿದ್ದ ಧೃಷ್ಟದ್ಯುಮ್ನನನ್ನು ದ್ರೋಣರು ಶರವರ್ಷದಿಂದಲೇ ತಡೆದುಬಿಟ್ಟರು. ಯದ್ಯಪಿ ಧೃಷ್ಟದ್ಯುಮ್ನನು ಯುದ್ಧದಲ್ಲಿ ಮಹಾಬಲಿಷ್ಠನಾಗಿದ್ದರೂ ಅವನ ಬಲವು ದ್ರೋಣರ ಬಾಣಗಳ ಮುಂದೆ ಏನೂ ಸಾಗದಾಯಿತು. ಅವ್ಯಾಹತವಾಗಿ ಬರುತ್ತಿದ್ದ ಬಾಣಗಳಿಗೆ ಎದುರಾಗಿ ಹೋಗಲು ಧೃಷ್ಟದ್ಯುಮ್ನನು ಸಮರ್ಥನಾಗಲಿಲ್ಲ.

ದ್ರೋಣರ ಬಳಿಗೆ ಹೋಗಲು ಸಾಧ್ಯವಾಗದೇ ಮಧ್ಯದಲ್ಲೇ ನಿಂತ ಧೃಷ್ಟದ್ಯುಮ್ನನು ದ್ರೋಣರ ಬಾಣಗಳನ್ನು ಎದುರಿಸಬೇಕಾಯಿತು. ವೇಗವಾಗಿ ತನ್ನ ಕಡೆಗೆ ಬರುತ್ತಿದ್ದ ದ್ರೌಪದನನ್ನು ದ್ರೋಣರು ಬಾಣಗಳ ಪ್ರಯೋಗದಿಂದ ತಡೆದುಬಿಡಲಾಗಿ ಸಿದ್ಧಹಸ್ತನೋಪಾದಿಯಲ್ಲಿ ದ್ರೋಣರು ಬಿಡುತ್ತಿದ್ದ ಬಾಣಗಳ ಸಮೂಹಗಳೆಲ್ಲವನ್ನೂ ಧೃಷ್ಟದ್ಯುಮ್ನನು ತನ್ನ ಗುರಾಣಿಯಿಂದಲೇ ನಿವಾರಣೆಮಾಡಿಕೊಳ್ಳುತ್ತಿದ್ದನು. ಈ ಸಮಯಕ್ಕೆ ಸರಿಯಾಗಿ ಬೇರೆಲ್ಲಿಯೋ ಇದ್ದ ಬಲಿಷ್ಠನಾದ, ಮಹಾಬಾಹುವಾದ ಭೀಮಸೇನನು ಮಹಾತ್ಮನಾದ ಧೃಷ್ಟದ್ಯುಮ್ನನಿಗೆ ಸಹಾಯಮಾಡುವ ಸಲುವಾಗಿ ಅಲ್ಲಿಗೆ ಧಾವಿಸಿ ಬಂದನು. ಬಂದೊಡನೆಯೇ ಕತ್ತಿಯನ್ನೂ ಗುರಾಣಿಯನ್ನೂ ಹಿಡಿದು ಕೆಳಗೆ ನಿಂತಿದ್ದ ಧೃಷ್ಟದ್ಯುಮ್ನನನ್ನು ಸತತವಾಗಿ ಪೀಡಿಸುತ್ತಿದ್ದ ದ್ರೋಣರ ಮೇಲೆ ನಿಶಿತವಾದ ಏಳು ಬಾಣಗಳನ್ನು ಪ್ರಯೋಗಿಸಿ ಅವರನ್ನು ಬಾಧೆಪಡಿಸಿದನು. ಆ ಮಧ್ಯದಲ್ಲಿ ದ್ರೌಪದನನ್ನು ಬಹುಶೀಘ್ರವಾಗಿ ತನ್ನ ರಥಕ್ಕೆ ಹತ್ತಿಸಿಕೊಂಡನು.

ಭೀಮಸೇನನು ದ್ರೋಣರ ಎದುರಿನಲ್ಲಿ ನಿಂತಿರುವುದನ್ನು ಕಂಡು ದುರ್ಯೋಧನನು ದೊಡ್ಡದಾದ ಸೈನ್ಯವನ್ನು ಹೊಂದಿದ್ದ ಭಾನುಮಂತನನ್ನು ದ್ರೋಣರ ರಕ್ಷಣೆಗಾಗಿ ನಿಯೋಜಿಸಿದನು. ಜನೇಶ್ವರ! ನಿನ್ನ ಮಗನ ಆಜ್ಞಾನು ಸಾರವಾಗಿ ಕಳಿಂಗರ ಆ ದೊಡ್ಡ ಸೇನೆಯು ಬಹುಶೀಘ್ರವಾಗಿ ಭೀಮನ ಬಳಿಗೆ

ಹೋಗಿ ಅವನನ್ನು ಆಕ್ರಮಿಸಿತು. ರಥಿಗಳಲ್ಲಿ ಶ್ರೇಷ್ಠರಾದ ದ್ರೋಣರು ಧೃಷ್ಟದ್ಯುಮ್ನನನ್ನು ಪುನಃ ಆಕ್ರಮಿಸಹೋಗದೇ ವೃದ್ಧರಾದ ವಿರಾಟ-ದ್ರುಪದರನ್ನು ಆಕ್ರಮಿಸಿದರು. ಧೃಷ್ಟದ್ಯುಮ್ನನು ಧರ್ಮರಾಜನ ರಕ್ಷಣೆಗೆ ಹೊರಟುಹೋದನು. ಅನಂತರ ಆ ಸಮರಾಂಗಣದಲ್ಲಿ ಭೀಮನಿಗೂ ಮತ್ತು ಕಲಿಂಗರಿಗೂ ರೋಮಾಂಚಕರವಾದ ಮತ್ತು ಸಂಕುಲಮಯವಾದ ಯುದ್ಧವು ಪ್ರಾರಂಭವಾಯಿತು. ಆ ಯುದ್ಧವು ಜಗದ್ವಿನಾಶಕವೂ, ಘೋರರೂಪವೂ ಮತ್ತು ಭಯಾನಕವೂ ಆಗಿದ್ದಿತು."

೫೩ನೆಯ ಅಧ್ಯಾಯವು ಮುಗಿಯಿತು.

೫೪ನೆಯ ಅಧ್ಯಾಯ ಭೀಷ್ಮವಧಪರ್ವ (ಮುಂದುವರಿದಿದೆ.)

## ಭೀಮನು ಕಲಿಂಗರೊಡನೆ ಮತ್ತು ನಿಷಾದರೊಡನೆ ಯುದ್ಧ ಮಾಡಿದುದು : ಭೀಮಸೇನನು ಶಕ್ರದೇವ-ಭಾನುಮಂತ-ಕೇತುಮಂತರನ್ನು ವಧಿಸಿದುದು

ಧೃತರಾಷ್ಟ್ರನು ಪ್ರಶ್ನಿಸುತ್ತಾನೆ :

"ಸಂಜಯ! ನನ್ನ ಮಗನಾದ ದುರ್ಯೋಧನನಿಂದ ಆಜ್ಞಪ್ತನಾದ ಸೇನಾಪತಿಯಾದ ಕಲಿಂಗರಾಜನು ಪರಾಕ್ರಮಿಯಾದ ಮಹಾಬಲಿಷ್ಠನಾದ ಭೀಮಸೇನನೊಡನೆ ಯಾವ ರೀತಿಯಲ್ಲಿ ಯುದ್ಧಮಾಡಿದನು? ದಂಡವನ್ನು ಹಿಡಿದಿರುವ ಯಮನೋಪಾದಿಯಲ್ಲಿ ಗದೆಯನ್ನು ಹಿಡಿದು ರಣಾಂಗಣದಲ್ಲಿ ನಿರ್ಭಯನಾಗಿ ಸಂಚಾರಮಾಡುವ ಭೀಮಸೇನನನ್ನು ಸಸೈನ್ಯನಾದ ಕಳಿಂಗ ರಾಜನು ಯಾವ ರೀತಿಯಲ್ಲಿ ಎದುರಿಸಿದನು?–ಈ ವಿಷಯವನ್ನು ನನಗೆ ಸವಿಸ್ತರವಾಗಿ ಹೇಳು."

"ಮಹಾರಾಜ! ಮಹಾಬಲಿಷ್ಠನಾದ ಕಲಿಂಗರಾಜ್ಯಾಧಿಪತಿಯು ನಿನ್ನ ಮಗನ ಮಾತಿಗೆ–'ಹಾಗೆಯೇ ಆಗಲಿ'–ಎಂಬ ಒಪ್ಪಿಗೆಯನ್ನಿತ್ತು ದೊಡ್ಡ ದಾದ ತನ್ನ ಸೈನ್ಯದಿಂದ ರಕ್ಷಿಸಲ್ಪಟ್ಟವನಾಗಿ ಭೀಮನ ರಥದ ಬಳಿಗೆ ಹೋದನು. ಅನೇಕವಾದ ದೊಡ್ಡ-ದೊಡ್ಡ ಆಯುಧವಿಶೇಷಗಳನ್ನು ಕೈಯಲ್ಲಿ

ಹಿಡಿದಿದ್ದ ರಥಸೇನೆ, ಗಜಸೇನೆ ಮತ್ತು ಅಶ್ವಸೇನೆಗಳಿಂದ ಸಮಾವಿಷ್ಟವಾಗಿದ್ದ ಕಲಿಂಗದ ಮಹಾಸೈನ್ಯವು ತನ್ನ ಮೇಲೆ ಬೀಳುತ್ತಿರುವುದನ್ನು ನೋಡಿದ ಭೀಮಸೇನನು ಅನೇಕ ಬಾಣಗಳಿಂದ ಆ ಮಹಾಸೈನ್ಯವನ್ನು ಪೀಡಿಸತೊಡಗಿದನು. ಚೇದಿಸೈನ್ಯದೊಡನೆ ಬಂದಿದ್ದ ನಿಷಾದರಾಜಪುತ್ರನಾದ ಕೇತುಮಂತನನ್ನೂ ಭೀಮನು ತನ್ನ ಬಾಣಗಳಿಂದ ಗಾಯಗೊಳಿಸಿದನು. ಚೇದಿದೇಶೀಯ ಸೈನಿಕರು (ಪಾಂಡವಪಕ್ಷದವರು) ವ್ಯೂಹಕ್ರಮದಲ್ಲಿರುತ್ತಿರಲಾಗಿ ನಿಷಾದ ರಾಜನ ಪುತ್ರನಾದ ಕೇತುಮಂತನ ಸಹಾಯಕ್ಕಾಗಿ ಸಂಕ್ರುದ್ಧನಾದ ಶ್ರುತಾಯುವೂ ಸಹ ಭೀಮಸೇನನ ಮುಂದೆ ಬಂದು ನಿಂತನು. ಕಲಿಂಗರ ಅನೇಕ ಸಹಸ್ರರಥಗಳಿಂದಲೂ ಕೂಡಿದವನಾಗಿ ಕೇತುಮಂತನು ಭೀಮಸೇನನನ್ನು ಎಲ್ಲ ದಿಕ್ಕುಗಳಿಂದಲೂ ಮುತ್ತಿಗೆ ಹಾಕಿದನು. ಭೀಮಸೇನನ ಪದಾನುವರ್ತಿಗಳಾದ ಚೇದಿ-ಮತ್ಸ್ಯ-ಕರೂಷದೇಶಗಳ ಯೋಧರು-ನಿಷಾದರನ್ನೂ ಮತ್ತು ಅವರ ಕಡೆಯ ರಾಜರನ್ನೂ ಭೀಮನೊಡನೆ ಸೇರಿ ಎದುರಿಸಿದರು. ಅನಂತರ ಭಯಾವಹವಾದ ಘೋರರೂಪವಾದ ಯುದ್ಧವು ಪ್ರಾರಂಭವಾಯಿತು. ಆ ಸಮಯದಲ್ಲಿ ಆ ಯುದ್ಧವು ಎಷ್ಟೊಂದು ಭಯಂಕರವಾಗಿತ್ತೆಂದರೆ ಎದುರಿಗೆ ಸಿಕ್ಕಿದ ಸೈನಿಕರನ್ನು ಕಡಿದುಹಾಕುವುದೊಂದು ಅವರಿಗೆ ಗೊತ್ತಿದ್ದಿತೇ ಹೊರತು ಅವರು ತಮ್ಮ ಕಡೆಯವರೇ? ಅಥವಾ ಶತ್ರುಗಳ ಕಡೆಯವರೇ? ಎಂದು ವಿವೇಚಿಸುವ ಶಕ್ತಿಯೂ ಸಹ ಅತ್ಯಂತ ಕೋಪಾವಿಷ್ಟರಾಗಿದ್ದ ಅವರಿಗೆ ಇಲ್ಲದಾಗಿದ್ದಿತು. ಯುದ್ಧವು ಘೋರವಾಗಿ ಪರಿವರ್ತನಗೊಂಡು, ಇಂದ್ರನಿಗೂ ಮತ್ತು ಅಪಾರವಾದ ದೈತ್ಯರ ಸೈನ್ಯಕ್ಕೂ ನಡೆದ ರೀತಿಯಲ್ಲಿಯೇ ಭೀಮ-ಕಲಿಂಗರ ಯುದ್ಧವು ನಡೆಯಿತು. ಆ ಸಮರಾಂಗಣದಲ್ಲಿ ಯುದ್ಧಮಾಡುತ್ತಿದ್ದ ಸೈನ್ಯಗಳಲ್ಲಿ ಸಮುದ್ರದ ಭೋರ್ಗರೆಯುವ ಶಬ್ದಕ್ಕೆ ಸದೃಶವಾದ ದೊಡ್ಡ ಕೋಲಾಹಲಶಬ್ದವುಂಟಾಯಿತು. ಆ ಸಮಯದಲ್ಲಿ ಯೋಧರು ಪರಸ್ಪರವಾಗಿ ಎಳೆದಾಡುತ್ತಾ, ಬಡಿದಾಡುತ್ತಾ, ಒಬ್ಬರನ್ನೊಬ್ಬರು ಕೊಂದುಹಾಕುತ್ತಾ ಯುದ್ಧಭೂಮಿಯನ್ನು ಚಿತಾಯುಕ್ತವನ್ನಾಗಿ (ಶ್ಮಶಾನಭೂಮಿಯನ್ನಾಗಿ) ಮಾಡಿಬಿಟ್ಟರು. ಆಗ ಭೂಮಿಯು ಮೊಲದ ರಕ್ತದಿಂದ ತೋಯಿಸಲ್ಪಟ್ಟಿರು

ವಂತೆ (ಮೊಲದ ರಕ್ತದಂತೆ) ಹೆಚ್ಚು ಕೆಂಪಾಗಿ ಕಾಣುತ್ತಿದ್ದಿತು. ಮಹಾರಾಜ! ಹಿಂದೆಯೇ ಹೇಳಿದಂತೆ ಅವರ ಆ ಕೋಪದ ಭರದಲ್ಲಿ ಯೋಧರು 'ತಮ್ಮವರಾರು? ತಮ್ಮ ಶತ್ರುಗಳಾರು?'–ಎಂಬುದನ್ನು ವಿವೇಚಿಸುತ್ತಲೇ ಇರಲಿಲ್ಲ. ಕೈಗೆ ಸಿಕ್ಕಿದವರನ್ನು ಕಡಿಯುವುದೇ ಅವರ ಪರಮಧ್ಯೇಯವಾಗಿದ್ದಿತು. ಹೆಚ್ಚು ಹೆಚ್ಚು ಯೋಧರನ್ನು ಕಡಿದುಹಾಕಬೇಕೆಂಬ ಉತ್ಸಾಹವೇ ಅದಕ್ಕೆ ಕಾರಣವಾಗಿದ್ದಿತು. ಈ ಕಾರಣದಿಂದ ಪರಮದುರ್ಜಯರಾದ ಆ ಶೂರರು ತಮ್ಮ ಕಡೆಯವರನ್ನೇ ಸೆಳೆದು ಕೊಂದುಹಾಕುತ್ತಿದ್ದರು. ಈ ರೀತಿಯಲ್ಲಿ ಅಲ್ಪಸಂಖ್ಯಾತರಾಗಿದ್ದ ಚೇದಿಯೋಧರಿಗೂ ಬಹುಸಂಖ್ಯಾತರಾಗಿದ್ದ ಕಲಿಂಗರಿಗೂ ಮತ್ತು ನಿಷಾದಯೋಧರಿಗೂ ಭಯಂಕರವಾದ ಯುದ್ಧವು ನಡೆಯಿತು.

ಮಹಾಬಲಿಷ್ಠರಾಗಿದ್ದ ಚೇದಿಯೋಧರು ಶಕ್ತಿಮೀರಿ ಯುದ್ಧಮಾಡಿದರು. ತಮ್ಮ ಪೌರುಷವನ್ನೂ ತೋರಿಸಿದರು. ಆದರೂ ಅವರು ಅಲ್ಪ ಸಂಖ್ಯಾತರಾಗಿದ್ದುದರಿಂದ ಕಲಿಂಗ-ನಿಷಾದರ ಸಂಯುಕ್ತಸೈನಿಕರನ್ನು ಎದುರಿಸಿ ನಿಲ್ಲಲಾರದೇ, ಭೀಮಸೇನನನ್ನು ಏಕಾಕಿಯಾಗಿ ಬಿಟ್ಟು ಪಲಾಯನ ಮಾಡಿದರು. ಚೇದಿಯೋಧರು ಹಿಮ್ಮೆಟ್ಟಲಾಗಿ, ಕಲಿಂಗ-ನಿಷಾದ ಸೈನಿಕರಿಂದ ಆಕ್ರಮಿತನಾಗಿದ್ದ ಭೀಮಸೇನನು ತನ್ನ ಬಾಹುಬಲವನ್ನೇ ಆಶ್ರಯಿಸಿ ಯುದ್ಧವನ್ನು ಮುಂದುವರಿಸಿದನು. ಏಕಾಕಿಯಾದೆನೆಂದು ಭಯದಿಂದ ಹಿಮ್ಮೆಟ್ಟಲಿಲ್ಲ. ಮಹಾಬಲಿಷ್ಠನಾದ ಭೀಮಸೇನನು, ನಾಲ್ಕು ಕಡೆಗಳಿಂದಲೂ ಶತ್ರುಗಳು ಬಾಣಗಳ ಮಳೆಗರೆಯುತ್ತಿದ್ದರೂ ರಥದಲ್ಲಿ ಕುಳಿತಿದ್ದ ಸ್ಥಳದಿಂದ ಸ್ವಲ್ಪವೂ ವಿಚಲಿತನಾಗಲಿಲ್ಲ. ಕಲಿಂಗರ ಮಹಾಸೇನೆಯನ್ನು ತನ್ನ ನಿಶಿತವಾದ ಬಾಣಗಳಿಂದ ಮುಚ್ಚಿಬಿಟ್ಟನು. ಮಹಾಧನುರ್ಧರನಾದ ಕಲಿಂಗರಾಜ ಮತ್ತು ಅವನ ಮಗ ಪ್ರಸಿದ್ಧನಾದ, ಮಹಾರಥನಾದ ಶಕ್ರದೇವ ಇಬ್ಬರೂ ಸೇರಿ ಭೀಮಸೇನನನ್ನು ಅನೇಕಬಾಣಗಳಿಂದ ಪ್ರಹರಿಸಿದರು. ತನ್ನ ಬಾಹುಬಲವನ್ನೇ ಆಶ್ರಯಿಸಿ ಯುದ್ಧಮಾಡುತ್ತಿದ್ದ ಭೀಮನು ಸುಂದರವಾಗಿದ್ದ ತನ್ನ ಧನುಸ್ಸನ್ನು ಟೇಂಕರಿಸುತ್ತಾ, ಕಲಿಂಗಾಧಿಪತಿಯೊಡನೆ ಘೋರವಾದ ಯುದ್ಧವನ್ನು ಪ್ರಾರಂಭಿಸಿದನು. ಶಕ್ರದೇವನಾದರೋ ಆ ಘೋರಯುದ್ಧದಲ್ಲಿ ಅನೇಕಾನೇಕ ಬಾಣಗಳನ್ನು ಭೀಮನ ಮೇಲೆ ಪ್ರಯೋಗಿಸುತ್ತಾ ಹತ್ತಾರು

ಬಾಣಗಳಿಂದ ಭೀಮಸೇನನ ಕುದುರೆಗಳನ್ನು ಸಂಹರಿಸಿದನು. ಕುದುರೆಗಳು ಸತ್ತುಹೋದುದರಿಂದ ಭೀಮಸೇನನು ರಥಹೀನನಾದುದನ್ನು ಕಂಡು ಇದೇ ಒಳ್ಳೆಯ ಸಮಯವೆಂದು ಭಾವಿಸಿ ಶಕ್ರದೇವನು ಚೂಪಾದ ಬಾಣಗಳನ್ನು ಭೀಮನ ಮೇಲೆ ಅನವರತವಾಗಿ ಸುರಿಸುತ್ತಾ ಅವನ ರಥದ ಸಮೀಪಕ್ಕೆ ಧಾವಿಸಿದನು. ಬೇಸಿಗೆಯ ಕಡೆಯಲ್ಲಿ ಮೋಡಗಳು ಅಡೆ-ತಡೆಗಳೇ ಇಲ್ಲದೇ ಮಳೆಗರೆಯುವಂತೆ–ಮಹಾಬಲಿಷ್ಠನಾದ ಶಕ್ರದೇವನು ರಥಹೀನನಾಗಿದ್ದ ಭೀಮಸೇನನ ಮೇಲೆ ಬಾಣಗಳ ಮಳೆಯನ್ನೇ ಸುರಿಸಿದನು. ಕುದುರೆಗಳು ಸತ್ತುಹೋದುವೆಂಬ ಕಾರಣದಿಂದ ಭೀಮಸೇನನು ಧೃತಿಗೆಡಲಿಲ್ಲ. ಕುದುರೆ ಗಳಿಂದ ವಿಹೀನನಾಗಿದ್ದರೂ ಸಹ ಅದೇ ರಥದಲ್ಲಿಯೇ ನಿಂತು ಮಹಾಬಲ ಶಾಲಿಯಾದ ಭೀಮಸೇನನು ಲೋಹಮಯವಾದ ದೊಡ್ಡ ಗದೆಯನ್ನು ತನ್ನ ಶಕ್ತಿಯೆಲ್ಲವನ್ನೂ ಉಪಯೋಗಿಸಿ ಶಕ್ರದೇವನ ಕಡೆಗೆ ಬೀಸಿದನು. ಭೀಮನ ಗದಾಪ್ರಹಾರವು ಬಿದ್ದೊಡನೆಯೇ ಕಲಿಂಗರಾಜನ ಮಗನಾದ ಶಕ್ರದೇವನು ಧ್ವಜ-ಸೂತಸಮೇತನಾಗಿ ರಥದಿಂದ ಕೆಳಗುರುಳಿ ಭೂಮಿಯಮೇಲೆ ಬಿದ್ದನು. ಭೀಮನ ಗದೆಯಿಂದ ತನ್ನ ಮಗನು ಹತನಾದುದನ್ನು ಕಂಡು ಕುಪಿತನಾದ ಕಲಿಂಗರಾಜನು ಅನೇಕಸಹಸ್ರ ರಥಗಳೊಡನೆ ಭೀಮನನ್ನು ನಾಲ್ಕು ದಿಕ್ಕುಗಳಿಂದಲೂ ಆಕ್ರಮಿಸಿದನು. ಅದನ್ನು ನೋಡಿದ ಭೀಮನು ಬಹುಭಾರವಾಗಿದ್ದ, ಮಹಾವೇಗಯುಕ್ತವಾಗಿದ್ದ ಗದೆಯನ್ನು ರಥದಲ್ಲಿಯೇ ಇಟ್ಟು ಇತರರಿಂದ ಮಾಡಲು ಅಸಾಧ್ಯವಾದ ದುಷ್ಕರವಾದ ಕಾರ್ಯ ವೊಂದನ್ನು ಮಾಡಿ ತೋರಿಸುವ ಇಚ್ಛೆಯಿಂದ ಕತ್ತಿಯನ್ನೂ–ಎತ್ತಿನ ಚರ್ಮ ದಿಂದ ಮಾಡಿದ್ದ, ಸುವರ್ಣಮಯವಾದ ನಕ್ಷತ್ರಗಳಿಂದಲೂ ಮತ್ತು ಅರ್ಧ ಚಂದ್ರಗಳಿಂದಲೂ ಸುಶೋಭಿಸುತ್ತಿದ್ದ ಗುರಾಣಿಯನ್ನೂ ಹಿಡಿದು ಕೆಳಗಿಳಿ ದನು. ಅನಂತರ ಭೀಮಸೇನನ ವಧಾಕಾಂಕ್ಷಿಯಾದ ಕಲಿಂಗರಾಜನು ಪರಮ ಕ್ರುದ್ಧನಾಗಿ ಶಿಂಜಿನಿಯನ್ನೊಮ್ಮೆ ಉಜ್ಜಿ ಸರ್ಪದ ವಿಷದಂತಹ ಅತಿಕ್ರೂರವಾದ ಮತ್ತು ಘೋರವಾದ ಒಂದು ಬಾಣವನ್ನು ಬತ್ತಳಿಕೆಯಿಂದ ತೆಗೆದು ಭೀಮಸೇನನಿಗೆ ಗುರಿಯಿಟ್ಟು ಹೊಡೆದನು.

ಕಲಿಂಗರಾಜನಿಂದ ಬಿಡಲ್ಪಟ್ಟು ಬಹುವೇಗದಿಂದ ಬರುತ್ತಿದ್ದ ಸರ್ಪ ವಿಷೋಪಮವಾಗಿದ್ದ ಆ ಬಾಣವನ್ನು ಭೀಮಸೇನನು ತನ್ನ ಕೈಯಲ್ಲಿ ಹಿಡಿ

ದಿದ್ದ ವಿಶಾಲವಾದ ಕತ್ತಿಯಿಂದ ಎರಡು ಭಾಗಗಳಾಗಿ ಕತ್ತರಿಸಿಬಿಟ್ಟನು. ತಾನು ಮಾಡಿದ ಅದ್ಭುತಕಾರ್ಯಕ್ಕೆ ಸಂತೋಷಪಡುತ್ತಾ ಭೀಮನು ಒಮ್ಮೆ ಗಟ್ಟಿಯಾಗಿ ಸಿಂಹನಾದಮಾಡಿದನು. ಅದರಿಂದ ಕಲಿಂಗನ ಸೈನ್ಯಸಮೂಹವೇ ಭಯದಿಂದ ನಡುಗಿಬಿಟ್ಟಿತು. ಭೀಮನ ಅದ್ಭುತಕ್ರಿಯೆಯನ್ನು ಕಂಡು ಕಲಿಂಗರಾಜನು ಮತ್ತಷ್ಟು ಕೋಪಗೊಂಡವನಾಗಿ ಮಸೆಗಲ್ಲಿನಿಂದ ಹರಿತ ವಾಗಿ ಮಾಡಲ್ಪಟ್ಟಿದ್ದ ಹದಿನಾಲ್ಕು ತೋಮರಗಳನ್ನು ಶೀಘ್ರಾತಿಶೀಘ್ರವಾಗಿ ಭೀಮನ ಮೇಲೆ ಪ್ರಯೋಗಿಸಿದನು. ಮಹಾಬಾಹುವಾದ ಪಾಂಡವನು ಹದಿನಾಲ್ಕು ತೋಮರಗಳು ತನ್ನ ಕಡೆಗೆ ರಭಸದಿಂದ ಬರುತ್ತಿದ್ದರೂ ಸ್ವಲ್ಪವೂ ಭ್ರಾಂತನಾಗದೇ, ಅವುಗಳು ತನ್ನ ಸಮೀಪಕ್ಕೂ ಬರದಂತೆ ಆಕಾಶಮಾರ್ಗದಲ್ಲಿದ್ದಾಗಲೇ ತನ್ನ ಹರಿತವಾದ ಕತ್ತಿಯಿಂದ ಆ ಹದಿನಾಲ್ಕು ತೋಮರಗಳನ್ನೂ ಕತ್ತರಿಸಿಬಿಟ್ಟನು. ಅನಂತರ ಪುರುಷರ್ಷಭನಾದ ಭೀಮಸೇನನು ಖಡ್ಗಪಾಣಿಯಾಗಿ ಕಲಿಂಗರಾಜಕುಮಾರನಾದ ಭಾನು ಮಂತನ ರಥದ ಕಡೆಗೆ ಧಾವಿಸಿದನು. ತನ್ನ ಕಡೆಗೆ ಬರುತ್ತಿದ್ದ ಭೀಮಸೇನನನ್ನು ಭಾನುಮಂತನು ಬಾಣಗಳ ಮಳೆಗರೆಯುವಿಕೆಯಿಂದ ಮುಚ್ಚಿ ಸಿಂಹನಾದಮಾಡಿದನು. ಆ ಸಿಂಹನಾದದ ಘೋರಶಬ್ದವು ಆಕಾಶದಲ್ಲಿಯೂ ಪ್ರತಿಧ್ವನಿಸಿತು. ಭಾನುಮಂತನು ಮಾಡಿದ ಘೋರ ಗರ್ಜನೆಯನ್ನು ಭೀಮನು ಸಹಿಸಲಿಲ್ಲ. ಅವನು ಮಾಡಿದ ಗರ್ಜನೆಗಿಂತಲೂ ಬಹುಘೋರವಾದ ಮಹಾಗರ್ಜನೆಯನ್ನು ಭೀಮನು ಮಾಡಿದನು. ಭೀಮನು ಮಾಡಿದ ಈ ಗರ್ಜನೆಯಿಂದಾಗಿ ಕಲಿಂಗರ ಸೈನ್ಯವು ಭಯದಿಂದ ನಡುಗಿತು. ಆ ಮಹಾಶಬ್ದವನ್ನು ಕೇಳಿದ ಯಾರೂ ಸಹ ಭೀಮನನ್ನು ಮನುಷ್ಯನೆಂದು ಪರಿಗಣಿಸಲೇ ಇಲ್ಲ. (ಯಾವುದೋ ಭೂತವಿಶೇಷ ವಿರಬಹುದೆಂದು ಭಾವಿಸಿದರು.) ಈ ರೀತಿಯಲ್ಲಿ ಭೀಮನು ಅತಿ ಘೋರವಾದ, ಕರ್ಣಕಠೋರವಾದ, ಶತ್ರುಹೃದಯವಿದ್ರಾವಕವಾದ ಗರ್ಜನೆ ಯನ್ನು ಮಾಡಿ ಕತ್ತಿಯನ್ನು ಯಥಾಪೂರ್ವಕವಾಗಿಯೇ ಕೈಯಲ್ಲಿ ಹಿಡಿದು ಭಾನುಮಂತನು ಕುಳಿತಿದ್ದ ಮದಿಸಿದ್ದ ಆನೆಯ ಎರಡು ಕೋರೆದಾಡೆಗಳನ್ನೇ ಬಲವಾಗಿ ಹಿಡಿದುಕೊಂಡು ಛಂಗನೆ ಮೇಲಕ್ಕೆ ಹಾರಿ ಗಜರಾಜನ ಮಧ್ಯ ಭಾಗಕ್ಕೆ ಹೋದನು. ಅಷ್ಟರಲ್ಲಿಯೇ ಕಲಿಂಗರಾಜನು ಶಕ್ತ್ಯಾಯುಧವನ್ನು ಭೀಮನ ಮೇಲೆ ಪ್ರಯೋಗಿಸಿದನು. ಆ ಶಕ್ತ್ಯಾಯುಧವನ್ನೂ ಸಹ ಭೀಮನು

ತನ್ನ ದೊಡ್ಡ ಕತ್ತಿಯಿಂದಲೇ ಎರಡು ತುಂಡುಗಳಾಗಿ ಕತ್ತರಿಸಿ ಮರುಕ್ಷಣ ದಲ್ಲಿಯೇ ಭಾನುಮಂತನನ್ನೂ ಕತ್ತರಿಸಿಬಿಟ್ಟನು. ಈ ರೀತಿಯಲ್ಲಿ ಶತ್ರುಗಳನ್ನು ದಮನಮಾಡುವ ಸಾಮರ್ಥ್ಯವಿದ್ದ ಭೀಮನು ಆಯುಧಪಾಣಿಯಾಗಿದ್ದ ಕಲಿಂಗರಾಜಕುಮಾರನನ್ನು ಸಂಹರಿಸಿ, ಬಹುಭಾರವಾಗಿದ್ದ ಮತ್ತು ತನ್ನ (ಭೀಮನ) ಶಕ್ತಿಯನ್ನೂ ತಡೆದುಕೊಳ್ಳುವ ಸಾಮರ್ಥ್ಯವಿದ್ದ ಆ ಕತ್ತಿಯನ್ನು ಕಲಿಂಗರಾಜನು ಕುಳಿತಿದ್ದ ಗಜರಾಜನ ಮೇಲೆ ಪ್ರಯೋಗಿಸಿ ಅದನ್ನೂ ಸಂಹರಿಸಿಬಿಟ್ಟನು. ಭೀಮನಿಂದ ಭುಜಪ್ರದೇಶದಲ್ಲಿ ಕತ್ತರಿಸಲ್ಪಟ್ಟ ಆ ಗಜಶ್ರೇಷ್ಠವು ಗಟ್ಟಿಯಾಗಿ ಶಬ್ದಮಾಡುತ್ತಾ , ಸಮುದ್ರದ ಅಲೆಗಳ ಬಡಿತ ದಿಂದ (ನದೀಪ್ರವಾಹದ ವೇಗದಿಂದ) ಭಗ್ನವಾಗಿ ಹೋದ ಪರ್ವತದ ಶಿಖರ ಭಾಗವು ಕೆಳಗೆ ಬೀಳುವಂತೆ ಬಿದ್ದುಬಿಟ್ಟಿತು. ಅದು ಕೆಳಗೆ ಬೀಳುವುದರೊಳ ಗಾಗಿ ಭರತಕುಲವಂಶೀಯನಾದ, ಕವಚವನ್ನು ಧರಿಸಿದ್ದ, ಉದಾರಚಿತ್ತನಾದ ಭೀಮನು ಆ ಆನೆಯ ಮೇಲಿನಿಂದ ಕೆಳಕ್ಕೆ ಧುಮುಕಿ ಖಡ್ಗಪಾಣಿಯಾಗಿಯೇ ಭೂಮಿಯ ಮೇಲೆ ನಿಂತುಕೊಂಡನು. ಅನಂತರ ತನ್ನ ಕತ್ತಿಯನ್ನು ವರಸೆ-ವರಸೆಯಾಗಿ ತಿರುಗಿಸುತ್ತಾ ಎಲ್ಲ ಕಡೆಗಳಲ್ಲಿಯೂ ನುಗ್ಗಿ ಸಾವಿರಾರು ಆನೆ ಗಳನ್ನು ಹೊಡೆದುರುಳಿಸಿದನು. ಭೀಮನು ಕತ್ತಿಯನ್ನು ತಿರುಗಿಸುತ್ತಾ ಆನೆ ಗಳನ್ನು ಕತ್ತರಿಸುತ್ತಿರುವುದನ್ನು ನೋಡಿದರೆ ಅಗ್ನಿಚಕ್ರವೊಂದು ಆನೆಗಳ ಸಂಹಾರವನ್ನು ಮಾಡುತ್ತಿರುವುದೋ ಎಂಬಂತೆ ಕಾಣುತ್ತಿದ್ದಿತು. ಮಹಾಶಕ್ತಿ ಮಂತನಾದ ಭೀಮಸೇನನು ಗಜಾಶ್ವ-ರಥ-ಪದಾತಿಸಮೂಹಗಳಲ್ಲಿ ನುಗ್ಗಿ ಕತ್ತಿಯನ್ನು ನಾನಾವರಸೆಗಳಿಂದ ತಿರುಗಿಸುತ್ತಾ ಅನೇಕಾನೇಕ ರಥಗಳನ್ನೂ, ಅಶ್ವಗಳನ್ನೂ, ಆನೆಗಳನ್ನೂ, ಪದಾತಿಗಳನ್ನೂ ಸಂಹಾರಮಾಡುತ್ತಾ ಆ ಪ್ರಾಣಿಗಳ ಶರೀರದಿಂದ ಚಿಮ್ಮಿದ ರಕ್ತದಿಂದಲೇ ತೋಯ್ದುಹೋದನು.

ಬಲೋತ್ಕಟನಾದ ಭೀಮನು ಶತ್ರುಸೈನ್ಯಗಳಲ್ಲಿ ನಿರ್ಭಯನಾಗಿ ನುಗ್ಗುತ್ತಾ ಅನೇಕ ಸೈನಿಕರ ಶರೀರಗಳನ್ನೂ, ತಲೆಗಳನ್ನೂ ಕತ್ತರಿಸುತ್ತಾ ಗಿಡಗಪಕ್ಷಿಯಂತೆ ರಣಾಂಗಣದ ಸುತ್ತಲೂ ಸಂಚರಿಸುತ್ತಿದ್ದನು. ಗಜಯೋಧಿ ಗಳ ಆ ಯುದ್ಧದಲ್ಲಿ ಶತ್ರುಗಳ ಭಯವನ್ನು ಹೆಚ್ಚಿಸುವಂತಹ, ಸಂಕ್ರುದ್ಧ ನಾದ, ಕಾಲಾಂತಕನಾದ ಯಮನಂತೆಯೇ ಕಾಣುತ್ತಿದ್ದ, ಒಬ್ಬನೇ ಒಬ್ಬ ಪದಾತಿಯು (ಪದಾತಿಸೈನಿಕನಂತೆ ರಣಾಂಗಣದ ಸುತ್ತಲೂ ತಿರುಗಾಡುತ್ತಿದ್ದ

ಭೀಮಸೇನನು) ಬಹಳ ಮೊನಚಾದ ಅಲುಗನ್ನು ಹೊಂದಿದ್ದ ಕತ್ತಿಯಿಂದ ಆ ಎಲ್ಲ ಕಲಿಂಗಗಜಸೈನ್ಯವನ್ನೂ ಮೋಹನಗೊಳಿಸಿದನು. (ಭ್ರಾಂತರನ್ನಾಗಿ ಮಾಡಿಬಿಟ್ಟನು.) ಅಲ್ಲಿ ನಡೆಯುತ್ತಿದ್ದ ಮತ್ತೊಂದು ಆಶ್ಚರ್ಯದ ಸಂಗತಿ ಯೆಂದರೆ, ಮಹಾರಾಜ! ಕೈಯ್ಯಲ್ಲಿ ಖಡ್ಗವನ್ನು ಹಿಡಿದು ರಣಾಂಗಣದಲ್ಲೆಲ್ಲಾ ಬಹಳ ವೇಗವಾಗಿ ಸಂಚರಿಸುತ್ತಿದ್ದ ಭೀಮಸೇನನನ್ನು ಮೂಢರಾದ (ಏನು ಮಾಡಬೇಕೆಂಬುದನ್ನು ತಿಳಿಯದ) ಸೈನಿಕರು ಗಟ್ಟಿಯಾಗಿ ಕೂಗಿಕೊಂಡು ಆಕ್ರಮಿಸಲು ಹೋಗುತ್ತಿದ್ದರು. (ಭೀಮನು ತನ್ನನ್ನು ಆಕ್ರಮಿಸಿದವರೆಲ್ಲ ರನ್ನೂ ಕ್ಷಣಮಾತ್ರದಲ್ಲಿ ಕತ್ತರಿಸಿ ಮುಂದೆ ಹೋಗುತ್ತಿದ್ದನು.) ರಿಪುಮರ್ದನ ನಾದ, ಮಹಾಬಲಿಷ್ಠನಾದ ಭೀಮನು ರಥಸೈನಿಕರ ರಥಗಳ ಈಷಾದಂಡ ಗಳನ್ನೂ (ಮೂಕೀಮರ ), ಕುದುರೆಗಳನ್ನೂ, ಬಿಗಿದಿರುವ ನೊಗಗಳನ್ನೂ ಕತ್ತರಿಸಿ, ಅನಂತರ ರಥಿಗಳನ್ನೂ ಸಹ ಸಂಹರಿಸುತ್ತಿದ್ದನು. ಒಬ್ಬನೇ ಒಬ್ಬ ಭೀಮಸೇನನು ಅನೇಕಮಾರ್ಗಗಳಲ್ಲಿ ಅನೇಕಪ್ರಕಾರವಾಗಿ ಸುತ್ತುತ್ತಿದ್ದಂತೆ ಕಾಣುತ್ತಿದ್ದಿತು. ಅವನು ತಾನು ಮಾಡುತ್ತಿದ್ದ ಕತ್ತಿಯ ಯುದ್ಧದಲ್ಲಿ ಭ್ರಾಂತ, ಆವಿದ್ಧ, ಉದ್ಭ್ರಾಂತ, ಆಪ್ಲುತ, ಪ್ರಸೃತ, ಪ್ಲುತ, ಸಂಪಾತ, ಸಮು ದೀರ್ಣ–ಇವೇ ಮುಂತಾದ ವರಸೆಗಳಿಂದ ಶತ್ರುಗಳನ್ನು ವಿನಾಶಗೊಳಿಸು ತ್ತಿದ್ದನು. (ಭ್ರಾಂತ ಎಂದರೆ ಕತ್ತಿಯನ್ನು ಮಂಡಲಾಕಾರವಾಗಿ ತಿರುಗಿಸು ವುದು. ಇದನ್ನು ಹೆಚ್ಚು ಪರಿಶ್ರಮದಿಂದ ಸಾಧ್ಯಮಾಡಿಕೊಳ್ಳುವುದು ಆವಿದ್ಧ. ತಲೆಯ ಮೇಲೆ ಮಂಡಲಾಕಾರವಾಗಿ ತಿರುಗಿಸುವುದು ಉದ್ಭ್ರಾಂತ. ಕತ್ತಿಯನ್ನು ಮಂಡಲಾಕಾರವಾಗಿ ತಿರುಗಿಸುತ್ತಲೇ ಹಾರುವುದು ಆಪ್ಲುತ. ಎಲ್ಲ ದಿಕ್ಕುಗಳಲ್ಲಿಯೂ ವ್ಯವಸ್ಥಿತವಾದ ನಡಿಗೆಯಿಡುತ್ತಾ ಕತ್ತಿಯನ್ನು ತಿರುಗಿಸುತ್ತಾ ಸಾಗುವುದಕ್ಕೆ ಪ್ರಸೃತ ಎಂದು ಹೆಸರು. ಕತ್ತಿಯನ್ನು ತಿರುಗಿಸುತ್ತಲೇ ಒಂದೇ ದಿಕ್ಕಿನಲ್ಲಿ ಮುಂದುವರಿಯುತ್ತಿರುವುದಕ್ಕೆ ಪ್ಲುತ ಎಂದು ಹೆಸರು. ವೇಗದಿಂದ ಹೋಗುತ್ತಿದ್ದರೆ ಅದೇ ಸಂಪಾತವಾಗುತ್ತದೆ. ಈ ಕತ್ತೀವರಸೆಯಲ್ಲಿಯೇ ಸಮಸ್ತಶತ್ರುಗಳನ್ನೂ ಪ್ರಹರಿಸಿ ಗಾಯ ಗೊಳಿಸುವುದಕ್ಕೆ ಅಥವಾ ಸಂಹಾರಮಾಡುವುದಕ್ಕೆ ಸಮುದೀರ್ಣ ಎಂದು ಹೆಸರು.) ಭೀಮಸೇನನು ತನ್ನ ಶ್ರೇಷ್ಠವಾದ ಖಡ್ಗದಿಂದ ಅನೇಕರನ್ನು ಅನೇಕ ವಿಧವಾಗಿ ಕತ್ತರಿಸುತ್ತಿದ್ದನು. ಅನೇಕರಿಗೆ ಮರ್ಮಸ್ಥಳಗಳಿಗೆ ಪೆಟ್ಟು

ತಗುಲಿ ಅವರು ಗಟ್ಟಿಯಾಗಿ ಆರ್ತನಾದಮಾಡುತ್ತಾ ಗತಪ್ರಾಣರಾಗಿ ಕೆಳಗೆ ಬೀಳುತ್ತಿದ್ದರು. ಭೀಮನ ಕತ್ತಿಯ ಪ್ರಹಾರದಿಂದಾಗಿ ಕೆಲವು ಆನೆಗಳ ಕೋರೆ ದಾಡೆಗಳೇ ಮುರಿದುಹೋಗಿದ್ದುವು. ಮತ್ತೆ ಕೆಲವು ಆನೆಗಳ ಸೊಂಡಿಲುಗಳೇ ಕತ್ತರಿಸಿ ಹೋಗಿದ್ದುವು. ಮತ್ತೆ ಕೆಲವು ಆನೆಗಳಿಗೆ ಕುಂಭಸ್ಥಳಗಳೇ ಒಡೆದು ಹೋಗಿದ್ದುವು. ಮತ್ತೆ ಕೆಲವು ಆನೆಗಳ ಮಾವುತರು ಸತ್ತುಹೋಗಿರುತ್ತಿದ್ದರು. ಇಂತಹ ಆನೆಗಳು ತಡೆಯಲಾರದ ನೋವಿನಿಂದಾಗಿ ತಮ್ಮ ಕಡೆಯ ಸೈನ್ಯದ ಮೇಲೆಯೇ ನುಗ್ಗಿ ತಮ್ಮ ಕಡೆಯ ಸೈನ್ಯಗಳನ್ನೇ ಭಗ್ನಮಾಡಿಬಿಡುತ್ತಿದ್ದುವು. ಅನಂತರ ಗಟ್ಟಿಯಾಗಿ ಕಿರುಚಿಕೊಳ್ಳುತ್ತಾ ಭೂಮಿಯ ಮೇಲೆ ಬಿದ್ದು ಪ್ರಾಣಬಿಡುತ್ತಿದ್ದುವು.

ಮಹಾರಾಜ! ನಾವು ರಣರಂಗದಲ್ಲಿ ನೋಡಿದುದನ್ನು ಸ್ವಲ್ಪ ವಿವರಿಸು ವೆನು, ಕೇಳು. ಕತ್ತರಿಸಿ ಬಿದ್ದಿದ್ದ ಅನೇಕಾನೇಕ ತೋಮರಗಳನ್ನು ನೋಡಿದೆವು. ದೊಡ್ಡ ದೊಡ್ಡ ಆನೆಗಳ ಕತ್ತುಗಳು ಕತ್ತರಿಸಿ ಬಿದ್ದಿರುವುದನ್ನು ನೋಡಿದೆವು. ಚಿತ್ರವಿಚಿತ್ರವಾಗಿದ್ದ, ಸುವರ್ಣದ ದಾರಗಳಿಂದ ಉಜ್ಜ್ವಲವಾಗಿ ಕಾಣುತ್ತಿದ್ದ ಆನೆಯ ನಡುವಿಗೆ ಕಟ್ಟಿದ್ದ ಹಗ್ಗಗಳು ಸುತ್ತಲೂ ಬಿದ್ದಿರುವುದನ್ನು ನೋಡಿದೆವು. ಆನೆ ಮತ್ತು ಕುದುರೆಗಳ ಕಂಠಾಭರಣಗಳು, ಶಕ್ತ್ಯಾಯುಧಗಳು, ಪತಾಕೆಗಳು, ಕಣಪಗಳೆಂಬ ಶಸ್ತ್ರವಿಶೇಷಗಳು, ಬತ್ತಳಿಕೆಗಳು, ವಿಚಿತ್ರವಾದ ಯುದ್ಧೋಪಯೋಗಿ ಯಂತ್ರಗಳು, ಧನುಸ್ಸುಗಳು, ಶುಭ್ರವಾದ ಈಟಿಗಳು, ಚಾವಟಿಗಳು, ಅಂಕುಶಗಳು, ನಾನಾವಿಧ ಗಾತ್ರಗಳ ಗಂಟೆಗಳು, ಸುವರ್ಣಖಚಿತವಾದ ಖಡ್ಗಮುಷ್ಟಿಗಳು–ಈ ಎಲ್ಲ ವಸ್ತುಗಳೂ ಅಲ್ಲಲ್ಲಿ ಬಿದ್ದಿರುವುದನ್ನು ನಾವು ಕಂಡೆವು. ಆನೆಗಳನ್ನೂ, ಬಿದ್ದಿರುವ ಮತ್ತು ಬೀಳು ತ್ತಿರುವ ಮಾವಟಿಗರನ್ನೂ ನಾವು ನೋಡಿದೆವು. ಕೆಲವೆಡೆಯಲ್ಲಿ ಆನೆಗಳು ಸೊಂಡಿಲುಗಳನ್ನು ಕಳೆದುಕೊಂಡು ಬಿದ್ದಿದ್ದುವು. ಮತ್ತೆ ಕೆಲವೆಡೆಯಲ್ಲಿ ಶರೀರಾದ್ಯಂತವಾಗಿ ಕತ್ತರಿಸಲ್ಪಟ್ಟು ಸತ್ತುಬಿದ್ದಿದ್ದವು. ಹೀಗೆ ರಣರಂಗದಲ್ಲಿ ಗುಂಪು-ಗುಂಪಾಗಿ ಬಿದ್ದಿದ್ದ ಆನೆಗಳ ರಾಶಿಯನ್ನು ನೋಡಿದರೆ-ಕೆಳಕ್ಕೆ ಕುಸಿದು ಹರಡಿಕೊಂಡಿರುವ ಪರ್ವತಗಳಿಂದ ಸಮರಭೂಮಿಯು ವ್ಯಾಪ್ತವಾಗಿ ದೆಯೋ–ಎಂಬಂತೆ ಕಾಣುತ್ತಿದ್ದಿತು. ಮಹಾರಾಜ! ಈ ರೀತಿಯಾಗಿ ಭೀಮ ಸೇನನು ಕಲಿಂಗರಾಜನ ಮಹಾಗಜಗಳನ್ನು ಧ್ವಂಸಮಾಡಿ ಅನಂತರ ಇತರ

ಪ್ರಾಣಿಗಳನ್ನೂ ಸಹ ವಿನಾಶಗೊಳಿಸಲು ಉಪಕ್ರಮಿಸಿದನು. ಅಶ್ವಾರೋಹಿಗಳ ಕಡೆಗೆ ಅವನ ದೃಷ್ಟಿಯು ಹೊರಳಿತು. ರಣರಂಗದಲ್ಲಿದ್ದ ಶ್ರೇಷ್ಠರಾದ ಅನೇಕ ಅಶ್ವಾರೋಹಿಗಳನ್ನೂ ಭೀಮಸೇನನು ಧ್ವಂಸಮಾಡಿದನು. ಈ ರೀತಿಯಾಗಿ ಕಲಿಂಗರಾಜನ ಸೈನಿಕರಿಗೂ ಭೀಮನಿಗೂ ಘೋರವಾದ ಯುದ್ಧವೇ ನಡೆಯಿತು. ಆ ಘೋರವಾದ ಯುದ್ಧದಲ್ಲಿ ಕುದುರೆಗಳ ಲಗಾಮು, ಕಟ್ಟುವ ಹಗ್ಗ (ಚಿನ್ನದ ದಾರಗಳಿಂದಲೇ ಮಾಡಿದ್ದ ಥಳಥಳಿಸುತ್ತಿದ್ದ ಹಗ್ಗಗಳು), ಜೀನು, ಪ್ರಾಸ, ಬಹುಮೂಲ್ಯವಾದ ಋಷ್ಟಿಗಳು (ಆಯುಧ ವಿಶೇಷ), ಕವಚಗಳು, ಗುರಾಣಿಗಳು, ಚಿತ್ರವಿಚಿತ್ರವಾದ ರತ್ನಗಂಬಳಿಗಳು–ಇವುಗಳೆಲ್ಲವೂ ಅಸ್ತವ್ಯಸ್ತವಾಗಿ ರಣಾಂಗಣದ ಸುತ್ತಲೂ ಬಿದ್ದಿರುವುದು ಕಾಣುತ್ತಿದ್ದಿತು. ಭೀಮಸೇನನು ಪ್ರಾಸಗಳಿಂದಲೂ, ವಿಚಿತ್ರವಾದ ಯುದ್ಧೋಪಯೋಗಿಗಳಾದ ಸಾಮಗ್ರಿಗಳಿಂದಲೂ, ಹೊಳೆಯುವ ಶಸ್ತ್ರಗಳಿಂದಲೂ ರಣರಂಗವನ್ನು ವ್ಯಾಪ್ತವಾದುದನ್ನಾಗಿ ಮಾಡಿದ್ದನು. ಅದನ್ನು ನೋಡಿದರೆ ನಾನಾವರ್ಣಗಳ ಹೂವುಗಳಿಂದ ಕೂಡಿ ಅಲಂಕೃತವಾಗಿರುವಂತೆ ಆ ರಣಾಂಗಣವು ಕಾಣುತ್ತಿದ್ದಿತು. ಭೀಮಸೇನನು ಕತ್ತಿಯನ್ನು ಹಿಡಿದು ಪದಾತಿಯಾಗಿ ತಿರುಗುತ್ತಿದ್ದಾಗ ಕೆಲವು ಸಮಯಗಳಲ್ಲಿ ರಥದ ಮೇಲಕ್ಕೇ ಹಾರಿಬಿಡುತ್ತಿದ್ದನು. ಅಲ್ಲಿದ್ದ ರಥಿಕನ ಬಳಿಗೆ ಹೋಗಿ ಅವನನ್ನು ಹಿಡಿದು ಖಡ್ಗದಿಂದ ಕತ್ತರಿಸಿಬಿಡುತ್ತಿದ್ದನು. ಅಷ್ಟುಮಾತ್ರವಲ್ಲದೇ, ಧ್ವಜಸಮೇತನಾಗಿ ರಥದಲ್ಲಿ ಕುಳಿತಿದ್ದ ಸಾರಥಿ, ರಥಿ ಇಬ್ಬರನ್ನೂ ಕತ್ತರಿಸಿ ಕೆಳಕ್ಕೆ ಕೆಡುವುತ್ತಿದ್ದನು. ಒಂದು ರಥದಿಂದ ಮತ್ತೊಂದು ರಥಕ್ಕೆ ಹಾರುತ್ತಿದ್ದು ಅಲ್ಲಿರುವವರನ್ನು ಸಂಹರಿಸಿ ಪುನಃ ರಥದಿಂದ ಕೆಳಕ್ಕೆ ಧುಮುಕುತ್ತಿದ್ದನು. ಮಾರ್ಗದಲ್ಲಿ ಸಿಕ್ಕಿದ ಯೋಧರೆಲ್ಲರನ್ನೂ ಸಂಹಾರಮಾಡಿಕೊಂಡೇ ಮುಂದೆ ಹೋಗುತ್ತಿದ್ದನು. ಈ ರೀತಿಯಲ್ಲಿ ದಿಕ್ಕು-ದಿಕ್ಕುಗಳಲ್ಲಿಯೂ ಚಿತ್ರ-ವಿಚಿತ್ರವಾಗಿ ಶತ್ರುಗಳನ್ನು ಸಂಹರಿಸುತ್ತಾ ಭೀಮಸೇನನು ಸಂಚರಿಸುತ್ತಿದ್ದುದನ್ನು ಕಂಡು ಜನರು ಆಶ್ಚರ್ಯಭರಿತರಾದರು. ಅವನ ಶತ್ರುಸಂಹಾರಕ್ಕೆ ಖಡ್ಗವೊಂದೇ ಆಯುಧವಾಗಿರಲಿಲ್ಲ. ಕೆಲವರನ್ನು ಕಾಲಿನಿಂದಲೇ ತುಳಿದು ಸಂಹರಿಸುತ್ತಿದ್ದನು. ಕೆಲವರ ಕಾಲುಗಳನ್ನು ಹಿಡಿದು ಮೇಲೆತ್ತಿ ತಿರುಗಿಸಿ ರಭಸದಿಂದ ಎಸೆದು ಸಂಹರಿಸುತ್ತಿದ್ದನು. ಮತ್ತೆ ಕೆಲವರನ್ನು ಕತ್ತಿಯಿಂದ ಕತ್ತರಿಸುತ್ತಿದ್ದನು. ಅವನ ಗರ್ಜನೆಯನ್ನು ಕೇಳಿ ಭಯಪಟ್ಟು

ಕೊಂಡೇ ಅನೇಕರು ಪ್ರಾಣತೊರೆಯುತ್ತಿದ್ದರು. ಅವನು ವೇಗವಾಗಿ ದಿಕ್ಕಿನಿಂದ ದಿಕ್ಕಿಗೆ ಧಾವಿಸುತ್ತಿದ್ದಾಗ ಅವನ ಕಾಲಿನ ರಭಸಕ್ಕೆ ಸಿಕ್ಕಿ ಅನೇಕರು ಸಾಯುತ್ತಿದ್ದರು. ಈ ರೀತಿಯಲ್ಲಿ ಭೀಮಸೇನನು ಅನೇಕರನ್ನು ಅನೇಕ ರೀತಿಯಲ್ಲಿ ಸಂಹರಿಸುತ್ತಿದ್ದನು. ಇವೆಲ್ಲಕ್ಕೂ ಮಿಗಿಲಾದ ಅಚ್ಚರಿಯೆಂದರೆ ಮಹಾರಾಜ! ಕೆಲವು ಯೋಧರು ಅವನ ಭಯಂಕರಾಕಾರವನ್ನು ನೋಡಿಯೇ ಭಯದಿಂದ ಪ್ರಾಣಬಿಡುತ್ತಿದ್ದರು.

ಕಲಿಂಗರ ಮಹಾಸೇನೆಯು ಭೀಮನ ದಾಳಿಗೆ ಸಿಕ್ಕಿ ಅಪಾರವಾದ ನಷ್ಟ ವನ್ನು ಅನುಭವಿಸುತ್ತಿದ್ದರೂ ಧೈರ್ಯಗೆಡದೆ ಭೀಷ್ಮನನ್ನು ರಕ್ಷಿಸುವ ಸಲು ವಾಗಿ ಅವನನ್ನು ಆವರಿಸಿನಿಂತು ಭೀಮಸೇನನನ್ನು ಎದುರಿಸುತ್ತಿದ್ದರು. ಅನಂತರ ಭೀಮಸೇನನು ಕಲಿಂಗಸೈನ್ಯದ ಅಗ್ರಭಾಗದಲ್ಲಿ ಶ್ರುತಾಯುಷನು ನಿಂತಿರುವುದನ್ನು ಕಂಡು ಅವನನ್ನೆದುರಿಸಲು ಅವನ ಕಡೆಗೆ ಧಾವಿಸಿದನು. ಭೀಮಸೇನನು ತನ್ನ ಬಳಿಗೆ ಬರುತ್ತಿರುವುದನ್ನು ಕಂಡು ಮಹಾತ್ಮನಾದ, ಕಲಿಂಗಾಧಿಪತಿಯಾದ ಶ್ರುತಾಯುಷನು ಭೀಮಸೇನನ ಸ್ತನಾಂತರದಲ್ಲಿ ಎಂದರೆ ಎದೆಗೆ ಸರಿಯಾಗಿ ಗುರಿಯಿಟ್ಟು ಒಂಬತ್ತು ಬಾಣಗಳನ್ನು ಪ್ರಯೋಗಿ ಸಿದನು. ಆ ಬಾಣಗಳು ಭೀಮಸೇನನಿಗೆ ಸ್ವಲ್ಪ ಘಾಸಿಯನ್ನೇ ಉಂಟುಮಾಡಿ ದುವು. ಮದಗಜವೊಂದನ್ನು ಅಂಕುಶದಿಂದ ಚುಚ್ಚಿದಂತಾಯಿತು. ಆಹುತಿ ಯಿಂದ ಅಗ್ನಿದೇವನು ಪ್ರಜ್ವಲಿಸುವಂತೆ–ಭೀಮಸೇನನು ಕ್ರೋಧದಿಂದ ಕಿಡಿ ಕಿಡಿಯಾದನು. ಆ ವೇಳೆಗೆ ಸರಿಯಾಗಿ ಭೀಮನ ರಥದ ಸಾರಥಿಯಾದ ಅಶೋಕನು ಸುವರ್ಣಭೂಷಿತವಾದ ರಥವೊಂದನ್ನು ಭೀಮನ ಸಮೀಪಕ್ಕೆ ತಂದು ಭೀಮನನ್ನು ರಥದಿಂದ ಸಂಪನ್ನನನ್ನಾಗಿ ಮಾಡಿದನು. (ಸಾರಥಿ ಯಾದ ಅಶೋಕನು ತಂದ ರಥದ ಮೇಲೆ ಭೀಮನು ಕುಳಿತುಕೊಂಡನು.) ರಥದಲ್ಲಿ ಕುಳಿತುಕೊಂಡೊಡನೆಯೇ ಶತ್ರುಸೂದನನಾದ ಭೀಮನು 'ನಿಲ್ಲು' 'ನಿಲ್ಲು' ಎಂದು ಹೇಳುತ್ತಾ ಶ್ರುತಾಯುಷನ ಬೆನ್ನಟ್ಟಿ ಹೋದನು. ಭೀಮನು ತನ್ನನ್ನು ಎದುರಿಸಲು ಬರುತ್ತಿರುವುದನ್ನು ಕಂಡು ಬಲಿಷ್ಠನಾದ ಶ್ರುತಾಯುಷನು ಬಹಳ ಕುಪಿತನಾಗಿ, ತನ್ನ ಕೈಚಳಕವನ್ನು ತೋರಿಸುತ್ತಾ ಬಹಳ ಚೂಪಾಗಿದ್ದ ಬಾಣಗಳನ್ನು ಭೀಮಸೇನನ ಮೇಲೆ ಪ್ರಯೋಗಿಸಿದನು.

ಮಹಾತ್ಮನಾದ ಕಲಿಂಗರಾಜನು ಶ್ರೇಷ್ಠವಾದ ಧನುಸ್ಸಿನಿಂದ ನಿಶಿತವಾದ ಒಂಬತ್ತು ಬಾಣಗಳನ್ನು ಭೀಮನ ಮೇಲೆ ಪ್ರಯೋಗಿಸಲಾಗಿ ಅದರಿಂದ ಬಲವಾಗಿ ಪೆಟ್ಟುತಿಂದ ಭೀಮನು ದಂಡದಿಂದ ಪ್ರಹತವಾದ ಸರ್ಪದಂತೆ ಗಟ್ಟಿಯಾಗಿ ಕಿರುಚಿಕೊಂಡನು. ಪರಮಕ್ರುದ್ಧನಾಗಿದ್ದ, ಬಲಿಷ್ಠರಲ್ಲಿ ಶ್ರೇಷ್ಠನಾದ, ಕುಂತಿಯ ಮಗನಾದ ಭೀಮನು ಬಲಿಷ್ಠವಾದ ಧನುಸ್ಸೊಂದನ್ನು ಕೈಗೆ ತೆಗೆದುಕೊಂಡು ಲೋಹಮಯವಾದ ಏಳು ಬಾಣಗಳಿಂದ ಕಲಿಂಗಾಧಿಪತಿಯನ್ನು ಬಾಧೆಪಡಿಸಿದನು. ಪುನಃ ಕ್ಷುರ ಎಂಬ ಎರಡು ಬಾಣಗಳನ್ನು ಪ್ರಯೋಗಿಸಿ ಕಲಿಂಗೇಶ್ವರನ ರಥಚಕ್ರಗಳ ರಕ್ಷಕರಾಗಿದ್ದ ಮಹಾಬಲಿಷ್ಠರಾಗಿದ್ದ, ಸತ್ಯದೇವ ಮತ್ತು ಸತ್ಯ ಎಂಬಿಬ್ಬರನ್ನು ಯಮನ ಮನೆಗೆ ಕಳುಹಿಸಿದನು. ಅನಂತರ ಮಹಾತ್ಮನಾದ ಭೀಮಸೇನನು ನಿಶಿತವಾದ ಮೂರು ಬಾಣಗಳಿಂದ ಕಲಿಂಗಾಧಿಪತಿಯಾದ ಕೇತುಮಂತನನ್ನು ಸಂಹರಿಸಿದನು. ತಮ್ಮ ಸೇನಾನಾಯಕನಾದ ಕೇತುಮಂತನು ಹತನಾದುದರಿಂದ ಕಲಿಂಗರು ಅಧೀರರಾಗಲಿಲ್ಲ. ಕಲಿಂಗದೇಶದ ಸಮಸ್ತಕ್ಷತ್ರಿಯರೂ ಅನೇಕಸಹಸ್ರಸೈನ್ಯಗಳೊಡನೆ ಯುದ್ಧಸನ್ನದ್ಧರಾಗಿ ಅಸಹನೀಯನಾದ ಭೀಮಸೇನನನ್ನು ಮುಂದೆ ಹೋಗದಂತೆ ತಡೆದು ನಿಲ್ಲಿಸಿದರು. ಅನಂತರ ಕಲಿಂಗರು ಶಕ್ತ್ಯಾಯುಧ, ಗದೆ, ಖಡ್ಗ, ತೋಮರ, ಋಷ್ಟಿ, ಗಂಡುಗೊಡಲಿ–ಇವೇ ಮೊದಲಾದ ಆಯುಧಗಳಿಂದ ಭೀಮಸೇನನನ್ನು ಪ್ರಹರಿಸಿದರು ಮತ್ತು ಬಾಣಗಳ ಮಳೆಯನ್ನೇ ಅವನ ಮೇಲೆ ಕರೆದರು. ತನ್ನ ಮೇಲೆ ಅನವರತವಾಗಿ ಸುರಿಯುತ್ತಿದ್ದ ಬಾಣವೃಷ್ಟಿಯನ್ನು ನಿವಾರಣೆಮಾಡಿಕೊಂಡು ಭೀಮಸೇನನು ಕಾಲವಿಳಂಬಮಾಡದೇ ಗದೆಯನ್ನೆತ್ತಿಕೊಂಡು ರಥದಿಂದ ಕೆಳಕ್ಕೆ ಧುಮುಕಿ ಕ್ಷಣಮಾತ್ರದಲ್ಲಿ ಏಳುನೂರು ಕಲಿಂಗಯೋಧರನ್ನು ಯಮಾಲಯಕ್ಕೆ ಕಳುಹಿಸಿಕೊಟ್ಟನು. ಪುನಃ ಹಾಗೆಯೇ ಮುಂದುವರಿದು ಮತ್ತೊಂದು ತಂಡದಲ್ಲಿದ್ದ ಎರಡು ಸಾವಿರ ಕಲಿಂಗಯೋಧರನ್ನು ಅರಿಮರ್ದನನಾದ ಭೀಮಸೇನನು ಮೃತ್ಯುಲೋಕಕ್ಕೆ ಕಳುಹಿಸಿದನು. ನಿಶ್ಚಯವಾಗಿಯೂ ಭೀಮನ ಆ ಕಾರ್ಯವು ಮಹಾದ್ಭುತವಾಗಿ ಕಂಡಿತು ; ಮಹಾರಾಜ! ಈ ಪ್ರಕಾರವಾಗಿ ಭೀಮಸೇನನು, ಮಹಾರಥನಾದ ಭೀಷ್ಮನನ್ನು ರಕ್ಷಣೆಮಾಡುತ್ತಿದ್ದ ಕಲಿಂಗರ ಸೈನ್ಯವನ್ನು

ಶೀಘ್ರಾತಿಶೀಘ್ರವಾಗಿ ಪುನಃ ಪುನಃ ಯುದ್ಧದಲ್ಲಿ ಮರ್ದನಮಾಡುತ್ತಿದ್ದನು. ಪಾಂಡವನು ಆನೆಯ ಮೇಲಿದ್ದ ಯೋಧರನ್ನು ಸಂಹರಿಸಿದನಂತರ ಆನೆಗಳು ಆ ಸಮರಾಂಗಣದಲ್ಲಿ ಭೀಮನ ಬಾಣಪ್ರಹಾರವನ್ನು ತಾಳಲಾರದೇ ವಾಯುವಿನಿಂದ ವಿಚಲಿತವಾದ ಮೇಘಗಳೋಪಾದಿಯಲ್ಲಿ ಓಡಿಹೋಗುತ್ತಿದ್ದುವು. ಭೀಮನ ಬಾಣಗಳಿಂದ ಗಾಯಗೊಳಿಸಲ್ಪಟ್ಟ ಆನೆಗಳು ತಮ್ಮ ಸೈನ್ಯವನ್ನೇ ತುಳಿದುಹಾಕುತ್ತಾ ಗಟ್ಟಿಯಾಗಿ ಕಿರುಚಿಕೊಳ್ಳುತ್ತಾ ಓಡಿಹೋಗುತ್ತಿದ್ದುವು.

ಆನೆಗಳು ತಮ್ಮ ಕಡೆಯ ಸೈನ್ಯಗಳನ್ನೇ ಧ್ವಂಸಮಾಡಿಕೊಂಡು ಓಡುತ್ತಿರಲಾಗಿ ಖಡ್ಗಹಸ್ತನಾದ, ಮಹಾಬಾಹುವಾದ, ಮಹಾಭುಜನಾದ ಭೀಮನು ಅತ್ಯಂತಸಂತೋಷದಿಂದ ಬಹಳ ಗಟ್ಟಿಯಾಗಿ ಮಹಾಘೋಷಯುಕ್ತವಾದ ಶಂಖವನ್ನೂದಿದನು. ತರಂಗ-ತರಂಗವಾಗಿ ಬರುತ್ತಿದ್ದ ಮಹಾಘೋರವಾದ ಆ ಶಂಖಧ್ವನಿಯನ್ನು ಕೇಳಿ ಎಲ್ಲ ಕಲಿಂಗಸೈನಿಕರ ಹೃದಯಗಳೂ ನಡುಗಿದುವು. ಕಲಿಂಗರಿಗೆ ಮುಂದೇನುಮಾಡಬೇಕೆಂಬುದೇ ತಿಳಿಯದೇ ಅವರನ್ನು ಮೋಹವು ಆವರಿಸಿಬಿಟ್ಟಿತು. ಗಜೇಂದ್ರನಂತೆಯೇ ನಿರ್ಭಯವಾಗಿ ಎಲ್ಲ ಮಾರ್ಗಗಳಲ್ಲಿಯೂ ಶತ್ರುಗಳನ್ನು ಸದೆಬಡಿಯುತ್ತಾ ತಿರುಗುತ್ತಿದ್ದ ಮತ್ತು ಸಮಯಗಳಲ್ಲಿ ರಥಗಳ ಮೇಲಕ್ಕೂ ಹಾರಿ ಯೋಧರನ್ನು ಸಂಹರಿಸುತ್ತಿದ್ದ ಭೀಮಸೇನನನ್ನು ಕಂಡು ಸೈನ್ಯಗಳೂ, ಹಸ್ತ್ಯಶ್ವಗಳೇ ಮುಂತಾದ ವಾಹನಗಳೂ ನಡುಗಿದುವು ಮತ್ತು ಮುಂಗಾಣದೆ ಭ್ರಾಂತಿಯನ್ನು ಹೊಂದಿದುವು. ಸರೋವರವೊಂದನ್ನು ಅದರಲ್ಲಿರುವ ಮೊಸಳೆಯು ಯಾವ ವಿಧವಾದ ಅಡೆ-ತಡೆಯೂ ಇಲ್ಲದೆ ಕ್ಷೋಭೆಗೊಳಿಸುವಂತೆ-ಭೀಮಸೇನನು ಕಲಿಂಗಸೈನ್ಯವನ್ನು ಯಾವ ವಿಧವಾದ ಅಡೆ-ತಡೆಯೂ ಇಲ್ಲದೆ ಮಥಿಸಿಬಿಟ್ಟನು. ಭೀಮಸೇನನ ಭಯದಿಂದ ಸಂತಾಪಗೊಂಡ ಕಳಿಂಗಸೇನೆಯು ನಡುಗಿತು. ಅದ್ಭುತಕರ್ಮನಾದ ಭೀಮನಿಂದ ಸಂತಾಪಗೊಂಡ ಎಲ್ಲ ಕಲಿಂಗಸೈನ್ಯಗಳೂ ಗುಂಪುಗುಂಪಾಗಿ ಓಡುತ್ತಿದ್ದುವು. ಆದರೂ ಸಹ ಸ್ವಲ್ಪಹೊತ್ತು ಕಳೆಯುತ್ತಲೇ ಪುನಃ ಒಟ್ಟುಗೂಡಿ ಭೀಮನ ಮೇಲೆ ದಾಳಿಮಾಡಲು ಬರುತ್ತಿದ್ದುವು. ಅಪಾರವಾಗಿದ್ದ ಕಲಿಂಗಸೈನ್ಯವನ್ನು ಸಂಪೂರ್ಣವಾಗಿ ವಿನಾಶಮಾಡುವುದಕ್ಕಾಗಲೀ ಅಥವಾ ಅವುಗಳನ್ನು ಸಂಪೂರ್ಣವಾಗಿ ಹಿಮ್ಮೆಟ್ಟಿಸುವುದಕ್ಕಾಗಲೀ ಸಾಧ್ಯವಾಗಲೇ ಇಲ್ಲ. ಆ ಸಮಯದಲ್ಲಿ ಪಾಂಡವರ ಸೇನಾನಾಯಕನಾದ ಧೃಷ್ಟ

ದ್ಯುಮ್ನನು ತನ್ನ ಸೇನೆಗೆ 'ಕಲಿಂಗರೊಡನೆ ಯುದ್ಧಮಾಡಿರಿ' ಎಂದು ಆಜ್ಞಾಪಿಸಿದನು. ಸೇನಾಪತಿಯಾದ ಧೃಷ್ಟದ್ಯುಮ್ನನ ಆಜ್ಞೆಯನ್ನು ಕೇಳಿ ದೊಡನೆಯೇ ಶಿಖಂಡಿಪ್ರಮುಖರಾದ ವೀರಯೋಧರು ಪ್ರಹಾರಕುಶಲರಾದ ರಥಿಕರೊಡನೆಯೂ, ಇತರ ಸೈನ್ಯಗಳೊಡನೆಯೂ ಭೀಮನನ್ನು ಸುತ್ತುಗಟ್ಟಿ ನಿಂತರು. ಪಾಂಡುಪುತ್ರನಾದ ಧರ್ಮರಾಜನೂ ಸಹ ಮೋಡಗಳಂತೆ ಕಪ್ಪಾದ ಬಣ್ಣದಿಂದ ಕೂಡಿದ್ದ ಆನೆಗಳ ಸೈನ್ಯದೊಡನೆ ಶಿಖಂಡಿಪ್ರಮುಖರ ಸೈನ್ಯವನ್ನು ಹಿಂಬಾಲಿಸಿದನು. ಈ ರೀತಿಯಾಗಿ ದ್ರುಪದನ ಪುತ್ರನಾದ ಧೃಷ್ಟದ್ಯುಮ್ನನು ತನ್ನ ಎಲ್ಲ ಸೈನ್ಯವನ್ನೂ ಯುದ್ಧಕ್ಕೆ ಸಜ್ಜುಗೊಳಿಸಿ ಅನೇಕ ಸತ್ಪುರುಷರಿಂದ ಪರಿವೃತನಾಗಿ ಭೀಮಸೇನನ ಪೃಷ್ಠಭಾಗದ ರಕ್ಷಣೆಯನ್ನು ತಾನೇ ವಹಿಸಿ ಕೊಂಡನು. ಭೀಮನ ರಕ್ಷಣೆಯ ವಿಷಯವಾಗಿ ಧೃಷ್ಟದ್ಯುಮ್ನನು ಇಷ್ಟೊಂದು ಆಸಕ್ತಿವಹಿಸಿದುದಕ್ಕೆ ಕಾರಣವಿಲ್ಲದಿಲ್ಲ. ಮಹಾರಾಜ! ಪಾಂಚಾಲರಾಜನಾದ ಧೃಷ್ಟದ್ಯುಮ್ನನಿಗೆ ಪ್ರಪಂಚದಲ್ಲಿ ಭೀಮ ಮತ್ತು ಸಾತ್ಯಕಿ ಇವರಿಗಿಂತಲೂ ಪ್ರಿಯರಾದವರು ಬೇರೆ ಯಾರೂ ಇರಲಿಲ್ಲ. ಅವರಿಬ್ಬರನ್ನೂ ತನ್ನ ಪ್ರಾಣ ಗಳಿಗಿಂತಲೂ ಅಧಿಕರೆಂದೇ ಅವನು ಭಾವಿಸಿದ್ದನು. ಶತ್ರುನಿಷೂದನನಾದ ಧೃಷ್ಟದ್ಯುಮ್ನನು ಕಲಿಂಗರ ಸೈನ್ಯವನ್ನು ಕ್ಷಣಕ್ಷಣಕ್ಕೂ ಧ್ವಂಸಮಾಡುತ್ತಾ ಸಂಚರಿಸುತ್ತಿದ್ದ ಮಹಾಬಾಹುವಾದ ಭೀಮಸೇನನನ್ನು ನೋಡಿದನು. ಆಗ ಧೃಷ್ಟದ್ಯುಮ್ನನ ಸಂತೋಷಕ್ಕೆ ಪಾರವೇ ಇಲ್ಲದಾಯಿತು. ಅನೇಕಾವರ್ತಿ ಜಯಕಾರಮಾಡುತ್ತಾ ತನ್ನ ಶಂಖವನ್ನು ಗಟ್ಟಿಯಾಗಿ ಊದಿದನು. ಸಿಂಹ ನಾದಮಾಡಿದನು. ಗರ್ಜಿಸಿದನು. ತನ್ನ ಸಮೀಪದಲ್ಲಿಯೇ ಇದ್ದ ಸುವರ್ಣ ಭೂಷಿತವಾಗಿದ್ದ ಪಾರಿವಾಳದ ಬಣ್ಣದ ಕುದುರೆಗಳನ್ನು ಹೊಂದಿದ್ದ ರಥದಲ್ಲಿ ಕೋವಿದಾರಧ್ವಜನು (ಧೃಷ್ಟದ್ಯುಮ್ನನು) ಇದ್ದುದನ್ನು ಕಂಡು ಭೀಮಸೇನನು ಸಮಾಶ್ವಾಸಿತನಾದನು. (ಧೃಷ್ಟದ್ಯುಮ್ನನು ತನ್ನ ಪಕ್ಕದಲ್ಲಿದ್ದುದರಿಂದ ಭೀಮ ಸೇನನಿಗೆ ಹೆಚ್ಚು ಸಮಾಧಾನವಾಯಿತು.) ಮಹಾತ್ಮನಾದ ಭೀಮಸೇನನು ಕಲಿಂಗಸೈನಿಕರಿಂದ ಆಕ್ರಮಿತನಾಗಿರುವುದನ್ನು ಕಂಡು ಅವನನ್ನು ರಕ್ಷಿಸುವ ಸಲುವಾಗಿ ಧೃಷ್ಟದ್ಯುಮ್ನನು ಮತ್ತಷ್ಟು ಹತ್ತಿರಕ್ಕೆ ಹೋದನು. ಕಲಿಂಗರನ್ನು ಎದುರಿಸಿ ಯುದ್ಧಮಾಡುತ್ತಿದ್ದ ಧೃಷ್ಟದ್ಯುಮ್ನ-ವೃಕೋದರರು ದೂರದಲ್ಲಿ

ಸಾತ್ಯಕಿಯು ಬರುತ್ತಿರುವುದನ್ನು ಕಂಡು ಮತ್ತಷ್ಟು ಧೈರ್ಯೋತ್ಸಾಹಗಳಿಂದ ಕಲಿಂಗರನ್ನು ಎದುರಿಸಿ ಯುದ್ಧಮಾಡಲು ತೊಡಗಿದರು. ವಿಜಯಿಗಳಲ್ಲಿ ಶ್ರೇಷ್ಠನಾದ, ಪುರುಷರ್ಷಭನಾದ ಸಾತ್ಯಕಿಯು ಭೀಮ-ಪಾರ್ಷತರು ಯುದ್ಧ ಮಾಡುತ್ತಿದ್ದ ಸ್ಥಳಕ್ಕೆ ಬಹುಶೀಘ್ರಗತಿಯಲ್ಲಿ ಬಂದು ಅವರ ಹಿಂಭಾಗದಲ್ಲಿ ನಿಂತು ಅವರ ರಕ್ಷಣೆಯಲ್ಲಿ ನಿರತನಾದನು. ಸಾತ್ಯಕಿಯು ಧನುಸ್ಸನ್ನು ಕೈಯಲ್ಲಿ ಹಿಡಿದು ಭಯಂಕರವಾದ ಪರಾಕ್ರಮವನ್ನು ತೋರಿಸುತ್ತಾ ತನ್ನ ರೂಪವನ್ನು ರೌದ್ರವನ್ನಾಗಿ ಮಾಡಿಕೊಂಡು ಕಲಿಂಗರನ್ನು ನೋಡಿದನು. ಭೀಮಸೇನನು ಅಲ್ಲಿ ಭಯಂಕರವಾದ ಒಂದು ನದಿಯನ್ನೇ ಸೃಷ್ಟಿಸಿಬಿಟ್ಟಿದ್ದನು. ಆ ನದಿಯ ಉಗಮಸ್ಥಾನವು ಕಲಿಂಗಸೈನ್ಯವೇ ಆಗಿದ್ದಿತು. ಮಾಂಸ ಮತ್ತು ರಕ್ತಗಳೇ ಆ ನದಿಯ ಕೆಸರಿನ ಭಾಗವಾಗಿದ್ದಿತು. ರಕ್ತವೇ ಆ ನದಿಯ ಪ್ರವಾಹ ರೂಪವಾಗಿದ್ದಿತು. ಇಂತಹ ಭಯಂಕರವಾದ ನದಿಯನ್ನು ಭೀಮನು ಸೃಷ್ಟಿಸಿದ್ದನು. ಈ ರಕ್ತನದಿಯು ಪಾಂಡವರ ಸೈನ್ಯಕ್ಕೂ ಕಲಿಂಗರ ಸೈನ್ಯಕ್ಕೂ ಮಧ್ಯಭಾಗದಲ್ಲಿ ಹರಿಯುತ್ತಿದ್ದಿತು. ಆ ನದಿಯನ್ನು ದಾಟಲೂ ಕೂಡ ಆಗುತ್ತಿರಲಿಲ್ಲ. ಮಹಾಬಲನಾದ ಭೀಮಸೇನನು ತಾನೇ ನಿರ್ಮಿಸಿದ ಆ ಭಯಂಕರವಾದ ರಕ್ತನದಿಯನ್ನು ದಾಟಿದನು. ಕಲಿಂಗಸೈನ್ಯವನ್ನು ಸಾವಿರಾರು ಸಂಖ್ಯೆಯಲ್ಲಿ ಸಂಹರಿಸಿ ರಕ್ತನದಿಯೊಂದನ್ನು ಹರಿಯಬಿಟ್ಟ ಭೀಮಸೇನನನ್ನು ನೋಡಿ ನಿನ್ನ ಕಡೆಯ ಯೋಧರೆಲ್ಲರೂ ಗಟ್ಟಿಯಾಗಿ ಕೂಗಿಕೊಂಡರು.

**ಕಾಲೋಽಯಂ ಭೀಮರೂಪೇಣ ಕಲಿಙ್ಗೈಃ ಸಹ ಯುಧ್ಯತೇ ।**

"ಇವನು ನಿಜವಾಗಿಯೂ ಮನುಷ್ಯನೇ ಅಲ್ಲ. ಸಾಕ್ಷಾತ್ ಕಾಲನೇ ಆಗಿದ್ದಾನೆ. ಮೃತ್ಯುದೇವತೆಯಾದ ಕಾಲನೇ ಭೀಮರೂಪವನ್ನು ಧರಿಸಿ ಈ ಕಲಿಂಗರೊಡನೆ ಯುದ್ಧಮಾಡುತ್ತಿದ್ದಾನೆ. ಕಾಲನಲ್ಲದೇ ಬೇರಾರಿಂದಲೂ ಇಷ್ಟು ಅಪಾರವಾದ ಸಂಹಾರಕಾರ್ಯವನ್ನು ನಡೆಸಲು ಸಾಧ್ಯವಾಗುತ್ತಿರಲಿಲ್ಲ."

ನಿನ್ನ ಕಡೆಯವರ ಈ ಕೂಗನ್ನು ಭೀಷ್ಮನೂ ಕೇಳಿಸಿಕೊಂಡನು. ಒಡನೆಯೇ ಅವನು ಸೇನೆಯನ್ನು ತನ್ನ ಸುತ್ತಲೂ ವ್ಯೂಹಕ್ರಮದಲ್ಲಿ ಸಿದ್ಧಪಡಿಸಿಕೊಂಡು ಭೀಮನ ಬಳಿಗೆ ತೆರಳಿದನು. ಸುವರ್ಣವಿಭೂಷಿತವಾಗಿದ್ದ ಭೀಷ್ಮನ ರಥವನ್ನು ಸಾತ್ಯಕೀ, ಭೀಮಸೇನ, ದ್ರುಪದನ ಮಗ ಧೃಷ್ಟದ್ಯುಮ್ನ–ಈ

ಮೂವರೂ ಎದುರಿಸಿದರು. ಬಹುಶೀಘ್ರವಾಗಿ ಆ ಮೂವರೂ ಭೀಷ್ಮನನ್ನು ಆಕ್ರಮಿಸಿ ನಿಂತವರಾಗಿ ಒಬ್ಬೊಬ್ಬರೂ ಮೂರು-ಮೂರು ಬಾಣಗಳಿಂದ ಭೀಷ್ಮನನ್ನು ಯಥಾಶಕ್ತಿ ಗಾಯಗೊಳಿಸಿದರು. ಭೀಷ್ಮನನ್ನು ಸಂಹರಿಸಿಬಿಡಬೇಕೆಂದು ಬಹುವಾಗಿ ಪ್ರಯತ್ನಿಸುತ್ತಿದ್ದ ಮಹಾಧನುಷ್ಮಂತರಾದ ಆ ಮೂವರನ್ನೂ ನಿನ್ನ ತಂದೆಯಾದ ದೇವವ್ರತನು ವಕ್ರ-ವಕ್ರವಾಗಿ ಹೋಗದೇ ಇರುವ (ಲಕ್ಷ್ಯವನ್ನು ನೇರವಾಗಿ ತಲುಪುವ) ಮೂರು-ಮೂರು ಬಾಣಗಳಿಂದ ಪ್ರತಿಯಾಗಿ ಪ್ರಹರಿಸಿದನು. ಅನಂತರ ಭೀಷ್ಮನು ಒಂದು ಸಾವಿರ ಬಾಣಗಳನ್ನು ಪ್ರಯೋಗಿಸಿ ಆ ಮೂವರು ಮಹಾರಥರನ್ನೂ ತಡೆದು ನಿಲ್ಲಿಸಿ, ಸುವರ್ಣದ ಆಭರಣಗಳಿಂದ ಸಮಲಂಕೃತವಾಗಿದ್ದ ಭೀಮನ ಕುದುರೆಗಳನ್ನು ಬಾಣಗಳಿಂದ ಸಂಹರಿಸಿದನು. ಕುದುರೆಗಳು ಸತ್ತುಹೋಗಿದ್ದರೂ ಸಹ ಅದೇ ರಥದಲ್ಲಿಯೇ ಪ್ರತಾಪವಂತನಾದ ಭೀಮನು ನಿಂತುಕೊಂಡು ಗಾಂಗೇಯನ ರಥದ ಕಡೆಗೆ ಒಂದು ಶಕ್ತ್ಯಾಯುಧವನ್ನು ರಭಸದಿಂದ ಪ್ರಯೋಗಿಸಿದನು. ಒಡನೆಯೇ ನಿನ್ನ ತಂದೆಯಾದ ದೇವವ್ರತನು ಆ ಶಕ್ತ್ಯಾಯುಧವು ತನ್ನ ಬಳಿಗಿನ್ನೂ ಬರುವುದರಲ್ಲಿದ್ದಾಗಲೇ ನಿಶಿತವಾದ ಬಾಣಗಳಿಂದ ಮೂರು ಭಾಗಗಳಾಗಿ ಕತ್ತರಿಸಿಬಿಟ್ಟನು. ಆ ಮೂರು ತುಂಡುಗಳೂ ಭೂಮಿಯಲ್ಲಿ ಬಿದ್ದುಹೋದುವು.

ತನ್ನ ಶಕ್ತ್ಯಾಯುಧವು ನಿಷ್ಫಲವಾದನಂತರ ಭೀಮಸೇನನು ಒಳ್ಳೆಯ ಉಕ್ಕಿನಿಂದ ಮಾಡಿದ್ದ, ಬಹುಭಾರವಾದ ಗದೆಯನ್ನು ತೆಗೆದುಕೊಂಡು ಬಹುಬೇಗ ತನ್ನ ರಥದಿಂದ ಕೆಳಕ್ಕೆ ಹಾರಿಬಿಟ್ಟನು. ಇತ್ತಲಾಗಿ ಸಾತ್ಯಕಿಯೂ ಭೀಮಸೇನನಿಗೆ ಪ್ರಿಯವನ್ನುಂಟುಮಾಡುವ ಸಲುವಾಗಿ ಬಹುಬೇಗ ಭೀಷ್ಮನ ಸಾರಥಿಯನ್ನು ನಿಶಿತವಾದ ಬಾಣಗಳಿಂದ ಸಂಹರಿಸಿ ಕೆಳಗುರುಳಿಸಿದನು. ರಥಿಗಳಲ್ಲಿ ಶ್ರೇಷ್ಠನಾದ ಭೀಷ್ಮನ ಸಾರಥಿಯು ಸತ್ತುಹೋಗಲಾಗಿ ಭೀಷ್ಮನ ರಥಕ್ಕೆ ಕಟ್ಟಿದ್ದ ವಾಯುವೇಗದ ಕುದುರೆಗಳು ಭೀಷ್ಮನ ರಥವನ್ನು ರಣಾಂಗಣದಿಂದ ಹೊರಕ್ಕೆ ಒಯ್ದುಬಿಟ್ಟುವು. ಈ ರೀತಿಯಲ್ಲಿ ಮಹಾವ್ರತನಾದ ಭೀಷ್ಮನು ರಣಾಂಗಣದಿಂದ ಹೊರಟುಹೋಗಲಾಗಿ, ಅಗ್ನಿಯು (ಅಗ್ನಿಕಣವು) ಹುಲ್ಲಿನ ಮೆದೆಯನ್ನು ಸುಡುತ್ತಾ ಪ್ರಜ್ವಲಿಸುವಂತೆ–ಭೀಮಸೇನನು ತನ್ನ ಅಮಿತವಾದ ತೇಜಸ್ಸಿನಿಂದ ಪ್ರಕಾಶಿಸಿದನು. ಅವನು ಎಲ್ಲ ಕಲಿಂಗಸೈನ್ಯವನ್ನೂ ಸಂಪೂರ್ಣವಾಗಿ ಸಂಹರಿಸಿ ಸೇನೆಯ ಮಧ್ಯಭಾಗದಲ್ಲಿ ನಿರ್ಭೀತನಾಗಿ ನಿಂತುಕೊಂಡನು.

ಆದರೆ ನಿನ್ನ ಕಡೆಯವರಲ್ಲಿ ಯಾರೂ ಸಹ ಅವನ ಬಳಿಗೆ ಹೋಗಲು ಉತ್ಸಾಹವುಳ್ಳವರಾಗಿರಲಿಲ್ಲ. ರಥಿಗಳಲ್ಲಿ ಶ್ರೇಷ್ಠನಾದ ಧೃಷ್ಟದ್ಯುಮ್ನನು ಯಶೋವಂತನಾದ ಭೀಮನನ್ನು ತನ್ನ ರಥದಲ್ಲಿ ಕುಳ್ಳಿರಿಸಿಕೊಂಡು ಎಲ್ಲ ಸೈನಿಕರೂ ನೋಡುತ್ತಿದ್ದಂತೆಯೇ ತನ್ನ ಸೈನ್ಯವಿದ್ದ ಕಡೆಗೆ ಕರೆದುಕೊಂಡು ಹೊರಟುಹೋದನು. ಕಲಿಂಗಸೈನ್ಯವನ್ನು ಸಂಪೂರ್ಣವಾಗಿ ನಿರ್ನಾಮಮಾಡಿ ವಿಜಯಿಯಾಗಿ ಬಂದ ಭೀಮಸೇನನನ್ನು ಪಾಂಚಾಲ್ಯರೂ ಮತ್ತು ಮತ್ಸ್ಯರೂ ಬಹುವಾಗಿ ಗೌರವಿಸಿದರು. ಅನಂತರ ಭೀಮಸೇನನು ಧೃಷ್ಟದ್ಯುಮ್ನನನ್ನು ಪ್ರೀತಿಯಿಂದ ಗಾಢಾಲಿಂಗನಮಾಡಿಕೊಂಡು ಸಾತ್ಯಕಿಯ ಬಳಿಗೆ ಹೋದನು. ಯದುವ್ಯಾಘ್ರನಾದ, ಸತ್ಯವಿಕ್ರಮನಾದ ಸಾತ್ಯಕಿಯು ಧೃಷ್ಟದ್ಯುಮ್ನನ ಸಮ್ಮುಖದಲ್ಲಿ ಭೀಮಸೇನನಿಗೆ ಹೇಳಿದನು : “ಭೀಮಸೇನ! ಅದೃಷ್ಟವಿಶೇಷ ದಿಂದ ಕಲಿಂಗರಾಜನಾದ ಭಾನುಮಂತ, ಅವನ ಮಗ ಕೇತುಮಂತ, ವೀರ ಶ್ರೇಷ್ಠನಾದ ಶಕ್ರದೇವ ಮತ್ತು ಇತರ ಅಸಂಖ್ಯಾತರಾದ ಕಲಿಂಗಯೋಧರು ನಿನ್ನಿಂದ ಕೊಲ್ಲಲ್ಪಟ್ಟರು. ಕಲಿಂಗರ ಸೇನೆಯು ಸಾಧಾರಣವಾದುದಾಗಿರಲಿಲ್ಲ. ಗಜಸೇನೆಯಿಂದಲೂ, ಅಶ್ವಸೇನೆಯಿಂದಲೂ, ರಥಸೇನೆಯಿಂದಲೂ ಸಮೃದ್ಧ ವಾಗಿದ್ದಿತು. ಅನೇಕಮಹಾಪುರುಷರು ಮತ್ತು ವೀರಾಧಿವೀರರು ಆ ಸೇನೆ ಯಲ್ಲಿದ್ದರು. ಧೀರರಾದ ಯೋಧರಿಂದ ಆ ಮಹಾಸೇನೆಯು ಸಂಸೇವಿತ ವಾಗಿದ್ದಿತು. ಅವರು ತಮ್ಮ ಸೈನ್ಯದ ಮಹಾವ್ಯೂಹವನ್ನೇ ರಚಿಸಿಕೊಂಡಿದ್ದರು. ಇಂತಹ ಅಪಾರವಾದ ಕಲಿಂಗಸೇನೆಯನ್ನು ನಿನ್ನ ಬಾಹುಬಲ-ಪರಾಕ್ರಮ ಗಳಿಂದ ಏಕಾಕಿಯಾಗಿಯೇ ನಿರ್ಮೂಲಮಾಡಿಬಿಟ್ಟಿರುವೆ. ನಿಶ್ಚಯ ವಾಗಿಯೂ ಇದು ಅದೃಷ್ಟವಲ್ಲದೇ ಮತ್ತೇನು?”

ಹೀಗೆಂಬುದಾಗಿ ಹೇಳಿ ದೀರ್ಘಬಾಹುವಾದ, ಶತ್ರುಗಳನ್ನು ದಮನ ಮಾಡುವ ಸಾಮರ್ಥ್ಯವುಳ್ಳ ಸಾತ್ಯಕಿಯು ತನ್ನ ರಥದಿಂದ ಭೀಮನಿದ್ದ ರಥಕ್ಕೆ ಹಾರಿ ಭೀಮನನ್ನು ಗಾಢವಾಗಿ ಆಲಿಂಗಿಸಿದನು. ಅನಂತರ ಸಾತ್ಯಕಿಯು ಪುನಃ ತನ್ನ ರಥಕ್ಕೆ ಬಂದು ಭೀಮನ ಬಲವನ್ನು ವೃದ್ಧಿಗೊಳಿಸುತ್ತಾ ಬಹುಕ್ರುದ್ಧನಾಗಿ ನಿನ್ನ ಕಡೆಯವರನ್ನು ಸಂಹರಿಸಲು ಉಪಕ್ರಮಿಸಿದನು.”

ಐವತ್ತನಾಲ್ಕನೆಯ ಅಧ್ಯಾಯವು ಮುಗಿಯಿತು.

## ಅಭಿಮನ್ಯು ಮತ್ತು ಅರ್ಜುನರ ಪರಾಕ್ರಮಪ್ರದರ್ಶನ: ಎರಡನೆಯ ದಿವಸದ ಯುದ್ಧಸಮಾಪ್ತಿ

ಸಂಜಯನು ಧೃತರಾಷ್ಟ್ರನಿಗೆ ಹೇಳುತ್ತಾನೆ :

**ಗತಪೂರ್ವಾಹ್ಣಭೂಯಿಷ್ಠೇ ತಸ್ಮಿನ್ನಹನಿ ಭಾರತ ।**
**ರಥನಾಗಾಶ್ವಪತ್ತೀನಾಂ ಸಾದಿನೀಂ ಚ ಮಹಾಕ್ಷಯೇ ॥೧॥**

**ದ್ರೋಣಪುತ್ರೇಣ ಶಲ್ಯೇನ ಕೃಪೇಣ ಚ ಮಹಾತ್ಮನಾ ।**
**ಸಮಸಜ್ಜತ ಪಾಞ್ಚಾಲ್ಯಸ್ತ್ರಿಭಿರೇತೈರ್ಮಹಾರಥೈಃ ॥೨॥**

"ಮಹಾರಾಜ! ಆ ಎರಡನೆಯ ದಿವಸದಲ್ಲಿ ಪೂರ್ವಾಹ್ಣದ ಹೆಚ್ಚು ಕಾಲವು ಕಳೆದುಹೋಗಲಾಗಿ, ರಥ-ನಾಗಾಶ್ವ-ಪದಾತಿಗಳು ಮತ್ತು ಸವಾರರು ಅಧಿಕಸಂಖ್ಯೆಯಲ್ಲಿ ಮರಣಹೊಂದಲಾಗಿ, ಧೃಷ್ಟದ್ಯುಮ್ನನು ನಿನ್ನ ಕಡೆಯ ಅಶ್ವತ್ಥಾಮಾ, ಶಲ್ಯ ಮತ್ತು ಮಹಾತ್ಮರಾದ ಕೃಪರು–ಈ ಮೂವರು ಮಹಾ ರಥರನ್ನು ಎದುರಿಸಿ ಯುದ್ಧಮಾಡಲು ಉಪಕ್ರಮಿಸಿದನು.

ಮೊದಲನೆಯ ಸುತ್ತಿನಲ್ಲಿಯೇ ಮಹಾಬಲನಾದ ಪಾಂಚಾಲದಾಯಾದನು (ಧೃಷ್ಟದ್ಯುಮ್ನನು) ಶೀಘ್ರವಾಗಿ ಹೋಗುವ ನಿಶಿತವಾದ ಹತ್ತು ಬಾಣಗಳಿಂದ ಅಶ್ವತ್ಥಾಮನ ರಥಕ್ಕೆ ಕಟ್ಟಿದ್ದ ಲೋಕವಿಖ್ಯಾತವಾದ ಕುದುರೆಗಳನ್ನು ಸಂಹರಿಸಿದನು. ಹತಾಶ್ವನಾದ ದ್ರೌಣಿಯು ಒಡನೆಯೇ ಶಲ್ಯನ ರಥದಲ್ಲಿ ಕುಳಿತು ಧೃಷ್ಟದ್ಯುಮ್ನನ ಮೇಲೆ ಬಾಣಗಳ ಮಳೆಯನ್ನೇ ಸುರಿಸಿದನು. ಧೃಷ್ಟದ್ಯುಮ್ನನೊಡನೆ ಅಶ್ವತ್ಥಾಮನು ಯುದ್ಧಮಾಡುತ್ತಿರುವುದನ್ನು ಕಂಡು ಅಭಿಮನ್ಯುವು ನಿಶಿತವಾದ ಬಾಣಗಳನ್ನು ದ್ರೌಣಿಯ ಮೇಲೆ ಎರಚುತ್ತಾ ಧೃಷ್ಟದ್ಯುಮ್ನನ ಸಹಾಯಕ್ಕೆ ಬಹುಬೇಗ ಬಂದನು. ಪುರುಷರ್ಷಭನಾದ ಅಭಿಮನ್ಯುವು ಶಲ್ಯನನ್ನು ಇಪ್ಪತ್ತೈದು ಬಾಣಗಳಿಂದಲೂ, ಕೃಪರನ್ನು ಒಂಬತ್ತು ಬಾಣಗಳಿಂದಲೂ, ಅಶ್ವತ್ಥಾಮನನ್ನು ಎಂಟು ಬಾಣಗಳಿಂದಲೂ ಪ್ರಹರಿಸಿ ಮೂವರನ್ನೂ ಗಾಯಗೊಳಿಸಿದನು. ಒಡನೆಯೇ ಅಶ್ವತ್ಥಾಮನೂ ಸಹ ಆರ್ಜುನಿಯನ್ನು ಒಂದು ಬಾಣದಿಂದ ಪ್ರಹರಿಸಿದನು. ಅಶ್ವತ್ಥಾಮನ

ಜೊತೆಯಲ್ಲಿಯೇ ಶಲ್ಯನು ಹತ್ತು ಬಾಣಗಳಿಂದಲೂ, ಕೃಪರು ಮೂರು ಬಾಣಗಳಿಂದಲೂ ಅಭಿಮನ್ಯುವನ್ನು ಪ್ರಹರಿಸಿದರು.

ಮಧ್ಯದಲ್ಲಿ ನಿನ್ನ ಮೊಮ್ಮಗ್ರನಾದ ಲಕ್ಷ್ಮಣನು ಯುದ್ಧಸನ್ನದ್ಧನಾಗಿದ್ದ ಅಭಿಮನ್ಯುವನ್ನು ಉತ್ಸಾಹಾನಂದಪೂರ್ಣನಾಗಿ ಆಕ್ರಮಿಸಿದನು. ಅನಂತರ ಲಕ್ಷ್ಮಣ-ಅಭಿಮನ್ಯುಗಳ ನಡುವೆ ಮಹಾಯುದ್ಧವು ಪ್ರಾರಂಭವಾಯಿತು. ಶತ್ರುಸಂಹಾರಸಮರ್ಥನಾದ, ದುರ್ಯೋಧನನ ಮಗನಾದ ಲಕ್ಷ್ಮಣನು ಪರಮಕ್ರುದ್ಧನಾಗಿ ಅನೇಕಬಾಣಗಳಿಂದ ಅಭಿಮನ್ಯುವನ್ನು ಗಾಯಗೊಳಿಸಿದನು. ಮಹಾರಾಜ! ಲಕ್ಷ್ಮಣನು ಅಭಿಮನ್ಯುವನ್ನು ಗಾಯಗೊಳಿಸಿದ್ದು ನಿಶ್ಚಯವಾಗಿಯೂ ಅದ್ಭುತವೇ ಸರಿ. ಲಕ್ಷ್ಮಣನ ಕೈಯಿಂದ ಪೆಟ್ಟುತಿಂದುದಕ್ಕಾಗಿ ಅಭಿಮನ್ಯುವಿಗೂ ಮಹಾಕ್ರೋಧವೇ ಉಂಟಾಯಿತು. ಬಹುಕುಪಿತನಾಗಿದ್ದ, ಕ್ಷಿಪ್ರಹಸ್ತನಾದ ಅಭಿಮನ್ಯುವು ತನ್ನ ದಾಯಾದನನ್ನು ಐವತ್ತು ಬಾಣಗಳಿಂದ ಪ್ರಹರಿಸಿದನು. ಮರುಕ್ಷಣದಲ್ಲಿಯೇ ಲಕ್ಷ್ಮಣನು ಒಂದೇ ಒಂದು ಬಾಣದಿಂದ ಧನುಸ್ಸನ್ನು ಹಿಡಿದಿದ್ದ ಅಭಿಮನ್ಯುವಿನ ಮುಷ್ಟಿಪ್ರದೇಶಕ್ಕೆ ಗುರಿಯಿಟ್ಟು ಹೊಡೆದು ಕ್ಷಣಮಾತ್ರದಲ್ಲಿ ಸೌಭದ್ರನ ಧನುಸ್ಸನ್ನು ಎರಡಾಗಿ ಕತ್ತರಿಸಿಬಿಟ್ಟನು. ಆಗ ನಿನ್ನ ಸೈನಿಕರು ಹರ್ಷದಿಂದ ಕೋಲಾಹಲಶಬ್ದವನ್ನು ಮಾಡಿದರು. ಎರಡು ಭಾಗವಾಗಿದ್ದ ಆ ಧನುಸ್ಸನ್ನು ಅಭಿಮನ್ಯುವು ಕೂಡಲೇ ತ್ಯಜಿಸಿ ಮರುಕ್ಷಣದಲ್ಲಿಯೇ ಮಹಾವೇಗಯುಕ್ತವಾಗಿದ್ದ ಮತ್ತು ವಿಚಿತ್ರವಾಗಿದ್ದ ಮತ್ತೊಂದು ಧನುಸ್ಸನ್ನು ತೆಗೆದುಕೊಂಡನು. ಯುದ್ಧದಲ್ಲಿ ತೊಡಗಿದ್ದ, ಅನ್ಯೋನ್ಯವಾಗಿ ಪ್ರತಿಗೆ ಪ್ರತಿಮಾಡುವ ಇಚ್ಛೆಯುಳ್ಳವರಾಗಿದ್ದ, ಪುರುಷರ್ಷಭರಾದ ಲಕ್ಷ್ಮಣಾಭಿಮನ್ಯುಗಳು ತೀಕ್ಷ್ಣವಾದ ಬಾಣಗಳಿಂದ ಪರಸ್ಪರವಾಗಿ ಕಾದಾಡಿದರು.

ಆ ಸಮಯದಲ್ಲಿ ದುರ್ಯೋಧನನು ತನ್ನ ಮಗನು ಅಭಿಮನ್ಯುವಿನಿಂದ ಪೀಡಿಸಲ್ಪಡುತ್ತಿರುವುದನ್ನು ಕಂಡು ತಾನೇ ಅಲ್ಲಿಗೆ ಹೋದನು. ಮಹಾರಾಜ! ನಿನ್ನ ಮಗನು ಲಕ್ಷ್ಮಣನ ರಕ್ಷಣೆಗಾಗಿ ಅಭಿಮನ್ಯುವಿನೊಡನೆ ಯುದ್ಧಮಾಡಲು ಹೊರಟುಹೋಗಲಾಗಿ, ಒಡನೆಯೇ ನಿನ್ನ

ಕಡೆಯ ಎಲ್ಲ ಜನಾಧಿಪರೂ ರಥಗಳು ಮತ್ತು ಸೈನ್ಯಗಳೊಡನೆ ಅಭಿಮನ್ಯುವನ್ನು ನಾಲ್ಕು ದಿಕ್ಕುಗಳಿಂದಲೂ ಆಕ್ರಮಿಸಿದರು. ಶ್ರೀಕೃಷ್ಣನಿಗೆ ಸಮಾನವಾದ ಪರಾಕ್ರಮವುಳ್ಳ, ಶೂರನಾದ ಅಭಿಮನ್ಯುವು ಯುದ್ಧದಲ್ಲಿ ದುರ್ಜಯರಾದ ಕೌರವಯೋಧರಿಂದ ಪರಿವೃತನಾಗಿದ್ದರೂ ಸಹ ಸ್ವಲ್ಪವಾದರೂ ಚಿಂತಿಸಲಿಲ್ಲ. ಆದರೆ ತನ್ನ ಮಗನು ನಾಲ್ಕು ದಿಕ್ಕುಗಳಿಂದಲೂ ಕೌರವಮಹಾರಥರಿಂದ ಆಕ್ರಮಿತನಾಗಿರುವುದನ್ನು ನೋಡಿ ಅರ್ಜುನನು ಮಗನನ್ನು ರಕ್ಷಿಸುವ ಸಲುವಾಗಿ ಶೀಘ್ರಾತಿಶೀಘ್ರವಾಗಿ ಅಭಿಮನ್ಯುವಿದ್ದ ಕಡೆಗೆ ಓಡಿಬಂದನು. ಸವ್ಯಸಾಚಿಯು ತನ್ನ ಮಗನ ರಕ್ಷಣೆಗಾಗಿ ಧಾವಿಸುತ್ತಿರುವುದನ್ನು ನೋಡಿ ಭೀಷ್ಮ-ದ್ರೋಣಪ್ರಮುಖರಾದ ರಾಜರು ರಥಸೈನ್ಯ, ಗಜಸೈನ್ಯ ಮತ್ತು ಅಶ್ವಸೈನ್ಯಗಳೊಡನೆ ಅರ್ಜುನನಿದ್ದೆಡೆಗೆ ತೆರಳಿದರು. ಎರಡೂ ಸೈನ್ಯಗಳ ನಡುವೆ ಘೋರವಾದ ಯುದ್ಧವು ಪ್ರಾರಂಭವಾಯಿತು. ಆನೆ-ಕುದುರೆ-ರಥ-ಕಾಲಾಳುಗಳ ಚಲನ-ವಲನಗಳ ಕಾರಣದಿಂದ ಭೂಮಿಯಿಂದ ಮೇಲೆದ್ದ ಧೂಳು ಸೂರ್ಯನ ರಥದವರೆಗೂ ಪ್ರಸರಿಸಿ ಎಲ್ಲೆಲ್ಲಿಯೂ ಬಹು ತೀವ್ರವಾದ ಧೂಳೇ ಕಾಣಿಸುತ್ತಿದ್ದಿತು. ಇತ್ತಲಾಗಿ ಸಾವಿರಾರು ಗಜಸೈನ್ಯಗಳು, ನೂರಾರು ಭೂಪಾಲರು, ಅರ್ಜುನನು ಬಿಡುತ್ತಿದ್ದ ಬಾಣಗಳಿಗೆ ಸಿಕ್ಕಿಹಾಕಿಕೊಂಡು, ಮುಂದೆ ನಡೆಯಲು ಅಸಮರ್ಥರಾದರು. ಎಲ್ಲ ಪ್ರಾಣಿಗಳೂ ಆರ್ತನಾದಗಳನ್ನು ಮಾಡತೊಡಗಿದುವು. ಎಲ್ಲ ದಿಕ್ಕುಗಳಲ್ಲಿಯೂ ಅಂಧಕಾರವು ಕವಿಯಿತು. ಭರತಶ್ರೇಷ್ಠನೇ! ಆ ಸಮಯದಲ್ಲಿ ಕೌರವರು ಹಿಂದೆ ಮಾಡಿದ್ದ ದುಃಸಹವಾದ ಮತ್ತು ಭಯಂಕರವಾದ ಅನ್ಯಾಯದ ಪರಿಣಾಮವು ಪ್ರತ್ಯಕ್ಷತಃ ಕಾಣುತ್ತಿದ್ದಿತು. ಕಿರೀಟಿಯು ಬಾಣಗಳ ಸಮೂಹದಿಂದ ಎಲ್ಲ ದಿಕ್ಕುಗಳನ್ನೂ ಮುಚ್ಚಿಬಿಟ್ಟಿದ್ದರಿಂದ ಅಂತರಿಕ್ಷವಾಗಲೀ, ದಿಕ್ಕುಗಳಾಗಲೀ, ಭೂಮಿಯಾಗಲೀ, ಸೂರ್ಯನಾಗಲೀ–ಎಲ್ಲಿರುವುವೆಂಬ ವಿಷಯವು ಯಾರಿಗೂ ತಿಳಿಯುತ್ತಲೇ ಇರಲಿಲ್ಲ. ಆ ಯುದ್ಧದಲ್ಲಿ ಅನೇಕಾನೇಕ ರಥಗಳು ನಾಶವಾದುವು. ಅನೇಕಗಜಗಳು ಪ್ರಾಣತೊರೆದುವು. ಅನೇಕಾನೇಕ ಕುದುರೆಗಳು ಸವಾರರೊಡನೆಯೇ ಸತ್ತುಹೋದುವು. ರಥಗಳಿಗೆ ಕಟ್ಟಿದ್ದ ಕುದುರೆಗಳೂ ಸತ್ತುಹೋದುವು. ಕೆಲವು ರಥಗಳೂ, ರಥಸಮೂಹಗಳನ್ನು ರಕ್ಷಿಸುತ್ತಿದ್ದವರೂ (ಮಹಾರಥರೂ) ಓಡುತ್ತಿರುವುದೂ ಸಹ ಅಲ್ಲಲ್ಲಿ ಕಂಡು

ಬರುತ್ತಿದ್ದಿತು. ಮತ್ತೊಂದು ಕಡೆಯಲ್ಲಿ ರಥವನ್ನು ಕಳೆದುಕೊಂಡ ರಥಿಕರು ಆಯುಧಗಳನ್ನು ಹಿಡಿದು ಅಂಗದಾಭರಣಗಳಿಂದ ಅಲಂಕೃತವಾದ ಭುಜಗಳಿಂದ ಕೂಡಿದವರಾಗಿ ರಣಾಂಗಣದ ಸುತ್ತಲೂ ಓಡುತ್ತಿರುವುದು ಕಾಣುತ್ತಿದ್ದಿತು. ಅರ್ಜುನನ ಭಯದಿಂದಾಗಿ ಕುದುರೆಸವಾರರು ಕುದುರೆಗಳನ್ನೂ, ಗಜಾರೋಹಿಗಳು ಆನೆಗಳನ್ನೂ ಬಿಟ್ಟು ರಣಾಂಗಣದ ಸುತ್ತಲೂ ನಾಗಾಲೋಟದಿಂದ ಓಡುತ್ತಿರುವುದು ಕಾಣುತ್ತಿದ್ದಿತು. ಅರ್ಜುನನ ಬಾಣಗಳಿಗೆ ತುತ್ತಾದ ರಥಿಕರು ರಥದಿಂದಲೇ ಕೆಳಕ್ಕೆ ಬಿದ್ದಿದ್ದರು ಮತ್ತು ಬೀಳುತ್ತಿದ್ದರು. ಗಜಾರೋಹಿಗಳು ಆನೆಗಳ ಮೇಲಿಂದ ಬಿದ್ದಿದ್ದರು ಮತ್ತು ಬೀಳುತ್ತಿದ್ದರು. ಕುದುರೆಸವಾರರ ಗತಿಯೂ ಇದೇ ಆಯಿತು. ಇಂತಹ ದೃಶ್ಯಗಳು ಆಗ ಆ ರಣಾಂಗಣದಲ್ಲಿ ಅಗಣಿತವಾಗಿದ್ದುವು. ಮಹಾರಾಜ! ಅರ್ಜುನನು ಆ ಸಮಯದಲ್ಲಿ ಬಹುರೌದ್ರವಾದ ರೂಪವನ್ನೇ ತಾಳಿದ್ದನು. ಅವನನ್ನು ಪ್ರಹರಿಸಲು ಗದೆಯನ್ನೆತ್ತಿದವರ ಕೈಗಳನ್ನು ಹಾಗೆಯೇ ಕತ್ತರಿಸಿಬಿಡುತ್ತಿದ್ದನು. ಕತ್ತಿಗಳನ್ನೆತ್ತಿದವರ ಕೈಗಳನ್ನೂ ಕತ್ತರಿಸಿಬಿಡುತ್ತಿದ್ದನು. ಪ್ರಾಸಗಳನ್ನು ಹಿಡಿದ ಕೈಗಳನ್ನೂ, ಬತ್ತಳಿಕೆಗಳನ್ನು ಧರಿಸಿರುವ ಭುಜಗಳನ್ನೂ, ಬಾಣಗಳುಳ್ಳ ಕೈಗಳನ್ನೂ, ಧನುಸ್ಸುಗಳಿದ್ದ ಕೈಗಳನ್ನೂ, ಅಂಕುಶ-ಪತಾಕೆಗಳಿದ್ದ ಕೈಗಳನ್ನೂ ಹೇಗಿದ್ದರೆ ಹಾಗೆಯೇ ತನ್ನ ನಿಶಿತವಾದ ಬಾಣಗಳಿಂದ ಕತ್ತರಿಸಿಬಿಡುತ್ತಿದ್ದನು. ಘೋರಕರ್ಮನಾದ ಅರ್ಜುನನು ತಾವೂ ಪ್ರಹರಿಸಬೇಕೆಂಬ ಶತ್ರುಪಕ್ಷದ ಯೋಧರ ಪ್ರಯತ್ನಕ್ಕೆ ಅವಕಾಶವೇ ಇಲ್ಲದಂತೆ ಮಾಡಿಬಿಡುತ್ತಿದ್ದನು. ಅದರಿಂದಾಗಿ ಪರಿಘಾಯುಧಗಳ, ಮುದ್ಗರಗಳ, ಪ್ರಾಸಗಳ, ಭಿಂದಿಪಾಲಗಳ, ಕತ್ತಿಗಳ, ಗಂಡುಗೊಡಲಿಗಳ, ತೋಮರಗಳ, ಸುವರ್ಣಮಯವಾದ ಕವಚಗಳ, ಧ್ವಜಗಳ, ಗುರಾಣಿಗಳ, ಚಿನ್ನದ ದಂಡಗಳುಳ್ಳ ಛತ್ರಿಗಳ, ವ್ಯಜನಗಳ, ಚಾವಟಿಗಳ, ನೊಗಪಟ್ಟಿಗಳ, ಹಗ್ಗಗಳ ಮತ್ತು ಅಂಕುಶಗಳ ರಾಶಿಗಳು ಆ ರಣಭೂಮಿಯ ಸುತ್ತಲೂ ಬಿದ್ದಿರುವುದು ಕಾಣುತ್ತಿದ್ದಿತು. ಮಹಾರಾಜ! ನಿಶ್ಚಯವಾಗಿಯೂ ಆ ಸಮಯದಲ್ಲಿ ಅರ್ಜುನನನ್ನು ಅರ್ಧನಿಮಿಷವಾದರೂ ಎದುರಿಸುವೆನೆನ್ನುವ ಗಂಡಸು ನಿನ್ನ ಸೈನ್ಯದಲ್ಲಿ ಒಬ್ಬನಾದರೂ ಇರಲಿಲ್ಲ.

ಅದಕ್ಕೆ ಕಾರಣವಿಷ್ಟೇ ಮಹಾರಾಜ! ಯಾವನಾದರೂ ಪಾರ್ಥನನ್ನು ಎದುರಿಸಲು ಧೈರ್ಯಮಾಡಿದನೆಂದರೆ ಅವನಿಗೆ ಪರಲೋಕಯಾತ್ರೆಯ

ಹೊರತಾಗಿ ಅನ್ಯಮಾರ್ಗವೇ ಇರಲಿಲ್ಲ. ಧೈರ್ಯದಿಂದ ಯುದ್ಧದಲ್ಲಿ ಅರ್ಜುನನನ್ನು ಎದುರಿಸಿ ನಿಲ್ಲುತ್ತಿದ್ದವನನ್ನು ಅರ್ಜುನನು ತನ್ನ ತೀಕ್ಷ್ಣವಾದ ಬಾಣಗಳಿಂದ ಪರಲೋಕಕ್ಕೆ ಕಳುಹಿಸಿಬಿಡುತ್ತಿದ್ದನು. ನಿನ್ನ ಯೋಧರು ಎಲ್ಲ ಕಡೆಗಳಿಂದಲೂ ಯುದ್ಧದಿಂದ ಪಲಾಯನಮಾಡುತ್ತಿರಲಾಗಿ, ಕೃಷ್ಣಾರ್ಜುನರು ವಿಜಯಸೂಚಕವಾದ ತಮ್ಮ ಉತ್ತಮೋತ್ತಮವಾದ ಶಂಖಗಳನ್ನು ಗಟ್ಟಿಯಾಗಿ ಊದುತ್ತಿದ್ದರು. ಈ ರೀತಿಯಾಗಿ ಭಗ್ನವಾಗಿ ಹೋದ ಕೌರವ ಸೈನ್ಯವನ್ನು ನೋಡಿ ನಿನ್ನ ತಂದೆಯಾದ ದೇವವ್ರತನು ನಸುನಗುತ್ತಾ ಸಮರಾಂಗಣದಲ್ಲಿಯೇ ಇದ್ದ ಆಚಾರ್ಯ ದ್ರೋಣರನ್ನು ಕುರಿತು ಹೇಳಿದನು : “ಶ್ರೀಕೃಷ್ಣಸಹಿತನಾದ, ವೀರನಾದ, ಬಲಿಷ್ಠನಾದ ಅರ್ಜುನನು ಕೌರವಸೈನ್ಯವನ್ನು ಯಾವ ರೀತಿಯಲ್ಲಿ ಭಗ್ನಮಾಡಬೇಕಾಗಿದ್ದಿತೋ ಅದೇ ರೀತಿಯಲ್ಲಿ ಭಗ್ನಮಾಡಿರುತ್ತಾನೆ. (ಧನಂಜಯನು ಧನಂಜಯನಂತೆಯೇ [ಅಗ್ನಿಯಂತೆಯೇ] ಕಾರ್ಯಮಾಡಿರುತ್ತಾನೆ. ಶತ್ರುಗಳನ್ನು ಸುಟ್ಟುಹಾಕಿದ್ದಾನೆ. ಹೀಗೆ ಭಗ್ನಮಾಡದಿದ್ದರೆ ಅವನು ಅರ್ಜುನನೆನಿಸಿಕೊಳ್ಳುತ್ತಿರಲಿಲ್ಲ. ಹೀಗೆ ಭಗ್ನಮಾಡಿರುವುದರಿಂದಲೇ ಅವನು ತನ್ನ ಅರ್ಜುನತ್ವವನ್ನು ಉಳಿಸಿಕೊಂಡಂತಾಗಿದೆ. ಭಗ್ನಗೊಳಿಸದಿದ್ದರೆ ಆಶ್ಚರ್ಯಪಡಬೇಕಾಗಿತ್ತೇ ಹೊರತು ಭಗ್ನಗೊಳಿಸಿದ್ದರಲ್ಲಿ ಆಶ್ಚರ್ಯವೇನೂ ಇಲ್ಲ. ಅವನಿಗೆ ಅನುರೂಪವಾದ ಕಾರ್ಯವನ್ನೇ ಮಾಡಿದ್ದಾನೆ.) ಎಷ್ಟೇ ಪ್ರಯತ್ನದಿಂದಲೂ ಇವನನ್ನು ಯುದ್ಧದಲ್ಲಿ ಜಯಿಸುವ ಸಾಧ್ಯತೆಯೇ ಇಲ್ಲ. ಇವನ ರೂಪವಿಂದು ಕಾಲಾಂತಕನಾದ ಯಮನೋಪಾದಿಯಲ್ಲಿಯೇ ಕಾಣುತ್ತಿದೆ. ಭಗ್ನವಾಗಿರುವ ಈ ನಮ್ಮ ದೊಡ್ಡ ಸೈನ್ಯವನ್ನು ಪುನಃ ಕೂಡಿಸುವುದಕ್ಕೂ (ಓಡುತ್ತಿರುವವರನ್ನು ಹಿಂದಕ್ಕೆ ಕರೆಸಿಕೊಳ್ಳುವುದಕ್ಕೂ ) ಸಾಧ್ಯವಾಗುವುದಿಲ್ಲ. ಏಕೆಂದರೆ ಒಬ್ಬರು ಓಡುತ್ತಿರುವುದನ್ನು ನೋಡಿ ಮತ್ತೊಬ್ಬರು ಓಡುತ್ತಿದ್ದಾರೆಯೇ ಹೊರತು ಓಡುತ್ತಿರುವವರನ್ನು ಹುರಿದುಂಬಿಸಿ ಹಿಂದಕ್ಕೆ ಕರೆಯುವ ಪ್ರಯತ್ನವನ್ನೇ ಯಾರೂ ಮಾಡುತ್ತಿಲ್ಲ. ಆದುದರಿಂದಲೇ ಈ ನಮ್ಮ ಮಹಾಸೇನೆಯು ಕರಗಿಹೋಗುತ್ತಿರುವಂತೆ ಕಾಣುತ್ತಿದೆ. ಎಲ್ಲ ಲೋಕಗಳ (ಎಲ್ಲ ಜನರ) ಕಣ್ಣುಗಳನ್ನೂ ಕಿತ್ತುಕೊಳ್ಳುತ್ತಿರುವನೋ ಎಂಬಂತೆ–ಸೂರ್ಯನೂ ಗಿರಿಶ್ರೇಷ್ಠವಾದ ಅಸ್ತಾ

ಚಲದ ಕಡೆಗೆ ಅಡಿಗಳನ್ನಿಡುತ್ತಿದ್ದಾನೆ. ಆದುದರಿಂದ ಈ ಸಮಯದಲ್ಲಿ ನಾವು ಸೈನ್ಯಗಳನ್ನು ಯುದ್ಧಭೂಮಿಯಿಂದ ಹಿಂದಕ್ಕೆ ಕರೆಸಿಕೊಳ್ಳುವ ಕಾಲವೂ ಸಮೀಪಿಸುತ್ತಿದೆಯೆಂದು ಭಾವಿಸುತ್ತೇನೆ. ಭ್ರಾಂತರಾದ ಮತ್ತು ಭೀತರಾದ ನಮ್ಮ ಯೋಧರು ಖಂಡಿತವಾಗಿಯೂ ಈಗ ಪುನಃ ಯುದ್ಧಮಾಡಲಾರರು."

ಮಹಾರಾಜ! ಮಹಾರಥನಾದ ಭೀಷ್ಮನು ಆಚಾರ್ಯಸತ್ತಮರಾದ ದ್ರೋಣರೊಡನೆ ಈ ಪ್ರಕಾರ ಹೇಳಿ ನಿನ್ನ ಕಡೆಯ ಸೈನ್ಯಗಳನ್ನು ಯುದ್ಧ ಭೂಮಿಯಿಂದ ಹಿಂದಕ್ಕೆ ಕರೆಸಿಕೊಂಡನು.

ಸೂರ್ಯನು ಅಸ್ತಂಗತನಾಗುತ್ತಿರಲಾಗಿ, ಸಂಧ್ಯಾಕಾಲವು ಸಮೀಪಿಸ ಲಾಗಿ, ನಿನ್ನ ಕಡೆಯ ಮತ್ತು ಪಾಂಡವರ ಕಡೆಯ ಸೈನಿಕರು ರಣರಂಗದಿಂದ ಹಿಂದಿರುಗಿ ತಮ್ಮ ತಮ್ಮ ಬಿಡಾರಗಳನ್ನು ಸೇರಿಕೊಂಡರು."

೫೫ನೆಯ ಅಧ್ಯಾಯವು ಮುಗಿಯಿತು.

* * *

## ಎರಡನೆಯ ದಿವಸದ ಯುದ್ಧದ ಸಮೀಕ್ಷೆ

ಎರಡನೆಯ ದಿವಸ ಪಾಂಡವರು ಕ್ರೌಂಚಾರುಣವ್ಯೂಹವನ್ನು ರಚಿಸು ತ್ತಾರೆ. ಕ್ರೌಂಚ ಎಂದರೆ ನೀರುಕೊಕ್ಕರೆ. ಅದರ ಆಕಾರದ ವ್ಯೂಹ. ೫೧ನೆಯ ಅಧ್ಯಾಯದ **ತತಃ ಶಙ್ಖಾಶ್ಚ ಭೇರ್ಯಶ್ಚ** ಎಂಬ ೨೩ನೆಯ ಶ್ಲೋಕದಿಂದ ಮುಂದಕ್ಕೆ ಕೆಲವು ಶ್ಲೋಕಗಳು ೨೫ನೆಯ ಅಧ್ಯಾಯ ಅಥವಾ ಗೀತೆಯ ಮೊದಲನೇ ಅಧ್ಯಾಯದಲ್ಲಿ ಇದ್ದಂತೆಯೇ ಇವೆ. ಆದರೆ ಕುರುಸೇನೆಯನ್ನು ಕಂಡು ಅರ್ಜುನನು ಹಿಂದಿನಂತೆ ಮೋಹಗೊಳ್ಳುವುದಿಲ್ಲ. ಅಪಾರವಾದ ಕರುಣೆಯಿಂದ ಕೂಡಿದವನೂ ಆಗುವುದಿಲ್ಲ. ಮಹಾಶೌರ್ಯದಿಂದಲೇ ಯುದ್ಧಮಾಡುತ್ತಾನೆ.

ಅಲ್ಲಿ–**ಏತಾನ್ನ ಹನ್ತುಮಿಚ್ಛಾಮಿ ಘ್ನತೋಽಪಿ ಮಧುಸೂದನ**– ಎಂದು ಹೇಳಿದ್ದವನು ಇಲ್ಲಿ **ಸೋಽಹಂ ಭೀಷ್ಮಂ ವಧಿಷ್ಯಾಮಿ ಸೈನ್ಯ**

**ಹೇತೋರ್ಜನಾರ್ದನ**–ಎನ್ನುತ್ತಾನೆ. ಅರ್ಜುನನಿಗೂ ಭೀಷ್ಮನಿಗೂ ಘೋರವಾದ ಯುದ್ಧವು ನಡೆಯುತ್ತದೆ. ಆದರೆ ಅರ್ಜುನನಾಗಲೀ, ಭೀಷ್ಮನಾಗಲೀ– ಒಬ್ಬರನ್ನು ಮತ್ತೊಬ್ಬರು ಗೆಲ್ಲುವ ಸಾಧ್ಯತೆಯಿರುವುದಿಲ್ಲ. ಸರಿಸಮವಾಗಿಯೇ ಲೋಕೋತ್ತರವಾಗಿ ಇಬ್ಬರೂ ಯುದ್ಧಮಾಡುತ್ತಾರೆ. ೫೨ನೆಯ ಅಧ್ಯಾಯದ ವಿಷಯವಿದು. ೫೩ನೆಯ ಅಧ್ಯಾಯದಲ್ಲಿ ದ್ರೋಣ-ಧೃಷ್ಟದ್ಯುಮ್ನರ ಯುದ್ಧವು ಪ್ರಾರಂಭವಾಗುತ್ತದೆ. ಧೃಷ್ಟದ್ಯುಮ್ನನ ಬಲವು ಕುಗ್ಗುವುದರಲ್ಲಿದ್ದಾಗ ಭೀಮನು ಸಹಾಯಮಾಡುತ್ತಾನೆ. ಧೃಷ್ಟದ್ಯುಮ್ನನು ಧರ್ಮರಾಜನ ಬಳಿಗೆ ಹೊರಟುಹೋಗುತ್ತಾನೆ. ಅನಂತರ ಭೀಮನಿಗೂ ಕಲಿಂಗರಿಗೂ ಘೋರಯುದ್ಧವು ಪ್ರಾರಂಭವಾಗುತ್ತದೆ. ಇಲ್ಲಿಗೆ ಈ ಅಧ್ಯಾಯವು ಮುಗಿಯುತ್ತದೆ. ೫೪ನೆಯ ಅಧ್ಯಾಯವು ಭೀಮನ ಪರಾಕ್ರಮಪ್ರದರ್ಶನದ ಅಧ್ಯಾಯ. ಭೀಮನೊಬ್ಬನೇ ಏಕಾಕಿಯಾಗಿ ಕಲಿಂಗರನ್ನೂ ನಿಷಾದರನ್ನೂ ಎದುರಿಸಿ ಯುದ್ಧಮಾಡುತ್ತಾನೆ. ಕಲಿಂಗಪ್ರಮುಖರಾದ ಶಕ್ರದೇವ, ಭಾನುಮಂತ ಮತ್ತು ಕೇತುಮಂತರನ್ನು ಸಂಹರಿಸುತ್ತಾನೆ. ಅವರ ಸೈನ್ಯವೆಲ್ಲವನ್ನೂ ಸಂಪೂರ್ಣವಾಗಿ ನಿರ್ನಾಮಮಾಡುತ್ತಾನೆ. ಭೀಮನು ಸಾಮಾನ್ಯವಾಗಿ ಯೋಧರೆಲ್ಲರನ್ನೂ ಪದಾತಿಯಾಗಿಯೇ ಸಂಹಾರಮಾಡುತ್ತಾನೆ. ಅನಂತರ ಧೃಷ್ಟದ್ಯುಮ್ನನು ಭೀಮನನ್ನು ತನ್ನ ರಥದಲ್ಲಿ ಕೂರಿಸಿಕೊಳ್ಳುತ್ತಾನೆ. ಸಾತ್ಯಕಿ ಮತ್ತು ಧೃಷ್ಟದ್ಯುಮ್ನರು ಭೀಮನನ್ನು ಬಹುವಾಗಿ ಶ್ಲಾಘಿಸುತ್ತಾರೆ. ಅನಂತರವೂ ಭೀಮನು ಕೌರವಸೈನ್ಯವನ್ನು ಮರ್ದನಮಾಡುತ್ತಲೇ ಇರುತ್ತಾನೆ. ಇಲ್ಲಿಗೆ ೫೪ನೆಯ ಅಧ್ಯಾಯವು ಮುಗಿಯುತ್ತದೆ. ೧೨೪ ಶ್ಲೋಕಗಳಿರುವ ಈ ಅಧ್ಯಾಯದಲ್ಲಿ ನಾವು ಭೀಮನ ಅಮಾನುಷವಾದ ಕಾರ್ಯಗಳನ್ನು ವೀಕ್ಷಿಸಬಹುದಾಗಿದೆ. ಇದನ್ನು ಭೀಮವಿಕ್ರಮಾಧ್ಯಾಯವೆಂದು ಕರೆದರೂ ಸಲ್ಲುತ್ತದೆ. ೫೫ನೆಯ ಅಧ್ಯಾಯದಲ್ಲಿ ಅಶ್ವತ್ಥಾಮನಿಗೂ ಧೃಷ್ಟದ್ಯುಮ್ನನಿಗೂ ಯುದ್ಧವಾಗುತ್ತಿರುತ್ತದೆ. ಅಭಿಮನ್ಯುವು ಧೃಷ್ಟದ್ಯುಮ್ನನ ಸಹಾಯಕ್ಕೆ ಹೋಗುತ್ತಾನೆ. ಅನಂತರ ದುರ್ಯೋಧನನ ಮಗನಾದ ಲಕ್ಷ್ಮಣನು ಅಭಿಮನ್ಯುವಿನೊಡನೆ ಯುದ್ಧಮಾಡಲು ಹೋಗುತ್ತಾನೆ. ಅದನ್ನು ಕಂಡ ದುರ್ಯೋಧನನು ತನ್ನ ಅನುಯಾಯಿಗಳೊಡನೆ ಮಗನ ಸಹಾಯಕ್ಕೆ ಬರುತ್ತಾನೆ. ಅನೇಕ ಕುರುವೀರರು ತನ್ನ ಮಗನ ಮೇಲೆ ದಾಳಿಮಾಡುತ್ತಿರುವುದನ್ನು ಕಂಡು ಪುತ್ರ

ವಾತ್ಸಲ್ಯದಿಂದ ಅರ್ಜುನನು ಅಭಿಮನ್ಯುವಿನ ಸಹಾಯಕ್ಕೆ ಹೋಗುತ್ತಾನೆ. ಸಾಮಾನ್ಯವಾಗಿ ಅಲ್ಲಿ ಎಲ್ಲ ಕುರು-ಪಾಂಡವಯೋಧರೂ ಯುದ್ಧದಲ್ಲಿ ತೊಡಗುತ್ತಾರೆ. ಅಲ್ಲಿಂದ ಮುಂದೆ ಅಧ್ಯಾಯವು ಮುಗಿಯುವವರೆಗೂ ಅರ್ಜುನನ ಪರಾಕ್ರಮದ ವರ್ಣನೆಯಿದೆ. ಅವನನ್ನನುಸರಿಸಿ ಯುದ್ಧ ಮಾಡಲು ಸಾಧ್ಯವಾಗದೆಂದು ನಿಶ್ಚಯಿಸಿ ಭೀಷ್ಮನೇ ತನ್ನ ಕುರುಸೇನೆಯನ್ನು ಹಿಂದಕ್ಕೆ ಕರೆಸಿಕೊಳ್ಳುತ್ತಾನೆ. ಇಲ್ಲಿಗೆ ಎರಡನೆಯ ದಿವಸದ ಯುದ್ಧವು ಮುಗಿಯುತ್ತದೆ. ಫಲಿತಾಂಶದಲ್ಲಿ ಕೌರವರ ಕಡೆಯ ಕಲಿಂಗ-ನಿಷಾದರು ಸಂಪೂರ್ಣವಾಗಿ ನಾಶಹೊಂದುತ್ತಾರೆ. ಪಾಂಡವರ ಪಕ್ಷವೇ ಸ್ವಲ್ಪ ಮೇಲ್ಗೈ ಆಗಿರುವಂತೆ ಕಾಣುತ್ತದೆ.

*          *          *

೫೬ನೆಯ ಅಧ್ಯಾಯ          ಭೀಷ್ಮವಧಪರ್ವ (ಮುಂದುವರಿದಿದೆ.)

## ಮೂರನೆಯ ದಿವಸದ ಯುದ್ಧ: ಕೌರವ-ಪಾಂಡವರ ವ್ಯೂಹರಚನೆ ಮತ್ತು ಯುದ್ಧಾರಂಭ

ಸಂಜಯನು ಧೃತರಾಷ್ಟ್ರನಿಗೆ ಹೇಳುತ್ತಾನೆ :

"ಮಹಾರಾಜ! ರಾತ್ರಿಯು ಕಳೆದು ಪ್ರಾತಃಕಾಲವಾಗಲಾಗಿ ಶಾಂತನುವಿನ ಮಗನಾದ ಭೀಷ್ಮನು ಯುದ್ಧಭೂಮಿಗೆ ಹೋಗುವಂತೆ ತನ್ನ ಸೈನ್ಯಕ್ಕೆ ಆದೇಶವನ್ನು ನೀಡಿದನು. ನಿನ್ನ ಮಕ್ಕಳಿಗೆ ವಿಜಯವಾಗಬೇಕೆಂಬುದರಲ್ಲಿಯೇ ಹೆಚ್ಚಿನ ಆಸಕ್ತಿಯಿದ್ದ ಕುರುಕುಲಪಿತಾಮಹನಾದ ಭೀಷ್ಮನು ಗಾರುಡವೆಂಬ ಒಂದು ದೊಡ್ಡ ವ್ಯೂಹವನ್ನು ರಚಿಸಿದನು. ಆ ವ್ಯೂಹದ ಅಗ್ರಭಾಗದಲ್ಲಿ ಎಂದರೆ ಕೊಕ್ಕಿನ ಪ್ರದೇಶದಲ್ಲಿ ಭೀಷ್ಮನೇ ನಿಂತನು. ದ್ರೋಣಾಚಾರ್ಯರೂ ಮತ್ತು ಯದುವಂಶೀಯನಾದ ಕೃತವರ್ಮನೂ ಗಾರುಡವ್ಯೂಹದ ಕಣ್ಣುಗಳ ಸ್ಥಾನಗಳಲ್ಲಿ ನಿಂತರು. ಯಶೋವಂತರಾದ ಅಶ್ವತ್ಥಾಮ-ಕೃಪರು ಗರುಡನ ಶಿರಸ್ಸಿನ ಭಾಗದಲ್ಲಿ ನಿಂತರು. ಅವರ ಸಂಗಡ ತ್ರಿಗರ್ತರೂ, ಕೇಕಯರೂ ಮತ್ತು ವಾಟಧಾನರೂ ಅಂದಿನ ಯುದ್ಧದಲ್ಲಿ ಪಾಲ್ಗೊಳ್ಳಲು ಸನ್ನದ್ಧರಾಗಿ

ನಿಂತರು. ಭೂರಿಶ್ರವಸ, ಶಲ, ಶಲ್ಯ, ಭಗದತ್ತ, ಮದ್ರಕರು, ಸಿಂಧು-ಸೌವೀರರು, ಪಾಂಚನದರು (ಪಂಜಾಬಿಗಳು)–ಇವರೆಲ್ಲರೂ ಜಯದ್ರಥಪ್ರಮುಖರಾಗಿ ಗಾರುಡವ್ಯೂಹದ ಕತ್ತಿನ ಪ್ರದೇಶದಲ್ಲಿ ನಿಂತರು. ಸಹೋದರರಿಂದಲೂ ಮತ್ತು ಅನುಚರರಿಂದಲೂ ಕೂಡಿದ ದುರ್ಯೋಧನನು ಗಾರುಡವ್ಯೂಹದ ಪೃಷ್ಠಭಾಗದಲ್ಲಿ ನಿಂತನು. ಅವಂತೀದೇಶದ ವಿಂದಾನುವಿಂದರು, ಕಾಂಬೋಜರು, ಶಕರು, ಶೂರಸೇನರು, ಗಾರುಡವ್ಯೂಹದ ರೆಕ್ಕೆಗಳ ಪ್ರದೇಶಗಳಲ್ಲಿ ನಿಂತರು. ಮಾಗಧರು, ಕಲಿಂಗರು, ದಾಸೇರಕಗಣಗಳೊಡನೆ ಕವಚಗಳನ್ನು ತೊಟ್ಟುಕೊಂಡು ಗಾರುಡವ್ಯೂಹದ ಬಲಗಡೆಯ ರೆಕ್ಕೆಯ ಸ್ಥಾನದಲ್ಲಿ ನಿಂತುಕೊಂಡರು. ಕಾರೂಷ, ವಿಕುಂಜ, ಮುಂಡ ಮತ್ತು ಕುಂಡೀವೃಷ–ಈ ಎಲ್ಲ ಯೋಧರೂ ಬೃಹದ್ಬಲನೊಡನೆ ಸೇರಿ ವ್ಯೂಹದ ಎಡಗಡೆಯ ರೆಕ್ಕೆಯ ಪ್ರದೇಶದಲ್ಲಿ ನಿಂತರು.

ಮಹಾರಾಜ! ಅನಂತರ ಶತ್ರುಗಳಿಗೆ ಸಂತಾಪವನ್ನುಂಟುಮಾಡುವ ಸವ್ಯಸಾಚಿಯು ಕೌರವಸೇನೆಯು ಗಾರುಡವ್ಯೂಹಾಕಾರದಲ್ಲಿ ರಚಿತವಾಗಿರುವುದನ್ನು ಕಂಡು ಪಾಂಡವರ ಸೇನಾಪತಿಯಾದ ಧೃಷ್ಟದ್ಯುಮ್ನನೊಡನೆ ಸೇರಿಕೊಂಡು ಗಾರುಡವ್ಯೂಹಕ್ಕೆ ಪ್ರತಿಯಾಗಿ ಅರ್ಧಚಂದ್ರ ಎಂಬ ಹೆಸರಿನ ಅತಿದಾರುಣವಾದ, ಭೇದಿಸಲು ಅಸಾಧ್ಯವಾದ ವ್ಯೂಹವನ್ನು ರಚಿಸಿದನು. ಅರ್ಧಚಂದ್ರವ್ಯೂಹದ ದಕ್ಷಿಣದಿಕ್ಕಿನ ಶಿಖರದಲ್ಲಿ ಭೀಮಸೇನನು ನಿಂತು ರಾರಾಜಿಸಿದನು. ಭೀಮಸೇನನು ನಾನಾಶಸ್ತ್ರಗಳ ಸಮುದಾಯದಿಂದ ಸಂಪನ್ನರಾದ ನಾನಾದೇಶಗಳಿಂದ ಬಂದಿದ್ದ ರಾಜರಿಂದ ಪರಿವೃತನಾಗಿದ್ದನು. ಅವನ ಹಿಂದೆ ಸಸೈನ್ಯನಾಗಿ ವಿರಾಟನೂ, ಮಹಾರಥನಾದ ದ್ರುಪದನೂ ನಿಂತಿದ್ದರು. ವಿರಾಟ-ದ್ರುಪದರ ಹಿಂಭಾಗದಲ್ಲಿ ನೀಲಾಯುಧರೊಡನೆ ನೀಲನು ನಿಂತನು. ನೀಲನ ನಂತರ ಮಹಾಬಲನಾದ ಧೃಷ್ಟಕೇತುವು ನಿಂತನು. ಚೇದಿ, ಕಾಶಿ, ಕರೂಷ ಮತ್ತು ಪೌರವದೇಶಗಳ ಯೋಧರಿಂದ ಧೃಷ್ಟಕೇತುವು ಪರಿವೃತನಾಗಿದ್ದನು. ಧೃಷ್ಟದ್ಯುಮ್ನ, ಶಿಖಂಡೀ, ಪಾಂಚಾಲರು ಮತ್ತು ಪ್ರಭದ್ರಕರು ಆ ದೊಡ್ಡಸೈನ್ಯದ ಮಧ್ಯದಲ್ಲಿ ಯುದ್ಧಮಾಡುವ ಸಲುವಾಗಿ ನಿಂತಿದ್ದರು. ಅಲ್ಲಿಯೇ ಧರ್ಮರಾಜನೂ ಸಹ ಗಜಸೈನ್ಯದಿಂದ ಪರಿವೃತನಾಗಿ ನಿಂತಿದ್ದನು. ಧರ್ಮರಾಜನ ಹಿಂಬದಿಯಲ್ಲಿ ಸಾತ್ಯಕಿ, ಪ್ರತಿವಿಂಧ್ಯನೇ ಮೊದಲಾದ

ದ್ರೌಪದಿಯ ಐವರು ಮಕ್ಕಳು, ಶೂರನಾದ ಅಭಿಮನ್ಯು, ಇರಾವಂತ–ಇವರುಗಳು ಉಪಸ್ಥಿತರಾಗಿದ್ದರು. ಅವರನ್ನನುಸರಿಸಿ ಭೀಮಸೇನನ ಮಗನಾದ ಘಟೋತ್ಕಚನೂ ಮಹಾರಥಿಗಳಾದ ಕೇಕಯರೂ ನಿಂತಿದ್ದರು. ನರಶ್ರೇಷ್ಠನಾದ ಅರ್ಜುನನು ವ್ಯೂಹದ ಎಡಭಾಗದಲ್ಲಿ ನಿಂತಿದ್ದನು. ಅವನ ರಕ್ಷಣೆಯ ಭಾರವನ್ನು ಸಕಲಜಗತ್ತಿಗೂ ರಕ್ಷಕನಾದ ಸಾಕ್ಷಾತ್ ಜನಾರ್ದನನೇ ವಹಿಸಿಕೊಂಡಿದ್ದನು. ಮಹಾರಾಜ! ಈ ರೀತಿಯಾಗಿ ನಿನ್ನ ಮಕ್ಕಳು ರಚಿಸಿದ್ದ ಗಾರುಡವ್ಯೂಹಕ್ಕೆ ಪ್ರತಿಯಾಗಿ ನಿನ್ನ ಮಕ್ಕಳನ್ನೂ ಮತ್ತು ನಿನ್ನ ಮಕ್ಕಳ ಕಡೆಗೆ ಸೇರಿದ್ದವರನ್ನೂ ಸಂಹರಿಸುವ ಸಲುವಾಗಿ ಪಾಂಡವರು ದೊಡ್ಡದಾದ ವ್ಯೂಹವನ್ನು ರಚಿಸಿದರು. ಅನಂತರ ಪರಸ್ಪರ ಹನನಕ್ರಿಯೆಯಲ್ಲಿ ಉದ್ಯುಕ್ತರಾಗಿದ್ದ ನಿನ್ನ ಕಡೆಯ ಮತ್ತು ಪಾಂಡವರ ಕಡೆಯ ಗಜಸೈನ್ಯಗಳಿಗೂ, ರಥಸೈನ್ಯಗಳಿಗೂ, ಅಶ್ವಸೈನ್ಯಗಳಿಗೂ ಮತ್ತು ಪದಾತಿಸೈನ್ಯಗಳಿಗೂ ಪ್ರತ್ಯೇಕ-ಪ್ರತ್ಯೇಕವಾಗಿ ಯುದ್ಧವು ಪ್ರಾರಂಭವಾಯಿತು. ಪರಸ್ಪರವಾಗಿ ಹನನಕ್ರಿಯೆಯಲ್ಲಿ ಎರಡು ಕಡೆಯವರೂ ತೊಡಗಲಾಗಿ ಯುದ್ಧವು ಪ್ರಾರಂಭವಾದ ಸ್ವಲ್ಪಹೊತ್ತಿನಲ್ಲಿಯೇ ಅಶ್ವಸಮೂಹಗಳೂ, ರಥಸಮೂಹಗಳೂ ಅಲ್ಲಲ್ಲಿ ಬೀಳುತ್ತಿರುವುದು ಕಂಡುಬರುತ್ತಿದ್ದಿತು. ಸರಸರನೆ ಓಡುತ್ತಿದ್ದ ಮತ್ತು ಪ್ರತ್ಯೇಕ-ಪ್ರತ್ಯೇಕವಾಗಿ ಹೊಡೆದಾಡುತ್ತಿದ್ದ ರಥಸಮೂಹಗಳ ಕರ್ಕಶ ಶಬ್ದವು ದುಂದುಭಿಯ ಶಬ್ದಗಳಿಂದ ಮಿಶ್ರಿತವಾಗಿ ಭಯಂಕರವಾದ ಮತ್ತೊಂದು ಶಬ್ದವನ್ನುಂಟು ಮಾಡುತ್ತಿದ್ದಿತು. ಭಯಂಕರವಾದ ಆ ಯುದ್ಧದಲ್ಲಿ ಪರಸ್ಪರವಾಗಿ ಕಾದಾಡುತ್ತಿದ್ದ ನಿನ್ನ ಕಡೆಯ ಮತ್ತು ಪಾಂಡವರ ಕಡೆಯ ನರವೀರರು ಮಾಡುತ್ತಿದ್ದ ಗರ್ಜನೆಯು ಆಕಾಶವನ್ನೇ ವ್ಯಾಪಿಸಿದ್ದಿತು."

ಐ೬ನೆಯ ಅಧ್ಯಾಯವು ಮುಗಿಯಿತು.

ಐ೭ನೆಯ ಅಧ್ಯಾಯ ಭೀಷ್ಮವಧಪರ್ವ (ಮುಂದುವರಿದಿದೆ.)

## ಉಭಯಪಕ್ಷಗಳ ಸೇನೆಗಳ ನಡುವೆ ಭಯಂಕರವಾದ ಯುದ್ಧ

ಸಂಜಯನು ಧೃತರಾಷ್ಟ್ರನಿಗೆ ಹೇಳುತ್ತಾನೆ :

ಮಹಾರಾಜ! ನಾನು ಈ ಹಿಂದೆ ಹೇಳಿದಂತೆ ನಿನ್ನ ಮತ್ತು ನಿನ್ನ

ಶತ್ರುಗಳ ಸೈನ್ಯಗಳು ವ್ಯೂಹಕ್ರಮದಲ್ಲಿ ಯುದ್ಧಕ್ಕೆ ಸನ್ನದ್ಧವಾಗಲಾಗಿ ಘೋರಯುದ್ಧವು ಪ್ರಾರಂಭವಾಯಿತು. ಧನಂಜಯನು ಅತ್ಯಲ್ಪಕಾಲ ದಲ್ಲಿಯೇ ನಿನ್ನ ರಥಸೈನ್ಯವನ್ನು ಹೆಚ್ಚಿನ ಸಂಖ್ಯೆಯಲ್ಲಿ ಧ್ವಂಸಮಾಡಿದನು. ಅತಿರಥನಾದ ಅರ್ಜುನನು ಆ ಮಹಾಯುದ್ಧದಲ್ಲಿ ರಥಸೈನ್ಯದ ಪ್ರಮುಖರ ನ್ನೆಲ್ಲಾ ಬಾಣಗಳಿಂದ ಸೀಳುತ್ತಾ ಧ್ವಂಸಮಾಡುತ್ತಿದ್ದನು. ಯುಗದ ಅಂತ್ಯದಲ್ಲಿ ಕಾಲನಿಂದ ಪ್ರಾಣಿಗಳೆಲ್ಲವೂ ವಿಧ್ವಂಸಿತವಾಗುವಂತೆ–ಅರ್ಜುನನಿಂದ ಆ ರಥಸೈನಿಕರೆಲ್ಲರೂ ವಿಧ್ವಂಸಿತರಾದರು. ಆದರೂ ಸಹ ನಿನ್ನ ಕಡೆಯ ಯೋಧರು ಪಲಾಯನಮಾಡಲಿಲ್ಲ. ಪ್ರಯತ್ನಪೂರ್ವಕವಾಗಿ ಪಾಂಡವರನ್ನು ಎದುರಿಸಿ ಯುದ್ಧಮಾಡುತ್ತಿದ್ದರು. ಪ್ರದೀಪ್ತವಾದ, ಪರಮೋಜ್ಜ್ವಲವಾದ, ಶಾಶ್ವತವಾದ ಯಶಸ್ಸನ್ನು ಮಾತ್ರವೇ ನಿನ್ನ ಸೈನಿಕರು ಆಶಿಸುತ್ತಿದ್ದರು. ಯುದ್ಧದಿಂದ ಪ್ರತಿನಿವೃತ್ತರಾಗಲು ಮೃತ್ಯುವನ್ನು ಮಾತ್ರವೇ ಕಾರಣವನ್ನಾಗಿ ಇಟ್ಟುಕೊಂಡಿದ್ದರು. ('ಹೊಡೆ ಅಥವಾ ಮಡಿ' ಎಂಬುದೇ ಅವರ ಪರಮಧ್ಯೇಯವಾಗಿದ್ದಿತು.) ಹೀಗೆ ನಿಶ್ಚಯಿಸಿ ನಿನ್ನ ಕಡೆಯ ಯೋಧರು ಶತ್ರುವಿನ ಸಂಹಾರದಲ್ಲಿಯೇ ಏಕಾಗ್ರವಾದ ಮನಸ್ಸುಳ್ಳವರಾಗಿ ಪಾಂಡವರ ಸೈನ್ಯವನ್ನು ಅನೇಕ ಬಾರಿ ಭೇದಿಸಿ ಚೆಲ್ಲಾಪಿಲ್ಲಿಯಾಗಿ ಮಾಡಿಬಿಟ್ಟರು.

ಭಗ್ನರಾಗಿ ಸೈನಿಕರು ಓಡಿಹೋಗುತ್ತಿದ್ದರು. ಪುನಃ ನಾಯಕರ ಆಶ್ವಾಸನೆಯಿಂದ ಹಿಂದಿರುಗುತ್ತಲೂ ಇದ್ದರು. ಇದು ಎರಡು ಸೈನ್ಯಗಳ ಲ್ಲಿಯೂ ನಡೆಯುತ್ತಲೇ ಇದ್ದಿತು. ಆದರೆ ಆ ಗೊಂದಲದಲ್ಲಿ ಓಡಿಹೋದವ ರಾರು? ಹಿಂದಿರುಗಿ ಬಂದವರಾರು?–ಎಂಬುದು ಮಾತ್ರ ತಿಳಿಯುತ್ತಲೇ ಇರಲಿಲ್ಲ. ಸೈನ್ಯಗಳ ಪದಸಂಘಟ್ಟನದಿಂದ ರಣಾಂಗಣದಲ್ಲಿ ದೊಡ್ಡದಾಗಿ ಧೂಳೆದ್ದಿತು. ಆ ಧೂಳು ಸೂರ್ಯನನ್ನೇ ಮುಚ್ಚಿಬಿಟ್ಟಿತು. ಕಗ್ಗತ್ತಲೆಯು ಕವಿಯಿತು. ದಿಕ್ಕುಗಳಾವುವು? ಉಪದಿಕ್ಕುಗಳಾವುವು?–ಎಂಬುದೇ ತಿಳಿಯ ದಾಯಿತು. ಯಾರು ಯಾರನ್ನು ಸಂಹರಿಸಿದರು? ಹೇಗೆ ಸಂಹರಿಸಿದರು?– ಎಂಬುದೂ ಸಹ ಸ್ವಲ್ಪ ಕಾಲದವರೆಗೆ ತಿಳಿಯಲೇ ಇಲ್ಲ. ಆ ಅಂಧಕಾರ ಸಮಯದಲ್ಲಿಯೂ ಯುದ್ಧವೇನೂ ನಿಲ್ಲಲಿಲ್ಲ. 'ಇವನೇ ನಮ್ಮ ಶತ್ರು ಇರಬಹುದು'–ಎಂಬ ಅನುಮಾನದಿಂದ ಪರಸ್ಪರ ಯುದ್ಧಮಾಡುತ್ತಿದ್ದರು.

ಸಂಜ್ಞೆಗಳು (ಸಂಕೇತಗಳು), ರಥದ ಧ್ವನಿ, ಯೋಧರು ಮಾಡುತ್ತಿದ್ದ ಸಿಂಹನಾದ–ಇವುಗಳ ಮೂಲಕವಾಗಿ ವ್ಯಕ್ತಿಯು ಯಾವನಿರಬಹುದೆಂದು ತಿಳಿದುಕೊಂಡು ಪರಸ್ಪರವಾಗಿ ಯುದ್ಧಮಾಡುತ್ತಿದ್ದರು. ಮತ್ತೆ ಕೆಲವರು ಯಾವ ವಿಧವಾದ ಅನುಮಾನಕ್ಕೂ ಅವಕಾಶವೇ ಇಲ್ಲದಂತೆ ತಮ್ಮ ನಾಮ-ಗೋತ್ರಗಳನ್ನೂ ಮತ್ತು ತಾವು ಯುದ್ಧಮಾಡುವ ಪಕ್ಷವನ್ನೂ ಸೂಚಿಸುತ್ತಲೇ ಯುದ್ಧಮಾಡುತ್ತಿದ್ದರು. ಈ ರೀತಿಯಲ್ಲಿ ಅಲ್ಲಲ್ಲಿ ಯುದ್ಧವು ನಡೆಯುತ್ತಲೇ ಇದ್ದಿತು. ಮಹಾರಾಜ! ಒಂದು ಅಚ್ಚರಿಯ ವಿಷಯವೇನೆಂದರೆ : ಅಂದು ನಿನ್ನ ಕಡೆಯವರು ರಚಿಸಿದ್ದ ವ್ಯೂಹವನ್ನು ಭೇದಿಸಲು ಪಾಂಡವರಿಗೆ ಸಾಧ್ಯವಾಗಲಿಲ್ಲ. ಗಾರುಡವ್ಯೂಹವನ್ನು ಸತ್ಯಸಂಧರಾದ ಭಾರದ್ವಾಜರು (ದ್ರೋಣರು) ರಕ್ಷಿಸುತ್ತಿದ್ದರು. ಅದೇ ರೀತಿಯಲ್ಲಿ ಪಾಂಡವರು ರಚಿಸಿದ್ದ ಪ್ರತಿವ್ಯೂಹವನ್ನು ಭೇದಿಸಲು ಕೌರವರೂ ಸಮರ್ಥರಾಗಲಿಲ್ಲ. ಪಾಂಡವರ ಆ ವ್ಯೂಹವು ಸವ್ಯಸಾಚಿಯಾದ ಅರ್ಜುನನಿಂದಲೂ ಮತ್ತು ಭೀಮಸೇನನಿಂದಲೂ ಚೆನ್ನಾಗಿ ರಕ್ಷಿಸಲ್ಪಡುತ್ತಿದ್ದಿತು. ಕೆಲವು ಸಮಯಗಳಲ್ಲಿ ಎರಡೂ ಪಕ್ಷಗಳ ಯೋಧರು ಮತ್ತು ರಥ-ಗಜಸೈನ್ಯಗಳೂ ಪರಸ್ಪರಸಹಾಯದಿಂದ ಸೇನೆಯ ಅಗ್ರಭಾಗದಿಂದಲೂ ಎಂದರೆ ವ್ಯೂಹದಿಂದಲೂ ಹೊರಬಂದು ಪರಸ್ಪರವಾಗಿ ಯುದ್ಧಮಾಡುತ್ತಿದ್ದುವು. ಆ ಮಹಾಸಮರದಲ್ಲಿ ಕುದುರೆ ಸವಾರರು, ಕುದುರೆಸವಾರರನ್ನು ವಿಮಲವಾದ ಋಷ್ಟಿ ಎಂಬ ಆಯುಧಗಳಿಂದಲೂ ಪ್ರಾಸಗಳಿಂದಲೂ ಕತ್ತರಿಸಿ ಕೆಳಕ್ಕೆ ಬೀಳಿಸುತ್ತಿದ್ದರು. ಅತಿ ಭಯಂಕರವಾಗಿ ಕಾಣುತ್ತಿದ್ದ ಆ ಯುದ್ಧದಲ್ಲಿ ರಥಿಯು ಶತ್ರುಪಕ್ಷದ ರಥಿಯನ್ನೆದುರಿಸಿ ಸ್ವರ್ಣಭೂಷಿತವಾದ ಬಾಣಗಳಿಂದ ಕೆಳಕ್ಕೆ ಬೀಳಿಸುತ್ತಿದ್ದನು. ಪರಸ್ಪರವಾಗಿ ಯುದ್ಧದಲ್ಲಿ ತೊಡಗಿದ್ದ ನಿನ್ನ ಕಡೆಯ ಗಜಾರೋಹಿಗಳು ಪಾಂಡವರ ಕಡೆಯ ಗಜಾರೋಹಿಗಳನ್ನೂ, ಪಾಂಡವರ ಕಡೆಯವರು ನಿನ್ನವರ ಕಡೆಯ ಗಜಾರೋಹಿಗಳನ್ನೂ ನಾರಾಚ, ಶರ, ತೋಮರ ಮುಂತಾದ ಆಯುಧಗಳಿಂದ ಕೊಂದು ಕೆಳಕ್ಕೆ ಬೀಳಿಸುತ್ತಿದ್ದರು. ಇದ್ದಕ್ಕಿದ್ದಂತೆಯೇ ಶತ್ರುಪಕ್ಷದ ಶ್ರೇಷ್ಠನಾದ ಯೋಧನು ಆನೆಯ ಮೇಲೆ ಹಾರಿ ಕುಳಿತುಬಿಡುತ್ತಿದ್ದನು. ಅಲ್ಲಿದ್ದ ಗಜಯೋಧನ ಶಿರಸ್ಸನ್ನು ಕ್ಷಣಮಾತ್ರದಲ್ಲಿ ಕತ್ತರಿಸಿ ತಲೆಗೂದಲಿನ ಮೂಲಕವಾಗಿ ಆ ಶಿರಸ್ಸನ್ನು ಎತ್ತಿಕೊಂಡೇ ಆನೆಯ ಮೇಲಿನಿಂದ ಕೆಳಕ್ಕೆ

ಧುಮ್ಮಿಕ್ಕುತ್ತಿದ್ದನು. (ತಲೆಗೂದಲನ್ನು ಹಿಡಿದುಕೊಂಡು ತಲೆಯನ್ನು ಕತ್ತರಿಸುತ್ತಿದ್ದನು.)

ಮತ್ತೆ ಕೆಲವು ವೀರರು ಆನೆಯ ಚೂಪಾದ ದಂತಾಗ್ರದಿಂದ ಭೇದಿಸಲ್ಪಟ್ಟ ಹೃದಯಗಳುಳ್ಳವರಾಗಿ ಸುದೀರ್ಘವಾಗಿ ನಿಟ್ಟುಸಿರುಬಿಡುತ್ತಾ ಬಾಯಿಂದ ರಕ್ತವನ್ನು ಕಾರುತ್ತಿದ್ದರು. ರಣವಿಶಾರದನಾದ, ಮಹಾವೀರನಾದ ಮತ್ತೊಬ್ಬನು ಶತ್ರುಪಕ್ಷದ ಆನೆಯ ಕೋರೆದಾಡೆಯನ್ನೇ ಹಿಡಿದು ಮೇಲೆ ಹತ್ತಲು ಪ್ರಯತ್ನಿಸುತ್ತಿದ್ದನು. ಆ ಸಮಯಕ್ಕೆ ಸರಿಯಾಗಿ ಗಜಶಿಕ್ಷೆ ಮತ್ತು ಅಸ್ತ್ರವಿದ್ಯೆಗಳಲ್ಲಿ ಪರಿಣತನಾದ ಆನೆಯ ಮೇಲಿರುವ ಗಜಯೋಧನು ತನ್ನನ್ನು ಕೊಲ್ಲಲು ಮೇಲೆ ಹತ್ತಿಬರುತ್ತಿರುವ ಯೋಧನನ್ನು ಶಕ್ತ್ಯಾಯುಧದಿಂದ ಪ್ರಹರಿಸುತ್ತಿದ್ದನು. ಅದರಿಂದ ಅವನ ವಕ್ಷಸ್ಥಳವು ಸೀಳಿಹೋಗಿ ಅವನು ತರ-ತರನೆ ನಡುಗುತ್ತಿರುವ ದೃಶ್ಯವೂ ಸಹ ಅಲ್ಲಲ್ಲಿ ಕಾಣುತ್ತಿದ್ದಿತು.

ಪರಸ್ಪರವಾಗಿ ಅಪರಾಧಿಗಳಾದ (ನಮ್ಮ ಕಡೆಯ ಪದಾತಿಯು ಶತ್ರುಪಕ್ಷದ ಪದಾತಿಯನ್ನು 'ಅಪರಾಧೀ' ಎಂದು ತೆಗಳುವುದು. ಶತ್ರುಪಕ್ಷದ ಪದಾತಿಯು ನಮ್ಮ ಕಡೆಯವನನ್ನು 'ಅಪರಾಧೀ' ಎಂದು ತೆಗಳುವುದು. ಒಟ್ಟಿನಲ್ಲಿ ಪರಸ್ಪರವಾಗಿ ಅಪರಾಧದ ಆರೋಪಣೆ ಅಥವಾ ಅನ್ಯೋನ್ಯವಾಗಿ ಹೊಡೆಯುವುದೇ ಒಂದು ಅಪರಾಧ.) ವಿಶೇಷವಾದ ಉಲ್ಲಾಸದಿಂದ ಕೂಡಿದ ಪದಾತಿಸಮೂಹಗಳು ಶತ್ರುಪಕ್ಷದ ಪದಾತಿಸಮೂಹಗಳನ್ನು ಭಿಂದಿಪಾಲ ಮತ್ತು ಗಂಡುಗೊಡಲಿಗಳಿಂದ ತಂಡ-ತಂಡವಾಗಿ ಹೊಡೆದುರುಳಿಸುತ್ತಿದ್ದುವು. ಸ್ವಲ್ಪಹೊತ್ತಾದನಂತರ ರಥಿಯು ರಥಿಕನೊಡನೆಯೇ ಯುದ್ಧಮಾಡಬೇಕೆಂಬ ನಿಯಮವು ತಪ್ಪಿಹೋಗಿ ರಥಿಯಾದವನು ಗಜಸೇನಾನಾಯಕನ ಬಳಿಗೆ ಹೋಗಿ, ಅವನನ್ನೆದುರಿಸಿ ಗಜವನ್ನೂ ಮತ್ತು ಗಜಾರೋಹಿಯನ್ನೂ ಸಂಹರಿಸುತ್ತಿದ್ದನು. ಅದೇ ರೀತಿಯಲ್ಲಿ ಗಜಾರೋಹಿಯೂ ಸಹ ರಥಿಯನ್ನು ಎದುರಿಸಿ ಅಶ್ವ-ಸಾರಥಿಗಳ ಸಮೇತನಾಗಿ ರಥಿಯನ್ನು ಹೊಡೆದುರುಳಿಸುತ್ತಿದ್ದನು. ಅಶ್ವಾರೋಹಿ ಸೈನಿಕನು ರಥಿಯನ್ನು ಸಮಯನೋಡಿ ಪ್ರಾಸದಿಂದ ತಿವಿದು ಸಾಯಿಸುತ್ತಿದ್ದನು. ಅಂತೆಯೇ ರಥಿಯೂ ಸಹ ಅಶ್ವಾರೋಹಿಯ ಮೇಲೆ ದಾಳಿನಡೆಸಿ ಚೂಪಾದ ಬಾಣಗಳನ್ನು ವಿಚ್ಛಿತ್ತಿಯೇ ಇಲ್ಲದಂತೆ ಪ್ರಯೋಗಿಸಿ ಅಶ್ವ

ವನ್ನೂ ಅಶ್ವಾರೋಹಿಯನ್ನೂ ಸಂಹರಿಸುತ್ತಿದ್ದನು. ಪದಾತಿಯು ನಿಶಿತವಾದ ಶಸ್ತ್ರಗಳಿಂದ ರಥಿಕನನ್ನು ಹೊಡೆದುರುಳಿಸುತ್ತಿದ್ದನು. ಅಂತೆಯೇ ರಥಿಕನೂ ಸಹ ಪದಾತಿಯನ್ನು ಬಾಣಗಳ ಪ್ರಹಾರದಿಂದ ಸಂಹರಿಸುತ್ತಿದ್ದನು. ಇಂತಹ ಯುದ್ಧವ್ಯತಿಕ್ರಮವು ಎರಡು ಪಕ್ಷದ ಸೈನ್ಯಗಳಲ್ಲಿಯೂ ನಡೆಯುತ್ತಿದ್ದಿತು. ಗಜಾರೋಹಿಗಳು ಅಶ್ವಾರೋಹಿಗಳ ಮೇಲೆ ಆಕ್ರಮಣ ನಡೆಸಿ ಅಶ್ವವನ್ನೂ–ಅಶ್ವಾರೋಹಿಯನ್ನೂ ಸಂಹರಿಸುತ್ತಿದ್ದರು. ಇದೇನೂ ಅಷ್ಟು ಆಶ್ಚರ್ಯಕರವಾಗಿ ಕಾಣುತ್ತಿರಲಿಲ್ಲ. ಆದರೆ ಅಶ್ವಾರೋಹಿಗಳು ಗಜಾರೋಹಿಗಳ ಮೇಲೆ ನುಗ್ಗಿ ಆನೆಯನ್ನೂ ಅದರ ಮೇಲೆ ಕುಳಿತಿರುವ ಯೋಧನನ್ನೂ ಕೂಡ ಚಾಕಚಕ್ಯತೆಯಿಂದ ಸಂಹಾರಮಾಡುತ್ತಿದ್ದುದು ಅತ್ಯದ್ಭುತವಾಗಿ ಕಾಣುತ್ತಿದ್ದಿತು. ಕೆಲವೆಡೆಗಳಲ್ಲಿ ಗಜಾರೋಹಿಗಳಲ್ಲಿ ಶ್ರೇಷ್ಠರೆನಿಸಿಕೊಂಡಿರುವವರೂ ಸಹ ಪದಾತಿಗಳ ಮೇಲೆ ದಾಳಿ ನಡೆಸಿ ಅವರನ್ನು ಸಂಹಾರಮಾಡುತ್ತಿದ್ದುದು ಕಂಡುಬರುತ್ತಿದ್ದಿತು. ಅದೇ ರೀತಿಯಲ್ಲಿ ಪದಾತಿಗಳೂ ಸಹ ಗಜಯೋಧಿಗಳ ಮೇಲೆ ಬಾಣಗಳನ್ನು ಪ್ರಯೋಗಿಸಿ ಆನೆಯನ್ನೂ, ಗಜಯೋಧಿಯನ್ನೂ ಸಂಹರಿಸುತ್ತಿದ್ದ ಸಂದರ್ಭಗಳೂ ಇಲ್ಲದಿರಲಿಲ್ಲ.

ಪದಾತಿಗಳು ಅಶ್ವಾರೋಹಿ ಸೈನಿಕರ ಮೇಲೂ ದಾಳಿನಡೆಸಿ ಅಶ್ವಗಳನ್ನೂ ಅಶ್ವಾರೋಹಿಗಳನ್ನೂ ಸಂಹರಿಸುತ್ತಿದ್ದರು. ಅಶ್ವಾರೋಹಿಗಳೂ ಸಹ ಪದಾತಿಗಳ ಮೇಲೆ ದಾಳಿನಡೆಸಿ ನೂರಾರು, ಸಾವಿರಾರು ಪದಾತಿಗಳನ್ನು ಸಂಹರಿಸುತ್ತಿದ್ದ ದೃಶ್ಯವೂ ಸಹ ಆ ರಣಾಂಗಣದಲ್ಲಿ ಕಂಡುಬರುತ್ತಿದ್ದಿತು. ಮಹಾರಾಜ! ಆ ರಣಾಂಗಣದ ಸುತ್ತಲೂ ಚೆಲ್ಲಾಪಿಲ್ಲಿಯಾಗಿ ಬಿದ್ದಿದ್ದ ಧ್ವಜಗಳಿಂದಲೂ, ಧನುಸ್ಸುಗಳಿಂದಲೂ, ತೋಮರಗಳಿಂದಲೂ, ಪ್ರಾಸಗಳಿಂದಲೂ, ಗದೆಗಳಿಂದಲೂ, ಪರಿಘಗಳಿಂದಲೂ, ಕಂಪನಗಳಿಂದಲೂ, ಶಕ್ತ್ಯಾಯುಧಗಳಿಂದಲೂ, ಚಿತ್ರ-ವಿಚಿತ್ರವಾದ ಕವಚಗಳಿಂದಲೂ, ಕಣಪಗಳಿಂದಲೂ, ಅಂಕುಶಗಳಿಂದಲೂ, ಥಳಥಳಿಸುತ್ತಿದ್ದ ಕತ್ತಿಗಳಿಂದಲೂ, ಸುವರ್ಣಮಯವಾದ ರೆಕ್ಕೆಗಳುಳ್ಳ ಬಾಣಗಳಿಂದಲೂ, ಶೂಲಗಳಿಂದಲೂ, ಬಣ್ಣದ ಕಂಬಳಿಗಳಿಂದಲೂ, ಬಹುಮೂಲ್ಯವಾದ ರತ್ನಗಂಬಳಿಗಳಿಂದಲೂ ಆ ಭೂಮಿಯು ನಾನಾವಿಧವಾದ ನಾನಾವರ್ಣಗಳ ಪುಷ್ಪಹಾರಗಳಿಂದ ಅಲಂಕೃತವಾಗಿದೆಯೋ ಎಂಬಂತೆ ಕಾಣುತ್ತಿದ್ದಿತು. ಎಲ್ಲೆಲ್ಲಿ ನೋಡಿದರೂ ನರಾಶ್ವ-ಗಜಗಳ ಹೆಣಗಳು ರಾಶಿ-ರಾಶಿ

ಯಾಗಿ ಬಿದ್ದಿರುತ್ತಿದ್ದುವು. ಅನೇಕಯೋಧರು ಆನೆಗಳ ಕಾಲುಗಳಿಗೆ ಸಿಕ್ಕಿ ಮುದ್ದೆಯಾಗಿ ಅವರ ಮಾಂಸ ಮತ್ತು ರಕ್ತಗಳು ಮಣ್ಣಿನೊಡನೆ ಬೆರೆತು ದೊಡ್ಡ ಕೆಸರೇ ಅಲ್ಲಿ ಉಂಟಾಗಿದ್ದಿತು. ಆದುದರಿಂದ ಪೃಥಿವಿಯಲ್ಲಿ ಸಂಚರಿಸಲು ಸಾಧ್ಯವಿಲ್ಲದಂತಾಗಿತ್ತು.

ಈ ಹಿಂದೆ ಯೋಧರ ಕಾಲುಗಳ ಸಂಘಟ್ಟನೆಯಿಂದಾಗಿ ಅಪಾರವಾದ ಧೂಳೆದ್ದು ಸೂರ್ಯನನ್ನು ಮುಚ್ಚಿಬಿಟ್ಟಿತು. ದಿಕ್ಕುಗಳೂ, ಉಪದಿಕ್ಕುಗಳೂ ಕಾಣುತ್ತಲೇ ಇರಲಿಲ್ಲ–ಎಂದು ಹೇಳಿದ್ದೆನಲ್ಲವೇ ; ಮಹಾರಾಜ! ಎರಡು ಪಕ್ಷಗಳಲ್ಲಿಯೂ ಸೈನ್ಯಗಳ ಸಂಹಾರವು ಅವಿರತವಾಗಿ ನಡೆದಾಗ ನರಾಶ್ವ-ಗಜಗಳ ರಕ್ತವು ಭೂಮಿಯ ಮೇಲೆ ಬಿದ್ದು ನೀರನ್ನು ಸಿಂಪಡಿಸಿದಂತಾಗಿ ಧೂಳೆಲ್ಲವೂ ಅಡಗಿಯೇ ಹೋಯಿತು. ದಿಕ್ಕುಗಳು ಮತ್ತು ಉಪದಿಕ್ಕುಗಳೂ ಸಹ ಮಲರಹಿತವಾದುವು. (ಧೂಳಿನಿಂದ ರಹಿತವಾದುವು.) ಅಂಧಕಾರವು ಹೊರಟುಹೋಯಿತು.

ಮಹಾರಾಜ! ಆ ರಣಾಂಗಣದಲ್ಲಿ ಮತ್ತೊಂದು ವಿಚಿತ್ರವನ್ನು ನಾನು ನೋಡಿದೆನು. ರುಂಡಗಳಿಂದ ಬೇರ್ಪಟ್ಟ ಮುಂಡಗಳು ಕ್ಷಣ-ಕ್ಷಣಕ್ಕೂ ಮೇಲೆದ್ದು ನಿಂತುಕೊಳ್ಳುತ್ತಿದ್ದುದನ್ನು ನಾನು ನೋಡಿದೆನು. ಇದು ಜಗತ್ತಿನ ವಿನಾಶಕ್ಕೆ ಮುನ್ಸೂಚನೆಯೆಂದು ಹೇಳುತ್ತಾರೆ.

ಆ ಮಹಾಭಯಂಕರವಾದ, ಸುದಾರುಣವಾದ ಯುದ್ಧವು ನಡೆಯುತ್ತಿರಲಾಗಿ ರಥಯೋಧರು ರಣಾಂಗಣದ ಸುತ್ತಲೂ ಓಡುತ್ತಿರುವುದು ಕಂಡು ಬರುತ್ತಿದ್ದಿತು.

ಅನಂತರ ಸಿಂಹಸದೃಶಪರಾಕ್ರಮರಾದ, ಯುದ್ಧದಲ್ಲಿ ಎದುರಿಸಲು ಅಸಾಧ್ಯರಾದ ಭೀಷ್ಮ, ದ್ರೋಣ, ಸಿಂಧುರಾಜನಾದ ಜಯದ್ರಥ, ಪುರುಮಿತ್ರ, ಜಯ, ಭೋಜ, ಶಲ್ಯ, ಶಕುನಿ–ಇವರುಗಳು ಪಾಂಡವರ ಸೈನ್ಯಗಳನ್ನು ಬಾರಿ-ಬಾರಿಗೂ ಭಗ್ನಗೊಳಿಸುತ್ತಿದ್ದರು. ಅದೇ ರೀತಿಯಲ್ಲಿ ಭೀಮಸೇನ, ರಾಕ್ಷಸನಾದ ಘಟೋತ್ಕಚ, ಸಾತ್ಯಕಿ, ಚೇಕಿತಾನ, ದ್ರೌಪದಿಯ ಐವರು ಮಕ್ಕಳು–ಇವರೆಲ್ಲರೂ ನಿನ್ನ ಕಡೆಯವರನ್ನೂ, ಸರ್ವರಾಜರುಗಳಿಂದ ಕೂಡಿದ ನಿನ್ನ ಮಕ್ಕಳನ್ನೂ–ದೇವತೆಗಳು ದಾನವರನ್ನು ಯುದ್ಧದಿಂದ

ವಿಮುಖರನ್ನಾಗಿ ಮಾಡುತ್ತಿದ್ದಂತೆ–ಕ್ಷಣ-ಕ್ಷಣಕ್ಕೂ ರಣರಂಗದಿಂದ ಓಡಿ ಹೋಗುವಂತೆ ಮಾಡುತ್ತಿದ್ದರು. ಈ ರೀತಿಯಾಗಿ ಯುದ್ಧದಲ್ಲಿ ಅನ್ಯೋನ್ಯವಾಗಿ ಸಂಹಾರಕಾರ್ಯವನ್ನು ನಡೆಸುತ್ತಿದ್ದ ಕ್ಷತ್ರಿಯರ್ಷಭರು ರಕ್ತದಿಂದ ತೋಯ್ದು ಘೋರರರೂಪವನ್ನು ಹೊಂದಿ, ದಾನವರಂತೆಯೇ ಕಾಣುತ್ತಿದ್ದರು. ಎರಡು ಸೈನ್ಯಗಳಲ್ಲಿಯೂ ತಮ್ಮ ತಮ್ಮ ಶತ್ರುಗಳನ್ನು ಪರಸ್ಪರವಾಗಿ ಜಯಿಸಿದ ಅವರು ಆಕಾಶದಲ್ಲಿರುವ ಪ್ರಧಾನಭೂತವಾದ ಗ್ರಹಗಳಂತೆಯೇ ವಿರಾಜಿಸುತ್ತಿದ್ದರು.

ಅನಂತರ ನಿನ್ನ ಮಗನಾದ ದುರ್ಯೋಧನನು ಒಂದು ಸಾವಿರ ರಥ ಸೈನ್ಯವನ್ನು ತೆಗೆದುಕೊಂಡು ಪಾಂಡವನನ್ನೂ (ಭೀಮನನ್ನೂ) ಮತ್ತು ಅವನ ಮಗನಾದ ಘಟೋತ್ಕಚರಾಕ್ಷಸನನ್ನೂ ಎದುರಿಸಿ ಯುದ್ಧಮಾಡಲು ಹೋದನು. ಅದೇ ರೀತಿಯಲ್ಲಿ ಪಾಂಡವರೂ ಸಹ ಅತಿದೊಡ್ಡದಾದ ಸೈನ್ಯವನ್ನು ತೆಗೆದುಕೊಂಡು ಶತ್ರುಹಂತಕರಾದ ಭೀಷ್ಮ-ದ್ರೋಣರೊಡನೆ ಯುದ್ಧಮಾಡಲು ಹೊರಟರು. ಪರಮಕ್ರುದ್ಧನಾಗಿದ್ದ ಕಿರೀಟಿಯು ದುರ್ಯೋಧನನ ಕಡೆಯ ರಾಜರ ಮೇಲೆ ಯುದ್ಧಮಾಡಲು ಹೊರಟನು. ಅಭಿಮನ್ಯು ಮತ್ತು ಸಾತ್ಯಕಿಗಳು ಶಕುನಿಯ ಸೈನ್ಯವನ್ನು ಆಕ್ರಮಿಸಲು ಹೊರಟರು. ಅನಂತರ ವಿಜಯೇಚ್ಛುಗಳಾದ ನಿನ್ನವರಿಗೂ ಮತ್ತು ನಿನ್ನ ಶತ್ರುಪಕ್ಷದವರಿಗೂ ರೋಮಾಂಚಕಾರಿಯಾದ ಯುದ್ಧವು ಪುನಃ ಪ್ರಾರಂಭವಾಯಿತು.

೫೭ನೆಯ ಅಧ್ಯಾಯವು ಮುಗಿಯಿತು.

೫೮ನೆಯ ಅಧ್ಯಾಯ ಭೀಷ್ಮವಧಪರ್ವ (ಮುಂದುವರಿದಿದೆ.)

## ಪಾಂಡವವೀರರ ಪರಾಕ್ರಮ ; ಕೌರವಸೇನೆಯ ಪಲಾಯನ : ದುರ್ಯೋಧನ ಮತ್ತು ಭೀಷ್ಮರ ಸಂವಾದ

ಮಹಾರಾಜ! ಪಾರ್ಥನು ನಿನ್ನ ಕಡೆಗೆ ಸೇರಿರುವ ರಾಜರ ಮೇಲೆ ದಾಳಿಮಾಡಲು ಹೋದನೆಂದು ನಾನು ಈ ಹಿಂದೆ ಹೇಳಿದೆನಲ್ಲವೇ? ತಮ್ಮೊಡನೆ ಯುದ್ಧಕ್ಕೆ ಬಂದ ಅರ್ಜುನನನ್ನು ನೋಡಿ ಪರಮಕ್ರುದ್ಧರಾದ ಆ ರಾಜರು ಅನೇಕಸಹಸ್ರ ರಥಸೈನ್ಯಗಳಿಂದ ಕೂಡಿಕೊಂಡು ಅರ್ಜುನನನ್ನು

ನಾಲ್ಕೂ ಕಡೆಗಳಿಂದಲೂ ಮುತ್ತಿಗೆ ಹಾಕಿದರು. ಈ ರೀತಿಯಾಗಿ ರಥಗಳ ಸಮೂಹದಿಂದ ರಚಿತವಾದ ಕೋಟೆಯೊಳಕ್ಕೆ ಸೇರಿಸಿಕೊಂಡು ಸಾವಿರಾರು ಬಾಣಗಳಿಂದ ಅರ್ಜುನನ ಮೇಲೆ ಏಕಕಾಲದಲ್ಲಿ ಎಲ್ಲ ಕಡೆಗಳಿಂದಲೂ ಪ್ರಹರಿಸಲು ಉಪಕ್ರಮಿಸಿದರು. ಬಾಣಗಳು ಮಾತ್ರವಲ್ಲ ; ಕ್ರುದ್ಧರಾಗಿದ್ದ ರಾಜರು ಥಳ-ಥಳಿಸುತ್ತಿದ್ದ ಶಕ್ತ್ಯಾಯುಧಗಳನ್ನೂ, ತೀಕ್ಷ್ಣವಾದ ಮತ್ತು ದುಃಸಹವಾದ ಗದೆಗಳನ್ನೂ, ಪರಿಘಾಯುಧಗಳನ್ನೂ, ಪ್ರಾಸಗಳನ್ನೂ, ಗಂಡು ಗೊಡಲಿಗಳನ್ನೂ, ಮುದ್ಗರಗಳನ್ನೂ, ಮುಸಲಾಯುಧಗಳನ್ನೂ ಅರ್ಜುನನ ರಥದ ಕಡೆಗೆ ರಭಸದಿಂದ ಎಸೆಯುತ್ತಿದ್ದರು.

ಪತಂಗದ ಹುಳುಗಳ ಸಾಲಿನಂತೆ ನಾಲ್ಕು ದಿಕ್ಕುಗಳಿಂದಲೂ ಪುಂಖಾನುಪುಂಖವಾಗಿ ಬರುತ್ತಿದ್ದ ದುರ್ಯೋಧನನ ಪಕ್ಷದ ರಾಜರ ಬಾಣ ಗಳ ಮತ್ತು ಇತರ ಆಯುಧಗಳ ವೃಷ್ಟಿಯನ್ನು ಪಾರ್ಥನು ಸ್ವರ್ಣಭೂಷಿತವಾದ ಬಾಣಗಳಿಂದ ತಡೆದುಬಿಟ್ಟನು. ಬೀಭತ್ಸುವಿನ ಅತಿಮಾನುಷವಾದ ಆ ಹಸ್ತಲಾಘವವನ್ನು ಕಂಡು ದೇವ-ದಾನವ-ಗಂಧರ್ವರೂ, ಪಿಶಾಚೋರಗ-ರಾಕ್ಷಸರೂ 'ಸಾಧು ಸಾಧು' 'ಭಲೇ ಭಲೇ' ಎಂಬುದಾಗಿ ಪ್ರಶಂಸೆಮಾಡುತ್ತಾ ಅರ್ಜುನನನ್ನು ಗೌರವಿಸಿದರು. ಮತ್ತೊಂದು ರಂಗದಲ್ಲಿ ಹಿಂದೆ ಹೇಳಿದಂತೆ ಸಾತ್ಯಕಿ ಮತ್ತು ಅಭಿಮನ್ಯುಗಳು ದೊಡ್ಡದಾದ ಸೈನ್ಯದಿಂದ ಪರಿವೃತರಾಗಿ ಶೂರರಾದ ಸುಬಲನ ಮಕ್ಕಳಿಂದ ಕೂಡಿದ ಗಾಂಧಾರದೇಶೀಯವೀರರನ್ನು ಎದುರಿಸಿದರು. ಕ್ರುದ್ಧರಾದ ಸೌಬಲರು ಯುದ್ಧದಲ್ಲಿ ನಾನಾವಿಧವಾದ ಶಸ್ತ್ರ ಗಳಿಂದ ಸಾತ್ಯಕಿಯ ಶ್ರೇಷ್ಠವಾದ ರಥವನ್ನು ಎಳ್ಳಿನ ಗಾತ್ರದಷ್ಟು ಚೂರು-ಚೂರಾಗಿ ಕತ್ತರಿಸಿಬಿಟ್ಟರು. (ಪುಡಿ-ಪುಡಿಮಾಡಿಬಿಟ್ಟರು.) ಭಯಂಕರವಾದ ಆ ಮಹಾಯುದ್ಧದಲ್ಲಿ ಪರಂತಪನಾದ ಸಾತ್ಯಕಿಯು ಭಗ್ನವಾದ ರಥವನ್ನು ಪರಿತ್ಯಜಿಸಿ ಅಭಿಮನ್ಯುವಿನ ರಥವನ್ನು ಶೀಘ್ರವಾಗಿ ಹತ್ತಿದನು. ಒಂದೇ ರಥ ದಲ್ಲಿ ಕುಳಿತಿದ್ದ ಸಾತ್ಯಕಿ-ಅಭಿಮನ್ಯುಗಳು ಸುಬಲನ ಮಗನಾದ ಶಕುನಿಯ ಸೈನ್ಯವನ್ನು ಬಗ್ಗಿದ ಗಿಣ್ಣುಗಳಿಂದ ಕೂಡಿದ್ದ ಮತ್ತು ನಿಶಿತವಾದ ಬಾಣಗಳಿಂದ ಸಂಹಾರಮಾಡಲು ಉಪಕ್ರಮಿಸಿದರು. ಮತ್ತೊಂದು ವಿಭಾಗದಲ್ಲಿ ಭೀಷ್ಮ-ದ್ರೋಣರು ರಣಹದ್ದಿನ ರೆಕ್ಕೆಗಳನ್ನು ಹೊಂದಿದ್ದ ತೀಕ್ಷ್ಣವಾದ ಬಾಣಗಳಿಂದ

ಧರ್ಮರಾಜನ ಸೈನ್ಯವನ್ನು ವಿನಾಶಮಾಡಲು ಉಪಕ್ರಮಿಸಿದರು. ಅನಂತರ ಧರ್ಮರಾಜ, ಮಾದ್ರಿಯ ಮಕ್ಕಳಾದ ನಕುಲ-ಸಹದೇವರು ಈ ಮೂವರು ವೀರರೂ ಸರ್ವಸೈನ್ಯಗಳೂ ನೋಡುತ್ತಿದ್ದಂತೆಯೇ ದ್ರೋಣಾಚಾರ್ಯರ ಸೈನ್ಯದ ಮೇಲೆ ಭಯಂಕರವಾದ ದಾಳಿನಡೆಸಿದರು. ಹಿಂದೆ ಯಾವ ರೀತಿ ಯಲ್ಲಿ ದೇವತೆಗಳಿಗೂ ಮತ್ತು ರಾಕ್ಷಸರಿಗೂ ಸುದಾರುಣವಾದ ಯುದ್ಧವು ನಡೆಯಿತೋ–ಅದೇ ರೀತಿಯಲ್ಲಿ ಪಾಂಡವ-ಕೌರವರಿಗೆ ರೋಮಾಂಚಕರ ವಾದ ಬಹುಭಯಂಕರವಾದ ಯುದ್ಧವು ನಡೆಯಿತು.

ಮತ್ತೊಂದು ಕಡೆ ಭೀಮಸೇನ ಮತ್ತು ಅವನ ಮಗನಾದ ಘಟೋತ್ಕಚ ಇಬ್ಬರೂ ಸೇರಿ ಶತ್ರುನಾಶವೆಂಬ ದೊಡ್ಡ ಕಾರ್ಯವನ್ನು ಯಶಸ್ವಿಯಾಗಿ ಮಾಡುತ್ತಾ ದುರ್ಯೋಧನನ ಅಗಾಧಸೇನೆಯನ್ನೇ ಓಡಿಸಿಬಿಟ್ಟರು. ಒಡನೆಯೇ ದುರ್ಯೋಧನನು ತಾನೇ ಯುದ್ಧಕ್ಕೆ ನುಗ್ಗಿ ತನ್ನ ಸೈನಿಕರಿಗೆ ಪ್ರೋತ್ಸಾಹ ನೀಡುತ್ತಾ ರಣರಂಗಕ್ಕೆ ಹಿಂದಿರುಗುವಂತೆ ಮಾಡಿ ಭೀಮ-ಘಟೋತ್ಕಚರ ಸಂಹಾರಕಾರ್ಯವನ್ನು ತಡೆದು ನಿಲ್ಲಿಸಿದನು.

ಮಹಾರಾಜ! ಅಲ್ಲಿ ನಾವು ಘಟೋತ್ಕಚನ ಅದ್ಭುತವಾದ ಪರಾಕ್ರಮ ಪ್ರದರ್ಶನವನ್ನು ಕಂಡೆವು. ಅವನು ಪರಾಕ್ರಮದಲ್ಲಿ ತನ್ನ ತಂದೆಯಾದ ಭೀಮನನ್ನೂ ಮೀರಿಸಿ ನಿನ್ನ ಮಕ್ಕಳೊಡನೆ ಯುದ್ಧಮಾಡುತ್ತಿದ್ದನು. ಇದು ನಮಗೆ ಪರಮಾದ್ಭುತವಾಗಿ ಕಂಡಿತು.

ಪರಮಕ್ರುದ್ಧನಾದ ಭೀಮಸೇನನು ಅಸಹನಶೀಲನಾದ ದುರ್ಯೋಧನನ ವಕ್ಷಃಸ್ಥಳಕ್ಕೆ ಗುರಿಯಿಟ್ಟು ನಸುನಗುತ್ತಲೇ ಬಾಣವೊಂದನ್ನು ಪ್ರಯೋಗಿಸಿದನು. ಆ ಬಾಣಪ್ರಹಾರದಿಂದ ಬಹುಪೀಡಿತನಾದ ದುರ್ಯೋಧನನು ರಥದಲ್ಲಿದ್ದ ಆಸನದಿಂದ ಕುಸಿದು ಕುಳಿತನು ಮತ್ತು ಮರುಕ್ಷಣದಲ್ಲಿಯೇ ಮೂರ್ಛಿತನಾದನು. ರಾಜನು ವಿಸಂಜ್ಞನಾದುದನ್ನು ತಿಳಿದ ಸಾರಥಿಯು ತತ್ಕ್ಷಣವೇ ರಾಜನನ್ನು ರಣಾಂಗಣದ ಹೊರಭಾಗಕ್ಕೆ ಕರೆದೊಯ್ದನು. ಅನಂತರ ಅವನ ಸೈನ್ಯವು ಒಡೆದುಹೋಯಿತು. (ರಾಜನು ಹೊರಟುಹೋದನೆಂಬ ಭಯದಿಂದ ಸೈನಿಕರು ಚದುರಿಹೋದರು.) ನಾನಾದಿಕ್ಕುಗಳಿಗೂ

ಭಯಗೊಂಡು ಓಡಿಹೋಗುತ್ತಿದ್ದ ಕೌರವಸೈನ್ಯವನ್ನು ಭೀಮನು ಸುಮ್ಮನೆ ಬಿಟ್ಟುಬಿಡಲಿಲ್ಲ. ತೀಕ್ಷ್ಣವಾದ ಬಾಣಗಳಿಂದ ಓಡಿಹೋಗುತ್ತಿದ್ದವರನ್ನು ಸಂಹರಿಸುತ್ತಿದ್ದನಲ್ಲದೇ ಅಳಿದುಳಿದವರನ್ನು ಬೆನ್ನಟ್ಟಿಯೂ ಹೋಗಿ ಅವರನ್ನೂ ಧ್ವಂಸಮಾಡುತ್ತಿದ್ದನು.

ಮತ್ತೊಂದು ವಿಭಾಗದಲ್ಲಿ ರಥಶ್ರೇಷ್ಠನಾದ ಧೃಷ್ಟದ್ಯುಮ್ನ ಮತ್ತು ಧರ್ಮಪುತ್ರನಾದ ಯುಧಿಷ್ಠಿರ ಇಬ್ಬರೂ–ದ್ರೋಣರೂ ಮತ್ತು ಗಾಂಗೇಯನೂ ನೋಡುತ್ತಿದ್ದಂತೆಯೇ ಅವರ ಕಡೆಯ ಸೈನ್ಯಗಳನ್ನು ಶತ್ರುಸೈನ್ಯ ವಿನಾಶಕಗಳಾದ, ತೀಕ್ಷ್ಣವಾದ ಬಾಣಗಳಿಂದ ಸಂಹರಿಸುತ್ತಿದ್ದರು. ಅವರ ಬಾಣಗಳ ಪ್ರಹಾರವನ್ನು ತಾಳಲಾರದೇ ತಮ್ಮ ನಾಯಕರಾದ ಭೀಷ್ಮ-ದ್ರೋಣರು ಸಮ್ಮುಖದಲ್ಲಿಯೇ ಇದ್ದರೂ ಸಹ ಅವರ ಎದುರಿನಲ್ಲೇ ಸೈನಿಕರೂ ದಿಕ್ಕಾಪಾಲಾಗಿ ಓಡಿಹೋಗುತ್ತಿದ್ದರು. ನಿನ್ನ ಮಗನ ಸೈನ್ಯವನ್ನು ತಡೆಯಲು ಅಥವಾ ಹಿಂದಿರುಗುವಂತೆ ಮಾಡಲು ಮಹಾರಥರಾದ ಭೀಷ್ಮ-ದ್ರೋಣರಿಗೂ ಸಾಧ್ಯವಾಗಲಿಲ್ಲ. ಭೀಷ್ಮ-ದ್ರೋಣರೇನೋ ಬಾರಿ-ಬಾರಿಗೂ ಸೈನ್ಯವನ್ನು ತಡೆದು ನಿಲ್ಲಿಸಲು ಪ್ರಯತ್ನಿಸುತ್ತಿದ್ದರು ಮತ್ತು ಅವರಿಗೆ ಧೈರ್ಯ ಹೇಳುತ್ತಿದ್ದರು. 'ಯುದ್ಧದಲ್ಲಿ ಓಡಿಹೋಗುವುದು ಕ್ಷತ್ರಿಯರ ಲಕ್ಷಣವಲ್ಲ, ಪಾಪಕ್ಕೆ ಕಾರಣವಾಗುತ್ತದೆ'–ಎಂದೂ ಮನದಟ್ಟಾಗುವಂತೆ ಸೈನಿಕರಿಗೆ ಬೋಧಿಸುತ್ತಿದ್ದರು. ಆದರೂ ಸಹ ಓಡುತ್ತಿದ್ದ ಸೈನ್ಯವನ್ನು ನಿಲ್ಲಿಸಲು ಅಥವಾ ಅವರನ್ನು ಒಗ್ಗೂಡಿಸಿ ಯುದ್ಧಕ್ಕೆ ಹಿಂದಿರುಗಿಸಲು ಭೀಷ್ಮ-ದ್ರೋಣರು ಸಮರ್ಥರಾಗಲೇ ಇಲ್ಲ. ಅವರು ಧೈರ್ಯ ಹೇಳುತ್ತಿದ್ದರೂ ಸಹ ಸೈನಿಕರು ತಮ್ಮ ನಾಯಕರು ನೋಡುತ್ತಿದ್ದಂತೆಯೇ ಓಡಿಹೋಗುತ್ತಲೇ ಇದ್ದರು. ಓಡಿಹೋಗುತ್ತಿದ್ದವರು ಕೇವಲ ಪದಾತಿಗಳೇ ಅಲ್ಲ. ಸಾವಿರಾರು ರಥಸೈನಿಕರೂ ಸಹ ದಿಕ್ಕಾಪಾಲಾಗಿ ಓಡಿಹೋಗುತ್ತಿದ್ದರು.

ಮಹಾರಾಜ! ಭೀಷ್ಮ-ದ್ರೋಣರಿದ್ದ ವಿಭಾಗದ ಸೇನೆಯ ಅವಸ್ಥೆಯು ಹೀಗಾಯಿತು. ಇತ್ತ ಶಕುನಿಯ ಸೇನೆಯು ಏನಾಯಿತೆಂಬುದನ್ನು ಹೇಳುವೆನು ಕೇಳು. ಸಾತ್ಯಕಿ-ಅಭಿಮನ್ಯುಗಳು ಒಂದೇ ರಥದಲ್ಲಿ ಕುಳಿತು ಯುದ್ಧ

ಮಾಡುತ್ತಿದ್ದ ವಿಷಯವನ್ನು ಈ ಹಿಂದೆಯೇ ನಿನಗೆ ಹೇಳಿದ್ದೆನಲ್ಲವೇ? ಸೌಬಲಸೇನೆಗೂ ಸಾತ್ಯಕಿ-ಅಭಿಮನ್ಯುಗಳಿಗೂ ಭಯಂಕರವಾದ ಯುದ್ಧವು ನಡೆಯುತ್ತಿದ್ದಿತು. ಸೌಭದ್ರ-ಶಿನಿಪುಂಗವರು ಶಕುನಿಯ ಸೈನ್ಯವನ್ನು ಪದಾತಿಗಳಿಂದ ಹಿಡಿದು ರಥಸೈನ್ಯದವರೆಗೆ ಸಾವಿರಾರು ಸಂಖ್ಯೆಯಲ್ಲಿ ಧ್ವಂಸಮಾಡಿದರು. ಅಮಾವಾಸ್ಯೆಯ ದಿವಸದಲ್ಲಿ ಸೂರ್ಯ-ಚಂದ್ರರಿಬ್ಬರೂ ಆಕಾಶದಲ್ಲಿ ಒಂದೇ ಸ್ಥಾನದಲ್ಲಿದ್ದು ಪ್ರಕಾಶಿಸುವಂತೆ–ಆ ಸಮಯದಲ್ಲಿ ಒಂದೇ ರಥದಲ್ಲಿ ಕುಳಿತಿದ್ದ ಆ ಶೈನೇಯ-ಕುರುಪುಂಗವರು ಪ್ರಕಾಶಿಸಿದರು.

ಇತ್ತ ಅರ್ಜುನನು ಯುದ್ಧಮಾಡುತ್ತಿದ್ದ ಸ್ಥಳದಲ್ಲಿಯೂ ಅವನದೇ ಮೇಲುಗೈ ಆಗಿದ್ದಿತು. ಅವನು ಸಕಲರಾಜರೊಡನೆಯೂ ಯುದ್ಧಮಾಡುತ್ತಿದ್ದನಲ್ಲವೇ? ಕ್ರುದ್ಧನಾಗಿದ್ದ ಅರ್ಜುನನು ಮೇಘವು ಧಾರಾಕಾರವಾಗಿ ಮಳೆಗರೆಯುವಂತೆ–ನಿನ್ನ ಸೈನ್ಯದ ಮೇಲೆ ಬಾಣಗಳ ವೃಷ್ಟಿಯನ್ನೇ ಕರೆದುಬಿಟ್ಟನು. ಸಂಗ್ರಾಮಭೂಮಿಯಲ್ಲಿ ಪಾರ್ಥನ ಬಾಣಗಳಿಂದ ಸೈನಿಕರು ಅಪರಿಮಿತವಾದ ಸಂಖ್ಯೆಯಲ್ಲಿ ಸಂಹೃತರಾಗುತ್ತಿದ್ದುದನ್ನು ಕಂಡು ಉಳಿದ ಸೈನಿಕರು ಅರ್ಜುನನನ್ನು ಎದುರಿಸಿ ನಿಂತುದಕ್ಕಾಗಿ ವಿಷಾದಿಸುತ್ತಾ, ಭಯದಿಂದ ನಡುಗುತ್ತಾ, ಪ್ರಾಣವನ್ನುಳಿಸಿಕೊಳ್ಳುವ ಸಲುವಾಗಿ ಸಿಕ್ಕು-ಸಿಕ್ಕಿದ ಕಡೆಗಳಿಗೆಲ್ಲಾ ಓಡಿಹೋಗುತ್ತಿದ್ದರು. ದುರ್ಯೋಧನನ ಹಿತೈಷಿಗಳಾದ, ಮಹಾರಥರಾದ ಭೀಷ್ಮ-ದ್ರೋಣರು ಕುರುರಾಜನ ಸೈನಿಕರೆಲ್ಲರೂ ಎಲ್ಲ ರಂಗಗಳಲ್ಲಿಯೂ ಓಡಿಹೋಗುತ್ತಿರುವುದನ್ನು ಕಂಡು ಪರಮಕ್ರುದ್ಧರಾಗಿ ಬಹಳ ಪ್ರಯತ್ನದಿಂದಲೂ ಮತ್ತು ಹುರಿದುಂಬಿಸುವಿಕೆಯಿಂದಲೂ ಹಲವಾರು ಸೈನಿಕರನ್ನು ಯುದ್ಧಭೂಮಿಗೆ ಹಿಂದಿರುಗಿಸಿದರು. ಮೂರ್ಛೆಗೊಂಡಿದ್ದ ದುರ್ಯೋಧನನೂ ಕೂಡಾ ಆ ವೇಳೆಗೆ ಎಚ್ಚರಗೊಂಡು ರಣರಂಗಕ್ಕೆ ರಥವನ್ನು ತಿರುಗಿಸುವಂತೆ ಸಾರಥಿಗೆ ಹೇಳಿದನು. ರಣರಂಗದಿಂದ ದಿಕ್ಕಾಪಾಲಾಗಿ ಓಡಿಹೋಗುತ್ತಿದ್ದ ತನ್ನ ಸೈನಿಕರಿಗೆ ಪರಿ-ಪರಿಯಾಗಿ ಸಮಾಧಾನ ಹೇಳಿ ಅವರೆಲ್ಲರನ್ನೂ ಮತ್ತೆ ಹಿಂದಿರುಗುವಂತೆ ಮಾಡಿದನು. ನಿನ್ನ ಮಗನು ಯಾವ ಯಾವ ಕಡೆ ಯಾರು ಯಾರನ್ನು ನೋಡುತ್ತಿದ್ದನೋ ಆ ಕ್ಷತ್ರಿಯಮಹಾರಥರೆಲ್ಲರೂ ಆಯಾ ಸ್ಥಳಗಳಿಂದ (ಓಡಿಹೋಗಿ ನಿಂತಿದ್ದ ಸ್ಥಳಗಳಿಂದ) ಹಿಂದಿರುಗುತ್ತಿದ್ದರು. ಹೀಗೆ ಹಲವಾರು ಮಂದಿ ಯುದ್ಧಕ್ಕೆ ಹಿಂದಿರುಗುತ್ತಿರುವುದನ್ನು

ನೋಡಿ ಮತ್ತೂ ಕೆಲವರು ಯುದ್ಧಕ್ಕೆ ಹಿಂದಿರುಗತೊಡಗಿದರು. ಆ ಸಮಯದಲ್ಲಿಯೂ ತಾ ಮುಂದು–ನಾ ಮುಂದು ಎಂಬ ಸ್ಪರ್ಧೆಯಿಂದಲೇ ಎಲ್ಲರೂ ರಣಾಂಗಣಕ್ಕೆ ಬಂದು ಸೇರಿದರು. ಆದರೆ ಅವರ ಮುಖದಲ್ಲಿ ಓಡಿಹೋದುದಕ್ಕಾಗಿ ಲಜ್ಜೆಯೂ ಸಹ ಆವರಿಸಿದ್ದಿತು. ಹಿಂದಿರುಗುತ್ತಿದ್ದವರ ವೇಗವೂ ಸಹ ಅತಿಯಾಗಿಯೇ ಇದ್ದಿತು. ಮಹಾರಾಜ! ಭಯದಿಂದ ರಣರಂಗವನ್ನು ಬಿಟ್ಟು ಓಡಿಹೋದಷ್ಟೇ ವೇಗದಲ್ಲಿ-ಚಂದ್ರೋದಯವಾದೊಡನೆಯೇ ಸಾಗರವು ಉಕ್ಕಿಬರುವಂತೆ–ದುರ್ಯೋಧನನನ್ನು ನೋಡಿದೊಡನೆಯೇ ಸೈನಿಕರು ಹಿಂದಿರುಗಿ ಬಂದು ರಣಾಂಗಣವನ್ನು ತುಂಬಿಬಿಟ್ಟರು. ಭಯಪಟ್ಟುಕೊಂಡು ಓಡಿಹೋಗಿದ್ದ ತನ್ನ ಸೈನಿಕರೆಲ್ಲರೂ ರಣರಂಗಕ್ಕೆ ಪುನಃ ಹಿಂದಿರುಗಿದುದನ್ನು ಕಂಡು ದುರ್ಯೋಧನರಾಜನು ತ್ವರಿತವಾಗಿ ಭೀಷ್ಮನ ಸಮೀಪಕ್ಕೆ ಹೋಗಿ ಅವನೊಡನೆ ಹೇಳಿದನು :

"ಪಿತಾಮಹ! ನಾನು ಹೇಳುವುದನ್ನು ಗಮನವಿಟ್ಟು ಕೇಳು. ನೀನಿನ್ನೂ ಜೀವಿಸಿರಲಾಗಿ, ಅಸ್ತ್ರವಿದರಲ್ಲಿ ಶ್ರೇಷ್ಠರೆನಿಸಿಕೊಂಡಿರುವ ದ್ರೋಣಾಚಾರ್ಯರು ಜೀವಿಸಿರಲಾಗಿ, ಅವರ ವೀರಪುತ್ರನೂ ಜೀವಿಸಿರಲಾಗಿ, ಅನೇಕ ಸುಹೃಜ್ಜನರು ಇನ್ನೂ ಜೀವಿಸಿರಲಾಗಿ, ಮಹಾಧನುಷ್ಮಂತರಾದ ಕೃಪಾಚಾರ್ಯರೂ ಸಹ ಜೀವಿಸಿರಲಾಗಿ–ನಮ್ಮ ಸೇನೆಯು ನಾಥರೇ ಇಲ್ಲದಂತೆ ಓಡಿಹೋಗುತ್ತಿದೆ. ಇದು ನಿಮ್ಮ ಸಾಮರ್ಥ್ಯಕ್ಕೆ ಅನುರೂಪವಾಗಿಲ್ಲವೆಂದು ನಾನು ಭಾವಿಸುತ್ತೇನೆ. ನೀವು ಮುಂದೆ ನಿಂತು ಯುದ್ಧಮಾಡುತ್ತಿರುವಾಗ ನಮ್ಮ ಸೈನಿಕರು ಶತ್ರುಗಳ ಭಯದಿಂದ ಹಿಂದಿರುಗಿದರು–ಎಂಬುದರಲ್ಲಿ ಅರ್ಥವೇ ಇಲ್ಲ. ಆದರೆ ವಸ್ತುತಃ ಇಂದು ನಮ್ಮ ಸೈನಿಕರು ಪಾಂಡವರನ್ನು ಎದುರಿಸಲಾಗದೇ, ಅವರಿಗೆ ನಿಮ್ಮಂತಹ ಮಹಾಪರಾಕ್ರಮಿಗಳಿಂದಲೂ ಆಶ್ರಯವು ಸಿಕ್ಕದೇ–ಓಡಿಹೋಗುತ್ತಿದ್ದಾರೆ. ಇದು ನಮ್ಮ ಕೀರ್ತಿಗೆ ಗೌರವ ತರುವಂತಹುದಲ್ಲ. ನಾನು ನಿಮ್ಮ ಪರಾಕ್ರಮವೆಷ್ಟೆಂದು ಚೆನ್ನಾಗಿ ಬಲ್ಲೆನು, ಪಿತಾಮಹ! ಪಾಂಡವರು ನಿನ್ನ ಬಲಕ್ಕಾಗಲೀ, ದ್ರೋಣಾಚಾರ್ಯರ ಬಲಕ್ಕಾಗಲೀ, ಅವರ ಪುತ್ರ ಅಶ್ವತ್ಥಾಮನ ಬಲಕ್ಕಾಗಲೀ, ಕೃಪರ ಬಲಕ್ಕಾಗಲೀ ಸಮಾನವಾದ ಬಲವನ್ನು ಹೊಂದಿರುವರೆಂದು ನಾನು ಖಂಡಿತವಾಗಿಯೂ

ಭಾವಿಸುವುದಿಲ್ಲ. (ನಿಮ್ಮಲ್ಲಿ ಒಬ್ಬೊಬ್ಬರಿಗೂ ಸಹ ಪಾಂಡವರೆಲ್ಲರನ್ನೂ ಎದುರಿಸುವ ಸಾಮರ್ಥ್ಯವಿದೆ.)



ತಾತ! ನಿಶ್ಚಯಾಂಶವು ಹೀಗಿರುವಾಗ ಶತ್ರುಗಳಿಂದ ನಮ್ಮ ಸೇನೆಯು ಕೊಲ್ಲಲ್ಪಡುತ್ತಿರುವುದನ್ನು ನೋಡಿಯೂ ಕೂಡ ನೀನು ಅದನ್ನು ಈ ರೀತಿಯಲ್ಲಿ ಸಹಿಸಿಕೊಂಡಿರುವುದನ್ನು ನೋಡಿದರೆ, ನಿನಗೆ ನಿಶ್ಚಯವಾಗಿಯೂ ಪಾಂಡವರು ಅನುಗ್ರಾಹ್ಯರೆಂಬ ಭಾವನೆಯಿರಬೇಕೆಂದು ನಿಶ್ಚಯಿಸುತ್ತೇನೆ. ಆದರೂ ನನ್ನ ಪರವಾಗಿ ನೀನು ಯುದ್ಧಮಾಡುತ್ತಿದ್ದು ನಮ್ಮ ಶತ್ರುಗಳು ನಮ್ಮ ಸೈನ್ಯವನ್ನು ಅಪಾರಸಂಖ್ಯೆಯಲ್ಲಿ ನಿನ್ನ ಸಮಕ್ಷದಲ್ಲಿಯೇ ಸಂಹಾರ ಮಾಡುತ್ತಿರುವಾಗ ಅದನ್ನು ನೋಡಿಕೊಂಡು ಸುಮ್ಮನಿರಲು ನಿನಗೆ ಹೇಗೆ ತಾನೇ ಸಾಧ್ಯವಾಯಿತು? ಸೈನಿಕರನ್ನು ಹೇಗೆ ತಾನೇ ನೀನು ಕ್ಷಮಿಸಿದೆ? ಯಾವುದೇ ಸಮಯದಲ್ಲಿಯೂ ಪಾಂಡವರಿಗೇ ಹಿತವನ್ನುಂಟುಮಾಡುವುದೇ ನಿನ್ನ ಆಶಯವಾಗಿದ್ದರೆ ಈ ಯುದ್ಧವು ಪ್ರಾರಂಭವಾಗುವುದರ ಮೊದಲೇ– 'ನಾನು ಪಾಂಡವರೊಡನೆಯೂ, ಧೃಷ್ಟದ್ಯುಮ್ನನೊಡನೆಯೂ, ಸಾತ್ಯಕಿಯೊಡನೆಯೂ ಯುದ್ಧಮಾಡುವುದಿಲ್ಲ'–ಎಂದು ಹೇಳಿಬಿಡಬಹುದಾಗಿತ್ತು. ಹಾಗೆ ಹೇಳಿದ್ದರೆ ನಾನು ನಿನ್ನ ಅಭಿಪ್ರಾಯಕ್ಕೆ ಅನುಗುಣವಾದ ಅಭಿಪ್ರಾಯವನ್ನೇ ಆಚಾರ್ಯರಿಂದಲೂ ಮತ್ತು ಕೃಪರಿಂದಲೂ ತೆಗೆದುಕೊಂಡು

ಮುಂದೇನು ಮಾಡಬೇಕೆಂಬುದರ ಬಗೆಗೆ ನನ್ನ ಪ್ರಿಯಮಿತ್ರನಾದ ಕರ್ಣ ನೊಡನೆ ಸಮಾಲೋಚಿಸಿ ಅಂದೇ ಏನು ಮಾಡಬೇಕೆಂಬುದರ ಬಗೆಗೆ ಅಂತಿಮನಿರ್ಧಾರವನ್ನು ಕೈಗೊಳ್ಳುತ್ತಿದ್ದೆನು. ಹಾಗೆ ಸಮಾಲೋಚಿಸಿ ಕಾರ್ಯ ವನ್ನು ನಿರ್ಧರಿಸುವ ಕಾಲವೀಗ ಮೀರಿಹೋಗಿದೆ. ಆದುದರಿಂದ ನಾನು ಪುನಃ ತಮ್ಮನ್ನೇ ಯಾಚಿಸಬೇಕಾಗಿ ಬಂದಿದೆ.

ಇಂತಹ ಸಂದಿಗ್ಧಸಮಯದಲ್ಲಿ ನಿಮ್ಮ ಪರಾಕ್ರಮವನ್ನೇ ಸಂಪೂರ್ಣ ವಾಗಿ ಅವಲಂಬಿಸಿ ಪಾಂಡವರೊಡನೆ ಯುದ್ಧಮಾಡಲು ನಿಶ್ಚಯಿಸಿರುವ ನನ್ನನ್ನು ಪರಿತ್ಯಾಗಮಾಡುವುದು ಉಚಿತವಲ್ಲವೆಂದು ನಿಮಗೇನಾದರೂ ಅನಿಸಿದರೆ ಪುರುಷರ್ಷಭರಾದ ನೀವು ಅದಕ್ಕೆ ಅನುರೂಪವಾಗಿ ನಿಮ್ಮ ಪೂರ್ಣಪರಾಕ್ರಮವನ್ನು ಪ್ರಕಟಪಡಿಸುತ್ತಾ ಯುದ್ಧಮಾಡಿರಿ." (ಮಾವಟಿ ಗನು ಆನೆಯನ್ನು ಅಂಕುಶದಿಂದ ಚುಚ್ಚುವಂತೆ ಅಂಕುಶದಂತಹ ಮಾತಿನಿಂದ ದುರ್ಯೋಧನನು ಭೀಷ್ಮನನ್ನು ಚುಚ್ಚುತ್ತಿದ್ದಾನೆ. ಅದನ್ನವರು ಸಹಿಸಿ ಕೊಳ್ಳಲೇ ಬೇಕಾಗಿದೆ. '**ಬದ್ಧೋಽಸ್ಮ್ಯರ್ಥೇನ ಕೌರವೈಃ**' ಎಂದು ಈ ಹಿಂದೆಯೇ ಯುಧಿಷ್ಠಿರನೊಡನೆ ಹೇಳಿ ಅವರು ತಮ್ಮ ಅಸ್ವಾತಂತ್ರ್ಯವನ್ನು ಹೇಳಿಕೊಂಡು ಬಿಟ್ಟಿದ್ದಾರೆ. ಆದುದರಿಂದ ದುರ್ಯೋಧನನಾಡಿದ ಅತಿತೀಕ್ಷ್ಣ ವಾದ ಮಾತನ್ನೂ ಸಹ ಅವರು ಸಹಿಸಿಕೊಳ್ಳಲೇ ಬೇಕಾಗಿದೆ. ದುರ್ಯೋಧ ನನ ಮಾತುಗಳನ್ನು ಕೇಳಿದ ಭೀಷ್ಮರಿಗೆ ಒಂದು ಕಡೆ ನಗು. ಮತ್ತೊಂದು ಕಡೆ ಕೋಪ. ಪಾಂಡವರ ಪರಾಕ್ರಮವನ್ನು ಅಷ್ಟು ಲಘುವಾಗಿ ತಿಳಿದು ಕೊಂಡಿರುವುದಕ್ಕೆ ನಗು. ಕರ್ತವ್ಯವನ್ನು ಮಾಡುತ್ತಿದ್ದರೂ ಉಪ್ಪು ತಿಂದ ಮನೆಗೆ ಎರಡು ಬಗೆಯುವ ಆಶಯವಿಲ್ಲದಿದ್ದರೂ ವೃಥಾ ದೋಷಾರೋಪಣೆ ಮಾಡುತ್ತಿರುವನಲ್ಲಾ–ಎಂಬ ಕೋಪ. ಇದನ್ನೇ ಸಂಜಯನು ಧೃತರಾಷ್ಟ್ರನಿಗೆ ವಿವರಿಸಿ ಹೇಳುತ್ತಾನೆ.) ದುರ್ಯೋಧನನ ಆ ಮಾತುಗಳನ್ನು ಕೇಳಿ ಭೀಷ್ಮನು ಬಾರಿ-ಬಾರಿಗೂ ಗಹಗಹಿಸಿ ನಕ್ಕು ಮರುಕ್ಷಣದಲ್ಲಿಯೇ ಕೋಪದಿಂದ ತನ್ನೆರಡು ಕಣ್ಣುಗಳನ್ನೂ ಮೇಲಕ್ಕೆ ತಿರುಗಿಸಿ ನಿನ್ನ ಮಗನನ್ನು ಕುರಿತು ಹೇಳಿದನು:

**ಬಹುಶೋಽಸಿ ಮಯಾ ರಾಜಂಸ್ತಥ್ಯಮುಕ್ತೋ ಹಿತಂ ವಚಃ ।**
**ಅಜೇಯಾಃ ಪಾಣ್ಡವಾ ಯುದ್ಧೇ ದೇವೈರಪಿ ಸವಾಸವೈಃ ॥**

"ಮಹಾರಾಜ! ನಾನು ನಿನಗೆ ಒಂದು ಬಾರಿಯಲ್ಲ; ಅನೇಕಬಾರಿ ನಿಜವನ್ನೇ ಹೇಳಿದ್ದೇನೆ ಮತ್ತು ನಿನಗೆ ಹಿತಕರವಾದ ಮಾತನ್ನೇ ಹೇಳಿದ್ದೇನೆ. ನಾನು ಯಾವಾಗಲೂ ತಥ್ಯಾಂಶವನ್ನು ನಿನ್ನಿಂದ ಮರೆಮಾಚಿಲ್ಲ. ಆದರೆ ಆಗ ಅದು ನಿನ್ನ ಮನಸ್ಸಿಗೆ ಹಿಡಿಸಲಿಲ್ಲ. ನನ್ನ ಮಾತಿನ ಸತ್ಯಾಂಶವನ್ನೂ ನೀನು ಗ್ರಹಿಸಲಿಲ್ಲ. ಯುದ್ಧದಲ್ಲಿ ಪಾಂಡವರು ಅಜೇಯರು–'ಇಂದ್ರಪ್ರಮುಖರಾದ ದೇವತೆಗಳಿಂದಲೂ ಅಜೇಯರು. ವಾಸವನೊಡಗೂಡಿದ ದೇವತೆಗಳಿಂದಲೂ ಅವರನ್ನು ಜಯಿಸುವ ಸಾಧ್ಯತೆಯಿಲ್ಲ'–ಎಂಬ ಈ ವಿಷಯವನ್ನು ನಾನು ಅನೇಕಬಾರಿ ಹೇಳಿರಲಿಲ್ಲವೇ? ಇದು ಶತಾಂಶ ಸತ್ಯವಾದುದು. ಆದರೂ ಸಹ ನನ್ನ ಕರ್ತವ್ಯವನ್ನು ನಾನು ಯಥಾಶಕ್ತಿ ನಿರ್ವಹಿಸುತ್ತಿದ್ದೇನೆ. ವೃದ್ಧನಾದ ನನ್ನಿಂದ ಎಷ್ಟು ಮಾಡಲು ಶಕ್ಯವೋ ಅಷ್ಟನ್ನೂ ಮಾಡುತ್ತೇನೆ. ಬಂಧು-ಬಾಂಧವಸಮೇತನಾದ ನೀನು–ನಾನೇನು ಮಾಡುವೆನೆಂಬುದನ್ನು ಈಗಲೇ ನೋಡು, ದುರ್ಯೋಧನ!

ಎಲ್ಲರೂ ನೋಡುತ್ತಿರುವಂತೆಯೇ ಏಕಾಕಿಯಾದ ನಾನು ಬಂಧುಗಳಿಂದೊಡಗೂಡಿದ ಸಸೈನ್ಯರಾದ ಪಾಂಡುವಿನ ಮಕ್ಕಳನ್ನು ಮುಂದಕ್ಕೆ ಬರದಂತೆ ತಡೆದು ನಿಲ್ಲಿಸುತ್ತೇನೆ."

ಮಹಾರಾಜ! ಹೀಗೆಂದು ಭೀಷ್ಮನು ದುರ್ಯೋಧನನಿಗೆ ಹೇಳಿದೊಡನೆಯೇ ಸಂತೋಷಭರಿತರಾದ ಯೋಧರು ಶಂಖಗಳನ್ನೂದಿದರು; ಭೇರಿಗಳನ್ನೂ ಬಾರಿಸಿದರು. ಕೌರವರು ಮಾಡಿದ ಶಂಖಗಳ ನಿನಾದವನ್ನೂ ಭೇರಿಗಳ ಶಬ್ದವನ್ನೂ ಕೇಳಿ ತಾವೂ ಸಹ–'ಯುದ್ಧಕ್ಕೆ ಸಿದ್ಧರಾಗಿಯೇ ಇದ್ದೇವೆ'–ಎಂಬುದನ್ನು ಸೂಚಿಸುವ ಸಲುವಾಗಿ ಪಾಂಡವರೂ ಸಹ ಶಂಖಗಳನ್ನು ಊದಿದರು. ಭೇರಿ-ಮುರಜಾದಿಗಳನ್ನು ಬಾರಿಸಿದರು.

ಐವತ್ತೆಂಟನೆಯ ಅಧ್ಯಾಯವು ಮುಗಿಯಿತು.

೫೯ನೆಯ ಅಧ್ಯಾಯ ಭೀಷ್ಮವಧಪರ್ವ (ಮುಂದುವರಿದಿದೆ.)

## ಭೀಷ್ಮನ ಪರಾಕ್ರಮ : ಶ್ರೀಕೃಷ್ಣನು ಭೀಷ್ಮನನ್ನು ಸಂಹರಿಸಲು ಉದ್ಯುಕ್ತನಾದುದು : ಅರ್ಜುನನ ಪ್ರತಿಜ್ಞೆ ಮತ್ತು ಅವನಿಂದ ಕೌರವರ ಪರಾಜಯ : ಮೂರನೆಯ ದಿನದ ಯುದ್ಧಸಮಾಪ್ತಿ

ಧೃತರಾಷ್ಟ್ರನು ಸಂಜಯನನ್ನು ಪ್ರಶ್ನಿಸುತ್ತಾನೆ :

"ಸಂಜಯ! ಆ ಭಯಂಕರಯುದ್ಧದಲ್ಲಿ ಭೀಷ್ಮನು ಪ್ರತಿಜ್ಞೆಮಾಡಿದ ನಂತರ ಮುಂದೇನಾಯಿತು? ವಿಶೇಷವಾಗಿ ಸೇನೆಯ ವಿನಾಶದಿಂದ ಬಹು ದುಃಖಿತನಾಗಿದ್ದ ನನ್ನ ಮಗನು ಭೀಷ್ಮನಿಗೆ ಕೋಪವುಂಟಾಗುವಂತೆ ಚುಚ್ಚು ಮಾತುಗಳನ್ನಾಡಿದನು. ಕ್ರುದ್ಧನಾದ ಭೀಷ್ಮನು ಪಾಂಡವರ ವಿಷಯದಲ್ಲಿ ಏನು ಮಾಡಿದನು? ಪಾಂಚಾಲಯೋಧರು ಭೀಷ್ಮನು ಮಾಡಿದುದಕ್ಕೆ ಪ್ರತಿಯಾಗಿ ಏನು ಮಾಡಿದರು? ಈ ವಿಷಯವನ್ನು ನನಗೆ ಸವಿಸ್ತರವಾಗಿ ಹೇಳು."

"ಮಹಾರಾಜ! ಯುದ್ಧದ ಮೂರನೆಯ ದಿನವಾದ ಅಂದು ಪೂರ್ವಾರ್ಧದಲ್ಲಿ ಹೆಚ್ಚುಕಾಲ ಕಳೆದುಹೋಗಿದ್ದಿತು. ಸೂರ್ಯನೂ ಕೂಡ ಪಶ್ಚಿಮದಿಕ್ಕಿನ ಕಡೆಗೆ ವಾಲುತ್ತಿದ್ದನು. ಮಹಾತ್ಮರಾದ ಪಾಂಡವರು ಆ ದಿವಸ ಪ್ರಾತಃಕಾಲದಲ್ಲಿ ನಡೆದ ಯುದ್ಧದಲ್ಲಿ ವಿಜಯವನ್ನು ಗಳಿಸಿ ಬಹಳ ಹೃಷ್ಟರಾಗಿದ್ದರು. ಆ ಸಮಯದಲ್ಲಿ ಸರ್ವಧರ್ಮಗಳನ್ನೂ ವಿಶೇಷವಾಗಿ ತಿಳಿದಿದ್ದ ನಿನ್ನ ತಂದೆಯಾದ ದೇವವ್ರತನು ಬಹುಶೀಘ್ರವಾಗಿ ಹೋಗುವ ಕುದುರೆಗಳನ್ನು ಕಟ್ಟಿದ್ದ ರಥದಲ್ಲಿ ಕುಳಿತು ನಿನ್ನ ಮಕ್ಕಳಿಂದಲೂ ಅಪಾರವಾದ ಸೇನಾಸಮೂಹದಿಂದಲೂ ಸುತ್ತಲೂ ರಕ್ಷಿಸಲ್ಪಟ್ಟವನಾಗಿ ಪಾಂಡವರ ಸೈನ್ಯವನ್ನು ಆಕ್ರಮಿಸಿದನು.

ಮಹಾರಾಜ! ನೀನು ಮಾಡಿದ ಅನ್ಯಾಯದ ಕಾರಣದಿಂದ ನಮಗೂ ಮತ್ತು ಪಾಂಡವರಿಗೂ ರೋಮಾಂಚಕಾರಿಯಾದ ಮತ್ತು ಭಯಂಕರವಾದ ಯುದ್ಧವು ಪ್ರಾರಂಭವಾಯಿತು. ಧನುಸ್ಸನ್ನು ಟೇಂಕಾರಮಾಡುತ್ತಿರುವವರಿಂದಲೂ ಮತ್ತು ಚಪ್ಪಾಳೆ ತಟ್ಟುತ್ತಿರುವವರಿಂದಲೂ ದೊಡ್ಡದಾದ ಶಬ್ದವು ಹುಟ್ಟಿಕೊಂಡಿತು. ಆ ಮಹಾಶಬ್ದವು ಪರ್ವತಗಳ ಸೀಳುವಿಕೆಯಿಂದುಂಟಾ

ಗುವ ಶಬ್ದಕ್ಕೆ ಸಮಾನವಾಗಿದ್ದಿತು. 'ನಿಲ್ಲು ನಿಲ್ಲು' ಎಂದು ಒಬ್ಬ ಯೋಧನು ಹೇಳಿದರೆ ಮತ್ತೊಬ್ಬನು 'ನಿಂತಿದ್ದೇನೆ ; ನಿನ್ನ ಪರಾಕ್ರಮವೇನೆಂಬುದನ್ನು ತೋರಿಸು'–ಎಂದು ಹೇಳುತ್ತಲೇ ಬಾಣಗಳಿಂದ ಪ್ರಹರಿಸುತ್ತಿದ್ದನು. ಒಬ್ಬ ಯೋಧನು–'ಇವನನ್ನು ಹೊಡಿ' ಎನ್ನುತ್ತಿದ್ದರೆ ಮತ್ತೊಬ್ಬನು 'ಹಿಂದಕ್ಕೆ ಸರಿ; ಅವನು ಹೊಡೆಯುವುದನ್ನು ತಪ್ಪಿಸಿಕೋ' ಎಂದು ಕೂಗುತ್ತಿದ್ದನು. 'ಸುಸ್ಥಿರನಾಗಿ ನಿಲ್ಲು ; ನನ್ನ ಬಾಣಗಳ ಪ್ರಹಾರವನ್ನು ಸಹಿಸಿಕೋ' ಎಂದು ಒಬ್ಬನು ಹೇಳಿದರೆ ಮತ್ತೊಬ್ಬನು 'ನಿಂತಿದ್ದೇನೆ ; ಪ್ರಹರಿಸು ನೋಡೋಣ' ಎಂದು ಗರ್ಜಿಸುವನು. ಈ ವಿಧವಾದ ವೀರೋಚಿತವಾದ ಮಾತುಗಳು ರಣಾಂಗಣದ ಸುತ್ತಲೂ ಕೇಳಿಬರುತ್ತಿದ್ದುವು. ಸ್ವರ್ಣಮಯವಾದ ಕವಚಗಳ ಮೇಲೂ, ಕಿರೀಟಗಳ ಮೇಲೂ ಮತ್ತು ಧ್ವಜಗಳ ಮೇಲೂ ಬೀಳುತ್ತಿದ್ದ ಶಸ್ತ್ರಾಸ್ತ್ರಗಳಿಂದ ಉಂಟಾಗುತ್ತಿದ್ದ ಘೋರವಾದ ಶಬ್ದವು ಪರ್ವತಗಳ ಮೇಲೆ ಸತತವಾಗಿ ಬೀಳುವ ಕಲ್ಲುಗಳಿಂದ ಉಂಟಾಗುತ್ತಿದ್ದ ಶಬ್ದವನ್ನೇ ಅನುಕರಿಸು ತ್ತಿದ್ದಿತು. ಸೈನಿಕರ ನೂರಾರು-ಸಾವಿರಾರು ಶಿರಸ್ಸುಗಳೂ ಕನಕಾಂಗದಗಳಿಂದ ವಿಭೂಷಿತವಾಗಿದ್ದ ತೋಳುಗಳೂ ಭೂಮಿಯ ಮೇಲೆ ಬಿದ್ದು ತಕ-ತಕನೆ ಕುಣಿಯುತ್ತಿದ್ದುವು. ಮತ್ತೆ ಕೆಲವೆಡೆಗಳಲ್ಲಿ ಯೋಧರ ಶಿರಸ್ಸುಗಳು ಕೆಳಕ್ಕೆ ಬಿದ್ದುಹೋಗಿದ್ದರೂ ಸಹ ಅವರ ಮುಂಡಗಳು ಧನುಸ್ಸುಗಳನ್ನು ಎತ್ತಿ ಹಿಡಿದು ಹಾಗೆಯೇ ನಿಂತಿರುತ್ತಿದ್ದುವು. ಮತ್ತೆ ಕೆಲವು ಮುಂಡಗಳು ಕತ್ತಿ- ಗುರಾಣಿ ಮೊದಲಾದ ಆಯುಧಗಳನ್ನು ಹಿಡಿದು ನಿಂತಿರುತ್ತಿದ್ದುವು. ಆ ಸಮಯದಲ್ಲಿ ಒಂದು ರಕ್ತದ ನದಿಯೇ ಹೊರಟಿತು. ಮಹಾರಾಜ! ಆ ನದಿಯ ಉಗಮಸ್ಥಾನವು ಕುದುರೆ, ಆನೆ, ಮನುಷ್ಯರ ಶರೀರಗಳೇ ಆಗಿದ್ದುವು. ಸಾವಿರಾರು ಅಶ್ವ-ನರ-ನಾಗಗಳ ಶರೀರಗಳಿಂದ ಹರಿದುಬರುತ್ತಿದ್ದ ರಕ್ತದಿಂದ ಮಹಾವೇಗಯುಕ್ತವಾದ ಒಂದು ರುಧಿರವಾಹಿನಿಯೇ ಹೊರಟಿತು. ಆನೆಗಳ ಶರೀರಗಳೇ ಈ ರುಧಿರವಾಹಿನಿಯಲ್ಲಿ ಕಪ್ಪುಬಂಡೆಗಳ ರೂಪದಲ್ಲಿದ್ದುವು. ನೋಡಲು ಅದು ಬಹಳ ಭಯಂಕರವಾಗಿದ್ದಿತು. ಈ ನದಿಯು ರಕ್ತ-ಮಾಂಸಗಳ ಮಿಶ್ರಣವೆಂಬ ಕೆಸರಿನಿಂದ ಕೂಡಿದ್ದಿತು. ರಣಹದ್ದು, ಗುಳ್ಳೇನರಿ ಮುಂತಾದ ಪ್ರಾಣಿಗಳಿಗೆ ಆನಂದದಾಯಕವಾಗಿದ್ದ ಆ ರುಧಿರವಾಹಿನಿಯು ಪರಲೋಕವೆಂಬ ಸಮುದ್ರಕ್ಕೆ ಅಭಿಮುಖವಾಗಿ ಹರಿಯುತ್ತಿದ್ದಿತು.

ಭಾರತ! ನಿನ್ನ ಮಕ್ಕಳಿಗೂ ಮತ್ತು ಪಾಂಡವರಿಗೂ ನಡೆಯುತ್ತಿದ್ದ ಆ ಮಹಾಯುದ್ಧದಂತಹ ಯುದ್ಧವು ಹಿಂದೆಂದೂ ಕೇಳಿದ್ದೂ ಅಲ್ಲ ; ಕಂಡಿದ್ದೂ ಅಲ್ಲ. ಆ ಮಹಾಯುದ್ಧದಲ್ಲಿ ಯೋಧರು ಸಂಹೃತರಾಗಿ ಭೂಮಿಯ ಮೇಲೆ ಬಿದ್ದಿದ್ದರು. ಪರ್ವತದಿಂದ ಕೆಳಕ್ಕೆ ಬಿದ್ದ ಕಪ್ಪಾದ ಶಿಖರಗಳಂತೆ–ಆನೆಗಳು ರಣಾಂಗಣದ ಸುತ್ತಲೂ ಸತ್ತುಹೋಗಿ ರಾಶಿ-ರಾಶಿಯಾಗಿ ಬಿದ್ದಿದ್ದುವು. ಅದರಿಂದಾಗಿ ರಥಗಳ ಸಂಚಾರಕ್ಕೆ ಮಾರ್ಗವೇ ಇಲ್ಲದಾಯಿತು. ಆ ರಣಾಂಗಣದ ಸುತ್ತಲೂ ಚಿತ್ರಿತವಾದ ಕವಚಗಳೂ ಶಿರಸ್ತ್ರಾಣಗಳೂ (ಲೋಹ ಮಯ ಕಿರೀಟಗಳೂ) ಚೆಲ್ಲಾಪಿಲ್ಲಿಯಾಗಿ ಬಿದ್ದಿದ್ದುವು. ಅವುಗಳಿಂದ ಕೂಡಿದ ಆ ರಣಾಂಗಣವು ಶರತ್ಕಾಲದ ಆಕಾಶದಂತೆಯೇ ಪ್ರಕಾಶಿಸುತ್ತಿದ್ದಿತು. ಕೆಲವು ವೀರರು ತಮ್ಮ ಕರುಳುಗಳು ಬಾಣಗಳಿಂದ ಕತ್ತರಿಸಲ್ಪಟ್ಟು ಹೊರಕ್ಕೆ ಬಂದು ಅದರಿಂದ ಪೀಡಿತರಾಗಿದ್ದರೂ ಸಹ ಭಯಪಡದೇ ದರ್ಪಿಷ್ಠರಾಗಿಯೇ ಶತ್ರುಗಳ ಬೆನ್ನಟ್ಟಿಹೋಗುತ್ತಿದ್ದರು.

'ತಾತ! ನನ್ನನ್ನು ಬಿಟ್ಟು ಹೋಗಬೇಡ' ಎನ್ನುವವರು ಕೆಲವರು. 'ಅಣ್ಣ! ಬೇಗ ಬಾ. ನನ್ನನ್ನು ಮೇಲಕ್ಕೆ ಎತ್ತು' ಎಂದು ಅಂಗಲಾಚಿ ಬೇಡುವವರು ಕೆಲವರು. 'ಸ್ನೇಹಿತನೇ! ಪ್ರಾಣಹೋಗುತ್ತಿರುವಾಗ ನನ್ನನ್ನು ಕಾಪಾಡಲಾರೆಯಾ?' ಎಂದು ಸಂಕಟಪಡುತ್ತಿದ್ದವರು ಕೆಲವರು. 'ಬಂಧುಗಳೇ! ಬೇಗ ಬನ್ನಿರಿ. ನನ್ನನ್ನು ಈ ರಣಾಂಗಣದಲ್ಲಿ ಪರಿತ್ಯಜಿಸಬೇಡಿರಿ' ಎನ್ನುವವರು ಕೆಲವರು. 'ವಯಸ್ಯ! ಈ ಸಮಯದಲ್ಲಿ ಎಲ್ಲಿ ಹೋಗಿಬಿಟ್ಟೆ? ಅಯ್ಯೋ!' ಎಂದು ಅರುಚಿಕೊಳ್ಳುವವರು ಕೆಲವರು. 'ಮಾತುಲ! ನಾನು ನರಳುತ್ತಿರುವುದು ನಿನಗೆ ಕೇಳುತ್ತಿಲ್ಲವೇ? ನನ್ನನ್ನು ಈ ರೌದ್ರರಣಾಂಗಣ ದಲ್ಲಿ ಬಿಟ್ಟುಹೋಗಬೇಡ' ಎಂದು ನರಳುತ್ತಿರುವವರು ಕೆಲವರು. ಹೀಗೆ ರಣಾಂಗಣದಲ್ಲಿ ಪೆಟ್ಟು ತಿಂದು ಬಿದ್ದಿದ್ದ ಯೋಧರು ದೈನ್ಯದಿಂದ ಕಿರುಚಿಕೊಳ್ಳುತ್ತಿದ್ದರು. ಅದಕ್ಕುತ್ತರವಾಗಿ 'ಎದ್ದು ಬಾ! ನೀನು ಈಗಲೇ ಬಂದುಬಿಡು' 'ಭಯಪಟ್ಟಿರುವೆಯಾ?' 'ಎಲ್ಲಿ ಹೋಗುತ್ತಿರುವೆ?' 'ನಾನು ನಿನ್ನೊಡನೆಯೇ ಯಾವಾಗಲೂ ಇರುತ್ತೇನೆ' 'ನಾನು ನಿನ್ನ ಬೆಂಬಲಿಗನಾಗಿರುತ್ತೇನೆ' 'ನಿನ್ನನ್ನು ನಾನೆಂದಿಗೂ ಬಿಟ್ಟು ಹೋಗುವುದಿಲ್ಲ' 'ಹೆದರಬೇಡ' ಎಂದು ಹಲವಾರು ಯೋಧರು ಕಿರುಚಿಕೊಳ್ಳುತ್ತಿದ್ದರು. ಅಲ್ಲಿ

ಶಾಂತನುವಿನ ಮಗನಾದ ಭೀಷ್ಮನು ಸರ್ವಕಾಲದಲ್ಲಿಯೂ ಧನುಸ್ಸನ್ನು ಮಂಡಲಾಕಾರದಲ್ಲಿಯೇ ನಿಲ್ಲಿಸುತ್ತಾ ಪ್ರದೀಪ್ತವಾದ, ವಿಷಸರ್ಪೋಪಮ ವಾದ ಬಾಣಗಳನ್ನು ಪುಂಖಾನುಪುಂಖವಾಗಿ ಬಿಡುತ್ತಲೇ ಇದ್ದನು. ನಿಯತ ವ್ರತಿಯಾದ ಭೀಷ್ಮನು ಬಾಣಗಳಿಂದ ಎಲ್ಲ ದಿಕ್ಕುಗಳನ್ನೂ ಒಂದೇ ಮಾರ್ಗ ವನ್ನಾಗಿ ಮಾಡುತ್ತಾ (ವ್ಯಾಪ್ತವನ್ನಾಗಿ ಮಾಡುತ್ತಾ ) ಪಾಂಡವರ ಕಡೆಯ ರಥಿಕ ರನ್ನು ಅವರವರ ಹೆಸರುಗಳಿಂದಲೇ ಕರೆಯುತ್ತಾ ಪ್ರಹರಿಸುತ್ತಿದ್ದನು.

ಆ ಸಮಯದಲ್ಲಿ ಭೀಷ್ಮನು ತನ್ನ ಕೈಚಳಕವನ್ನು ತೋರಿಸುತ್ತಾ ರಥದ ಮೇಲೆಯೇ ಕುಳಿತು ರಥದ ಗಮನಕ್ಕೆ ಅನುಗುಣವಾಗಿ ನೃತ್ಯಮಾಡುತ್ತಾ ರಣಾಂಗಣದ ಸುತ್ತಲೂ ವೀರಯೋಧರನ್ನು ಸಂಹರಿಸುತ್ತಾ ತಿರುಗುತ್ತಿದ್ದು ಕೊಳ್ಳಿಯ ಗಾಲಿಯಂತೆ ಎಲ್ಲೆಲ್ಲಿಯೂ ಕಾಣಿಸಿಕೊಳ್ಳುತ್ತಿದ್ದನು. ಯುದ್ಧದಲ್ಲಿ ಏಕೈಕಶೂರನಾಗಿದ್ದ ಭೀಷ್ಮನನ್ನು ಸಂಜಯಸಹಿತರಾದ ಪಾಂಡವರು ಹಸ್ತ ಲಾಘವದ ಕಾರಣದಿಂದ ಅನೇಕಲಕ್ಷ ವ್ಯಕ್ತಿಗಳಿಗೆ ಸಮಾನನನ್ನಾಗಿ ಭಾವಿಸಿ ದರು. ಅನೇಕ ಲಕ್ಷ್ಯಯೋಧರು ಬಿಡುವಷ್ಟು ಬಾಣಗಳನ್ನು ಭೀಷ್ಮನೊಬ್ಬನೇ ಶತ್ರುಗಳ ಮೇಲೆ ಬಿಡುತ್ತಿದ್ದನು. ಅವನ ಕೈಚಳಕವು ಅಷ್ಟರಮಟ್ಟಿನದಾಗಿತ್ತು. ಮಾಯೆಯಿಂದ ಭೀಷ್ಮನು ತನ್ನ ಶರೀರವನ್ನು ಅನೇಕಪ್ರಕಾರವಾಗಿ ಮಾಡಿಕೊಂಡಿರಬಹುದೆಂದೂ ಜನರು ಭಾವಿಸಿದರು. ಏಕೆಂದರೆ : ಪೂರ್ವ ದಿಕ್ಕಿನಲ್ಲಿ ಯುದ್ಧಮಾಡುತ್ತಿದ್ದ ಭೀಷ್ಮನನ್ನೇ ಜನರು ಪಶ್ಚಿಮದಿಕ್ಕಿನಲ್ಲಿಯೂ ಕಾಣುತ್ತಿದ್ದರು. ಮರುಕ್ಷಣದಲ್ಲಿಯೇ ಉತ್ತರದಿಕ್ಕಿನಲ್ಲಿ ಯುದ್ಧಮಾಡು ತ್ತಿರುವಂತೆ ಕಾಣಿಸಿಕೊಳ್ಳುತ್ತಿದ್ದನು. ಅವನ ಪ್ರಹಾರವನ್ನು ತಪ್ಪಿಸಿಕೊಳ್ಳಲು ಯೋಧರು ದಕ್ಷಿಣದ ಕಡೆಗೆ ತಿರುಗಿದರೆಂದರೆ ಅಲ್ಲಿಯೂ ಸಹ ಭೀಷ್ಮನೇ ನಿಂತು ಮಂಡಲಾಕಾರದ ಧನುಸ್ಸಿನಿಂದ ಅನುಸ್ಯೂತವಾಗಿ ಬಾಣಗಳನ್ನು ಬಿಡುತ್ತಲೇ ಇರುತ್ತಿದ್ದನು. (ಅವನ ರಥದ ವೇಗವು ವಾಯುವೇಗವನ್ನೂ ಮೀರಿಸಿದ್ದಿತು.) ಭೀಷ್ಮನು ರಣಾಂಗಣದ ಸುತ್ತಲೂ ತಿರುಗುತ್ತಿದ್ದಾಗ ಪಾಂಡವರಲ್ಲಿ ಯಾರೊಬ್ಬರಿಗೂ ಅವನನ್ನು ನೋಡಲು ಸಾಧ್ಯವಾಗುತ್ತಲೇ ಇರಲಿಲ್ಲ. ಆದರೆ ಭೀಷ್ಮನ ಚಾಪದಿಂದ ಚ್ಯುತವಾದ ಬಾಣಗಳನ್ನು ಮಾತ್ರವೇ ಅವರು ಕಾಣುತ್ತಿದ್ದರು. ಆ ಸಮಯದಲ್ಲಿ ಪರಮಾದ್ಭುತವಾದ ಕರ್ಮವನ್ನು ಮಾಡುತ್ತಿದ್ದ, ಅಮಾನುಷವಾದ ರೂಪದಿಂದ ಸಂಚರಿಸುತ್ತಿದ್ದ,

ಪಾಂಡವರ ಸೈನ್ಯವನ್ನು ಬಾರಿಬಾರಿಗೂ ಧ್ವಂಸಮಾಡುತ್ತಿದ್ದ ನಿನ್ನ ತಂದೆಯಾದ ಭೀಷ್ಮನನ್ನು ಕುರಿತು ನಾನಾವಿಧವಾದ ಜನಗಳು ಅನೇಕಪ್ರಕಾರವಾಗಿ ಮಾತನಾಡಿಕೊಳ್ಳುತ್ತಿದ್ದರು. 'ಪತಂಗದ ಹುಳುವು ಬೆಂಕಿಯಿಂದ ಆಕರ್ಷಿತವಾಗಿ ತಾನೇ ತಾನಾಗಿ ಬೆಂಕಿಯ ಬಳಿಗೆ ಹೋಗಿ ಬಿದ್ದು ಸಾಯುವಂತೆ–ವಿಧಿಯಿಂದ ಪ್ರೇರಿತರಾದ ರಾಜರು ಸಾವಿರಾರು ಸಂಖ್ಯೆಯಲ್ಲಿ ತಮ್ಮ ವಿನಾಶಕ್ಕಾಗಿಯೇ ಸಂಕ್ರುದ್ಧವಾದ (ಅತ್ಯಂತಜಾಜ್ವಲ್ಯಮಾನವಾಗಿ ಉರಿಯುತ್ತಿರುವ ) ಭೀಷ್ಮಾಗ್ನಿಯಲ್ಲಿ ಬೀಳುತ್ತಿದ್ದಾರೆ.'

(ಭೀಷ್ಮನೊಂದಿಗೆ ಯುದ್ಧಕ್ಕೆ ಹೋದರೆ ಉಳಿಗಾಲವಿಲ್ಲವೆಂದು ತಿಳಿದಿದ್ದರೂ ಸಹ ವಿಧಿಚೋದಿತರಾದ ರಾಜರು ಅವನೊಡನೆ ಯುದ್ಧಮಾಡಲು ಧಾವಿಸುತ್ತಿದ್ದರು.) ನರ-ನಾಗಾಶ್ವಸೈನ್ಯಗಳ ಮೇಲೆ ಲಘುಯೋಧಿಯಾದ ಭೀಷ್ಮನು ಪ್ರಯೋಗಿಸುತ್ತಿದ್ದ ಯಾವ ಒಂದು ಬಾಣವೂ ಸಹ ಆ ಯುದ್ಧದಲ್ಲಿ ವ್ಯರ್ಥವಾಗುತ್ತಿರಲಿಲ್ಲ. ಭೀಷ್ಮನ ಧನುಸ್ಸಿನಿಂದ ಚ್ಯುತವಾದ ಬಾಣವು ಪದಾತಿಯನ್ನೋ, ಕುದುರೆಯನ್ನೋ, ಆನೆಯನ್ನೋ ಅಥವಾ ರಥಿಕನನ್ನೋ ಆಹುತಿಯಾಗಿ ತೆಗೆದುಕೊಂಡೇ ತೀರುತ್ತಿದ್ದಿತು. ಇದಕ್ಕೆ ಕಾರಣವೇನೆಂದರೆ ಅವನನ್ನು ಎದುರಿಸುತ್ತಿದ್ದವರ ಸಂಖ್ಯೆಯು ಅಪಾರವಾಗಿತ್ತು. ಆದುದರಿಂದ ಭೀಷ್ಮನು ಬಿಟ್ಟ ಬಾಣವು ಗುರಿತಪ್ಪಿದರೂ ಸಹ ಮತ್ತೊಬ್ಬ ಪದಾತಿಗೋ, ಸವಾರನಿಗೋ, ಕುದುರೆಗೋ, ಆನೆಗೋ ತಗುಲಿ ಯಾರಾದರೂ ಸಾಯುತ್ತಿದ್ದರೇ ಹೊರತು ಬಾಣವಂತೂ ವ್ಯರ್ಥವಾಗುತ್ತಿರಲಿಲ್ಲ. ಭೀಷ್ಮನು ಗರಿಯಿಂದ ಕೂಡಿದ ಒಳ್ಳೆಯ ಮುಖವಿದ್ದ (ಬಹುಚೂಪಾಗಿದ್ದ ) ಒಂದೇ ಒಂದು ಬಾಣದಿಂದ ಮುಳ್ಳಿನ ಕವಚದಿಂದ ಯುಕ್ತವಾಗಿದ್ದ ಆನೆಯನ್ನು– ಇಂದ್ರನು ದೊಡ್ಡಪರ್ವತವನ್ನೂ ಸಹ ವಜ್ರಾಯುಧದ ಒಂದೇ ಪೆಟ್ಟಿನಿಂದ ಸೀಳಿಬಿಡುತ್ತಿದ್ದಂತೆ–ಸೀಳಿಬಿಡುತ್ತಿದ್ದನು. ನಿನ್ನ ತಂದೆಯು ಆಕರ್ಣಾಂತವಾಗಿ ಸೆಳೆದು ವೇಗವಾಗಿ ಬಿಡುತ್ತಿದ್ದ ಒಂದೇ ಒಂದು ಬಾಣದಿಂದ ಒಟ್ಟಾಗಿ ಇರುತ್ತಿದ್ದ ಕವಚಧಾರಿಗಳಾದ ಇಬ್ಬರು ಅಥವಾ ಮೂವರು ಗಜಾರೋಹಿಗಳನ್ನೂ ಸಂಹಾರಮಾಡಿಬಿಡುತ್ತಿದ್ದನು. ಯುದ್ಧದಲ್ಲಿ ಯಾವನೊಬ್ಬ ಯೋಧನಾಗಲಿ ನರವ್ಯಾಘ್ರನಾದ ಭೀಷ್ಮನಿಗೆ ಎದುರಾಗಿ ನಿಂತುದಾದರೆ ಅವನನ್ನು ನಾವು ಮುಹೂರ್ತಕಾಲಮಾತ್ರವೇ ಕಾಣಬಹುದಾಗಿತ್ತು. ಮರುಕ್ಷಣದಲ್ಲಿಯೇ

ಅವನು ಸತ್ತುಬಿದ್ದಿರುವುದನ್ನು ನಾನು ಕಾಣುತ್ತಿದ್ದೆನು. ಈ ರೀತಿಯಾಗಿ ಅತುಲವೀರ್ಯನಾದ ಭೀಷ್ಮನು ಧರ್ಮರಾಜನ ದೊಡ್ಡ ಸೈನ್ಯವನ್ನು ಸಾವಿರಾರು ಭಾಗಗಳನ್ನಾಗಿ ಮಾಡಿ ಚೆಲ್ಲಾಪಿಲ್ಲಿಗೊಳಿಸಿಬಿಟ್ಟನು. (ಚದುರಿಸಿದನು.) ವಾಸುದೇವ, ಅರ್ಜುನ ಮತ್ತು ಶಿಖಂಡಿ ಇವರು ನೋಡುತ್ತಿದ್ದಂತೆಯೇ ಭೀಷ್ಮನ ಶರವರ್ಷದಿಂದ ಪೆಟ್ಟುತಿಂದ ಧರ್ಮರಾಜನ ಸೈನ್ಯವು ಕಂಗೆಟ್ಟಿತು. (ಭಯದಿಂದ ನಡುಗಿತು.) ಮಹಾವೀರರೆನಿಸಿಕೊಂಡ ಧರ್ಮರಾಜನ ಕಡೆಯ ಯೋಧರು ಯದ್ಯಪಿ ರಣಾಂಗಣದಲ್ಲಿಯೇ ಇದ್ದರೂ ಸಹ ಭೀಷ್ಮನ ಬಾಣಗಳಿಂದ ಸತತವಾಗಿ ಪೀಡಿಸಲ್ಪಡುತ್ತಿದ್ದು ಪ್ರಹಾರವನ್ನು ಸಹಿಸಲಾರದೇ ಓಡಿಹೋಗುತ್ತಿದ್ದ ಮಹಾರಥರನ್ನು ತಡೆದು ನಿಲ್ಲಿಸಲು ಯಾರಿಗೂ ಸಾಧ್ಯವಾಗಲಿಲ್ಲ. ಮಹೇಂದ್ರನಿಗೆ ಸಮಾನವಾದ ಪರಾಕ್ರಮವಿದ್ದ ಭೀಷ್ಮನಿಂದ ವಧಿಸಲ್ಪಡುತ್ತಿದ್ದ ಆ ಮಹಾಸೈನ್ಯವು ನುಚ್ಚುನೂರಾಗಿ ಒಡೆದುಹೋಯಿತು. ಕಡೆಗೆ ಇಬ್ಬರು ಒಟ್ಟಿಗೆ ಓಡಿಹೋಗಲಾಗುತ್ತಿರಲಿಲ್ಲ. ಅಷ್ಟರಮಟ್ಟಿಗೆ ಧರ್ಮರಾಜನ ಸೈನ್ಯವು ಛಿದ್ರ-ವಿಚ್ಛಿದ್ರವಾಗಿ ಹೋಯಿತು. ಪಾಂಡವರ ನರ-ನಾಗಾಶ್ವಸೈನ್ಯಗಳು ಭೀಷ್ಮನು ಬಿಟ್ಟ ಬಾಣಗಳಿಂದ ಹತವಾಗಿ ಹೋದುವು. ರಥಗಳಲ್ಲಿದ್ದ ಧ್ವಜಗಳೂ, ಮೂಕಿಗಳೂ, ಚೂರುಗಳಾಗಿ ಕೆಳಕ್ಕೆ ಬಿದ್ದುವು. ಸಂಪೂರ್ಣಸೇನೆಯೇ ಸತ್ತ್ವರಹಿತವಾಗಿ ಹೋಯಿತು. ಎಲ್ಲೆಲ್ಲಿಯೂ ಹಾಹಾಕಾರವೆದ್ದಿತು. ಮಹಾರಾಜ! ಆ ಮಹಾಯುದ್ಧದಲ್ಲಿ ಮಾನವನು ದೈವಕ್ಕೆ ವಶೀಭೂತನಾಗಿ ಯಾವ ತಾರತಮ್ಯವೂ ಇಲ್ಲದೇ ಸಂಹಾರಕ್ರಿಯೆಯನ್ನು ನಡೆಸಿಬಿಟ್ಟನು. ತಂದೆಯು ಮಗನನ್ನೇ ಸಂಹರಿಸಿದನು. ಮಗನು ತಂದೆಯನ್ನೇ ಸಂಹರಿಸಿದನು. ಯುದ್ಧೋನ್ಮತ್ತನಾಗಿ ಪ್ರಿಯನಾದ ಸ್ನೇಹಿತನನ್ನೇ ಸಂಹರಿಸಿದನು. ಧರ್ಮರಾಜನ ಸೈನ್ಯದಲ್ಲಿ ಕೆಲವರು ಕವಚಗಳನ್ನೇ ಬಿಚ್ಚಿಟ್ಟು ಓಡುತ್ತಿದ್ದರು. (ಯೋಧರಲ್ಲವೆಂದು ತಿಳಿಯಲಿ ಎಂಬ ಭಾವನೆಯಿಂದ) ಮತ್ತೆ ಕೆಲವರು ಬಿಚ್ಚಿಹೋದ ಕೂದಲುಗಳುಳ್ಳವರಾಗಿಯೇ ಓಡಿಹೋಗುತ್ತಿದ್ದರು. ಇಂತಹ ಸೈನಿಕರು ಬಹಳವಾಗಿ ಆ ರಣಾಂಗಣದಲ್ಲಿ ಕಾಣುತ್ತಿದ್ದರು.

ಯುಧಿಷ್ಠಿರನ ಸೈನ್ಯವು ಭ್ರಾಂತವಾದ ಗೋವುಗಳ ಸಮೂಹದಂತೆ ಭಯಗೊಂಡು ಹಾಹಾಕಾರಮಾಡುತ್ತಿದ್ದಿತು. ಅನೇಕರಥಯೂಥಪರೂ ಸಹ

ಕಿಂಕರ್ತವ್ಯತಾಮೂಢರಾಗಿಬಿಟ್ಟಿದ್ದರು. ಆ ಸಮಯದಲ್ಲಿ ಧರ್ಮರಾಜನ ಸೈನ್ಯದಲ್ಲಿ ಎಲ್ಲೆಲ್ಲಿಯೂ ಆರ್ತನಾದವೇ ಕೇಳಿಬರುತ್ತಿದ್ದಿತು. ಭೀಷ್ಮನಿಂದ ಭಗ್ನವಾಗಿ ಮಾಡಲ್ಪಟ್ಟ ಸೈನ್ಯವನ್ನು ನೋಡಿ ಯಾದವನಂದನನಾದ ವಾಸುದೇವನು ರಥವನ್ನು ನಿಲ್ಲಿಸಿ ಕುಂತೀಪುತ್ರನಾದ ಅರ್ಜುನನೊಡನೆ ಹೇಳಿದನು : "ಪಾರ್ಥ! ನೀನು ಬಹಳ ದಿವಸಗಳಿಂದಲೂ ನಿರೀಕ್ಷಿಸುತ್ತಿದ್ದ ಕಾಲವೀಗ ಸನ್ನಿಹಿತವಾಗಿದೆ. ನರವ್ಯಾಘ್ರನೇ! ನೀನು ಮೋಹದಿಂದ ಕಿಂಕರ್ತವ್ಯತಾ ಮೂಢನಾಗಿರದಿದ್ದರೆ ನಿನ್ನ ಶಕ್ತಿಯೆಲ್ಲವನ್ನೂ ಕೇಂದ್ರೀಕರಿಸಿ ಶತ್ರುವನ್ನು ಪ್ರಹರಿಸು. ಹಿಂದೆ ನೀನು ಅನೇಕರಾಜರ ಸಮ್ಮುಖದಲ್ಲಿ ಈ ಮಾತುಗಳನ್ನಾಡಿದ್ದೆ.

**ಭೀಷ್ಮದ್ರೋಣಮುಖಾನ್ಸರ್ವಾನ್ಧಾರ್ತರಾಷ್ಟ್ರಸ್ಯ ಸೈನಿಕಾನ್ ।**
**ಸಾನುಬನ್ಧಾನ್ಹನಿಷ್ಯಾಮಿ ಯೇ ಮಾಂ ಯೋತ್ಸ್ಯನ್ತಿ ಸಂಯುಗೇ ॥**

ಭೀಷ್ಮ-ದ್ರೋಣಪ್ರಮುಖರಾದ ನೆಂಟರಿಷ್ಟರಿಂದೊಡಗೂಡಿದ ದುರ್ಯೋಧನನ ಸರ್ವಸೈನಿಕರನ್ನೂ ಸಂಹಾರಮಾಡುತ್ತೇನೆ. ಯುದ್ಧದಲ್ಲಿ ನನ್ನೊಡನೆ ಯಾರು ಯುದ್ಧಮಾಡುತ್ತಾರೆಯೋ ಅವರನ್ನೂ ಸಂಹರಿಸುತ್ತೇನೆ"–ಹೀಗೆಂಬುದಾಗಿ ಆಗ ನೀನು ಹೇಳಿದ್ದೆ. ಅರಿಂದಮನೇ! ನೀನಂದು ರಾಜಸಭೆಯಲ್ಲಿ ಹೇಳಿದ ವಾಕ್ಯವನ್ನು ಸತ್ಯವಾಕ್ಯವನ್ನಾಗಿ ಮಾಡು. ನೀನು ಅಂದು ಹೇಳಿದ ಮಾತು ಇಂದು ನಿಜವಾಗಿ ಪರಿಣಮಿಸಲಿ. ಕಾರ್ಯರೂಪಕ್ಕೆ ಬರಲಿ. ನಿನ್ನ ಸೈನ್ಯವು ಭೀಷ್ಮನ ಸತತಪ್ರಹಾರದಿಂದಾಗಿ ಛಿನ್ನ-ಭಿನ್ನವಾಗುತ್ತಿರುವುದನ್ನು ನೋಡು, ಅರ್ಜುನ! ಯುಧಿಷ್ಠಿರನ ಸೈನ್ಯದಲ್ಲಿ ಓಡುತ್ತಿರುವ ರಾಜರನ್ನಾದರೂ ನೋಡು. ತೆರೆದ ಬಾಯುಳ್ಳ ಕಾಲನಂತೆ ಕಾಣುತ್ತಿರುವ ಭೀಷ್ಮನನ್ನು ರಣಾಂಗಣದಲ್ಲಿ ನೋಡಿ ಭಯಾರ್ತರಾದ ರಾಜರು–ಕ್ಷುದ್ರಮೃಗಗಳು ಸಿಂಹವನ್ನು ನೋಡಿ ಪಲಾಯನಮಾಡುವಂತೆ–ಪಲಾಯನಮಾಡುತ್ತಿದ್ದಾರೆ."

ವಾಸುದೇವನ ಮಾತನ್ನು ಕೇಳಿ ಧನಂಜಯನು ಯಥೋಚಿತವಾಗಿ ಉತ್ತರಿಸಿದನು :

"ವಾಸುದೇವ! ಭೀಷ್ಮನೆಲ್ಲಿರುವನೋ ಅಲ್ಲಿಗೇ ಕುದುರೆಗಳನ್ನು ಓಡಿಸು. ಈ ಸೈನ್ಯವೆಂಬ ಸಮುದ್ರದೊಳಗೆ ಮುಳುಗಿ ವೃದ್ಧನಾದ, ಕುರುಪಿತಾಮಹನಾದ, ದುರ್ಧರ್ಷನಾದ ಭೀಷ್ಮನನ್ನು ಕೆಳಕ್ಕೆ ಬೀಳಿಸುತ್ತೇನೆ."

ಮಹಾರಾಜ! ಅರ್ಜುನನು ಹೀಗೆಂದು ಹೇಳಿದೊಡನೆಯೇ ಮಾಧವನು ಸೂರ್ಯನಂತೆ ನೋಡಲು ದುಃಸಾಧ್ಯವಾದ ಭೀಷ್ಮನ ರಥವು ಎಲ್ಲಿದ್ದಿತೋ ಅಲ್ಲಿಗೆ ಬೆಳ್ಳಿಗೆ ಸಮಾನವಾದ ಬಣ್ಣದಿಂದ ಕೂಡಿದ್ದ ಶ್ವೇತಾಶ್ವಗಳನ್ನು ದೌಡಾಯಿಸಿಕೊಂಡು ಹೋದನು.

ಆ ಸಮಯದಲ್ಲಿ ಮಹಾಬಾಹುವಾದ ಅರ್ಜುನನು ಭೀಷ್ಮನೊಡನೆ ಯುದ್ಧಮಾಡಲು ಉದ್ಯುತನಾದುದನ್ನು ಕಂಡು ಭೀಷ್ಮನ ಭಯದಿಂದ ರಣಾಂಗಣವನ್ನು ಬಿಟ್ಟು ಓಡಿಹೋಗಿದ್ದ ಯುಧಿಷ್ಠಿರನ ಮಹಾಸೈನ್ಯವು ರಣಾಂಗಣಕ್ಕೆ ಹಿಂದಿರುಗಿತು. ಕುರುಶ್ರೇಷ್ಠನೇ! ಭೀಷ್ಮನು ತನ್ನೊಡನೆ ಯುದ್ಧ ಮಾಡಲು ಬಂದ ಪಾರ್ಥನನ್ನು ನೋಡಿ ಬಾರಿ-ಬಾರಿಗೂ ಸಿಂಹದಂತೆ ಗರ್ಜನೆಮಾಡುತ್ತಾ ಬಹುಶೀಘ್ರವಾಗಿ ಧನಂಜಯನ ರಥವನ್ನು ಬಾಣ ಗಳಿಂದ ಮುಚ್ಚಿಬಿಟ್ಟನು. ಮಹಾರಾಜ! ಒಂದೇ ಒಂದು ಕ್ಷಣದಲ್ಲಿ ಕುದುರೆ ಗಳಿಂದ ಕೂಡಿದ್ದ ಮತ್ತು ಸಾರಥಿಯುಕ್ತವಾಗಿದ್ದ ಅರ್ಜುನನ ರಥವು ಭೀಷ್ಮನು ಬಿಟ್ಟ ಬಾಣಗಳ ಮಳೆಯಿಂದಾಗಿ ಮುಚ್ಚಿಯೇ ಹೋಯಿತು. ಸ್ವಲ್ಪವಾದರೂ ಅದು ಇತರರಿಗೆ ಕಾಣುತ್ತಿರಲಿಲ್ಲ. (ಸ್ವರ್ಣಮಯವಾದ ರಥದ ಪ್ರಕಾಶವು ಸ್ವಲ್ಪವಾದರೂ ಹೊರಕ್ಕೆ ಕಾಣುತ್ತಿರಲಿಲ್ಲ.) ಯದ್ಯಪಿ ಅರ್ಜುನನ ರಥದ ಕುದುರೆಗಳು ಭೀಷ್ಮನು ಬಿಟ್ಟ ಬಾಣಗಳಿಂದ ಬಹುವಾಗಿ ಗಾಯಗೊಂಡಿ ದ್ದರೂ ಶಕ್ತಿಶಾಲಿಯಾದ ವಾಸುದೇವನು ಭ್ರಾಂತನಾಗದೇ ಧೈರ್ಯವನ್ನು ತಂದುಕೊಂಡು ಕುದುರೆಗಳನ್ನು ಚತುರತೆಯಿಂದ ನಡೆಸುತ್ತಲೇ ಇದ್ದನು. ಅನಂತರ ಅರ್ಜುನನು ಮೇಘದ ಶಬ್ದಕ್ಕೆ ಸಮಾನವಾದ ಗಂಭೀರಶಬ್ದದಿಂದ ಕೂಡಿದ್ದ ದಿವ್ಯವಾದ ಗಾಂಡೀವಧನುಸ್ಸನ್ನು ಹಿಡಿದು ಮೂರು ಬಾಣಗಳಿಂದ ಭೀಷ್ಮನ ಧನುಸ್ಸನ್ನು ಕತ್ತರಿಸಿ ಕೆಳಕ್ಕೆ ಬೀಳಿಸಿದನು. ಕತ್ತರಿಸಿದ್ದ ಧನುಸ್ಸಿನಿಂದ ಕೂಡಿದ್ದ ನಿನ್ನ ತಂದೆಯಾದ, ಕುರುನಂದನನಾದ ಭೀಷ್ಮನು ನಿಮಿಷಮಾತ್ರ ದಲ್ಲಿ ಅರ್ಜುನನು ಕತ್ತರಿಸಿದ ಧನುಸ್ಸನ್ನು ಕೆಳಕ್ಕೆ ಹಾಕಿ ಮತ್ತೊಂದು ಧನುಸ್ಸನ್ನು ಕೈಗೆ ತೆಗೆದುಕೊಂಡು ಶಿಂಜಿನಿಯನ್ನು ಬಿಗಿದು ಯುದ್ಧಕ್ಕೆ ಸಜ್ಜುಗೊಳಿಸಿದನು. ಮೇಘದಂತೆ ಶಬ್ದಮಾಡುತ್ತಿದ್ದ ಹೊಸ ಧನುಸ್ಸನ್ನು ಭೀಷ್ಮನು ಎರಡು ಕೈಗಳಿಂದಲೂ ಸೆಳೆದನು. ಧನುಸ್ಸನ್ನು ಆಕರ್ಣಾಂತವಾಗಿ ಸೆಳೆದು ಬಾಣವನ್ನು ಬಿಡುವಷ್ಟರಲ್ಲಿ ಕ್ರುದ್ಧನಾಗಿದ್ದ ಅರ್ಜುನನು ಆ ಧನು

ಸ್ಸನ್ನೂ ಸಹ ಕತ್ತರಿಸಿಬಿಟ್ಟನು. ತನ್ನ ಮತ್ತೊಂದು ಧನುಸ್ಸೂ ಸಹ ಕ್ಷಣ ಮಾತ್ರದಲ್ಲಿ ಭಗ್ನವಾದುದನ್ನು ಕಂಡು ಶಾಂತನುವಿನ ಮಗನಾದ ಭೀಷ್ಮನು ಅರ್ಜುನನ ಹಸ್ತಲಾಘವವನ್ನು ಬಹಳವಾಗಿ ಹೊಗಳಿದನು :

**ಸಾಧು ಪಾರ್ಥ ಮಹಾಬಾಹೋ ಸಾಧು ಭೋಃ ಪಾಣ್ಡುನನ್ದನ ।**
**ತ್ವಯ್ಯೇವೈತದ್ಯುಕ್ತರೂಪಂ ಮಹತ್ಕರ್ಮ ಧನಂಜಯ ।**
**ಪ್ರೀತೋಽಸ್ಮಿ ಸುಭೃಶಂ ಪುತ್ರ ಕುರು ಯುದ್ಧಂ ಮಯಾ ಸಹ ॥**

"ಮಹಾಬಾಹುವಾದ ಪಾರ್ಥನೇ ಸಾಧು! ಒಳ್ಳೆಯ ಕೆಲಸಮಾಡಿದೆ. ಪಾಂಡುನಂದನನೇ ಸಾಧು! ನೀನು ಈ ಮಹಾಕಾರ್ಯವನ್ನು ಮಾಡಿರುವುದು ನಿನ್ನ ಪರಾಕ್ರಮಕ್ಕೆ ಯುಕ್ತರೂಪವಾಗಿಯೇ ಇದೆ. ನಿನ್ನ ಈ ಹಸ್ತಲಾಘವವನ್ನು ನೋಡಿ ನಾನು ಅತ್ಯಂತಪ್ರೀತನಾಗಿದ್ದೇನೆ. ನನ್ನೊಡನೆ ಯುದ್ಧಮಾಡು." ಮಹಾರಾಜ! ಹೀಗೆ ವೀರನಾದ ಭೀಷ್ಮನು ಪಾರ್ಥನನ್ನು ಬಾಯ್ತುಂಬ ಹೊಗಳಿ ಮತ್ತೊಂದು ಧನುಸ್ಸನ್ನು ತೆಗೆದುಕೊಂಡು ಅರ್ಜುನನ ರಥದ ಕಡೆಗೆ ಅನೇಕಾನೇಕ ಬಾಣಗಳನ್ನು ಬಿಟ್ಟನು.

(ಅರ್ಜುನನು ಭೀಷ್ಮನ ಮೇಲೆ ಪ್ರತಿಯಾಗಿ ಬಾಣಗಳನ್ನು ಪ್ರಯೋಗಿಸಿ ಅವನು ಬಿಡುತ್ತಿದ್ದ ಬಾಣಗಳನ್ನು ತಡೆಯುವುದು ಒತ್ತಟ್ಟಿಗಿರಲಿ, ಭೀಷ್ಮನು ಬಿಡುತ್ತಿದ್ದ ಬಾಣಗಳನ್ನು ನಿಷ್ಕ್ರಿಯಗೊಳಿಸುವುದರಲ್ಲಿ ವಾಸುದೇವನೇ ತನ್ನ ಸಾರಥ್ಯದ ನೈಪುಣ್ಯವನ್ನು ತೋರಿಸಿದನು.) ವಾಸುದೇವನು ಕುದುರೆಗಳನ್ನು ನಡೆಸುವುದರಲ್ಲಿ ತನ್ನ ಬಲವೆಷ್ಟೆಂಬುದನ್ನು ಭೀಷ್ಮನಿಗೆ ಪ್ರದರ್ಶಿಸುತ್ತಾ ಅವನು ಬಿಡುತ್ತಿದ್ದ ಬಾಣಗಳನ್ನು ವ್ಯರ್ಥಗೊಳಿಸುತ್ತಾ ತನ್ನ ಕೈಚಳಕದಿಂದ ಅನೇಕಪ್ರಕಾರವಾದ ಸುತ್ತುನಡಿಗೆಗಳ ಮೂಲಕವಾಗಿ ರಥವನ್ನು ನಡೆಸಲು ಉಪಕ್ರಮಿಸಿದನು. ಆದರೂ ಸಹ ಭೀಷ್ಮನು ನಿಶಿತವಾದ ಬಾಣಗಳಿಂದ ವಾಸುದೇವ-ಧನಂಜಯರನ್ನು ಶರೀರಾದ್ಯಂತವಾಗಿ ಸುದೃಢವಾಗಿ ಗಾಯಗೊಳಿಸಿದನು. ಭೀಷ್ಮನ ಬಾಣಗಳಿಂದ ಬಹಳವಾಗಿ ಗಾಯಗೊಂಡ ನರವ್ಯಾಘ್ರರಾದ ಕೃಷ್ಣಾರ್ಜುನರು ಗೂಳಿಗಳ ಕಾದಾಟದಲ್ಲಿ ಕೋಪಗೊಂಡ, ಕೊಂಬುಗಳಿಂದ ಗೀರಲ್ಪಟ್ಟ ಚಿಹ್ನೆಗಳಿಂದ ಕೂಡಿದ ಎರಡು ಗೂಳಿಗಳಂತೆ ಪ್ರಕಾಶಿಸಿದರು. ಬಹಳವಾಗಿ ಕೋಪಗೊಂಡಿದ್ದ ಭೀಷ್ಮನು

ಪುನಃ ಸಾವಿರಾರು ಬಾಣಗಳಿಂದ ಕೃಷ್ಣಾರ್ಜುನರ ಸುತ್ತ ಎಲ್ಲ ದಿಕ್ಕುಗಳನ್ನೂ ತುಂಬಿಬಿಟ್ಟನು. ಇಷ್ಟು ಮಾತ್ರವಲ್ಲ ; ಕ್ರುದ್ಧನಾದ ಭೀಷ್ಮನು ಅಟ್ಟಹಾಸದಿಂದ ನಗುತ್ತಾ ತೀಕ್ಷ್ಣವಾದ ಬಾಣಗಳಿಂದ ಶ್ರೀಕೃಷ್ಣನನ್ನು ಬಾರಿ-ಬಾರಿಗೂ ಬಾಧೆಪಡಿಸುತ್ತಾ ಅವನನ್ನೂ ನಡುಗಿಸಿದನು. ಅನಂತರ ಶ್ರೀಕೃಷ್ಣನು ಭೀಷ್ಮನ ಅತುಲಪರಾಕ್ರಮವನ್ನೂ, ಅವನಿಗೆದುರಾಗಿ ನಿಂತಿದ್ದ ಪಾರ್ಥನು ಭೀಷ್ಮ ನೊಡನೆ ಬಹುಮೃದುವಾಗಿ ಯುದ್ಧಮಾಡುತ್ತಿರುವುದನ್ನೂ ಗಮನಿಸಿದನು. ಭೀಷ್ಮನು ಆ ಮಹಾಯುದ್ಧದಲ್ಲಿ ಅನವರತವಾಗಿ ಬಾಣಗಳ ಮಳೆಯನ್ನೇ ಸೃಷ್ಟಿಮಾಡುತ್ತಿದ್ದನು. ಎರಡೂ ಸೇನೆಗಳ ಮಧ್ಯದಲ್ಲಿ ನಿಂತಿದ್ದ ಭೀಷ್ಮನು ಸೂರ್ಯನಂತೆಯೇ ಪ್ರಕಾಶಿಸುತ್ತಿದ್ದನು. ಪಾಂಡುಪುತ್ರನಾದ ಯುಧಿಷ್ಠಿರನ ಸೈನ್ಯದಲ್ಲಿದ್ದ ಶ್ರೇಷ್ಠರಾದ ಯೋಧರನ್ನೆಲ್ಲಾ ಒಬ್ಬೊಬ್ಬರನ್ನಾಗಿಯೇ ಸಂಹರಿಸು ತ್ತಿದ್ದನು. ಕುರುಕುಲಪಿತಾಮಹನಾದ ಭೀಷ್ಮನು ಯುಧಿಷ್ಠಿರನ ಸೇನೆಯಲ್ಲಿ ಪ್ರಲಯವನ್ನುಂಟುಮಾಡುತ್ತಿರುವನೋ ಎಂಬಂತೆ ಅದನ್ನು ಸತತವಾಗಿ ವಿನಾಶಮಾಡುತ್ತಿದ್ದನು. ಅದನ್ನು ನೋಡಿದ ಶತ್ರುವೀರಸಂಹಾರಕನಾದ ಶ್ರೀಕೃಷ್ಣನು ಸಹನೆಯನ್ನು ತಾಳಲಾರದೆ ಹೋದನು. ಮಹಾತ್ಮನಾದ ಶ್ರೀಕೃಷ್ಣನು ಬಹುವಾಗಿ ಯೋಚಿಸತೊಡಗಿದನು. "ನಾಸ್ತಿ ಯೌಧಿಷ್ಠಿರಂ ಬಲಮ್–ಯುಧಿಷ್ಠಿರನ ಸೈನ್ಯವು ಇನ್ನು ಹೆಚ್ಚು ಹೊತ್ತು ಉಳಿಯಲಾರದು. ಅದು ಸಂಪೂರ್ಣವಾಗಿ ವಿನಾಶವಾದಂತೆಯೇ ಸರಿ. ಭೀಷ್ಮನಲ್ಲಿ ಎಂತಹ ಪರಾಕ್ರಮವಿರುವುದೆಂದರೆ ಅವನು ಒಂದೇ ಒಂದು ಹಗಲಿನಲ್ಲಿ ದೇವ-ದಾನವರೆಲ್ಲರನ್ನೂ ನಾಶಮಾಡಿಬಿಡಬಲ್ಲನು. ಹೀಗಿರುವಾಗ ಸೈನ್ಯಸಮೇತ ರಾದ ಪಾಂಡವರನ್ನು ಅನುಯಾಯಿಗಳೊಡನೆ ನಾಶಮಾಡಿಬಿಡುವ ನೆಂಬುದರಲ್ಲಿ ಆಶ್ಚರ್ಯವೇನಿದೆ? ಮಹಾತ್ಮನಾದ ಯುಧಿಷ್ಠಿರನ ಮಹಾ ಸೈನ್ಯವು ಭೀಷ್ಮನ ಪ್ರಹಾರವನ್ನು ತಾಳಲಾರದೇ ಓಡಿಹೋಗುತ್ತಿದೆ. ಭಗ್ನ ರಾಗಿಹೋದ ಸೋಮಕರನ್ನು ನೋಡಿ ಕೌರವಯೋಧರು ಭೀಷ್ಮನಿಗೆ ಹರ್ಷ ವನ್ನುಂಟುಮಾಡುತ್ತಾ ಸೋಮಕರ ಸೈನ್ಯವನ್ನು ಬೆನ್ನಟ್ಟಿ ಹೋಗುತ್ತಿದ್ದಾರೆ. (ಪಾಂಡವರ ಈ ದುರವಸ್ಥೆಯನ್ನು ನಾನು ಹೆಚ್ಚು ಹೊತ್ತು ಸಹಿಸಿಕೊಂಡಿರ ಲಾರೆನು.) ಆದುದರಿಂದ ಕವಚವನ್ನು ಧಾರಣೆಮಾಡಿಕೊಂಡು (ಯುದ್ಧಕ್ಕೆ

ಸಿದ್ಧನಾಗಿ) ಪಾಂಡವರ ಸಲುವಾಗಿ ನಾನೇ ಈಗ ಭೀಷ್ಮನನ್ನು ಸಂಹಾರಮಾಡಿ ಬಿಡುತ್ತೇನೆ. ಮಹಾತ್ಮರಾದ ಪಾಂಡವರ ಶತ್ರುರೂಪವಾದ ಭಾರವನ್ನು ನಾಶಮಾಡಿಬಿಡುತ್ತೇನೆ. ಈ ಅರ್ಜುನನಾದರೋ ತೀಕ್ಷ್ಣವಾದ ಬಾಣಗಳಿಂದ ಪ್ರಹತನಾಗುತ್ತಿದ್ದರೂ ಭೀಷ್ಮನ ಮೇಲಿನ ಗೌರವದಿಂದಾಗಿ ತನ್ನ ಕರ್ತವ್ಯ ವೇನೆಂಬುದನ್ನು ತಿಳಿದವನಾಗಿರುವುದಿಲ್ಲ."

ಈ ರೀತಿಯಲ್ಲಿ ಶ್ರೀಕೃಷ್ಣನು ಯೋಚಿಸುತ್ತಿರುವಾಗ–ಪರಮಕ್ರುದ್ಧನಾದ ಪಿತಾಮಹನು ಪಾರ್ಥನ ರಥದ ಕಡೆಗೆ ಮತ್ತಷ್ಟು ಬಾಣಗಳನ್ನು ಪ್ರಯೋಗಿಸಿದನು. ಭೀಷ್ಮನು ಬಿಟ್ಟ ಬಾಣಗಳು ಅಗಣಿತವಾಗಿದ್ದುವು. ಅವು ಎಲ್ಲ ದಿಕ್ಕುಗಳನ್ನೂ ಮುಚ್ಚಿಬಿಟ್ಟುವು. ಬಾಣಗಳ ಸರ್ವತ್ರ ವ್ಯಾಪನೆಯಿಂದಾಗಿ ಅಂತರಿಕ್ಷವೂ ಕಾಣಿಸುತ್ತಿರಲಿಲ್ಲ ; ದಿಕ್ಕುಗಳೂ ಕಾಣಿಸುತ್ತಿರಲಿಲ್ಲ ; ಭೂಮಿಯೂ ಕಾಣಿಸುತ್ತಿರಲಿಲ್ಲ ; ರಶ್ಮಿಮಾಲಿಯಾದ ಭಾಸ್ಕರನೂ ಸಹ ಕಾಣಿ ಸುತ್ತಿರಲಿಲ್ಲ ; ಗಾಳಿಯು ಭಯಂಕರವಾಗಿಯೂ, ಧೂಮಯುಕ್ತವಾಗಿಯೂ ಬೀಸುತ್ತಿದ್ದಿತು. ಎಲ್ಲ ದಿಕ್ಕುಗಳೂ ಕ್ಷೋಭೆಗೊಂಡಿದ್ದುವು. ಆ ಸಮಯದಲ್ಲಿ ಭೀಷ್ಮನ ಆಜ್ಞಾನುಸಾರಿಗಳಾದ ದ್ರೋಣರು, ವಿಕರ್ಣ, ಜಯದ್ರಥ, ಭೂರಿ ಶ್ರವ, ಕೃತವರ್ಮಾ, ಕೃಪಾಚಾರ್ಯರು, ಶ್ರುತಾಯು, ಅಂಬಷ್ಠಪತಿ, ವಿಂದ, ಅನುವಿಂದ, ಸುದಕ್ಷಿಣ, ಪೂರ್ವದಿಕ್ಕಿನ ರಾಜರು, ಸೌವೀರದೇಶೀಯ ಕ್ಷತ್ರಿ ಯರು, ವಸಾತಿಗಳು, ಕ್ಷುದ್ರಕರು ಮತ್ತು ಮಾಲವರು–ಇವರೆಲ್ಲರೂ ಬಹಳ ತ್ವರೆಯಿಂದ ಅರ್ಜುನನ ಸಮೀಪಕ್ಕೆ ಧಾವಿಸಿದರು.

ಶತ್ರುಪಕ್ಷದ ಲಕ್ಷೋಪಲಕ್ಷ ಅಶ್ವ-ಪದಾತಿ-ರಥಸೈನ್ಯಗಳೂ, ಗಜಸೈನ್ಯ ಗಳೂ ಕಿರೀಟಿಯ ಸುತ್ತಲೂ ಘೇರಾಯಿಸಿ ನಿಂತಿರುವುದನ್ನು ಸಾತ್ಯಕಿಯು ಬಹಳ ದೂರದಿಂದಲೇ ನೋಡಿದನು. ಶಸ್ತ್ರಧಾರಿಗಳಲ್ಲಿ ಶ್ರೇಷ್ಠರಾದ ಅರ್ಜುನ-ವಾಸುದೇವರು ಶತ್ರುಪಕ್ಷದ ಪದಾತಿ-ನಾಗಾಶ್ವರಥಸೈನಿಕರಿಂದ ನಾಲ್ಕು ದಿಕ್ಕುಗಳಿಂದಲೂ ಆಕ್ರಮಿತರಾಗಿರುವುದನ್ನು ನೋಡಿ ಶಿನಿಪ್ರವೀರನು ಬಹಳ ಬೇಗ ಕೃಷ್ಣಾರ್ಜುನರ ಸಮೀಪಕ್ಕೆ ಬಂದನು. ಮಹಾಧನುಷ್ಮಂತನಾದ ಸಾತ್ಯಕಿಯು ಒಡನೆಯೇ ಶತ್ರುಸೈನ್ಯವನ್ನು ಎದುರಿಸಿದನು. ವೃತ್ರನಿಷೂದನ ನಾದ ಇಂದ್ರನಿಗೆ ವಿಷ್ಣುವು ಯಾವ ರೀತಿಯಲ್ಲಿ ಸಹಾಯಮಾಡಿದನೋ–

ಅದೇ ರೀತಿಯಲ್ಲಿ ಸಾತ್ಯಕಿಯು ಅರ್ಜುನನಿಗೆ ಸಹಾಯಮಾಡಿದನು. ಆ ಸಮಯದಲ್ಲಿ ಯುಧಿಷ್ಠಿರನ ಆನೆ, ಕುದುರೆ, ರಥ ಮತ್ತು ಪದಾತಿಸೈನ್ಯಗಳ ಸಮೂಹವು ಸಂಪೂರ್ಣವಾಗಿ ಭಗ್ನವಾಗಿ ಹೋಗಿತ್ತು. ಯುಧಿಷ್ಠಿರನ ಕಡೆಯ ಎಲ್ಲ ಯೋಧರೂ ಭಯಗ್ರಸ್ತರಾಗಿದ್ದರು. ಯುಧಿಷ್ಠಿರನ ಅಳಿದುಳಿದ ಸೈನ್ಯವೂ ದಿಕ್ಕಾಪಾಲಾಗಿ ಓಡಿಹೋಗುತ್ತಿದ್ದಿತು. ಹೀಗೆ ಓಡಿಹೋಗುತ್ತಿದ್ದ ಯುಧಿಷ್ಠಿರನ ಸೈನ್ಯವನ್ನು ಕಂಡು ಸಾತ್ಯಕಿಯು ಅವರನ್ನು ಕುರಿತು ಹೇಳಿದನು :

**ಕ್ವ ಕ್ಷತ್ರಿಯಾ ಯಾಸ್ಯಥ ನೈಷ ಧರ್ಮಃ**
**ಸತಾಂ ಪುರಸ್ತಾತ್ಕಥಿತಃ ಪುರಾಣೈಃ ।**
**ಮಾ ಸ್ವಾಂ ಪ್ರತಿಜ್ಞಾಂ ತ್ಯಜತ ಪ್ರವೀರಾಃ**
**ಸ್ವಂ ವೀರಧರ್ಮಂ ಪರಿಪಾಲಯಧ್ವಮ್ ॥೮೧॥**

"ವೀರಕ್ಷತ್ರಿಯರೇ! ಎಲ್ಲಿಗೆ ಓಡಿಹೋಗುತ್ತಿದ್ದೀರಿ? ಪ್ರಾಚೀನಮಹಾಪುರುಷರಿಂದ ಹೇಳಲ್ಪಟ್ಟಿರುವ ಶ್ರೇಷ್ಠಕ್ಷತ್ರಿಯಧರ್ಮವು ಇದಾಗಿರುವುದಿಲ್ಲ. ಮಾಡಿರುವ ಪ್ರತಿಜ್ಞೆಯನ್ನು ನೀವು ಖಂಡಿತವಾಗಿಯೂ ಬಿಡಬೇಡಿರಿ. ಇದು ನಿಮಗೆ ಉಚಿತವೆನಿಸುವುದಿಲ್ಲ. ನಿಮ್ಮ ವೀರಧರ್ಮವನ್ನು ಪರಿಪಾಲಿಸಿರಿ."

ವಾಸವಾನುಜನಾದ ಉಪೇಂದ್ರನು (ಶ್ರೀಕೃಷ್ಣನು) ಸಾತ್ಯಕಿಯು ಹೇಳಿದ ಮಾತುಗಳನ್ನು ಕೇಳಿದನು. ಯುಧಿಷ್ಠಿರನ ಕಡೆಯ ನರೇಂದ್ರಮುಖ್ಯರು ಓಡಿಹೋಗುತ್ತಿರುವುದನ್ನೂ, ಅಂತಹ ದಾರುಣಪರಿಸ್ಥಿತಿಯಲ್ಲಿಯೂ ಅರ್ಜುನನು ಭೀಷ್ಮನೊಡನೆ ಬಹಳ ಮೃದುವಾಗಿಯೇ ಯುದ್ಧಮಾಡುತ್ತಿರುವುದನ್ನೂ, ಯುದ್ಧದಲ್ಲಿ ಭೀಷ್ಮನು ಕ್ಷಣ-ಕ್ಷಣಕ್ಕೂ ಬಲಗೊಳ್ಳುತ್ತಿರುವುದನ್ನೂ ಮತ್ತು ಕುರುಗಳ ಲಕ್ಷೋಪಲಕ್ಷಸಂಖ್ಯೆಯ ಸೈನ್ಯವು ತಮ್ಮ ಸುತ್ತಲೂ ಮುತ್ತುತ್ತಿರುವುದನ್ನೂ ನೋಡಿದನು. ಆಗ ಸರ್ವದಶಾರ್ಹನಾಥನಾದ, ಮಹಾತ್ಮನಾದ ಶ್ರೀಕೃಷ್ಣನು ತನ್ನ ಸಹನೆಯನ್ನು ಕಳೆದುಕೊಂಡನು. ವೀರೋಚಿತವಾದ ಮಾತುಗಳನ್ನಾಡಿದ ಶೈನೇಯನನ್ನು ಅಭಿನಂದಿಸುತ್ತಾ ಅವನನ್ನು ಕುರಿತು ಹೇಳಿದನು :

**ಯೇ ಯಾನ್ತಿ ತೇ ಯಾನ್ತು ಶಿನಿಪ್ರವೀರ**
**ಯೇऽಪಿಸ್ಥಿತಾಃ ಸಾತ್ವತ ತೇऽಪಿ ಯಾನ್ತು ।**
**ಭೀಷ್ಮಂ ರಥಾತ್ಪಶ್ಯ ನಿಪಾತ್ಯಮಾನಂ**
**ದ್ರೋಣಂ ಚ ಸಂಖ್ಯೇ ಸಗಣಂ ಮಯಾದ್ಯ ॥೮೪॥**

"ಶಿನಿಪ್ರವೀರ! ಭೀಷ್ಮನ ಭಯದಿಂದಾಗಿ ರಣರಂಗವನ್ನು ಬಿಟ್ಟು ಹೋಗುತ್ತಿರುವವರೆಲ್ಲರೂ ಹಾಗೆಯೇ ಹೊರಟೇಹೋಗಲಿ. (ಪುನಃ ಯುದ್ಧ ಮಾಡಲು ಬರುವ ಅವಶ್ಯಕತೆಯೇನೂ ಇಲ್ಲ.) ಈ ರಣರಂಗದಲ್ಲಿ ಇನ್ನೂ ಯಾರು ಉಳಿದುಕೊಂಡಿದ್ದಾರೆಯೋ ಅವರೂ ಹೊರಟು ಹೋಗಲಿ. (ಅವರಿಂದಲೂ ಆಗಬೇಕಾದುದೇನೂ ಇಲ್ಲ.) ಸಾತ್ವತ! ಈಗ ನೋಡು. ನಾನು ಈ ಕ್ಷಣದಲ್ಲಿಯೇ ಬಹುಸಂಖ್ಯಾತವಾದ ಸಹಾಯಕಗಣದಿಂದ ಕೂಡಿರುವ ದ್ರೋಣರನ್ನೂ ಮತ್ತು ಭೀಷ್ಮನನ್ನೂ ಈ ಯುದ್ಧಭೂಮಿಯಲ್ಲಿ ರಥದಿಂದ ಕೆಳಕ್ಕೆ ಉರುಳಿಸಿಬಿಡುತ್ತೇನೆ.

**ನ ಮೇ ರಥೀ ಸಾತ್ವತ ಕೌರವಾಣಾಂ**
**ಕ್ರುದ್ಧಸ್ಯ ಮುಚ್ಯೇತ ರಣೇऽದ್ಯ ಕಶ್ಚಿತ್ ।**
**ತಸ್ಮಾದಹಂ ಗೃಹ್ಯ ರಥಾಙ್ಗಮುಗ್ರಂ**
**ಪ್ರಾಣಂ ಹರಿಷ್ಯಾಮಿ ಮಹಾವ್ರತಸ್ಯ ॥೮೫॥**

ಸಾತ್ವತ! ಕೌರವರ ಪಕ್ಷದಲ್ಲಿರುವ ಯಾವ ರಥಿಕನೂ ಕ್ರುದ್ಧನಾದ ನನ್ನ ಕೈಗೆ ಸಿಕ್ಕಿ ಪ್ರಾಣಗಳನ್ನುಳಿಸಿಕೊಂಡು ಖಂಡಿತವಾಗಿಯೂ ಹೋಗಲಾರನು. ಆದುದರಿಂದ ನಾನೀಗಲೇ ಉಗ್ರವಾದ ಚಕ್ರವನ್ನು ಹಿಡಿದು ಮಹಾವ್ರತನಾದ ಭೀಷ್ಮನ ಪ್ರಾಣಗಳನ್ನು ಅಪಹರಿಸಿಬಿಡುತ್ತೇನೆ.

ಸಸೈನ್ಯವಾದ ಭೀಷ್ಮನನ್ನು ಕೊಂದನಂತರ, ಯುದ್ಧದಲ್ಲಿ ದ್ರೋಣರನ್ನೂ ಮುಗಿಸಿಬಿಡುತ್ತೇನೆ. ಶೈನೇಯ! ಪಾಂಡವರ ಸೈನ್ಯಕ್ಕೇ ಯಮಪ್ರಾಯರಾಗಿರುವ ಈ ಇಬ್ಬರು ಮಹಾರಥವನ್ನೂ ಸಂಹರಿಸಿ ಧನಂಜಯನಿಗೂ, ಧರ್ಮರಾಜನಿಗೂ, ಭೀಮನಿಗೂ, ನಕುಲ-ಸಹದೇವರಿಗೂ ಸಂತೋಷವನ್ನುಂಟುಮಾಡುತ್ತೇನೆ. ಧೃತರಾಷ್ಟ್ರನ ಮಕ್ಕಳೆಲ್ಲರನ್ನೂ ಮತ್ತು ಅವನ ಪಕ್ಷದವರಾಗಿ ಯಾವ ನರೇಂದ್ರರಿದ್ದಾರೆಯೋ ಅವರೆಲ್ಲರನ್ನೂ ಸಂಹರಿಸಿ ಸಂಹೃಷ್ಟ

ನಾದ ನಾನು ರಾಜನಾದ ಅಜಾತಶತ್ರುವನ್ನು ರಾಜ್ಯದಿಂದ ಸಂಪನ್ನನನ್ನಾಗಿ ಈಗಲೇ ಮಾಡುತ್ತೇನೆ. (ಅಜಾತಶತ್ರುವನ್ನು ರಾಜ್ಯಕ್ಕೆ ಅಧಿಪತಿಯನ್ನಾಗಿ ಈಗಲೇ ಮಾಡುತ್ತೇನೆ.)"

**ತತಃ ಸುನಾಭಂ ವಸುದೇವಪುತ್ರಃ**
**ಸೂರ್ಯಪ್ರಭಂ ವಜ್ರಸಮಪ್ರಭಾವಮ್ ।**
**ಕ್ಷುರಾನ್ತಮುದ್ಯಮ್ಯ ಭುಜೇನ ಚಕ್ರಂ**
**ರಥಾದವಾಪ್ಲುತ್ಯ ವಿಸೃಜ್ಯ ವಾಹಾನ್ ॥೮೮॥**
**ಸಂಕಮ್ಪಯನ್ಗಾಂ ಚರಣೈರ್ಮಹಾತ್ಮಾ**
**ವೇಗೇನ ಕೃಷ್ಣಃ ಪ್ರಸಸಾರ ಭೀಷ್ಮಮ್ ।**
**ಮದಾನ್ಧಮಾಜೌ ಸಮುದೀರ್ಣದರ್ಪಂ**
**ಸಿಂಹೋ ಜಿಘಾಂಸನ್ನಿವ ವಾರಣೇನ್ದ್ರಮ್ ॥೮೯॥**

ವಾಸುದೇವನು ಹೀಗೆ ಹೇಳಿ ಸುಂದರವಾದ ನಾಭಿಪ್ರದೇಶದಿಂದ (ಮಧ್ಯಪ್ರದೇಶದಿಂದ) ಕೂಡಿದ್ದ, ಸೂರ್ಯನಿಗೆ ಸಮಾನವಾದ ಪ್ರಭೆಯಿಂದ ಕೂಡಿದ್ದ, ವಜ್ರಾಯುಧಕ್ಕೆ ಸಮಾನವಾದ ಪ್ರಭಾವದಿಂದ ಕೂಡಿದ್ದ, ಸುತ್ತಲೂ ಬಹಳ ಚೂಪಾದ ಅಲುಗುಗಳನ್ನು ಹೊಂದಿದ್ದ ಚಕ್ರವನ್ನು ಕೈಯಿಂದ ಎತ್ತಿಕೊಂಡವನಾಗಿ, ಕುದುರೆಗಳ ಲಗಾಮನ್ನು ಕೆಳಗಿಟ್ಟು ರಥದಿಂದ ಕೆಳಕ್ಕೆ ಧುಮುಕಿ, ತನ್ನ ಗಂಭೀರವಾದ ನಡಿಗೆಯಿಂದ ಭೂಮಿಯನ್ನೇ ನಡುಗಿಸುತ್ತಾ-ವೃದ್ಧಿಹೊಂದಿದ ದರ್ಪದಿಂದ ಕೂಡಿರುವ ಮತ್ತು ಮದದಿಂದ ಕುರುಡಾಗಿರುವ (ವಿವೇಚನಾರಹಿತವಾಗಿರುವ) ಸಲಗನನ್ನು ಸಿಂಹವು ಸಂಹರಿಸಲು ಹೋಗುವಂತೆ–ಮಹಾತ್ಮನಾದ ಶ್ರೀಕೃಷ್ಣನು ಬಹಳ ವೇಗದಿಂದ ಭೀಷ್ಮನ ಸಮೀಪಕ್ಕೆ ಹೋದನು. ಉಪೇಂದ್ರನಾದ, ಶತ್ರುಗಳನ್ನು ಮಥಿಸು ವುದರಲ್ಲಿ ಸಮರ್ಥನಾದ, ಕ್ರುದ್ಧನಾದ ಶ್ರೀಕೃಷ್ಣನು ಸೈನ್ಯದ ಮಧ್ಯದಲ್ಲಿದ್ದ ಭೀಷ್ಮನ ಕಡೆಗೆ ಹೋಗುತ್ತಿರುವಾಗ, ಪಟಪಟನೆ ಹಾರಾಡುತ್ತಿದ್ದ ಪೀತಾಂಬರ ದಿಂದ ಕೂಡಿದ ನೀಲಮೇಘಶ್ಯಾಮನಾದ ಶ್ರೀಕೃಷ್ಣನು ಮಿಂಚಿನಿಂದ ಯುಕ್ತ ವಾದ ಮೇಘದಂತೆಯೇ ಪ್ರಕಾಶಿಸಿದನು. (ಶ್ರೀಕೃಷ್ಣನು ನೀಲಮೇಘಶ್ಯಾಮ. ಪೀತಾಂಬರ ಎಂದರೆ ಹೊಂಬಣ್ಣದ ವಸ್ತ್ರ. ನೀಲಮೇಘಶ್ಯಾಮನು ಹೊಂಬಣ್ಣದ ವಸ್ತ್ರವನ್ನುಟ್ಟು ಹೋಗುತ್ತಿದ್ದಾಗ ಆ ವಸ್ತ್ರವು ಗಾಳಿಯ ಬಡಿತ

ದಿಂದ ಹಾರಾಡುತ್ತಿದ್ದಿತು. ಹಾಗೆ ಹಾರಾಡುತ್ತಿದ್ದಾಗ ಅದು ಮಿಂಚಿನಂತೆ ಪ್ರಕಾಶಿಸುತ್ತಿದ್ದಿತು. ಇದನ್ನೇ ವ್ಯಾಸರು ಶ್ರೀಕೃಷ್ಣನು ನೀಲಮೇಘವೆಂದೂ ಅವನುಟ್ಟಿದ್ದ ಪೀತಾಂಬರವೇ ಮಿಂಚೆಂದೂ, ಮಿಂಚಿನಿಂದ ಮೇಘವು ಪ್ರಕಾಶಿಸುವಂತೆ ಹಾರಾಡುತ್ತಿದ್ದ ಪೀತಾಂಬರದಿಂದ ಶ್ರೀಕೃಷ್ಣನು ಪ್ರಕಾಶಿಸು ತ್ತಿದ್ದನೆಂದೂ ಹೇಳಿದ್ದಾರೆ.)

ಶ್ರೀಕೃಷ್ಣನು ಹಿಡಿದಿದ್ದ ಸುದರ್ಶನಚಕ್ರವು ಪದ್ಮದಂತೆ ಪ್ರಕಾಶಿಸುತ್ತಿದ್ದಿತು. ಚಕ್ರಪದ್ಮಕ್ಕೆ ಸುಂದರವಾದ ಶ್ರೀಕೃಷ್ಣನ ಭುಜವೇ (ತೋಳು) ದಂಟಿನ ರೂಪವಾಗಿದ್ದಿತು. ಅದು ಸಾಧಾರಣವಾದ ಕಮಲವಾಗಿರಲಿಲ್ಲ. ನಾರಾ ಯಣನ ನಾಭಿಯಲ್ಲಿ ಹುಟ್ಟಿದ, ಬಾಲಸೂರ್ಯನ ಬಣ್ಣಕ್ಕೆ ಸಮಾನವಾದ ಬಣ್ಣವನ್ನು ಹೊಂದಿದ್ದ (ಎಣೆಗೆಂಪಾಗಿದ್ದ ) ಆದಿಪದ್ಮವು ಯಾವ ರೀತಿಯಲ್ಲಿ ಪ್ರಕಾಶಮಾನವಾಗಿದ್ದಿತೋ–ಅದೇ ರೀತಿಯಲ್ಲಿ ಶ್ರೀಕೃಷ್ಣನ ಭುಜವೆಂಬ ನಾಳದ ಮೇಲೆ ಕಂಗೊಳಿಸುತ್ತಿದ್ದ ಚಕ್ರಪದ್ಮವೂ ಪ್ರಕಾಶಿಸುತ್ತಿದ್ದಿತು. ಶ್ರೀಕೃಷ್ಣನ ಕೋಪವೆಂಬ ಸೂರ್ಯೋದಯದಿಂದ ಆ ಚಕ್ರಪದ್ಮವು ವಿಕಸಿತವಾಗಿದ್ದಿತು. ಕ್ಷುರದ ಅಂಚಿನಂತೆ ಚಕ್ರದ ಅಂಚೂ ಬಹಳ ತೀಕ್ಷ್ಣವಾಗಿದ್ದಿತು. ಮತ್ತು ಚಕ್ರಪದ್ಮದ ದಳರೂಪವಾಗಿದ್ದಿತು. ಪರಮಾತ್ಮನ ದೇಹವೆಂಬ ದೊಡ್ಡ ಸರೋವರವೇ ಆ ಚಕ್ರಪದ್ಮಕ್ಕೆ ಉಗಮಸ್ಥಾನ. ಅಲ್ಲಿಯೇ ಅದು ಹುಟ್ಟಿಬೆಳೆ ದದ್ದು. ನಾರಾಯಣನ ತೋಳೇ ನಾಳವಾಗಿದ್ದ ಅಂತಹ ಚಕ್ರಪದ್ಮವು ಬಹು ವಾಗಿ ಪ್ರಕಾಶಿಸುತ್ತಿದ್ದಿತು.

ಕ್ರುದ್ಧನಾಗಿದ್ದ, ಚಕ್ರವನ್ನು ಕೈಯಲ್ಲಿ ಹಿಡಿದಿದ್ದ, ಗಟ್ಟಿಯಾಗಿ ಗರ್ಜನೆ ಮಾಡುತ್ತಿದ್ದ, ಮಹೇಂದ್ರಾವರಜನಾದ ಶ್ರೀಕೃಷ್ಣನನ್ನು ನೋಡಿ ಕುರುಗಳ ಸಂಹಾರವನ್ನು ಕುರಿತು ಚಿಂತಿಸುತ್ತಿವೆಯೋ ಎಂಬಂತೆ–ಎಲ್ಲ ಪ್ರಾಣಿಗಳೂ ಒಡನೆಯೇ ಕೂಗಿಕೊಂಡುವು. ಚಕ್ರಪಾಣಿಯಾಗಿದ್ದ ವಾಸುದೇವನು ಸರ್ವ ಲೋಕಗಳನ್ನೂ ವಿನಾಶಗೊಳಿಸಿಲು ಇಚ್ಛಿಸಿರುವನೋ ಎಂಬಂತೆ ಕಾಣುತ್ತಿ ದ್ದನು. ಸಮಸ್ತಪ್ರಾಣಿಗಳನ್ನೂ ಸುಟ್ಟು ಭಸ್ಮಮಾಡಲು ಹುಟ್ಟಿಕೊಂಡಿರುವ ಪ್ರಲಯಾಗ್ನಿಯಂತೆಯೇ ಲೋಕಗುರುವಾದ ಶ್ರೀಕೃಷ್ಣನು ಪ್ರಕಾಶಿಸುತ್ತಿದ್ದನು.

ಚಕ್ರವನ್ನು ಹಿಡಿದು ತನ್ನ ಕಡೆಗೇ ವೇಗವಾಗಿ ಬರುತ್ತಿದ್ದ ದೇವದೇವ

ನಾದ ಶ್ರೀಕೃಷ್ಣನನ್ನು ಆ ಸಮಯದಲ್ಲಿ ನೋಡಿದ ಶಾಂತನುವಿನ ಮಗನಾದ ಭೀಷ್ಮನು ಸ್ವಲ್ಪವಾದರೂ ಭಯಪಡದೇ ಅಥವಾ ಭ್ರಾಂತನಾಗದೇ ಗಾಂಡೀವ ಧನುಸ್ಸಿಗೆ ಸದೃಶವಾದ ಧ್ವನಿಯಿಂದ ಕೂಡಿದ್ದ ತನ್ನ ಮಹಾಧನುಸ್ಸನ್ನು ಎರಡು ಕೈಗಳಿಂದಲೂ ಸೆಳೆದನು. ಸ್ವಲ್ಪವಾದರೂ ವಿಮೋಹಗೊಳ್ಳದ ಬುದ್ಧಿಯಿಂದ ಕೂಡಿದ್ದ ಭೀಷ್ಮನು ಆ ಯುದ್ಧಸಮಯದಲ್ಲಿ ಅನಂತಪೌರುಷನಾದ ಗೋವಿಂದನನ್ನು ಸಂಬೋಧಿಸಿ ಹೇಳಿದನು :

**ಏಹ್ಯೇಹಿ ದೇವೇಶ ಜಗನ್ನಿವಾಸ**
**ನಮೋಽಸ್ತು ತೇ ಮಾಧವ ಚಕ್ರಪಾಣೇ ।**
**ಪ್ರಸಹ್ಯ ಮಾಂ ಪಾತಯ ಲೋಕನಾಥ**
**ರಥೋತ್ತಮಾತ್ಸರ್ವಶರಣ್ಯ ಸಂಖ್ಯೇ ॥೯೭॥**

“ದೇವೇಶ! ಜಗನ್ನಿವಾಸ! ಬಾಪ್ಪ! ಬಾ ಸ್ವಾಮಿ! ಮಾಧವ! ಚಕ್ರಪಾಣೇ! ನಿನಗೆ ನಮಸ್ಕಾರ. ಲೋಕನಾಥ! ಸರ್ವಶರಣ್ಯ! (ಎಲ್ಲರೂ ಶರಣುಹೊಂದಲು ಯೋಗ್ಯನಾದವನೇ!) ಯುದ್ಧದಲ್ಲಿ ನನ್ನನ್ನು ಸಂಹರಿಸಿ ನಾನು ಕುಳಿತಿರುವ ಈ ಉತ್ತಮವಾದ ರಥದಿಂದ ನನ್ನನ್ನು ಕೆಳಕ್ಕೆ ಬೀಳಿಸು.

**ತ್ವಯಾ ಹತಸ್ಯಾಪಿ ಮಯಾದ್ಯ ಕೃಷ್ಣ**
**ಶ್ರೇಯಃ ಪರಸ್ಮಿನ್ನಿಹ ಚೈವ ಲೋಕೇ ।**
**ಸಮ್ಭಾವಿತೋಽಸ್ಮ್ಯನ್ಧಕವೃಷ್ಣಿನಾಥ**
**ಲೋಕೈಸ್ತ್ರಿಭಿರ್ವೀರ ತವಾಭಿಯಾನಾತ್ ॥೯೮॥**

ಕೃಷ್ಣ! ಈಗ ನಿನ್ನ ಕೈಯಿಂದ ನಾನು ಹತನಾದುದೇ ಆದರೆ ಅದರಿಂದ ನನಗೆ ಇಹಲೋಕದಲ್ಲಿಯೂ ಮತ್ತು ಪರಲೋಕದಲ್ಲಿಯೂ ಶ್ರೇಯಸ್ಸೇ ಉಂಟಾಗುತ್ತದೆ. ಅಂಧಕ-ವೃಷ್ಣಿಗಳೊಡೆಯನೇ! ನೀನು ನನ್ನ ಮೇಲೆ ಆಕ್ರಮಣಮಾಡಲು ಬಂದಿರುವುದರಿಂದ ನಾನು ಮೂರು ಲೋಕಗಳಲ್ಲಿಯೂ ಗೌರವಿಸಲ್ಪಡುತ್ತೇನೆ. (ನೀನು ನನ್ನ ಮೇಲೆ ಯುದ್ಧಕ್ಕೆ ಬಂದೆಯಾದ ಕಾರಣ ಮೂರು ಲೋಕಗಳಲ್ಲಿಯೂ ನನ್ನ ಗೌರವವು ಹೆಚ್ಚುತ್ತದೆ.)”

ಮಹಾರಾಜ! ಭೀಷ್ಮನು ಹೀಗೆ ಶ್ರೀಕೃಷ್ಣನಿಗೆ ಹೇಳುತ್ತಿರಲಾಗಿ, ಅರ್ಜುನನು ರಥದಿಂದ ಧುಮುಕಿ, ಶೀಘ್ರವಾಗಿ ಯದುಪ್ರವೀರನಾದ

ಶ್ರೀಕೃಷ್ಣನ ಬೆನ್ನಟ್ಟಿಹೋಗಿ ದಪ್ಪವಾಗಿಯೂ, ಶ್ರೇಷ್ಠಲಕ್ಷಣವುಳ್ಳದ್ದಾಗಿಯೂ ಮತ್ತು ನೀಳವಾಗಿಯೂ ಇದ್ದ ತೋಳುಗಳನ್ನು ಹೊಂದಿದ್ದ ಹರಿಯನ್ನು ದಪ್ಪವಾಗಿಯೂ, ವಿಶಾಲವಾಗಿಯೂ ಇರುವ ತೋಳುಗಳನ್ನು ಹೊಂದಿದ್ದ ಅರ್ಜುನನು ತನ್ನ ಎರಡು ತೋಳುಗಳಿಂದಲೂ ಹಿಡಿದುಕೊಂಡನು.

**ನಿಗೃಹ್ಯಮಾಣಶ್ಚ ತದಾದಿದೇವೋ**
**ಭೃಶಂ ಸರೋಷಃ ಕಿಲ ಚಾತ್ಮಯೋಗೀ ।**
**ಆದಾಯ ವೇಗೇನ ಜಗಾಮ ವಿಷ್ಣು-**
**ರ್ಜಿಷ್ಣುಂ ಮಹಾವಾತ ಇವೈಕವೃಕ್ಷಮ್ ॥೧೦೦॥**

ಆದಿದೇವನಾದ, ಆತ್ಮಯೋಗಿಯಾದ, ಯೋಗೇಶ್ವರನಾದ, ಪರಮ ಪುರುಷನಾದ ಭಗವಂತನು ಮಹಾಕೋಪದಿಂದ ಕೂಡಿದ್ದನಲ್ಲವೇ? ಅರ್ಜುನನು ತನ್ನ ನೀಳವಾದ ಎರಡು ತೋಳುಗಳಿಂದಲೂ ಶ್ರೀಕೃಷ್ಣನನ್ನು ತಬ್ಬಿಕೊಂಡು ಮುಂದಕ್ಕೆ ಹೋಗದಂತೆ ಹಿಡಿದೆಳೆಯುತ್ತಿದ್ದರೂ ಸಹ ಜಿಷ್ಣುವು ತಬ್ಬಿಹಿಡಿದುಕೊಂಡಿದ್ದಂತೆಯೇ ಅವನನ್ನೂ ಸೆಳೆದುಕೊಂಡೇ ಬಹುವೇಗವಾಗಿ ಶ್ರೀಕೃಷ್ಣನು ಮುಂದಕ್ಕೆ ಹೆಜ್ಜೆಗಳನ್ನಿಟ್ಟನು. ಚಂಡಮಾರುತವು ತನ್ನ ದಾರಿಯಲ್ಲಿ ಪ್ರತಿಬಂಧಕವಾಗಿ ಕಾಣುವ ಮಹಾವೃಕ್ಷವನ್ನೇ ಬುಡಸಹಿತವಾಗಿ ಕಿತ್ತು ಹಾರಿಸಿಕೊಂಡು ಹೋಗುವಂತೆ–ಮುನ್ನಡೆಗೆ ಪ್ರತಿಬಂಧಮಾಡುತ್ತಿದ್ದ ಅರ್ಜುನನನ್ನೂ ಸಹ ಎಳೆದುಕೊಂಡೇ ಶ್ರೀಕೃಷ್ಣನು ರಭಸದಿಂದ ಭೀಷ್ಮನೆಡೆಗೆ ಅಡಿಗಳನ್ನಿಟ್ಟನು.

**ಪಾರ್ಥಸ್ತು ವಿಷ್ಟಭ್ಯ ಬಲೇನ ಪಾದೌ**
**ಭೀಷ್ಮಾನ್ತಿಕಂ ತೂರ್ಣಮಭಿದ್ರವನ್ತಮ್ ।**
**ಬಲಾನ್ನಿಜಗ್ರಾಹ ಹರಿಂ ಕಿರೀಟೀ**
**ಪದೇಽಥ ರಾಜನ್ದಶಮೇ ಕಥಂಚಿತ್ ॥೧೦೧॥**

ಭೀಷ್ಮನ ಸಮೀಪಕ್ಕೆ ತನ್ನನ್ನು ಸೆಳೆದುಕೊಂಡು ಬಹುಶೀಘ್ರವಾಗಿ ಓಡಿಹೋಗುತ್ತಿದ್ದ ಹರಿಯ ಕಾಲುಗಳನ್ನು ಕಿರೀಟಿಯು ಬಲವಾಗಿ ಹಿಡಿದು ಕೊಂಡನು. ಆದರೂ ಮುಂದೆ ಹೋಗುತ್ತಿದ್ದ ಶ್ರೀಕೃಷ್ಣನನ್ನು ಅವನ ಹತ್ತನೆಯ ಹೆಜ್ಜೆಯಲ್ಲಿ ಕಷ್ಟಪಟ್ಟು ತಡೆದನು.

ಆಗ ಶ್ರೀಕೃಷ್ಣನು ನಿಲ್ಲಲೇಬೇಕಾಯಿತು. ಸುವರ್ಣಮಯವಾದ, ವಿಚಿತ್ರವಾದ ಹಾರವನ್ನು ಧರಿಸಿದ್ದ ಅರ್ಜುನನು ಪರಮಪ್ರೀತನಾಗಿ ಭೀಷ್ಮನಿಗೆ ಅಭಿಮುಖನಾಗಿ ನಿಂತಿದ್ದ ಶ್ರೀಕೃಷ್ಣನ ಪಾದಾರವಿಂದಗಳಿಗೆ ನಮಸ್ಕರಿಸಿ ಶ್ರೀಕೃಷ್ಣನನ್ನು ಕುರಿತು ಬದ್ಧಾಂಜಲಿಯಾಗಿ ಹೇಳಿದನು :



**ಕೋಪಂ ಪ್ರತಿಸಂಹರ । ಗತಿರ್ಭವಾನ್ಕೇಶವ ಪಾಣ್ಡವಾನಾಮ್ ॥**

"ಕೇಶವ! ಕೋಪವನ್ನು ಉಪಸಂಹರಿಸು. ನಿಶ್ಚಯವಾಗಿಯೂ ಪಾಂಡವರಿಗೆ ನೀನೇ ಶರಣ್ಯನು. ಮಹಾನುಭಾವ! ನಾನು ಶಪಥವನ್ನು ಎಂದಿಗೂ ಬಿಡುವುದಿಲ್ಲ. ನನ್ನ ಪ್ರತಿಜ್ಞಾನುಸಾರವಾಗಿ ಈ ಕಾರ್ಯವನ್ನು ನಾನೇ ಮಾಡಿ ಮುಗಿಸುತ್ತೇನೆ. ನನ್ನ ಮಕ್ಕಳ ಮೇಲೆ ಮತ್ತು ನನ್ನ ಸೋದರರ ಮೇಲೆ ಆಣೆಯಿಟ್ಟು ನಾನು ಈ ಮಾತನ್ನು ಹೇಳುತ್ತಿದ್ದೇನೆ. ಉಪೇಂದ್ರ! ನಿನ್ನೊಡನೆ ಕೂಡಿಕೊಂಡು ಅಥವಾ ನಿನ್ನ ಆಜ್ಞಾಧಾರಕನಾಗಿ ನಾನು ಕುರುಗಳನ್ನು ಕೊನೆಗಾಣಿಸುತ್ತೇನೆ."

ಮಹಾರಾಜ! ಅರ್ಜುನನ ಪ್ರತಿಜ್ಞಾವಚನವನ್ನೂ ಮತ್ತು ಆಣೆಯ ಮಾತನ್ನೂ ಕೇಳಿ ಶ್ರೀಕೃಷ್ಣನ ಮನಸ್ಸು ಪ್ರಸನ್ನವಾಯಿತು. ಕೌರವಶ್ರೇಷ್ಠ ನಾದ ಅರ್ಜುನನಿಗೆ ಪ್ರಿಯವನ್ನು ಉಂಟುಮಾಡುವುದರಲ್ಲಿಯೇ ಯಾವಾ

ಗಲೂ ಆಸಕ್ತನಾದ ಕೇಶವನು ಚಕ್ರಪಾಣಿಯಾಗಿಯೇ ಪುನಃ ರಥವನ್ನು ಹತ್ತಿದನು. ಶತ್ರುಗಳ ಹಂತಕನಾದ ಶ್ರೀಕೃಷ್ಣನು ಕುದುರೆಗಳ ಕಡಿವಾಣಗಳನ್ನು ಪುನಃ ಎಡಗೈಯಲ್ಲಿ ಹಿಡಿದು, ಬಲಗೈಯಿಂದ ಶಂಖವನ್ನು ಹಿಡಿದುಕೊಂಡು ಗಟ್ಟಿಯಾಗಿ ಊದುತ್ತಾ ಶಂಖಧ್ವನಿಯಿಂದ ಎಲ್ಲ ದಿಕ್ಕುಗಳನ್ನೂ ಪ್ರತಿಧ್ವನಿಸುವಂತೆ ಮಾಡಿದನು. ಕಂಠಾಭರಣದಿಂದ ಭೂಷಿತನಾಗಿದ್ದ ಶ್ರೀಕೃಷ್ಣನು ಭುಜಕೀರ್ತಿಗಳಿಂದಲೂ, ಕರ್ಣಕುಂಡಲಗಳಿಂದಲೂ ವಿರಾಜಮಾನನಾಗಿದ್ದನು. (ಅಂಗದ-ಭುಜಕೀರ್ತಿಗಳನ್ನು ತೊಟ್ಟಿದ್ದನು. ಕರ್ಣಕುಂಡಲಗಳನ್ನು ಧರಿಸಿದ್ದನು.) ಅವನು ಪದ್ಮದಂತೆ ವಿಶಾಲವಾದ ನೇತ್ರಗಳುಳ್ಳವನಾಗಿದ್ದನು. ರಣರಂಗದ ಧೂಳಿಯ ಹರಡುವಿಕೆಯಿಂದಲೇ ಅಲಂಕರಿಸಲ್ಪಟ್ಟ ನೇತ್ರಪದ್ಮವುಳ್ಳವನಾಗಿದ್ದನು. ವಿಶುದ್ಧವಾದ, ಸುಮನೋಹರವಾದ ದಂತಪಂಕ್ತಿಯುಳ್ಳವನಾಗಿದ್ದನು. ಶಂಖಪಾಣಿಯಾಗಿದ್ದನು. ಇಂತಹ ಸರ್ವಾಂಗಸುಂದರನಾದ ಶ್ರೀಕೃಷ್ಣನನ್ನು ನೋಡಿ ಕುರುಶ್ರೇಷ್ಠರೆಲ್ಲರೂ ಗಟ್ಟಿಯಾಗಿ ಕಿರುಚಿಕೊಂಡರು. ಅನಂತರ ಕೌರವರ ಸಂಪೂರ್ಣಸೇನೆಯಲ್ಲಿ ಮೃದಂಗ, ಭೇರೀ, ಪಣವ ಮತ್ತು ದುಂದುಭಿಗಳ ಧ್ವನಿಗಳಾಗತೊಡಗಿದುವು. ರಥಚಕ್ರಗಳ ಗಡ-ಗಡಾ ಶಬ್ದಗಳಾಗತೊಡಗಿದುವು. ಆ ಶಬ್ದಗಳೆಲ್ಲವೂ ವೀರರು ಮಾಡುತ್ತಿದ್ದ ಸಿಂಹನಾದಗಳೊಡನೆ ಬೆರೆತು ಉಗ್ರವಾದ, ಕರ್ಣಕಠೋರವಾದ ಭಯಂಕರವಾದ ಶಬ್ದವಾಗಿ ಕೇಳಿಬರುತ್ತಿತ್ತು.

ಅರ್ಜುನನ ಗಾಂಡೀವಧನುಸ್ಸಿನ ಶಬ್ದವು ಮೇಘಗರ್ಜನೆಗೆ ಸಮಾನವಾದುದಾಗಿದ್ದು ಎಲ್ಲ ದಿಕ್ಕುಗಳನ್ನೂ ವ್ಯಾಪಿಸಿತು. ಅದೇ ರೀತಿಯಲ್ಲಿ ಅರ್ಜುನನ ಗಾಂಡೀವಧನುಸ್ಸಿನಿಂದ ವಿಮುಕ್ತವಾದ, ಸ್ವಚ್ಛವಾದ ಮತ್ತು ನಿರ್ಮಲವಾದ ಬಾಣಗಳೂ ಸಹ ಎಲ್ಲ ದಿಕ್ಕುಗಳಿಗೂ ಹೋದುವು. (ಯುದ್ಧವು ಪುನಃ ಪ್ರಾರಂಭವಾಯಿತು.) ಕೌರವರ ಅಧಿಪನಾದ ದುರ್ಯೋಧನನು ಭೀಷ್ಮನಿಂದಲೂ ಮತ್ತು ಭೂರಿಶ್ರವನಿಂದಲೂ ಕೂಡಿಕೊಂಡವನಾಗಿ ಶೀಘ್ರಾತಿಶೀಘ್ರವಾಗಿ ಕೈಯಲ್ಲಿ ಧನುರ್ಬಾಣಗಳನ್ನು ಹಿಡಿದು–ಹುಲ್ಲುಮೆದೆಯನ್ನು ದಹಿಸಲು ಉದ್ಯುಕ್ತನಾದ ಯಜ್ಞೇಶ್ವರನೋಪಾದಿಯಲ್ಲಿ–ಪಾರ್ಥನ ಮುಂದೆ ಬಂದು ನಿಂತನು. ಅನಂತರ ಭೂರಿಶ್ರವನು ಸುವರ್ಣಮಯವಾದ ರೆಕ್ಕೆಗಳಿಂದ ಯುಕ್ತವಾಗಿದ್ದ ಭಲ್ಲಗಳೆಂಬ ಏಳು ಬಾಣಗಳನ್ನು ಅರ್ಜುನನ ಮೇಲೆ

ಪ್ರಯೋಗಿಸಿದನು. ದುರ್ಯೋಧನನು ಭಯಂಕರವಾದ ವೇಗದಿಂದ ಕೂಡಿದ್ದ ತೋಮರವನ್ನೂ, ಶಲ್ಯನು ಗದೆಯನ್ನೂ, ಶಾಂತನವನು ಶಕ್ತ್ಯಾಯುಧವನ್ನೂ ಏಕಕಾಲದಲ್ಲಿ ಅರ್ಜುನನ ಮೇಲೆ ಪ್ರಯೋಗಿಸಿದರು. ಭೂರಿಶ್ರವಸನಿಂದ ಬಿಡಲ್ಪಟ್ಟ ಏಳು ಭಲ್ಲಗಳನ್ನೂ ಅರ್ಜುನನು ಏಳು ಬಾಣಗಳಿಂದ ಕತ್ತರಿಸಿಹಾಕಿದನು. ದುರ್ಯೋಧನನು ಬಿಟ್ಟ ಭಯಂಕರವೇಗದಿಂದ ಕೂಡಿದ್ದ ತೋಮರವನ್ನೂ ಸಹ ಅರ್ಜುನನು ಬಹಳ ಚೂಪಾಗಿದ್ದ ಕ್ಷುರ ಎಂಬ ಬಾಣದಿಂದ ವಿನಾಶಗೊಳಿಸಿದನು. ಅನಂತರ ಭೀಷ್ಮನಿಂದ ಪ್ರಯುಕ್ತವಾಗಿ ವೇಗವಾಗಿ ಬರುತ್ತಿದ್ದ ಶೋಭಾಯಮಾನವಾದ, ಮಿಂಚಿನ ಪ್ರಭೆಯಿಂದ ಕೂಡಿದ್ದ ಶಕ್ತ್ಯಾಯುಧವನ್ನೂ, ಮದ್ರಾಧಿಪತಿಯಾದ ಶಲ್ಯನಿಂದ ಪ್ರಮುಕ್ತವಾದ ಗದೆಯನ್ನೂ ಎರಡು ಬಾಣಗಳಿಂದ ಕತ್ತರಿಸಿ ಹಾಕಿದನು. ಅನಂತರ ಅರ್ಜುನನು ಅಪ್ರಮೇಯವಾದ ಮತ್ತು ಚಿತ್ರಿತವಾದ ಗಾಂಡೀವ ಧನುಸ್ಸನ್ನು ಎರಡು ಕೈಗಳಿಂದಲೂ ಸುದೀರ್ಘವಾಗಿ ಸೆಳೆದು ಘೋರವಾದ ಮತ್ತು ಅದ್ಭುತವಾದ ಮಾಹೇಂದ್ರಾಸ್ತ್ರವನ್ನು ಧನುಸ್ಸಿಗೆ ವಿಧಿವತ್ತಾಗಿ ಯೋಜಿಸಿ, ಅಭಿಮಂತ್ರಿಸಿ ಅಂತರಿಕ್ಷದಲ್ಲಿ ಪ್ರಕಟಪಡಿಸಿದನು. ಕಿರೀಟಧಾರಿಯಾದ, ಮಹಾತ್ಮನಾದ ಮಹಾಧನುರ್ಧರನಾದ ಅರ್ಜುನನು ಉತ್ತಮವಾದ ಆ ಮಾಹೇಂದ್ರಾಸ್ತ್ರದ ಮೂಲಕವಾಗಿ ನಿರ್ಮಲವಾದ ಮತ್ತು ಅಗ್ನಿಗೆ ಸಮಾನವಾಗಿ ಪ್ರಜ್ವಲಿಸುತ್ತಿದ್ದ ಬಾಣಗಳ ಜಾಲದಿಂದ ಕೌರವರ ಸಂಪೂರ್ಣಸೈನ್ಯವನ್ನೂ ತಡೆದುಬಿಟ್ಟನು. ಅರ್ಜುನನ ಧನುಸ್ಸಿನಿಂದ ಪ್ರಮುಕ್ತವಾದ ಬಾಣಗಳು ಶತ್ರುಗಳ ರಥ, ಧ್ವಜಾಗ್ರ, ಧನುಸ್ಸು ಮತ್ತು ಸೈನಿಕರ ತೋಳುಗಳನ್ನೂ ಕತ್ತರಿಸಿಕೊಂಡು ನರೇಂದ್ರ-ನಾಗೇಂದ್ರಗಳ ಮತ್ತು ಅಶ್ವಗಳ ಶರೀರಗಳನ್ನೂ ಕತ್ತರಿಸುತ್ತಿದ್ದುವು. ಅನಂತರ ಕಿರೀಟಮಾಲಿಯು (ಅರ್ಜುನನು) ಹರಿತವಾದ ಅಲಗುಗಳುಳ್ಳ ಬಾಣಗಳಿಂದ ರಣಾಂಗಣದ ಎಲ್ಲ ದಿಕ್ಕುಗಳನ್ನೂ ಮತ್ತು ಉಪದಿಕ್ಕುಗಳನ್ನೂ ಸಂಪೂರ್ಣವಾಗಿ ಮುಚ್ಚಿ, ಕೇವಲ ಗಾಂಡೀವಧನುಸ್ಸಿನ ಶಬ್ದದಿಂದಲೇ ಕೌರವರ ಮನಸ್ಸಿನಲ್ಲಿ ಮಹತ್ತರವಾದ ವ್ಯಥೆಯನ್ನುಂಟು ಮಾಡುತ್ತಿದ್ದನು. ಈ ಪ್ರಕಾರವಾಗಿ ಭಯಂಕರವಾದ ಯುದ್ಧವಾಗುತ್ತಿರಲಾಗಿ ಶಂಖಧ್ವನಿ, ದುಂದುಭಿಧ್ವನಿ, ಕುದುರೆಗಳ ಕೆನೆಯುವಿಕೆ ಮತ್ತು ರಥ ಚಕ್ರಗಳ ಗಡ-ಗಡಾ ಶಬ್ದಗಳೆಲ್ಲವೂ ಗಾಂಡೀವಮಹಾಧನುಸ್ಸಿನ ಮಹಾಶಬ್ದ

ದಲ್ಲಿ ಅಡಗಿಹೋದುವು. ಗಾಂಡೀವಧನುಸ್ಸಿನ ಶಬ್ದವೊಂದು ಸ್ಪಷ್ಟವಾಗಿ ಕೇಳುತ್ತಿದ್ದಿತೇ ಹೊರತು ಮತ್ತಾವ ಶಬ್ದವೂ ಕೇಳುತ್ತಲೇ ಇರಲಿಲ್ಲ.

ಎಲ್ಲ ಶಬ್ದಗಳನ್ನು ಮೆಟ್ಟಿ , ಸ್ಪಷ್ಟವಾಗಿ ಕೇಳಿಬರುತ್ತಿರುವ ಶಬ್ದವು ಅರ್ಜುನನ ಗಾಂಡೀವಧನುಸ್ಸಿನ ಶಬ್ದವೇ ಎಂಬುದನ್ನು ದೃಢಪಡಿಸಿ ಕೊಂಡವರಾಗಿ ವೀರರಾದ ವಿರಾಟರಾಜಪ್ರಮುಖರೂ, ಪಾಂಚಾಲರಾಜ ನಾದ ವೀರನಾದ ದ್ರುಪದನೂ, ಉದಾರಚಿತ್ತರಾದ ಇತರರೂ ಅರ್ಜುನನಿದ್ದ ಸ್ಥಳಕ್ಕೆ ಆಗಮಿಸಿದರು. ಗಾಂಡೀವಧನುಸ್ಸಿನ ಶಬ್ದವು ಎಲ್ಲೆಲ್ಲಿ ಕೇಳಿಬರುತ್ತಿ ದ್ದಿತೋ ಅಲ್ಲಲ್ಲಿ ನಿನ್ನ ಸೈನಿಕರು ದೈನ್ಯದಿಂದ ನಿಂತುಬಿಡುತ್ತಿದ್ದರು. ಅರ್ಜುನನನ್ನು ಆಕ್ರಮಿಸುವುದಕ್ಕಾಗಲೀ, ಅವನಿಗೆ ಪ್ರತೀಕಾರವನ್ನು ಮಾಡುವುದಕ್ಕಾಗಲೀ ಯಾವನೂ ಅವನ ಸಮೀಪಕ್ಕೆ ಹೋಗುತ್ತಲೇ ಇರಲಿಲ್ಲ. ಮಹಾರಥರ ಘೋರವಾದ ಆ ಮಹಾಸಂಗ್ರಾಮದಲ್ಲಿ ರಥ, ಕುದುರೆ ಮತ್ತು ಸಾರಥಿಗಳ ಸಮೇತವಾಗಿ ಮಹಾ-ಮಹಾವೀರರು ಪ್ರಾಣತೊರೆದರು. ದೊಡ್ಡ-ದೊಡ್ಡ ಪತಾಕೆಗಳನ್ನು ಹೊಂದಿದ್ದ, ಶುಭದಾಯಕವಾದ, ಸುವರ್ಣಮಯವಾದ ಹಗ್ಗದಿಂದ ನಿಬದ್ಧವಾಗಿದ್ದ ಆನೆಗಳು ಅರ್ಜುನನು ಬಿಟ್ಟ ನಾರಾಚಗಳ ಪ್ರಹಾರದಿಂದ ಪೀಡಿತವಾಗಿ ಶಕ್ತಿಗುಂದಿ ಒಡನೆಯೇ ಕೆಳಕ್ಕೆ ಬೀಳುತ್ತಿದ್ದುವು. ಭಯಂಕರವಾದ ವೇಗದಿಂದ ಕೂಡಿದ್ದ, ವಿಮಲವಾದ ಚೂಪಾದ ಅಗ್ರಭಾಗಗಳನ್ನು ಹೊಂದಿದ್ದ ಮತ್ತು ರೆಕ್ಕೆಗಳಿಂದ ಕೂಡಿದ್ದ ಅರ್ಜುನಪ್ರಹಿತವಾದ ಬಾಣಗಳಿಂದ ಪ್ರಹತರಾದ ಕುರುಯೋಧರು, ಭಿನ್ನ ವಾದ ಕವಚವುಳ್ಳವರೂ ಮತ್ತು ಶರೀರವುಳ್ಳವರೂ ಆಗಿ ಒಡನೆಯೇ ಪ್ರಾಣಗಳನ್ನು ಬಿಡುತ್ತಿದ್ದರು. ಸೇನಾಮುಖಗಳಲ್ಲಿದ್ದ ದೊಡ್ಡ-ದೊಡ್ಡ ಧ್ವಜಗಳ ಯಂತ್ರಗಳೂ, ಸ್ತಂಭಗಳೂ ಕತ್ತರಿಸಿಹೋಗಿದ್ದುವು.

ಧನಂಜಯನ ಬಾಣಗಳಿಂದ ಪ್ರಹತವಾದ ಪದಾತಿಗಳ ಸಮೂಹಗಳು ರಥಿಗಳು, ಕುದುರೆಗಳು, ಆನೆಗಳು ಎಲ್ಲವೂ ಸತ್ತ್ವವನ್ನು ಕಳೆದುಕೊಂಡು ಪೆಟ್ಟುಬಿದ್ದ ಸ್ಥಳವನ್ನು ಭದ್ರವಾಗಿ ಹಿಡಿದುಕೊಂಡು ಭೂಮಿಯ ಮೇಲೆ ಬೀಳುತ್ತಿದ್ದುವು. ಮಹಾರಾಜ! ಇವೆಲ್ಲವೂ ಅರ್ಜುನನು ಅಭಿಮಂತ್ರಣ ಪೂರ್ವಕವಾಗಿ ಪ್ರಯೋಗಿಸಿದ ಒಂದೇ ಒಂದು ಐಂದ್ರಾಸ್ತ್ರದ ಪ್ರಭಾವ.

ಅಸ್ತ್ರಗಳಲ್ಲಿ ಶ್ರೇಷ್ಠವಾದ ಆ ಐಂದ್ರಾಸ್ತ್ರದಿಂದ ನಿನ್ನ ಸೈನಿಕರೆಲ್ಲರೂ ಭಿನ್ನವಾದ ಕವಚವುಳ್ಳವರೂ ಮತ್ತು ದೇಹವುಳ್ಳವರೂ ಆದರು.

ಆ ಸಮಯದಲ್ಲಿ ಕಿರೀಟಿಯು ಬಿಟ್ಟ ನಿಶಿತವಾದ ಬಾಣಗಳ ಸಮೂಹ ದಿಂದ ಕ್ಷತರಾದ ಮನುಷ್ಯರ (ಪ್ರಾಣಿಗಳ) ದೇಹಗಳಿಂದ ಹೊರಟ ರಕ್ತದ ಕೋಡಿಯು ಆ ಯುದ್ಧಭೂಮಿಯಲ್ಲಿ ಒಂದು ನದಿಯಾಗಿಯೇ ಪರಿಣಮಿ ಸಿತು. ಆ ನದಿಯು ಬಹುಭಯಂಕರವಾಗಿಯೂ ಕಾಣುತ್ತಿದ್ದಿತು. ರಣಾಂಗಣ ದಲ್ಲಿ ಬಿದ್ದಿದ್ದ ಮನುಷ್ಯರ ಮೇದಸ್ಸು ರಕ್ತನದಿಯ ನೊರೆಯಂತೆಯೇ ಕಾಣುತ್ತಿದ್ದಿತು. ಇಂತಹ ರಕ್ತನದಿಯು ದೊಡ್ಡದಾಗಿಯೂ ಇದ್ದಿತು. ಸತ್ತು ಹೋಗಿದ್ದ ಕುದುರೆಗಳ ಮತ್ತು ಆನೆಗಳ ಶರೀರಗಳೇ ಆ ರಕ್ತನದಿಗೆ ದಂಡೆಯ ರೂಪದಲ್ಲಿದ್ದುವು. ನರೇಂದ್ರರ ಮಜ್ಜಾ ಮತ್ತು ಮಾಂಸಗಳ ಮಿಶ್ರಣವು ರಕ್ತ ನದಿಯ ಕೆಸರಿನ ರೂಪದಲ್ಲಿದ್ದಿತು. ಅನೇಕಾನೇಕರಾಕ್ಷಸರು ಮತ್ತು ಭೂತ ಗಣಗಳು ಆ ರಕ್ತನದಿಯನ್ನು ಸಂಸೇವಿಸುತ್ತಿದ್ದರು. ಕಪೋಲದವರೆಗೂ ಹರ ಡಿದ್ದ ಮನುಷ್ಯರ ತಲೆಯ ಕೂದಲುಗಳು ಆ ರಕ್ತನದಿಯ ದಂಡೆಯಲ್ಲಿರುವ ಹುಲ್ಲುಗಾವಲಿನಂತಿದ್ದಿತು. ಆ ರಕ್ತನದಿಯು ಹರಿಯುತ್ತಿದ್ದಾಗ ಮಧ್ಯ-ಮಧ್ಯ ದಲ್ಲಿ ಸಾವಿರಾರು ಶರೀರಗಳು ಬಿದ್ದಕಾರಣದಿಂದ ಪ್ರವಾಹವು ಸಾವಿರ ಭಾಗ ಗಳಾಗಿ ಹರಿಯುತ್ತಿದ್ದು ಅದು ಸಹಸ್ರವಾಹಿನಿಯೂ ಆಗಿದ್ದಿತು. ಯೋಧರು ಧರಿಸಿದ್ದ ಕವಚಗಳು ಕತ್ತರಿಸಲ್ಪಟ್ಟು ಸರ್ವತ್ರ ವ್ಯಾಪ್ತವಾಗಿ ಬಿದ್ದಿದ್ದುವು. ಅಂತಹ ಕವಚಗಳೆಂಬ ತೆರೆಗಳಿಂದ ರಕ್ತನದಿಯು ಕೂಡಿದ್ದಿತು. ಮನುಷ್ಯರ, ಕುದುರೆಗಳ ಮತ್ತು ಆನೆಗಳ ಮೂಳೆಗಳು ರಕ್ತನದಿಯಲ್ಲಿ ಸಣ್ಣ-ಸಣ್ಣ ಕಲ್ಲುಗಳಾಗಿದ್ದುವು. ನಾಯಿಗಳಿಂದಲೂ, ಹದ್ದುಗಳಿಂದಲೂ, ತೋಳಗಳಿಂದಲೂ, ರಣಹದ್ದುಗಳಿಂದಲೂ, ಕಾಗೆಗಳಿಂದಲೂ, ಮಾಂಸಾಶಿಗಳ ಸಮೂಹ ಗಳಿಂದಲೂ, ಕಿರುಬಗಳಿಂದಲೂ ವ್ಯಾಪಿಸಿದ್ದ ಆ ನದಿಯು ಮಹಾವೈತರಣೀ ನದಿಯಂತೆಯೇ ಬಹುಕ್ರೂರವಾಗಿ ಕಾಣುತ್ತಿರುವುದನ್ನೂ ಯುದ್ಧದ ಪ್ರೇಕ್ಷಕ ರಾದ ಜನರು ನೋಡಿದರು. ಆ ರಕ್ತನದಿಯು ಅರ್ಜುನನ ಬಾಣಗಳ ಸಮೂಹದಿಂದಲೇ ಪ್ರವರ್ತಿತವಾಗಿತ್ತು. (ಅರ್ಜುನನ ಬಾಣಗಳೇ ಈ ನದಿಗೆ ಉಗಮಸ್ಥಾನ.) ಆ ನದಿಯಲ್ಲಿ ಮೇದಸ್ಸು, ಮಜ್ಜಾ ಮತ್ತು ರಕ್ತಗಳು ಕೂಡಿ ಕೊಂಡು ಹರಿಯುತ್ತಿದ್ದು ಅದು ಬಹುಭಯಂಕರವಾಗಿ ಕಾಣುತ್ತಿದ್ದಿತು. ಈ

ರೀತಿಯಲ್ಲಿ ಕೌರವಸೇನೆಯಲ್ಲಿ ಪ್ರಧಾನಭೂತರಾಗಿದ್ದ ಯೋಧರೆಲ್ಲರೂ ಅರ್ಜುನನ ಬಾಣಗಳಿಂದ ಮರಣಹೊಂದಿದರು. ಅದನ್ನು ಕಂಡು ವಿಜಯದಿಂದ ಉತ್ಸಾಹಗೊಂಡ ಪುರುಷಪ್ರವೀರರಾದ ಚೇದಿ-ಪಾಂಚಾಲ-ಕರೂಷ-ಮತ್ಸ್ಯಯೋಧರೂ, ಪಾಂಡವರೂ ಮತ್ತು ಪಾಂಡವರ ಕಡೆಯ ಇತರ ಸೈನಿಕರೂ ಒಟ್ಟಾಗಿ ಸೇರಿಕೊಂಡು ಕುರುವೀರಯೋಧರನ್ನು ಭಯಪಡಿಸುತ್ತಾ ಸಿಂಹನಾದಗಳನ್ನು ಮಾಡಿದರು. ಶತ್ರುಗಳಿಗೆ ಭಯವನ್ನುಂಟುಮಾಡುವ ಕಿರೀಟಧರನಾದ ಅರ್ಜುನನಿಂದ ಕೌರವಸೇನೆಯ ಪ್ರಮುಖಯೋಧರೆಲ್ಲರೂ ಹತರಾದುದನ್ನು ಕಂಡು ಪಾಂಡವರ ಪಕ್ಷದ ಯೋಧರಿಗೆ ಅತೀವಸಂತೋಷವಾಯಿತು. ಒಂದೇ ಒಂದು ಸಿಂಹವು ಮೃಗಗಳ ಅನೇಕ ಸಮೂಹಗಳನ್ನು ಭಯಪಡಿಸಿ ಓಡಿಸಿಬಿಡುವಂತೆ-ಕೌರವಧ್ವಜಿನೀಪತಿಗಳ ಸೈನ್ಯವನ್ನು ಭಯಪಡಿಸಿ ಓಡಿಸಿದ ಆ ಇಬ್ಬರು (ಗಾಂಡೀವಿ-ಜನಾರ್ದನರು) ಅತ್ಯಂತಹರ್ಷಯುಕ್ತರಾಗಿ ಸಿಂಹನಾದಮಾಡಿದರು.

ಅನಂತರ ಸೂರ್ಯನು ತನ್ನ ಕಿರಣಗಳನ್ನು ಮುದುಡಿಕೊಳ್ಳುತ್ತಿರುವುದನ್ನು ನೋಡಿ, ಪ್ರಲಯಾಗ್ನಿಗೆ ಸಮಾನವಾದ ಅರ್ಜುನನು ಬಿಟ್ಟ ಐಂದ್ರಾಸ್ತ್ರವು ಸರ್ವತ್ರ ವ್ಯಾಪ್ತವಾಗಿರುವುದನ್ನೂ, ಬಹುಘೋರವಾಗಿರುವುದನ್ನೂ, ಸಹಿಸಿಕೊಳ್ಳಲು ಅಶಕ್ಯವಾಗಿರುವುದನ್ನೂ ಮನಗಂಡು, ಸೂರ್ಯನ ಕೆಂಪಿನಿಂದ ಕೂಡಿದ ಕಿರಣಗಳಿಂದ ಸಂಧ್ಯಾಕಾಲವಾಗುತ್ತಿರುವುದನ್ನೂ ಮತ್ತು ರಾತ್ರಿಯು ಹೆಜ್ಜೆಯಿಡುತ್ತಿರುವುದನ್ನೂ ಸಹ ಸಮೀಕ್ಷಿಸಿ, ಶಸ್ತ್ರಗಳಿಂದ ಗಾಯಗೊಂಡ ಶರೀರವುಳ್ಳವರಾದ ಕುರುಗಳು, ಭೀಷ್ಮ-ದ್ರೋಣ, ದುರ್ಯೋಧನ-ಬಾಹ್ಲಿಕ ಇವರೇ ಮೊದಲಾದ ಕುರುಪ್ರಮುಖರೊಡನೆ ರಣರಂಗದಿಂದ ಹಿಮ್ಮೆಟ್ಟಿದರು.

ಮಹಾಬಲರಾದ ಕೌರವರನ್ನು ಹಿಮ್ಮೆಟ್ಟಿಸಿದುದಕ್ಕಾಗಿ ಲೋಕದಲ್ಲಿ ಯಶಸ್ಸನ್ನೂ ಮತ್ತು ಕೀರ್ತಿಯನ್ನೂ ಗಳಿಸಿಕೊಂಡವನಾಗಿ ಶತ್ರುಗಳನ್ನು ಜಯಿಸಿ ತನ್ನ ಅಂದಿನ ಕರ್ಮವನ್ನು ಮುಗಿಸಿದ ಧನಂಜಯನೂ ಸಹ ರಾಜರಿಂದಲೂ ಮತ್ತು ತನ್ನ ಸೋದರರಿಂದಲೂ ಕೂಡಿಕೊಂಡು ಅಂದಿನ ರಾತ್ರಿ ತನ್ನ ಶಿಬಿರವನ್ನು ಸೇರಿದನು. ಅನಂತರ ರಾತ್ರಿಯ ಪ್ರಾರಂಭದಲ್ಲಿ ಕೌರವರ ಸೈನ್ಯದಲ್ಲಿ ಇದ್ದಕ್ಕಿದ್ದಂತೆಯೇ ಭಯಂಕರವಾದ ಅತಿಘೋರವಾದ ಕೋಲಾಹಲಶಬ್ದವು ಕೇಳಿಬಂದಿತು. ಆಲಿಸಿ ಕೇಳಲಾಗಿ ಅವರು ತಮ್ಮ ಕಡೆಯಲ್ಲಾದ

ನಷ್ಟವನ್ನು ಕುರಿತು ಪರಸ್ಪರ ಮಾತನಾಡಿಕೊಳ್ಳುತ್ತಿದ್ದರು. "ಇಂದಿನ ಯುದ್ಧದಲ್ಲಿ ಅರ್ಜುನನು ರಥಿಕರು, ಕುದುರೆಗಳು ಮತ್ತು ಸಾರಥಿಗಳ ಸಹಿತವಾಗಿ ಹತ್ತುಸಾವಿರ ರಥಗಳನ್ನು ಧ್ವಂಸಮಾಡಿರುತ್ತಾನೆ. ಏಳು ನೂರು ಆನೆಗಳೂ ಅವನಿಂದ ಕೊಲ್ಲಲ್ಪಟ್ಟಿವೆ. ಪ್ರಾಚ್ಯರು, ಸೌವೀರರು, ಕ್ಷುದ್ರಕರು ಮತ್ತು ಮಾಲವರು ಇವರೆಲ್ಲರೂ ಅರ್ಜುನನಿಂದ ಸಂಹೃತರಾಗಿದ್ದಾರೆ. ಬೇರೆ ಯಾರಿಂದಲೂ ತೋರಿಸಲಿಕ್ಕಾಗದಂತಹ ಪರಾಕ್ರಮವನ್ನೂ, ಮಾಡಲಿಕ್ಕಾಗದಂತಹ ಮಹಾಸಂಹಾರಕರ್ಮವನ್ನೂ ಅರ್ಜುನನಿಂದು ಮಾಡಿತೋರಿಸಿದ್ದಾನೆ. ಅರ್ಜುನನನ್ನು ಎದುರಿಸಿದ ಶ್ರುತಾಯುಷ, ಅಂಬಷ್ಠಪತಿ, ದುರ್ಮರ್ಷಣ, ಚಿತ್ರಸೇನ, ದ್ರೋಣ, ಕೃಪ, ಜಯದ್ರಥ, ಬಾಹ್ಲಿಕ, ಭೂರಿಶ್ರವಸ, ಶಲ್ಯ, ಶಲ ಇವರೇ ಮುಂತಾದ ನೂರಾರು ಯೋಧರು ಮತ್ತು ಭೀಷ್ಮ– ಇವರೆಲ್ಲರೂ ಕ್ರುದ್ಧನಾಗಿದ್ದ ಪಾರ್ಥನಿಂದ ರಣಾಂಗಣದಲ್ಲಿ ಪರಾಜಯ ಹೊಂದಿದರು. ಲೋಕಕ್ಕೆ ಒಬ್ಬನೇ ಮಹಾರಥನಾದ ಅರ್ಜುನನು ಈ ಎಲ್ಲ ಕುರುಯೋಧರನ್ನೂ ತನ್ನ ಬಾಹುಬಲದಿಂದಲೇ ಜಯಿಸಿರುವನು."

ಮಹಾರಾಜ! ಹೀಗೆಂಬುದಾಗಿ ಹೇಳುತ್ತಾ ನಿನ್ನ ಕಡೆಯ ಎಲ್ಲ ಸೈನಿಕರೂ ಹೆಚ್ಚು ಬೆಳಕು ಕೊಡುತ್ತಿದ್ದ ಸಾವಿರಾರು ಪಂಜುಗಳನ್ನೂ ಮತ್ತು ಪ್ರಕಾಶಮಾನವಾದ ದೀಪಗಳನ್ನೂ ತೆಗೆದುಕೊಂಡು ತಮ್ಮ ತಮ್ಮ ಶಿಬಿರಗಳನ್ನು ಸೇರಿಕೊಂಡರು. ಕಿರೀಟಿಯ ಬಾಣಗಳ ಪ್ರಹಾರದಿಂದ ತ್ರಾಸಗೊಂಡಿದ್ದ ಎಲ್ಲ ಯೋಧರೂ ಆ ರಾತ್ರಿ ತಮ್ಮ ತಮ್ಮ ಶಿಬಿರಗಳಲ್ಲಿ ವಿಶ್ರಾಂತಿಯನ್ನು ಹೊಂದಿದರು."

ಆ೫ನೆಯ ಅಧ್ಯಾಯವು ಮುಗಿಯಿತು.

## ಮೂರನೆಯ ದಿವಸದ ಯುದ್ಧಸಮೀಕ್ಷೆ

ಮೂರನೆಯ ದಿವಸದ ಯುದ್ಧದಲ್ಲಿ ಗಾರುಡವ್ಯೂಹವನ್ನು ಭೀಷ್ಮನು ರಚಿಸುತ್ತಾನೆ. ಅದಕ್ಕೆ ಪ್ರತಿಯಾದ ಅರ್ಧಚಂದ್ರವ್ಯೂಹವನ್ನು ಅರ್ಜುನನು ಧೃಷ್ಟದ್ಯುಮ್ನನೊಡನೆ ಸೇರಿಕೊಂಡು ರಚಿಸುತ್ತಾನೆ. ಸ್ವಲ್ಪಕಾಲದವರೆಗೆ ಎರಡು ವ್ಯೂಹಗಳೂ ಅಭೇದ್ಯವಾಗಿಯೇ ಇರುತ್ತವೆ. ಮೊದಲು ಮೊದಲು ಯಾವ ಕಡೆಗೂ ಜಯಾಪಜಯಗಳಿಲ್ಲದ ಯುದ್ಧವೇ ನಡೆಯುತ್ತಿರುತ್ತದೆ. ಅನಂತರದ ಯುದ್ಧದಲ್ಲಿ ಭೀಮಸೇನನ ಪ್ರಹಾರದಿಂದ ದುರ್ಯೋಧನನು ಮೂರ್ಛಿತನಾದೊಡನೆಯೇ ಕುರುಸೈನ್ಯವು ಕಂಗೆಟ್ಟು ಓಡಿಹೋಗಲು

ಪ್ರಾರಂಭಿಸುತ್ತದೆ. ಅದನ್ನು ಹಿಂದಿರುಗಿಸಲು ಭೀಷ್ಮ-ದ್ರೋಣರಿಗೂ ಸಾಧ್ಯವಾಗುವುದಿಲ್ಲ. ಮೂರ್ಛೆಯಿಂದ ಎಚ್ಚರಗೊಂಡ ದುರ್ಯೋಧನನು ತನ್ನ ಸೈನ್ಯವು ಛಿದ್ರ-ವಿಚ್ಛಿದ್ರವಾಗಿರುವುದನ್ನು ಕಂಡು ಭೀಷ್ಮನನ್ನು ಅವಹೇಳನ ಮಾಡುತ್ತಾನೆ. ಚುಚ್ಚುಮಾತುಗಳನ್ನಾಡುತ್ತಾನೆ. ದುರ್ಯೋಧನನಿಂದ ಚೋದಿತನಾದ ಭೀಷ್ಮನು ಪುನಃ ಪಾಂಡವರೊಡನೆ ಘೋರವಾದ ಯುದ್ಧವನ್ನು ಪ್ರಾರಂಭಿಸುತ್ತಾನೆ. ಪಾಂಡವರ ಸೈನ್ಯವು ನುಚ್ಚುನೂರಾಗುತ್ತದೆ. ಅರ್ಜುನನೇ ಭೀಷ್ಮನನ್ನು ಎದುರಿಸಿ ನಿಂತು ಯುದ್ಧಮಾಡಿದರೂ ಭೀಷ್ಮನ ಬಲವನ್ನು ಕುಗ್ಗಿಸುವುದಕ್ಕಾಗುವುದಿಲ್ಲ. ಅರ್ಜುನನ ಸಾರಥಿಯಾದ ಶ್ರೀಕೃಷ್ಣ ನಿಗೂ ಬಲವಾದ ಪೆಟ್ಟು ಬೀಳುತ್ತದೆ. ಆ ಸಮಯದಲ್ಲಿ ಶ್ರೀಕೃಷ್ಣನೇ ಬಹಳ ವಾಗಿ ಕೋಪಗೊಳ್ಳುತ್ತಾನೆ. ತಾನು ಸುಮ್ಮನಿದ್ದರೆ ಯುಧಿಷ್ಠಿರನ ಸೈನ್ಯವು ಒಂದೇ ದಿವಸದಲ್ಲಿ ನಾಶವಾಗುವುದೆಂಬ ನಿರ್ಧಾರಕ್ಕೆ ಬರುತ್ತಾನೆ. ಅರ್ಜುನನು ಮೃದುವಾಗಿ ಯುದ್ಧಮಾಡುತ್ತಿರುವನೆಂಬುದು ಶ್ರೀಕೃಷ್ಣನ ಅಭಿಪ್ರಾಯವಾಗಿರುತ್ತದೆ. ಚಕ್ರಪಾಣಿಯಾಗಿ ಎಲ್ಲರನ್ನೂ ಅಂದೇ ಸಂಹರಿಸಿಬಿಡಲು ನಿಶ್ಚಯಿಸಿ ಚಕ್ರವನ್ನು ಹಿಡಿದು ಭೀಷ್ಮನ ಸಂಹಾರಕ್ಕೆಂದು ಹೊರಟೇಬಿಡುತ್ತಾನೆ. ಆದರೆ ಅರ್ಜುನನು ಅದಕ್ಕೆ ಅವಕಾಶಕೊಡುವುದಿಲ್ಲ. ಶತ್ರುಗಳನ್ನು ಸಂಹಾರಮಾಡುವುದಾಗಿ ಪ್ರತಿಜ್ಞೆಮಾಡಿ ಶ್ರೀಕೃಷ್ಣನನ್ನು ಹಿಂದಕ್ಕೆ ಕರೆದೊಯ್ಯುತ್ತಾನೆ. ಅನಂತರ ಐಂದ್ರಾಸ್ತ್ರವನ್ನು ಪ್ರಯೋಗಿಸಿ ಕೌರವರ ಸೇನೆಯನ್ನು ಧೂಳೀಪಟಲಮಾಡಿಬಿಡುತ್ತಾನೆ. ಮೂರನೆಯ ದಿವಸ ಎರಡು ಕಡೆಗಳಲ್ಲಿಯೂ ಅಪಾರಸೈನ್ಯಗಳು ನಷ್ಟವಾದರೂ ಕೌರವರ ಕಡೆಯ ನಷ್ಟವೇ ಅಧಿಕ. ಹೆಸರಾಂತ ಯೋಧರಾರೂ ಮೂರನೆಯ ದಿವಸ ಸಾಯುವುದಿಲ್ಲ. ಇಲ್ಲಿಗೆ ಮೂರನೆಯ ದಿವಸದ ಯುದ್ಧವು ಮುಗಿಯುತ್ತದೆ.

ಭೀಷ್ಮರ ವಿಷಯದಲ್ಲಿ ದುರ್ಯೋಧನನು ಆಡಿದ ಚುಚ್ಚುಮಾತುಗಳು ಮತ್ತು ಶ್ರೀಕೃಷ್ಣನು ಕೌರವರನ್ನು ಸಂಹರಿಸಲು ನಿಶ್ಚಯಿಸಿ ಚಕ್ರಪಾಣಿಯಾಗಿ ಭೀಷ್ಮನ ಬಳಿಗೆ ಹೋದುದು–ಈ ಪ್ರಕರಣಗಳು ಹೃದಯಂಗಮವಾಗಿವೆ.

**೧೪ನೆಯ ಸಂಪುಟವು ಮುಗಿಯಿತು.**

ಶ್ರೀಕೃಷ್ಣಾರ್ಪಣಮಸ್ತು ಶ್ರೀ ಸದ್ಗುರುಚರಣಾರವಿನ್ದಾರ್ಪಣಮಸ್ತು
ಓಂ ತತ್ಸತ್

# ಪರಿಶಿಷ್ಟ

(ನಮ್ಮ ಪ್ರಿಯವಾಚಕರಿಗೆ ಭಗವದ್ಗೀತೆಯನ್ನು ಅರ್ಥಮಾಡಿಸಿಕೊಡಲು ಸಾಕಷ್ಟು ಪ್ರಯತ್ನಿಸಿದ್ದೇವೆ. ಪಾರಾಯಣಕ್ಕೆ ಸಂಬಂಧಿಸಿದಂತೆ ಕೆಲವು ಕ್ರಮಗಳನ್ನು ಕೊಡಲಿಚ್ಛಿಸಿದ್ದೇವೆ. ಭಗವದ್ಗೀತೆಯ ಪೂರ್ವಾಂಗ ವಿಧಿಯಲ್ಲಿ ಹಲವಾರು ಕ್ರಮಗಳಿವೆ. ನಮಗೆ ಲಬ್ಧವಾಗಿರುವುದನ್ನು ಇಲ್ಲಿ ಕೊಟ್ಟಿರುತ್ತೇವೆ. ಯಾವುದೇ ಸಂಪ್ರದಾಯಕ್ಕೂ ಸೇರದ ಗೀತಾಭ್ಯಾಸಿಗಳೂ ಇರಬಹುದು. ಅವರು ಇಲ್ಲಿ ಕೊಟ್ಟಿರುವ ಕೇವಲ ಪ್ರಾರ್ಥನಾಶ್ಲೋಕಗಳನ್ನೇ ಹೇಳಿ ಪಾರಾಯಣಮಾಡಬಹುದು. ಭಗವದ್ಗೀತೆಯು ಗುರೂಪದಿಷ್ಟವಾಗ ಬೇಕೆಂಬುದೂ ಒಂದು ಸತ್ಸಂಪ್ರದಾಯ. ಒಂದು ವೇಳೆ ಹಾಗೆ ಸಾಧ್ಯವಾಗ ದಿದ್ದರೆ ಪಾರಾಯಣವನ್ನೇ ಮಾಡಕೂಡದೆಂಬುದೇನೂ ಇಲ್ಲ. ಜಗದ್ಗುರು ವಾದ ಶ್ರೀಕೃಷ್ಣನನ್ನೇ ಗುರುವೆಂದು ಭಾವಿಸಿ, ಅವನನ್ನೇ ಹೃದಯಕಮಲದಲ್ಲಿ ನೆನೆದು, ಚಿತ್ರಪಟ ಅಥವಾ ವಿಗ್ರಹದ ಮೂಲಕವಾಗಿ ಅರ್ಚಿಸಿ, ಅವನೇ ಉಪದೇಶಮಾಡಿರುವನೆಂಬ ಭಾವನೆಯಿಂದ ಗೀತಾಪಾರಾಯಣವನ್ನು ಪ್ರಾರಂಭಿಸಬಹುದು. ಪಾರಾಯಣಮಾಡಲು ಮುಖ್ಯವಾಗಿರಬೇಕಾದುದು ಶ್ರದ್ಧೆ ಮತ್ತು ಭಕ್ತಿಗಳು. ಉಳಿದುವೆಲ್ಲವೂ ಗೌಣ. ಶ್ರದ್ಧೆ ಮತ್ತು ಭಕ್ತಿಗಳಿಂದ ಭಗವದ್ಗೀತೆಯ ಕಿಂಚಿದ್ಭಾಗವನ್ನು ಪಾರಾಯಣಮಾಡಿದರೂ ಅಂತಹವ ನೊಡನೆ ಯಮನೂ ವಾದಮಾಡುವುದಿಲ್ಲವೆಂಬುದು ಶ್ರೀಶಂಕರರ ಆದೇಶ ವಾಗಿದೆ. ಆದುದರಿಂದ ಎಲ್ಲರೂ ಇದರ ಪ್ರಯೋಜನವನ್ನು ಪಡೆದುಕೊಳ್ಳ ಬೇಕೆಂಬುದು ನಮ್ಮ ಆಶಯವಾಗಿದೆ.)

## ಗೀತಾಪಾರಾಯಣಕ್ರಮ-೧

(ಇದನ್ನು ಉಪದೇಶರೂಪವಾಗಿ ಪಡೆಯಬೇಕೆಂಬುದು ಶಿಷ್ಟಸಂಪ್ರದಾಯ.)

ಓಂ ಅಸ್ಯ ಶ್ರೀಮದ್ಭಗವದ್ಗೀತಾಮಾಲಾಮಂತ್ರಸ್ಯ । ಭಗವಾನ್ ವೇದ ವ್ಯಾಸ ಋಷಿಃ । ಅನುಷ್ಟುಪ್ ಛಂದಃ । ಶ್ರೀಕೃಷ್ಣಃ ಪರಮಾತ್ಮಾ ದೇವತಾ । ಅಶೋಚ್ಯಾನನ್ವಶೋಚಸ್ತ್ವಂ ಪ್ರಜ್ಞಾವಾದಾಂಶ್ಚ ಭಾಷಸ ಇತಿ ಬೀಜಮ್ । ಸರ್ವಧರ್ಮಾನ್ಪರಿತ್ಯಜ್ಯ ಮಾಮೇಕಂ ಶರಣಂ ವ್ರಜೇತಿ ಶಕ್ತಿಃ । ಅಹಂ ತ್ವಾ ಸರ್ವಪಾಪೇಭ್ಯೋ ಮೋಕ್ಷಯಿಷ್ಯಾಮಿ ಮಾ ಶುಚ ಇತಿ ಕೀಲಕಂ । ನೈನಂ

ಛಿನ್ದನ್ತಿ ಶಸ್ತ್ರಾಣಿ ನೈನಂ ದಹತಿ ಪಾವಕಃ ಇತ್ಯಂಗುಷ್ಠಾಭ್ಯಾಂ ನಮಃ। ನ ಚೈನಂ ಕ್ಲೇದಯನ್ತ್ಯಾಪೋ ನ ಶೋಷಯತಿ ಮಾರುತಃ ಇತಿ ತರ್ಜನೀಭ್ಯಾಂ ನಮಃ। ಅಚ್ಛೇದ್ಯೋಽಯಮದಾಹ್ಯೋಽಯಮಕ್ಲೇದ್ಯೋಽಶೋಷ್ಯ ಏವ ಚೇತಿ ಮಧ್ಯಮಾಭ್ಯಾಂ ನಮಃ। ನಿತ್ಯಃ ಸರ್ವಗತಃ ಸ್ಥಾಣುರಚಲೋಽಯಂ ಸನಾತನಃ ಇತಿ ಅನಾಮಿಕಾಭ್ಯಾಂ ನಮಃ। ಪಶ್ಯ ಮೇ ಪಾರ್ಥ ರೂಪಾಣಿ ಶತಶೋಽಥ ಸಹಸ್ರಶಃ ಇತಿ ಕನಿಷ್ಠಿಕಾಭ್ಯಾಂ ನಮಃ। ನಾನಾವಿಧಾನಿ ದಿವ್ಯಾನಿ ನಾನಾವರ್ಣಾಕೃತೀನಿ ಚೇತಿ ಕರತಲಕರಪೃಷ್ಠಾಭ್ಯಾಂ ನಮಃ ॥ ನೈನಂ ಛಿನ್ದನ್ತಿ ಶಸ್ತ್ರಾಣಿ ನೈನಂ ದಹತಿ ಪಾವಕಃ– ಇತಿ ಹೃದಯಾಯ ನಮಃ ॥ ನ ಚೈನಂ ಕ್ಲೇದಯನ್ತ್ಯಾಪೋ ನ ಶೋಷಯತಿ ಮಾರುತಃ– ಇತಿ ಶಿರಸೇ ಸ್ವಾಹಾ। ಅಚ್ಛೇದ್ಯೋಽಯಮದಾಹ್ಯೋಽಯಮಕ್ಲೇದ್ಯೋಽಶೋಷ್ಯ ಏವ ಚೇತಿ ಶಿಖಾಯೈ ವಷಟ್। ನಿತ್ಯಃ ಸರ್ವಗತಃ ಸ್ಥಾಣುರಚಲೋಽಯಂ ಸನಾತನಃ ಇತಿ ಕವಚಾಯ ಹುಂ। ಪಶ್ಯ ಮೇ ಪಾರ್ಥ ರೂಪಾಣಿ ಶತಶೋಽಥ ಸಹಸ್ರಶಃ ಇತಿ ನೇತ್ರತ್ರಯಾಯ ವೌಷಟ್। ನಾನಾವಿಧಾನಿ ದಿವ್ಯಾನಿ ನಾನಾ ವರ್ಣಾಕೃತೀನಿ ಚೇತಿ ಅಸ್ತ್ರಾಯ ಫಟ್ ॥ ಭೂರ್ಭುವಸ್ಸುವರೋಮಿತಿದಿಗ್ಬಂಧಃ। ಶ್ರೀಕೃಷ್ಣಪ್ರೀತ್ಯರ್ಥೇ ಶ್ರೀಮದ್ಭಗವದ್ಗೀತಾಮಾಲಾಮನ್ತ್ರಜಪೇ ವಿನಿಯೋಗಃ

---

## ಧ್ಯಾನಂ

**ಪಾರ್ಥಾಯ ಪ್ರತಿಬೋಧಿತಾಂ ಭಗವತಾ ನಾರಾಯಣೇನ ಸ್ವಯಂ**
**ವ್ಯಾಸೇನ ಗ್ರಥಿತಾಂ ಪುರಾಣಮುನಿನಾ ಮಧ್ಯೇಮಹಾಭಾರತಮ್ ।**
**ಅದ್ವೈತಾಮೃತವರ್ಷಿಣೀಂ ಭಗವತೀಮಷ್ಟಾದಶಾಧ್ಯಾಯಿನೀಂ**
**ಅಮ್ಬ ತ್ವಾಮನುಸಂದಧಾಮಿ ಭಗವದ್ಗೀತೇ ಭವದ್ವೇಷಿಣೀಮ್ ॥**

**ನಮೋಽಸ್ತು ತೇ ವ್ಯಾಸ ವಿಶಾಲಬುದ್ಧೇ**
**ಫುಲ್ಲಾರವಿನ್ದಾಯತಪತ್ರನೇತ್ರ ।**
**ಯೇನ ತ್ವಯಾ ಭಾರತತೈಲಪೂರ್ಣಃ**
**ಪ್ರಜ್ವಾಲಿತೋ ಜ್ಞಾನಮಯಃ ಪ್ರದೀಪಃ ॥೨॥**

ಪ್ರಪನ್ನಪಾರಿಜಾತಾಯ ತೋತ್ರವೇತ್ರೈಕಪಾಣಯೇ ।
ಜ್ಞಾನಮುದ್ರಾಯ ಕೃಷ್ಣಾಯ ಗೀತಾಮೃತದುಹೇ ನಮಃ ॥೩॥

ಸರ್ವೋಪನಿಷದೋ ಗಾವೋ ದೋಗ್ಧಾ ಗೋಪಾಲನನ್ದನಃ ।
ಪಾರ್ಥೋ ವತ್ಸಃ ಸುಧೀರ್ಭೋಕ್ತಾ ದುಗ್ಧಂ ಗೀತಾಮೃತಂ
ಮಹತ್ ॥೪॥

ವಸುದೇವಸುತಂ ದೇವಂ ಕಂಸಚಾಣೂರಮರ್ದನಮ್ ।
ದೇವಕೀಪರಮಾನನ್ದಂ ಕೃಷ್ಣಂ ವನ್ದೇ ಜಗದ್ಗುರುಮ್ ॥೫॥

ಭೀಷ್ಮದ್ರೋಣತಟಾ ಜಯದ್ರಥಜಲಾ ಗಾನ್ಧಾರನೀಲೋತ್ಪಲಾ
ಶಲ್ಯಗ್ರಾಹವತೀ ಕೃಪೇಣ ವಹಿನೀ ಕರ್ಣೇನ ವೇಲಾಕುಲಾ ।
ಅಶ್ವತ್ಥಾಮವಿಕರ್ಣಘೋರಮಕರಾ ದುರ್ಯೋಧನಾವರ್ತಿನೀ
ಸೋತ್ತೀರ್ಣಾ ಖಲು ಪಾಣ್ಡವೈ ರಣನದೀ ಕೈವರ್ತಕಃ ಕೇಶವಃ ॥

ಪಾರಾಶರ್ಯವಚಃ ಸರೋಜಮಮಲಂ ಗೀತಾರ್ಥಗನ್ಧೋತ್ಕಟಂ
ನಾನಾಖ್ಯಾನಕಕೇಸರಂ ಹರಿಕಥಾಸಂಬೋಧನಾಬೋಧಿತಮ್ ।
ಲೋಕೇ ಸಜ್ಜನಷಟ್ಪದೈರಹರಹಃ ಪೇಪೀಯಮಾನಂ ಮುದಾ
ಭೂಯಾದ್ಭಾರತಪಙ್ಕಜಂ ಕಲಿಮಲಪ್ರಧ್ವಂಸಿ ನಃ ಶ್ರೇಯಸೇ ॥೭॥

ಮೂಕಂ ಕರೋತಿ ವಾಚಾಲಂ ಪಙ್ಗುಂ ಲಙ್ಘಯತೇ ಗಿರಿಮ್ ।
ಯತ್ಕೃಪಾ ತಮಹಂ ವನ್ದೇ ಪರಮಾನನ್ದಮಾಧವಮ್ ॥೮॥

ಯಂ ಬ್ರಹ್ಮಾವರುಣೇನ್ದ್ರರುದ್ರಮರುತಃ ಸ್ತುನ್ವನ್ತಿ ದಿವ್ಯೈಃಸ್ತವೈ-
ರ್ವೇದೈಃ ಸಾಙ್ಗಪದಕ್ರಮೋಪನಿಷದೈರ್ಗಾಯನ್ತಿ ಯಂ ಸಾಮಗಾಃ ।
ಧ್ಯಾನಾವಸ್ಥಿತತದ್ಗತೇನ ಮನಸಾ ಪಶ್ಯನ್ತಿ ಯಂ ಯೋಗಿನೋ
ಯಸ್ಯಾನ್ತಂ ನ ವಿದುಃ ಸುರಾಸುರಗಣಾ ದೇವಾಯ ತಸ್ಮೈ ನಮಃ ॥

## ಗೀತಾಪಾರಾಯಣಕ್ರಮ-೨

ವನ್ದೇ ಗುರೂಣಾಂ ಚರಣಾರವಿನ್ದೇ ಸಂದರ್ಶಿತಸ್ವಾತ್ಮಸುಖಾವಬೋಧೇ ।
ಜನಸ್ಯಯೇ ಜಾಙ್ಗಲಿಕಾಯಮಾನೇ ಸಂಸಾರಹಾಲಾಹಲಮೋಹಶಾನ್ತ್ಯೈ ॥

ವನ್ದೇ ಗುರುಪದದ್ವನ್ದ್ವಮವಾಙ್ಮಾನಸಗೋಚರಮ್ ।
ರಕ್ತಶುಕ್ಲಪ್ರಭಾಮಿಶ್ರಮತರ್ಕ್ಯಂ ತ್ರೈಪುರಂ ಮಹಃ ॥೨॥

ಶ್ರೀಮದ್ಭಗವದ್ಗೀತಾಪೂರ್ವಪೀಠಿಕಾ

ರಾಮಾನುಜದಯಾಪಾತ್ರಂ ಜ್ಞಾನವೈರಾಗ್ಯಭೂಷಣಮ್ ।
ಶ್ರೀಮದ್ವೇಙ್ಕಟನಾಥಾರ್ಯಂ ವನ್ದೇ ವೇದಾನ್ತದೇಶಿಕಮ್ ॥೩॥
ಶ್ರೀ ಶೈಲೇಶದಯಾಪಾತ್ರಂ ಧೀಭಕ್ತ್ಯಾದಿ ಗುಣಾರ್ಣವಮ್ ।
ಯತೀನ್ದ್ರಪ್ರವಣಂ ವನ್ದೇ ರಮ್ಯಜಾಮಾತರಂ ಮುನಿಮ್ ॥೪॥
ಲಕ್ಷ್ಮೀನಾಥಸಮಾರಮ್ಭಾಂ ನಾಥಯಾಮುನಮಧ್ಯಮಾಮ್ ।
ಅಸ್ಮದಾಚಾರ್ಯಪರ್ಯನ್ತಾಂ ವನ್ದೇ ಗುರುಪರಂಪರಾಮ್ ॥೫॥
ಅಸ್ಮದ್ಗುರುಸಮಾರಮ್ಭಾಂ ನಾಥಯಾಮುನಮಧ್ಯಮಾಮ್ ।
ಲಕ್ಷ್ಮೀವಲ್ಲಭಪರ್ಯನ್ತಾಂ ವನ್ದೇ ಗುರುಪರಂಪರಾಮ್ ॥೬॥
ಇತ್ಯಾದಿ ತತ್ತತ್ಸಂಪ್ರದಾಯಾನುಗುಣಗುರುಪರಂಪರಾನುಸಂಧಾನಾನಂತರಮ್ ಅನುಸಂಧೇಯಾಃ ಸ್ತೋತ್ರಶ್ಲೋಕಾಃ :–

ಶುಕ್ಲಾಮ್ಬರಧರಂ ವಿಷ್ಣುಂ ಶಶಿವರ್ಣಂ ಚತುರ್ಭುಜಮ್ ।
ಪ್ರಸನ್ನವದನಂ ಧ್ಯಾಯೇತ್ಸರ್ವವಿಘ್ನೋಪಶಾನ್ತಯೇ ॥೧॥

ಯಸ್ಯ ದ್ವಿರದವಕ್ತ್ರಾದ್ಯಾಃ ಪಾರಿಷದ್ಯಾಃ ಪರಃಶತಮ್ ।
ವಿಘ್ನಂ ನಿಘ್ನನ್ತಿ ಸತತಂ ವಿಷ್ವಕ್ಸೇನಂ ತಮಾಶ್ರಯೇ ॥೨॥

ಸಮ್ಯಙ್ನ್ಯಾಯಕಲಾಪೇನ ಮಹತಾ ಭಾರತೇನ ಚ ।
ಉಪಬೃಂಹಿತವೇದಾಯ ನಮೋ ವ್ಯಾಸಾಯ ವಿಷ್ಣವೇ ॥೩॥
ವ್ಯಾಸಂ ವಸಿಷ್ಠನಪ್ತಾರಂ ಶಕ್ತೇಃ ಪೌತ್ರಮಕಲ್ಮಷಮ್ ।
ಪರಾಶರಾತ್ಮಜಂ ವನ್ದೇ ಶುಕತಾತಂ ತಪೋನಿಧಿಮ್ ॥೪॥
ವ್ಯಾಸಾಯ ವಿಷ್ಣುರೂಪಾಯ ವ್ಯಾಸರೂಪಾಯ ವಿಷ್ಣವೇ ।
ನಮೋ ವೈ ಬ್ರಹ್ಮನಿಧಯೇ ವಾಸಿಷ್ಠಾಯ ನಮೋ ನಮಃ ॥೫॥
ಮುನಿಂ ಸ್ನಿಗ್ಧಾಮ್ಬುದಾಭಾಸಂ ವೇದವ್ಯಾಸಮಕಲ್ಮಷಮ್ ।
ವೇದವ್ಯಾಸಂ ಸರಸ್ವತ್ಯಾವಾಸಂ ವ್ಯಾಸಂ ನಮಾಮ್ಯಹಮ್ ॥೬॥

ಅಚತುರ್ವದನೋ ಬ್ರಹ್ಮಾ ದ್ವಿಬಾಹುರಪರೋ ಹರಿಃ ।
ಅಫಾಲಲೋಚನಃ ಶಮ್ಭುರ್ಭಗವಾನ್ಬಾದರಾಯಣಃ ॥೭॥

ಕೃಷ್ಣಂ ಕಮಲಪತ್ರಾಕ್ಷಂ ಪುಣ್ಯಶ್ರವಣಕೀರ್ತನಮ್ ।
ವಾಸುದೇವಂ ಜಗದ್ಯೋನಿಂ ನೌಮಿ ನಾರಾಯಣಂ ಹರಿಮ್ ॥೮॥

ಕೃಷ್ಣಾಯ ಯಾದವೇನ್ದ್ರಾಯ ಜ್ಞಾನಮುದ್ರಾಯ ಯೋಗಿನೇ ।
ನಾಥಾಯ ರುಕ್ಮಿಣೀಶಾಯ ನಮೋ ವೇದಾನ್ತವೇದಿನೇ ॥೯॥

ಪ್ರಪನ್ನಪಾರಿಜಾತಾಯ ತೋತ್ರವೇತ್ರೈಕಪಾಣಯೇ ।
ಜ್ಞಾನಮುದ್ರಾಯ ಕೃಷ್ಣಾಯ ಗೀತಾಮೃತದುಹೇ ನಮಃ ॥೧೦॥

ಸಾರಥ್ಯಮರ್ಜುನಸ್ಯಾಜೌ ಕುರ್ವನ್ಗೀತಾಮೃತಂ ದದೌ ।
ಲೋಕಾನಾಮುಪಕಾರಾಯ ತಸ್ಮೈ ಕೃಷ್ಣಾತ್ಮನೇ ನಮಃ ॥೧೧॥

ಸರ್ವೋಪನಿಷದೋ ಗಾವೋ ದೋಗ್ಧಾ ಗೋಪಾಲನನ್ದನಃ ।
ಪಾರ್ಥೋ ವತ್ಸಸ್ಸುಧೀರ್ಭೋಕ್ತಾ ದುಗ್ಧಂ ಗೀತಾಮೃತಂ ಮಹತ್ ॥೧೨॥

ಪಾರ್ಥಾಯ ಪ್ರತಿಬೋಧಿತಾಂ ಭಗವತಾ ನಾರಾಯಣೇನ ಸ್ವಯಂ
ವ್ಯಾಸೇನ ಗ್ರಥಿತಾಂ ಪುರಾಣಮುನಿನಾ ಮಧ್ಯೇಮಹಾಭಾರತಮ್ ।
ಅದ್ವೈತಾಮೃತವರ್ಷಿಣೀಂ ಭಗವತೀಮಷ್ಟಾದಶಾಧ್ಯಾಯಿನೀ-
ಮಮ್ಬ ತ್ವಾಮನುಸನ್ದಧಾಮಿ ಭಗವದ್ಗೀತೇ ಭವದ್ವೇಷಿಣೀಮ್ ॥೧೩॥

ಗೀತಾಶಾಸ್ತ್ರಮಿದಂ ಪುಣ್ಯಂ ಯಃ ಪಠೇತ್ಪ್ರಯತಃ ಪುಮಾನ್ ।
ವಿಷ್ಣೋಃ ಪದಮವಾಪ್ನೋತಿ ಭಯಶೋಕಾದಿವರ್ಜಿತಃ ॥೧೪॥

ಭಾರತಾಮೃತಸರ್ವಸ್ವಂ ವಿಷ್ಣೋರ್ವಕ್ತ್ರಾದ್ವಿನಿಃಸೃತಮ್ ।
ಗೀತಾಗಙ್ಗೋದಕಂ ಪೀತ್ವಾ ಪುನರ್ಜನ್ಮ ನ ವಿದ್ಯತೇ ॥೧೫॥

ಗೀತಾಸುಗೀತಾ ಕರ್ತವ್ಯಾ ಕಿಮನ್ಯೈಃ ಶಾಸ್ತ್ರಸಂಗ್ರಹೈಃ ।
ಯಾ ಸ್ವಯಂ ಪದ್ಮನಾಭಸ್ಯ ಮುಖಪದ್ಮಾದ್ವಿನಿಃಸೃತಾ ॥೧೬॥

ಗೀತಾಧ್ಯಯನಶೀಲಸ್ಯ ಪ್ರಾಣಾಯಾಮಪರಸ್ಯ ಚ ।
ನೈವ ಸನ್ತಿ ಹಿ ಪಾಪಾನಿ ಪೂರ್ವಜನ್ಮಕೃತಾನ್ಯಪಿ ॥೧೭॥

ಅಕೃತ್ಯಮಪಿ ಕುರ್ವಾಣೋ ಭುಞ್ಜಾನೋ ವಾ ಯತಸ್ತತಃ ।
ಘೋರಂ ವೈವಸ್ವತಸ್ಥಾನಂ ಗೀತಾಧ್ಯಾಯೀ ನ ಪಶ್ಯತಿ ॥೧೮॥

ಮಲನಿರ್ಮೋಚನಂ ಪುಂಸಾಂ ಜಲಸ್ನಾನಂ ದಿನೇ ದಿನೇ ।
ಸಕೃದ್ಗೀತಾಮ್ಭಸಿ ಸ್ನಾನಂ ಸಂಸಾರಮಲಮೋಚನಮ್ ॥೧೯॥

ಶ್ಲೋಕಮೇಕಂ ತದರ್ಧಂ ವಾ ಪಾದಂ ಪಾದಾರ್ಧಮೇವ ವಾ ।
ನಿತ್ಯಂ ಪಠತಿ ಯೋ ಭಕ್ತ್ಯಾ ಸ ಮೋಕ್ಷಮಧಿಗಚ್ಛತಿ ॥೨೦॥

ಸರ್ವಶಾಸ್ತ್ರಮಯೀ ಗೀತಾ ಸರ್ವವೇದಮಯೋ ಹರಿಃ ।
ಸರ್ವತೀರ್ಥಮಯೀ ಗಙ್ಗಾ ಸರ್ವಧರ್ಮಮಯೋ ಮನುಃ ॥೨೧॥

ಏಕಂ ಶಾಸ್ತ್ರಂ ದೇವಕೀಪುತ್ರಗೀತಂ ಏಕೋ ದೇವೋ ದೇವಕಿಪುತ್ರ ಏವ ।
ಏಕೋ ಮನ್ತ್ರೋ ದೇವಕೀಪುತ್ರನಾಮಾ ಕರ್ಮಾಪ್ಯೇಕಂ ದೇವಕೀ
ಪುತ್ರಸೇವಾ ॥೨೨॥

## ಅಥ ನ್ಯಾಸಃ

ಹರಿಃ ಓಂ ।ಅಸ್ಯ ಶ್ರೀಭಗವದ್ಗೀತಾಶಾಸ್ತ್ರಮಹಾಮಂತ್ರಸ್ಯ ।ವೇದವ್ಯಾಸೋ ಭಗವಾನ್ ಋಷಿಃ–ಅನುಷ್ಟುಪ್‌ಛನ್ದಃ ಶ್ರೀಕೃಷ್ಣಃ ಪರಮಾತ್ಮಾ ದೇವತಾ । ಅಶೋಚ್ಯಾನನ್ವಶೋಚಸ್ತ್ವಮಿತಿ ಬೀಜಂ । ಸರ್ವಧರ್ಮಾನ್ ಪರಿತ್ಯಜ್ಯ ಮಾಮೇಕಂ ಶರಣಂ ವ್ರಜೇತಿ ಶಕ್ತಿಃ । ಅಹಂ ತ್ವಾ ಸರ್ವಪಾಪೇಭ್ಯೋ ಮೋಕ್ಷಯಿಷ್ಯಾಮಿ ಮಾ ಶುಚ ಇತಿ ಕೀಲಕಂ । ಮಚ್ಚಿತ್ತಸ್ಸರ್ವದುರ್ಗಾಣಿ ಮತ್ಪ್ರಸಾದಾತ್ತರಿಷ್ಯಸೀತಿ ಕವಚಂ । ಕಿರೀಟಿನಂ ಗದಿನಂ ಚಕ್ರಹಸ್ತಮಿತ್ಯಸ್ತ್ರಂ । ಅನಾದಿಮಧ್ಯಾನ್ತಮನನ್ತವೀರ್ಯಮಿತಿ ಧ್ಯಾನಂ । ಜ್ಞಾನಯಜ್ಞೇನ ಭಗವದಾರಾಧನಾರ್ಥೇ ಗೀತಾಪಾರಾಯಣೇ (ಜಪೇ) ವಿನಿಯೋಗಃ॥ ಹರಿಃ ಓಂ

ಓಂ ಜ್ಞಾನಾತ್ಮನೇ ಶ್ರೀಕೃಷ್ಣಾಯ ಅಂಗುಷ್ಠಾಭ್ಯಾಂ ನಮಃ ।
ಓಂ ಐಶ್ವರ್ಯಾತ್ಮನೇ ಗೋವಿನ್ದಾಯ ತರ್ಜನಿಭ್ಯಾಂ ನಮಃ ।
ಓಂ ಶಕ್ತ್ಯಾತ್ಮನೇ ವೇದವ್ಯಾಸಾಯ ಮಧ್ಯಮಾಭ್ಯಾಂ ನಮಃ ।
ಓಂ ಬಲಾತ್ಮನೇ ಬಲಭದ್ರಾಯ ಅನಾಮಿಕಾಭ್ಯಾಂ ನಮಃ ।
ಓಂ ತೈಜಸಾತ್ಮನೇ ವಾಸುದೇವಾಯ ಕನಿಷ್ಠಿಕಾಭ್ಯಾಂ ನಮಃ ।
ಓಂ ವೀರ್ಯಾತ್ಮನೇ ಗಾಣ್ಡೀವಧನ್ವನೇ ಅರ್ಜುನಾಯ ಕರತಲ
ಕರಪೃಷ್ಠಾಭ್ಯಾಂ ನಮಃ ।

ಓಂ ಜ್ಞಾನಾತ್ಮನೇ ಶ್ರೀಕೃಷ್ಣಾಯ ಹೃದಯಾಯ ನಮಃ ।
ಓಂ ಐಶ್ವರ್ಯಾತ್ಮನೇ ಗೋವಿನ್ದಾಯ ಶಿರಸೇ ಸ್ವಾಹಾ ।
ಓಂ ಶಕ್ತ್ಯಾತ್ಮನೇ ವೇದವ್ಯಾಸಾಯ ಶಿಖಾಯೈ ವಷಟ್ ।
ಓಂ ಬಲಾತ್ಮನೇ ಬಲಭದ್ರಾಯ ಕವಚಾಯ ಹುಂ ।
ಓಂ ತೈಜಸಾತ್ಮನೇ ವಾಸುದೇವಾಯ ನೇತ್ರತ್ರಯಾಯ ವೌಷಟ್ ।
ಓಂ ವೀರ್ಯಾತ್ಮನೇ ಗಾಣ್ಡೀವಧನ್ವನೇ ಅರ್ಜುನಾಯ ಅಸ್ತ್ರಾಯ ಫಟ್
ಭೂರ್ಭುವಸ್ಸುವರೋಮಿತಿ ದಿಗ್ಬಂಧಃ–ಅಥ ಧ್ಯಾನಮ್

**ಕರಕಮಲನಿದರ್ಶಿತಾತ್ಮಮುದ್ರಃ**
**ಪರಿಕಲಿತೋನ್ನತಬರ್ಹಿಬರ್ಹಚೂಡಃ ।**
**ಅಪರಕರಗೃಹೀತವೇತ್ರತೋತ್ರೋ**
**ಮಮ ಹೃದಿ ಸನ್ನಿಧಿಮಾತನೋತು ಶೌರಿಃ ॥೧॥**

**ಆತಾಮ್ರಪಾಣಿಕಮಲಪ್ರಣಯಪ್ರತೋದ–**
**ಮಾಲೋಲಹಾರಮಣಿಕುಣ್ಡಲಹೇಮಸೂತ್ರಮ್ ।**
**ಆವಿಶ್ರಮಾಮ್ಬುಕಣಮಮ್ಬುದನೀಲಮವ್ಯಾ–**
**ದಾದ್ಯಂ ಧನಂಜಯರಥಾಭರಣಂ ಮಹೋ ನಃ ॥೨॥**

**ಅಗ್ರೇ ಕೃತ್ವಾ ಕಮಪಿ ಚರಣಂ ಜಾನುನೈಕೇನ ತಿಷ್ಠನ್**
**ಪಶ್ಚಾತ್ಪಾರ್ಥಂ ಪ್ರಣಯಸಜುಷಾ ಚಕ್ಷುಷಾವೇಕ್ಷಮಾಣಃ ।**
**ಸವ್ಯೇ ತೋತ್ರಂ ಕರಸರಸಿಜೇ ದಕ್ಷಿಣೇ ಜ್ಞಾನಮುದ್ರಾ–**
**ಮಾಭಿಭ್ರಾಣೋ ರಥಮಧಿವಸನ್ಪಾತು ನಃ ಸೂತವೇಷಃ ॥೩॥**

**ವನ್ದೇ ಕೃಷ್ಣಾರ್ಜುನೌ ವೀರೌ ನರನಾರಾಯಣಾವುಭೌ ।**
**ಧೃತರಾಷ್ಟ್ರಸುತೋನ್ಮತ್ತಗಜಾರೋಹಣವಲ್ಲಭೌ ॥೪॥**

**ಅನಂತರ ಗೀತಾಪಾರಾಯಣವನ್ನು ಪ್ರಾರಂಭಿಸುವುದು**

ಶುಚಿರಾಸನೇ ಉಪವಿಶ್ಯ–ಆಚಮ್ಯ–ಪ್ರಾಣಾನಾಯಮ್ಯ–ಸಂಕಲ್ಪ್ಯ ಸ್ವಾಚಾರ್ಯಪರಂಪರಾಮನುಸಂಧಾಯ–ಯಥೋಪದೇಶಂ ನ್ಯಾಸ ಜಪಾದಿಕಂ ಕುರ್ಯಾತ್ ॥

## ಗೀತಾಪಾರಾಯಣಕ್ರಮ–೩

ಶುಚಿರಾಸನೇ ಉಪವಿಶ್ಯ ಪ್ರಾಣಾನಾಯಮ್ಯ–ದೇಶಕಾಲೌ ಸಂಕೀರ್ತ್ಯ ಮಮೋಪಾತ್ತ ಸಮಸ್ತದುರಿತಕ್ಷಯದ್ವಾರಾ ಶ್ರೀಪರಮೇಶ್ವರಪ್ರೀತ್ಯರ್ಥಂ ಕರಿಷ್ಯಮಾಣಸ್ಯ ಗೀತಾಶಾಸ್ತ್ರಾನುಷ್ಠಾನರೂಪಸ್ಯ–ವಾಚಕಯಜ್ಞಸ್ಯ ಸವೀರ್ಯತ್ವಸಾಫಲ್ಯಸಿಧ್ಯರ್ಥಂ ತತ್ಪ್ರಯುಕ್ತಭಗವತ್ಪ್ರಸಾದೇನ ಸತ್ಕರ್ಮ ಭಕ್ತಿ ಜ್ಞಾನಸಿದ್ಧಿದ್ವಾರಾ ಮೋಕ್ಷಸಿದ್ಧ್ಯರ್ಥಂ ಶ್ರೀಭಗವದ್ಗೀತಾಪಠನತದರ್ಥ ಶ್ರವಣಮನನನಿಧಿಧ್ಯಾಸನಾಂಗಭೂತಂ ಶ್ರೀಗೀತಾಮಂತ್ರಜಪಂ ಕರಿಷ್ಯೇ ಇತಿ ಸಂಕಲ್ಪ್ಯ .

ಅಸ್ಯ ಶ್ರೀಭಗವದ್ಗೀತಾಶಾಸ್ತ್ರಮಹಾಮಂತ್ರಸ್ಯ । ವ್ಯಾಸಾರ್ಜುನ ಹನೂಮತ್ಸಂಜಯಾದಯೋ ಮಹರ್ಷಯಃ । ಶ್ರೀಕೃಷ್ಣಃ ಸರ್ವಾತ್ಮಾ ಸಚ್ಚಿದಾನನ್ದಘನಃ ಪರಮೇಶ್ವರೋ ದೇವತಾ । ಅನುಷ್ಟುಬಾದೀನಿ ಛಂದಾಂಸಿ । ಓಂ ಬೀಜಂ–ಹ್ರೀಂ ಶಕ್ತಿಃ-ಕ್ಲೀಂ ಕೀಲಕಂ–ಶ್ರೀಕೃಷ್ಣಪ್ರಸಾದಸಿದ್ಧ್ಯರ್ಥೇ ಸಂಕಲ್ಪಸಫಲಾವಾಪ್ತ್ಯರ್ಥೇ ಚ ಜಪೇ ವಿನಿಯೋಗಃ

ಧರ್ಮಕ್ಷೇತ್ರೇ ಕುರುಕ್ಷೇತ್ರ ಇತಿ ಭೂಮೌ । ತಂ ತಥಾ ಕೃಪಯಾವಿಷ್ಟ ಮಿತಿ ಹೃದಯೇ । ಜ್ಯಾಯಸೀ ಚೇತ್ಕರ್ಮಣಸ್ತೇ ಮತಾ ಬುದ್ಧಿರಿತಿ ಕ್ರಿಯಾಯಾಂ । ಇಮಂ ವಿವಸ್ವತೇ ಯೋಗಮಿತಿ ಪ್ರಯತ್ನೇ । ಸಂನ್ಯಾಸಃ ಕರ್ಮಣಾಮಿತಿ ಸಂಕಲ್ಪೇ । ಅನಾಶ್ರಿತಃ ಕರ್ಮಫಲಮಿತಿ ನಿಶ್ಚಯೇ । ಮಯಾಸಕ್ತಮನಾ ಇತಿ ಭಾವನಾಯಾಂ । ಕಿಂ ತದ್ಬ್ರಹ್ಮೇತಿ ಜಿಜ್ಞಾಸಾಯಾಂ । ಇದಂ ತು ತೇ ಗುಹ್ಯತಮಂ ಪ್ರವಕ್ಷ್ಯಾಮೀತಿ ದಕ್ಷಿಣಶ್ರೋತ್ರೇ । ಭೂಯ ಏವ ಮಹಾಬಾಹೋ ಶೃಣು ಮೇ ಪರಮಂ ವಚಃ ಇತಿ ವಾಮಶ್ರೋತ್ರೇ । ಮದನುಗ್ರಹಾಯ ಪರಮಂ ಇತ್ಯಾತ್ಮನಿ । ಏವಂ ಸತತಯುಕ್ತಾ ಯೇ ಇತಿ ಧ್ಯಾನೇ । ಇದಂ ಶರೀರಮಿತಿ ಗೇಹೇ । ಜ್ಞಾನಾನಾಂ ಜ್ಞಾನಮುತ್ತಮಮಿತಿ ಬುದ್ಧೌ । ಊರ್ಧ್ವಮೂಲಮಧಃ ಶಾಖಮಶ್ವತ್ಥಮಿತಿ ಲಕ್ಷ್ಯೇ । ಅಭಯಂ ಸತ್ತ್ವಸಂಶುದ್ಧಿರಿತಿ ಸಂಪದಿ । ಯೇ ಶಾಸ್ತ್ರವಿಧಿಮುತ್ಸೃಜ್ಯೇತಿ ಕಾಮ್ಯೇ । ಸಂನ್ಯಾಸಸ್ಯ ಮಹಾಬಾಹೋ ತತ್ತ್ವಮಿತಿ ಕರ್ತವ್ಯೇ ಚಾನುಸನ್ಧಾಯ ನ್ಯಸೇತ್-ಇತ್ಯಷ್ಟಾದಶನ್ಯಾಸ ಕ್ರಮಃ ॥ ವ್ಯಾಹೃತಿಪ್ರಣವೈರ್ದಿಗ್ಬಂಧಃ । ಇತಿ ಸಮಗ್ರಸಂಹಿತಾಂ ವಿನ್ಯಸೇತ್ ಅಥ ಮುಖ್ಯಮಂತ್ರನ್ಯಾಸಃ

ಸರ್ವಧರ್ಮಾನ್ಪರಿತ್ಯಜ್ಯ–ಅಂಗುಷ್ಠಾಭ್ಯಾಂ ನಮಃ। ಮಾಮೇಕಂ ಶರಣಂ ವ್ರಜ–ತರ್ಜನೀಭ್ಯಾಂ ನಮಃ । ಅಹಂ–ಮಧ್ಯಮಾಭ್ಯಾಂ ನಮಃ । ತ್ವಾಂ ಅನಾಮಿಕಾಭ್ಯಾಂ ನಮಃ । ಸರ್ವಪಾಪೇಭ್ಯೋ ಮೋಕ್ಷಯಿಷ್ಯಾಮಿ–ಕನಿಷ್ಠಿಕಾಭ್ಯಾಂ ನಮಃ । ಮಾ ಶುಚಃ–ಕರತಲಕರಪೃಷ್ಠಾಭ್ಯಾಂ ನಮಃ । ಸರ್ವಧರ್ಮಾನ್ ಪರಿತ್ಯಜ್ಯ–ಹೃದಯಾಯ ನಮಃ। ಮಾಮೇಕಂ ಶರಣಂ ವ್ರಜ–ಶಿರಸೇ ಸ್ವಾಹಾ । ಅಹಂ–ಶಿಖಾಯೈ ವಷಟ್ । ತ್ವಾಂ–ಕವಚಾಯ ಹುಂ। ಸರ್ವಪಾಪೇಭ್ಯೋ ಮೋಕ್ಷಯಿಷ್ಯಾಮಿ-ನೇತ್ರತ್ರಯಾಯ ವೌಷಟ್ । ಮಾ ಶುಚಃ–ಅಸ್ತ್ರಾಯ ಫಟ್ (ಏವಂ ಷಟ್ಕಂ ಷಡಂಗನ್ಯಾಸಃ)

ಭೂರ್ಭುವಸ್ಸುವರೋಮಿತಿ ದಿಗ್ಬನ್ಧಃ।

ಧ್ಯಾನಮ್ :

**ಪ್ರತ್ಯಗಾತ್ಮಾರ್ಜುನಃಕೃಷ್ಣಃ ಪರಮಾತ್ಮೇತಿ ಶಬ್ದಿತಃ ।**
**ಯೋಗೇನ ಯೋಽಪಶ್ಯನ್ನಿತ್ಥಂ ಜ್ಞೇಯಂ ಮನೀಷಿಭಿಃ ॥೧॥**

**ಅಂತರ್ಹೃದಿ ನಿಯನ್ತಾರಂ ಬಹಿಸ್ಥಂ ಗುರುರೂಪಿಣಮ್ ।**
**ಉಭಯಥಾಪಿ ಕೃಷ್ಣಾಖ್ಯಂ ಪ್ರತ್ಯಗ್ಬ್ರಹ್ಮೈವಮಾಶ್ರಯೇ ॥೨॥**

**ತಾರಶಂಖಂ ಮನಶ್ಚಕ್ರಂ ವಹನ್ಪ್ರಾಣೇ ಗರುತ್ಮನಿ ।**
**ಆಸೀನಮಾತ್ಮಬ್ರಹ್ಮೈಕ್ಯಂ ಚಿನ್ಮುದ್ರಾಲಂಕೃತಂ ಭಜೇ ॥೩॥**

ಇತಿ ಧ್ಯಾತ್ವಾ । ತತೋ ಗೀತಾಪಾರಾಯಣಂ ಕುರ್ಯಾತ್ । ಸರ್ವಧರ್ಮಾನಿತ್ಯಾದಿಮಂತ್ರೇಣ ಉತ್ತರನ್ಯಾಸಂ ಕೃತ್ವಾ । ತತಃ ಭೂರ್ಭುವಸ್ಸುವರೋಮಿತಿದಿಗ್ವಿಮೋಕಃ। ಶ್ರೀಕೃಷ್ಣಾಯ ಸಮರ್ಪ್ಯ । ಸಮಾಪಯೇತ್ ಇತಿ ಹನೂಮತ್ಪ್ರಣೀತಗೀತಾಪೈಶಾಚಿಕಭಾಷ್ಯವೃತ್ತೌ ಜ್ಞೇಯಮ್ ।

---

## ಮಾಧ್ವವೈಷ್ಣವರೀತ್ಯಾ ಭಗವದ್ಗೀತಾಪಾರಾಯಣಕ್ರಮ-ಳ

ಆಚಮ್ಯ ಪ್ರಾಣಾನಾಯಮ್ಯ, ಶ್ರೀಕೃಷ್ಣ ಕೃಷ್ಣ ವಿಷ್ಣೋರಾಜ್ಞಯಾ ಪ್ರವರ್ತಮಾನಸ್ಯ ಆದ್ಯಬ್ರಹ್ಮಣಃ ದ್ವಿತೀಯಪರಾರ್ಧೇ.... ಶುಭತಿಥೌ ಶ್ರೀ ಮುಖ್ಯಪ್ರಾಣಾವತಾರ ಶ್ರೀಮದಾನಂದತೀರ್ಥಭಗವತ್ಪಾದಾಚಾರ್ಯಾಣಾಂ ಹೃತ್ಕಮಲಮಧ್ಯನಿವಾಸಿ ವಾಸುದೇವಸಂಕರ್ಷಣ ಪ್ರದ್ಯುಮ್ನಾನಿರುದ್ಧ

ಚತುರ್ಮೂರ್ತ್ಯಾದ್ಯನಂತಾವತಾರಾತ್ಮಕ ಶ್ರೀಭಾರತೀರಮಣಮುಖ್ಯ ಪ್ರಾಣಾಂತರ್ಗತ ಶ್ರೀಗೋಪಾಲಕೃಷ್ಣಪ್ರೇರಣಯಾ ಶ್ರೀಗೋಪಾಲಕೃಷ್ಣ ಪ್ರೀತ್ಯರ್ಥಂ ಜ್ಞಾನಭಕ್ತಿವೈರಾಗ್ಯಸಿದ್ಧ್ಯರ್ಥಂ, ವಿಶೇಷತಃ ಶ್ರೀಕೃಷ್ಣಪ್ರಸಾದ ಸಿದ್ಧ್ಯರ್ಥಂ ಶ್ರೀಮದ್ಭಗವದ್ಗೀತಾಪಾರಾಯಣಮಹಂ ಕರಿಷ್ಯೇ.

ಅಸ್ಯ ಶ್ರೀಮದ್ಭಗವದ್ಗೀತಾಮಹಾಗ್ರಂಥಸ್ಯ ಶ್ರೀಮನ್ನಾರಾಯಣಾತ್ಮಕ ಶ್ರೀವೇದವ್ಯಾಸಃ ಋಷಿ । ಅನುಷ್ಟುಬಾದಿ ನಾನಾಛಂದಾಂಸಿ । ಶ್ರೀಕೃಷ್ಣಃ ಪರಮಾತ್ಮಾ ದೇವತಾ । ಮಮ ಶ್ರೀಕೃಷ್ಣಪ್ರಸಾದಸಿದ್ಧ್ಯರ್ಥೇ ಪಾರಾಯಣೇ ವಿನಿಯೋಗಃ

**ಓಂ ಗುಣಗಣನಿಲಯಂ ಪತಿಂ ರಮಾಯಾಃ**
**ಜಗದಘದಹನಂ ಚ ವಾಸವೀಸೂನುಮ್ ।**
**ಮುನಿಕುಲತಿಲಕಂ ಚ ಪೂರ್ಣಬೋಧಂ**
**ಗುರುಮಪಿ ಪರಮಗುರುಂ ಚ ವನ್ದೇ ॥**

**ದೇವಂ ನಾರಾಯಣಂ ನತ್ವಾ ಸರ್ವದೋಷವಿವರ್ಜಿತಮ್ ।**
**ಪರಿಪೂರ್ಣಂ ಗುರುಂಶ್ಚಾಪಿ ಗೀತಾರ್ಥಂ ವಚ್ಮಿ ಲೇಶತಃ ॥**

**ಕೃಷ್ಣಾಯ ವಾಸುದೇವಾಯ ದೇವಕೀನಂದನಾಯ ಚ ।**
**ನಂದಗೋಪಕುಮಾರಾಯ ಗೋವಿಂದಾಯ ನಮೋ ನಮಃ ॥**

**ನಾರಾಯಣಂ ಸುರಗುರುಂ ಜಗದೇಕನಾಥಂ**
**ಭಕ್ತಪ್ರಿಯಂ ಸಕಲಲೋಕನಮಸ್ಕೃತಂ ಚ ।**
**ತ್ರೈಗುಣ್ಯವರ್ಜಿತಮಜಂ ವಿಭುಮಾದ್ಯಮೀಶಂ**
**ವನ್ದೇ ಭವಘ್ನಮಮರಾಸುರಸಿದ್ಧವಂದ್ಯಮ್ ॥**

**ನಾರಾಯಣಂ ನಮಸ್ಕೃತ್ಯ ನರಂ ಚೈವ ನರೋತ್ತಮಮ್ ।**
**ದೇವೀಂ ಸರಸ್ವತೀಂ ವ್ಯಾಸಂ ತತೋ ಜಯಮುದೀರಯೇತ್ ॥**

**ಯಂ ಬ್ರಹ್ಮಾವರುಣೇಂದ್ರರುದ್ರಮರುತಃ ಸ್ತುನ್ವನ್ತಿ ದಿವ್ಯೈಃ ಸ್ತವೈಃ**
**ವೇದೈಃ ಸಾಂಗಪದಕ್ರಮೋಪನಿಷದೈರ್ಗಾಯನ್ತಿ ಯಂ ಸಾಮಗಾಃ ।**

ಧ್ಯಾನಾವಸ್ಥಿತತದ್ಗತೇನ ಮನಸಾ ಪಶ್ಯನ್ತಿ ಯಂ ಯೋಗಿನೋ
ಯಸ್ಯಾನ್ತಂ ನ ವಿದುಃ ಸುರಾಸುರಗಣಾಃ ದೇವಾಯ ತಸ್ಮೈ ನಮಃ ॥
ಇತ್ಯಾದಿ ಧ್ಯಾತ್ವಾ ಧರ್ಮಕ್ಷೇತ್ರೇ ಇತ್ಯಾದಿ ಪಠೇತ್ ॥
ಯಸ್ಸರ್ವಗುಣಸಂಪೂರ್ಣಃ ಸರ್ವದೋಷವಿವರ್ಜಿತಃ ।
ಪ್ರೀಯತಾಂ ಪ್ರೀತ ಏವಾಲಂ ವಿಷ್ಣುರ್ಮೇ ಪರಮಃ ಸುಹೃತ್ ॥
ಪಾಠೇನಾನೇನ ಮೇ ಶ್ರೀಶಃ ಪ್ರೀಯತಾಂ ಶ್ರೀಹಯಾನನಃ ।
ಹರಿಭಕ್ತಾಗ್ರಣೀರ್ಮಧ್ವಃ ಗುರುಶ್ಚ ಪ್ರೀಯತಾಂ ಮಮ ॥

ಅನೇನ ಭಗವದ್ಗೀತಾಪಾರಾಯಣೇನ ಭಗವಾನ್ ಭಾರತೀರಮಣ
ಮುಖ್ಯಪ್ರಾಣಾಂತರ್ಗತಃ ಶ್ರೀಗೋಪಾಲಕೃಷ್ಣಃ ಪ್ರೀಯತಾಂ
ಶ್ರೀಕೃಷ್ಣಾರ್ಪಣಮಸ್ತು ॥

ಗೀತೆಯನ್ನು ಸಂಪೂರ್ಣವಾಗಿ ಪಾರಾಯಣಮಾಡಲಾಗದವರು ಸಪ್ತ ಶ್ಲೋಕೀಗೀತೆಯನ್ನು ಪಾರಾಯಣಮಾಡುತ್ತಾರೆ.

ಈ ಏಳು ಶ್ಲೋಕಗಳು ೮,೧೧,೧೩,೮,೧೫,೧೫,೧೮ನೇ ಅಧ್ಯಾಯ ಗಳಲ್ಲಿವೆ. ಅಧ್ಯಾಯಾನುಕ್ರಮದಲ್ಲಿರುವುದಿಲ್ಲ. ಈ ಏಳು ಶ್ಲೋಕಗಳಲ್ಲಿ ಒಂದು ಶ್ಲೋಕವನ್ನು ಅರ್ಜುನನೂ ಉಳಿದ ಆರು ಶ್ಲೋಕಗಳನ್ನು ಶ್ರೀಕೃಷ್ಣನೂ ಹೇಳಿರುತ್ತಾರೆ. ಇದನ್ನು ಯಾರು ಉದ್ಧರಿಸಿದರು–ಎಂಬುದು ತಿಳಿಯದು. ಇದರ ಸ್ವರೂಪವು ಈ ರೀತಿಯಾಗಿದೆ.

## ಸಪ್ತಶ್ಲೋಕೀ ಗೀತಾ ಪ್ರಾರಂಭಃ

ಓಮಿತ್ಯೇಕಾಕ್ಷರಂ ಬ್ರಹ್ಮ ವ್ಯಾಹರನ್ ಮಾಮನುಸ್ಮರನ್ ।
ಯಃ ಪ್ರಯಾತಿ ತ್ಯಜನ್ದೇಹಂ ಸ ಯಾತಿ ಪರಮಾಂ ಗತಿಮ್ ॥೧॥ (೮-೧೩)
ಸ್ಥಾನೇ ಹೃಷೀಕೇಶ ತವ ಪ್ರಕೀರ್ತ್ಯಾ ಜಗತ್ಪ್ರಹೃಷ್ಯತ್ಯನುರಜ್ಯತೇ ಚ ।
ರಕ್ಷಾಂಸಿ ಭೀತಾನಿ ದಿಶೋ ದ್ರವನ್ತಿ ಸರ್ವೇ ನಮಸ್ಯನ್ತಿ ಚ ಸಿದ್ಧಸಂಘಾಃ ॥
(೧೧-೩೬)
ಸರ್ವತಃ ಪಾಣಿಪಾದಂ ತತ್ ಸರ್ವತೋಽಕ್ಷಿಶಿರೋಮುಖಮ್ ।
ಸರ್ವತಃ ಶ್ರುತಿಮಲ್ಲೋಕೇ ಸರ್ವಮಾವೃತ್ಯ ತಿಷ್ಠತಿ ॥೩॥ (೧೩-೧೩)

ಕವಿಂ ಪುರಾಣಮನುಶಾಸಿತಾರಮಣೋರಣೀಯಾಂಸಮನುಸ್ಮರೇದ್ಯಃ ।
ಸರ್ವಸ್ಯ ಧಾತಾರಮಚಿನ್ತ್ಯರೂಪಮಾದಿತ್ಯವರ್ಣಂ ತಮಸಃ ಪರಸ್ತಾತ್ ॥೪॥
(೮-೯)

ಊರ್ಧ್ವಮೂಲಮಧಃಶಾಖಮಶ್ವತ್ಥಂ ಪ್ರಾಹುರವ್ಯಯಮ್ ।
ಛನ್ದಾಂಸಿ ಯಸ್ಯ ಪರ್ಣಾನಿ ಯಸ್ತಂ ವೇದ ಸ ವೇದವಿತ್ ॥೫॥ (೧೫-೧)

ಸರ್ವಸ್ಯ ಚಾಹಂ ಹೃದಿ ಸಂನಿವಿಷ್ಟೋ
ಮತ್ತಃ ಸ್ಮೃತಿರ್ಜ್ಞಾನಮಪೋಹನಂ ಚ ।
ವೇದೈಶ್ಚ ಸರ್ವೈರಹಮೇವ ವೇದ್ಯೋ
ವೇದಾನ್ತಕೃದ್ವೇದವಿದೇವ ಚಾಹಮ್ ॥೬॥ (೧೫-೧೫)

ಮನ್ಮನಾ ಭವ ಮದ್ಭಕ್ತೋ ಮದ್ಯಾಜೀ ಮಾಂ ನಮಸ್ಕುರು ।
ಮಾಮೇವೈಷ್ಯಸಿ ಸತ್ಯಂ ತೇ ಪ್ರತಿಜಾನೇ ಪ್ರಿಯೋಽಸಿ ಮೇ ॥೭॥ (೧೮-೬೫)

ಇತಿ ಶ್ರೀಮದ್ಭಗವದ್ಗಿತಾಸೂಪನಿಷತ್ಸು ಬ್ರಹ್ಮವಿದ್ಯಾಯಾಂ ಯೋಗಶಾಸ್ತ್ರೇ
ಶ್ರೀಕೃಷ್ಣಾರ್ಜುನಸಂವಾದೇ ಸಪ್ತಶ್ಲೋಕೀ ಗೀತಾ ಸಂಪೂರ್ಣಮ್

---

## ಗೀತಾಮಾಹಾತ್ಮ್ಯಮ್

ಧರೋಽವಾಚ :

ಭಗವನ್ಪರಮೇಶಾನ ಭಕ್ತಿರವ್ಯಭಿಚಾರಿಣೀ ।
ಪ್ರಾರಬ್ಧಂ ಭುಜ್ಯಮಾನಸ್ಯ ಕಥಂ ಭವತಿ ಹೇ ಪ್ರಭೋ ॥೧॥

ಶ್ರೀಭಗವಾನುವಾಚ :

ಪ್ರಾರಬ್ಧಂ ಭುಜ್ಯಮಾನೋ ಹಿ ಗೀತಾಭ್ಯಾಸರತಃ ಸದಾ ।
ಸ ಮುಕ್ತಃ ಸ ಸುಖೀ ಲೋಕೇ ಕರ್ಮಣಾ ನೋಪಲಿಪ್ಯತೇ ॥೨॥

ಮಹಾಪಾಪಾನಿ ಪಾಪಾನಿ ಗೀತಾಧ್ಯಾನಂ ಕರೋತಿ ಚೇತ್ ।
ಕ್ವಚಿತ್ ಸ್ಪರ್ಶಂ ನ ಕುರ್ವನ್ತಿ ನಲಿನೀದಲಮಮ್ಬುವತ್ ॥೩॥

ಗೀತಾಯಾಃ ಪುಸ್ತಕಂ ಯತ್ರ ಯತ್ರ ಪಾಠಃ ಪ್ರವರ್ತತೇ ।
ತತ್ರ ಸರ್ವಾಣಿ ತೀರ್ಥಾನಿ ಪ್ರಯಾಗಾದೀನಿ ತತ್ರ ವೈ ॥೪॥

ಸರ್ವೇ ವೇದಾಶ್ಚ ಋಷಯೋ ಯೋಗಿನಃ ಪನ್ನಗಾಶ್ಚ ಯೇ ।
ಗೋಪಾಲಾ ಗೋಪಿಕಾ ವಾಪಿ ನಾರದೋದ್ಧವಪಾರ್ಷದೈಃ ॥೫॥
ನಿವಸನ್ತಿ ಸದಾ ತತ್ರ ಯತ್ರ ಗೀತಾ ಪ್ರವರ್ತತೇ ॥೬॥
ಯತ್ರ ಗೀತಾ ವಿಚಾರಶ್ಚ ಪಠನಂ ಪಾಠನಂ ಶ್ರುತಮ್ ।
ತತ್ರಾಹಂ ನಿಶ್ಚಿತಂ ಪೃಥ್ವಿ ನಿವಸಾಮಿ ಸದೈವ ಹಿ ॥೭॥
ಗೀತಾಶ್ರಯೇಽಹಂ ತಿಷ್ಠಾಮಿ ಗೀತಾ ಮೇ ಚೋತ್ತಮಂ ಗೃಹಮ್ ।
ಗೀತಾಜ್ಞಾನಮುಪಾಶ್ರಿತ್ಯ ತ್ರೀನ್ಲೋಕಾನ್ಪಾಲಯಾಮ್ಯಹಮ್ ॥೮॥
ಗೀತಾ ಮೇ ಪರಮಾ ವಿದ್ಯಾ ಬ್ರಹ್ಮರೂಪಾ ನ ಸಂಶಯಃ ।
ಅರ್ಧಮಾತ್ರಾಕ್ಷರಾ ನಿತ್ಯಾ ಸಾನಿರ್ವಾಚ್ಯಪದಾತ್ಮಿಕಾ ॥೯॥
ಚಿದಾನನ್ದೇನ ಕೃಷ್ಣೇನ ಪ್ರೋಕ್ತಾ ಸ್ವಮುಖತೋಽರ್ಜುನಮ್ ।
ವೇದತ್ರಯೀ ಪರಾನನ್ದತತ್ತ್ವಾರ್ಥಜ್ಞಾನಸಂಯುತಾ ॥೧೦॥
ಯೋಽಷ್ಟಾದಶೀಂ ಜಪೇನ್ನಿತ್ಯಂ ನರೋ ನಿರ್ಮಲಮಾನಸಃ ।
ಜ್ಞಾನಸಿದ್ಧಿಂ ಸ ಲಭತೇ ತತೋ ಯಾತಿ ಪರಂ ಪದಮ್ ॥೧೧॥
ಪಾಠೇಽಸಮರ್ಥಃ ಸಂಪೂರ್ಣೇ ತತೋಽರ್ಧಂ ಪಾಠಮಾಚರೇತ್ ।
ತದಾ ಗೋದಾನಜಂ ಪುಣ್ಯಂ ಲಭತೇ ನಾತ್ರ ಸಂಶಯಃ ॥೧೨॥
ತ್ರಿಭಾಗಂ ಪಠಮಾನಸ್ತು ಗಂಗಾಸ್ನಾನಫಲಂ ಲಭೇತ್ ।
ಷಡಂಶಂ ಜಪಮಾನಸ್ತು ಸೋಮಯಾಗಫಲಂ ಲಭೇತ್ ॥೧೩॥
ಏಕಾಧ್ಯಾಯಂ ತು ಯೋ ನಿತ್ಯಂ ಪಠತೇ ಭಕ್ತಿಸಂಯುತಃ ।
ರುದ್ರಲೋಕಂ ಸಮಾಪ್ನೋತಿ ಗಣೋ ಭೂತ್ವಾ ವಸೇಚ್ಚಿರಮ್ ॥೧೪॥
ಅಧ್ಯಾಯಂ ಶ್ಲೋಕಪಾದಂ ವಾ ನಿತ್ಯಂ ಯಃ ಪಠತೇ ನರಃ ।
ಸ ಯಾತಿ ನರತಾಂ ಯಾವನ್ಮನ್ವನ್ತರಂ ವಸುಂಧರೇ ॥೧೫॥
ಗೀತಾಯಾಃ ಶ್ಲೋಕದಶಕಂ ಸಪ್ತ ಪಂಚ ಚತುಷ್ಟಯಮ್ ।
ದ್ವೌ ತ್ರೀನೇಕಂ ತದರ್ಧಂ ವಾ ಶ್ಲೋಕಾನಾಂ ಯಃ ಪಠೇನ್ನರಃ ॥೧೬॥
ಚನ್ದ್ರಲೋಕಮವಾಪ್ನೋತಿ ವರ್ಷಾಣಾಮಯುತಂ ಧ್ರುವಮ್ ।
ಗೀತಾಪಾಠಸಮಾಯುಕ್ತೋ ಮೃತೋ ಮಾನುಷತಾಂ ವ್ರಜೇತ್ ॥೧೭॥

ಗೀತಾಭ್ಯಾಸಂ ಪುನಃ ಕೃತ್ವಾ ಲಭ್ಯತೇ ಮುಕ್ತಿಮುತ್ತಮಾಮ್ ।
ಗೀತೇತ್ಯುಚ್ಚಾರಸಂಯುಕ್ತೋ ಮ್ರಿಯಮಾಣೋ ಗತಿಂ ಲಭೇತ್ ॥೧೮॥

ಗೀತಾರ್ಥಶ್ರವಣಾಸಕ್ತೋ ಮಹಾಪಾಪಯುತೋಽಪಿ ವಾ ।
ವೈಕುಂಠಂ ಸಮವಾಪ್ನೋತಿ ವಿಷ್ಣುನಾ ಸಹ ಮೋದತೇ ॥೧೯॥

ಗೀತಾರ್ಥಂ ಧ್ಯಾಯತೇ ನಿತ್ಯಂ ಕೃತ್ವಾ ಕರ್ಮಾಣಿ ಭೂರಿಶಃ ।
ಜೀವನ್ಮುಕ್ತಃ ಸ ವಿಜ್ಞೇಯೋ ನ ಭವತ್ಯತ್ರ ಸಂಶಯಃ ॥೨೦॥

ಮಲನಿರ್ಮೋಚನಂ ಪುಂಸಾಂ ಜಲಸ್ನಾನಂ ದಿನೇ ದಿನೇ ।
ಸಕೃದ್ಗೀತಾಮ್ಭಸಿ ಸ್ನಾನಂ ಸಂಸಾರಮಲನಾಶನಮ್ ॥೨೧॥

ಗೀತಾಮಾಶ್ರಿತ್ಯ ಬಹವೋ ಭೂಭುಜೋ ಜನಕಾದಯಃ ।
ನಿರ್ಧೂತಕಲ್ಮಷಾ ಲೋಕೇ ಗೀತಾ ಯಾತಾಃ ಪರಂ ಪದಮ್ ॥೨೨॥

ಯೇ ಶೃಣ್ವನ್ತಿ ಪಠನ್ತ್ಯೇವ ಗೀತಾಶಾಸ್ತ್ರಮಹರ್ನಿಶಮ್ ।
ನ ತೇ ವೈ ಮಾನುಷಾ ಜ್ಞೇಯಾ ದೇವಾ ಏವ ನ ಸಂಶಯಃ ॥೨೩॥

ಜ್ಞಾನಾಜ್ಞಾನಕೃತಂ ನಿತ್ಯಂ ಇನ್ದ್ರಿಯೈರ್ಜನಿತಂ ಚ ಯತ್ ।
ತತ್ಸರ್ವಂ ನಾಶಮಾಯಾತಿ ಗೀತಾಪಾಠೇನ ತತ್ಕ್ಷಣಾತ್ ॥೨೪॥

ಧಿಕ್ತಸ್ಯ ಜ್ಞಾನಮಾಚಾರಂ ವ್ರತಂ ಚೇಷ್ಟಾಂ ತಪೋ ಯಶಃ ।
ಗೀತಾರ್ಥಪಠನಂ ನಾಸ್ತಿ ನಾಧಮಸ್ತತ್ಪರೋ ಜನಃ ॥೨೫॥

ಸಂಸಾರಸಾಗರಂ ಘೋರಂ ತರ್ತುಮಿಚ್ಛತಿ ಯೋ ಜನಃ ।
ಗೀತಾನಾವಂ ಸಮಾರುಹ್ಯ ಪಾರಂ ಯಾತಿ ಸುಖೇನ ಸಃ ॥೨೬॥

ಗೀತಾಯಾಃ ಪಠನಂ ಕೃತ್ವಾ ಮಾಹಾತ್ಮ್ಯಂ ನೈವ ಯಃ ಪಠೇತ್ ।
ವೃಥಾ ಪಾಠೋ ಭವೇತ್ತಸ್ಯ ಶ್ರಮ ಏವ ಹ್ಯುದಾಹೃತಃ ॥೨೭॥

ಏತನ್ಮಾಹಾತ್ಮ್ಯಸಂಯುಕ್ತಂ ಗೀತಾಭ್ಯಾಸಂ ಕರೋತಿ ಯಃ ।
ಸ ತತ್ಫಲಮವಾಪ್ನೋತಿ ದುರ್ಲಭಾಂ ಗತಿಮಾಪ್ನುಯಾತ್ ॥೨೮॥

ಮಾಹಾತ್ಮ್ಯಮೇತದ್ಗೀತಾಯಾಃ ಮಯಾ ಪ್ರೋಕ್ತಂ ಸನಾತನಮ್ ।
ಗೀತಾನ್ತೇ ಚ ಪಠೇದ್ಯಸ್ತು ಯದುಕ್ತಂ ತತ್ಫಲಂ ಲಭೇತ್ ॥೨೯॥

ಇತಿ ಶ್ರೀವಾರಾಹಪುರಾಣೇ ಗೀತಾಮಾಹಾತ್ಮ್ಯಂ ಸಂಪೂರ್ಣಮ್

# ಗೀತೆಯ ಶ್ಲೋಕಗಳು ಎಷ್ಟು?

**ಷಟ್ಶತಾನಿ ಸವಿಂಶಾನಿ ಶ್ಲೋಕಾನಾಂ ಪ್ರಾಹ ಕೇಶವಃ ।**
**ಅರ್ಜುನಃ ಸಪ್ತಪಞ್ಚಾಶತ್ ಸಪ್ತಷಷ್ಟಿಂ ತು ಸಂಜಯಃ ॥೪॥**

**ಧೃತರಾಷ್ಟ್ರಃ ಶ್ಲೋಕಮೇಕಂ ಗೀತಾಯಾ ಮಾನಮುಚ್ಯತೇ ।**

ಎಂದು ಇದೇ ಪರ್ವದ ೪೩ನೆಯ ಅಧ್ಯಾಯದಲ್ಲಿಯೇ ಇದರ ಉಲ್ಲೇಖವಿದೆ. ಇದರ ಪ್ರಕಾರ ಶ್ರೀಕೃಷ್ಣನು ಹೇಳಿದುದು–೬೨೦, ಅರ್ಜುನನು ಹೇಳಿದುದು ೫೭, ಸಂಜಯನು ಹೇಳಿದುದು–೬೭, ಧೃತರಾಷ್ಟ್ರನು ಹೇಳಿದುದು–೧ ಹೀಗೆ ೭೪೫ ಶ್ಲೋಕಗಳಾಗುತ್ತವೆ. ಆದರೆ ಪ್ರಚಲಿತಗೀತೆಯಲ್ಲಿರುವುದು ೭೦೦ ಶ್ಲೋಕಗಳು ಮಾತ್ರ. ಹಾಗಾದರೆ ಉಳಿದ ಶ್ಲೋಕಗಳೇನಾದುವು? ಶ್ರೀಭಗವಾನ್ ಶಂಕರಾಚಾರ್ಯರು ಮೊದ ಲ್ಗೊಂಡು ಎಲ್ಲ ಆಚಾರ್ಯರೂ ವ್ಯಾಖ್ಯಾನಮಾಡಿರುವುದು ಈ ೭೦೦ ಶ್ಲೋಕಗಳಿಗೆ ಮಾತ್ರವೇ. ಹಾಗಾದರೆ ಅವರಿಗೆ ವೈಶಂಪಾಯನರು ಹೇಳಿರುವ ಈ ವಿಷಯವು ತಿಳಿಯದೆ?–ಹೀಗೆ ಅನೇಕ ಜಿಜ್ಞಾಸೆಗಳು ಇದರ ಮೇಲೆ ಹೊರಟಿವೆ. ಆಲ್ಬರೂನಿ ಎಂಬುವನು ೭೪೫ ಶ್ಲೋಕಗಳನ್ನೇ ಪರ್ಶಿಯನ್ ಭಾಷೆಗೆ ತರ್ಜುಮೆಮಾಡಿದ್ದಾನೆಂದು ಹೇಳುತ್ತಾರೆ. ಮದ್ರಾಸಿನ ಶುದ್ಧಧರ್ಮ ಮಂಡಲದವರು ಇತ್ತೀಚೆಗೆ ೨೬ ಅಧ್ಯಾಯಗಳ ಗೀತೆಯನ್ನು ಪ್ರಕಟಿಸಿರುತ್ತಾರೆ. ಎರಡನೆಯ ಅಧ್ಯಾಯದಿಂದ ೨೫ನೇ ಅಧ್ಯಾಯಪೂರ್ತಿಯಾಗಿ ೨೪ ಅಧ್ಯಾಯಗಳಲ್ಲಿ ಪ್ರತಿಯೊಂದು ಅಧ್ಯಾಯದಲ್ಲಿಯೂ ೨೪ ಶ್ಲೋಕಗಳಿವೆ. ಇದು ಗಾಯತ್ರೀ ಮಂತ್ರಕ್ಕೆ ಅನುಸಾರವಾಗಿರುವುದೆಂದೂ ಗಾಯತ್ರಿಯಲ್ಲಿರುವ ೨೪ ಅಕ್ಷರಗಳಿಗೆ ಅನುಗುಣವಾಗಿ ೨೪ ತತ್ತ್ವಗಳನ್ನು ಈ ಗೀತೆಯೂ ಬೋಧಿಸುವುದೆಂದೂ ಅಭಿಪ್ರಾಯಪಟ್ಟಿರುತ್ತಾರೆ. ಗೀತಾಶ್ಲೋಕಗಳು ಕೂಡ ಈ ಗೀತೆಯಲ್ಲಿರುವಂತೆ ಇಲ್ಲ. ಅರ್ಧಕ್ಕಿಂತಲೂ ಹೆಚ್ಚು ಶ್ಲೋಕಗಳು ಈ ಗೀತೆಯಲ್ಲಿರುವಂತೆಯೇ ಇವೆ. ಇವರ ಅಭಿಪ್ರಾಯದ ಪ್ರಕಾರ ಮೂಲಗೀತೆಯ ಶ್ಲೋಕಗಳು ೧೪೪ ಮಾತ್ರ. ಉಳಿದುವು ಬೇರೆ ಕಡೆಗಳಿಂದ ತೆಗೆದುಕೊಂಡಿರುವುದು. ಶ್ರೀಶಂಕರರು ಅದ್ವೈತತತ್ತ್ವವನ್ನೇ ಸಿದ್ಧಪಡಿಸುವ ಸಲುವಾಗಿ ಅದಕ್ಕೆ ಅನುಕೂಲವಾಗುವಂತೆ ಶ್ಲೋಕಗಳನ್ನು ಸೇರಿಸಿ ಅದಕ್ಕೇ ಗೀತಾ ಎಂದು ಹೆಸರಿಟ್ಟಿದ್ದಾರೆ–ಎಂದು ಇವರು

ಅಭಿಪ್ರಾಯಪಡುತ್ತಾರೆ. ಆದರೆ ಈಗ ಸಿಕ್ಕಿರುವ ಎಲ್ಲ ಮಹಾಭಾರತಪ್ರತಿಗಳಲ್ಲಿಯೂ ಈ ಗೀತಾಮೂಲವೇ ಇದೆಯಲ್ಲವೇ?–ಎಂಬುದಕ್ಕೆ ಇವರ ಉತ್ತರ :– ಮಹಾಭಾರತವೇ ಅಪಭ್ರಂಶವಾಗಿದೆ. ಶುದ್ಧಧರ್ಮಮಂಡಲದಿಂದ ಪ್ರಕಟವಾಗಿರುವ ಮಹಾಭಾರತವನ್ನು ನೋಡಿದರೆ ಈ ಸಂಶಯವು ಪರಿಹಾರವಾಗುತ್ತದೆ ಎಂದಿದ್ದಾರೆ. ಇವರು ಹೇಳಿರುವ ರೀತಿಯಲ್ಲಿಯೂ ಶ್ಲೋಕಗಳು ಸಮಂಜಸವಾಗಿರುವಂತೆ ಕಂಡುಬರುವುದಿಲ್ಲ. ಇವರು ಪ್ರಕಟಿಸಿರುವ ಗೀತೆಯಲ್ಲಿಯೂ ಶ್ರೀಕೃಷ್ಣನು ೬೦೮ ಶ್ಲೋಕಗಳನ್ನೂ, ಸಂಜಯನು ೬೭ ಶ್ಲೋಕಗಳನ್ನೂ, ಅರ್ಜುನನು ೬೯ ಶ್ಲೋಕಗಳನ್ನೂ, ಧೃತರಾಷ್ಟ್ರನು ಒಂದು ಶ್ಲೋಕವನ್ನೂ (ಒಟ್ಟು ೭೪೫) ಹೇಳುತ್ತಾನೆ.

ವೈಶಂಪಾಯನರು ಹೇಳಿರುವಂತೆ ಶ್ರೀಕೃಷ್ಣನು ೬೨೦ ಶ್ಲೋಕಗಳನ್ನೂ ಅರ್ಜುನನು ೫೭ ಶ್ಲೋಕಗಳನ್ನು ಮಾತ್ರವೇ ಹೇಳಬೇಕಾಗಿದ್ದಿತು ಎಂಬುದಕ್ಕೆ ಇವರ ಸಮಾಧಾನವು ಈ ರೀತಿಯಾಗಿರುತ್ತದೆ : ಯುದ್ಧಕ್ಕೆ ಮೊದಲು ಭಗವಂತನ ಆದೇಶದಂತೆ ಅರ್ಜುನನು ದೇವೀಸ್ತುತಿಗೆ ಸಂಬಂಧಿಸಿದಂತೆ ೧೨ ಶ್ಲೋಕಗಳಲ್ಲಿ ದೇವಿಯನ್ನು ಸ್ತೋತ್ರಮಾಡಿರುವ ಕಾರಣ ಅದನ್ನೂ ತೆಗೆದುಕೊಳ್ಳಬೇಕು–ಎಂಬುದೂ ಇವರ ವಾದವಾಗಿದೆ.

ದುರ್ಗಾಸ್ತುತಿಯು ಮಹಾಭಾರತ ಭೀಷ್ಮಪರ್ವದ ೨೩ನೆಯ ಅಧ್ಯಾಯದಲ್ಲಿ ಬಂದಿದೆ. ಭಗವದ್ಗೀತೆಗೂ–ಈ ಸ್ತೋತ್ರಕ್ಕೂ ಯಾವ ಸಂಬಂಧವೂ ಇಲ್ಲ. ಆದರೆ ಶುದ್ಧಧರ್ಮಮಂಡಲದವರು ಪ್ರಕಟಿಸಿರುವ ಗೀತೆಯಲ್ಲಿ ಇದು ಭಗವಂತನೇ ಹೇಳಿದ್ದೆಂದು ಮೊದಲನೆಯ ಅಧ್ಯಾಯದಲ್ಲಿ ಗಣನೆಗೆ ಬರುತ್ತದೆ.

**ತತಃ ಶಙ್ಖಾಶ್ಚ ಭೇರ್ಯಶ್ಚ ಪಣವಾನಕಗೋಮುಖಾಃ ।**
**ಸಹಸೈವಾಭ್ಯಹನ್ಯನ್ತ ಸ ಶಬ್ದಸ್ತುಮುಲೋಽಭವತ್ ॥** ಎಂಬ ಗೀತೆಯಲ್ಲಿನ ಹದಿಮೂರನೆಯ ಶ್ಲೋಕವು ಶು. ಧ. ಮಂಡಲದ ಗೀತೆಯಲ್ಲಿ ಹತ್ತನೆಯ ಶ್ಲೋಕವಾಗಿರುತ್ತದೆ. ಅನಂತರ

**ಧಾರ್ತರಾಷ್ಟ್ರಬಲಂ ದೃಷ್ಟ್ವಾ ಯುದ್ಧಾಯ ಸಮುಪಸ್ಥಿತಮ್ ।**
**ಅರ್ಜುನಸ್ಯ ಹಿತಾರ್ಥಾಯ ಕೃಷ್ಣೋ ವಚನಮಬ್ರವೀತ್ ॥೧೧॥**

ಎಂದು ಸಂಜಯನು ಹೇಳಿದನಂತರ ಶ್ರೀಕೃಷ್ಣನು–**ಶುಚಿರ್ಭೂತ್ವಾ ಮಹಾಬಾಹೋ ಸಂಗ್ರಾಮಾಭಿಮುಖೇ ಸ್ಥಿತಃ । ಪರಾಜಯಾಯ ಶತ್ರೂಣಾಂ ದುರ್ಗಾಸ್ತೋತ್ರಮುದೀರಯ ॥**–ಎಂದು ಅರ್ಜುನನಿಗೆ ಹೇಳುತ್ತಾನೆ. ಪುನಃ ಸಂಜಯನು ಹೇಳುತ್ತಾನೆ :

**ಏವಮುಕ್ತೋಽರ್ಜುನಃ ಸಂಖ್ಯೇ ವಾಸುದೇವೇನ ಧೀಮತಾ ।**
**ಅವತೀರ್ಯ ರಥಾತ್ಪಾರ್ಥಃ ಸ್ತೋತ್ರಮಾಹ ಕೃತಾಞ್ಜಲಿಃ ॥**

ಮುಂದೆ ಅರ್ಜುನನೇ ಹನ್ನೆರಡು ಶ್ಲೋಕಗಳಿಂದ ದೇವಿಯ ಸ್ತೋತ್ರ ವನ್ನು ಮಾಡುತ್ತಾನೆ.

ಇಲ್ಲಿರುವ ಹನ್ನೆರಡು ಶ್ಲೋಕಗಳೂ ಮಹಾಭಾರತದಲ್ಲಿರುವಂತೆಯೇ ಇವೆ. ಅರ್ಜುನನು ಸ್ತೋತ್ರದ ಮಧ್ಯದಲ್ಲಿ ಹೇಳುವ '**ಸ್ತುತಾಸಿ ತ್ವಂ ಮಹಾದೇವಿ**' ಎಂಬ ಶ್ಲೋಕವು ಸ್ತೋತ್ರವಾದನಂತರ ಅವನು ಹೇಳಿದು ದೆಂದು ಶು. ಧ. ಮಂಡಲದ ಗೀತೆಯಲ್ಲಿ ಹೇಳಲಾಗಿದೆ. ದೇವಿಯು ಹೇಳಿ ರುವುದನ್ನು 'ಸಂಜಯ ಉವಾಚ' ಎನ್ನುವುದರಲ್ಲಿಯೇ ಸೇರಿಸಿ ಹೇಳಲಾಗಿದೆ. ಹೀಗೆ ಗೀತೆಗಿಂತಲೂ ಮೊದಲು ೨೩ನೆಯ ಅಧ್ಯಾಯದಲ್ಲಿರುವ ೨೨ ಶ್ಲೋಕಗಳನ್ನು ಈ ಮೊದಲನೆಯ ಅಧ್ಯಾಯದಲ್ಲಿ ಸೇರಿಸಲಾಗಿದೆ. ಅರ್ಜುನನು ಹೇಳಿರುವುದನ್ನೂ ಭಗವಂತನು ಹೇಳಿರುವುದೆಂದು ಹೇಳಿ ಸಮರ್ಥನೆ ಮಾಡಿರುವುದು ಅಷ್ಟು ಸಮಂಜಸವಾಗಿ ಕಾಣುವುದಿಲ್ಲ.

ಎರಡನೆಯದು ಭೋಜಪತ್ರೀ ಗೀತೆ. ಇದನ್ನು ಸಂಪಾದಿಸಿರುವವರು ಶ್ರೀ ರಾಜವೈದ್ಯ ಜೀವನರಾಂ ಕಾಲಿದಾಸ ಶಾಸ್ತ್ರೀ. ಇದರಲ್ಲಿರುವುದೂ ಹದಿ ನೆಂಟೇ ಅಧ್ಯಾಯಗಳು. ಆದರೆ ಕೆಲವೆಡೆಯಲ್ಲಿ ಪಾಠಭೇದಗಳಿವೆ ಮತ್ತು ೧೧ ಶ್ಲೋಕಗಳು ಇದರಲ್ಲಿ ಹೆಚ್ಚಾಗಿವೆ. ಇದರ ಪ್ರಕಾರ ಶ್ರೀಕೃಷ್ಣನು ೬೨೧ ಶ್ಲೋಕಗಳನ್ನೂ, ಅರ್ಜುನನು ೬೬ ಶ್ಲೋಕಗಳನ್ನೂ ಸಂಜಯನು ೬೮ ಶ್ಲೋಕಗಳನ್ನೂ, ಧೃತರಾಷ್ಟ್ರನು ೧ ಶ್ಲೋಕವನ್ನೂ ಹೇಳುತ್ತಾರೆ. ಅವು ಒಟ್ಟು ೭೫೬ ಶ್ಲೋಕಗಳಾಗುತ್ತವೆ. ಇರಬೇಕಾದ ೭೪೫ ಶ್ಲೋಕಗಳಿಗಿಂತಲೂ ಈ ೧೧ ಶ್ಲೋಕಗಳು ಏಕೆ ಹೆಚ್ಚಾದುವೆಂಬುದಕ್ಕೆ ಇವರೇನೂ ಸಮಾಧಾನ ವನ್ನು ಹೇಳಿಲ್ಲ. ಇದು ಭೋಜಪತ್ರದಲ್ಲಿ ದೊರೆತದ್ದೆಂಬುದಕ್ಕೆ ಅದರ

ಛಾಯಾಚಿತ್ರವನ್ನೂ ಕೊಟ್ಟಿರುತ್ತಾರೆ. ಇದರಲ್ಲಿರುವ ಹೆಚ್ಚು ಶ್ಲೋಕಗಳು ಸಾಮಾನ್ಯವಾಗಿ ಉಪನಿಷದ್ವಾಕ್ಯಗಳು ಅಥವಾ ಅದೇ ಅರ್ಥಕೊಡುವ ಶ್ಲೋಕಗಳು ಎಂಬುದು ವಿದ್ವಾಂಸರ ಅಭಿಪ್ರಾಯವಾಗಿದೆ.

ಉದಾಹರಣೆಗೆ ; ೬ನೆಯ ಅಧ್ಯಾಯದಲ್ಲಿ

**ಸುಖೇನ ಬ್ರಹ್ಮಸಂಸ್ಪರ್ಶಮತ್ಯನ್ತಂ ಸುಖಮಶ್ನುತೇ I** ಆದನಂತರ :

**ಸ ಬ್ರಹ್ಮಾ ಸ ಶಿವಃ ಸೇನ್ದ್ರಃ ಸೋऽಕ್ಷರಃ ಪರಮಃ ಸ್ಮೃತಃ I**
**ಸ ಏವ ವಿಷ್ಣುಃ ಸ ಪ್ರಾಣಃ ಸ ಕಾಲಾಗ್ನಿಃ ಸ ಚನ್ದ್ರಮಾಃ II**

**ಸ ಏವ ಸರ್ವಂ ಯದ್ಭೂತಂ ಯಚ್ಚಭಾವ್ಯಂ ಸನಾತನಮ್ I**
**ಜ್ಞಾತ್ವಾ ತಂ ಮೃತ್ಯುಮಾಪ್ನೋತಿ ನಾನ್ಯಃ ಪನ್ಥಾ ವಿಮುಕ್ತಯೇ II**

೮ನೆಯ ಅಧ್ಯಾಯದಲ್ಲಿ **ಮಯ್ಯರ್ಪಿತಮನೋಬುದ್ಧಿರ್ಮಾಮೇ ವೈಷ್ಯತ್ಯಸಂಶಯಃ** ಆದನಂತರ :

**ಯಥಾ ನದ್ಯಃ ಸ್ಯನ್ದಮಾನಾಃ ಸಮುದ್ರೇ**
**ಗಚ್ಛನ್ತ್ಯಸ್ತಂ ನಾಮರೂಪೇ ವಿಹಾಯ I**
**ತಥಾ ವಿದ್ವಾನ್ನಾಮರೂಪಾದ್ವಿಮುಕ್ತಃ**
**ಪರಾತ್ಪರಂ ಪುರುಷಮುಪೈತಿ ದಿವ್ಯಮ್ II**

**ತತ್ತೇ ಪದಂ ಸಂಗ್ರಹೇಣ ಪ್ರವಕ್ಷ್ಯೇ** ಆದನಂತರ ಹೇಳಿರುವ ಶ್ಲೋಕಗಳೆಲ್ಲವೂ ಉಪನಿಷನ್ಮಂತ್ರಗಳೇ ಆಗಿವೆ : ಇಲ್ಲಿರುವ ಹಲವು ಮಂತ್ರ ಗಳು ಕೇನೋಪನಿಷತ್ತಿನಲ್ಲಿ ಯಥಾವತ್ತಾಗಿಯೇ ಬಂದಿವೆ.

**ಯದ್ವಾಚಾऽನಭ್ಯುದಿತಂ ಯೇನ ವಾಗಭ್ಯುದ್ಯತೇ** (ಕೇನ-೫)
**ಯಚ್ಚ ವಾಚಾ ನಾಭ್ಯುದಿತಮಭ್ಯುದ್ಯತೇ ಚ ಯೇನ ವಾಕ್** IIಗೀತಾII
**ತದೇವ ಬ್ರಹ್ಮ ತ್ವಂ ವಿದ್ಧಿ ನೇದಂ ಯದಿದಮುಪಾಸತೇ II**
(ಎರಡು ಕಡೆಯಲ್ಲೂ ಉತ್ತರಾರ್ಧವು ಏಕರೂಪವಾಗಿದೆ.)
**ಮನುತೇ ಯನ್ಮನಸಾ ಯೇನಾಹುಶ್ಚ ಮನೋ ಮತಮ್** II ಗೀತಾII
**ಯನ್ಮನಸಾ ನ ಮನುತೇ ಯೇನಾಹುರ್ಮನೋ ಮತಮ್ II**
IIಕೇನ-೬II

**ತದೇವ ಬ್ರಹ್ಮ ತ್ವಂ ವಿದ್ಧಿ ನೇದಂ ಯದಿದಮುಪಾಸತೇ ।**
**ಯಚ್ಚಕ್ಷುಷಾ ನ ಪಶ್ಯತಿ ಯೇನ ಚಕ್ಷೂಂಷಿ ಪಶ್ಯತಿ ॥**

॥ಗೀತಾ ॥ ಕೇನ-೭ ॥

**ತದೇವ ಬ್ರಹ್ಮ ತ್ವಂ ವಿದ್ಧಿ ನೇದಂ ಯದಿದಮುಪಾಸತೇ ॥**
**ಪ್ರಾಣೇತಿ ಯನ್ನ ಪ್ರಾಣೇನ ಪ್ರಾಣಃ ಪ್ರಾಣೀಯತೇ ಯತಃ** ॥ಗೀತಾ॥
**ಯತ್ಪ್ರಾಣೇನ ನ ಪ್ರಾಣಿತಿ ಯೇನ ಪ್ರಾಣಃ ಪ್ರಣೀಯತೇ ॥**

॥ಕೇನ-೯॥

**ತದೇವ ಬ್ರಹ್ಮ ತ್ವಂ ವಿದ್ಧಿ ನೇದಂ ಯದಿದಮುಪಾಸತೇ ॥**

ಗೀತೆಯಲ್ಲಿ ಹಲವಾರು ಉಪನಿಷತ್ತಿನ ಶ್ಲೋಕಗಳೇ ಬಂದಿದ್ದರೂ ಸಾಹಿತ್ಯದ ಛಂದಸ್ಸುಗಳಲ್ಲಿ ಬಂದಿವೆಯೇ ಹೊರತು ವೇದಗಳ ಅಥವಾ ಉಪನಿಷತ್ತುಗಳ ಛಂದಸ್ಸಿನಲ್ಲಿ ಬಂದಿಲ್ಲ. ಭೋಜಪತ್ರೀ ಗೀತೆಯಲ್ಲಿ ಪ್ರಚ ಲಿತ ಗೀತೆಯಲ್ಲಿರುವುದಕ್ಕಿಂತಲೂ ಅಧಿಕವಾಗಿರುವ ೫೬ ಶ್ಲೋಕಗಳಲ್ಲಿ ಹೆಚ್ಚುಭಾಗ ಶ್ಲೋಕಗಳು ಮೇಲೆ ಕೊಟ್ಟಿರುವ ಉದಾಹರಣೆಯಂತೆ ಉಪನಿಷ ತ್ತಿನ ಛಂದಸ್ಸುಗಳೇ ಆಗಿವೆ. ವೈಶಂಪಾಯನರು ಹೇಳಿರುವುದಕ್ಕಿಂತಲೂ ಶ್ಲೋಕಗಳು ಅಧಿಕವಾಗಿಯೂ ಇವೆ. ಆದುದರಿಂದ ಮಹರ್ಷಿಗಳ ಶ್ಲೋಕ ಸಂಖ್ಯೆಗೆ ಅನುಗುಣವಾಗಿ ಉಪನಿಷನ್ಮಂತ್ರಗಳನ್ನು ಸೇರಿಸಿದ್ದಾರೆಯೋ—ಎಂಬ ಅನುಮಾನವು ಸ್ವಾಭಾವಿಕವಾಗಿಯೇ ಉಂಟಾಗುತ್ತದೆ.

ಹಾಗಾದರೆ ಮಹಾಭಾರತದಲ್ಲಿ ಹೇಳಿರುವ ಮತ್ತು ಎಲ್ಲ ಆಚಾರ್ಯರೂ ವ್ಯಾಖ್ಯಾನಿಸಿರುವ ಶ್ಲೋಕಸಂಖ್ಯೆಯು ಸರಿಯೋ? ಅಥವಾ ವೈಶಂಪಾಯನರು ಹೇಳಿರುವ ೭೪೫ ಶ್ಲೋಕಸಂಖ್ಯೆಯು ಸರಿಯೋ? ಎಂಬುದಕ್ಕೆ ನಮ್ಮ ಸಮಾಧಾನವು ಈ ರೀತಿಯಾಗಿದೆ.

(1) ಶುದ್ಧ ಧರ್ಮಮಂಡಲದವರು ಹೇಳಿರುವಂತೆ ಶ್ರೀಶಂಕರರು ತಮ್ಮ ಸಿದ್ಧಾಂತವನ್ನು ಸ್ಥಿರಪಡಿಸಿಕೊಳ್ಳುವುದಕ್ಕೋಸ್ಕರವೇ ೭೦೦ ಶ್ಲೋಕಗಳನ್ನು ಸಂಪಾದಿಸಿಕೊಂಡಿದ್ದಾದರೆ ಅವರ ಮುಂದಿನ ಆಚಾರ್ಯರು ಅದನ್ನು ಖಂಡ-ತುಂಡವಾಗಿ ಖಂಡಿಸುತ್ತಿದ್ದರು. ಆದುದರಿಂದ ಈ ವಾದವು ಅಷ್ಟು ಸಮಂಜಸವಲ್ಲ. ೪೫ ಶ್ಲೋಕಗಳು ಬಿಟ್ಟುಹೋಗಿದ್ದ ಪಕ್ಷದಲ್ಲಿ ಶ್ರೀಶಂಕರ

ರಿಂದ ಇತ್ತೀಚಿನವರೆಗಿನ ಸಾವಿರಾರು ಉದ್ದಾಮಪಂಡಿತರು ಇದನ್ನು ಚರ್ಚಿಸದೇ ಇರುತ್ತಿರಲಿಲ್ಲ.

2) ಭೀಷ್ಮಪರ್ವದ ೪೪ನೆಯ ಅಧ್ಯಾಯದಲ್ಲಿ ಬರುವ ವೈಶಂಪಾಯನರು ಹೇಳಿರುವರೆಂದು ಹೇಳಿರುವ ಮೊದಲನೆಯ ಈ ಐದು ಶ್ಲೋಕಗಳು ಎಲ್ಲ ಮಹಾಭಾರತದ ಪುಸ್ತಕಗಳಲ್ಲಿಯೂ ಇಲ್ಲ. ಭಂಡಾರ್‌ಕರ್ ರಿಸರ್ಚ್ ಇನ್‌ಸ್ಟಿಟ್ಯೂಟಿನವರೂ ಈ ಐದು ಶ್ಲೋಕಗಳನ್ನು ಬಿಟ್ಟುಬಿಟ್ಟಿದ್ದಾರೆ.

3) ಹೇಳಿರುವ ಸಂಖ್ಯೆಗೂ–ಇರುವ ಶ್ಲೋಕಗಳಿಗೂ ವ್ಯತ್ಯಾಸವಿರುವ ಹಲವಾರು ಪ್ರಕರಣಗಳೂ ಮಹಾಭಾರತದಲ್ಲಿ ಇಲ್ಲದಿಲ್ಲ.

ಪರ್ವಸಂಗ್ರಹಪರ್ವ, ಶ್ಲೋಕ ೩೧೦-೩೧೧

**ಏತದ್ವೈ ದಶಮಂ ಪರ್ವ ಸೌಪ್ತಿಕಂ ಸಮುದಾಹೃತಮ್ ।**
**ಅಷ್ಟಾದಶಾಸ್ಮಿನ್ನಧ್ಯಾಯಾಃ ಪರ್ವಣ್ಯುಕ್ತಾ ಮಹಾತ್ಮನಾ ॥**

**ಶ್ಲೋಕಾನಾಂ ಕಥಿತಾನ್ಯತ್ರ ಶತಾನ್ಯಷ್ಟೌ ಪ್ರಸಂಖ್ಯಯಾ ।**
**ಶ್ಲೋಕಾಶ್ಚ ಸಪ್ತತಿಃ ಪ್ರೋಕ್ತಾ ಮುನಿನಾ ಬ್ರಹ್ಮವಾದಿನಾ ॥**

ಸೌಪ್ತಿಕಪರ್ವದಲ್ಲಿ ೧೮ ಅಧ್ಯಾಯಗಳಿವೆ. ಶ್ಲೋಕಗಳು ೮೭೦. ಸೌಪ್ತಿಕ ಮತ್ತು ಐಷೀಕ ಪರ್ವಗಳಲ್ಲಿ ಇರುವ ಒಟ್ಟು ಅಧ್ಯಾಯಗಳೇನೋ ೧೮. ಆದರೆ ಶ್ಲೋಕಸಂಖ್ಯೆ ೮೦೩. ಈ ಪರ್ವದಲ್ಲಿ ೬೭ ಶ್ಲೋಕಗಳು ಕಡಿಮೆ ಇವೆ.

**ಸ್ತ್ರೀಪರ್ವ :**

**ಸಪ್ತವಿಂಶತಿರಧ್ಯಾಯಾಃ ಪರ್ವಣ್ಯಸ್ಮಿನ್ನುದೀರಿತಾಃ ।**
**ಶ್ಲೋಕಸಪ್ತಶತೀ ಚಾಪಿ ಪಞ್ಚ ಸಪ್ತತಿಸಂಯುತಾ ॥**
**ಸಂಖ್ಯಯಾ ಭಾರತಾಖ್ಯಾನಮುಕ್ತಂ ವ್ಯಾಸೇನ ಧೀಮತಾ ॥೩೨೪॥**

ಅಧ್ಯಾಯಗಳು ೨೭. ಶ್ಲೋಕಗಳು ೭೭೫.

ಈಗ ಇರುವ ಅಧ್ಯಾಯಗಳು ೨೭. ಶ್ಲೋಕಸಂಖ್ಯೆ ೮೧೯. ಹೆಚ್ಚು ಶ್ಲೋಕಗಳು ೪೪.

ಭಗವದ್ಗೀತೆಯಿರುವ ಭೀಷ್ಮಪರ್ವದಲ್ಲಿಯೂ ಈ ವ್ಯತ್ಯಾಸವಿದೆ. ವೈಶಂಪಾಯನರ ಗಣನೆಯಂತೆ :

ಅಧ್ಯಾಯಾನಾಂ ಶತಂ ಪ್ರೋಕ್ತಂ ತಥಾ ಸಪ್ತದಶಾಪರೇ ।
ಪಞ್ಚಶ್ಲೋಕಸಹಸ್ರಾಣಿ ಸಂಖ್ಯಯಾಷ್ಟೌ ಶತಾನಿ ಚ ॥೨೫೨॥
ಶ್ಲೋಕಾಶ್ಚ ಚತುರಾಶೀತಿರಸ್ಮಿನ್ಪರ್ವಣಿ ಕೀರ್ತಿತಾಃ ।
ವ್ಯಾಸೇನ ವೇದವಿದುಷಾ ಸಂಖ್ಯಾತಾ ಭೀಷ್ಮಪರ್ವಣಿ ॥೨೫೩॥

ಅಧ್ಯಾಯಗಳು ೧೧೭. ಶ್ಲೋಕಗಳು ೫೮೮೪. ಈಗ ಇರುವ ಅಧ್ಯಾಯಗಳ ಸಂಖ್ಯೆ ೧೨೨. ಶ್ಲೋಕಸಂಖ್ಯೆ ೫೮೬೮. ಈ ಪರ್ವದಲ್ಲಿ ಅಧ್ಯಾಯಗಳ ವ್ಯತ್ಯಾಸವೂ ಇದೆ. ಶ್ಲೋಕಗಳ ವ್ಯತ್ಯಾಸವೂ ಇದೆ. ಆದುದ ರಿಂದ ಗೀತೆಯ ವಿಷಯದಲ್ಲಿಯೂ ಇರುವ ಶ್ಲೋಕವ್ಯತ್ಯಯವು ಅಷ್ಟು ಪರಿಗಣನೀಯವಲ್ಲ ಎಂಬುದು ನಮ್ಮ ಅಭಿಪ್ರಾಯವಾಗಿದೆ.

* * *

## ಭಗವದ್ಗೀತೆಯ ಸಮತ್ವ ಮತ್ತು ರಷ್ಯಾದೇಶದ ಇಂದಿನ ಸಾಮ್ಯವಾದ

(ಈ ಲೇಖನದಲ್ಲಿ ಭಾರತೀಯಸಂಸ್ಕೃತಿಯಲ್ಲಿ ಅಡಕವಾಗಿರುವ ಸಾಮ್ಯ ವಾದ ಹಾಗೂ ಆಧುನಿಕ ರಷ್ಯಾದೇಶದ ಸಾಮ್ಯವಾದ ಇವುಗಳಲ್ಲಿರುವ ವ್ಯತ್ಯಾಸವನ್ನು ಬಹುಸುಂದರವಾಗಿ ನಿರೂಪಿಸಲಾಗಿದೆ. ಓದುಗರು ಈ ಲೇಖನವನ್ನು ಓದಿ ಮನನಮಾಡಿ ಉತ್ತಮವಾದುದನ್ನು ಆಚರಣೆಮಾಡುತ್ತಾ ಜೀವನವನ್ನು ಉತ್ತಮಗೊಳಿಸುವ ಕಾರ್ಯದಲ್ಲಿ ತೊಡಗಬಹುದೆಂದು ಆಶಿಸಲಾಗಿದೆ.)

ಭಾರತೀಯ ಸಾಮ್ಯವಾದ :–

೧) ಇದರ ಪ್ರವರ್ತಕರು ಶ್ರೀಕೃಷ್ಣಪರಮಾತ್ಮ ಹಾಗೂ ಋಷಿ ಮುನಿವರ್ಯರು.

ರಷ್ಯಾದೇಶದ ಸಾಮ್ಯವಾದ :–

೧) ಇದರ ಪ್ರವರ್ತಕ ಜರ್ಮನೀದೇಶದ ನಿವಾಸಿ ಕಾರ್ಲ್‌ಮಾರ್ಕ್ಸ ರವರು.

ಭಾ. ಸಾ. :– ೨) ಇದರ ಮುಖ್ಯಗ್ರಂಥ : ಭಗವದ್ಗೀತೆ.

ರ. ಸಾ. :– ೨) ಇದರ ಮುಖ್ಯಗ್ರಂಥ : ಡಾಸ್ ಕ್ಯಾಪಿಟಲ್ Dos Capital.

ಭಾ. ಸಾ. :– ೩) ಈ ಸಾಮ್ಯವಾದವು ಸಚ್ಚಿದಾನಂದಸ್ವರೂಪನಾದ ಶ್ರೀಕೃಷ್ಣನ ಆಧಾರದ ಮೇಲೆ ನಿಂತಿದೆ.

ರ. ಸಾ. :– ೩) ಇದರ ಆಧಾರ ಆರ್ಥಿಕ ಸಮಾನತೆ.

ಭಾ. ಸಾ. :–೪) ಇದನ್ನು ಆಚರಿಸಲು ಮಾನವನು ತನ್ನ ಬುದ್ಧಿಯನ್ನು ಶುದ್ಧೀಕರಣ ಮಾಡಿಕೊಳ್ಳಬೇಕು.

ರ. ಸಾ. :– ೪) ಆಡಳಿತದ ಭಯದಿಂದ ಈ ಸಾಮ್ಯವಾದವು ಆಚರಿಸಲ್ಪಡುವುದು.

ಭಾ. ಸಾ. :– ೫) ಈ ತತ್ವದ ಆಚರಣೆಯನ್ನು ಪ್ರಾಚೀನ ಅರ್ಜುನ, ಯುಧಿಷ್ಠಿರ, ವಿದುರ, ವ್ಯಾಸರು, ನಾರದರು ಮುಂತಾದ ಮಹಾಪುರುಷರೂ ಹಾಗೂ ಆಧುನಿಕಕಾಲದಲ್ಲಿ ಗೋಸ್ವಾಮಿ ತುಲಸೀದಾಸ್, ಶ್ರೀ ಚೈತನ್ಯ ಮಹಾಪ್ರಭು, ಗುರುನಾನಕರು, ಕಬೀರ್, ಮೀರಾಬಾಯಿ, ಸಂತ ತುಕಾರಾಮ, ಸಮರ್ಥ ರಾಮದಾಸರು, ರೈದಾಸರು, ಜ್ಞಾನೇಶ್ವರರು, ಶ್ರೀ ತಿರುವಳ್ಳವರ್ ಮುಂತಾದ ಸಾಧುಸಂತರುಗಳು ಕೈಗೊಂಡರು.

ರ. ಸಾ. :– ೫) ಈ ಸಾಮ್ಯವಾದವನ್ನು ಲೆನಿನ್, ಸ್ಟಾಲಿನ್, ಟ್ರಾಟ್ಸ್ಕೀ ಮುಂತಾದವರು ಕಾರ್ಯಾನ್ವಿತಗೊಳಿಸಿದರು.

ಭಾ. ಸಾ. :– ೬) ಇದನ್ನು ಕಾರ್ಯರೂಪಕ್ಕೆ ತರಲು ಭಗವದ್ಭಕ್ತಿ ಆವಶ್ಯಕ.

ಭಾ. ಸಾ. :– ೬) ಈ ಸಾಮ್ಯವಾದದಲ್ಲಿ ಭಗವದ್ಭಕ್ತಿಯನ್ನು ಕಠೋರ ವಾಗಿ ಖಂಡಿಸಲಾಗುವುದು. ದೈವೀವಾದವನ್ನು ಪ್ರಪಂಚದಿಂದಲೇ ದೂರೀ ಕರಿಸುವ ಉಗ್ರವಾದ ಆಂದೋಲನವನ್ನು ಕೈಗೊಳ್ಳಲಾಗುತ್ತಿದೆ. ಅಂದರೆ ಯಾರ ಮೇಲೂ ಶ್ರದ್ಧೆಯೇ ಇರುವುದಿಲ್ಲವೆಂದಲ್ಲ. ರಷ್ಯಾದೇಶದ ಅನೇಕ ಸ್ಥಳಗಳಲ್ಲಿ ಲೆನಿನ್ ಹಾಗೂ ಕಾರ್ಲ್‌ಮಾರ್ಕ್ಸರವರುಗಳ ನೂರಾರು ಪ್ರತಿಮೆಗಳನ್ನು ನಿರ್ಮಿಸಿ ಈ ಸಾಮ್ಯವಾದದ ತತ್ವಗಳನ್ನು ಜನತೆಗೆ ಬೋಧಿಸಲಾಗುವುದು. ಅತಿಶ್ರದ್ಧೆಯಿಂದ ಜನತೆಯು ಈ ತತ್ವಗಳನ್ನು ಕಾರ್ಯಾನ್ವಿತಗೊಳಿಸುತ್ತದೆ.

ಭಾ. ಸಾ. :–೭) ಈ ಸಮತ್ವವನ್ನು ಪಡೆಯಲು ನಿರಾಕಾರ ಹಾಗೂ ಸಾಕಾರಪರಮಾತ್ಮನ ಪೂಜೆ, ನಿಷ್ಕಾಮಕರ್ಮ, ಜ್ಞಾನ–ಇತ್ಯಾದಿ ಮಾರ್ಗ ಗಳು ಆವಶ್ಯಕ.

ರ. ಸಾ. :– ೭) ಇದರಲ್ಲೂ ಮೂರ್ತಿಪೂಜೆಯೇನೋ ಅಡಕವಾಗಿದೆ. ಲೆನಿನ್ ಮಹಾಶಯನ ಅನೇಕಮೂರ್ತಿಗಳನ್ನು ನಿರ್ಮಿಸಿ ಪೂಜ್ಯಭಾವನೆ ಯನ್ನು ವ್ಯಕ್ತಪಡಿಸುತ್ತಾರೆ. ಆದರೆ ಅವರಲ್ಲಿ ಈಶ್ವರೀಭಾವನೆಯು ಕಾಣ ಬರುವುದಿಲ್ಲ.

ಭಾ. ಸಾ. :–೮) ಇದರಲ್ಲಿ ತನ್ನಂತೆಯೇ ಇತರರೊಡನೆ ವ್ಯವಹರಿಸುವ ಸುಂದರಪ್ರವೃತ್ತಿ ಅಡಗಿದೆ. ಈ ಪ್ರವೃತ್ತಿಯು ಕೇವಲ ಮಾನವ-ಮಾನವ ರಲ್ಲಿಯೇ ಸೀಮಿತವಾಗಿರದೇ ಪ್ರಾಣಿಗಳೊಡನೆ ವ್ಯವಹರಿಸುವಾಗಲೂ ಸಮದೃಷ್ಟಿಯಿಂದ ಕಾಣುವುದು ಪವಿತ್ರಕರ್ತವ್ಯವೆಂದು ತಿಳಿಯಲ್ಪಡುತ್ತದೆ.

ರ. ಸಾ. :–೮) ಇದರಲ್ಲಿ ಅಡಗಿರುವ ಸಮತ್ವಭಾವವು ಕೇವಲ ಮಾನವರಿಗೇ ಸೀಮಿತವಾಗಿರುವುದು. ಅದರಲ್ಲೂ ಸಹ ಕೇವಲ ಕಾರ್ಮಿಕ ಸ್ತ್ರೀ- ಪುರುಷರಲ್ಲಿ ಮಾತ್ರ ಕಾಣಬರುವುದು. ಆರ್ಥಿಕಸಮಾನತೆಯೇ ಇದರ ದೃಷ್ಟಿಕೋನ.

ಭಾ. ಸಾ. :– ೯) ಇದರಲ್ಲಿ ತಾಯಿ, ತಂದೆ, ಗುರು, ಅತಿಥಿ ಇವರುಗಳು ಬಹು ಗೌರವಾನ್ವಿತರಾಗಿರುತ್ತಾರೆ.

ರ. ಸಾ. :– ೯) ಇದರಲ್ಲಿ ಕುಟುಂಬಜೀವನವೇ ಇಲ್ಲದಿರುವುದರಿಂದ ತಂದೆ-ತಾಯಂದಿರು ಯಾರು ಎಂಬುದನ್ನು ಮಕ್ಕಳು ತಿಳಿದುಕೊಳ್ಳುವುದೇ ಕ್ಲಿಷ್ಟಸಮಸ್ಯೆಯಾಗಿರುತ್ತದೆ. ಇದರ ಪರಿಣಾಮವಾಗಿ ಇಂದು ರಷ್ಯಾದೇಶದಲ್ಲಿ ಸಾವಿರಾರು ಬಾಲಕ-ಬಾಲಕಿಯರು ಅನಾಥರಾಗಿ ಕಂಗೆಟ್ಟು ಅಲೆಯುತ್ತಿದ್ದಾರೆ ಮತ್ತು ಈ ಅನಾಥರ ಸಮಸ್ಯೆಯೇ ದೇಶದ ಮುಂದಿರುವ ಚಿಂತನದ ಹಾಗೂ ಬಿಡಿಲಾಗದ ಪ್ರಶ್ನೆಯಾಗಿದೆ.

ಭಾ. ಸಾ. :– ೧೦) ಇದರಲ್ಲಿ ಶತ್ರು ಹಾಗೂ ಮಿತ್ರರಲ್ಲಿ ಸಮತ್ವಭಾವನೆ ಕಂಡುಬರುತ್ತದೆ. ಸಮಯಬಂದಾಗ ಸಮಾಜಘಾತಕ ಪುರುಷರುಗಳನ್ನು ವಧಿಸಲಾಗುವುದು. ಸೇಡುತೀರಿಸಿಕೊಳ್ಳುವ ಉದ್ದೇಶದಿಂದಲ್ಲ. ಅನ್ಯಾಯ ಕಾರ್ಯದ ಬಗ್ಗೆ ತಿರಸ್ಕಾರ ಭಾವನೆಯಿಂದ ದಂಡನೆಯನ್ನು ವಿಧಿಸ ಲಾಗುವುದು. ಕೇವಲ ವ್ಯಕ್ತಿದ್ವೇಷದಿಂದಲ್ಲ.

ರ.ಸಾ. :– ೧೦) ಇದರಲ್ಲಿ ಶತ್ರುವನ್ನು ಕೊಲ್ಲುವುದು ಕರ್ತವ್ಯವೆಂದು ಭಾವಿಸುವುದರ ಜೊತೆಗೆ ವ್ಯಕ್ತಿಯ ಬಗೆಗೆ ದ್ವೇಷಸಾಧಿಸುವ ಭಾವನೆಯೂ ಕಾಣಬರುತ್ತದೆ. ಬಾಹ್ಯಪರಿಸ್ಥಿತಿಗೇ ಅಧಿಕ ಮಹತ್ವವನ್ನು ನೀಡಲಾಗುವುದು.

ಭಾ. ಸಾ. :–೧೧) ಹೃದಯದಲ್ಲಿಯೇ ಈ ಭಾವನೆಯು ಅಡಗಿರುವುದರಿಂದ ಮತ್ತೊಬ್ಬರೊಂದಿಗೆ ವ್ಯವಹರಿಸುವ ಪ್ರವೃತ್ತಿಯನ್ನು ಇತರರಿಂದ ಕಲಿಯುವ ಅಗತ್ಯವಿರುವುದಿಲ್ಲ. ಸಹಜಪೂರ್ವಕವಾಗಿಯೇ ಇತರರೊಡನೆ ಸಮಾನತೆ, ನ್ಯಾಯ ಹಾಗೂ ಪ್ರೇಮದಿಂದ ವ್ಯವಹರಿಸುತ್ತಾನೆ.

ರ. ಸಾ. :–೧೧) ಇದರಲ್ಲಿ ಆರ್ಥಿಕ ಸಮಾನತೆಯೇ ಪ್ರಧಾನವಾಗಿರುವುದರಿಂದ ಅನೇಕವೇಳೆ ತನ್ನ ಮನಸ್ಸಿಗೆ ವಿರುದ್ಧವಾಗಿ ನಡೆದುಕೊಳ್ಳಬೇಕಾಗುತ್ತದೆ. ಈ ಸಾಮ್ಯವಾದವು ಯಾವಾಗ ವಿಷಮಯವಾಗಿ ಪರಿಣಮಿಸುವುದೆಂಬುದು ಈ ಸಾಮ್ಯವಾದಿಗೆ ತಿಳಿಯುವುದಿಲ್ಲ. ಕೇವಲ ಸ್ವಲ್ಪ ಮತಾಭಿಪ್ರಾಯದ ವ್ಯತ್ಯಾಸದ ಕಾರಣ ಸ್ಟಾಲಿನ್ ಮಹಾಶಯನು ಟ್ರಾಟ್‌ಸ್ಕಿ ಎಂಬ ಹೆಸರಾಂತ ಮತ್ತೊಬ್ಬ ಸಾಮ್ಯವಾದಿಯನ್ನು ದೇಶಭ್ರಷ್ಟನನ್ನಾಗಿ ಮಾಡಿ ಕೊಲ್ಲಲೂ ಹಿಂಜರಿಯಲಿಲ್ಲ.

ಭಾ. ಸಾ. :–೧೨) ಇದರಲ್ಲಿ ಮಾನವನ ಆತ್ಮವಿಕಾಸದ ಆರಂಭವು ಕುಟುಂಬಜೀವನದಿಂದ ಶುರುವಾಗುತ್ತದೆ. ಮುಂದುವರಿಯುತ್ತಾ ಅದು ಸಮಸ್ತ ವಿಶ್ವವನ್ನೇ ತನ್ನ ಪರಿವಾರವೆಂದು ತಿಳಿಯುತ್ತದೆ. **ವಸುಧೈವ ಕುಟುಂಬಕಂ** ಎನ್ನುವುದೇ ಇದರ ಧ್ಯೇಯವಾಗುತ್ತದೆ.

ರ. ಸಾ. :– ೧೨) ಇದರಲ್ಲಿ ಕುಟುಂಬಜೀವನಕ್ಕೆ ಸ್ಥಾನವೇ ಇಲ್ಲ. ರಾಷ್ಟ್ರವೇ ಒಂದು ಕುಟುಂಬ. ಇದೂ ಸಹ ಕೇವಲ ಕಾರ್ಮಿಕ ಸ್ತ್ರೀ-ಪುರುಷರಿಗೇ ಸೀಮಿತವಾಗಿರುತ್ತದೆ. ಅವರುಗಳ ಹೊರತಾಗಿರುವುದಿಲ್ಲ.

ಭಾ. ಸಾ. :–೧೩) ಇದರಲ್ಲಿ ಶಾರೀರಕ ಹಾಗೂ ಬೌದ್ಧಿಕಪರಿಶ್ರಮಿಗಳಿಗೆ ಸ್ಥಾನವಿರುವುದರ ಜೊತೆಗೆ ಆಧ್ಯಾತ್ಮಿಕಚಿಂತಕರುಗಳಿಗೂ ಸ್ಥಾನವಿರುತ್ತದೆ.

ರ.ಸಾ. :–೧೩) ಇದರಲ್ಲಿ ಕೇವಲ ಶಾರೀರಕ ಹಾಗೂ ಬೌದ್ಧಿಕ ಪರಿಶ್ರಮಿಗಳಿಗೆ ಮಾತ್ರ ಸ್ಥಾನವುಂಟು. ಆಧ್ಯಾತ್ಮಿಕ ಚಿಂತಕರುಗಳನ್ನು ತಿರಸ್ಕರಿಸಲಾಗುವುದು.

ಭಾ. ಸಾ. :–೧೪) ಗೀತಾ ಸಾಮ್ಯವಾದವು ಬಡವರಿಗೂ, ಹೀನವಾದ ಅವಸ್ಥೆಯಲ್ಲಿರುವವರಿಗೂ ಶ್ರದ್ಧಾ-ಭಕ್ತಿಗಳಿಂದ ಪರಮಾತ್ಮನನ್ನು ಆಶ್ರಯಿಸಲು ಹೇಳುತ್ತದೆ.

ರ. ಸಾ. :–೧೪) ಇದೂ ಸಹ ಬಡವರ ಹಾಗೂ ದೀನದಲಿತರ ಹಿತ

ಚಿಂತನೆಯಲ್ಲೇ ಮಗ್ನವಾಗಿರುತ್ತದೆ. ಆದರೆ ಭಾವನೆಯಲ್ಲಿ ವ್ಯತ್ಯಾಸ ಕಾಣ ಬರುತ್ತದೆ.

ಭಾ. ಸಾ. :– ೧೫) ಇದರ ಅನುಯಾಯಿಗಳು ಸಮಾಜವನ್ನು ಸುಧಾರಿಸಲು ಪರಿಶ್ರಮ, ಸಹಿಷ್ಣುತೆ, ಪರಸ್ಪರ ಸಹಯೋಗ ಮುಂತಾದ ಗುಣಗಳಿಂದ ವಿಭೂಷಿತರಾಗಿರುವುದನ್ನು ಅವಶ್ಯಕವೆಂದು ತಿಳಿಯುತ್ತಾರೆ. ಆರ್ಥಿಕಸಮಾನತೆಯನ್ನು ದೃಢೀಕರಿಸಲು ನಾಲ್ಕು ಆಶ್ರಮಧರ್ಮಗಳ ವ್ಯವಸ್ಥೆಯನ್ನು ಒಪ್ಪುತ್ತಾರೆ. ದೌರ್ಭಾಗ್ಯದ ಪರಿಣಾಮವಾಗಿ ಈ ನಡವಳಿಕೆ ಗಳು ನಾಶವಾಗಿವೆ. ಈ ಆಶ್ರಮಗಳಲ್ಲಿ ಧನದ ತ್ಯಾಗಕ್ಕೆ ಪ್ರಮುಖಪಾತ್ರ ವಿರುವುದರಿಂದ ಸಮಾಜದಲ್ಲಿ ಧನದಿಂದ ಉತ್ಪನ್ನವಾಗುವ ವಿಷಮತೆಯು ತಾನಾಗಿಯೇ ದೂರವಾಗುವುದು.

ರ. ಸಾ. :– ೧೫) ಈ ತತ್ತ್ವದಲ್ಲಿ ಪರಿಶ್ರಮ ಹಾಗೂ ಪರಸ್ಪರ ಸಹ ಯೋಗದ ಆಧಾರದ ಮೇಲೆ ವ್ಯವಹರಿಸುವುದು ಆವಶ್ಯಕವೆಂದು ತಿಳಿಯಲ್ಪ ಟ್ಟರೂ ಸಹ ಸಮಾಜವನ್ನು ಸ್ಥಿರಗೊಳಿಸುವ ನಿಯಮಗಳು ಕಾಣಬರುವುದಿಲ್ಲ. ಕೆಲವು ನಿಯಮಗಳು ಇದ್ದರೂ ಸಹ ಅವು ಕೇವಲ ಪ್ರಯೋಗಾವಸ್ಥೆ ಯಲ್ಲಿವೆಯಾದುದರಿಂದ ಅಲ್ಪಕಾಲದಲ್ಲೇ ಬದಲಾಯಿಸಲ್ಪಡುತ್ತವೆ. ಉದಾ ಹರಣೆಗಾಗಿ ಕೆಲವು ದಿವಸಗಳ ಹಿಂದೆ ವಿವಾಹಪದ್ಧತಿಯ ಬಗೆಗೆ ನಿಯಮ ಗಳಾವುವೂ ಇರಲಿಲ್ಲ. ಆದರೆ ಈಗ ಇದರ ಬಗೆಗೆ ಹನ್ನೆರಡು ನಿಯಮಗಳು ನಿರೂಪಿಸಲ್ಪಟ್ಟಿವೆ.

ಭಾ. ಸಾ. :–೧೬) ಈ ಸಾಮ್ಯವಾದದ ಧ್ಯೇಯೋದ್ದೇಶಗಳು ಸಾವಿ ರಾರು ವರ್ಷಗಳ ಹಿಂದೆಯೇ ನಿಶ್ಚಿತಗೊಂಡಿವೆ. ಶಾಂತಿ, ಆತ್ಮಪ್ರಸನ್ನತೆ ಹಾಗೂ ಪರಮಾತ್ಮನಲ್ಲಿ ಆತ್ಮನ ಮಿಲನ ಇವುಗಳೇ ಪ್ರಮುಖವಾದ ಉದ್ದೇಶಗಳು. ಇವುಗಳ ಪ್ರಾಪ್ತಿಯಿಂದ ಮಾನವನು ಸ್ವರಾಜ್ಯವನ್ನು ಪಡೆಯುವುದೇ ಅಲ್ಲದೇ ಜಗತ್ತಿನ ಸಮಸ್ತಶಕ್ತಿಗಳೂ ದಾಸ್ಯರೂಪದಲ್ಲಿ ಆತನ ಕಾಲುಗಳ ಅಡಿಯಲ್ಲಿರುತ್ತವೆ. ಪ್ರಪಂಚದಲ್ಲಿ ಅವನು ಸರ್ವಪ್ರಿಯನಾಗುತ್ತಾನೆ. ಸ್ವಾಮೀ ರಾಮತೀರ್ಥರ ಮಾತುಗಳಲ್ಲಿ ಅವನು ತ್ರೈಲೋಕ್ಯಾಧಿಪತಿಯಾಗುತ್ತಾನೆ.

ರ. ಸಾ. :–೧೬) ಇದರ ಅಂತಿಮಧ್ಯೇಯವು ಇನ್ನೂ ನಿಶ್ಚಿತವಾಗಿಲ್ಲ. ಇದರ ಉದ್ದೇಶ 'ಸಾಮ್ರಾಜ್ಯಶಾಹಿ'ಯನ್ನು ನಾಶಗೊಳಿಸುವುದಾಗಿದೆ. ಈ

ಕಾರಣದಿಂದಲೇ ಸಮಾಜ ಮತ್ತು ಶಾಸಕರುಗಳ ಅತ್ಯಾಚಾರದಿಂದ ಪೀಡಿತರಾದ ಅನೇಕ ದೇಶಗಳ ಹಾಗೂ ಭಾರತದ ನವಯುವಕರುಗಳ ಮನಸ್ಸು ಈ ಸಾಮ್ರಾಜ್ಯಶಾಹೀ ವಿಧ್ವಂಸಕ ಸಾಮ್ಯವಾದದತ್ತ ಆಕರ್ಷಿಸಲ್ಪಡುತ್ತಿದೆ. ಇದು ಕೆಲವು ಅಂಶಗಳಲ್ಲಿ ನ್ಯಾಯಸಮ್ಮತವೂ ಆಗಿರುತ್ತದೆ.

ಭಾ. ಸಾ. :– ೧೭) ಈ ಸಾಮ್ಯವಾದವು ಈಗ ಸಂಘಟನಾರಹಿತವೂ ಛಿದ್ರ-ವಿಚ್ಛಿದ್ರವೂ ಆಗಿದೆ. ಆದುದರಿಂದ ಇದರಲ್ಲಿ ಅಪರಿಮಿತಶಕ್ತಿಯಿದ್ದರೂ ಸಹ ದುರ್ಬಲಗೊಂಡಂತಾಗಿದೆ.

ರ. ಸಾ. :–೧೭) ಇದು ನವೀನವೂ, ಸಂಘಟನಾತ್ಮಕವೂ ಹಾಗೂ ನಿಯಂತ್ರಣದಿಂದ ಕೂಡಿರುವುದೂ ಆಗಿದೆ. ಆದುದರಿಂದ ಇದರ ಸೀಮಿತ ಶಕ್ತಿಯೇ ಅತಿಶಯವಾಗಿ ಕಾಣತೊಡಗಿದೆ.

ಭಾ. ಸಾ. :–೧೮) ಪ್ರಾಚೀನ ಋಷಿ-ಮುನಿಗಳ ಅಭಿಪ್ರಾಯದಂತೆ ಇದನ್ನು ದೈವೀಸಂಪತ್ತಿನ ಸಾಮ್ಯವಾದವೆಂದು ಹೇಳಬಹುದು.

ರ. ಸಾ. :–೧೮) ಈ ಸಾಮ್ಯವಾದವನ್ನು ಪ್ರಾಚೀನ ಋಷಿ-ಮುನಿಗಳ ಅಭಿಪ್ರಾಯದಂತೆ ಆಸುರೀಸಂಪತ್ತಿನ ಸಾಮ್ಯವಾದವೆಂದು ಹೇಳಬಹುದು.

ಭಾ. ಸಾ. :–೧೯) ಇದನ್ನು ಅಧ್ಯಾತ್ಮವಾದೀ ಸಾಮ್ಯವಾದವೆನ್ನುತ್ತಾರೆ.

ರ. ಸಾ. :–೧೯) ಇದನ್ನು ಜಡವಾದೀ ಸಾಮ್ಯವಾದವೆನ್ನುತ್ತಾರೆ.

ಭಾ. ಸಾ. :–೨೦) ಶ್ರೀಮದ್ಭಗವದ್ಗೀತೆಯ ಈ ಸಮತ್ವವಾದದ ಸಂಸ್ಕಾರವು ಭಾರತೀಯರ ನಾಡಿಗಳಲ್ಲೂ ತುಂಬಿ ತುಳುಕಾಡುತ್ತಿದೆ. ಈ ಆದರ್ಶವು ಸಾವಿರಾರು ವರ್ಷಗಳ ಹಿಂದಿನದು. ಇತರ ದೇಶಗಳ ಆದರ್ಶವು ಎಷ್ಟರಮಟ್ಟಿಗೆ ಭಾರತೀಯರಿಗೆ ಕಲ್ಯಾಣಪ್ರದವಾಗುವುದೆಂಬುದನ್ನು ಭಾರತೀಯರೇ ವಿಚಾರಮಾಡಬೇಕಾದ ವಿಷಯ.

ರ. ಸಾ. :–೨೦) ಈ ಸಾಮ್ಯವಾದವು ರಷ್ಯಾದೇಶದ ಪ್ರಜೆಗಳ ಮುಂದೆ ಈಗ ತಾನೇ ಇಡಲ್ಪಟ್ಟಿದೆ. ಎಷ್ಟು ದಿವಸಗಳ ತನಕ ಇದು ಸ್ಥಿರವಾಗಿರಬಲ್ಲವೆಂಬುದು ಭವಿಷ್ಯದ ಗರ್ಭದಲ್ಲಡಗಿದೆ. ಸಮಾಜವು ಇದನ್ನು ಸ್ವೀಕರಿಸದಿದ್ದಲ್ಲಿ ಬುದ್ಧಧರ್ಮದಂತೆ ಕೆಲವು ದಿವಸಗಳ ನಂತರದಲ್ಲಿ ಇದರಲ್ಲೂ ಮಹತ್ವಪೂರ್ಣಪರಿವರ್ತನೆಗಳಾಗಿ ಪರೋಕ್ಷರೂಪದಲ್ಲಿ ಆಧ್ಯಾತ್ಮವಾದವು ಕಾರ್ಯಾನ್ವಿತಗೊಳ್ಳಬಹುದು. **(ಕಲ್ಯಾಣದ ಕೊಡುಗೆ)**

